ಭಾಗ - 11

# ಪರಿಪೂರ್ಣ ಚಂದ್ರಿಕಾ

ಸೂತ್ರ - ಭಾಷ್ಯ - ಟೀಕಾ - ಟಿಪ್ಪಣಿ - ಮೊದಲಾದ ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ



ಎರಡನೆಯ ಅಧ್ಯಾಯ ಪ್ರಥಮಪಾದ ಭೋಕ್ತೃಧಿಕರಣದಿಂದ-
ಎರಡನೆಯ ಅಧ್ಯಾಯ ದ್ವಿತೀಯಪಾದ ಪರ್ಯಂತ

ಪ್ರಕಾಶನ:
ಶ್ರೀಪಾದರಾಜಮಠ
ರಾಘವೇಂದ್ರ ಕಾಲೋನಿ, ಬೆಂಗಳೂರು.

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಭಾಗ -11

# ಪರಿಪೂರ್ಣಚಂದ್ರಿಕಾ

## ಎರಡನೆಯ ಅಧ್ಯಾಯ ಪ್ರಥಮಪಾದ ಭೋಕ್ತ್ರಧಿಕರಣದಿಂದ - ಎರಡನೆಯ ಅಧ್ಯಾಯ ದ್ವಿತೀಯಪಾದ ಪರ್ಯಂತ

ಬ್ರಹ್ಮಸೂತ್ರ , ಬ್ರಹ್ಮಸೂತ್ರಭಾಷ್ಯ, ಸೂತ್ರದೀಪಿಕಾ, ತತ್ತ್ವಪ್ರಕಾಶಿಕಾ,
ತಾತ್ಪರ್ಯಚಂದ್ರಿಕಾ, ಪ್ರಕಾಶ
ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

* * * * * *

ಪ್ರಧಾನಸಂಪಾದಕರು :
ವಿ॥ ಆರ್. ವೇಂಕಟೇಶಾಚಾರ್ಯ
ಶ್ರೀರಂಗಮ್

ಸಂಗ್ರಹ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು

- - - - - -

ಪ್ರಕಾಶಕರು
ಶ್ರೀಪಾದರಾಜಮಠ
ರಾಘವೇಂದ್ರಕಾಲೋನಿ, ಬೆಂಗಳೂರು.

ದಿನಾಂಕ : 21, 22, 23 ಮಾರ್ಚ್ 2017 ರಂದು ಶ್ರೀರಂಗಕ್ಷೇತ್ರದಲ್ಲಿ ಶ್ರೀಪಾದರಾಜಮಠದ ವತಿಯಿಂದ ಹಮ್ಮಿಕೊಂಡ ವ್ಯಾಸೋತ್ಸವದಲ್ಲಿ ಈ ಸಂಪುಟವು ಯತಿವರೇಣ್ಯರುಗಳಿಂದ ಲೋಕೇಶಾರ್ಪಣೆ ಲೊಕಾರ್ಪಣೆ ಆಯಿತು.

ಸಹಯೋಗ : ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ
ಡಾಯಲ್ಸ್ ಟೌನ್, ಪೆನ್ಸಿಲ್ವೆನಿಯಾ, ೧೮೯೦೧,
ಯು.ಎಸ್.ಎ.

ಪ್ರಥಮಮುದ್ರಣ : 2017

ಬೆಲೆ : 1000

ಪ್ರತಿಗಳು : 1000





ಅಕ್ಷರಜೋಡಣೆ :
ಶ್ರೀ ಶರತ್, ಮೈಸೂರು.
ನಾಗಲತಾ(ಸುಧಾ) ಗಿರಿ,

ಮುದ್ರಣ
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

# ಶ್ರೀಮತಿ ಗೀತಾ ಮತ್ತು ಎನ್. ಕೆ. ಮೋಹನ್ ಇವರಿಗೆ ಕೃತಜ್ಞತೆಗಳು



ಶ್ರೀಮತಿ ಗೀತಾ ಮತ್ತು ಶ್ರೀ ಎನ್.ಕೆ. ಮೋಹನ್ ಇವರು ಈ ಸಂಪುಟದ ಸಂಪೂರ್ಣ ಸೇವೆಯನ್ನು ಸಲ್ಲಿಸಿದ್ದಾರೆ. ಈ ಗ್ರಂಥದ ಮೂಲಕ ಪ್ರಸಾರವಾಗುವ ತತ್ವಜ್ಞಾನದ ಪುಣ್ಯದ ರಾಶಿಯು ಇವರಿಗೆ ತಲುಪಿ, ಶ್ರೀಹರಿವಾಯುಗುರುಗಳ ಪೂರ್ಣಾನುಗ್ರಹವಾಗಲಿ. ಹಾಗೂ ಇವರ ಸುಪುತ್ರರಾದ ಅಶ್ವಿನ್-ಶ್ರೇಷ್ಠಾ, ಅರ್ಜುನ್-ಅನುಷಾ ಇವರುಗಳಿಗೆ ವಿಶೇಷಸಾಧನೆಯಾಗಲಿ. ಶ್ರೀ ವ್ಯಾಸರಾಜರ ಹಾಗೂ ಶ್ರೀಮದ್ ರಾಘವೇಂದ್ರಗುರುಸಾರ್ವಭೌಮರ ಕೃಪಾಕಟಾಕ್ಷದಿಂದ ಜೀವನವು ಸಾರ್ಥಕವಾಗಲಿ.

# ಒಂದು ಬಿನ್ನಹ

ಭಗವದ್ಭಕ್ತರಲ್ಲಿ ನನ್ನ ನಮಸ್ಕಾರಗಳನ್ನು ಅರ್ಪಿಸುತ್ತಾ ಕೆಲವು ಅನಿಸಿಕೆ ಹಾಗೂ ಭಾವನೆಗಳನ್ನು ಹಂಚಿಕೊಳ್ಳಲು ಬಯಸುತ್ತೇನೆ.

ನಾನು ಬೆಮ್ಮತ್ತಿ ವೇಂಕಟೇಶಾಚಾರ್ಯರನ್ನು ಭೇಟಿ ಮಾಡಿದ್ದು ಆಕಸ್ಮಿಕ ಮತ್ತು ದೈವಸಂಕಲ್ಪ. ಅವರ ಈ ಬೃಹತ್ ಯೋಜನೆ ನನ್ನನ್ನು ಬಹಳ ಅವರ ಕಡೆಗೆ ಸೆಳೆಯಿತು. ಈ ಕಾರ್ಯಕ್ಕೆ ನನ್ನನ್ನು ತೊಡಗಿಸಿಕೊಂಡಿದ್ದಕ್ಕೆ ಅವರಿಗೆ ನನ್ನ ಅನಂತ ವಂದನೆಗಳು.

ಮೊದಲನೆಯದಾಗಿ ನನಗೆ ಜನ್ಮ ಕೊಟ್ಟ ನನ್ನ ಮಾತಾ-ಪಿತೃಗಳಿಗೆ ನಾನು ಆಭಾರಿ. ನನ್ನ ತಾಯಿ ದಿ || ರಮಾಬಾಯಿ ಸೋಸಲೆ ವ್ಯಾಸರಾಯರ ಪರಂಪರೆಯಲ್ಲಿ ಬಂದ ೧೦೮ ಶ್ರೀ ಸಿಂಧುತೀರ್ಥರ ಪೂರ್ವಾಶ್ರಮದ ಮೊಮ್ಮಗಳು (ಸೋಸಲೆ ಪಟ್ಟಾಭಿರಾಮಾಚಾರ್ಯರ ಪುತ್ರಿ). ನನ್ನ ತಂದೆ ದಿ|| ಕೇಶವರಾಯರು ಪರೋಪಕಾರಿಗಳಾಗಿ ಜೀವನ ಸಾಗಿಸಿದರು.

ನನ್ನ ತಾತ ಎನ್. ಸುಬ್ಬರಾಯರು ಇಂಜಿನೀಯರ್ ಆಗಿ ಸರ್. ಎಂ. ವಿಶ್ವೇಶ್ವರಯ್ಯನವರ ಕೈಕೆಳಗೆ ಕೆಲಸ ಮಾಡಿ ಇವತ್ತು ಸಾವಿರಾರು ಜನರು ಮತ್ತು ರೈತರಿಗೆ ನೀರು ಒದಗಿಸುತ್ತಿರುವ ಕೆ.ಆರ್.ಎಸ್. ಆಣೆಕಟ್ಟನ್ನು ಕಟ್ಟಲು ಶ್ರಮವಹಿಸಿದ್ದಾರೆ. ಮತ್ತು ಬೆಂಗಳೂರಿನ ಸಮೀಪವಿರುವ ನಂದಿ ಬೆಟ್ಟಕ್ಕೆ ದಾರಿ ಅನುಕೂಲ ಮಾಡಿದ್ದಾರೆ. ಇವತ್ತಿಗೂ ನನ್ನ ತಾತನವರ ಹೆಸರು ಕೆತ್ತಿಸಿರುವ ಫಲಕವನ್ನು ಕೆ.ಆರ್.ಎಸ್. ಡ್ಯಾಮ್ ಮತ್ತು ನಂದೀಬೆಟ್ಟದಲ್ಲಿ ಕಾಣಬಹುದು.

ಇನ್ನು ಶ್ರೀ ಶ್ರೀಪಾದರಾಯರ ಮಠದ ಪರಂಪರೆಯಲ್ಲಿ ಬಂದ ೧೦೮ ಶ್ರೀ ಸತ್ಯನಿಧಿತೀರ್ಥರ ಪೂರ್ವಾಶ್ರಮದ ಸೊಸೆಯಾಗಿ ನನ್ನ ಸೋದರತ್ತೆ ದಿ|| ಸುಮಿತ್ರಾ (ಭಾಗೀರಥಿ) ಆಗಿದ್ದು ಅವರ ಗಂಡ ದಿ|| ಬಾದರಾಯಣಾಚಾರ್ಯರು ಶ್ರೀಪಾದ ಪುತ್ರರು.

ಪ್ರಸಕ್ತ ಪೀಠಾಧಿಪತಿಗಳಾದ ೧೦೮ ಶ್ರೀ ಕೇಶವನಿಧಿತೀರ್ಥರಿಗೆ ಪೂರ್ವಾಶ್ರಮದಲ್ಲಿ ಪಾಠ ಹೇಳಿದ ಭಾಗ್ಯ ನನ್ನ ಅಕ್ಕ ಶ್ರೀಮತಿ ಉಮಾ ಅವರ ಗಂಡ ಶ್ರೀ ಬಿ.ಎನ್.ಎಲ್. ರಾವ್ ಅವರಿಗೆ ಸೇರುತ್ತದೆ. ನನ್ನ ಸುಪುತ್ರರಾದ ಅಶ್ವಿನ್ ಹಾಗೂ ಅರ್ಜುನ್ ಇಬ್ಬರು ಮಕ್ಕಳೂ ಕೂಡ ಈ ಸಂಪುಟಕ್ಕೆ ಉದಾರ ಮನಸ್ಸಿನಿಂದ ಸಹಾಯ ಮಾಡಿರುತ್ತಾರೆ. ಈ ಸಂಪುಟದಿಂದ ದೊರೆಯುವ ಪುಣ್ಯವು ನನ್ನ ಇಬ್ಬರು ಮಕ್ಕಳುಗಳಿಗೆ ಹಾಗೂ ಮೊಮ್ಮಗಳಾದ ಐಸಿರಿಗೆ ತಲುಪಲಿ.

ಈ ಮೇಲಿನ ನಿಕಟ ಸಂಬಂಧದಿಂದ ನನಗೆ ಕಿಂಚಿತ್ ಸಹಾಯ ಮಾಡಲು ಭಗವಂತನ ಕೃಪೆ ಆಯಿತೆಂದು ನನ್ನ ಭಾವನೆ. ಈ ಜ್ಞಾನಕಾರ್ಯದಿಂದ ದೊರೆಯುವ ಮಹಾಫಲವು ನನ್ನ ತಂದೆ ನರಸೀಪುರ ಕೇಶವರಾವ್, ತಾಯಿ ಶ್ರೀಮತಿ ರಮಾಬಾಯಿ ಇವರಿಗೆ ದೊರಕಲಿ. ನನಗೆ ಗುರುಹಿರಿಯರ ಅನುಗ್ರಹವಾಗಲಿ.

ಎನ್.ಕೆ. ಮೋಹನ್

ಬಸವನಗುಡಿ, ಬೆಂಗಳೂರು.

# ವಿಷಯಾನುಕ್ರಮಣಿಕೆ

## ಎರಡನೆಯ ಅಧ್ಯಾಯ
## ಭೋಕ್ತ್ರಧಿಕರಣ



## ಆರಂಭಣಾಧಿಕರಣ



## ಇತರವ್ಯಪದೇಶಾಧಿಕರಣ



## ಶ್ರುತೇಸ್ತುಶಬ್ದಮೂಲತ್ವಾಧಿಕರಣ



## ನ ಪ್ರಯೋಜನಾಧಿಕರಣ

## ವೈಷಮ್ಯನೈರ್ಘೃಣ್ಯಾಧಿಕರಣ



## ಸರ್ವಧರ್ಮೋಽಪಪತ್ತ್ಯಧಿಕರಣ



## ರಚನಾನುಪಪತ್ತ್ಯಧಿಕರಣದಿಂದ ಅನ್ಯಥಾನುಮಿತ್ಯಧಿಕರಣದ ತನಕ



## ವೈಶೇಷಿಕಾಧಿಕರಣ



## ಸಮುದಾಯಾಧಿಕರಣ



## ಅಸದಧಿಕರಣ

## ಅನುಪಲಬ್ಧ್ಯಧಿಕರಣ



## ನೈಕಸ್ಮಿನ್ನಧಿಕರಣ



## ಪತ್ಯುರಧಿಕರಣ



## ಉತ್ಪತ್ತ್ಯಧಿಕರಣ



* * * *

## ಹನ್ನೊಂದನೆಯ ಸಂಪುಟಕ್ಕೆ

## ಮುನ್ನುಡಿ

ಬುನಾದಿ ಭದ್ರವಾಯಿತು. ಅದರ ಮೇಲೆ ಭವ್ಯವಾದ ಭವನವೂ ನಿರ್ಮಾಣವಾಯಿತು. ಆ ಭವನವನ್ನು ಇನ್ನೂ ಹೆಚ್ಚು ಬೆಳೆಸಿಕೊಳ್ಳುವುದು ಅವರವರ ಇಚ್ಛೆ. ಪ್ರಕೃತ ಶ್ರೀವ್ಯಾಸರಾಜಗುರುಸಾರ್ವಭೌಮರು ಪ್ರಾರಂಭದ ಅಧಿಕರಣಗಳ ಅಧ್ಯಯನ ಕ್ರಮವನ್ನು ಹೇಗೆ

ಮಾಡಬೇಕೆಂಬುದನ್ನು ಸರಿಯಾಗಿ ತೋರಿಸಿರುವರು. ಭಗವಂತನ ಗುಣಪರಿಪೂರ್ಣತ್ವವನ್ನು ತಿಳಿಸುವ ಪ್ರಥಮಾಧ್ಯಾಯದ ಎಲ್ಲಾ ಅಧಿಕರಣಗಳನ್ನೂ ಶಿಷ್ಯರ ಮೇಲಿನ ವಾತ್ಸಲ್ಯದಿಂದಲೇ ವಿವರವಾಗಿ ಬರೆದಿಟ್ಟರು. ಎರಡನೆಯ ಅಧ್ಯಾಯದ ಅಧಿಕರಣಗಳನ್ನು ಗ್ರಂಥಗೌರವದೋಷದ ಭಯದಿಂದ ಮೊಟಕುಗೊಳಿಸಿದರು. ಪ್ರಥಮಾಧ್ಯಾಯದ ಅಧಿಕರಣಗಳ ಕ್ರಮದಂತೆಯೇ ಶಿಷ್ಯರು ಅಧ್ಯಯನ ಮಾಡಬೇಕೆಂದು ಮಾರ್ಗದರ್ಶನ ಮಾಡಿದರು. ಹಾಗಾಗಿ ಎರಡನೇ ಅಧ್ಯಾಯದ ಎಲ್ಲಾ ಅಧಿಕರಣದ ತಾತ್ಪರ್ಯಚಂದ್ರಿಕೆಯು ಅತ್ಯಂತ ಸಂಕ್ಷಿಪ್ತವಾಗಿದೆ.

ಎರಡನೇ ಅಧ್ಯಾಯದ ಮೊದಲ ನಾಕು ಅಧಿಕರಣಗಳ ಅನುವಾದ ಹಿಂದಿನ ಸಂಪುಟದಲ್ಲಿಯೇ ಮುಗಿದಿದೆ. ಐದನೆಯ ಭೋಕ್ತ್ರಧಿಕರಣದಿಂದ ಪ್ರಾರಂಭ ಮಾಡಿ ಎರಡನೇ ಪಾದ ಮುಗಿಯುವ ತನಕ ಈ ಸಂಪುಟದಲ್ಲಿ ಅನುವಾದ ಮಾಡಲಾಗಿದೆ. ಮೊದಲನೆಯ ಪಾದಕ್ಕೆ ಯುಕ್ತಿಪಾದ ಎಂದು, ಎರಡನೇ ಪಾದಕ್ಕೆ ಸಮಯಪಾದವೆಂದು ಕರೆಯುತ್ತಾರೆ. ಯುಕ್ತಿಪಾದದಲ್ಲಿ ಭಗವಂತನ ಜಗಜ್ಜನ್ಮಾದಿಕಾರಣತ್ವ ವಿಷಯದಲ್ಲಿ ಪ್ರಾಪ್ತವಾಗುವ ಅನೇಕ ಬಗೆಯ ಯುಕ್ತಿಗಳ ವಿರೋಧವನ್ನು ಪರಿಹಾರ ಮಾಡುತ್ತಾರೆ. ಎರಡನೇ ಪಾದದಲ್ಲಿ ಭಗವಂತನ ಜಗಜ್ಜನಾದಿಕಾರಣತ್ವಲಕ್ಷಣಕ್ಕೆ, ತನ್ಮೂಲಕ ಸಕಲ ಗುಣಪರಿಪೂರ್ಣತ್ವಕ್ಕೆ ವಿರುದ್ಧವಾದ ಎಲ್ಲಾ ಇತರ ಮತದವರ ವಿಚಾರಗಳನ್ನು ನಿರಾಕರಣೆ ಮಾಡುತ್ತಾರೆ.

ಅನೇಕ ಬಗೆಯ ಸ್ಮೃತಿಗಳ ವಿರೋಧವನ್ನು ಪರಿಹಾರ ಮಾಡುವ ಮೂಲಕ ಯುಕ್ತಿಪಾದವು ಪ್ರಾರಂಭವಾಗುತ್ತದೆ. ಅನಂತರ ವೇದಕ್ಕೆ ಅಪೌರುಷೇಯತ್ವವನ್ನು ಸಮರ್ಥನೆ ಮಾಡಿ ಅಪೌರುಷೇಯವಾದ್ದರಿಂದ ಉತ್ತಮಪ್ರಾಮಾಣ್ಯವು ಇರುತ್ತದೆಂದು ನಿರೂಪಣೆ ಮಾಡಿದ್ದಾರೆ. 'ಮೃದಬ್ರವೀತ್' 'ಆಪೋಽಬ್ರುವನ್' ಇತ್ಯಾದಿ ವಾಕ್ಯಗಳು ಅಪ್ರಮಾಣವಾಗಲು ಸಾಧ್ಯವಿಲ್ಲ, ಇವೆಲ್ಲವೂ ಅಭಿಮಾನಿದೇವತಾ ಪರವಾಗಿದೆ ಎಂಬ ವಿಚಾರವನ್ನು ಅಭಿಮಾನ್ಯಧಿಕರಣದಲ್ಲಿ ಸಮರ್ಥನೆ ಮಾಡಿ 'ಅಸತಃ ಸದಜಾಯತ' ಇತ್ಯಾದಿ ವಾಕ್ಯಗಳು ಶೂನ್ಯಕ್ಕೆ ಜಗತ್ಕಾರಣತ್ವವನ್ನು ಹೇಳಲು ಹೊರಟಿಲ್ಲ, ಶೂನ್ಯನಾಮಕನಾದ ಪರಮಾತ್ಮನೇ ಜಗತ್ಕಾರಣನಾಗಿದ್ದಾನೆಂದು ಸಮರ್ಥನೆ ಮಾಡುತ್ತಿದೆ. ಇಷ್ಟು ವಿಚಾರ ಹಿಂದಿನ ಸಂಪುಟದ್ದು.

ಈಗ ಈ ಸಂಪುಟದಲ್ಲಿ ಜೀವೇಶ್ವರರಲ್ಲಿ ಅಭೇದವಿಲ್ಲ, ಭಗವಂತನು ಯಾವ ಜಗತ್ತನ್ನು ಸೃಷ್ಟಿ ಮಾಡುತ್ತಾನೋ ಅದರ ಸೃಷ್ಟಿಗೆ ಸ್ವತಂತ್ರವಾದ ಸಾಧನೆಯನ್ನು ಅಪೇಕ್ಷೆ ಪಡುವುದಿಲ್ಲ. ಭಗವಂತನೇ ಈ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಜೀವನು ಜಗತ್ತನ್ನು ಸೃಷ್ಟಿ ಮಾಡಲು ಅನರ್ಹನಾಗಿದ್ದಾನೆ. ಭಗವಂತನು ಜಗತ್ತನ್ನು ಸೃಷ್ಟಿ ಮಾಡುತ್ತಾನೆಂಬ ಪಕ್ಷದಲ್ಲಿ ಕೃತ್ಸ್ನಪ್ರಸಕ್ತ್ಯಾದಿ ದೋಷಗಳಿಗೆ ಅವಕಾಶವಿಲ್ಲ. ಅವರು ಮಾಡುವ ಪ್ರತಿಯೊಂದು ಸೃಷ್ಟಿಗಳೂ ಕೂಡ ಸಾರ್ಥಕವಾಗಿವೆ. ಅಂತಹ ಭಗವಂತನಲ್ಲಿ ವೈಷಮ್ಯನೈರ್ಘೃಣ್ಯಾದಿ ದೋಷಗಳು ಸರ್ವಥಾ ಇರುವುದಿಲ್ಲ. ಆದರೂ ಸಕಲ

ಗುಣಪರಿಪೂರ್ಣನಾಗಿದ್ದಾನೆ. ಇಷ್ಟು ವಿಚಾರಗಳನ್ನು ಪ್ರಥಮಪಾದವು ಹಂತ ಹಂತವಾಗಿ ಸಮರ್ಥನೆ ಮಾಡಿದೆ.

ಪ್ರಥಮಪಾದದ ಯಾವ ಅಧಿಕರಣವು ಯಾವ ಯಾವ ಯುಕ್ತಿವಿರೋಧವನ್ನು ಪರಿಹಾರ ಮಾಡುತ್ತಿದೆ ಎಂಬುದನ್ನು ಹೀಗೆ ತಿಳಿಯಬೇಕು – ಮೊದಲನೆಯ ಅಧಿಕರಣವು ಸ್ಮೃತಿವಿರೋಧವನ್ನು ಪರಿಹಾರ ಮಾಡಿದೆ. ಎರಡನೆಯ ನವಿಲಕ್ಷಣತ್ವಾಧಿಕರಣವು ವೇದಪ್ರಾಮಾಣ್ಯ ವಿಷಯದಲ್ಲಿ ಪ್ರಾಪ್ತವಾಗುವ ಯುಕ್ತಿವಿರೋಧವನ್ನು ಪರಿಹಾರ ಮಾಡಿದೆ. ಮೂರನೆಯ ಅಭಿಮಾನ್ಯಧಿಕರಣವು ವೇದಪ್ರಾಮಾಣ್ಯ ವಿಷಯದಲ್ಲೇ ಅತ್ಯಂತ ದೃಢವಾದ ಯುಕ್ತಿವಿರೋಧವನ್ನು ಪರಿಹಾರ ಮಾಡಿದೆ. ಜಗತ್ಕರ್ತೃತ್ವ ವಿಷಯದಲ್ಲಿ ಶ್ರುತಿಸಂವಾದದಿಂದ ಕೂಡಿದ ಯುಕ್ತಿವಿರೋಧವು ಪ್ರಾಪ್ತವಾದರೆ, ಅದರ ಪರಿಹಾರಕ್ಕಾಗಿ ನಾಕನೆಯ ಅಸದಧಿಕರಣ ಹೊರಟಿತು. ಮುಂದಿನ ಭೋಕ್ತ್ರಧಿಕರಣವು ಶ್ರುತಿಸಿದ್ಧವಾದ ಯುಕ್ತಿಯ ವಿರೋಧ ಪರಿಹಾರವನ್ನು ಮಾಡುತ್ತಿದೆ. ಆರನೆಯ ಅಧಿಕರಣವೇ ಆರಂಭಣಾಧಿಕರಣ. ಇದು ಸ್ವತಂತ್ರವಾಗಿ, ಪ್ರತ್ಯೇಕವಾಗಿ ಜಗತ್ಕರ್ತೃತ್ವ ವಿಷಯದಲ್ಲಿ ಅತ್ಯಂತ ವಿವರವಾಗಿ ಅನೇಕ ಯುಕ್ತಿಗಳ ವಿರೋಧವನ್ನು ಪರಿಹಾರ ಮಾಡಿದೆ. ಏಳನೆಯ ಇತರವ್ಯಪದೇಶಾಧಿಕರಣದಿಂದ ಹನ್ನೊಂದನೆಯ ಅಧಿಕರಣದ ತನಕ ಶ್ರುತಿಸಂವಾದಿಜೀವಕರ್ತೃತ್ವಸಾಧಕವಾದ ಯುಕ್ತಿವಿರೋಧದ ಪರಿಹಾರವಿದೆ. ಕೃತ್ಸ್ನಪ್ರಸಕ್ತ್ಯಾದಿ ಯುಕ್ತಿವಿರೋಧಪರಿಹಾರವನ್ನು ಇತರವ್ಯಪದೇಶಾಧಿಕರಣ ಮಾಡಿದರೆ, ನಿಷ್ಫಲತ್ವಾದಿ ಯುಕ್ತಿವಿರೋಧ ಪರಿಹಾರವನ್ನು ಮುಂದಿನ ಶಬ್ದಮೂಲತ್ವಾಧಿಕರಣ ಹಾಗೂ ನಪ್ರಯೋಜನಾಧಿಕರಣವು ಮಾಡುತ್ತಿದೆ. ಹತ್ತನೆಯ ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿ ವೈಷಮ್ಯಾದಿ ಯುಕ್ತಿಗಳ ವಿರೋಧವನ್ನು ಪರಿಹಾರ ಮಾಡಲಾಗಿದೆ. ಕೊನೆಯ ಅಧಿಕರಣವೇ ಸರ್ವಧರ್ಮೋಪಪತ್ತ್ಯಧಿಕರಣ. ಎಲ್ಲಾ ಬಗೆಯ ಯುಕ್ತಿಗಳ ವಿರೋಧವನ್ನು ಪರಿಹಾರ ಮಾಡಿ ಬ್ರಹ್ಮಶಬ್ದಪ್ರತಿಪಾದ್ಯವಾದ ಗುಣಪರಿಪೂರ್ಣತ್ವ ವಿಷಯದಲ್ಲಿ ಪ್ರಾಪ್ತವಾಗುವ ಯುಕ್ತಿವಿರೋಧವನ್ನು ಪರಿಹಾರ ಮಾಡಿದೆ. ಈ ಪಾದದಲ್ಲಿ ಒಟ್ಟು ಹನ್ನೊಂದು ಅಧಿಕರಣಗಳಿವೆ. ಮೂವತ್ತೆಂಟು ಸೂತ್ರಗಳಿವೆ.

ಎರಡನೆಯ ಸಮಯ ಪಾದದಲ್ಲಿ ಹನ್ನೆರಡು ಅಧಿಕರಣ, ನಲವತ್ತೈದು ಸೂತ್ರಗಳಿವೆ. ಪ್ರಧಾನವಾಗಿ ಹನ್ನೆರಡು ಮತಗಳನ್ನು ನಿರಾಕರಣೆ ಮಾಡಿದ್ದಾರೆ. ಇತರ ಮತಗಳು ಅರ್ಥಾತ್ ಇದರಿಂದಲೇ ನಿರಾಕರಣೆಯಾಗುತ್ತವೆ. ಪ್ರಕೃತಿಯೇ ಜಗತ್ತಿಗೆ ಕಾರಣವಾಗಿದೆ ಎಂಬ ನಿರೀಶ್ವರಸಾಂಖ್ಯಮತದ ನಿರಾಕರಣೆಯನ್ನು ಮೊದಲನೆಯ ರಚನಾನುಪಪತ್ತ್ಯಧಿಕರಣವು ಮಾಡಿದೆ. ಈಶ್ವರನನ್ನು ಅಂಗೀಕಾರ ಮಾಡಿ ಪ್ರಕೃತಿಗೆ ಜಗತ್ಕಾರಣತ್ವವನ್ನು ಅಂಗೀಕಾರ ಮಾಡುವ ಸೇಶ್ವರಸಾಂಖ್ಯಮತವನ್ನು ನಿರಾಕರಣೆ ಮಾಡುವುದಕ್ಕಾಗಿ ಎರಡನೆಯ ಅನ್ಯತ್ರಾಭಾವಾಧಿಕರಣ ಹೊರಟಿದೆ. ಚಾರ್ವಾಕರ ನಾಸ್ತಿಕ್ಯವಾದ ನಿರಾಕರಣೆಯನ್ನು ಮುಂದಿನ ಅಭ್ಯುಪಗಮಾಧಿಕರಣವು ಮಾಡಿದೆ. ಪ್ರಧಾನವೇ ಜಗತ್ತಿಗೆ ಕರ್ತೃವಾಗಿದೆ. ಪುರುಷನು ಅಪ್ರಧಾನವಾಗಿದ್ದಾನೆಂಬ ನಿರೀಶ್ವರ

ಸಾಂಖ್ಯೈಕದೇಶಿಗಳ ಮತವನ್ನು ನಿರಾಕರಣೆ ಮಾಡುವುದಕ್ಕಾಗಿ ಪುರುಷಾಶ್ಮಾಧಿಕರಣವು ಹೊರಟಿದೆ. ಜೀವನೇ ಕರ್ತೃವಾಗಿದ್ದಾನೆ. ಪ್ರಕೃತಿಯು ಅಪ್ರಧಾನವಾಗಿದೆ ಎಂಬ ಮತ್ತೊಂದು ನಿರೀಶ್ವರ ಸಾಂಖ್ಯೈಕದೇಶಿಗಳ ಮತದ ನಿರಾಕರಣೆಯನ್ನು ಐದನೆಯ ಅನ್ಯಥಾನುಮಿತ್ಯಧಿಕರಣವು ಮಾಡಿದೆ. ಆರನೆಯದ್ದು ವೈಶೇಷಿಕಾಧಿಕರಣ. ಹನ್ನೊಂದನೆಯ ಸೂತ್ರದಿಂದ ಹದಿನೇಳನೆಯ ಸೂತ್ರದ ತನಕ ವೈಶೇಷಿಕರ ಮತವನ್ನು ವಿವರವಾಗಿ ನಿರೂಪಣೆ ಮಾಡಿದೆ. ಮುಂದೆ ಜಗತ್ತಿನಲ್ಲೇ ಹೆಸರುವಾಸಿಗಳಾದ ಬೌದ್ಧಮತದ ನಿರಾಕರಣೆಯನ್ನು ಮಾಡಿದ್ದಾರೆ. ಅದರಲ್ಲಿ ಬೌದ್ಧೈಕದೇಶಿಗಳಾದ ವೈಭಾಷಿಕ ಮತ ಹಾಗೂ ಸೌತ್ರಾಂತಿಕ ಮತದ ನಿರಾಕರಣೆಯನ್ನು ಸಮುದಾಯಾಧಿಕರಣ ಮಾಡಿದರೆ, ಶೂನ್ಯವಾದದ ನಿರಾಕರಣೆಯನ್ನು ಅಸದಧಿಕರಣವು, ವಿಜ್ಞಾನವಾದದ ನಿರಾಕರಣೆಯನ್ನು ಅನುಪಲಬ್ಧ್ಯಧಿಕರಣವು ಮಾಡಿದೆ. ಹೀಗೆ ಬೌದ್ಧಮತದ ನಿರಾಕರಣೆಗಾಗಿ ಮೂರು ಅಧಿಕರಣಗಳು ಹೊರಟಿರುವುದು ಅತ್ಯಂತ ಗಮನಿಸಬೇಕಾದ ವಿಚಾರ. ಜೈನಮತದ ನಿರಾಕರಣೆಯನ್ನು ಅನುಪಲಬ್ಧ್ಯಧಿಕರಣವು ಮಾಡಿದೆ. ಶೈವಮತವನ್ನು ನಿರಾಕರಣೆ ಮಾಡುವುದಕ್ಕಾಗಿ ಹನ್ನೊಂದನೆಯ ಪಶುಪತ್ಯಧಿಕರಣವು ಹಾಗೂ ಶಕ್ತಿಮತದ ನಿರಾಕರಣೆಗಾಗಿ ಹನ್ನೆರಡನೆಯ ಶಕ್ತ್ಯಧಿಕರಣವು ಹೊರಟಿದೆ. ಹೀಗೆ ಪ್ರಧಾನವಾದ ಬೇರೆ ಎಲ್ಲಾ ಮತದ ನಿರಾಕರಣೆಯನ್ನು ಮಾಡಿ ಭಗವಂತನೇ ಜಗಜ್ಜನ್ಮಾದಿಕಾರಣನಾಗಿದ್ದಾನೆ ಮತ್ತು ಸಕಲಗುಣಪರಿಪೂರ್ಣನಾಗಿದ್ದಾನೆಂಬುದನ್ನು ಈ ಎರಡು ಪಾದಗಳಲ್ಲಿ ಹೃದಯಂಗಮವಾಗಿ ಸಮರ್ಥಿಸಲಾಗಿದೆ.

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ ಇಷ್ಟು ಗ್ರಂಥಗಳನ್ನು ಅಧ್ಯಯನ ಮಾಡಿ ಎಲ್ಲ ವಿಚಾರಗಳನ್ನು ಮನದಟ್ಟು ಮಾಡಿಕೊಂಡ ಮೇಲಷ್ಟೇ ಈ ಅಧ್ಯಾಯದ ತಾತ್ಪರ್ಯಚಂದ್ರಿಕೆಯನ್ನು ಓದಬೇಕು. ಇಲ್ಲದಿದ್ದರೆ ತಾತ್ಪರ್ಯಚಂದ್ರಿಕೆಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಅತ್ಯಂತ ಸಂಕ್ಷೇಪವಾಗಿದ್ದರೂ ಕೂಡ ಹೇಳಲೇಬೇಕಾದ ಎಲ್ಲ ಪ್ರಮೇಯಗಳನ್ನು ಶ್ರೀ ವ್ಯಾಸರಾಜರು ಹೇಳಿದ್ದಾರೆ. ಹಾಗೂ ಪ್ರಕಾಶ ಟಿಪ್ಪಣಿಯಲ್ಲಿ ಶ್ರೀ ರಾಘವೇಂದ್ರಗುರುಸಾರ್ವಭೌಮರೂ ಕೂಡ ಸಮಯೋಚಿತವಾದ ಎಲ್ಲ ವಿಷಯಗಳನ್ನೂ ನಿರೂಪಣೆ ಮಾಡಿದ್ದಾರೆ. ಇಂಥ ಶ್ರೀವ್ಯಾಸರಾಜರಿಗೆ ಹಾಗೂ ರಾಯರಿಗೆ ಎಷ್ಟು ಕೃತಜ್ಞತೆ ಹೇಳಿದರೂ ಕೂಡ ಸಾಲದು.

## ಕೃತಜ್ಞತೆಗಳು

ಈ ಸಂಪುಟವನ್ನು ಶ್ರೀಪಾದರಾಜಮಠವು ಮುದ್ರಣ ಮಾಡುತ್ತಿದೆ. ಪೀಠಾಧಿಪತಿಗಳಾದ ಶ್ರೀ ಕೇಶವನಿಧಿತೀರ್ಥ ಶ್ರೀಪಾದಂಗಳವರಿಗೆ ಅನಂತ ನಮಸ್ಕಾರಗಳು ಹಾಗೂ ಕೃತಜ್ಞತೆಗಳು. ಶ್ರೀಪಾದರಾಜ ಮಠದ ಎಲ್ಲಾ ಜ್ಞಾನಕಾರ್ಯಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡು ಹಗಲಿರುಳು ಶ್ರಮವಹಿಸುತ್ತ ಮಠದ ಅಭಿವೃದ್ಧಿಯ ಹರಿಕಾರರಾದ

ಹೆಚ್.ಬಿ. ಲಕ್ಷ್ಮೀನಾರಾಯಣಾಚಾರ್ಯರ ಉಪಕಾರ ಎಂದೂ ಕೂಡ ಮರೆಯಲಾಗದು. ವಿಳಂಬ ಮಾಡದೆ ಪುಸ್ತಕಗಳನ್ನು ಶೀಘ್ರವಾಗಿ ಮುದ್ರಣ ಮಾಡಬೇಕೆಂದು ಹೇಳುತ್ತಲೇ ಇರುತ್ತಾರೆ. ಆದರೆ ಇತರ ಅನೇಕ ಸಮಸ್ಯೆಗಳಿಂದ ಈ ಪುಸ್ತಕವು ವಿಳಂಬವಾಗಿ ಮುದ್ರಣವಾಗುತ್ತಿದೆ. ಶ್ರೀಲಕ್ಷ್ಮೀನಾರಾಯಣಾಚಾರ್ಯರ ಉತ್ಸಾಹ, ಔದಾರ್ಯ, ಪ್ರೋತ್ಸಾಹ, ಮಾರ್ಗದರ್ಶನಗಳು ನಿರಂತರವಾಗಿರಲೆಂದು ಬಿನ್ನವಿಸುತ್ತೇನೆ. ಹಾಗೂ ಆಚಾರ್ಯರಿಗೆ ಕೃತಜ್ಞತೆಗಳಿಂದ ನಮಸ್ಕರಿಸುತ್ತೇನೆ.

ಹತ್ತನೆಯ ಸಂಪುಟಕ್ಕೆ ಸಂಪೂರ್ಣವಾಗಿ ಧನಸಹಾಯ ಮಾಡಿದ ಶ್ರೀ ಮೋಹನ್‌ರವರು ಈ ಹನ್ನೊಂದನೆಯ ಸಂಪುಟದ ಮುದ್ರಣದ ಭಾರವನ್ನೂ ಕೂಡ ವಹಿಸಿಕೊಂಡಿದ್ದಾರೆ. ಮೋಹನ್ ರವರು ಬಹಳಷ್ಟು ಹಣವುಳ್ಳ ಶ್ರೀಮಂತ ವ್ಯಕ್ತಿಯಲ್ಲ. ಬ್ಯಾಂಕ್ ಕೆಲಸದಲ್ಲಿ ನಿವೃತ್ತಿಯನ್ನು ಪಡೆದ ಒಬ್ಬ ಹರಿಭಕ್ತರು. ಕೇವಲ ಶ್ರೀವ್ಯಾಸರಾಜರ ಗ್ರಂಥದ ಮೇಲಿನ ಗೌರವದಿಂದ ಹಾಗೂ ಜ್ಞಾನಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕೆಂಬ ಹೆಬ್ಬಯಕೆಯಿಂದಷ್ಟೇ ತಮ್ಮ ಸಾಮರ್ಥ್ಯವನ್ನು ಮೀರಿ ಈ ಸಂಪುಟಕ್ಕೆ ಧನಸಹಾಯವನ್ನು ಮಾಡಿದ್ದಾರೆ. ಉತ್ತಮ ಗ್ರಂಥಗಳ ಅಧ್ಯಯನ, ಅಧ್ಯಾಪನೆಗಳು ಎಲ್ಲೆಡೆಯೂ ನಡೆಯಬೇಕು. ಅದಕ್ಕಾಗಿ ತಮ್ಮ ಸೇವೆ ಸಲ್ಲಬೇಕು. ಜನ್ಮಾಂತರದಲ್ಲಾದರೂ ಇಂತಹ ಶ್ರೇಷ್ಠವಾದ ಗ್ರಂಥಗಳ ಜ್ಞಾನವನ್ನು ಭಗವಂತನು ದಯಪಾಲಿಸಬೇಕೆಂಬುದಷ್ಟೇ ಮೋಹನ್‌ರವರ ಉದ್ದೇಶವಾಗಿದೆ. ಇವರ ಈ ಉತ್ತಮ ಉದ್ದೇಶ ಹಾಗೂ ಔದಾರ್ಯಗಳನ್ನು ಕಂಡು ನನಗೆ ಅತ್ಯಂತ ಅಚ್ಚರಿಯಾಗಿದೆ. ಇಂಥ ಸಜ್ಜನರ ಸಹವಾಸ ನಿರಂತರವಿರಲಿ ಎಂದಷ್ಟೇ ಅಪೇಕ್ಷಿಸುತ್ತೇನೆ ಹಾಗೂ ಮೋಹನ್‌ರವರಿಗೆ ಅವರ ತಂದೆ ತಾಯಿಗಳಾದ ಶ್ರೀಮತಿ ರಮಾಬಾಯೀ, ಮತ್ತು ಶ್ರೀ ನರಸೀಪುರ ಕೇಶವರಾವ್‌ರವರಿಗೆ ಕೃತಜ್ಞತೆಗಳು. ಎನ್.ಕೆ. ಮೋಹನ್ ಅವರ ಮಕ್ಕಳಾದ ಅರ್ಜುನ್ ಹಾಗೂ ಅಶ್ವಿನ್ ಇಬ್ಬರಿಗೂ ಕೂಡ ಕೃತಜ್ಞತೆಗಳು.

ಶ್ರೀಮತಿ ಲೀಲಾ ಶ್ರೀನಿವಾಸ ಪ್ರಹ್ಲಾದ್, ಡಾಯಲ್ಸ್ ಟೌನ್, ಪೆನ್ಸಿಲ್‌ವೆನಿಯಾ, ೧೮೯೦೧, ಯು.ಎಸ್.ಎ. ಇವರು ಎಲ್ಲಾ ಸಂಪುಟಗಳಂತೆ ಹನ್ನೊಂದನೆಯ ಸಂಪುಟಕ್ಕೂ ಕೂಡ ಧನಸಹಾಯವನ್ನು ಮಾಡಿದ್ದಾರೆ. ಹನ್ನೊಂದನೆ ಹಾಗೂ ಹನ್ನೆರಡನೆಯ ಸಂಪುಟವು ವಿಳಂಬವಾಗಿ ಮುದ್ರಣವಾಗುತ್ತಿದ್ದಾಗ ಸ್ವತಃ ತಾವೇ ಮುಖ್ಯಪಾತ್ರವನ್ನು ವಹಿಸಿ, ವಿಘ್ನವನ್ನು ಪರಿಹಾರ ಮಾಡಿ, ಈ ಸಂಪುಟವನ್ನು ಹಾಗೂ ಹನ್ನೆರಡನೆಯ ಸಂಪುಟವನ್ನು ಅತ್ಯಂತ ಶೀಘ್ರದಲ್ಲಿ ಮುದ್ರಣವಾಗುವಂತೆ ಉಪಕರಿಸಿದ್ದಾರೆ. ಇವರ ಪ್ರೋತ್ಸಾಹದಿಂದಷ್ಟೇ ಈ ಯೋಜನೆ ಆಮೂಲಾಗ್ರವಾಗಿ, ನಿರಾತಂಕವಾಗಿ ನಡೆಯಲು ಸಾಧ್ಯವಾಯಿತು. ಇವರ ಈ ಉಪಕಾರವನ್ನು ಎಂದೆಂದೂ ಮರೆಯಲು ಸಾಧ್ಯವಿಲ್ಲ.

ಈ ಗ್ರಂಥದ ಪ್ರಕಾಶನಕ್ಕಾಗಿ ಉಪಕರಿಸಿದ ಎಲ್ಲಾ ಮಹನೀಯರಿಗೂ ಅನೇಕ ಕೃತಜ್ಞತೆಗಳು.

*ಲೇಖಕ -*

*ವಿ. ಬೆಮ್ಮತ್ತಿ ವೇಂಕಟೇಶಾಚಾರ್ಯ*

# ಭೋಕ್ತ್ರಧಿಕರಣ
(೨-೧-೫)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ,
ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ
ಇವುಗಳ ಸರಳ ಕನ್ನಡ ಅನುವಾದ

॥ ಶ್ರೀಗುರುಭ್ಯೋ ನಮಃ ॥

# ಭೋಕ್ತ್ರಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – भोक्त्रापत्तेरविभागश्चेत् स्याल्लोकवत् ॥**

ಮೋಕ್ಷದಲ್ಲಿ ಎಲ್ಲ ಜೀವರೂ ಬ್ರಹ್ಮಸ್ವರೂಪವನ್ನು ತಾಳುತ್ತಾರೆ. ಬ್ರಹ್ಮನೊಂದಿಗೆ ಐಕ್ಯವನ್ನು ಪಡೆಯುತ್ತಾರೆ. ಎಂಬುದಾಗಿ ಶ್ರುತಿಯು ಬ್ರಹ್ಮನಿಂದ ಐಕ್ಯವನ್ನು ಮೋಕ್ಷಕಾಲದಲ್ಲಿ ಹೇಳುತ್ತದೆ. ಆದ್ದರಿಂದ ಅಲ್ಪನಾದ ಜೀವನಿಗಿಂತ ಬ್ರಹ್ಮನು ಅಭಿನ್ನನಾದ ಕಾರಣ ಜಗತ್ಕಾರಣತ್ವವು ಹೇಗೆ ಕೂಡುತ್ತದೆ? ಈ ಆಕ್ಷೇಪವು ತಪ್ಪು. ಒಂದು ನೀರು ಮತ್ತೊಂದು ನೀರಿನ ಜೊತೆಗೆ ಸೇರುತ್ತದೆ ಹೊರತು ಐಕ್ಯವನ್ನು ಹೊಂದುವುದಿಲ್ಲ. ಏಕೆಂದರೆ ನೀರನ್ನು ಸೇರಿಸಿದಾಗ ಮೊದಲಿದ್ದ ನೀರು ಹೆಚ್ಚಾಗುತ್ತದೆ. ಅದರಂತೆ ಜೀವನು ಪರಮಾತ್ಮನೊಂದಿಗೆ ಐಕ್ಯವನ್ನು ಪಡೆಯುತ್ತಾನೆ ಎಂದು ಶ್ರುತಿ ಹೇಳಿದ್ದರೂ ಪರಮಾತ್ಮನೇ ಜೀವನಾಗುವುದಿಲ್ಲ. ಮೋಕ್ಷದಲ್ಲಿ ಒಂದೇ ಸ್ಥಾನದಲ್ಲಿ ಇರುತ್ತಾರೆ ಎಂದಷ್ಟೇ ಶ್ರುತಿಯ ಅಭಿಪ್ರಾಯ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – भोक्त्रापत्तेरविभागश्चेत् स्याल्लोकवत् ॥ भोक्त्रापत्तेः** यस्माद्भोक्तुः जीवस्य 'परेऽव्यये सर्व एकीभवन्ति' इति वाक्येब्रह्मभावापत्तेः श्रवणात् । **तयोरविभागः** भेदाभावः । तस्मादल्पजीवाभिन्नब्रह्मणः जगत्कारणत्वं न युक्तमिति **चेत्** । नेति शेषः । कुतः? यतः **लोकवत्** यथा लोके जले जालन्तरस्यैकीभावोक्तिस्तथाऽत्रापि स्थानैक्याद्यालम्बनेन जीवेशयोः एकीभवन्तीत्यैक्योक्तिः **स्यात्** उपचरिता भवेत् । अतो नोक्तदोष इत्यर्थः ॥१॥

ಅರ್ಥ -- ಭೋಕ್ತ್ರಾಪತ್ತೇಃ = ಭೋಕ್ತೃವಾದ ಜೀವನಿಗೆ 'ಪರೇ ಅವ್ಯಯೇ ಸರ್ವ ಏಕೀ ಭವಂತಿ' ಎಂಬ ಶ್ರುತಿಯು ಬ್ರಹ್ಮಸ್ವರೂಪವನ್ನು ಹೇಳುತ್ತಿದೆ. ಆದ್ದರಿಂದ ಜೀವೋತ್ತಮರಿಗೆ ಅವಿಭಾಗಃ = ಭೇದವಿರುವುದಿಲ್ಲ. ಅಲ್ಪನಾದ ಜೀವನಿಗಿಂತಲೂ ಅಭಿನ್ನನಾದ ಬ್ರಹ್ಮನಿಗೆ ಜಗತ್ಕಾರಣತ್ವವು ಅಯುಕ್ತವಾಗುತ್ತದೆ. ಚೇತ್ = ಇದು ಸರಿಯಲ್ಲ. ಏಕೆಂದರೆ ಯಾವ ಕಾರಣದಿಂದ ಲೋಕವತ್ = ಲೋಕವ್ಯವಹಾರದಲ್ಲಿ ನೀರು ಮತ್ತೊಂದು ನೀರಿನಲ್ಲಿ ಐಕ್ಯ ಹೊಂದಿತು ಎಂಬ ಪ್ರಯೋಗವಿದೆ. ಆದರೆ ಒಂದು ನೀರು ಮತ್ತೊಂದು ನೀರಿನ ಜೊತೆಗೆ ಬೆರೆಯುತ್ತದೆ ಹೊರತು ಐಕ್ಯವನ್ನು ಹೊಂದುವುದಿಲ್ಲ. ಅದರಂತೆ ಇಲ್ಲಿಯೂ ಕೂಡ ಸ್ಥಾನೈಕ್ಯದ ದೃಷ್ಟಿಯಿಂದ ಈಶ್ವರನಿಗೆ ಐಕ್ಯವನ್ನು ಶ್ರುತಿಯು ಹೇಳುತ್ತಿದೆ. ಸ್ಯಾತ್ = ಐಕ್ಯವ್ಯವಹಾರವು ಔಪಚಾರಿಕವಾದದ್ದು. ಆದ್ದರಿಂದ ಆಕ್ಷೇಪವು ಅಯುಕ್ತವಾಗಿದೆ.

॥ ಇಲ್ಲಿಗೆ ಸೂತ್ರ ಹಾಗೂ ಸೂತ್ರದೀಪಿಕೆಯಲ್ಲಿ ಭೋಕ್ತ್ರಧಿಕರಣವು ಸಮಾಪ್ತವಾಯಿತು ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – ।। भोक्त्रापत्तेरविभागश्चेत् स्याल्लोकवत् ।।१।।**

**'कर्माणि विज्ञानमयश्च आत्मा परेऽव्यये सर्व एकीभवन्ति' (मुं.३.२.७) इति मुक्तजीवस्य परापत्तिरुच्यते । अतस्तयोरविभागः। अतः पूर्वमपि स एव । न ह्यन्यस्यान्यत्वं युज्यत इति चेत् –**

ಅನುವಾದ - ಕರ್ಮಗಳು ವಿಜ್ಞಾನಮಯನಾದ ಜೀವ ಇವರೆಲ್ಲರೂ ನಾಶರಹಿತನಾದ ಉತ್ತಮನಾದ ಪರಮಾತ್ಮನಲ್ಲಿ ಐಕ್ಯವನ್ನು ಪಡೆಯುತ್ತಾರೆ. ಹೀಗೆ ಮುಕ್ತನಾದ ಜೀವನಿಗೆ ಪರಮಾತ್ಮನಿಂದ ಐಕ್ಯವನ್ನು ಶ್ರುತಿಯು ಹೇಳುತ್ತಿದೆ. ಮೋಕ್ಷದಲ್ಲಿ ಅಭೇದವಿಲ್ಲ. ಮೋಕ್ಷಕ್ಕಿಂತ ಮೊದಲು ಸಂಸಾರಾವಸ್ಥೆಯಲ್ಲಿಯೂ ಅಭೇದವಿರಲೇಬೇಕು. ಏಕೆಂದರೆ ಮೊದಲು ಭಿನ್ನವಾದ ಎರಡು ಪದಾರ್ಥಗಳು ಮುಂದೆ ಅಭಿನ್ನವಾಗಲು ಸಾಧ್ಯವಿಲ್ಲ. ಇಷ್ಟು ಪೂರ್ವಪಕ್ಷ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಅನೇಕ ಶ್ರುತಿಗಳಿಂದ ಸಿದ್ಧವಾದ ಪ್ರಬಲವಾದ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಪೂರ್ವಪಕ್ಷದ ಭಾಗವನ್ನು ಮೊದಲು ವ್ಯಾಖ್ಯಾನ ಮಾಡಿದ್ದಾರೆ. ಕರ್ಮಾಣಿ = ಎಲ್ಲಾ ಬಗೆಯ ಕರ್ಮಗಳು, ವಿಜ್ಞಾನಮಯಶ್ಚ = ವಿಜ್ಞಾನಮಯನಾದ, ಆತ್ಮಾ = ಜೀವನು, ಸರ್ವೇ = ಎಲ್ಲವೂ ಕೂಡ, ಪರೇ = ಸರ್ವೋತ್ತಮನಾದ, ಅವ್ಯಯಃ = ನಾಶರಹಿನಾದ ಪರಮಾತ್ಮನಲ್ಲಿ, ಏಕೀಭವಂತಿ = ಐಕ್ಯವನ್ನು ಹೊಂದುತ್ತಾರೆ. ಇತಿ = ಹೀಗೆ, ಮುಕ್ತಜೀವಸ್ಯ =

ಮುಕ್ತನಾದ ಜೀವನಿಗೆ, ಪರಾಪತ್ತಿಃ = ಪರಮಾತ್ಮನಿಂದ ಐಕ್ಯವು, ಉಚ್ಯತೇ = ಹೇಳಲಾಗಿದೆ, ಅತಃ = ಆದ್ದರಿಂದ, ತಯೋಃ = ಜೀವ ಬ್ರಹ್ಮರಿಗೆ, ಅವಿಭಾಗಃ = ಅಭೇದವಿರುತ್ತದೆ. ಅತಃ = ಮೋಕ್ಷಾವಸ್ಥೆಯಲ್ಲಿ ಅಭೇದವಿರುವುದರಿಂದ, ಪೂರ್ವಮಪಿ = ಸಂಸಾರಾವಸ್ಥೆಯಲ್ಲೂ ಕೂಡ, ಸಏವ = ಅಭೇದವನ್ನು ಹೇಳಲೇ ಬೇಕು. ಅನ್ಯಥಾ = ಮೊದಲು ಭಿನ್ನವಾದ ವಸ್ತುವಿಗೆ, ಅನ್ಯತ್ವಂ = ಅಭೇದವು, ನಹಿ ಯುಜ್ಯತೇ = ಯುಕ್ತವಾಗುವುದಿಲ್ಲ. ಇತಿ ಚೇತ್ = ಇಷ್ಟು ಪೂರ್ವಪಕ್ಷ.

**ಭಾಷ್ಯಮ್ – ನ, स्याल्लोकवत् । यथा लोके उदके उदकान्तरस्यैकीभाव-व्यवहारेऽप्यन्तर्भेदोऽस्त्येव, एवं स्यादत्रापि ।**

ಅನುವಾದ - ಈ ಆಕ್ಷೇಪ ತಪ್ಪು. ಉಪನಿಷತ್ತಿನಲ್ಲಿರುವ ಐಕ್ಯವ್ಯವಹಾರವು ಗೌಣ ಪ್ರಯೋಗವಾಗಿದೆ. ಯಾವ ರೀತಿಯಾಗಿ ಲೋಕದಲ್ಲಿ ನೀರಿನ ಜೊತೆ ಮತ್ತೊಂದು ನೀರು ಸೇರಿದಾಗ 'ಏಕೀಭಾವವಾಯಿತು' ಎಂಬ ವ್ಯವಹಾರವಿದ್ದರೂ ಎರಡು ನೀರುಗಳಲ್ಲಿ ಭೇದವು ಇರುತ್ತದೋ, ಇದೇ ರೀತಿಯಾಗಿ ಮೋಕ್ಷದಲ್ಲಿಯೂ ಕೂಡ ಜೀವ ಹಾಗೂ ಬ್ರಹ್ಮರಿಗೆ ಭೇದವು ಇದ್ದೇ ಇರುತ್ತದೆ.

ಪ್ರತಿಪದಾರ್ಥ -- ನಞ್ ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳುವ ಮೂಲಕ 'ಅವಿಭಾಗಃ' ಎಂಬ ಪದವನ್ನು ಅನುಷಂಗ ಮಾಡಿಕೊಳ್ಳುವ ಮೂಲಕ ಸಿದ್ಧಾಂತ ಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ನ = ಈ ಆಕ್ಷೇಪವು ತಪ್ಪು. ಲೋಕವತ್ = ಲೋಕದಲ್ಲಿ ಏಕೀಭಾವವ್ಯವಹಾರ ಇರುವಂತೆ, ಸ್ಯಾತ್ = ಇಲ್ಲಿಯೂ ಇದೆ. ಜೀವಬ್ರಹ್ಮರ ಭೇದವು ಯುಕ್ತವಾಗುತ್ತದೆ. ಯಥಾ = ಯಾವ ರೀತಿಯಾಗಿ, ಲೋಕೇ = ಲೋಕದಲ್ಲಿ, ಉದಕೇ = ನೀರಿನಲ್ಲಿ ಉದಕಾಂತರಸ್ಯ = ಮತ್ತೊಂದು ನೀರನ್ನು ಸೇರಿಸಿದಾಗ, ಏಕೀಭಾವವ್ಯವಹಾರೇಽಪಿ = ಒಂದೇ ಎಂಬ ವ್ಯವಹಾರವಿದ್ದರೂ, ಅಂತರ್ಭೇದಃ = ಅವುಗಳಲ್ಲಿ ಪರಸ್ಪರ ಭೇದವು, ಅಸ್ತ್ಯೇವ = ಇದ್ದೇ ಇದೆಯೊ, ಏವಂ = ಅದೇ ರೀತಿಯಾಗಿ, ಅತ್ರಾಪಿ = ಮೋಕ್ಷದಲ್ಲಿಯೂ ಕೂಡ, ಸ್ಯಾತ್ = ಜೀವಬ್ರಹ್ಮರ ಭೇದವು ಇದ್ದೇ ಇರುತ್ತದೆ.

**भाष्यम् – तथा च श्रुतिः – 'यथोदकं शुद्धे शुद्धमासिक्तं तादृगेव भवति' (कठ.४.१५.) इति ॥**

ಅನುವಾದ - ಕಾಠಕದ ಶ್ರುತಿ ಹೀಗೆ ಹೇಳಿದೆ - ಶುದ್ಧವಾದ ನೀರಿನಲ್ಲಿ ಮತ್ತೊಂದು ಶುದ್ಧವಾದ ನೀರನ್ನು ಸೇರಿಸಿದಾಗ ಒಂದೇ ಆಗುವುದಿಲ್ಲ. ಒಂದರಂತೆ ಮತ್ತೊಂದು ಆಗುತ್ತದೆ.

ಪ್ರತಿಪದಾರ್ಥ -- ಶ್ರುತಿಗೆ ಗೌಣವಾದ ಅರ್ಥವನ್ನು ನಿರಾಧಾರವಾಗಿ ಕಲ್ಪನೆ ಮಾಡುತ್ತಿಲ್ಲ. ಶ್ರುತಿಯ ಆಧಾರದಿಂದಲೇ ಹೇಳುತ್ತಿದ್ದೇವೆಂದು ಸಮರ್ಥಿಸುತ್ತಿದ್ದಾರೆ. ಯಥಾ = ಯಾವ ರೀತಿಯಾಗಿ, ಶುದ್ಧೇ ಉದಕೇ = ಶುದ್ಧವಾದ ನೀರಿನಲ್ಲಿ, ಶುದ್ಧಂ = ಮತ್ತೊಂದು ಶುದ್ಧವಾದ ನೀರನ್ನು, ಆಸಿಕ್ತಂ = ಬೆರೆಸಿದಾಗ, ತಾದೃಗೇವ = ಮೊದಲಿನ ಶುದ್ಧನೀರಿನಂತೆ, ಭವತಿ = ಆಗುತ್ತದೆ. ಇತಿ = ಹೀಗೆ, ಶ್ರುತಿಃ = ಕಾಠಕೋಪನಿಷತ್ತು ಹೇಳಿದೆ.

**भाष्यम् – स्कान्दे च –**

**‘उदकं तूदके सिक्तं मिश्रमेव यथा भवेत् ।**
**न चैतदेव भवति यतो वृद्धिः प्रदृश्यते ।**
**एवमेव हि जीवोऽपि तादात्म्यं परमात्मना ।**
**प्राप्तोऽपि नासौ भवति स्वातन्त्र्यादिविशेषणात् ।।’ इति ।**

ಅನುವಾದ - ಸ್ಕಾಂದಪುರಾಣದಲ್ಲಿ ಹೀಗೆ ಹೇಳಲಾಗಿದೆ - ನೀರಿನಲ್ಲಿ ಮತ್ತೊಂದು ನೀರನ್ನು ಸೇರಿಸಿದಾಗ ಎರಡು ವಿಶ್ರಣವಾಗುತ್ತವೆ ಹೊರತು ಐಕ್ಯವನ್ನು ಹೊಂದುವುದಿಲ್ಲ. ಆದ್ದರಿಂದಲೇ ನೀರನ್ನು ಬೆರಸಿದ ಮೇಲೆ ಮೊದಲೇ ಇರುವ ನೀರಿಗಿಂತ ಪ್ರಮಾಣವು ಹೆಚ್ಚಾಗುತ್ತದೆ. ಅದೇ ರೀತಿಯಾಗಿ ಜೀವನು ಪರಮಾತ್ಮನೊಂದಿಗೆ ತಾರತಮ್ಯವನ್ನು ಹೊಂದುತ್ತಾನೆ ಎಂದು ಶ್ರುತಿ ಹೇಳಿದ್ದರೂ ಪರಮಾತ್ಮನ ಸ್ವರೂಪವನ್ನು ತಾಳುವುದಿಲ್ಲ. ಏಕೆಂದರೆ ಪರಮಾತ್ಮನಲ್ಲಿ ಜೀವನಲ್ಲಿಲ್ಲದ ಸ್ವಾತಂತ್ರ್ಯ ಮೊದಲಾದ ವಿಶೇಷಗುಣಗಳಿರುತ್ತವೆ.

ಪ್ರತಿಪದಾರ್ಥ -- ಎರಡೂ ಜಲಗಳಿಗೆ ಐಕ್ಯವೇ ಇರುವುದರಿಂದ ವ್ಯಭಿಚಾರವು ಬರುವುದಿಲ್ಲ. ಮತ್ತು ಔಪಚಾರಿಕ ಅರ್ಥವನ್ನು ಮಾಡಿದಂತಾಗುವುದಿಲ್ಲ. ಈ ಪ್ರಶ್ನೆಗೆ ಹಿಂದೆ ಹೇಳಿದ ವಿಷಯದಲ್ಲಿ ಶ್ರುತಿಪ್ರಮಾಣವನ್ನು ತೋರಿಸುತ್ತಿದ್ದಾರೆ. ಸ್ಕಾಂದೇ ಚ = ಸ್ಕಾಂದಪುರಾಣದಲ್ಲಿ ಹೀಗೆ ಹೇಳಲಾಗಿದೆ - ಉದಕೇ = ಮೊದಲಿರುವ ನೀರಿನಲ್ಲಿ, ಉದಕಂ = ಮತ್ತಷ್ಟು ನೀರನ್ನು, ಸಿಕ್ತಂ = ಸೇರಿಸಿದಾಗ, ಯಥಾ = ಯಾವರೀತಿಯಾಗಿ, ಮಿಶ್ರಮೇವ = ವಿಶ್ರಣವೇ, ಭವೇತ್ = ಹೊಂದುತ್ತದೋ, ಏತದೇವ = ಅದೇ ನೀರು, ನ ಚ ಭವತಿ = ಆಗುವುದಿಲ್ಲ, ಯತಃ = ಏಕೆಂದರೆ, ವೃದ್ಧಿಃ = ಪ್ರಮಾಣದಲ್ಲಿ, ಆಧಿಕ್ಯವು, ಪ್ರದೃಶ್ಯತೇ = ಸ್ಪಷ್ಟವಾಗಿ ಕಾಣಸುತ್ತದೆ. ಏವಮೇವ ಹಿ = ಇದರಂತೆ, ಜೀವೋಽಪಿ = ಜೀವನೂ ಕೂಡ, ಪರಮಾತ್ಮನಾ = ಪರಬ್ರಹ್ಮನಿಂದ, ಅಸೌ = ಈ ಜೀವನು, ತಾದಾತ್ಮ್ಯಂ = ಐಕ್ಯವನ್ನು, ಪ್ರಾಪ್ತೋಽಪಿ = ಹೊಂದಿದವನಾದರೂ, ನ ಭವತಿ = ಬ್ರಹ್ಮನೇ ಆಗುವುದಿಲ್ಲ. ಸ್ವಾತಂತ್ರ್ಯಾದಿವಿಶೇಷಣಾತ್ = ಸರ್ವತಂತ್ರಸ್ವತಂತ್ರತ್ವ ಮೊದಲಾದ ಧರ್ಮಗಳು ಶ್ರೀಹರಿಯಲ್ಲಿರುತ್ತವೆ.

भाष्यम् –

**'ब्रह्मेशानादिभिर्देवैर्यत् प्राप्तुं नैव शक्यते ।**
**तद्यत्स्वभावः कैवल्यं स भवान् केवलो हरे ।।' इति च ।।**

ಅನುವಾದ - ಬ್ರಹ್ಮ, ರುದ್ರ ಮೊದಲಾದ ದೇವತೆಗಳಿಂದಲೂ ಯಾವ ಪರಮಾತ್ಮನನ್ನು ಹೊಂದಲು ಸಾಧ್ಯವಿಲ್ಲವೋ ಅಂಥ ಮೋಕ್ಷವು ನಿನ್ನ ಸ್ವಭಾವವಾಗಿದೆ. ಆದ್ದರಿಂದಲೇ ನೀನು ಕೇವಲ ಎಂದು ಕರೆಸಿಕೊಳ್ಳುವೆ.

ಪ್ರತಿಪದಾರ್ಥ -- 'ನಾಸೌ ಭವತಿ' ಎಂಬ ವಚನವು ಉಳಿದ ಜೀವರ ವಿಷಯದಲ್ಲಿ ಮಾತ್ರ ಹೊರತು ಬ್ರಹ್ಮಾದಿಗಳನ್ನು ಕುರಿತು ಅಲ್ಲ. ಆದ್ದರಿಂದ ಚತುರ್ಮುಖಬ್ರಹ್ಮಾದಿಗಳಿಗೆ ಪರಮಾತ್ಮನ ಜೊತೆ ಐಕ್ಯವನ್ನು ಹೇಳಬಹುದಲ್ಲವೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಯತ್ = ಯಾವ ಬ್ರಹ್ಮತ್ವವನ್ನು, ಪ್ರಾಪ್ತಂ = ಹೊಂದಲು, ಬ್ರಹ್ಮೇಶಾನಾದಿಭಿಃ = ಚತುರ್ಮುಖ ರುದ್ರ ಮೊದಲಾದ, ದೇವೈಃ = ದೇವತೆಗಳಿಂದ, ನೈವ ಶಕ್ಯತೇ = ಎಂದೂ ಕೂಡ ಹೊಂದಲು ಸಾಧ್ಯವಿಲ್ಲವೋ, ತತ್ = ಅಂಥ. ಸ್ವಭಾವಃ = ಸ್ವರೂಪವುಳ್ಳವನು. ಭವಾನ್ = ನೀನು. ಹೇ ಹರೇ = ಎಲೈ ಹರಿಯೇ. ಇತಿ = ಆದ್ದರಿಂದ. ಭವಾನ್ = ನೀನು. ಕೇವಲಃ = ಕೇವಲ ಎಂದು ಕರೆಸಿಕೊಳ್ಳುವಿ. ಇತಿ ಚ = ಹೀಗೆ ಸ್ಕಾಂದಪುರಾಣವು ಹೇಳುತ್ತಿದೆ.

भाष्यम् – **'न ते महित्वमन्वश्नुवन्ति' (ऋ.७.९९.१) 'न ते विष्णो जायमानो न जातः' (ऋ. ७.११.२) इत्यादि च ।**

ಅನುವಾದ - ಎಲೈ ವಿಷ್ಣುವೇ ! ನಿನ್ನ ಜಗತ್‌ಸೃಷ್ಟ್ಯಾದಿ ಮಹಿಮೆಯನ್ನು ಯಾರೂ ಕೂಡ ಹೊಂದಲು ಸಾಧ್ಯವಿಲ್ಲ. ಎಲೈ ವಿಷ್ಣುವೇ ! ನಿನ್ನ ಮಹಿಮೆಯನ್ನು ಇದುವರೆಗೆ ಹುಟ್ಟಿದ ಯಾರೂ ಹೊಂದಿರುವುದಿಲ್ಲ. ಮುಂದೆ ಹುಟ್ಟುವವರೂ ಕೂಡ ಹೊಂದುವುದಿಲ್ಲ. ಹೀಗೆ ಅನೇಕ ಶ್ರುತಿಗಳು ಪರಮಾತ್ಮನು ಭಿನ್ನನಾಗಿದ್ದಾನೆ ಎನ್ನಲು ಪ್ರಮಾಣವಾಗಿವೆ.

ಪ್ರತಿಪದಾರ್ಥ -- ಚತುರ್ಮುಖಾದಿಗಳ ಜೊತೆ ಪರಮಾತ್ಮನಿಗೆ ಐಕ್ಯವು ಸರ್ವಥಾ ಯುಕ್ತವಾಗುವುದಿಲ್ಲ ಎಂಬ ವಿಷಯದಲ್ಲಿ ಶ್ರುತಿ ಪ್ರಮಾಣವನ್ನು ಆಧಾರವನ್ನಾಗಿ ನೀಡುತ್ತಿದ್ದಾರೆ. ತೇ = ನಿನ್ನ, ಮಹಿತ್ವಮ್ = ಮಹಿಮೆಯನ್ನು, ನ ಅನ್ವಶ್ನುವಂತಿ = ಯಾರೂ ಕೂಡ ಅನುಭವಿಸಲು ಸಾಧ್ಯವಿಲ್ಲ. ವಿಷ್ಣೋ= ಎಲೈ ವಿಷ್ಣುವೇ, ತೇ = ನಿನ್ನ ಮಹಿಮೆಯನ್ನು, ಜಾತಃ = ಇದುವರೆಗೂ ಹುಟ್ಟಿದ ಬ್ರಹ್ಮಾದಿಗಳು, ನ = ಹೊಂದಲಾರರು. ಮುಂದೆ ಹುಟ್ಟುವ ಬ್ರಹ್ಮಾದಿಗಳೂ ಕೂಡ, ನ = ಹೊಂದಲಾರರು, ಇತ್ಯಾದಿ ಚ = ಇವೇ ಮೊದಲಾದ ಪ್ರಮಾಣಗಳಿವೆ.

**भाष्यम् – फलत्वेऽपि युक्तिविरोधेऽन्तर्भावादत्रोक्तम् ।।१।।भाष्यम् – फलत्वेऽपि युक्तिविरोधेऽन्तर्भावादत्रोक्तम् ।।१।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये भोक्त्रधिकरणम् ।। ९ ।।**

ಮೋಕ್ಷರೂಪವಾದ ಫಲದ ವಿಷಯದಲ್ಲಿ ಈ ಪ್ರಮೇಯವು ಸಂಬಂಧವನ್ನು ಹೊಂದುತ್ತದೆ. ಆದರೂ ಕೂಡ ಯುಕ್ತಿವಿರೋಧದಲ್ಲಿಯೂ ಇದು ಸೇರುವುದರಿಂದ ಅವಿರೋಧಾಧ್ಯಾಯದಲ್ಲಿ ಈ ಅಧಿಕರಣವನ್ನು ಅಂತರ್ಭಾವ ಮಾಡಿದ್ದು ಸಮಂಜಸವೇ ಆಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಮುಕ್ತರಿಗೂ ಈಶ್ವರನಿಗೂ ಭೇದವನ್ನು ಸಮರ್ಥನೆ ಮಾಡುತ್ತಿರುವುದರಿಂದ ಫಲಾಧ್ಯಾಯದಲ್ಲಿ ಇದು ಸಂಗತವಾಗ-ಬೇಕಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಫಲತ್ವೇऽಪಿ = ಮೋಕ್ಷದ ವಿಷಯದಲ್ಲಿ ಈ ಅಧಿಕರಣವು ಸಂಗತವಾದರೂ ಯುಕ್ತಿವಿರೋಧದ ವಿಷಯದಲ್ಲಿಯೂ, ಅಂತರ್ಭಾವಾತ್ = ಅಂತರ್ಭಾವವನ್ನು ಹೊಂದುತ್ತದೆ. ಆದ್ದರಿಂದ ಅತ್ರ = ಈ ಅಧಿಕರಣದಲ್ಲಿ, ಉಕ್ತಮ್ = ಹೇಳಲ್ಪಟ್ಟಿದೆ.

ಇಲ್ಲಿಗೆ ಭೋಕ್ತ್ರಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**अत्र पुनर्विष्णोजगत्कारणत्वादौ युक्तिविरोधस्य परिह्रियमाणत्वादस्ति शास्त्रादिसङ्गतिः ।**

ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಪುನಃ ಯುಕ್ತಿವಿರೋಧವನ್ನೇ ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳು ಇರುತ್ತವೆ.

**तत्वप्रकाशिका – विष्णोर्जगत्कर्तृत्वादिपूर्वमभिहितं तस्य च युक्तिविरूद्धत्वे लक्षणमसम्भवि स्यादतोऽसौ निराकरणीय एव ।**

ವಿಷ್ಣು ಜಗಜ್ಜನ್ಮಾದಿಕಾರಣನಾಗಿದ್ದಾನೆಂದು ಈ ಹಿಂದೆ ಪ್ರತಿಪಾದಿಸಲಾಯಿತು. ಅದಕ್ಕೆ ಯುಕ್ತಿವಿರೋಧವು ಬರುವುದರಿಂದ ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವು ಅಸಂಭವದೋಷ ಗ್ರಸ್ತವಾಗುತ್ತದೆ. ಆದ್ದರಿಂದ ಮೊದಲು ಯುಕ್ತಿವಿರೋಧವನ್ನು ಪರಿಹಾರ ಮಾಡಲೇಬೇಕು.

**तत्वप्रकाशिका – जगज्जन्मादिकर्तृत्वं विषयः । परमात्मनो युक्तमयुक्तं वेति सन्देहः । वादिविवादः सन्देहबीजम् । पूर्वपक्षस्य सूत्र एवोक्तत्वात्तदुपन्यस्य पूर्वपक्षांशं तावद् व्याचष्टे ।। भोक्त्रापत्तेरिति ।।**

ಈ ಅಧಿಕರಣದಲ್ಲಿ ಜಗಜ್ಜನ್ಮಾದಿಕರ್ತೃತ್ವವು ವಿಷಯವಾಗಿದೆ. ಪರಮಾತ್ಮನಿಗೆ ಇದು ಯುಕ್ತವಾಗುತ್ತದೋ ಇಲ್ಲವೋ ? ಎಂಬುದು ಸಂದೇಹ. ವಾದಿ-ಪ್ರತಿವಾದಿಗಳ ವಿವಾದವು ಸಂದೇಹಕ್ಕೆ ಬೀಜ. ಪೂರ್ವಪಕ್ಷವನ್ನು ಸೂತ್ರದಲ್ಲೇ ಹೇಳಿರುವುದರಿಂದ ಪೂರ್ವಪಕ್ಷಾಂಶವನ್ನು ವ್ಯಾಖ್ಯಾನ ಮಾಡಲು 'ಭೋಕ್ತ್ರಾಪತ್ತೇಃ' ಇತ್ಯಾದಿ ಭಾಷ್ಯವು ಹೊರಟಿದೆ.

**तत्वप्रकाशिका – न विष्णोर्जगत्कर्तृत्वादि युक्तम् । तस्य जीवाभिन्नत्वात्। न हि जीवाभिन्नस्य जगत्कर्तृत्वाद्युपपद्यते । जीवाभेदो ह्युभयगतविरूद्धधर्मपरित्यागेन जीवस्य ईश्वरसालक्षण्यग्रहणेनेश्वरस्य जीवसालक्षण्यग्रहणेन वा सम्भवति । सर्वथा न जगत्कारणत्वादीश्वरैकनिष्ठं सम्भवति ।**

ವಿಷ್ಣುವಿಗೆ ಜಗತ್‌ಕರ್ತೃತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ವಿಷ್ಣು ಜೀವನಿಗಿಂತ ಅಭಿನ್ನನಾಗಿದ್ದಾನೆ. ಜೀವಾಭಿನ್ನನಾದ ವಿಷ್ಣುವಿನಲ್ಲಿ ಜಗತ್‌ಕರ್ತೃತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ವಿಷ್ಣುವಿಗೆ ಜೀವಾಭೇದವನ್ನು ಹೇಳಬೇಕೆಂದರೆ ಜೀವ ಹಾಗೂ ವಿಷ್ಣು ಇಬ್ಬರಲ್ಲಿಯೂ ಇರುವ ವಿರುದ್ಧಧರ್ಮವನ್ನು ಪರಿತ್ಯಾಗ ಮಾಡಬೇಕು.ಅಥವಾ ಜೀವನಿಗೆ ಈಶ್ವರನ ಸಮಾನಧರ್ಮವನ್ನು ಒಪ್ಪಬೇಕು. ಅಥವಾ ಈಶ್ವರನಿಗೆ ಜೀವನ ಸಮಾನಧರ್ಮವನ್ನು ಒಪ್ಪಬೇಕು. ಈ ಮೂರುಪಕ್ಷಗಳಲ್ಲಿ ಯಾವುದನ್ನು ಒಪ್ಪಿದರೂ ಕೂಡ ಜಗತ್ಕಾರಣತ್ವವು ಕೇವಲ ವಿಷ್ಣುನಿಷ್ಠವಾಗಲು ಸಾಧ್ಯವಿಲ್ಲ.

**तत्वप्रकाशिका – तस्य जीवाभेद एव कुत इति चेत् । कर्माणिविज्ञानमयश्च आत्मेत्यादौ मुक्तजीवस्य परमात्मत्वप्राप्तिः श्रूयते ।**

ವಿಷ್ಣು ಜೀವನಿಗಿಂತ ಭಿನ್ನನಾಗಿದ್ದಾನೆಂದು ಹೇಗೆ ಹೇಳುತ್ತೀರಿ ಎಂದರೆ 'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ' ಇತ್ಯಾದಿ ವೇದವಾಕ್ಯಗಳಲ್ಲಿ ಮುಕ್ತಜೀವನು ಪರಮಾತ್ಮಸ್ವರೂಪವೆಂದು ಹೇಳಲಾಗಿದೆ.

**तत्वप्रकाशिका – किं चातः । तेनैव हेतुना मुक्तेश्वरयोरभेदसिद्धिः । यो यथा श्रूयते स तथेति व्याप्तेः ।**

ಇದರಿಂದ ಯಾವ ಪ್ರಮೇಯವನ್ನು ಹೇಳಿದಂತಾಯಿತು ? ಎಂದರೆ ಈಶ್ವರಪ್ರಾಪ್ತಿಯು ಶ್ರುತ್ಯುಕ್ತವಾಗಿದೆ ಎಂಬ ಹೇತುವಿನಿಂದಲೇ ಮುಕ್ತರಿಗೂ ಹಾಗೂ ಈಶ್ವರನಿಗೂ ಅಭೇದವು ಸಿದ್ಧವಾಗುತ್ತದೆ. ಯಾವುದು ಹೇಗೆ ಶ್ರುತವಾಗಿದೆಯೋ ಅದು ಹಾಗೆಯೇ ಇರಬೇಕು. ಎಂಬ ವ್ಯಾಪ್ತಿಯು ಲೋಕಸಿದ್ಧವಾಗಿದೆ.

**तत्वप्रकाशिका – मुक्तजीवाभिन्नस्यापि कथञ्चिजगत्कारणत्वं निर्वोढुं शक्यमिति चेन्न । मुक्तावैक्ये संसारेऽप्यैक्यस्याऽऽवश्यकत्वात् ।**

ಮುಕ್ತಜೀವನಿಂದ ಅಭಿನ್ನನಾಗಿದ್ದರೂ ಕಥಂಚಿತ್ ಜಗಜ್ಜನ್ಮಾದಿಕಾರಣತ್ವವನ್ನು ಹೊಂದಿಸಬಹುದು ಎಂಬ ಆಕ್ಷೇಪವು ಸರಿಯಲ್ಲ. ಏಕೆಂದರೆ ಮೋಕ್ಷದಲ್ಲಿ ಐಕ್ಯವಿದ್ದ ಮೇಲೆ ಸಂಸಾರಾವಸ್ಥೆಯಲ್ಲಿಯೂ ಕೂಡ ಐಕ್ಯವು ಇರಲೇಬೇಕು.

**तत्वप्रकाशिका – न हि भिन्नमभिन्नतां यातीति युक्तम् । अतो जीवाभिन्नत्वादीश्वरस्यैव परमार्थतो जगत्कारणत्वाद्यनुपपन्नमिति लक्षणसूत्रं न युक्मति भावः ।**

ಮೊದಲು ಬೇರೆಬೇರೆಯಾದ ಎರಡು ಪದಾರ್ಥಗಳು ಅನಂತರ ಒಂದೇ ಆಗಲು ಸಾಧ್ಯವಿಲ್ಲ. ಆದ್ದರಿಂದ ಈಶ್ವರನು ಜೀವನಿಗಿಂತ ಅಭಿನ್ನನಾಗಿದ್ದಾನೆ. ಆದ್ದರಿಂದ ಪಾರಮಾರ್ಥಿಕವಾಗಿ ಜಗತ್ಕಾರಣತ್ವವು ಈಶ್ವರನಲ್ಲಿ ಉಪಪನ್ನವಾಗುವುದಿಲ್ಲ. ಹೀಗಿರುವಾಗ ಜಗಜ್ಜನ್ಮಾದಿಕಾರಣತ್ವವನ್ನು ಪರಮಾತ್ಮನ ಲಕ್ಷಣವೆಂದು 'ಜನ್ಮಾದ್ಯಸ್ಯ' ಎಂಬ ಸೂತ್ರದಲ್ಲಿ ಹೇಳಿದ್ದು ಅಯುಕ್ತವಾಗಿದೆ. ಇಷ್ಟು ಪೂರ್ವಪಕ್ಷ.

**तत्वप्रकाशिका – नञध्याहारेण सिद्धान्तांशं व्याचष्टे – नेति ।। जीवेशयोरभेदाभावान्नेश्वरस्य जगत्कारणत्वादि विरुद्ध' ऐक्येनोक्तत्वान्मुक्तजीवस्य परमात्माभिन्नत्वेन तत्सिद्धिरिति चेन्न । एकीभूतत्वेनोक्तजलेऽतर्भेददर्शनेन व्यभिचारात् ।**

ಸೂತ್ರದಲ್ಲಿ 'ನಞ್' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳುವ ಮೂಲಕ ಸಿದ್ಧಾಂತದ ಅಂಶವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಜೀವೇಶ್ವರರಿಗೆ ಅಭೇದವಿಲ್ಲದ ಕಾರಣ ಈಶ್ವರನಿಗೆ ಜಗಜ್ಜನ್ಮಾದಿಕಾರಣತ್ವವು ವಿರುದ್ಧವಾಗುವುದಿಲ್ಲ. ಪರಮಾತ್ಮನಿಂದ ಮುಕ್ತಜೀವನು ಅಭಿನ್ನನಾಗಿದ್ದಾನೆಂದು ಶ್ರುತಿಯು ಹೇಳುತ್ತಿರುವುದರಿಂದ ಜೀವೇಶ್ವರರ ಅಭೇದವು ಸಿದ್ಧವಾಗಿದೆಯಲ್ಲವೆ? ಎಂದು ಪ್ರಶ್ನಿಸಬಾರದು. 'ಏಕೀಭೂತರಾದರು' ಎಂಬ ಪದಕ್ಕೆ ಅಭಿನ್ನರಾದರು ಎಂಬರ್ಥವನ್ನು ಹೇಳುವುದೇ ತಪ್ಪು. ಏಕೆಂದರೆ ನೀರು ಏಕೀಭೂತವಾಯಿತು ಎಂಬ ಪ್ರಯೋಗವಿದೆ. ಇದಕ್ಕೆ ಅಭಿನ್ನವಾಯಿತು ಎಂದರ್ಥವಲ್ಲ. ಮೊದಲಿದ್ದ ನೀರಿಗೂ ಅನಂತರ ಬಂದ ನೀರಿಗೂ ಇರುವ ಭೇದವು ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಆದ್ದರಿಂದ ಏಕೀಭವನವಿದ್ದರೂ ಅಭೇದವಿಲ್ಲದ ಪ್ರಯುಕ್ತ ಜಲದಲ್ಲಿ ವ್ಯಭಿಚಾರದೋಷ ಬರುತ್ತದೆ.

**तत्वप्रकाशिका – ऐक्योक्तिस्तु स्थानैक्याद्यालम्बनत्वेन जलैकीभावोक्तिवदुपचरिता स्यादिति भावः ।**

ಶ್ರುತಿಯಲ್ಲಿ ಐಕ್ಯವನ್ನು ನೇರವಾಗಿ ಹೇಳಿದ್ದಾರಲ್ಲವೇ? ಎಂದರೆ ಅದೂ ಕೂಡ ಸ್ಥಾನೈಕ್ಯ ಮತ್ಯೈಕ್ಯ ಮೊದಲಾದವುಗಳನ್ನು ಆಧರಿಸಿ ಔಪಚಾರಿಕವಾಗಿ ಪ್ರಯೋಗಿಸಲಾಗಿದೆ. ನೀರಿನ ಏಕೀಭವನದಂತೆ ಇದನ್ನು ಕೂಡ ಔಪಚಾರಿಕವಾಗಿ ಕೂಡಿಸಬೇಕು.

**तत्वप्रकाशिका – न श्रुतेः स्वातन्त्र्येणोपचरितार्थत्वकल्पनं किन्तु श्रुत्याप्युक्तमित्याह – तथा चेति ।।**

ಶ್ರುತಿಗೆ ಗೌಣಾರ್ಥವನ್ನು ಆಶ್ರಯಿಸುತ್ತಿರುವುದು ಸ್ವೇಚ್ಛೆಯಿಂದಲ್ಲ. ಶ್ರುತಿಯಿಂದಲೇ ವರ್ಣಿತವಾಗಿದೆ ಎಂಬುದನ್ನು 'ತಥಾ ಚ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**तत्वप्रकाशिका – एवं मुनेर्विजानत आत्मा भवति गौतमेति वाक्यशेषः। एतेन बाधकं विनोपचारकल्पनमयुक्तमित्येतदपि परास्तम् । निरन्जनः परमं साम्यमुपैति परात्परं पुरुषमुपैत दिव्यमित्यादिसन्निहितवाक्यविरोधाच्च ।**

'ಏವಂ ಮುನೇರ್ವಿಜಾನತಃ ಆತ್ಮಾ ಭವತಿ ಗೌತಮ' ಎಂಬ ವಾಕ್ಯಶೇಷವನ್ನು 'ಯಥೋದಕಂ ಶುದ್ಧೇ ಶುದ್ಧಂ' ಎಂಬ ಶ್ರುತಿಯ ಮುಂದೆ ಶೇಷಪೂರಣ ಮಾಡಿಕೊಳ್ಳಬೇಕು.

ಶುದ್ಧಜಲದಲ್ಲಿ ಬೇರೆ ಜಲವನ್ನು ಹಾಕಿದಾಗ ಎರಡೂ ಒಂದಾಗುವುದಿಲ್ಲ. ಒಂದೇ ರೀತಿಯಾಗುತ್ತದೆ. ಅದೇ ರೀತಿಯಾಗಿ ಜ್ಞಾನಿಯಾದ ಚತುರ್ಮುಖನು ಪರಮಾತ್ಮನನ್ನು ಪಡೆದಾಗ ಅವನಂತೆ ಆಗುತ್ತಾನೆ ಹೊರತು ಅವನೇ ಆಗುವುದಿಲ್ಲ ಎಂಬುದು ಶ್ರುತಿಯ ಅಭಿಪ್ರಾಯ. ಹೀಗೆ ಹೇಳಿದ್ದರಿಂದ ಬಾಧಕವಿಲ್ಲದೆ ಔಪಚಾರಿಕವಾದ ಅರ್ಥದ ಕಲ್ಪನೆಯು ಅಯುಕ್ತವಾಗಿದೆ ಎಂಬ ಆಕ್ಷೇಪವನ್ನು ನಿರಾಕರಿಸಿದಂತಾಯಿತು. ಏಕೆಂದರೆ 'ನಿರಂಜನಃ ಪರಮಂ ಸಾಮ್ಯಮುಪೈತಿ' 'ಪರಾತ್ಪರಂ ಪುರುಷಮ್' ಪಾಪರಹಿತನಾದ ಜೀವನು ವಿಷ್ಣುವಿನ ಸಾಮ್ಯವನ್ನು ಪಡೆಯುತ್ತಾನೆ. ಪರಾತ್ಪರನಾದ ದಿವ್ಯಪುರುಷನಾದ ನಾರಾಯಣನನ್ನು ಹೊಂದುತ್ತಾನೆ. ಎಂಬುದಾಗಿ ಹತ್ತಿರವಿರುವ ವಾಕ್ಯಗಳಿಂದ ಮುಖ್ಯಾರ್ಥವಾದ ಐಕ್ಯಕ್ಕೆ ವಿರೋಧ ಬರುತ್ತದೆ.

**तत्वप्रकाशिका – जलयोरप्यैक्यान्न व्यभिचार (रादित्यत) इत्यत उक्तार्थे स्मृतिं चाह – स्कान्दे चेति ।। तादात्म्यं परमात्मना प्राप्त इत्युक्तोऽपीत्यर्थः।**

ಎರಡು ಜಲಗಳಲ್ಲಿಯೂ ಐಕ್ಯವಿರುವುದರಿಂದ ವ್ಯಭಿಚಾರ ಬರುವುದಿಲ್ಲವೆಂಬ ಪ್ರಶ್ನೆಗೆ ಹಿಂದೆ ಹೇಳಿದ ವಿಷಯದಲ್ಲಿ ಸ್ಮೃತಿಯನ್ನು ಪ್ರಮಾಣವನ್ನಾಗಿ 'ಸ್ಕಾಂದೇ ಚ' ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ. ತಾದಾತ್ಮ್ಯವನ್ನು ಪರಮಾತ್ಮನಿಂದ ಹೊಂದಿದ್ದಾನೆ ಎಂದು ಉಕ್ತನಾದರೂ ಕೂಡ ಎಂದು ಇದರ ಅರ್ಥ.

**तत्वप्रकाशिका – मुक्तोऽपीति वा । 'हरौ नियतचित्तत्वाद् ग्रहवत्तत्प्रवेशनात्। मोक्षं तादात्म्यमित्याहुर्न तु तद्रूपतः क्वचित्' इति वचनात् ।**

**अल्पमुक्तानामेतदस्त्वित्यत आह – ब्रह्मेति ।। वर्तमाननिषेधात् स्यादुत्तरत्रेत्यत आह – नेति ।।**

'ತಾದಾತ್ಮ್ಯಮ್ ಪರಮಾತ್ಮನಾ ಪ್ರಾಪ್ತೋಽಪಿ' ಎಂಬ ಮಾತಿನಲ್ಲಿ 'ಉಕ್ತೋಽಪಿ' ಎಂಬ ಪದವನ್ನು ಇಟ್ಟುಕೊಳ್ಳಬೇಕು. ಇಲ್ಲದಿದ್ದರೆ ಪರಮಾತ್ಮನ ತಾದಾತ್ಮ್ಯವನ್ನು ಹೊಂದಿದರೂ ಪರಮಾತ್ಮ ಆಗಲಾರ ಎನ್ನುವುದು ಪರಸ್ಪರ ವಿರುದ್ಧವಾಗುತ್ತದೆ. ಅಥವಾ ತಾದಾತ್ಮ್ಯಶಬ್ದಕ್ಕೆ ಅಭೇದವೆಂದರ್ಥವಲ್ಲ. ಮೋಕ್ಷವೆಂದರ್ಥ.

ಶ್ರೀಹರಿಯಲ್ಲಿ ನಿಯಮೇನ ಮನಸ್ಸನ್ನು ನೆಲೆಗೊಳಿಸಿದ್ದರಿಂದ ಅಥವಾ ಗ್ರಹದಂತೆ ಶ್ರೀಹರಿಯಲ್ಲಿ ಪ್ರವೇಶ ಮಾಡಿದ್ದರಿಂದ ಮೋಕ್ಷವನ್ನು ತಾದಾತ್ಮ್ಯವೆಂದು ಹೇಳುತ್ತಾರೆ ಹೊರತು, ಪರಮಾತ್ಮಸ್ವರೂಪವನ್ನು ಹೊಂದಿದ್ದರಿಂದ ಎಂದರ್ಥವಲ್ಲ. ಹೀಗೆ 'ಹರೌ ನಿಯತಚಿತ್ತತ್ವಾದ್ ಗ್ರಹವತ್ ತತ್ಪ್ರವೇಶನಾತ್ । ಮೋಕ್ಷಂ ತಾದಾತ್ಮ್ಯಮಿತ್ಯಾಹುರ್ನತು ತದ್ರೂಪತಃ ಕ್ವಚಿತ್' ಎಂದು ಭಾಗವತತಾತ್ಪರ್ಯದಲ್ಲಿ ಹೇಳಿರುತ್ತಾರೆ.

ಅಲ್ಪಮುಕ್ತರಿಗೆ ಐಕ್ಯವು ಇಲ್ಲದಿದ್ದರೂ ಚತುರ್ಮುಖ ಮೊದಲಾದ ಉತ್ತಮರಿಗೆ ಐಕ್ಯವು ಕೂಡಬಹುದಲ್ಲವೆ ? ಎಂಬ ಪ್ರಶ್ನೆಗೆ 'ಬ್ರಹ್ಮೇಶಾನಾದಿಭಿಃ' ಎಂಬ ಮಾತಿನಿಂದ ಉತ್ತರಿಸಿದ್ದಾರೆ. 'ನ ಅನ್ವಶ್ನುವಂತಿ' ಎಂಬುದಾಗಿ ಈಗ ಐಕ್ಯವಿಲ್ಲವೆಂದು ನಿಷೇಧ ಮಾಡಿದ್ದರಿಂದ ಮುಂದೆ ಜೀವಬ್ರಹ್ಮರಿಗೆ ಐಕ್ಯವು ಪ್ರಾಪ್ತವಾಗಬಹುದುಲ್ಲವೆ ? ಎಂಬ ಪ್ರಶ್ನೆಗೆ 'ನೇತಿ' ಎಂಬುದಾಗಿ ಎರಡು ಮಂತ್ರಗಳನ್ನು ಉದಾಹರಿಸಿ ಉತ್ತರಿಸುತ್ತಿದ್ದಾರೆ. ಶ್ರೀಹರಿಯಿಂದ ಜೀವರಿಗೆ ಎಂದೆಂದೂ ಕೂಡ ಐಕ್ಯವು ಪ್ರಾಪ್ತವಾಗುವುದಿಲ್ಲ ಎಂದು ಅರ್ಥ.

**तत्वप्रकाशिका – ननु मुक्तेश्वरयोर्भेदसमर्थनं फलाध्यायसङ्गतमतो नैतत्सूत्रार्थः किन्तु चेतनाचेतनात्मकप्रपञ्चस्य ब्रह्मात्मकत्वे विषयस्य विषयित्वं स्यात् । तथा च विषयविषयिविभागो न स्यादित्याशङ्क्य समुद्रात्मनामपि फेनतरङ्गादीनां विभागवदुपपद्यत इति अत्र निरस्यत इत्यत आह – फलत्वेऽपीति।।**

ಮುಕ್ತರಾದ ಜೀವರಿಗೂ ಈಶ್ವರನಿಗೂ ಭೇದವನ್ನು ಈ ಅಧಿಕರಣದಲ್ಲಿ ಸಮರ್ಥನೆ ಮಾಡುತ್ತಿದ್ದೀರಿ. ಹಾಗಾದರೆ ಇದು ಫಲಾಧ್ಯಾಯದಲ್ಲಿ ಸಂಗತವಾಗಬೇಕು. ಹೊರತು ಈ ಇಲ್ಲಿ ಸಂಗತವಾಗುವುದಿಲ್ಲ. ಆದ್ದರಿಂದ ಚೇತನಾಚೇತನಾತ್ಮಕವಾದ ಪ್ರಪಂಚವು ಬ್ರಹ್ಮಸ್ವರೂಪವಾದರೆ ವಿಷಯವೇ ವಿಷಯೀ ಎನಿಸಿಕೊಳ್ಳಬೇಕಾಗುತ್ತದೆ. ವಿಷಯವೆಂದರೆ ಅಚೇತನಾದ ವಸ್ತುಗಳು, ವಿಷಯೀ ಎಂದರೆ ಚೇತನವಾದ ಭೋಕ್ತೃವರ್ಗ, ಈ ವಿಭಾಗವೇ ಕೂಡದಿರಬೇಕಾದೀತು ಎಂಬುದು ಇದರ ಅಭಿಪ್ರಾಯ. ಆದ್ದರಿಂದ 'ವಿಷಯವಿಷಯೀ' ಎಂಬ ವಿಭಾಗವೇ ಅಯುಕ್ತವಾಗಬೇಕಾದೀತು. ಹೀಗೆ ಆಶಂಕಿಸಿ ಸಮುದ್ರದ ನೊರೆ ತರಂಗ ಮೊದಲಾದವು ಸಮುದ್ರಸ್ವರೂಪವೇ ಆಗಿದ್ದರೂ ಅಲೆ ಸಮುದ್ರಗಳಿಗೆ ವಿಭಾಗವನ್ನು ಹೇಳುತ್ತೇವೆ. ಅದರಂತೆ ಇಲ್ಲಿಯೂ ಕೂಡ ವಿಷಯ ಮತ್ತು ವಿಷಯಿಗಳ ವಿಭಾಗವನ್ನು ಹೇಳಬಹುದು. ಹೀಗೆ ಈ

ಅಧಿಕರಣದಲ್ಲಿ ವಿಷಯವಿಷಯಿಗಳ ವಿಭಾಗದ ಅಭಾವವನ್ನು ನಿರಾಕರಣೆ ಮಾಡಲಾಗಿದೆಯೆಂದು ಅದ್ವೈತಿಗಳು ಆಕ್ಷೇಪ ಮಾಡಿದರೆ 'ಫಲತ್ವೇಪಿ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – एतदधिकरणस्य फलाध्यायसङ्गत्वेऽप्यत्र नासङ्गतिर्येनान्यार्थकल्पनम् । उक्तरीत्या युक्तिविरोधपरिहारेऽप्यन्तर्भावात् । अन्यथोभयान्तर्गतस्यैकत्राप्यनुक्तिप्रसङ्ग इति भावः ।**

ಈ ಅಧಿಕರಣವು ಫಲಾಧ್ಯಾಯದಲ್ಲಿ ಸಂಗತವಾಗಬೇಕು. ಆದರೂ ಕೂಡ ಈ ಪಾದದಲ್ಲಿ ಅಸಂಗತಿಯು ಇರುವುದಿಲ್ಲ. ಹಾಗೆ ಅಸಂಗತಿಯು ಇದ್ದಲ್ಲಿ ಸೂತ್ರಕ್ಕೆ ಮತ್ತೊಂದು ಅರ್ಥವನ್ನು ಕಲ್ಪನೆ ಮಾಡಬಹುದಿತ್ತು. ಹಿಂದೆ ಹೇಳಿದ ಪ್ರಕಾರ ಯುಕ್ತಿವಿರೋಧವನ್ನು ಪರಿಹಾರ ಮಾಡಿದರೂ ಯುಕ್ತಿವಿರೋಧವನ್ನು ಪರಿಹರಿಸುತ್ತಿರುವುದರಿಂದ ಇಲ್ಲಿ ಸಂಗವಾಗುತ್ತದೆ. ಇಲ್ಲದಿದ್ದರೆ ಮುಕ್ತೇಶ್ವರರಿಗೆ ಭೇದವಿಚಾರ ಹಾಗೂ ಯುಕ್ತಿವಿರೋಧ ಎರಡರಲ್ಲೂ ಅಂತರ್ಗತವಾಗುವುದರಿಂದ ಎರಡರಲ್ಲೂ ಹೇಳದಿರಬೇಕಾದ ಪರಿಸ್ಥಿತಿ ಬರುತ್ತದೆ.

**तत्वप्रकाशिका – अर्थान्तरं तु प्रपञ्चस्य ब्रह्मात्मकत्वनिरासेन निरस्तम्। भोक्तृत्वापत्तेरिति भावप्रधाननिर्देशाभावाच्च । अतो विष्णोर्जगत्कारणत्वादौ युक्तिविरोधाभावादुपपन्नं लक्षणसूत्रमिति सिद्धम् ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् भोक्त्रधिकरणम् ।।**

ಪ್ರಪಂಚಕ್ಕೆ ಬ್ರಹ್ಮಾತ್ಮಕತ್ವನ್ನು ನಿರಾಕರಣೆ ಮಾಡಿದ್ದರಿಂದ ಅದ್ವೈತಿಗಳು ಸೂತ್ರಕ್ಕೆ ಹೇಳಿದ ಅರ್ಥಾಂತರವು ನಿರಾಕೃತವಾಯಿತು. ಪ್ರಕೃತ್ಯಧಿಕರಣದ ಭಾಷ್ಯದಲ್ಲಿ ಪ್ರಪಂಚಕ್ಕೆ ಬ್ರಹ್ಮನು ಉಪಾದಾನ- ಕಾರಣನಲ್ಲವೆಂದು ನಿರಾಕರಣೆ ಮಾಡಿದ್ದರಿಂದ ಬ್ರಹ್ಮನಿಗೂ ಮತ್ತು ಜಗತ್ತಿಗೂ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. 'ಭೋಕ್ತ್ರಾಪತ್ತೇಃ' ಎಂಬ ಸೂತ್ರದಲ್ಲಿ ಭಾವಪ್ರಧಾನವನ್ನು ಸೂತ್ರಕಾರರು ನಿರ್ದೇಶ ಮಾಡಿಲ್ಲ. ಅದ್ವೈತಿಗಳು ಹೇಳಿದ ಅರ್ಥವು ಯುಕ್ತವಾಗಿದ್ದರೆ ಸೂತ್ರಕಾರರು ಭಾವಪ್ರಧಾನವನ್ನು ನಿರ್ದೇಶ ಮಾಡುತ್ತಿದ್ದರು. ಆದ್ದರಿಂದ ವಿಷ್ಣುವಿನ ಜಗತ್ಕಾರಣತ್ವಾದಿಗಳಲ್ಲಿ ಯಾವುದೇ ಯುಕ್ತಿವಿರೋಧವು ಬರುವುದಿಲ್ಲ. ಬ್ರಹ್ಮನಿಗೆ ಹೇಳಿದ ಲಕ್ಷಣವು ಉಚಿತವಾಗಿದೆ ಎಂದು ಸಿದ್ಧವಾಯಿತು.

**ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಭೋಕ್ತೃಧಿಕರಣ ಮುಗಿಯಿತು.**

ಭೋಕ್ತ್ರಧಿಕರಣ
(೨-೧-೫)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ
ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ಅಧಿಕರಣ ಸಂಗತಿ

**भोक्त्रापत्तेरविभागश्चेत्स्याल्लोकवत् । अत्र सुधायां पूर्वं श्रुतिसंवादितया प्रबलयुक्त्यविरोध उक्तोऽत्र तु बहुश्रुतिसिद्धतया प्रबलयुक्त्यविरोध उच्यत इत्युक्तम्।**

'ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್' ಎಂಬ ಸೂತ್ರದಿಂದ ಭೋಕ್ತ್ರಾಪತ್ತ್ಯಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದ ನ್ಯಾಯಸುಧೆಯಲ್ಲಿ ಹಿಂದಿನ ಅಧಿಕರಣದಿಂದ ಪ್ರತ್ಯುದಾಹರಣರೂಪದಿಂದ ಸಂಗತಿಯನ್ನು ಹೀಗೆ ತೋರಿಸಿದ್ದಾರೆ - ಹಿಂದಿನ ಅಧಿಕರಣದಲ್ಲಿ ಶ್ರುತಿಸಂವಾದಿಯಾದ್ದರಿಂದ ಪ್ರಬಲವಾದ ಯುಕ್ತಿಯ ವಿರೋಧವನ್ನು ಪರಿಹರಿಸಿದ್ದಾಯಿತು. ಈ ಅಧಿಕರಣದಲ್ಲಿ ಅನೇಕ ಶ್ರುತಿಗಳಿಂದ ಸಿದ್ಧವಾಗಿರುವುದರಿಂದ ಮತ್ತಷ್ಟು ಪ್ರಬಲವಾದ ಯುಕ್ತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ ಎಂದು.

**तत्रासदादिशब्दानां पूर्वसिद्धान्तरीत्या ब्रह्मपरत्वेऽपि मुख्यार्थत्वादसत्कारणत्वे पूर्वपक्ष्युक्तश्रुतिसंवादाभावात्तत्प्रयुक्तप्राबल्यस्याप्यभावः ।**

ಹಿಂದಿನ ಅಧಿಕರಣದಲ್ಲಿ ಅಸತ್ ಮೊದಲಾದ ಶಬ್ದಗಳು ಅಧಿಕರಣದ ಸಿದ್ಧಾಂತದಂತೆ ಬ್ರಹ್ಮಪರವಾಗಿದ್ದರೂ ಕೂಡ ಪ್ರಾಗಭಾವಾದ್ಯರ್ಥಗಳಲ್ಲಿ ಮುಖ್ಯಾರ್ಥವೇ ಆಗುತ್ತವೆ. ಮತ್ತು ಪ್ರಾಗಭಾವವು ಜಗತ್ತಿಗೆ ಕಾರಣವೆಂದು ಹೇಳಿದಾಗ, ಪೂರ್ವಪಕ್ಷಿಯು ಹೇಳಲ್ಪಟ್ಟ ಶ್ರುತಿಗೆ ಯಾವುದೇ ಸಂವಾದಪ್ರಮಾಣವು ಇರುವುದಿಲ್ಲ. ಆದ್ದರಿಂದಲೇ ತತ್‌ಪ್ರಯುಕ್ತವಾದ ಪ್ರಾಬಲ್ಯವನ್ನೂ ಕೂಡ ಹೇಳಲು ಬರುವುದಿಲ್ಲ.

**अत्र तु ''एकीभवन्ति'' इत्यादीनामत्रत्यसिद्धान्तरीत्या स्थानैक्यादिपरत्वे मुख्यार्थहानेरैक्यश्रुतिसिद्धत्वस्य भावान्न तत्प्रयुक्तप्राबल्याभावः ।**

ಆದರೆ ಈ ಅಧಿಕರಣದಲ್ಲಿ 'ಪರೇಽವ್ಯಯೇ ಸರ್ವ ಏಕೀಭವಂತಿ' ಇತ್ಯಾದಿ ಶ್ರುತಿಯು ಈ ಅಧಿಕರಣದ ಸಿದ್ಧಾಂತದಂತೆ ಶ್ರುತಿಗೆ ಸ್ಥಾನೈಕ್ಯ, ಮತ್ಯೈಕ್ಯವನ್ನು ಹೇಳಿದರೆ ಮುಖ್ಯಾರ್ಥಕ್ಕೆ ಹಾನಿ ಬರುತ್ತದೆ. ಆದ್ದರಿಂದ ಸ್ವರೂಪೈಕ್ಯವನ್ನೇ ಅರ್ಥವನ್ನಾಗಿ ಹೇಳಬೇಕು. ಆದ್ದರಿಂದ ಶ್ರುತಿಸಿದ್ಧತ್ವ-ಪ್ರಯುಕ್ತವಾದ ಪ್ರಾಬಲ್ಯವಿಲ್ಲವೆಂದು ಈ ಅಧಿಕರಣದಲ್ಲಿ ಹೇಳಲು ಸಾಧ್ಯವಿಲ್ಲ. 'ಪರಮಾತ್ಮಾ ನ ಸರ್ವಕರ್ತಾ ಅಸರ್ವಕರ್ತೃಸಂಸಾರಿಜೀವಾಭಿನ್ನತ್ವಾತ್' ಎಂಬ ಯುಕ್ತಿಯ ಪಕ್ಷಧರ್ಮತಾವು ಶ್ರುತಿಸಿದ್ಧವಾಗುತ್ತಿದೆ ಎಂದು ಪೂರ್ವಪಕ್ಷಿಯ ಅಭಿಪ್ರಾಯ.

**तथा च पूर्वत्र श्रुतिसंवादियुक्तिविरोधे परिहृतेऽपीह बहुश्रुतिसिद्धतया प्रबलयुक्तिविरोधाशङ्का युक्ता ।**

ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಶ್ರುತಿಸಂವಾದಿಯಾಗಿರುವ ಯುಕ್ತಿಯ ವಿರೋಧವನ್ನು ಪರಿಹರಿಸಲಾಯಿತು. ಆದರೂ ಕೂಡ ಈ ಅಧಿಕರಣದಲ್ಲಿ ಅನೇಕ ಶ್ರುತಿಗಳಿಂದ ಸಿದ್ಧವಾದ್ದರಿಂದಲೇ ಅತ್ಯಂತ ಬಲಿಷ್ಠವಾದ ಯುಕ್ತಿಗಳ ವಿರೋಧಾಶಂಕೆಯು ಪ್ರಾಪ್ತವಾಗುತ್ತದೆ.

**यद्यपि भावत्वादिका पूर्वाधिकरणयुक्तिरपि श्रुतिसिद्धा ।**

ಪ್ರಶ್ನೆ - 'ಸರ್ವೇ ಭಾವಾಃ ಪ್ರಳಯೇಽಸಂತಃ ಭಾವತ್ವಾತ್' ಎಂಬ ಯುಕ್ತಿಯು ಶ್ರುತಿಸಂವಾದಿ-ಯಾಗಿರುವಂತೆ ಶ್ರುತಿಸಿದ್ಧವೂ ಆಗಿದೆ. ಪ್ರತಿಜ್ಞಾರ್ಥವು 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಸಿದ್ಧವಾಗಿದೆ. ಭಾವತ್ವಹೇತುವು 'ಯತೋ ವಾ ಇಮಾನಿ ಭೂತಾನಿ' ಇತ್ಯಾದಿ ಶ್ರುತಿಸಿದ್ಧವಾಗಿದೆ. ಆದ್ದರಿಂದ ಹಿಂದಿನ ಅಧಿಕರಣದ ಪೂರ್ವಪಕ್ಷಯುಕ್ತಿಯೂ ಕೂಡ ಶ್ರುತಿಸಿದ್ಧವಾಯಿತಲ್ಲವೇ?

**तथापि सा प्रलयेऽसत्त्वरूपसाध्यं विनाप्युपपन्ना । अत्रत्या जीवाभिन्नत्वादिका युक्तिस्त्वसर्वकर्तृत्वरूपसाध्यं विनाऽनुपपन्नेति पूर्वपक्षोत्थानात्सङ्गति रगतार्थताऽधिकरणोपाधिश्च सिद्धा इति भावः ।**

ಉತ್ತರ - ಹೌದು, ಭಾವತ್ವವೆಂಬ ಹೇತುವಿರಲಿ, ಪ್ರಳಯೇಽಸತ್ತ್ವವೆಂಬ ಸಾಧ್ಯವಿರುವುದು ಬೇಡ ಎಂಬ ಅಪ್ರಯೋಜಕಾಶಂಕೆಯನ್ನು ಮಾಡಲು ಬರುತ್ತದೆ. ಆದರೆ ಈ ಅಧಿಕರಣದ ಜೀವಾಭೇದಸಾಧಕವಾದ ಯುಕ್ತಿಯಲ್ಲಿ ಅಪ್ರಯೋಜಕಾಶಂಕೆಯನ್ನು ಮಾಡಲು ಸಾಧ್ಯವಿಲ್ಲ. ಜೀವಾಭೇದವೆಂಬ ಹೇತುವಿರಲಿ ಅಸರ್ವಕರ್ತೃತ್ವವೆಂಬ ಸಾಧ್ಯವಿರುವುದು ಬೇಡ ಎಂಬ ಅಪ್ರಯೋಜಕಾಶಂಕೆಯನ್ನು ಮಾಡಿದರೆ ಅಸರ್ವಕರ್ತೃತ್ವವು ಬಾರದೇ ಸರ್ವಕರ್ತೃತ್ವ ಬರುವುದಾದರೆ ಜೀವಾಭೇದವೂ ಕೂಡ ಸಿದ್ಧವಾಗುವುದಿಲ್ಲ ಎಂಬ ಅನುಕೂಲತರ್ಕವಿದೆ. ಹೀಗೆ ಬಲಿಷ್ಠವಾದ ಯುಕ್ತಿಯಿಂದ ಪೂರ್ವಪಕ್ಷವು ಉದಯವಾಗುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಸೋಪಾನಾರೋಹಣನ್ಯಾಯದಿಂದಲೇ ಪ್ರತ್ಯುದಾಹರಣರೂಪವಾದ

ಸಂಗತಿಯನ್ನು ತಿಳಿಯಬೇಕು. ಮತ್ತು ಹಿಂದಿನ ಅಧಿಕರಣದಿಂದ ಗತಾರ್ಥತ್ವವೂ ಕೂಡ ಇರುವುದಿಲ್ಲ. ಹೀಗೆ ಹೇಳಿದ್ದರಿಂದ ಅಧಿಕರಣದ ಉಪಾಧಿಯೂ ಕೂಡ ಹೇಳಿದಂತಾಯಿತು.

**यद्वा ''न विलक्षणत्वात्'' इत्यत्र कारीर्यादिविधिवाक्यस्य युक्तिविरोधेनाप्रामाण्ये ''तत्सामान्यादितरेषु तथात्वम्'' इति न्यायाद्ब्रह्मकारण-वाक्यमप्यप्रामाणमिति शङ्का निरस्ता ।**

ಸೋಪಾನಾರೋಹಣ ಕ್ರಮದಿಂದ ಅಧಿಕರಣಗಳ ಸಂಗತಿ ಹೀಗಿದೆ - ಮೊದಲು 'ನ ವಿಲಕ್ಷಣತ್ವಾತ್' ಇತ್ಯಾದಿ ಅಧಿಕರಣದಲ್ಲಿ ಕಾರೀರ್ಯಾದಿವಿಧಿವಾಕ್ಯಗಳಿಗೆ ಯುಕ್ತಿವಿರೋಧದಿಂದ ಅಪ್ರಾಮಾಣ್ಯವು ಪ್ರಾಪ್ತವಾಯಿತು. ಆದ್ದರಿಂದ 'ತತ್‌ಸಮಾನ್ಯಾದಿತರೇಷು ತಥಾತ್ವಮ್' ಎಂಬ ನ್ಯಾಯದಿಂದ ಬ್ರಹ್ಮನಿಗೆ ಜಗತ್‌ಕಾರಣತ್ವವನ್ನು ಪ್ರತಿಪಾದಿಸುವ ವಾಕ್ಯಗಳಿಗೂ ಕೂಡ ವೇದತ್ವ ಎಂಬ ಹೇತು ಸಮಾನವಾಗಿರುವುದರಿಂದ ಅಪ್ರಾಮಾಣ್ಯವು ಬರುತ್ತದೆಂಬ ಆಶಂಕೆಯನ್ನು ಪರಿಹರಿಸಲಾಯಿತು.

**''अभिमानि'' इत्यत्र तु सिद्धार्थस्य कारीर्यादिविधिवाक्यवद्वैगुण्यादि-भिरसमाधेया प्रामाण्यस्य मृदादिवाक्यस्य युक्तिविरोधेनाप्रामाण्ये तत्सामान्यात्सिद्धऽब्रह्मकारणवाक्यमप्यप्रमाणमिति शङ्का निरस्ता ।**

ಹಿಂದಿನ ಅಧಿಕರಣದಲ್ಲಿ ಕಾರ್ಯಬೋಧಕವಾದ ಕಾರೀರ್ಯಾದಿವಿಧಿವಾಕ್ಯಗಳಿಗೆ ಕರ್ತೃವೈಗುಣ್ಯದಿಂದ ಅಪ್ರಾಮಾಣ್ಯವನ್ನು ಪರಿಹರಿಸಲಾಯಿತು. ಮುಂದಿನ ಅಭಿಮಾನ್ಯ-ಧಿಕರಣದಲ್ಲಿ 'ಮೃದಬ್ರವೀತ್' ಇತ್ಯಾದಿ ವಾಕ್ಯಗಳು ಸಿದ್ಧಾರ್ಥಬೋಧಕವಾಗಿರುವುದರಿಂದ ಹಿಂದಿನ ಅಧಿಕರಣದಂತೆ ಕರ್ತೃವೈಗುಣ್ಯದಿಂದ ಅಪ್ರಾಮಾಣ್ಯವನ್ನು ಪರಿಹರಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ 'ಮೃದಬ್ರವೀತ್' ಇತ್ಯಾದಿ ವೇದವಾಕ್ಯಗಳಿಗೆ ಯುಕ್ತಿವಿರೋಧವು ಬರುವುದರಿಂದ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. 'ವೇದತ್ವ' ಎಂಬ ಹೇತುವಿನಿಂದ ಸಿದ್ಧಬ್ರಹ್ಮಬೋಧಕವಾದ ಕಾರಣವಾಕ್ಯಗಳಿಗೂ ಕೂಡ ಅಪ್ರಾಮಾಣ್ಯ ಬರುತ್ತದಲ್ಲವೇ? ಎಂಬ ಆಶಂಕೆಯನ್ನು ಅಭಿಮಾನ್ಯಧಿ-ಕರಣದಲ್ಲಿ ಪರಿಹರಿಸಲಾಗಿದೆ.

**''असत्'' इत्यत्र प्रलये ब्रह्मण एवाभावान्न तस्य कर्तृत्वम् । किन्तु प्रागभावस्यैवेति यः साक्षाद्ब्रह्मकर्तृत्वस्य युक्तिविरोधः स निरस्तः ।**

ಅಸದಧಿಕರಣದಲ್ಲಿ ಪ್ರಳಯಕಾಲದಲ್ಲಿ ಬ್ರಹ್ಮನೇ ಇಲ್ಲದ ಕಾರಣ ಜಗತ್ತಿಗೆ ಕರ್ತೃವಾಗುವುದಿಲ್ಲ. ಹೊರತಾಗಿ, ಪ್ರಾಗಭಾವವೇ ಜಗತ್ತಿಗೆ ಕರ್ತೃವಾಗುತ್ತದೆ ಎಂಬುದಾಗಿ ಬ್ರಹ್ಮಕರ್ತೃತ್ವಕ್ಕೆ ನೇರವಾಗಿ ಯುಕ್ತಿವಿರೋಧವನ್ನು ಆಶಂಕಿಸಿ ಪರಿಹರಿಸಲಾಗಿದೆ.

**अत्र तु प्रलये ब्रह्मणः सत्त्वेऽपि सिद्धान्त्यभिमतस्य ब्रह्मैव कर्तृ न जीव इत्यस्य यः साक्षाद्युक्तिविरोधः स निरस्यत इत्यवान्तरसङ्गतिः ।**

ಪ್ರಕೃತ ಈ ಭೋಕ್ತ್ರಾಪತ್ತ್ಯಧಿಕರಣದಲ್ಲಿ ಪ್ರಳಯಕಾಲದಲ್ಲಿ ಬ್ರಹ್ಮನು ಇದ್ದರೂ ಕೂಡ ಸಿದ್ಧಾಂತಿಗಳಿಗೆ ಅಭಿಮತನಾದ 'ಬ್ರಹ್ಮೈವ ನ ಕರ್ತೃ ನ ಜೀವಃ' 'ಬ್ರಹ್ಮನೊಬ್ಬನೇ ಕರ್ತೃ ಹೊರತು ಜೀವನಲ್ಲ' ಎಂಬ ಪ್ರಮೇಯಕ್ಕೆ ನೇರವಾದ ಯುಕ್ತಿವಿರೋಧವು ಬರುತ್ತದೆ. ಅದರ ಪರಿಹಾರವನ್ನು ಮಾಡಲಾಗಿದೆ. ಹೀಗೆ ಅವಾಂತರಸಂಗತಿಯನ್ನು ತಿಳಿಯಬೇಕು.

**पृथगित्यत्र भेदश्रुतेः ''तत्त्वमसि'' इत्याद्यभेदश्रुतिविरोधो निरसिष्यते । अत्र तु सर्वकर्तृत्वस्य श्रुतिसिद्धाभेदरूपयुक्त्यविरोध उच्यत इति भेदः ।**

'ಪೃಥಗುಪದೇಶಾತ್' ಎಂಬ ಅಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿಯನ್ನು ಆಶಂಕಿಸಬಾರದು. 'ಪೃಥಗುಪದೇಶಾತ್' ಎಂಬ ಸೂತ್ರದಲ್ಲಿ ಭೇದಪ್ರತಿಪಾದಕವಾದ ಶ್ರುತಿಗೆ ಅಭೇದಪ್ರತಿಪಾದಕವಾದ 'ತತ್ತ್ವಮಸಿ' ಇತ್ಯಾದಿ ಶ್ರುತಿಗಳ ವಿರೋಧವನ್ನು ಪರಿಹರಿಸಲಾಗಿದೆ. ಈ ಅಧಿಕರಣದಲ್ಲಿ ಬ್ರಹ್ಮನ ಸರ್ವಕರ್ತೃತ್ವಕ್ಕೆ ಶ್ರುತಿಸಿದ್ಧವಾದ ಅಭೇದರೂಪವಾದ ಯುಕ್ತಿಯ-ವಿರೋಧವನ್ನು ಪರಿಹರಿಸಿದ್ದಾರೆ.

**अत एवेह ब्रह्मणो मुक्ताभेदमात्रे न पूर्वपक्षपर्यवसानम् । किन्तु तदभेदरूपयुक्त्या सर्वकर्तृत्वं विरुद्धमितीयं चिन्तेहैव पादे सङ्गता । नतु फलाध्याय इति भाष्य एवोक्तम् ।**

ಆದ್ದರಿಂದಲೇ ಈ ಅಧಿಕರಣದಲ್ಲಿ ಪೂರ್ವಪಕ್ಷವನ್ನು ಪರ್ಯವಸಾನ ಮಾಡುವಾಗ ಬ್ರಹ್ಮನು ಮುಕ್ತರಿಂದ ಅಭಿನ್ನನಾಗಿದ್ದಾನೆಂದಷ್ಟೇ ಹೇಳಬಾರದು. ಮುಕ್ತರಿಂದ ಅಭಿನ್ನನಾಗಿದ್ದಾನೆ ಎಂಬ ವಿಷಯದಲ್ಲಿರುವ ಯುಕ್ತಿಯಿಂದ ಸರ್ವಕರ್ತೃತ್ವವು ವಿರುದ್ಧವಾಗುತ್ತದೆ ಎಂದೇ ಹೇಳಬೇಕು. ಈ ಕಾರಣಗಳಿಂದ ಸರ್ವಕರ್ತೃತ್ವಕ್ಕೆ ವಿರುದ್ಧವಾದ ಈ ಚಿಂತನೆಯು ಈ ಪಾದದಲ್ಲಿಯೇ ಸಂಗತವಾಗುತ್ತದೆ. ಫಲಾಧ್ಯಾಯದಲ್ಲಿ ಸಂಗತವಾಗುವುದಿಲ್ಲ. ಈ ವಿಚಾರವನ್ನು ಭಾಷ್ಯದಲ್ಲಿಯೇ ಹೇಳಿದ್ದಾರೆ. ಆದ್ದರಿಂದ ನಾಕನೆಯ ಅಧ್ಯಾಯದಿಂದ ಈ ಅಧಿಕರಣಕ್ಕೆ ಪುನರುಕ್ತಿಯನ್ನೂ ಕೂಡ ಆಶಂಕಿಸಬಾರದು.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः —**

**भोक्त्रापत्तेरविभागश्चेत् स्याल्लोकवत्** ।। अत्र टीकायामधिकरणोपाधेर-स्फुटत्वादन्यत्रोक्तमनुपपत्तिनिरासेन स्थापयितुं स्मारयति ।। **अत्रेति** ।।

ವಿವರಣೆ - 'ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್' ಎಂಬುದಾಗಿ ಭೋಕ್ತ್ರಾಪತ್ತ್ಯಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದ ಟೀಕೆಯಲ್ಲಿ ಅಧಿಕರಣದ ಉಪಾಧಿಯನ್ನು ಸ್ಪಷ್ಟವಾಗಿ ಹೇಳಿರುವುದಿಲ್ಲ. ಆದರೆ ನ್ಯಾಯಸುಧೆಯಲ್ಲಿ ಅಧಿಕರಣದ ಉಪಾಧಿಯನ್ನು ಹೇಳಿರುತ್ತಾರೆ. ನ್ಯಾಯಸುಧೆಯಲ್ಲಿ ಹೇಳಿದ ಅಧಿಕರಣದ ಉಪಾಧಿಯ ಮೇಲೆ ಬರುವ ಕೆಲವು ಅನುಪಪತ್ತಿಗಳನ್ನು ಪರಿಹರಿಸುವ ಮೂಲಕ ಗ್ರಂಥಕಾರರು ಹಿಂದೆ ಹೇಳಿದ್ದನ್ನೇ ಪುನಃ ನೆನಪು ಮಾಡಿಕೊಡುತ್ತಿದ್ದಾರೆ. ಈ ಪಾದದ ಪ್ರಾರಂಭದಲ್ಲಿಯೇ ಎಲ್ಲಾ ಅಧಿಕರಣದ ಉಪಾಧಿಗಳನ್ನು ಗ್ರಂಥಕಾರರು ಹೇಳಿದ್ದರು. ಅದನ್ನು ಇಲ್ಲಿ 'ಅತ್ರ' ಇತ್ಯಾದಿ ವಾಕ್ಯದಿಂದ ನೆನಪಿಸುತ್ತಿದ್ದಾರೆ ಎಂದಭಿಪ್ರಾಯ.

(ಹಿಂದಿನ ಅಧಿಕರಣಗಳಿಂದ ಈ ಅಧಿಕರಣಕ್ಕೆ ಸೋಪಾನಾರೋಹಣಕ್ರಮದಲ್ಲಿ ಸಂಗತಿಯನ್ನು ತೋರಿಸುತ್ತಿದ್ದಾರೆ. ಮತ್ತು ಹಿಂದಿನ ಅಸದಧಿಕರಣದಿಂದ ಪ್ರತ್ಯುದಾಹರಣರೂಪವಾದ ಸಂಗತಿಯನ್ನು ತೋರಿಸುತ್ತಿದ್ದಾರೆ. ಪುನರುಕ್ತಿದೋಷವನ್ನೂ ಕೂಡ ಪರಿಹರಿಸುತ್ತಿದ್ದಾರೆ. ಜೊತೆಗೆ ಅಧಿಕರಣದ ಉಪಾಧಿಯನ್ನೂ ಕೂಡ ಸಮರ್ಥನೆ ಮಾಡಲು 'ಅತ್ರ' ಇತ್ಯಾದಿ ಗ್ರಂಥವು ಹೊರಟಿದೆ.

ಮೋಕ್ಷದಲ್ಲಿ ಅಭೇದವಿರುತ್ತದೆಂದು 'ಪರೇಽವ್ಯಯೇ ಸರ್ವ ಏಕೀಭವಂತಿ' ಇತ್ಯಾದಿ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಮೋಕ್ಷದಲ್ಲಿ ಅಭೇದವಿದ್ದ ಮೇಲೆ ಈಗಲೂ ಕೂಡ ಅಭೇದ ಇರಲೇಬೇಕು. ಏಕೆಂದರೆ 'ನಹಿ ಭಿನ್ನಂ ಅಭಿನ್ನಂ ಯಾತಿ' ಮೊದಲು ಭಿನ್ನವಾದದ್ದು, ಅನಂತರ ಅಭಿನ್ನವಾಗಲು ಸಾಧ್ಯವಿಲ್ಲ. ಹಾಗಾಗಿ ಸಂಸಾರಾವಸ್ಥೆಯಲ್ಲಿರುವ ಜೀವರಿಗಿಂತಲೂ ಬ್ರಹ್ಮನು ಅಭಿನ್ನನಾಗಿದ್ದಾನೆಂದು ಒಪ್ಪಿಕೊಳ್ಳಬೇಕು. ಜೀವರಾದರೂ ಕೂಡ ಅಸರ್ವಕರ್ತೃಗಳಾಗಿದ್ದಾರೆ. ಅಸರ್ವಕರ್ತೃಗಳಾದ ಸಂಸಾರೀಜೀವರಿಂದ ಅಭಿನ್ನನಾದ ಕಾರಣ ಈಶ್ವರನೂ ಕೂಡ ಸರ್ವಕರ್ತೃ ಆಗಲು ಸಾಧ್ಯವಿಲ್ಲ. ಹಾಗಾಗಿ ಅನುಮಾನದ ಕ್ರಮವನ್ನು ಹೀಗೆ ತಿಳಿಯಬೇಕು - 'ಪರಮಾತ್ಮಾ ನ ಸರ್ವಕರ್ತಾ ಅಸರ್ವಕರ್ತೃಸಂಸಾರಿ-ಜೀವಾಭಿನ್ನತ್ವಾತ್' ಎಂಬ ಅನುಮಾನದಿಂದ ಅಸರ್ವಕರ್ತೃಗಳಾದ ಸಂಸಾರಿಜೀವರಿಂದ ಅಭಿನ್ನನಾದ ಕಾರಣ ಪರಮಾತ್ಮನು ಸರ್ವಕರ್ತೃನಲ್ಲವೆಂದು ಸಾಧನೆ ಮಾಡಬೇಕು. ಈ ಅನುಮಾನದಲ್ಲಿ ಹೇತ್ವಸಿದ್ಧಿದೋಷವು ಪ್ರಾಪ್ತವಾದರೆ, 'ಪರಮಾತ್ಮಾ ಸಂಸಾರಿಜೀವೇನ ಅಭಿನ್ನಃ, ಮುಕ್ತಜೀವೇನ ಅಭಿನ್ನತ್ವಾತ್' ಎಂದು ಅನುಮಾನ ಮಾಡಬೇಕು. ಪರಮಾತ್ಮನು ಮುಕ್ತಜೀವರಿಂದ ಅಭಿನ್ನನಾಗಿರುವ ಕಾರಣ ಸಂಸಾರಿಜೀವರಿಂದಲೂ ಅಭಿನ್ನನೇ ಆಗುತ್ತಾನೆ. ಹೀಗೆ ಎರಡು ಪ್ರಬಲವಾದ ಅನುಮಾನಗಳಿಂದ

ಪರಮಾತ್ಮನು ಅಸರ್ವಕರ್ತೃ ಎಂದು ಸಿದ್ಧವಾಗುತ್ತದೆ. ಇಂಥ ಪ್ರಬಲವಾದ ಯುಕ್ತಿಯಿಂದ ಪರಮಾತ್ಮನು ಅಸರ್ವಕರ್ತೃ ಎಂದು ಸಿದ್ಧವಾಗುತ್ತದೆ. ಅಸರ್ವಕರ್ತೃಜೀವಾಭಿನ್ನತ್ವವೆಂಬ ಯುಕ್ತಿಗೆ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯಿಂದ ಪ್ರಾಬಲ್ಯವು ಸಿದ್ಧವಾಗುತ್ತದೆ. ಹಿಂದಿನ ಅಧಿಕರಣದ ಹೇತು ಕೇವಲ ಶ್ರುತಿಸಂವಾದಿಯಾಗಿತ್ತು. ಈ ಅಧಿಕರಣದ ಹೇತು ಶ್ರುತಿಸಿದ್ಧವಾಗಿದೆ ಎಂಬ ವ್ಯತ್ಯಾಸವನ್ನು ಗಮನಿಸಬೇಕು.)

**प्रकाशः – बहुश्रुतीति ।।** यद्यपि ''श्रुतिसिद्धलिङ्गत्वेन प्रबलय'' इत्येव तत्र पाठः । तथापि ''स्मृतियुक्तिश्रुतिगुण'' इत्युपाधिसङ्ग्रहानुसारेण बह्विति तात्पर्योक्तिः । सङ्ग्रहाभिप्रायस्य तथैवाग्रेऽभिधास्यमानत्वादिति भावः ।।

ನ್ಯಾಯಸುಧೆಯಲ್ಲಿ 'ಶ್ರುತಿಸಿದ್ಧಲಿಂಗತ್ವೇನ ಪ್ರಬಲಯಾ' ಎಂದಷ್ಟೇ ಪಾಠವಿದೆ. ಹೊರತು ಬಹುಶ್ರುತಿಸಿದ್ಧವಾದ ಲಿಂಗದಿಂದ ಪ್ರಾಬಲ್ಯವನ್ನು ಹೇಳಿರುವುದಿಲ್ಲ. ಆದರೂ ಕೂಡ 'ಸ್ಮೃತಿಯುಕ್ತಿಶ್ರುತಿ-ಗುಣಯುಕ್ತಯೋ ಬಹುಯುಕ್ತಯಃ' ಇತ್ಯಾದಿಯಾಗಿ ಈ ಪಾದದಲ್ಲಿರುವ ಪ್ರತಿಯೊಂದು ಅಧಿಕರಣಗಳ ಉಪಾಧಿಯನ್ನು ಸಂಗ್ರಹಿಸುವಾಗ ಅನುವ್ಯಾಖ್ಯಾನದ ಅನುಸಾರಿಯಾಗಿ ಗ್ರಂಥಕಾರರು 'ಬಹುಶ್ರುತಿಸಿದ್ಧ' ಎಂದು ಹೇಳಿರುತ್ತಾರೆ. ಅನುವ್ಯಾಖ್ಯಾನದಲ್ಲಿಯೂ ಕೂಡ ಕೇವಲ 'ಸ್ಮೃತಿಯುಕ್ತಿಶ್ರುತಿಗುಣಯುಕ್ತಃ' ಎಂದಷ್ಟೇ ಇದೆ. 'ಬಹುಶ್ರುತಿ' ಎಂದು ಹೇಳಿಲ್ಲವಲ್ಲವೇ? ಎಂದರೆ ಸಂಗ್ರಹಾತ್ಮಕವಾದ ಅನುವ್ಯಾಖ್ಯಾನದ ಈ ಮಾತಿನ ಅಭಿಪ್ರಾಯವನ್ನು ಮುಂದೆ ಸಮರ್ಥಿಸುತ್ತೇವೆ. ಶ್ರುತಿ ಶಬ್ದಕ್ಕೆ 'ಬಹುಶ್ರುತಿ' ಎಂದೇ ಅರ್ಥೈಸಬೇಕೆಂಬುದನ್ನು ಸಮರ್ಥಿಸುತ್ತೇವೆ.

**प्रकाशः – न तत्प्रयुक्तेति ।।** श्रुत्यसिद्धत्वप्रयुक्तो यः प्राबल्याभावः स नास्ति। मुख्यार्थत्यागे हि स स्यात् । इह च पूर्वपक्षे मुख्यार्थस्यैव ग्रहणादिति भावः ।।

ಗ್ರಂಥದಲ್ಲಿ 'ನ ತತ್ಪ್ರಯುಕ್ತ ಪ್ರಾಬಲ್ಯಾಭಾವಃ' ಎಂದು ಎರಡು ನಞ್‌ಗಳಿಂದ ಘಟಿತವಾದ ವಾಕ್ಯವನ್ನು ಪ್ರಯೋಗಿಸಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಯುಕ್ತಿಯು ಶ್ರುತಿಸಿದ್ಧವಲ್ಲದ ಕಾರಣ ಪ್ರಬಲವಲ್ಲ ಎಂದು ಹೇಳಲಾಗದು. ಹೊರತಾಗಿ ಶ್ರುತಿಸಿದ್ಧವೇ ಆಗಿರುವುದರಿಂದ ತತ್ಪ್ರಯುಕ್ತವಾದ ಪ್ರಾಬಲ್ಯವು ಇರುತ್ತದೆಂದು ತಿಳಿಯಬೇಕು. ಒಂದು ವೇಳೆ ಮುಖ್ಯಾರ್ಥತ್ಯಾಗವನ್ನು ಪೂರ್ವಪಕ್ಷಿಯು ಆಕ್ಷೇಪಿಸಿದ್ದರೆ ಶ್ರುತಿಸಿದ್ಧವಾಗಿಲ್ಲದ ಕಾರಣ ಪ್ರಾಬಲ್ಯವಿಲ್ಲವೆಂದು ಹೇಳಬಹುದಿತ್ತು. ಆದರೆ ಮುಖ್ಯಾರ್ಥರೂಪವೇ ಆಗಿರುವುದರಿಂದ ಶ್ರುತಿಸಿದ್ಧವಾಗುತ್ತದೆ. ತತ್ಪ್ರಯುಕ್ತವಾದ ಪ್ರಾಬಲ್ಯವೂ ಕೂಡ ಬರುತ್ತದೆ.

**प्रकाशः – भावत्वादिकेति ।।** विमता भावाः प्रलयेऽसन्तो भावत्वादित्यादिका ''असदेवेदमग्र आसीत्'' इत्यादिश्रुतिसिद्धेत्यर्थः । सङ्गतिः प्रत्युदाहरणरूपेत्यर्थः।। इति भाव इति ।। सुधोक्तेरिति योज्यम् ।

ಭೋಕ್ತ್ರಧಿಕರಣ (೨-೧-೫)

'ಭಾವತ್ವಾದಿಕಾ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - 'ವಿಮತಾ ಭಾವಾಃ ಪ್ರಲಯೇಽಸಂತೋ ಭಾವತ್ವಾತ್' ಎಂಬ ಯುಕ್ತಿಯು ಶ್ರುತಿಸಂವಾದಿಯಾಗಿರುವಂತೆ ಶ್ರುತಿಸಿದ್ಧವೂ ಆಗಿದೆ. ಏಕೆಂದರೆ 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ ಏವಕಾರದಿಂದ ಸಕಲಭಾವಪದಾರ್ಥಗಳು ಇಲ್ಲವೆಂದು ಸಿದ್ಧವಾಗಿದೆ. ಸಂಗತಿಯೆಂದರೆ ಪ್ರತ್ಯುದಾಹರಣರೂಪ ಸಂಗತಿಯೆಂದು ತಿಳಿಯಬೇಕು. 'ಇತಿಭಾವಃ' ಎಂಬುದನ್ನು ಸುಧೆಯಲ್ಲಿ ಹೇಳಿರುವುದರಿಂದ ತಿಳಿಯಬೇಕು.

**प्रकाशः** – स्वयं सङ्गत्यन्तरमाह – **यद्वेति** ।। **इति न्यायादिति** ।। आद्यस्य द्वितीयपादे विधिवन्निगदाधिकरणे ''विधिश्चानर्थकः कचित्तस्मात्स्तुतिः प्रतीयेत तत्सामान्यादितरेषु तथात्वम्'' इति गुणसूत्रोक्तन्यायादित्यर्थः ।

ಸ್ವತಃ ಗ್ರಂಥಕಾರರು ಮತ್ತೊಂದು ಸಂಗತಿಯನ್ನು 'ಯದ್ವಾ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ಇತಿ ನ್ಯಾಯಾತ್'

'ವಿಧಿಶ್ಚಾನರ್ಥಕಃ ಕ್ವಚಿತ್ತಸ್ಮಾತ್‌ಸ್ತುತಿಃ ಪ್ರತೀಯೇತ ತತ್‌ಸಾಮಾನ್ಯಾದಿತರೇಷು ತಥಾತ್ವಮ್'
(೧-೨-ವಿಧಿವನ್ನಿಗದಾಧಿಕರಣ)

ಎಂಬ ಗುಣಸೂತ್ರದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಎಂದರ್ಥ.

**प्रकाशः** – तत्र हि ''अप्सुयोनिर्वा अश्वोऽप्सुजो वेतसः । वेतसशाखया चावकाभिश्च विकर्षति'' इति । ''आपो वै शान्ताश्शान्ताभिरेवास्य शुचं शमयति'' इत्येवंजातीयकेषु विधित्वमेव । नार्थवादत्वमिति प्राप्ते

ಈ ಗುಣಸೂತ್ರದಲ್ಲಿ 'ಅಪ್ಸುಯೋನಿರ್ವಾ ಅಶ್ವೋಽಪ್ಸುಜೋ ವೇತಸಃ । ವೇತಸಶಾಖಯಾ ಚಾವಕಾಭಿಶ್ಚ ವಿಕರ್ಷತಿ' ಎಂಬ ವಾಕ್ಯದ ಅನಂತರ 'ಆಪೋ ವೈ ಶಾಂತಾಃ ಶಾಂತಾಭಿರೇವಾಸ್ಯ ಶುಚಂ ಶಮಯತಿ' ಎಂಬ ವಾಕ್ಯವು ಪ್ರಾಪ್ತವಾಗಿದೆ. ಈ ಎಲ್ಲಾ ವಾಕ್ಯಗಳು ವಿಧಿಪರವೇ ಆಗಿವೆ ಹೊರತು, ಅರ್ಥವಾದಗಳಲ್ಲ ಎಂಬುದು ಪೂರ್ವಪಕ್ಷ.

**प्रकाशः** – अप्सुयोनिरश्वः कर्तव्य इत्यादि विधिरशक्यत्वादनर्थकः । तस्मात्स्तुतिः प्रतीयेत शमयित्रीभिरद्भिरश्वस्य वेतसशाखानां च सम्बन्धो यजमानस्य कष्टं शमयतीति । तस्मात्सामान्याद्विध्यसम्भवात्स्तुतिसम्भवाच्चेतरेषु ''ऊर्वा उदुम्बर'' इत्यादिषु । तथात्वं स्तावकतयार्थवादत्वमित्युक्तम् । तथा चास्यापि तत्तुल्यन्यायत्वात् ''इति न्यायात्'' इत्युक्तम् ।।

ನೀರಿನಲ್ಲಿ ಹುಟ್ಟುವ ಅಶ್ವವೇ ಇಲ್ಲದ ಕಾರಣ ಇದನ್ನು ವಿಧಾನ ಮಾಡಲು ಸಾಧ್ಯವಿಲ್ಲ. 'ಆಕಾಶಮಂಡಲಕ್ಕೆ ಹೋಗಿ, ಚಂದ್ರನನ್ನು ತೆಗೆದುಕೊಂಡು ಬಾ' ಎಂದು ವಿಧಾನ ಮಾಡಲು ಹೇಗೆ

ಸಾಧ್ಯವಿಲ್ಲವೋ, ಅದರಂತೆ. ಅಶಕ್ಯವಾದದ್ದನ್ನು ವಿಧಾನ ಮಾಡಲು ಸಾಧ್ಯವಿಲ್ಲದ ಕಾರಣ ಈ ವಾಕ್ಯವು ಅನರ್ಥಕವಾಗಬೇಕಾದೀತು. ಆದ್ದರಿಂದ ಕೇವಲ ಅರ್ಥವಾದವೆಂದು ತಿಳಿಯಬೇಕು. ಏಕೆಂದರೆ ವೇತಸ ಎಂಬ ವೃಕ್ಷದ ಕೊಂಬೆಯಿಂದ ಕುದುರೆಯನ್ನು ಓಡಿಸಬೇಕು. ನೀರಿನ ಸಂಬಂಧವು ಕುದುರೆಗೂ ವೇತಸ ಶಾಖೆಗೂ ಇರಬೇಕು, ಎಂದರೆ ಪ್ರೋಕ್ಷಣಾದಿಗಳನ್ನು ಮಾಡಬೇಕು. ಆವಾಗ ಯಜಮಾನನ ಕಷ್ಟಗಳೆಲ್ಲವೂ ಪರಿಹಾರವಾಗುತ್ತವೆ. ಹೀಗೆ ಅರ್ಥ್ಯಸಬೇಕೇ ಹೊರತು, ನೀರಿನಿಂದ ಹುಟ್ಟಿದ ಕುದುರೆಯನ್ನು ಇಲ್ಲಿ ವಿವಕ್ಷಿಸಬಾರದು. ಹೀಗೆ ಯಾವ ವಾಕ್ಯಗಳಲ್ಲಿ ವಿಧಿಯು ಅನುಪಪನ್ನವಾಗಿ ಸ್ತುತಿಯು ಉಪಪನ್ನವಾಗುತ್ತದೋ, ಅಂಥ ಉಳಿದ ವಾಕ್ಯಗಳಲ್ಲಿಯೂ 'ಊರ್ಗ್ವಾ ಉದುಂಬರ' ಇತ್ಯಾದಿ ವಾಕ್ಯಗಳಲ್ಲಿ ಶುಚಿತ್ವವನ್ನೇ ಹೇಳಬೇಕು. 'ತಥಾತ್ವಂ' ಎಂದರೆ ಸ್ತಾವಕವಾಗಿ ಅರ್ಥವಾದತ್ವವನ್ನು ಹೇಳಬೇಕು ಎಂದು ಸಿದ್ಧಾಂತ ಮಾಡಲಾಗಿದೆ. ಹೀಗೆ ಪೂರ್ವಮೀಮಾಂಸೆಯ ಈ ಅಧಿಕರಣದಲ್ಲಿ ಒಂದು ವಾಕ್ಯಕ್ಕೆ ಅರ್ಥವಾದತ್ವವು ಸಿದ್ಧವಾದ ಮೇಲೆ ಸಾಮಾನ್ಯಧರ್ಮವೆಂಬ ಹೇತುವಿನಿಂದ ಇಂಥ ಉಳಿದ ವಾಕ್ಯಗಳಿಗೂ ಅರ್ಥವಾದತ್ವವನ್ನು ಸಮರ್ಥನೆ ಮಾಡಬೇಕೆಂದು ನಿರ್ಣಯಿಸಲಾಗಿದೆ. ಅದೇ ನ್ಯಾಯದಂತೆ ಪ್ರಕೃತ ವೇದತ್ವವೆಂಬ ಸಾಮಾನ್ಯಧರ್ಮದಿಂದ ಒಂದು ವೇದಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾದರೆ, ಉಳಿದ ವಾಕ್ಯಗಳಿಗೂ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆಂದು ತಿಳಿಯಬೇಕು.

**प्रकाशः** – इत्यवान्तरेति ।। बहिरङ्गशङ्कानिरासानन्तरमन्तरङ्गशङ्का-निरासस्यावसरप्राप्तत्वादवसर सङ्गतिरित्यर्थः । पौनरुक्तयशङ्कां निराह – **पृथगिति**।।

ಬಹಿರಂಗವಾದ ಆಶಂಕೆಯನ್ನು ನಿರಾಕರಣೆ ಮಾಡಿದ ಮೇಲೆ, ಅಂತರಂಗಭೂತವಾದ ಆಶಂಕೆಯನ್ನು ನಿರಾಕರಣೆ ಮಾಡುವುದು ಅವಸರಪ್ರಾಪ್ತವಾಗಿದೆ. ಹೀಗೆ ಅವಸರಸಂಗತಿಯನ್ನು ತಿಳಿಯಬೇಕು. ಕಾರೀರ್ಯಾದಿವಾಕ್ಯಗಳಿಗೂ 'ಮೃದಬ್ರವೀತ್' ಇತ್ಯಾದಿ ವಾಕ್ಯಗಳಿಗೂ ಅಪ್ರಾಮಾಣ್ಯಶಂಕೆಯು ಬಂದರೆ ಬಹಿರಂಗವಾಗುತ್ತದೆ. ನೇರವಾಗಿ ಬ್ರಹ್ಮನ ಕರ್ತೃತ್ವಕ್ಕೆ ಆಶಂಕೆಯು ಪ್ರಾಪ್ತವಾದರೆ ಅಂತರಂಗವಾಗುತ್ತದೆ. ಪೃಥಗಧಿಕರಣದಿಂದ ಪುನರುಕ್ತಿದೋಷ ಬರುತ್ತದೆಂಬ ಆಶಂಕೆಯನ್ನು 'ಪೃಥಗ್' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः – अत एवेति** ।। सर्वकर्तृत्वस्य युक्त्यविरोधकथनादेवेत्यर्थः । ''फलत्वेऽपि युक्तिविरोधेऽन्तर्भावादत्रोक्तम्'' इत्युक्तमित्यर्थः ।

'ಅತ ಏವ' ಎಂದರೆ ಸರ್ವಕರ್ತೃತ್ವವು ಯುಕ್ತಿಯಂದ ಅವಿರುದ್ಧವಾಗಿದೆ ಎಂದು ಹೇಳಿರುವುದರಿಂದಲೇ ಎಂದರ್ಥ. 'ಫಲತ್ವೇऽಪಿ ಯುಕ್ತಿ ವಿರೋಧೇऽಂತರ್ಭಾವಾದತ್ರೋಕ್ತಮ್' ಎಂಬುದಾಗಿ ಆಚಾರ್ಯರು ಹೇಳಿದಂತೆ ಫಲಾಧ್ಯಾಯದಿಂದ ಪುನರುಕ್ತಿ ಇಲ್ಲವೆಂದು ತಿಳಿಯಬೇಕು.

**प्रकाशः** – एतेन ''मुक्तेश्वरयोर्भेद समर्थनं फलाध्यायसङ्गतमतो नैतत्सूत्रार्थ'' इति टीकोक्तशङ्का निरस्ता ध्येया ।

**ಭೋಕ್ತ್ರಧಿಕರಣ (೨-೧-೫)**

ಹೀಗೆ ಹೇಳಿದ್ದರಿಂದ ಮುಕ್ತೇಶ್ವರಯೋರ್ಭೇದಸಮರ್ಥನಂ ಫಲಾಧ್ಯಾಯಸಂಗತಮತೋ ನೈತತ್ ಸೂತ್ರಾರ್ಥಃ' ಮುಕ್ತರಿಗೂ ಈಶ್ವರರಿಗೂ ಭೇದವನ್ನು ಸಮರ್ಥನೆ ಮಾಡುವುದು ಫಲಾಧ್ಯಾಯದಲ್ಲಷ್ಟೇ ಸಂಗತವಾಗುತ್ತದೆ. ಈ ಸೂತ್ರದಲ್ಲಿ ಇದನ್ನು ಸಮರ್ಥನೆ ಮಾಡಬೇಕಾಗಿಲ್ಲ ಎಂಬ ಟೀಕೆಯಲ್ಲಿ ಹೇಳಲ್ಪಟ್ಟ ಆಶಂಕೆಯನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು.




ಭೋಕ್ತ್ರಾಪತ್ತ್ಯಧಿಕರಣದಲ್ಲಿ ಅನೇಕ ಶ್ರುತಿಗಳಿಂದ ಸಿದ್ಧವಾದ ಬಲಿಷ್ಠವಾದ ಯುಕ್ತಿವಿರೋಧವನ್ನು ಪರಿಹರಿಸುತ್ತಿದ್ದಾರೆ. ಹಿಂದಿನ ಅಸದಧಿಕರಣದಲ್ಲಿ ಶ್ರುತಿಸಂವಾದವಿರುವ ಕಾರಣ ಯುಕ್ತಿಗಳು ಪ್ರಬಲವೆಂದು ಹೇಳಿ, ಅಂಥ ಯುಕ್ತಿಗಳ ವಿರೋಧವನ್ನು ಪರಿಹರಿಸಲಾಗಿತ್ತು. ಈ ಅಧಿಕರಣದಲ್ಲಿ ಅನೇಕ ಶ್ರುತಿಗಳಿಂದ ಯುಕ್ತಿಗೆ ಪ್ರಾಬಲ್ಯವು ಸಿದ್ಧವಾಗಿದೆ. ಅಂಥ ಯುಕ್ತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಆದ್ದರಿಂದ ಅಸದಧಿಕರಣದ ಅನಂತರ ಭೋಕ್ತ್ರಾಪತ್ತ್ಯಧಿಕರಣವು ಸಂಗತವಾಗಿದೆ.

ಅಥವಾ ಹಿಂದಿನ ಅಧಿಕರಣಗಳಿಂದ ಸಂಗತಿಗಳನ್ನು ಹೀಗೂ ತಿಳಿಯಬಹುದು - ನ ವಿಲಕ್ಷಣತ್ವಾಧಿಕರಣದಲ್ಲಿ ಕಾರೀರ್ಯಾದಿಯಾಗಗಳನ್ನು ವಿಧಾನ ಮಾಡುವ ವೇದವಾಕ್ಯಗಳಿಗೆ ಯುಕ್ತಿವಿರೋಧವನ್ನು ಹೇಳುವ ಮೂಲಕ ಅಪ್ರಾಮಾಣ್ಯವನ್ನು ಆಶಂಕಿಸಲಾಯಿತು. ಕಾರೀರ್ಯಾದಿಯಾಗಗಳನ್ನು ವಿಧಿಸುವ ಕೆಲವು ವಾಕ್ಯಗಳು ಅಪ್ರಮಾಣವಾದರೆ ಉಳಿದ ವೇದವಾಕ್ಯಗಳೂ ಕೂಡ ವೇದವಾದ್ದರಿಂದ ಅಪ್ರಮಾಣವಾಗುತ್ತವೆ ಎಂಬ ಆಶಂಕೆಯನ್ನು ಪರಿಹರಿಸಲಾಯಿತು. ಮುಂದಿನ ಅಭಿಮಾನ್ಯಧಿಕರಣದಲ್ಲಿ ಕಾರೀರ್ಯಾದಿಯಾಗಗಳನ್ನು ವಿಧಿಸುವ ವಾಕ್ಯಗಳು ಕಾರ್ಯಬೋಧಕವಾಗಿವೆ. ಅಂಥ ಕಾರ್ಯಬೋಧಕವಾಕ್ಯಗಳಿಗೆ ಕರ್ತೃವೈಗುಣ್ಯನಿಮಿತ್ತಕವಾಗಿ ಫಲವು ಕಾಣಿಸುತ್ತಿಲ್ಲವೆಂದು ಪ್ರಾಮಾಣ್ಯವನ್ನು ಸಮರ್ಥನೆ ಮಾಡಲು ಬರುತ್ತದೆ. ಆದರೆ 'ಮೃದಬ್ರವೀತ್' ಇತ್ಯಾದಿ ವೇದವಾಕ್ಯಗಳು ಸಿದ್ಧಾರ್ಥಬೋಧಕವಾಗಿವೆ. ಇಂಥ ಸಿದ್ಧಾರ್ಥಬೋಧಕವಾಕ್ಯಗಳಿಗೆ ಕರ್ತೃವೈಗುಣ್ಯಾದಿನಿಮಿತ್ತದಿಂದ ಪ್ರಾಮಾಣ್ಯವನ್ನು ಸಮರ್ಥನೆ ಮಾಡಲು ಬರುವುದೇ ಇಲ್ಲ. 'ಮೃದಬ್ರವೀತ್' ಇತ್ಯಾದಿ ವೇದವಾಕ್ಯಗಳಿಗೆ 'ಮೃತ್ ನ ವಕ್ತ್ರೀ ಮೃತ್ತ್ವಾತ್' ಇತ್ಯಾದಿ ಪ್ರಬಲವಾದ ಯುಕ್ತಿಗಳ ವಿರೋಧವಿರುವುದರಿಂದ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆಂಬ ಆಶಂಕೆಯನ್ನು ಪರಿಹರಿಸಲಾಯಿತು. ಮುಂದಿನ ಅಸದಧಿಕರಣದಲ್ಲಿ ಪ್ರಳಯಕಾಲದಲ್ಲಿ ಬಹ್ಮನೇ ಇಲ್ಲದ ಕಾರಣ ಕರ್ತೃತ್ವವು ಅವನಲ್ಲಿ ಯುಕ್ತವಾಗುವುದಿಲ್ಲ. ಜಗತ್ತಿನ ಪ್ರಾಗಭಾವವಷ್ಟೇ ಪ್ರಳಯಕಾಲದಲ್ಲಿ ಇರುವುದರಿಂದ ಅದಕ್ಕೆ ಜಗತ್ಕರ್ತೃತ್ವವನ್ನು ಹೇಳಬೇಕೆಂಬ ಯುಕ್ತಿವಿರೋಧವನ್ನು ಪರಿಹರಿಸಲಾಯಿತು. ಪ್ರಕೃತ ಈ ಭೋಕ್ತ್ರಾಪತ್ತ್ಯಧಿಕರಣದಲ್ಲಿ ಪ್ರಳಯಕಾಲದಲ್ಲಿ ಬ್ರಹ್ಮನು ಇರುತ್ತಾನೆಂದು ಒಪ್ಪಿಕೊಂಡರೂ ಕೂಡ ಸಿದ್ಧಾಂತಿಗಳಿಗೆ ಅಭಿಮತನಾದ ಬ್ರಹ್ಮನೊಬ್ಬನೇ ಕರ್ತೃ, ಜೀವನಲ್ಲ ಎಂಬ ಪ್ರಮೇಯಕ್ಕೆ ಯುಕ್ತಿವಿರೋಧವು ನೇರವಾಗಿ ಬರುತ್ತದೆ. ಅಂಥ ಯುಕ್ತಿವಿರೋಧವನ್ನು ಪರಿಹರಿಸುತ್ತಿರುವುದರಿಂದ ಈ ಅಧಿಕರಣವು ಹಿಂದಿನ ಅಧಿಕರಣದಿಂದ ಸಂಗತವಾಗಿ ಪ್ರಾಪ್ತವಾಗಿದೆ.

**तात्पर्यचन्द्रिका**

**अत्र विष्णोर्जगत्कर्तृत्वादिकं युक्तिविरुद्धमुत नेति चिन्ता ।**

ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್‌ಕರ್ತೃತ್ವಾದಿಗಳು ಯುಕ್ತಿವಿರುದ್ಧವೋ ಅಲ್ಲವೋ ? ಎಂಬುದು ಪ್ರಧಾನ ಸಂಶಯ.

**तदर्थं ब्रह्मासर्वकर्तृजीवाभिन्नमुत नेति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ ಬ್ರಹನು ಸರ್ವಕರ್ತೃವೆನಿಸಿದ ಜೀವನಿಂದ ಅಭಿನ್ನನಾಗಿದ್ದಾನೋ, ಅಥವಾ ಅಭಿನ್ನನಾಗಿಲ್ಲವೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''परेऽव्यये सर्व एकीभवन्ति'' इति श्रुतिः किं स्वरूपैक्यपरत्वेन मुख्यार्था उत स्थानाद्यैक्यालम्बनत्वेनोपचरितार्थेति ।**

'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಸ್ವರೂಪತಃ ಐಕ್ಯವನ್ನು ಪ್ರತಿಪಾದನೆ ಮಾಡುವ ಮೂಲಕ ಮುಖ್ಯಾರ್ಥವುಳ್ಳದ್ದೋ ಅಥವಾ ಸ್ಥಾನೈಕ್ಯ ಮತ್ಯೈಕ್ಯ ಮೊದಲಾದವುಗಳನ್ನು ಹೇಳುವ ಮೂಲಕ ಔಪಚಾರಿಕವಾದ ಅರ್ಥವುಳ್ಳದ್ದೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं वाक्यशेषे दृष्टान्तितं नदीसमुद्रैक्यं किं स्वरूपैक्यं किं वा स्थानाद्यैक्यमिति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ ವಾಕ್ಯಶೇಷದಲ್ಲಿ ದೃಷ್ಟಾಂತವನ್ನಾಗಿ ನೀಡಲ್ಪಟ್ಟ ನದೀಸಮುದ್ರಗಳಿಗೆ ಇರುವ ಐಕ್ಯವು ಸ್ವರೂಪೈಕ್ಯಪರವೋ, ಅಥವಾ ಸ್ಥಾನಾದ್ಯೈಕ್ಯಪರವೋ ? ಎಂಬ ಸಂಶಯವು ಪರಿಹಾರವಾಗಬೇಕು.

**ननु ''न ह्यन्यस्यान्यत्वं युज्यत'' इति भाष्ये पूर्वं भिन्नस्य पश्चादभिन्नत्वाभावः पूर्वपक्षयुक्तित्वेनोक्तः । ''नान्यदन्यत्वमापन्नं कचिद्दृष्टं कथंचन'' इत्यनुव्याख्याने तु सिद्धान्तयुक्तित्वेन । तत्कथमिति चेदुच्यते ।**

ಈ ಅಧಿಕರಣದ ಪೂರ್ವಪಕ್ಷಯುಕ್ತಿಯನ್ನು ಭಾಷ್ಯದಲ್ಲಿ ಏನು ಹೇಳಿದ್ದಾರೋ ? ಅದಕ್ಕೆ ವಿರುದ್ಧವಾಗಿ ಅನುವ್ಯಾಖ್ಯಾನದಲ್ಲಿ ಅದನ್ನೇ ಸಿದ್ಧಾಂತಯುಕ್ತಿಯನ್ನಾಗಿ ಹೇಳಿರುತ್ತಾರೆ. ಭಾಷ್ಯದಲ್ಲಿ ಸಂಸಾರಾವಸ್ಥೆಯಲ್ಲಿ ಭಿನ್ನನಾಗಿರುವ ಜೀವನು ಮುಕ್ತನಾದ ಮೇಲೆ ಬ್ರಹ್ಮನಿಂದ ಅಭಿನ್ನನಾಗಲು ಸಾಧ್ಯವಿಲ್ಲ ಎಂಬುದಾಗಿ 'ನಹಿ ಅನ್ಯಸ್ಯ ಅನ್ಯತ್ವಂ ಯುಜ್ಯತೇ' ಎಂಬುದನ್ನು ಪೂರ್ವಪಕ್ಷಿ-

ಯುಕ್ತಿಯನ್ನಾಗಿ ಹೇಳಿರುತ್ತಾರೆ. ಆದರೆ ಅನುವ್ಯಾಖ್ಯಾನದಲ್ಲಿ 'ನಾನ್ಯದನ್ಯತ್ವಮಾಪನ್ನಂ ಕ್ವಚಿದ್ದೃಷ್ಟಂ ಕಥಂಚನ' ಮೊದಲು ಭಿನ್ನನಾಗಿರುವವನು ಅನಂತರ ಅಭಿನ್ನನಾಗಲು ಸಾಧ್ಯವಿಲ್ಲ ಎಂಬುದಾಗಿ ಭಾಷ್ಯದಲ್ಲಿ ಹೇಳಿದ ಪೂರ್ವಪಕ್ಷಯುಕ್ತಿಯನ್ನೇ ಸಿದ್ಧಾಂತಯುಕ್ತಿಯನ್ನಾಗಿ ಹೇಳಿರುತ್ತಾರೆ. ವಿರುದ್ಧವಾದ ಈ ಭಾಷ್ಯ ಹಾಗೂ ಅನುವ್ಯಾಖ್ಯಾನದ ಮಾತುಗಳು ಹೇಗೆ ಯುಕ್ತವಾಗುತ್ತವೆ ?

**अत्र त्रयः पूर्वपक्षाः सम्भवन्ति । तत्र ''एकीभवन्ति'' इति ब्रह्मणस्तावन्मुक्ताभेदः श्रूयते ।**

ಈ ಅಧಿಕರಣದಲ್ಲಿ ಒಟ್ಟು ಮೂರು ಬಗೆಯ ಪೂರ್ವಪಕ್ಷಗಳಿವೆ. ಬೇರೆ ಬೇರೆ ಪೂರ್ವಪಕ್ಷಗಳನ್ನು ವಿವಕ್ಷಿಸಿದಾಗ ಭಾಷ್ಯ ಹಾಗೂ ಅನುವ್ಯಾಖ್ಯಾನಗಳ ವಿರೋಧವು ಪರಿಹಾರವಾಗುತ್ತದೆ. ಮೂರು ಬಗೆಯ ಪೂರ್ವಪಕ್ಷಗಳಲ್ಲಿ ಮೊದಲನೆಯ ಪೂರ್ವಪಕ್ಷ ಹೀಗಿದೆ - 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಸ್ಪಷ್ಟವಾಗಿ ಮುಕ್ತನಾದ ಜೀವನಿಂದ ಬ್ರಹ್ಮನು ಅಭಿನ್ನನಾಗಿದ್ದಾನೆಂದು ಹೇಳುತ್ತಿದೆ.

**नच तावतैव ब्रह्मणोऽसर्वकर्तृत्वं सिध्यति । संसारिण इव मुक्तस्य सर्वकर्तृत्वे प्रत्यक्षादिविरोधाभावात् ।**

'ಬ್ರಹ್ಮ ನ ಸರ್ವಕರ್ತೃ ಜೀವಾಭಿನ್ನತ್ವಾತ್' ಎಂಬ ಅನುಮಾನದಿಂದ ಬ್ರಹ್ಮನು ಸರ್ವಕರ್ತೃ ಅಲ್ಲ ಎಂದು ಪೂರ್ವಪಕ್ಷ ಮಾಡಲಾಗುತ್ತಿದೆ. ಈ ಅನುಮಾನಕ್ಕೆ ಉಪಜೀವ್ಯವಾದದ್ದು 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿ. ಈ ಶ್ರುತಿಯು ಮುಕ್ತರಾದ ಜೀವರಿಂದ ಬ್ರಹ್ಮನಿಗೆ ಅಭೇದವನ್ನು ಹೇಳುತ್ತಿದೆ. ಹೀಗೆ ಅಭೇದವನ್ನು ಹೇಳಿದ ಮಾತ್ರದಿಂದ ಬ್ರಹ್ಮನಿಗೆ ಅಸರ್ವಕರ್ತೃತ್ವವು ಸಿದ್ಧವಾಗುವುದಿಲ್ಲ. ಕಾರಣವೇನೆಂದರೆ ಸಂಸಾರಿಯಾದ ಜೀವನು ಸರ್ವಕರ್ತೃ ಎಂದರೆ ಪ್ರತ್ಯಕ್ಷವಿರೋಧ ಬರುತ್ತದೆ. ಮುಕ್ತನಾದ ಜೀವನು ಸರ್ವಕರ್ತೃ ಆಗಿದ್ದಾನೆ ಎಂದು ಹೇಳಿದರೆ ಪ್ರತ್ಯಕ್ಷವಿರೋಧವು ಬರಲು ಸಾಧ್ಯವಿಲ್ಲ.

**पूर्वमसतोऽपि जीवे सर्वकर्तृत्वस्य मुक्तेरिव ज्ञानेनोदयसम्भवाच्च मुक्ताभिन्नस्यापि ब्रह्मणः कथञ्चित्कारणत्वसम्भवात् ।**

ಸಂಸಾರಾವಸ್ಥೆಯಲ್ಲಿ ಸರ್ವಕರ್ತೃತ್ವವು ಇರುವುದಿಲ್ಲ. ಹೀಗಿರುವಾಗ ಮೋಕ್ಷಾವಸ್ಥೆಯಲ್ಲಿ ಸರ್ವಕರ್ತೃತ್ವವು ಜೀವನಿಗೆ ಹೇಗೆ ಬರುತ್ತದೆ ? ಎಂದು ಪ್ರಶ್ನಿಸಬಾರದು. ಮೋಕ್ಷವು ಹೇಗೆ ಅಪರೋಕ್ಷಜ್ಞಾನದಿಂದ ಸಂಸಾರಾವಸ್ಥೆಯಲ್ಲಿ ಇಲ್ಲದಿದ್ದರೂ ಅನಂತರ ದೊರೆತಿದೆಯೋ, ಅದೇ ರೀತಿಯಾಗಿ ಸರ್ವಕರ್ತೃತ್ವವೂ ಕೂಡ ಸಂಸಾರಾವಸ್ಥೆಯಲ್ಲಿ ಇಲ್ಲದಿದ್ದರೂ ಅಪರೋಕ್ಷಜ್ಞಾನದಿಂದ ಮೋಕ್ಷಾವಸ್ಥೆಯಲ್ಲಿ ಉಂಟಾಗಬಹುದು. ಆದ್ದರಿಂದ ಮುಕ್ತಜೀವನು ಸರ್ವಕರ್ತೃ ಆಗಿದ್ದಾನೆಂದು

ಸಿದ್ಧವಾಗುತ್ತವೆ. ಇಂಥ ಮುಕ್ತಜೀವನಿಂದ ಅಭಿನ್ನನಾದ ಬ್ರಹ್ಮನಲ್ಲಿಯೂ ಕೂಡ ಸರ್ವಕರ್ತೃತ್ವವು ಬಂದೇ ಬರುತ್ತದೆ. ಆದ್ದರಿಂದ 'ಬ್ರಹ್ಮ ನ ಸರ್ವಕರ್ತೃ ಅಸರ್ವಕರ್ತೃಜೀವಾಭಿನ್ನತ್ವಾತ್' ಎಂದು ಸಾಧಿಸಲಾಗದು.

**''जगद्व्यापारवर्जम्'' इत्यत्र त्वत्रत्यसिद्धान्तन्यायेन भेदे सिद्धेऽपि मुक्तस्य सत्यकामत्वात्सर्वकर्तृत्वमिति शङ्कानिरासात्रात्रत्यपूर्वपक्षदशायां तत्रत्यसिद्धान्तेन मुक्तस्यासर्वकर्तृत्वसिद्धिः ।**

'ಜಗದ್ವ್ಯಾಪಾರವರ್ಜಮ್' ಎಂಬ ನಾಕನೆಯ ಅಧ್ಯಾಯದಲ್ಲಿ ಬರುವ 'ಜಗದ್ ವ್ಯಾಪಾರವರ್ಜಮ್' ಎಂಬ ಸೂತ್ರವು ಮುಕ್ತರಿಗೆ ಸತ್ಯಕಾಮತ್ವವೆಂಬ ಧರ್ಮವನ್ನು ಸಮರ್ಥಿಸಿದೆ. ಆದ್ದರಿಂದ ಮುಕ್ತಜೀವರು ತಮ್ಮ ಯೋಗ್ಯತೆಗೆ ಅರ್ಹವಲ್ಲದ ಯಾವುದೇ ಕಾಮನೆಗಳನ್ನು ಮಾಡಲಾರರು. ಆದ್ದರಿಂದಲೇ ಸರ್ವಕರ್ತೃತ್ವವೆಂಬ ಧರ್ಮವೂ ಕೂಡ ಅವರಲ್ಲಿ ಇರುವುದಿಲ್ಲ ಎಂದು ನಿರ್ಣಯಿಸಲಾಗಿದೆ. ಆ ಅಧಿಕರಣದ ಸಿದ್ಧಾಂತ ನ್ಯಾಯದಿಂದ ಮುಕ್ತಜೀವನಿಗೆ ಅಸರ್ವಕರ್ತೃತ್ವವು ನಿರ್ಣಯವಾಗುತ್ತದೆ. ಅದನ್ನು ಉಪಜೀವಿಸಿಕೊಂಡು, ಈ ಅಧಿಕರಣದಲ್ಲಿ ಮುಕ್ತಜೀವನಿಂದ ಅಭಿನ್ನನಾದ ಬ್ರಹ್ಮನೂ ಕೂಡ ಸರ್ವಕರ್ತೃ ಆಗಲು ಸಾಧ್ಯವಿಲ್ಲವಲ್ಲ ಎಂದು ಆಕ್ಷೇಪ ಮಾಡಬಹುದಲ್ಲವೇ? ಹೀಗೆ ಆಶಂಕಿಸಬಾರದು. ಏಕೆಂದರೆ ಮುಕ್ತಜೀವರಿಗೂ ಪರಮಾತ್ಮನಿಗೂ ಈ ಅಧಿಕರಣದ ಸಿದ್ಧಾಂತನ್ಯಾಯದಿಂದ ಭೇದವು ಸಿದ್ಧವಾದ ಮೇಲೆ ಜಗದ್ವ್ಯಾಪಾರವರ್ಜಂ' ಎಂಬ ಸೂತ್ರದಲ್ಲಿ ಮುಕ್ತನಿಗೆ ಸತ್ಯಕಾಮತ್ವವಿರುವುದರಿಂದ, ಸರ್ವಕರ್ತೃತ್ವವೂ ಕೂಡ ಮುಕ್ತರಿಗೆ ಬರಲಿ ಎಂಬ ಆಶಂಕೆಯನ್ನಷ್ಟೇ ನಿರಾಕರಣೆ ಮಾಡುತ್ತಿದ್ದಾರೆ. ಆದ್ದರಿಂದ ಭೋಕ್ತ್ರಾಪತ್ತ್ಯಧಿಕರಣವನ್ನು ಉಪಜೀವಿಸಿ 'ಜಗದ್ವ್ಯಾಪಾರವರ್ಜಂ' ಎಂಬ ಅಧಿಕರಣವು ಹೊರಟಿರುವಾಗ ಪುನಃ 'ಜಗದ್ವ್ಯಾಪಾರವರ್ಜಂ' ಎಂಬ ಅಧಿಕರಣವನ್ನು ಆಶ್ರಯಿಸಿ ಈ ಅಧಿಕರಣದ ಪೂರ್ವಪಕ್ಷವನ್ನು ಮುಕ್ತನು ಸರ್ವಕರ್ತೃ ಅಲ್ಲ ಎಂದು ಹೇಳಬಾರದು. ಆದ್ದರಿಂದ 'ಜಗದ್ವ್ಯಾಪಾರವರ್ಜಂ' ಎಂಬ ಸೂತ್ರವನ್ನು ಇಲ್ಲಿ ಯಾವುದೇ ಕಾರಣದಿಂದಲೂ ವಿವಕ್ಷಿಸಬಾರದು.

**तस्मादसर्वकर्तृत्वेन प्रत्यक्षसिद्धसंसार्यभेदाद्ब्रह्मणोऽपि तथात्वमिति वक्तुं मुक्तावभेदेन संसारेऽप्यभेदः साध्यः ।**

ಹೀಗೆ ಮುಕ್ತನಾದ ಜೀವನಿಂದ ಬ್ರಹ್ಮನಿಗೆ ಅಭೇದವಿರುವ ಪ್ರಯುಕ್ತ ಅಸರ್ವಕರ್ತೃತ್ವವನ್ನು ಸಾಧನೆ ಮಾಡಲಾಗದು ಎಂದು ತಿಳಿಯುತ್ತದೆ. ಅನಿವಾರ್ಯವಾಗಿ ಸಂಸಾರಿಯಾದ ಜೀವನಿಂದ ಅಭೇದವಿರುವುದರಿಂದಲೇ ಬ್ರಹ್ಮನು ಸರ್ವಕರ್ತೃ ಆಗುವುದಿಲ್ಲವೆಂದು ಹೇಳಬೇಕು. ಸಂಸಾರಿಯಾದ ಜೀವನಲ್ಲಾದರೂ ಅಸರ್ವಕರ್ತೃತ್ವವು ಪ್ರತ್ಯಕ್ಷದಿಂದಲೇ ಸಿದ್ಧವಾಗಿದೆ. ಆದ್ದರಿಂದ 'ಬ್ರಹ್ಮ ನ ಸರ್ವಕರ್ತೃ ಅಸರ್ವಕರ್ತೃಸಂಸಾರಿಜೀವಾಭಿನ್ನತ್ವಾತ್' ಎಂದು ಸಾಧಿಸಿದಂತಾಯಿತು.

**''एकीभवन्ति'' इत्यभूततद्भावार्थच्विप्रत्ययस्तु ''न ह्यन्यस्य'' इति युक्तिविरोधाद्भेदभ्रमनिवृत्तेरभूततद्भावाभिप्रायः ।**

ಸಂಸಾರಿಯಾದ ಜೀವನಿಂದ ಅಭೇದವೆಂಬ ಹೇತುವು ಶ್ರುತಿಸಿದ್ಧವೆಂದು ಹಿಂದೆ ಹೇಳಿದಿರಿ. ಆದರೆ ಇದು ಶ್ರುತಿಸಿದ್ಧವೇ ಆಗುತ್ತಿಲ್ಲ. 'ಏಕೀಭವಂತಿ' ಎಂಬುದಾಗಿ ಮುಕ್ತಜೀವರು ಬ್ರಹ್ಮನಿಂದ ಅಭಿನ್ನರಾಗಿದ್ದಾರೆಂದಷ್ಟೇ ಶ್ರುತಿ ಹೇಳುತ್ತಿದೆಯಲ್ಲವೇ?

ಹೌದು, ಆದರೆ ನೇರವಾಗಿ ಶ್ರುತಿಯು ಸಂಸಾರಿಯಾದ ಜೀವರಿಂದ ಅಭೇದವನ್ನು ಹೇಳದಿದ್ದರೂ, ಪರಂಪರಯಾ ಹೇಳುತ್ತಿದೆ. 'ಬ್ರಹ್ಮ ಸಂಸಾರಿಜೀವೇನ ಅಭಿನ್ನಂ ಮುಕ್ತಜೀವೇನ ಅಭಿನ್ನತ್ವಾತ್' ಎಂಬ ಅನುಮಾನದಲ್ಲಿ ಮುಕ್ತಜೀವನಿಂದ ಇರುವ ಅಭೇದಕ್ಕೆ 'ಏಕೀಭವಂತಿ' ಎಂಬ ಶ್ರುತಿಯು ಪ್ರಮಾಣವಾಗುತ್ತದೆ. ಮುಕ್ತಜೀವರಿಗೂ ಮತ್ತು ಸಂಸಾರಿಜೀವರಿಗೂ ಬ್ರಹ್ಮನಿಂದ ಅಭೇದವನ್ನು ಸಮಾನವಾಗಿ ನೀವು ಹೇಳುವುದಾದರೆ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ವಿರೋಧವೇ ಬರುತ್ತದೆ. 'ಏಕೀಭವಂತಿ' ಎಂಬ ಪದವು ಅಭೂತತದ್ಭಾವಾರ್ಥದಲ್ಲಿರುವ 'ಚ್ವಿ' ಪ್ರತ್ಯಯದಿಂದ ಕೂಡಿದೆ. 'ಅಭೂತತದ್ಭಾವೇ ಸಂಪದ್ಯಮಾನೇ ಚ್ವಿಃ' ಎಂಬುದಾಗಿ ಮೊದಲು ಇಲ್ಲದ್ದು ಅನಂತರ ಬರುತ್ತದೆ ಎಂಬರ್ಥವು ವಿವಕ್ಷಿತವಾದಾಗಷ್ಟೇ 'ಚ್ವಿ' ಪ್ರತ್ಯಯವನ್ನು ಸೂತ್ರ ವಿಧಾನ ಮಾಡುತ್ತದೆ. 'ಅನೇಕೇ ಏಕೇ ಸಂಪದ್ಯಮಾನಾಃ ಭವಂತೀತಿ ಏಕೀಭವಂತಿ' ಎಂದು ನಿಷ್ಪನ್ನವಾಗಿದೆ. ಮೊದಲು ಅನೇಕರಾದವರು ಅನಂತರ ಏಕೀಭೂತರಾಗಿದ್ದಾರೆ ಎಂಬರ್ಥವನ್ನು ವಿವಕ್ಷಿಸಿದಾಗ ಮಾತ್ರ 'ಚ್ವಿ' ಪ್ರತ್ಯಯವು ಕೂಡುತ್ತದೆ.

ಹೌದು ಆದರೆ 'ನಹಿ ಅನ್ಯಸ್ಯ ಅನ್ಯತ್ವಂ ಯುಜ್ಯತೇ' ಎಂಬ ಯುಕ್ತಿವಿರೋಧದಿಂದ 'ಏಕೀಭವಂತಿ' ಎಂಬ ಶ್ರುತಿಗೆ ಗೌಣಾರ್ಥವನ್ನು ಮಾಡಬೇಕು. ಒಂದು ವೇಳೆ ಮೊದಲು ಭಿನ್ನರಾದವರು ಅನಂತರ ಅಭಿನ್ನರಾಗಿದ್ದಾರೆಂಬ ಅರ್ಥವನ್ನೇ 'ಏಕೀಭವಂತಿ' ಎಂಬ ಶ್ರುತಿಗೆ ವಿವಕ್ಷಿಸಿದರೆ, ಮೊದಲು ಭಿನ್ನರಾದವರು, ಅನಂತರ ಅಭಿನ್ನರಾಗಲು ಸಾಧ್ಯವಿಲ್ಲ ಎಂಬ ಯುಕ್ತಿಯ ವಿರೋಧ ಬರುತ್ತದೆ. ಅದಕ್ಕಾಗಿ ಮೊದಲೂ ಕೂಡ ಅಭೇದವನ್ನು ಹೇಳಬೇಕು. ಅನಂತರವೂ ಅಭೇದವನ್ನೇ ಹೇಳಬೇಕು. 'ಚ್ವಿ' ಪ್ರತ್ಯಯವು ಭೇದಭ್ರಮನಿವೃತ್ತಿಯ ವಿವಕ್ಷೆಯಿಂದ ಉಪಪನ್ನವಾಗುತ್ತದೆ. ಭೇದಭ್ರಮನಿವೃತ್ತಿಯು ಅಭೂತತದ್ಭಾವವಾಗಿದೆ. ಸಂಸಾರದೆಶೆಯಲ್ಲಿ ಅಭೇದವಿದ್ದರೂ ಕೂಡ ಭೇದಭ್ರಮೆಯೇ ಇರುತ್ತದೆ. ಮೋಕ್ಷಾವಸ್ಥೆಯಲ್ಲಿ ಭೇದಭ್ರಮೆಯು ನಿವೃತ್ತವಾಗುತ್ತದೆ. ಈ ಭೇದಭ್ರಮನಿವೃತ್ತಿಯು ಸಂಸಾರಾವಸ್ಥೆಯಲ್ಲಿ ಇರಲಿಲ್ಲ. ಮೋಕ್ಷಾವಸ್ಥೆಯಲ್ಲಿ ಹುಟ್ಟಿದೆ. ಆದ್ದರಿಂದ ಅಭೇದವು ಅಭೂತತದ್ಭಾವವಲ್ಲ. ಭೇದಭ್ರಮನಿವೃತ್ತಿಯು ಅಭೂತ-ತದ್ಭಾವವಾಗಿದೆ. ಆದ್ದರಿಂದಲೇ 'ಚ್ವಿ' ಪ್ರತ್ಯಯವು ಯುಕ್ತವಾಗುತ್ತದೆಂದು ಗೌಣವಾಗಿ ಉಪಪಾದನೆ ಮಾಡಬೇಕು.

**''तत्त्वमसिति'' दानीमप्यभेदश्रुतेः च्विप्रत्ययोऽस्वरस इति तु न । भाष्यविरोधात् ''पृथगुपदेशात्'' इत्यनेन गतार्थत्वापाताच्चेत्येकः पूर्वः पक्षः ।**

'ತತ್ತ್ವಮಸಿ' ಎಂಬ ಶ್ರುತಿಯು ಸಂಸಾರಾವಸ್ಥೆಯಲ್ಲಿಯೇ ಅಭೇದವನ್ನು ಪ್ರತಿಪಾದನೆ ಮಾಡುತ್ತಿದೆ. ಈ ಶ್ರುತಿಯ ವಿರೋಧ ಬರುವುದರಿಂದ 'ಚ್ವಿ'ಪ್ರತ್ಯಯಕ್ಕೆ ಅಸ್ವಾರಸ್ಯವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಒಂದು ವೇಳೆ 'ತತ್ತ್ವಮಸಿ' ಎಂಬ ಶ್ರುತಿಯನ್ನು ಈ ಅಧಿಕರಣದಲ್ಲಿ ವಿವಕ್ಷಿಸಿದರೆ ಭಾಷ್ಯವಿರೋಧ ಬರುತ್ತದೆ. ಭಾಷ್ಯದಲ್ಲಿ 'ನಹಿ ಅನನ್ಯ ಅನ್ಯತ್ವಂ ಯುಜ್ಯತೇ' ಇತ್ಯಾದಿಯಾಗಿ ಮೊದಲು ಭಿನ್ನರಾದವರು ಅನಂತರ ಅಭಿನ್ನರಾಗಲು ಸಾಧ್ಯವಿಲ್ಲ ಎಂದು ಹೇಳಿರುವುದರಿಂದಲೇ ಸಂಸಾರಾವಸ್ಥೆಯಲ್ಲಿ ಅಭೇದವನ್ನು ವಿವಕ್ಷಿಸಬಾರದೆಂದು ತಿಳಿಯುತ್ತದೆ. ಮತ್ತು 'ಪೃಥಗುಪದೇಶಾತ್' ಅಧಿಕರಣದಲ್ಲಿ 'ತತ್ತ್ವಮಸಿ' ಎಂಬ ಶ್ರುತಿಯನ್ನು ವಿಚಾರ ಮಾಡಿ, ಸಂಸಾರಾವಸ್ಥೆಯಲ್ಲಿ ಅಭೇದವಿರುವುದಿಲ್ಲವೆಂದು ಸಮರ್ಥನೆ ಮಾಡಿರುತ್ತಾರೆ. ಈ ಅಧಿಕರಣದಲ್ಲಿ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯನ್ನು ವಿವಕ್ಷೆ ಮಾಡಿ, ಮೋಕ್ಷಾವಸ್ಥೆಯಲ್ಲಿ ಅಭೇದವಿರುವುದಿಲ್ಲವೆಂದು ಸಮರ್ಥನೆ ಮಾಡಿರುತ್ತಾರೆ. ಪ್ರಕೃತ ತತ್ತ್ವಮಸಿ ಎಂಬ ಶ್ರುತಿಯನ್ನು ಈ ಅಧಿಕರಣದಲ್ಲಿಯೇ ವಿಚಾರ ಮಾಡುವುದಾದರೆ, ಪೃಥಗುಪದೇಶಾಧಿ-ಕರಣದಿಂದ ಪುನರುಕ್ತಿ ಬರುತ್ತದೆ. ಆದ್ದರಿಂದ 'ಚ್ವಿ' ಪ್ರತ್ಯಯದ ಅಸ್ವಾರಸ್ಯವನ್ನು 'ತತ್ತ್ವಮಸಿ' ಎಂಬ ಶ್ರುತಿಯ ಆಧಾರದಿಂದ ಉಪಪಾದನೆ ಮಾಡಬಾರದು.

**एतं पक्षमाश्रित्य मुक्तावभेदेन पूर्वमभेदं वक्तुं ''न ही'' इत्यादि पूर्वपक्षभाष्यं प्रवृत्तम् ।**

ಈ ಪೂರ್ವಪಕ್ಷವನ್ನು ಆಶ್ರಯಿಸಿ ಮುಕ್ತಿಯಲ್ಲಿ ಅಭೇದವಿರುವುದರಿಂದ ಸಂಸಾರಾವಸ್ಥೆಯಲ್ಲೂ ಕೂಡ ಅಭೇದವಿರುತ್ತದೆಂದು ಸಮರ್ಥಿಸಲು 'ನ ಹ್ಯನ್ಯಸ್ಯ ಅನ್ಯತ್ವಂ ಯುಜ್ಯತೇ' ಎಂಬ ಪೂರ್ವಪಕ್ಷಭಾಷ್ಯವು ಹೊರಟಿದೆ.

('ಬ್ರಹ್ಮ ಸಂಸಾರಿಜೀವೇನ ಅಭಿನ್ನಂ ಮುಕ್ತೇನ ಅಭಿನ್ನತ್ವಾತ್' ಎಂಬ ಅನುಮಾನದಲ್ಲಿರುವ ಹೇತುವಿಗೆ 'ಏಕೀಭವಂತಿ' ಎಂಬ ಶ್ರುತಿಯು ಆಧಾರವಾಗಿದೆ. ಮುಕ್ತನಿಗೂ ಬ್ರಹ್ಮನಿಗೂ ಅಭೇದವಿದ್ದ ಮಾತ್ರಕ್ಕೆ ಸಂಸಾರಿಜೀವನಿಗೂ ಬ್ರಹ್ಮನಿಗೂ ಅಭೇದ ಹೇಳುವುದು ವ್ಯಧಿಕರಣವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ನ ಹ್ಯನ್ಯಸ್ಯ ಅನ್ಯತ್ವಂ ಯುಜ್ಯತೇ' ಎಂಬ ಭಾಷ್ಯದ ಮಾತು ಉತ್ತರ ಸಿಗುತ್ತಿದೆ. ಒಂದುವೇಳೆ ಜೀವನು ಬ್ರಹ್ಮನಿಂದ ಸಂಸಾರಾವಸ್ಥೆಯಲ್ಲಿ ಭಿನ್ನನಾಗಿ ಬಿಟ್ಟರೆ ಮುಕ್ತಿಯಲ್ಲಿ ಅಭೇದವು ಯುಕ್ತವಾಗುವುದಿಲ್ಲ. ಆದರೆ 'ಏಕೀಭವಂತಿ' ಎಂಬ ಶ್ರುತಿಯು ಸ್ಪಷ್ಟವಾಗಿ ಮುಕ್ತಜೀವನಿಗೆ ಬ್ರಹ್ಮನಿಂದ ಅಭೇದವನ್ನು ಹೇಳುತ್ತಿದೆ. ಅದು ಕೂಡಬೇಕಾದರೆ ಸಂಸಾರಾವಸ್ಥೆಯಲ್ಲಿರುವ ಜೀವನಿಗೂ ಅಭೇದವನ್ನು ಒಪ್ಪಲೇಬೇಕು. ಆದ್ದರಿಂದ ಆಚಾರ್ಯರ 'ನಹ್ಯನ್ಯಸ್ಯ ಅನ್ಯತ್ವಂ

ಯುಜ್ಯತೇ' ಎಂಬ ಭಾಷ್ಯದ ಮಾತು ತರ್ಕರೂಪವಾಗಿ ಪೂರ್ವಪಕ್ಷದಲ್ಲಿ ಉಪಯೋಗವಾಯಿತು. ತರ್ಕ ಹೀಗಿದೆ - 'ಜೀವಃ ಸಂಸಾರಾವಸ್ಥಾಯಾಂ ಯದಿ ಬ್ರಹ್ಮಣಃ ಭಿನ್ನಃ ಸ್ಯಾತ್ ತರ್ಹಿ ಮುಕ್ತದಶಾಯಾಮ್ ಬ್ರಹ್ಮಣ ಅಭೇದಃ ಅಯುಕ್ತಃ ಸ್ಯಾತ್ ಯತೋ ಹಿ ಪೂರ್ವಂ ಅನ್ಯಸ್ಯ ಕಾಲಾಂತರೇ ಅನ್ಯಭಾವ ಅದೃಷ್ಟೇಃ ಮೋಕ್ಷಾವಸ್ಥಾಯಾಂ ಅಭೇದಶ್ರುತ್ಯನನ್ಯಥಾನುಪಪತ್ತ್ಯಾ ಸಂಸಾರಾವಸ್ಥಾಯಾಂ ಅಪಿ ಜೀವಸ್ಯ ಬ್ರಹ್ಮಣಾ ಅಭೇದಃ ಸಿಧ್ಯತಿ' ಹೀಗೆ ವ್ಯಾಪ್ತಿರೂಪವಾಗಿ ಆಚಾರ್ಯರ ಮಾತು ಉಪಯೋಗವಾಗಿದೆ.)

**द्वितीयस्तु च्विप्रत्ययस्वारस्यात्पूर्वं भेदः । मुक्तौ त्वभेदः । ''न ह्यन्यस्ये'' इति युक्तिस्तु च्विप्रत्ययरूपश्रुतिबाधितेति ।**

ಎರಡನೆಯ ಪೂರ್ವಪಕ್ಷ ಹೀಗಿದೆ - ಚ್ವಿಪ್ರತ್ಯಯವು ಶ್ರುತಿರೂಪವಾಗಿ ಪ್ರಮಾಣವಾಗಿದೆ. 'ನ ಹನ್ಯಸ್ಯ ಅನ್ಯತ್ವಂ ಯುಜ್ಯತೇ' ಎಂಬುದು ಯುಕ್ತಿರೂಪವಾಗಿದೆ. ಶ್ರುತ್ಯರ್ಥದ ಸ್ವಾರಸ್ಯಕ್ಕಾಗಿ ಸಂಸಾರಾವಸ್ಥೆಯಲ್ಲಿ ಭೇದವನ್ನು, ಮೋಕ್ಷಾವಸ್ಥೆಯಲ್ಲಿ ಅಭೇದವನ್ನೇ ಒಪ್ಪಬೇಕು. ಹಾಗಾದರೆ ಯುಕ್ತಿವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಶ್ರುತಿಗಿಂತ ಯುಕ್ತಿಯು ದುರ್ಬಲವಾದ್ದರಿಂದ ಬಾಧಿತವಾಗುತ್ತದೆ.

**एतत्पक्षदूषणाय पूर्वं सिद्धेन भेदेन पश्चादपि भेदं साधयितुं ''नान्यदन्यत्वम्'' इत्यादिसिद्धान्तानुव्याख्यानं प्रवृत्तमिति न भाष्यानुव्याख्यानयोस्तट्टीकयोर्वा विरोधः ।**

ಈ ಬಗೆಯ ಪೂರ್ವಪಕ್ಷವನ್ನು ದೂಷಣೆ ಮಾಡುವುದಕ್ಕೆ ಅನುವ್ಯಾಖ್ಯಾನ ಹೊರಟಿದೆ ಪೂರ್ವಪಕ್ಷಿಯೂ ಕೂಡ ಸಂಸಾರಾವಸ್ಥೆಯಲ್ಲಿ ಭೇದವನ್ನು ಒಪ್ಪಿರುತ್ತಾನೆ. ಮೊದಲು ಭೇದವನ್ನು ಒಪ್ಪಿದ ಮೇಲೆ ಅನಂತರವೂ ಕೂಡ ಭೇದವನ್ನು ಒಪ್ಪಲೇ ಬೇಕು ಎಂಬ ಸಮರ್ಥನೆಗಾಗಿ 'ನಾನ್ಯದನ್ಯತ್ವಮ್' ಇತ್ಯಾದಿ ಸಿದ್ಧಾಂತಪರವಾದ ಅನುವ್ಯಾಖ್ಯಾನವು ಪ್ರವೃತ್ತವಾಗಿವೆ. ಆದ್ದರಿಂದ ಭಾಷ್ಯ ಹಾಗೂ ಅನುವ್ಯಾಖ್ಯಾನಗಳಿಗೆ ಅವುಗಳ ಟೀಕೆಗಳಿಗೆ ಪರಸ್ಪರ ವಿರೋಧವು ಬರುವುದೇ ಇಲ್ಲ.

**प्रकाशः –**

विषयसंशयटीकां व्यनक्ति ।। **अत्र विष्णोरिति ।। इति श्रुतिरिति ।।** गताः कलाः पञ्चदशप्रतिष्ठादेवाश्च सर्वे प्रतिदेवतासु । कर्माणि विज्ञानमयश्च आत्मा परेऽव्यये सर्व एकीभवन्ति । यथा नद्यस्स्यंदमानास्समुद्रायणास्समुद्रं प्राप्यास्तं गच्छन्ति नामरूपे विहाय । तथा विद्वान्नामरूपाद्विमुक्तः परात्परं पुरुषमुपैति दिव्यम्'' इत्याथर्वणश्रुतिरित्यर्थः ।

ಅಧಿಕರಣದ ವಿಷಯ ಹಾಗೂ ಸಂಶಯವನ್ನು ಪ್ರತಿಪಾದನೆ ಮಾಡುವ ಟೀಕೆಯನ್ನು 'ಅತ್ರ ವಿಷ್ಣೋಃ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಅಧಿಕರಣದ ಶ್ರುತಿವಾಕ್ಯ ಹೀಗಿದೆ -

ಗತಾಃ ಕಲಾಃ ಪಂಚದಶಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು ।
ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ॥
'ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ ಗಚ್ಛಂತಿ
ನಾಮರೂಪೇ ವಿಹಾಯ ।
ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥

(ಆಥರ್ವಣ ಶ್ರುತಿ)

**ಪ್ರಕಾಶಃ** – यदि स्वरूपैक्यं वाक्यशेषाभिमतं तदा तदनुरोधेन पूर्ववाक्यार्थ-वर्णनात्तत्सिद्धासर्वकर्तृजीवाभिन्नत्वरूपयुक्तिविरुद्धं विष्णुजगत्कर्तृत्वमिति तत्प्रतिपादकश्रुत्यप्रामाण्यम् ।

ಪೂರ್ವಪಕ್ಷದ ಫಲ - ಒಂದು ವೇಳೆ ದೃಷ್ಟಾಂತವಾಕ್ಯಶೇಷದಲ್ಲಿ ನದೀ ಸಮುದ್ರಗಳ ದೃಷ್ಟಾಂತದಿಂದ ಸ್ವರೂಪೈಕ್ಯವನ್ನೇ ಶ್ರುತಿಯು ಹೇಳಿದರೆ ಅದಕ್ಕನುಸಾರಿಯಾಗಿ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ವಾಕ್ಯವನ್ನೂ ಕೂಡ ಸ್ವರೂಪೈಕ್ಯಪರವಾಗಿಯೇ ವ್ಯಾಖ್ಯಾನ ಮಾಡಬೇಕು. ಆವಾಗ ಅಸರ್ವಕರ್ತೃವಾದ ಜೀವನಿಂದ ಬ್ರಹ್ಮನು ಅಭಿನ್ನನಾಗಿದ್ದಾನೆಂಬುದು ಯುಕ್ತಿಯಿಂದ ಸಿದ್ಧವಾಗುತ್ತದೆ. ಇಂಥ ಯುಕ್ತಿಯಿಂದ ವಿಷ್ಣುವಿನ ಜಗತ್‌ಕರ್ತೃತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗಳಿಗೆಲ್ಲಾ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ.

**ಪ್ರಕಾಶಃ** – यदि तु स्थानैक्यं तदा तादृशजीवाभेदाभावेन हेतोरसिद्धतया न युक्तिविरुद्धं सर्वकर्तृत्वमिति नाप्रामाण्यमिति भावः ।

ಸಿದ್ಧಾಂತದ ಫಲ - ಒಂದು ವೇಳೆ ವಾಕ್ಯಶೇಷದ ಶ್ರುತಿಯು ನದೀ-ಸಮುದ್ರಗಳ ದೃಷ್ಟಾಂತದಿಂದ ಸ್ವರೂಪೈಕ್ಯವನ್ನು ವಿವಕ್ಷಿಸದೇ, ಸ್ಥಾನತಃ ಐಕ್ಯವನ್ನು ವಿವಕ್ಷಿಸುವುದಾದರೆ, 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯೂ ಕೂಡ ಮೋಕ್ಷಾವಸ್ಥೆಯಲ್ಲಿ ಸ್ಥಾನೈಕ್ಯವನ್ನೇ ಹೇಳುತ್ತದೆ ಎಂದು ಸಿದ್ಧವಾಗುತ್ತದೆ. ಜೀವಾಭೇದವನ್ನು ಹೇಳದ ಕಾರಣ ಹೇತುವು ಅಸಿದ್ಧವಾಗುತ್ತದೆ. ಆವಾಗ ವಿಷ್ಣುವಿನ ಸರ್ವಕರ್ತೃತ್ವಕ್ಕೆ ಯಾವುದೇ ಯುಕ್ತಿಗಳ ವಿರೋಧವು ಪ್ರಾಪ್ತವಾಗುವುದಿಲ್ಲ. ಸರ್ವಕರ್ತೃತ್ವ ಪ್ರತಿಪಾದಕವಾದ ಶ್ರುತಿಗಳಿಗೆ ಅಪ್ರಾಮಾಣ್ಯವೂ ಕೂಡ ಬರುವುದಿಲ್ಲ.

**ಪ್ರಕಾಶಃ** – पक्षभेदेन भाष्यटीकां योजयितुं विरोधमुद्घाटयति ।। **नन्विति** ।।

ಅನುವ್ಯಾಖ್ಯಾನ ಹಾಗೂ ಭಾಷ್ಯಗಳ ಮಾತುಗಳನ್ನು ನೋಡಿದಾಗ ಆಪಾತತಃ ವಿರೋಧ ಬಂದಂತೆ ಕಾಣಿಸುತ್ತದೆ. ಆದರೆ ಭಾಷ್ಯ ಹಾಗೂ ಟೀಕೆ ಇವುಗಳ ಪರಸ್ಪರ ವಿರೋಧವನ್ನು ಪರಿಹರಿಸಲು ಮೊದಲು ಆಪಾತತಃ ಪ್ರಾಪ್ತವಾಗುವ ವಿರೋಧವನ್ನು 'ನನು' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

ಭೋಕ್ತ್ರಧಿಕರಣ (೨-೧-೫)

**प्रकाशः** – तत्कथमिति चेदिति ।। भाष्यरीत्या प्रागभेदस्यानुमतत्वेन प्रागसिद्धेन भेदेन जीवो नान्यकालेऽपि ब्रह्मणैक्यमापत्स्यते प्राक्ततोऽत्यन्तभिन्नत्वात् यदेवं तदेवं यथा घटः पटेनेति साधनायोगात्तदनुरोधेन प्राग्भेदेऽगीकृते तेनैव हेतुना मुक्तावप्यभेदो नेति पूर्वपक्षानुदय इति भावः ।

'ತತ್‌ಕಥಮಿತಿ ಚೇತ್' ಇತ್ಯಾದಿ ವಾಕ್ಯದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು - ಭಾಷ್ಯದ ಪ್ರಕಾರ ಸಂಸಾರಾವಸ್ಥೆಯಲ್ಲಿ ಅಭೇದವು ವಿವಕ್ಷಿತವಾಗಿದೆ. ಆವಾಗ ಮೊದಲು ಅಸಿದ್ಧವಾದ ಭೇದದಿಂದ 'ಜೀವೋ ನಾನ್ಯಕಾಲೇऽಪಿ ಬ್ರಹ್ಮಣೈಕ್ಯಮಾಪತ್ಸ್ಯತೇ ಪ್ರಾಕ್ತತೋऽತ್ಯಂತಭಿನ್ನತ್ವಾತ್ ಯದೇವಂ ತದೇವಂ ಯಥಾ ಘಟಃ ಪಟೇನ' ಜೀವನು ಸಂಸಾರಾವಸ್ಥೆಯಲ್ಲಿ ಅಭಿನ್ನನಾಗದಿದ್ದರೆ ಮೋಕ್ಷಾವಸ್ಥೆಯಲ್ಲಿಯೂ ಅಭಿನ್ನನಾಗುವುದಿಲ್ಲ. ಏಕೆಂದರೆ ಮೊದಲು ಭಿನ್ನನಾಗಿರುವುದರಿಂದ. ಘಟ ಹಾಗೂ ಪಟಗಳೆರಡು ಮೊದಲು ಹಾಗೂ ಅನಂತರ ಭಿನ್ನವೇ ಆಗಿರುತ್ತವೆ. ಹೀಗೆ ಸಾಧಿಸಲಾಗದು. ಒಂದು ವೇಳೆ ಅಭೇದವನ್ನು ವಿವಕ್ಷಿಸದೇ ಸಂಸಾರಾವಸ್ಥೆಯಲ್ಲಿ ಭೇದವನ್ನು ಒಪ್ಪಿದರೆ, ಅದೇ ಹೇತುವಿನಿಂದ ಮುಕ್ತಿಯಲ್ಲಿಯೂ ಕೂಡ ಅಭೇದವು ಸಿದ್ಧವಾಗುವುದಿಲ್ಲ. ಸಂಸಾರಾವಸ್ಥೆಯಲ್ಲಿ ಭೇದವಿರುವುದರಿಂದ ಮೋಕ್ಷಾವಸ್ಥೆಯಲ್ಲಿಯೂ ಕೂಡ ಭೇದವನ್ನೇ ಒಪ್ಪಬೇಕಾಗುತ್ತದೆ. ಆದ್ದರಿಂದ ಭಾಷ್ಯದ ಪ್ರಕಾರ ಸಿದ್ಧಾಂತವು ಉದಯವಾಗುವುದಿಲ್ಲ. ಅನುವ್ಯಾಖ್ಯಾನದ ಪ್ರಕಾರ ಪೂರ್ವಪಕ್ಷವು ಉದಯವಾಗುವುದಿಲ್ಲ.

**प्रकाशः** – "प्रागभिन्नस्यैव जीवस्य ब्रह्मणैक्यमनेनोच्यत उत भिन्नस्याथ भिन्नाभिन्नस्य" इति सुधावाक्यं हृदि कृत्वाऽऽह – **अत्र त्रय इति** ।।

'ಪ್ರಾಗಭಿನ್ನಸ್ಯೈವ ಜೀವಸ್ಯ ಬ್ರಹ್ಮಣೈಕ್ಯಮನೇನೋಚ್ಯತ ಉತ ಭಿನ್ನಸ್ಯಾಥ ಭಿನ್ನಾಭಿನ್ನಸ್ಯ' ಸಂಸಾರಾವಸ್ಥೆಯಲ್ಲಿ ಬ್ರಹ್ಮನಿಂದ ಅಭಿನ್ನನಾದ ಜೀವನು, ಮೋಕ್ಷಾವಸ್ಥೆಯಲ್ಲಿ ಬ್ರಹ್ಮನಿಂದ ಅಭಿನ್ನನಾಗಿದ್ದಾನೆಂದು ಹೇಳುತ್ತೀರೋ, ಅಥವಾ ಸಂಸಾರಾವಸ್ಥೆಯಲ್ಲಿ ಭಿನ್ನನಾಗಿ ಮೋಕ್ಷಾವಸ್ಥೆಯಲ್ಲಿ ಅಭಿನ್ನನಾಗಿದ್ದಾನೆಂದು ಹೇಳುತ್ತೀರೋ, ಅಥವಾ ಸಂಸಾರಾವಸ್ಥೆಯಲ್ಲಿ ಭಿನ್ನಾಭಿನ್ನನಾದ ಜೀವನು ಮೋಕ್ಷಾವಸ್ಥೆಯಲ್ಲಿ ಅಭಿನ್ನನಾಗಿದ್ದಾನೆಂದು ಹೇಳುತ್ತೀರೋ ? ಹೀಗೆ ಮೂರು ವಿಕಲ್ಪಗಳನ್ನು ನ್ಯಾಯಸುಧಾ ವಾಕ್ಯದಲ್ಲಿ ಮಾಡಿರುತ್ತಾರೆ. ಅದನ್ನೇ ಮನಸ್ಸಿನಲ್ಲಿಟ್ಟುಕೊಂಡು ಪ್ರಕೃತ ಗ್ರಂಥಕಾರರು ಮೂರು ಬಗೆಯ ಪೂರ್ವಪಕ್ಷಗಳನ್ನು 'ಅತ್ರ ತ್ರಯಃ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – आद्यं विवृणोति ।। **तत्रेति** ।। **मुक्तेति** ।। "गताः कला" इत्युपक्रमात् "परेऽव्यये" इति श्रवणाच्चेति भावः ।। **मुक्तेरिति** ।। आनन्दानुभवरूपायाः प्रागसत्या यथोदय इत्यर्थः ।

ಮೊದಲನೆಯ ಪೂರ್ವಪಕ್ಷವನ್ನು 'ತತ್ರ' ಇತ್ಯಾದಿ ಗ್ರಂಥದಿಂದ ವಿವರಣೆ ಮಾಡುತ್ತಿದ್ದಾರೆ. 'ಗತಾಃ ಕಲಾಃ' ಇತ್ಯಾದಿ ಶ್ರುತಿಯ ಉಪಕ್ರಮದಿಂದ ಹದಿನಾರು ಕಲೆಗಳನ್ನು ದಾಟಿದ್ದಾನೆಂದು ತಿಳಿಯುತ್ತಿದೆ.

ಅನಂತರ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಇರುವುದರಿಂದ, ಈ ಶ್ರುತಿಯು ಮುಕ್ತನನ್ನೇ ಪ್ರತಿಪಾದನೆ ಮಾಡುತ್ತಿದೆ ಎಂದು ಸ್ಪಷ್ಟವಾಗುತ್ತದೆ. ಸರ್ವಕರ್ತೃತ್ವವು ಸಂಸಾರಾವಸ್ಥೆಯಲ್ಲಿ ಇರುವುದಿಲ್ಲ. ಮೋಕ್ಷಾವಸ್ಥೆಯಲ್ಲಿ ಹೇಗೆ ಬರುತ್ತದೆ ? ಎಂಬ ಪ್ರಶ್ನೆಗೆ 'ಮುಕ್ತೇಃ' ಎಂಬುದರಿಂದ ಉತ್ತರಿಸಿದ್ದಾರೆ. ಆನಂದಾನುಭವವು ಸಂಸಾರಾವಸ್ಥೆಯಲ್ಲಿ ಇರಲಿಲ್ಲ. ಆದರೂ ಮೋಕ್ಷಾವಸ್ಥೆಯಲ್ಲಿ ಹೇಗೆ ಉತ್ಪನ್ನವಾಯಿತೋ, ಆದರಂತೆ ಸರ್ವಕರ್ತೃತ್ವವೂ ಕೂಡ ಉದಯವಾಗಲಿ ಎಂದಭಿಪ್ರಾಯ. (ಸಂಸಾರಾವಸ್ಥೆಯಲ್ಲಿ ಆನಂದವಿದ್ದರೂ ಕೂಡ ಆನಂದದ ಅನುಭವವಿರುವುದಿಲ್ಲ.

**प्रकाशः –**

''बलमानन्द ओजश्च सहोज्ञानमनाकुलम् ।
स्वरूपाण्येव जीवस्य व्यज्यन्ते परमाद्विभोः ।।

इत्यादिश्रुत्या परम प्रेमास्पदत्वादिनेदानीमीषदुपलब्धेश्चानन्दादिरूपत्वं जीवस्य सिद्धमपि व्यक्तिर्न सिद्धेति मुक्तेरिवेत्युक्तम् ।

ಬಲಮಾನಂದ ಓಜಶ್ಚ ಸಹೋಜ್ಞಾನಮನಾಕುಲಮ್ ।
ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ ॥

ಬಲ, ಆನಂದ, ಓಜಸ್ಸು, ಸಹನೆ, ಜ್ಞಾನ ಇವುಗಳೆಲ್ಲವೂ ಅತ್ಯಂತ ಶುದ್ಧವಾಗಿ ಜೀವಸ್ವರೂಪ-ಭೂತವಾಗಿವೆ. ಇವುಗಳು ಪರಮಾತ್ಮನ ಅನುಗ್ರಹದಿಂದ ಮೋಕ್ಷದಲ್ಲಷ್ಟೇ ಅಭಿವ್ಯಕ್ತವಾಗುತ್ತದೆ ಇತ್ಯಾದಿ ಶ್ರುತಿಯ ಆಧಾರದಿಂದ ಆನಂದಾದಿಗಳು ಸಂಸಾರಾವಸ್ಥೆಯಲ್ಲಿ ಇದ್ದರೂ ಕೂಡ ಮೋಕ್ಷಾವಸ್ಥೆಯಲ್ಲಷ್ಟೇ ಅನುಭವಕ್ಕೆ ಬರುತ್ತದೆ ಎಂದು ತಿಳಿಯುತ್ತದೆ. ಸಂಸಾರಾವಸ್ಥೆಯಲ್ಲಿ ಆನಂದಾದಿಗಳೆಲ್ಲವೂ ಪರಮ-ಪ್ರೇಮಾಸ್ಪದ ಎಂದಷ್ಟೇ ಉಪಲಬ್ಧವಾಗುತ್ತವೆ. ಆದ್ದರಿಂದ ಜೀವನು ಆನಂದಾದಿರೂಪನಾಗಿದ್ದರೂ ಕೂಡ ಅವನ ಆನಂದವು ಅಭಿವ್ಯಕ್ತವಾಗಿರುವುದಿಲ್ಲ. ಆದ್ದರಿಂದ 'ಮುಕ್ತೇರಿವ' ಎಂದು ಉದಾಹರಣೆಯನ್ನು ನೀಡಿರುತ್ತಾರೆ.

**प्रकाशः** – कारणत्वं तु प्राक्सर्वथा न सिद्धम् । प्रत्युत तदभाव एव सिद्ध इति कथंचिदित्युक्तम् ।

ಆನಂದವು ಸಂಸಾರಾವಸ್ಥೆಯಲ್ಲಿ ಇರುತ್ತದೆ. ಮೋಕ್ಷಾವಸ್ಥೆಯಲ್ಲಿ ಅಭಿವ್ಯಕ್ತವಾಗುತ್ತದೆ. ಆದರೆ ಜಗತ್ ಕಾರಣತ್ವವು ಸಂಸಾರಾವಸ್ಥೆಯಲ್ಲಿ ಸರ್ವಥಾ ಇರುವುದೇ ಇಲ್ಲ. ಹಾಗಾಗಿ ದೃಷ್ಟಾಂತವು ಎಲ್ಲಾ ಅಂಶದಿಂದ ವಿವಕ್ಷಿಸಲಾಗದು. ಈ ದೃಷ್ಟಿಯಿಂದಲೇ ಗ್ರಂಥದಲ್ಲಿ 'ಕಥಂಚಿತ್' ಎಂದು ಹೇಳಿರುತ್ತಾರೆ.

**प्रकाशः** – ननु चतुर्थस्य चतुर्थे पादे नवमेऽधिकरणे मुक्ताः किं सृष्ट्यादिव्यापारवन्त उत नेति सन्देहे

ಭೋಕ್ತ್ರಧಿಕರಣ (೨-೧-೫)

ನಾಕನೆಯ ಅಧ್ಯಾಯದ, ನಾಕನೆಯ ಪಾದದ ಒಂಬತ್ತನೆಯ ಅಧಿಕರಣದಲ್ಲಿರುವ 'ಜಗದ್ವ್ಯಾಪಾರವರ್ಜಂ' ಎಂಬ ಸೂತ್ರದಲ್ಲಿ ಹೀಗೆ ವಿಚಾರ ಮಾಡಲಾಗಿದೆ - ಮುಕ್ತಜೀವರು ಸೃಷ್ಟ್ಯಾದಿವ್ಯಾಪಾರವುಳ್ಳವರೋ, ಅಥವಾ ಅಲ್ಲವೋ ಎಂದು ಸಂದೇಹ ?

**प्रकाशः** – ''सर्वान् कामानाप्त्वाऽमृतस्समभवत्'' इति श्रुतेस्तेषां सत्यकामत्वेन कामितसर्वप्राप्त्युपपत्त्या सर्वशब्दसङ्कोचायोगान्मुक्तास्सृष्ट्यादिमन्त इति प्राप्ते

'ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಂಭವತ್' ಎಂಬ ಶ್ರುತಿಯ ಆಧಾರದಿಂದ ಮುಕ್ತಜೀವರು ಸತ್ಯಕಾಮರಾದ್ದರಿಂದ ಅವರು ಏನನ್ನು ಅಪೇಕ್ಷೆ ಪಟ್ಟರೂ ಎಲ್ಲವನ್ನೂ ಕೂಡ ಪಡೆಯುತ್ತಾರೆ. ಈ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಲು ಯಾವುದೇ ಕಾರಣಗಳಿರುವುದಿಲ್ಲ. ಆದ್ದರಿಂದ ಮುಕ್ತರು ಸೃಷ್ಟ್ಯಾದಿವ್ಯಾಪಾರಗಳನ್ನೂ ಕೂಡ ಮಾಡುತ್ತಾರೆ ಎಂಬುದು ಪೂರ್ವಪಕ್ಷ.

**प्रकाशः** – ''अस्माच्छरीरभेदादुत्क्रम्य'' इति जीवप्रकरणात्तेषां जगत्सृष्ट्यादेरभावात् ''स्वाधिकानन्दसम्प्राप्तौ सृष्ट्यादिव्यापृतिष्वपि । मुक्तानां नैव कामस्स्यात्'' इत्यादिना तेषां तत्र कामनानिषेधेन च सर्वशब्दसङ्कोचोपपत्तेर्न जगद्व्यापारवन्तो मुक्ता इति मुक्तानां विश्वकर्तृत्वस्य निषेत्स्यमानत्वात्कथमेतदित्यत आह – **जगदिति** ।।

'ಅಸ್ಮಾತ್ ಶರೀರಭೇದಾತ್ ಉತ್ಕ್ರಮ್ಯ' ಎಂಬುದಾಗಿ ಜೀವನನ್ನು ಪ್ರತಿಪಾದನೆ ಮಾಡುವ ಪ್ರಕರಣದಲ್ಲಿ ಈ ವಾಕ್ಯವಿರುವುದರಿಂದ ಜಗತ್‌ಸೃಷ್ಟ್ಯಾದಿಗಳು ಮುಕ್ತಜೀವರಲ್ಲಿ ಸರ್ವಥಾ ಯುಕ್ತವಾಗುವುದಿಲ್ಲ.

'ಸ್ವಾಧಿಕಾನಂದಸಂಪ್ರಾಪ್ತೌ ಸೃಷ್ಟ್ಯಾದಿವ್ಯಾಪೃತಿಷ್ವಪಿ।
ಮುಕ್ತಾನಾಂ ನೈವ ಕಾಮಃ ಸ್ಯಾತ್ ॥''

ತಮಗಿಂತ ಅಧಿಕವಾದ ಆನಂದವನ್ನು ಪಡೆಯುವುದರಲ್ಲಾಗಲೀ, ಜಗತ್ತಿನ ಸೃಷ್ಟ್ಯಾದಿವ್ಯಾಪಾರಗಳನ್ನು ಮಾಡುವುದರಲ್ಲಾಗಲೀ, ಮುಕ್ತಜೀವರು ಕಾಮನೆಯನ್ನು ಹೊಂದಲಾರರು ಇತ್ಯಾದಿ ಪ್ರಮಾಣಗಳಿರುವುದರಿಂದ ಮುಕ್ತಜೀವರು ಸೃಷ್ಟ್ಯಾದಿವ್ಯಾಪಾರಗಳಲ್ಲಿ ಕಾಮನೆಯನ್ನೇ ಮಾಡುವುದಿಲ್ಲ. ಆದ್ದರಿಂದ 'ಸರ್ವಾನ್ ಕಾಮಾನಾಪ್ತ್ವಾ' ಎಂಬಲ್ಲಿರುವ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬೇಕು. ಆದ್ದರಿಂದ ಸೃಷ್ಟ್ಯಾದಿವ್ಯಾಪಾರಗಳು ಮುಕ್ತಜೀವರಿಗಿರುವುದಿಲ್ಲವೆಂಬುದು ಸಿದ್ಧಾಂತ. ಹೀಗೆ 'ಜಗದ್ವ್ಯಾಪಾರವರ್ಜಂ' ಎಂಬ ಸೂತ್ರದಲ್ಲಿ ವಿಶ್ವಕರ್ತೃತ್ವವನ್ನು ಮುಕ್ತಜೀವರಿಗೆ ನಿಷೇಧ ಮಾಡಲಾಗಿದೆ. ಮುಕ್ತನು ಸರ್ವಕರ್ತನಲ್ಲ. ಅಂಥ ಮುಕ್ತನಿಂದ ಅಭಿನ್ನನಾದ ಬ್ರಹ್ಮನೂ ಕೂಡ ಸರ್ವಕರ್ತ ಆಗಲಾರ. ಹೀಗೆ ಸುಲಭವಾಗಿಯೇ ಬ್ರಹ್ಮನು ಸರ್ವಕರ್ತೃ ಅಲ್ಲ ಎಂದು ಸಾಧನೆ ಮಾಡಲು ಬರುತ್ತಿರುವಾಗ 'ನಹಿ ಅನ್ಯಸ್ಯ' ಇತ್ಯಾದಿಯಾಗಿ ಯುಕ್ತಿಪುರಸ್ಸರವಾಗಿ ಸರ್ವಕರ್ತೃತ್ವಾಭಾವವನ್ನು ಏಕೆ ಸಾಧನೆ ಮಾಡುತ್ತಿದ್ದೀರಿ ? ಇತ್ಯಾದಿ ಪ್ರಶ್ನೆಗೆ 'ಜಗತ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः – अत्रत्येति ।। तस्येदानीमनुत्थानात् । स्वर्गकामाधिकरणपूर्वपक्षदशायां भावाधिकरणस्येवेति भावः ।**

ನೇರವಾಗಿ ಹಾಗೇ ಪೂರ್ವಪಕ್ಷ ಮಾಡಬಹುದು. ಆದರೆ 'ಜಗದ್ವ್ಯಾಪಾರವರ್ಜಂ' ಎಂಬ ಸೂತ್ರದ ಸಿದ್ಧಾಂತವನ್ನು ಇಲ್ಲಿ ವಿವಕ್ಷಿಸಲು ಸಾಧ್ಯವೇ ಇಲ್ಲ. ಏಕೆಂದರೆ ಪೂರ್ವಮೀಮಾಂಸೆಯ ಸ್ವರ್ಗಕಾಮಾಧಿಕರಣದ ಪೂರ್ವಪಕ್ಷದೆಸೆಯಲ್ಲಿ ಭಾವಾರ್ಥಾಧಿಕರಣದ ಸಿದ್ಧಾಂತವನ್ನು ವಿವಕ್ಷಿಸಲು ಹೇಗೆ ಬರುವುದಿಲ್ಲವೋ, ಅದರಂತೆ. ಸ್ವರ್ಗಕಾಮಾಧಿಕರಣದ ಅನಂತರ ಭಾವಾರ್ಥಾಧಿಕರಣವು ಹೊರಟದೆ. ಸ್ವರ್ಗಕಾಮಾಧಿಕರಣದ ಸಿದ್ಧಾಂತವು ಉದಯವಾದ ಮೇಲಷ್ಟೇ ಭಾವಾರ್ಥಾಧಿಕರಣವು ಹೊರಡುತ್ತದೆ. ಹೀಗಿರುವಾಗ ಭಾವಾರ್ಥಾಧಿಕರಣವನ್ನೇ ಅಪೇಕ್ಷಿಸಿ, ಸ್ವರ್ಗಕಾಮಾಧಿಕರಣವನ್ನು ಪ್ರಾರಂಭ ಮಾಡಬಾರದು. ಅದರಂತೆ ಈ ಭೋಕ್ತ್ರಾಪತ್ತ್ಯಧಿಕರಣದಲ್ಲಿ ಮುಕ್ತಜೀವರಿಗೂ ಬ್ರಹ್ಮನಿಗೂ ಭೇದವು ಸಿದ್ಧವಾದ ಮೇಲಷ್ಟೇ ನಾಕನೆಯ ಅಧ್ಯಾಯದ 'ಜಗದ್ವ್ಯಾಪಾರವರ್ಜಂ' ಎಂಬ ಅಧಿಕರಣವು ಹೊರಡಲು ಸಾಧ್ಯ. ಹೀಗಿರುವಾಗ ಈ ಅಧಿಕರಣದ ಪೂರ್ವಪಕ್ಷವನ್ನು ಮಾಡುವಾಗ ಆ ಅಧಿಕರಣದ ಸಿದ್ಧಾಂತವನ್ನು ಅವಲಂಬಿಸಬಾರದು.

**प्रकाशः** – उपचारे बीजमाह – **न ह्यन्यस्येति ।। भाष्येति ।।** ''न ह्यन्यस्य'' इति भाष्ये युक्तेरेवोक्तेरिति भावः ।

ಶ್ರುತಿಗೆ ಔಪಚಾರಿಕವಾಗಿ ಅರ್ಥವನ್ನು ಮಾಡಲು ಕಾರಣವನ್ನು 'ನ ಹ್ಯನ್ಯಸ್ಯ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ನ ಹ್ಯನ್ಯಸ್ಯ' ಎಂಬ ಭಾಷ್ಯದಲ್ಲಿ ಯುಕ್ತಿಯನ್ನು ಹೇಳಿರುವುದರಿಂದ, 'ತತ್ತ್ವಮಸಿ' ಎಂಬ ಶ್ರುತಿಯಿಂದ ಜ್ವಪ್ರತ್ಯಯದ ಶ್ರುತಿಯು ಔಪಚಾರಿಕವೆಂದು ಹೇಳಬಾರದು. ಹಾಗೆ ಹೇಳಿದರೆ 'ನಹಿ ಅನ್ಯಸ್ಯ' ಎಂಬ ಭಾಷ್ಯದಲ್ಲಿ ಹೇಳಲ್ಪಟ್ಟ ಯುಕ್ತಿಯು ಅಯುಕ್ತವಾಗುತ್ತದೆ.

**प्रकाशः** – तदुपलक्षणमस्त्वित्यत आह – **पृथगिति ।।** तत्र श्रुत्यवष्टंभेनैवा भेदपूर्वपक्षकरणादिति भावः ।

ಒಂದು ಹೇಳಿದರೆ ಮತ್ತೊಂದರ ವಿರೋಧವೇನೂ ಬರುವುದಿಲ್ಲವಷ್ಟೇ. ಆಚಾರ್ಯರು ಯುಕ್ತಿಯನ್ನು ಹೇಳಿದರೂ ನಾವು ತತ್ತ್ವಮಸಿ ಶ್ರುತಿಯಿಂದ ಜ್ವಪ್ರತ್ಯಯವನ್ನು ಅಸ್ವರಸ ಮಾಡುತ್ತೇವೆ ಏನು ತಪ್ಪು? ಎಂಬ ಪ್ರಶ್ನೆಗೆ ಪೃಥಗಧಿರಣದಿಂದ ಗತಾರ್ಥತ್ವವು ಬರುತ್ತದೆ ಎಂದು ಮತ್ತೊಂದು ದೋಷವನ್ನು ಹೇಳಿರುತ್ತಾರೆ. ಪೃಥಗಧಿಕರಣದಲ್ಲಿ 'ತತ್ತ್ವಮಸಿ' ಎಂಬ ಶ್ರುತಿಯನ್ನು ಅವಲಂಬಿಸಿಯೇ ಅಭೇದ-ಪೂರ್ವಪಕ್ಷವನ್ನು ಮಾಡಲಾಗಿದೆ. ಆ ಅಧಿಕರಣದಿಂದ ಇದಕ್ಕೆ ಗತಾರ್ಥತ್ವವು ಬರುತ್ತದೆ.

**प्रकाशः** – एतेन ''मुक्तजीवाभिन्नस्यापि कथञ्चिजगत्कारणत्वं निर्वोढुं शक्यम्'' इत्यादिटीका विवृता ।

ಬ್ರಹ್ಮನು ಮುಕ್ತಜೀವನಿಂದ ಅಭಿನ್ನನಾದರೂ ಕೂಡ ಜಗತ್‌ಕಾರಣತ್ವವನ್ನು ಕಥಂಚಿತ್ ನಿರ್ವಹಣೆ ಮಾಡಲು ಬರುತ್ತದೆ. ಮುಕ್ತಜೀವನು ಸರ್ವಕರ್ತೃ ಆಗಿರುವುದರಿಂದ ಬ್ರಹ್ಮನೂ ಕೂಡ ಸರ್ವಕರ್ತೃ ಆಗಬಹುದು. ಅದಕ್ಕೋಸ್ಕರ ಸಂಸಾರಿಯಾದ ಜೀವನಿಂದಲೇ ಅಭೇದವನ್ನು ಹೇಳಬೇಕು ಇತ್ಯಾದಿ ಟೀಕೆಯನ್ನು ವಿವರಣೆ ಮಾಡಿದಂತಾಯಿತು.

**प्रकाशः** –''**द्वितीयेत्विदमुपतिष्ठते । नान्यदिति**'' इति सुधावाक्यं हृदि कृत्वाऽऽह – **द्वितीयस्त्विति ।। च्विप्रत्ययेति ।।** अत एव टीकायां ''यो यथा श्रूयते स तथैवेति व्याप्तेः'' इत्युक्तमिति भावः ।

'ದ್ವಿತೀಯೇತ್ವಿದಮುಪತಿಷ್ಠತೇ । ನಾನ್ಯತ್' ಇತ್ಯಾದಿ ಸುಧಾವಾಕ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು 'ದ್ವಿತೀಯಸ್ತು' ಇತ್ಯಾದಿ ಗ್ರಂಥವು ಹೊರಟಿದೆ. ಚ್ವಿಪ್ರತ್ಯಯ ರೂಪ ಶ್ರುತಿಬಾಧಿತ ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಆದ್ದರಿಂದಲೇ ಟೀಕೆಯಲ್ಲಿ 'ಯೋ ಯಥಾ ಶ್ರೂಯತೇ ಸ ತಥೈವೇತಿ ವ್ಯಾಪ್ತೇಃ' ಎಂದು ಹೇಳಿರುತ್ತಾರೆ.

## ಸಾರ

ವಿಷ್ಣುವಿನ ಜಗತ್‌ಕರ್ತೃತ್ವವು ಯುಕ್ತಿವಿರುದ್ಧವೋ, ಅಲ್ಲವೋ ? ಎಂಬುದನ್ನು ಪ್ರಧಾನವಾಗಿ ಈ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ. 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿ ಪ್ರಕರಣದ ವಾಕ್ಯಶೇಷದಲ್ಲಿ ನದೀ-ಸಮುದ್ರಗಳ ದೃಷ್ಟಾಂತದಿಂದ ಸ್ವರೂಪೈಕ್ಯವನ್ನೇ ಶ್ರುತಿಯಲ್ಲಿ ವಿವಕ್ಷಿಸಬೇಕು. ಅದಕ್ಕನುಸಾರಿಯಾಗಿ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯಲ್ಲೂ ಕೂಡ ಸ್ವರೂಪೈಕ್ಯವನ್ನೇ ವಿವಕ್ಷಿಸಬೇಕು. ಯಾವಾಗ ಸ್ವರೂಪೈಕ್ಯವನ್ನು ಶ್ರುತಿಯು ಹೇಳುತ್ತದೋ, ಆವಾಗ ಜೀವರೆಲ್ಲರೂ ಬ್ರಹ್ಮನಿಂದ ಅಭಿನ್ನರೆಂದು ಸಿದ್ಧವಾಗುತ್ತದೆ. ಜೀವರಾದರೂ ಕೂಡ ಅಸರ್ವಕರ್ತೃಗಳೆಂದು ಸಿದ್ಧವಾಗಿದೆ. ಅವರಿಂದ ಅಭಿನ್ನನಾದ ಬ್ರಹ್ಮನೂ ಕೂಡ ಅಸರ್ವಕರ್ತೃವೇ ಆಗಬೇಕು ಹೊರತು, ಪ್ರಥಮಾಧ್ಯಾಯದಲ್ಲಿ ಸಮರ್ಥನೆ ಮಾಡಿದಂತೆ ಸರ್ವಕರ್ತೃ ಎನಿಸಲಾರನು. ಆದ್ದರಿಂದ ಪ್ರಥಮಾಧ್ಯಾಯದಲ್ಲಿ ಸಮರ್ಥಿಸಲ್ಪಟ್ಟ ವಿಷ್ಣುವಿನ ಜಗತ್ ಕರ್ತೃತ್ವ ಪ್ರತಿಪಾದಕವಾದ ಶ್ರುತಿಗಳಿಗೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ ಎಂಬ ಸಮರ್ಥನೆಯು ಪೂರ್ವಪಕ್ಷಿಗಳ ಉದ್ದೇಶ. ನದೀ-ಸಮುದ್ರಗಳ ದೃಷ್ಟಾಂತವನ್ನು ಹೇಳುವ ವಾಕ್ಯಶೇಷದಲ್ಲಿ ಸ್ಥಾನೈಕ್ಯವು ವಿವಕ್ಷಿತವಾಗಿದೆ ಹೊರತು, ಸ್ವರೂಪೈಕ್ಯವು ವಿವಕ್ಷಿತವಲ್ಲ. ಆದ್ದರಿಂದ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯೂ ಕೂಡ ಸ್ವರೂಪೈಕ್ಯವನ್ನು ಹೇಳುತ್ತಿಲ್ಲ. ಹೊರತಾಗಿ ಸ್ಥಾನತಃ ಐಕ್ಯವನ್ನು ಅಥವಾ ಮತಿಯಿಂದ ಐಕ್ಯವನ್ನಷ್ಟೇ ಹೇಳುತ್ತಿದೆ. ಆದ್ದರಿಂದ ಬ್ರಹ್ಮನು ಅಸರ್ವಕರ್ತೃವಾದ ಜೀವನಿಂದ ಅಭಿನ್ನನಾಗಲಾರ. ಬ್ರಹ್ಮನಿಗೆ ಸರ್ವಕರ್ತೃತ್ವವನ್ನು ಸಮರ್ಥನೆ ಮಾಡುವ ಶ್ರುತಿಗಳಿಗೆ ಅಪ್ರಾಮಾಣ್ಯವೂ ಕೂಡ ಬರುವುದಿಲ್ಲ ಎಂಬ ಸಮರ್ಥನೆಯು ಸಿದ್ಧಾಂತಿಗಳ ಉದ್ದೇಶ.

ಈ ಅಧಿಕರಣದಲ್ಲಿ ಪ್ರಧಾನವಾಗಿ ಮೂರು ಪೂರ್ವಪಕ್ಷಗಳನ್ನು ಮಾಡಲಾಗಿದೆ. ಸಂಸಾರಾವಸ್ಥೆಯಲ್ಲಿ ಅಭಿನ್ನನಾದ ಜೀವನು ಮೋಕ್ಷಾವಸ್ಥೆಯಲ್ಲಿ ಬ್ರಹ್ಮನಿಂದ ಅಭಿನ್ನನಾಗಿರುತ್ತಾನೆ ಎಂಬುದು ಮೊದಲನೆಯ ಪೂರ್ವಪಕ್ಷ.

ಸಂಸಾರಾವಸ್ಥೆಯಲ್ಲಿ ಜೀವನು ಭಿನ್ನನಾಗಿರುತ್ತಾನೆ. ಮೋಕ್ಷಾವಸ್ಥೆಯಲ್ಲಷ್ಟೇ ಬ್ರಹ್ಮನಿಂದ ಅಭಿನ್ನನಾಗಿರುತ್ತಾನೆಂಬುದು ಎರಡನೆಯ ಪೂರ್ವಪಕ್ಷ. ಸಂಸಾರಾವಸ್ಥೆಯಲ್ಲಿ ಭಿನ್ನಾಭಿನ್ನನಾಗಿರುತ್ತಾನೆ. ಮೋಕ್ಷಾವಸ್ಥೆಯಲ್ಲಿ ಕೇವಲ ಅಭಿನ್ನನಾಗಿರುತ್ತಾನೆಂಬುದು ಮೂರನೆಯ ಪೂರ್ವಪಕ್ಷ. ಮೊದಲನೆಯ ಪೂರ್ವಪಕ್ಷದ ಅಭಿಪ್ರಾಯ ಹೀಗಿದೆ- ಸಂಸಾರಾವಸ್ಥೆಯಲ್ಲಿ ಜೀವನು ಬ್ರಹ್ಮನಿಂದ ಭಿನ್ನನಾದರೆ ಮೋಕ್ಷಾವಸ್ಥೆಯಲ್ಲಿ ಬ್ರಹ್ಮನಿಂದ ಅಭಿನ್ನನಾಗಲು ಸಾಧ್ಯವಿಲ್ಲ. ಏಕೆಂದರೆ ಮೊದಲು ಭಿನ್ನವಾದ ಪದಾರ್ಥವು ಕಾಲಾಂತರದಲ್ಲಿ ಅಭಿನ್ನವಾಗಿರುವುದು ಲೋಕದಲ್ಲಿ ಎಲ್ಲಿಯೂ ಕೂಡ ಕಂಡಿಲ್ಲ. 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಮೋಕ್ಷಾವಸ್ಥೆಯಲ್ಲಿ ಜೀವನು ಬ್ರಹ್ಮನಿಂದ ಅಭಿನ್ನನಾಗಿದ್ದಾನೆಂದು ಸ್ಪಷ್ಟವಾಗಿ ಹೇಳುತ್ತಿದೆ. ಆ ಕಾರಣದಿಂದಲೇ ಸಂಸಾರಾವಸ್ಥೆಯಲ್ಲಿಯೂ ಕೂಡ ಜೀವನು ಬ್ರಹ್ಮನಿಂದ ಅಭಿನ್ನನಾಗಿದ್ದಾನೆಂದು ಹೇಳಲೇಬೇಕು. ಹೀಗೆ ಸಂಸಾರಾವಸ್ಥೆಯಲ್ಲಿ ಮತ್ತು ಮೋಕ್ಷಾವಸ್ಥೆಯಲ್ಲಿ ಬ್ರಹ್ಮನು ಜೀವನಿಂದ ಅಭಿನ್ನನನಾಗಿರುವ ಕಾರಣ ಜೀವನು ಅಸರ್ವಕರ್ತೃವು ಆಗಿರುವಂತೆ ಬ್ರಹ್ಮನು ಅಸರ್ವಕರ್ತೃವೇ ಆಗುತ್ತಾನೆ.

ಎರಡನೆಯ ಪೂರ್ವಪಕ್ಷದ ಆಶಯ ಹೀಗಿದೆ - 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯಲ್ಲಿ ಚ್ವಿ ಪ್ರತ್ಯಯವಿದೆ. ಮೊದಲಿಲ್ಲದ ಅನಂತರ ಮಾತ್ರವಿರುವ ಧರ್ಮವನ್ನು ಈ ಪ್ರತ್ಯಯವು ವಿಧಿಸುತ್ತದೆ. 'ದಾಸೀಕೃತಃ' ಎಂಬ ಶಬ್ದವನ್ನು ನೋಡಿದಾಗ ಮೊದಲು ದಾಸರಾಗಿರಲಿಲ್ಲ, ಅನಂತರ ದಾಸರನ್ನಾಗಿ ಮಾಡಿಕೊಂಡ ಎಂಬರ್ಥವು ಹೇಗೆ ದೊರೆಯುತ್ತದೋ, ಅದರಂತೆ 'ಏಕೀಭವಂತಿ' ಎಂಬ ಪದವೂ ಕೂಡ ಮೊದಲು ಐಕ್ಯವಿರಲಿಲ್ಲ. ಅನಂತರ ಐಕ್ಯವು ಉಂಟಾಯಿತೆಂದು ಹೇಳುತ್ತಿದೆ. ಆದ್ದರಿಂದ ಸಂಸಾರಾವಸ್ಥೆಯಲ್ಲಿ ಐಕ್ಯವು ಸರ್ವಥಾ ಇರಲಿಲ್ಲ. ಮೋಕ್ಷಾವಸ್ಥೆಯಲ್ಲಿ ಐಕ್ಯವು ಉಂಟಾಯಿತು. ಭಾಷ್ಯದಲ್ಲಿ 'ನ ಹಿ ಅನ್ಯಸ್ಯ ಅನ್ಯತ್ವಂ ಯುಜ್ಯತೇ' ಎಂಬ ಮಾತು ಮೊದಲನೆಯ ಪೂರ್ವಪಕ್ಷದ ಯುಕ್ತಿಯನ್ನಾಗಿ ವಿವಕ್ಷಿಸಿ ಹೊರಟಿದೆ. ಅನುವ್ಯಾಖ್ಯಾನದಲ್ಲಿರುವ 'ನಾನ್ಯದನ್ಯತ್ವಮಾಪನ್ನಂ ಕ್ವಚಿದ್ದೃಷ್ಟಂ ಕಥಂಚನ' ಎಂಬ ವಾಕ್ಯವು ಎರಡನೆಯ ಪೂರ್ವಪಕ್ಷವನ್ನು ನಿರಾಕರಣೆ ಮಾಡಲು ಸಿದ್ಧಾಂತಯುಕ್ತಿಯನ್ನಾಗಿ ವಿವಕ್ಷಿಸಿ ಹೊರಟಿದೆ.

## ಮೂರು ಬಗೆಯ ಪೂರ್ವಪಕ್ಷಗಳಲ್ಲಿ ವೈವಿಧ್ಯ

### तात्पर्यचन्द्रिका

**तृतीयस्तु पूर्वं भेदाभेदौ । मुक्तौ तु केवलाभेदः । एवञ्च च्विप्रत्ययो युक्तः । पूर्वं केवलाभेदाभावात् ।**

ಮೂರನೆಯ ಪೂರ್ವಪಕ್ಷ ಹೀಗಿದೆ - ಸಂಸಾರಾವಸ್ಥೆಯಲ್ಲಿ ಜೀವನಿಗೂ ಬ್ರಹ್ಮನಿಗೂ ಭೇದಾಭೇದ ಇರುತ್ತದೆ. ಮೋಕ್ಷಾವಸ್ಥೆಯಲ್ಲಿ ಕೇವಲ ಅಭೇದ ಇರುತ್ತದೆ. ಹೀಗೊಪ್ಪಿದ್ದರಿಂದ 'ಏಕೀಭವಂತೀ' ಎಂಬಲ್ಲಿರುವ ಚ್ವಿ ಪ್ರತ್ಯಯವು ಅಭೂತತದ್ಭಾವಾರ್ಥದಲ್ಲಿ ಯುಕ್ತವಾಗುತ್ತದೆ. ಸಂಸಾರಾವಸ್ಥೆಯಲ್ಲಿ ಅತ್ಯಂತ ಭೇದ ಇರುವುದಿಲ್ಲ. ಅದನ್ನು ಮೋಕ್ಷಾವಸ್ಥೆಯಲ್ಲಿ ಸಂಪಾದನೆ ಮಾಡುವುದರಿಂದ ಅಭೂತತದ್ಭಾವಾರ್ಥದಲ್ಲಿ ಚ್ವಿ ಪ್ರತ್ಯಯವನ್ನು ಕೂಡಿಸಬಹುದು.

**''न ह्यन्यस्य'' इत्यादियुक्तिविरोधश्च न । पूर्वमप्यभेदस्य सत्त्वात् ।**

'ನ ಹನ್ಯಸ್ಯ ಅನ್ಯತ್ವಂ ಯುಜ್ಯತೇ' ಎಂಬ ಯುಕ್ತಿಯ ವಿರೋಧಕ್ಕೂ ಅವಕಾಶವಿಲ್ಲ. ಮೋಕ್ಷಾವಸ್ಥೆಯಲ್ಲಿ ಅಭೇದವಿದ್ದರೆ ಸಂಸಾರಾವಸ್ಥೆಯಲ್ಲಿ ಭೇದವಿರಲು ಸಾಧ್ಯವಿಲ್ಲ ಎಂಬುದು ಯುಕ್ತಿಯ ಅಭಿಪ್ರಾಯ. ನಾವು ಸಂಸಾರಾವಸ್ಥೆಯಲ್ಲಿ ಭೇದಾಭೇದವನ್ನು ಒಪ್ಪಿರುವುದರಿಂದ ಅಭೇದವನ್ನು ವಿವಕ್ಷಿಸಿ ಮೋಕ್ಷಾವಸ್ಥೆಯಲ್ಲೂ ಕೂಡ ಅಭೇದವನ್ನು ಹೇಳಬಹುದು. ಆದ್ದರಿಂದ 'ನ ಹ್ಯನ್ಯಸ್ಯ ಅನ್ಯತ್ವಂ ಯುಜ್ಯತೇ' ಎಂಬ ಯುಕ್ತಿಯ ವಿರೋಧವು ಬರುವುದಿಲ್ಲ.

**एतं वा पक्षमाश्रित्य भाष्यानुव्याख्याने प्रवृत्ते । तत्र भाष्ये च्विप्रत्ययेन पूर्वं भेदस्य सिद्धत्वात् पूर्वपक्षानुपयुक्तत्वाच्चाभेद एव साधितः ।**

ಮೂರನೆಯ ಈ ಪೂರ್ವಪಕ್ಷವನ್ನು ಆಶ್ರಯಿಸಿ, ಭಾಷ್ಯ ಹಾಗೂ ಅನುವ್ಯಾಖ್ಯಾನಗಳು ಹೊರಟಿವೆ. ಭಾಷ್ಯದಲ್ಲಿ 'ನ ಹ್ಯನ್ಯಸ್ಯ ಅನ್ಯತ್ವಂ ಯುಜ್ಯತೇ' ಎಂಬ ವಾಕ್ಯವು ಸಂಸಾರಾವಸ್ಥೆಯಲ್ಲಿ ಭೇದಾಭೇದವನ್ನು ವಿವಕ್ಷಿಸಿಯೇ ಹೊರಟಿದೆ. ಏಕೆಂದರೆ 'ಚ್ವಿ' ಪ್ರತ್ಯಯದಿಂದ ಮೊದಲು ಭೇದವಿದೆ ಎಂದು ತಿಳಿಯುತ್ತದೆ. ಜೀವರಿಗೂ ಬ್ರಹ್ಮನಿಗೂ ಇರುವ ಭೇದವನ್ನು ಹೇಳುವುದರಿಂದ ಪೂರ್ವಪಕ್ಷಕ್ಕೆ ಯಾವುದೇ ಉಪಯೋಗವೂ ಇರುವುದಿಲ್ಲ. ಈ ಎರಡು ಕಾರಣಗಳಿಂದ ಭೇದವನ್ನು ಆಚಾರ್ಯರು ಸ್ಪಷ್ಟವಾಗಿ ಸಮರ್ಥನೆ ಮಾಡಿರುವುದಿಲ್ಲ. ಅಭೇದವನ್ನಷ್ಟೇ 'ನ ಹನ್ಯಸ್ಯ ಅನ್ಯತ್ವಂ ಯುಜ್ಯತೇ'ಎಂಬ ವಾಕ್ಯದಿಂದ ಸಮರ್ಥನೆ ಮಾಡಿದ್ದಾರೆ. 'ಚ್ವಿ' ಪ್ರತ್ಯಯದಿಂದ ಭೇದವು ಸುಲಭವಾಗಿ ತಿಳಿಯುತ್ತದೆ. ಯುಕ್ತಿಯಿಂದ ಅಭೇದವು ಸಿದ್ಧವಾಗುತ್ತಿದೆ. ಆದ್ದರಿಂದ ಭಾಷ್ಯಕಾರರಿಗೆ ಭೇದಾಭೇದವು ವಿವಕ್ಷಿತವಾಗಿದೆ ಎಂದು ಸ್ಪಷ್ಟವಾಯಿತು.

**अनुव्याख्यानेऽपि पूर्वं भिन्नाभिन्नस्यापि पश्चात्केवलाभेदो नास्तीति भावेन ''नान्यदन्यत्वम्'' इत्युक्तम् ।**

ಅನುವ್ಯಾಖ್ಯಾನದಲ್ಲಿಯೂ ಕೂಡ ಸಂಸಾರಾವಸ್ಥೆಯಲ್ಲಿ ಜೀವನಿಗೂ ಬ್ರಹ್ಮನಿಗೂ ಭೇದಾಭೇದವಿದ್ದರೂ ಕೂಡ ಮೋಕ್ಷಾವಸ್ಥೆಯಲ್ಲಿ ಕೇವಲ ಅಭೇದವು ಬರುವುದಿಲ್ಲ. ಈ ಅಭಿಪ್ರಾಯದಿಂದ 'ನಾನ್ಯದನ್ಯತ್ವಮ್' ಎಂಬ ವಾಕ್ಯವು ಹೊರಟಿದೆ. (ಅಭಿಪ್ರಾಯ ಹೀಗಿದೆ - ಮೊದಲು ಭೇದವಿದ್ದರೆ ಅನಂತರ ಅಭೇದ ಹೇಗೆ ಬರುವುದಿಲ್ಲವೋ ? ಅದೇ ರೀತಿಯಾಗಿ ಮೊದಲು ಭೇದಾಭೇದವಿದ್ದರೂ ಕೂಡ ಅನಂತರ ಅಭೇದವು ಬರುವುದಿಲ್ಲ. ಆದ್ದರಿಂದ ಬ್ರಹ್ಮನಿಗೂ, ಜೀವನಿಗೂ ಸಂಸಾರಾವಸ್ಥೆಯಲ್ಲಿ ಭೇದಾಭೇದವಿದೆ. ಮೋಕ್ಷಾವಸ್ಥೆಯಲ್ಲಿ ಅಭೇದವಿದೆ ಎಂಬ ಪಕ್ಷವು ಅಸಾಧುವಾಗಿದೆಯೆಂದು ತಿಳಿಸಲು 'ನಾನ್ಯದನ್ಯತ್ವಮಾಪನ್ನಂ ಕ್ವಚಿದ್ದೃಷ್ಟಂ ಕಥಂಚನ' ಎಂಬುದಾಗಿ ಕಥಂಚನ ಎಂಬ ಪದದಿಂದ ಈ ಸ್ವಾರಸ್ಯವು ತಿಳಿಯುತ್ತದೆ.)

**अत्र च पक्षत्रये प्रत्येकं पुनः पक्षत्रयं सम्भवति ।**

ಇಲ್ಲಿಯ ತನಕ ಒಟ್ಟು ಮೂರು ಬಗೆಯ ಪೂರ್ವಪಕ್ಷಗಳನ್ನು ತೋರಿಸಿದ್ದಾಯಿತು. ೧. ಸಂಸಾರದೆಶೆಯಲ್ಲಿ ಬ್ರಹ್ಮನಿಂದ ಅಭಿನ್ನನಾದ ಜೀವನು ಮೋಕ್ಷಾವಸ್ಥೆಯಲ್ಲಿ ಬ್ರಹ್ಮನಿಂದ ಅಭಿನ್ನನಾಗುತ್ತಾನೆ.

೨. ಸಂಸಾರಾವಸ್ಥೆಯಲ್ಲಿ ಬ್ರಹ್ಮನಿಂದ ಭಿನ್ನನಾದ ಜೀವನು ಮೋಕ್ಷಾವಸ್ಥೆಯಲ್ಲಿ ಅಭಿನ್ನನಾಗುತ್ತಾನೆ.

೩. ಸಂಸಾರಾವಸ್ಥೆಯಲ್ಲಿ ಭಿನ್ನಾಭಿನ್ನನಾದ ಜೀವನು ಮೋಕ್ಷಾವಸ್ಥೆಯಲ್ಲಿ ಅಭಿನ್ನನಾಗುತ್ತಾನೆ ಎಂದು. ಈ ಮೂರು ಪೂರ್ವಪಕ್ಷಗಳೂ ಕೂಡ ಪ್ರತ್ಯೇಕ ಪ್ರತ್ಯೇಕವಾಗಿ ಮೂರು-ಮೂರು ವಿಭಾಗಗಳನ್ನು ಹೊಂದಿವೆ.

**एकपदलक्षणयैव विरोधपरिहारात् चिन्मात्राचिन्मात्रस्य भेदाप्रसक्त्यैव विरोधपरिहारात् चिन्मात्राचिन्मात्रस्य भेदा प्रसक्त्यैक्योपदेशवैयर्थ्याच्चैकपद-लक्षणाया एकत्रैव विशिष्टरूपत्यागेन ब्रह्मणः प्रत्यक्षसिद्धासर्वकर्तृजीवसालक्षण्येन वा जीवस्य श्रुतिसिद्धसर्वकर्तृब्रह्मसालक्षण्येन वा मिथ्यावादिरीत्या पदद्वयलक्षणया उभयत्रापि विशिष्टरूपत्यागेन चिन्मात्रैक्येन वेति ।**

'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತೀ' ಎಂಬ ಶ್ರುತಿಯಲ್ಲಿ ವಿಜ್ಞಾನಮಯ ಪದವು ಜೀವನನ್ನು, ಅವ್ಯಯ ಎಂಬ ಪದವು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿದೆ. ಈ ಎರಡು ಪದಗಳು ವಿಶಿಷ್ಟಪದಾರ್ಥಗಳನ್ನೇ ಪ್ರತಿಪಾದನೆ ಮಾಡುತ್ತಿವೆ. ಎರಡು ವಿಶಿಷ್ಟ ಪದಾರ್ಥಗಳಿಗೆ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. ಹಾಗೇ ಹೇಳಿದರೆ ಪರಸ್ಪರ ವಿರೋಧ ಬರುತ್ತದೆ. ಇದರ ಪರಿಹಾರಕ್ಕಾಗಿ ಲಕ್ಷಣಾವನ್ನು ಆಶ್ರಯಿಸಬೇಕು. ಆದರೆ ಒಂದು ಪದಕ್ಕೆ ಲಕ್ಷಣಾವನ್ನು ಆಶ್ರಯಿಸುವುದರಿಂದಲೇ ವಿರೋಧವು ಪರಿಹಾರವಾಗಬೇಕಾದರೆ ವಿಜ್ಞಾಯಮಯ ಹಾಗೂ ಅವ್ಯಯ ಎಂಬೆರಡು ಪದಗಳಿಗೂ ಲಕ್ಷಣಾವನ್ನು ಆಶ್ರಯಿಸುವುದು ಅನಾವಶ್ಯಕ. ಮತ್ತು ಎರಡು ಪದಗಳಿಗೂ ಲಕ್ಷಣಾವನ್ನು ಆಶ್ರಯಿಸಿದರೆ ಒಂದು ಚಿನ್ಮಾತ್ರಕ್ಕೆ ಇನ್ನೊಂದು ಚಿನ್ಮಾತ್ರದಿಂದ ಐಕ್ಯವನ್ನು ಸಮರ್ಥನೆ ಮಾಡಿದಂತಾಗುತ್ತದೆ. ಯಾವಾಗ ಭೇದವು ಪ್ರಸಕ್ತವಾಗುತ್ತದೋ, ಆವಾಗ ಮಾತ್ರ ಐಕ್ಯವನ್ನು ವಿಧಾನ ಮಾಡಬೇಕು. ಚಿನ್ಮಾತ್ರದಿಂದ ಚಿನ್ಮಾತ್ರಕ್ಕೆ ಭೇದವು ಪ್ರಸಕ್ತವೇ ಆಗಿಲ್ಲ. ಹೀಗಿರುವಾಗ ಐಕ್ಯೋಪದೇಶವು ವ್ಯರ್ಥವಾಗುತ್ತದೆ. ಈ ಎರಡು ಕಾರಣಗಳಿಂದ ವಿಜ್ಞಾನಮಯ ಮತ್ತು ಅವ್ಯಯ ಎಂಬೆರಡು ಪದಗಳ ನಡುವೆ ಒಂದು ಪದಕ್ಕೆ ಮಾತ್ರ ಲಕ್ಷಣಾವನ್ನು ಆಶ್ರಯಿಸಬೇಕೆಂದು ನಿರ್ಣಯವಾಗುತ್ತದೆ. ಅವ್ಯಯಪದಕ್ಕೆ ಲಕ್ಷಣಾವನ್ನು ಆಶ್ರಯಿಸಿ ವಿಶಿಷ್ಟನಾದ ಜೀವನಿಂದ ಶುದ್ಧಬ್ರಹ್ಮನಿಗೆ ಐಕ್ಯವನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ ಎಂದು ಹೇಳಬೇಕು.

ಜೀವನಾದರೂ ಪ್ರತ್ಯಕ್ಷದಿಂದ ಅಸರ್ವಕರ್ತೃ ಎಂದು ಸಿದ್ಧವಾಗಿದ್ದಾನೆ. ಅಂಥ ಅಸರ್ವಕರ್ತೃವೆನಿಸಿದ ಜೀವನ ಸಾಲಕ್ಷಣ್ಯವನ್ನು ಬ್ರಹ್ಮನಿಗೆ ಹೇಳಿದಂತಾಗುತ್ತದೆ. ಅಥವಾ ವಿಜ್ಞಾನಮಯ ಎಂಬ ಪದಕ್ಕೆ ಲಕ್ಷಣಾವನ್ನು ಆಶ್ರಯಿಸಿ ಅವ್ಯಯಪದಕ್ಕೆ ಸರ್ವಕರ್ತೃತ್ವವಿಶಿಷ್ಟನಾದ ಬ್ರಹ್ಮ ಎಂಬ ಅರ್ಥವನ್ನು ಹೇಳಿದರೆ ಜೀವನಿಗೆ ಬ್ರಹ್ಮಸಾಲಕ್ಷಣ್ಯವನ್ನು ಹೇಳಿದಂತಾಗುತ್ತದೆ. ಶ್ರುತಿಗಳಿಂದ ಸರ್ವಕರ್ತೃತ್ವೇನ ಬ್ರಹ್ಮನು ಸಿದ್ಧನಾಗಿದ್ದಾನೆ. ಇಂಥ ಬ್ರಹ್ಮನಿಂದ ಜೀವನು ಅಭಿನ್ನನಾಗಿದ್ದಾನೆಂದು ಹೇಳಿದಂತಾಯಿತು. ಅಥವಾ ಮಿಥ್ಯಾವಾದಿಗಳಾದ ಅದ್ವೈತಿಗಳು ಹೇಳುವಂತೆ ವಿಜ್ಞಾನಮಯ ಹಾಗೂ ಅವ್ಯಯ ಎಂಬೆರಡು ಪದಗಳಿಗೂ ಲಕ್ಷಣಾವನ್ನು ಆಶ್ರಯಿಸಿ ಎರಡೂ ಕಡೆ ವಿಶಿಷ್ಟರೂಪವಾದ ಅರ್ಥವನ್ನು ತ್ಯಾಗಮಾಡಿ, ಚಿನ್ಮಾತ್ರಗಳಿಗೆ ಐಕ್ಯವನ್ನು ಶ್ರುತಿ ಹೇಳುತ್ತಿದೆ ಎಂದು ಅರ್ಥೈಸಬೇಕು.

**तत्राद्ये लक्षणस्यासम्भवः । द्वितीयेऽतिव्याप्तिः । सदापि शुद्धाभेद इति पक्षे संसारिणि मुक्तावेवाभेद इति पक्षे मुक्तेः पूर्वं भेदाभेदाविति पक्षेऽपि मुक्तेऽभेदांशमादाय संसारिणि चातिव्याप्तेः ।**

ಅಸರ್ವಕರ್ತೃವಾದ ಜೀವನ ಸಾಲಕ್ಷಣ್ಯವನ್ನು ಬ್ರಹ್ಮನಿಗೆ ಹೇಳುವ ಮೊದಲನೆಯ ಪಕ್ಷದಲ್ಲಿ ಬ್ರಹ್ಮನ ಲಕ್ಷಣಕ್ಕೆ ಅಸಂಭವದೋಷವು ಬರುತ್ತದೆ. ಸರ್ವಕರ್ತೃತ್ವವು ಬ್ರಹ್ಮನ ಲಕ್ಷಣವೆಂದು ನಿರ್ಣಯವಾಗಿದೆ. ಆದರೆ ಅಸರ್ವಕರ್ತೃವೆನಿಸಿದ ಜೀವನಿಂದ ಅಭಿನ್ನನಾದ ಮೇಲೆ ಬ್ರಹ್ಮನಲ್ಲಿ ಸರ್ವಕರ್ತೃತ್ವವು ಅಸಂಭಾವಿತವಾಗುತ್ತದೆ.

ಜೀವನಿಗೆ ಬ್ರಹ್ಮಸಾಲಕ್ಷಣ್ಯವನ್ನು ಹೇಳುವ ಎರಡನೆಯ ಪಕ್ಷದಲ್ಲಿ ಅತಿವ್ಯಾಪ್ತಿದೋಷವು ಪ್ರಾಪ್ತವಾಗುತ್ತದೆ. ಹಿಂದೆ ಮಾಡಿದ ಮೂರು ಬಗೆಯ ಪೂರ್ವಪಕ್ಷಗಳಲ್ಲಿ ಪ್ರತಿಯೊಂದು ಪೂರ್ವಪಕ್ಷಗಳಲ್ಲಿಯೂ ವಿಭಿನ್ನರೀತಿಯಲ್ಲಿ ಅತಿವ್ಯಾಪ್ತಿದೋಷವನ್ನು ತಿಳಿಯಬೇಕು.

೧. ಮೊದಲನೆಯ ಪೂರ್ವಪಕ್ಷದಲ್ಲಿ ಜೀವನು ಸಂಸಾರಾವಸ್ಥೆಯಲ್ಲಿಯೂ ಕೂಡ ಬ್ರಹ್ಮನಿಂದ ಅಭಿನ್ನನಾಗಿದ್ದಾನೆ ಎಂದು ಒಪ್ಪಲಾಗಿದೆ. ಆವಾಗ ಸಂಸಾರಿಯಾದ ಜೀವನಲ್ಲಿ ಬ್ರಹ್ಮನ ಸರ್ವಕರ್ತೃತ್ವವೆಂಬ ಲಕ್ಷಣವು ಬರುವುದರಿಂದ ಅತಿವ್ಯಾಪ್ತಿಯು ಬಂದಂತಾಯಿತು.

೨. ಸಂಸಾರಾವಸ್ಥೆಯಲ್ಲಿ ಭೇದವಿರುತ್ತದೆ. ಮೋಕ್ಷಾವಸ್ಥೆಯಲ್ಲಷ್ಟೇ ಅಭೇದವಿರುತ್ತದೆ ಎಂಬ ಎರಡನೆಯ ಪೂರ್ವಪಕ್ಷದಲ್ಲಿ ಮುಕ್ತನಾದ ಜೀವನಲ್ಲಿಯೇ ಅತಿವ್ಯಾಪ್ತಿ ಬರುತ್ತದೆ. ಮುಕ್ತನಾದ ಜೀವನು ಅಭಿನ್ನನಾಗಿರುವ ಕಾರಣ ಬ್ರಹ್ಮನಲ್ಲಿರುವ ಸರ್ವಕರ್ತೃತ್ವಗುಣವು ಮುಕ್ತಜೀವನಲ್ಲಿ ಬರುತ್ತದೆ.

೩. ಮುಕ್ತಿಯ ಮೊದಲು ಭೇದಾಭೇದವಿದೆಯೆಂಬ ಮೂರನೆಯ ಪೂರ್ವಪಕ್ಷದಲ್ಲಿ ಮುಕ್ತಜೀವ ಹಾಗೂ ಸಂಸಾರಿಜೀವ ಇಬ್ಬರಲ್ಲಿಯೂ ಅತಿವ್ಯಾಪ್ತಿ ಬರುತ್ತದೆ. ಮುಕ್ತಜೀವನಲ್ಲಿ ಬ್ರಹ್ಮನಿಂದ ಅತ್ಯಂತ ಅಭೇದವೇ ಇರುವುದರಿಂದ ಬ್ರಹ್ಮನಲ್ಲಿರುವ ಸರ್ವಕರ್ತೃತ್ವವು ಬರುತ್ತದೆ

ಎಂದು ಅತಿವ್ಯಾಪ್ತಿ. ಸಂಸಾರಿಜೀವನಲ್ಲಿ ಬ್ರಹ್ಮನಿಂದ ಭೇದಾಭೇದವಿರುವ ಪ್ರಯುಕ್ತ ಕೇವಲ ಅಭೇದಾಂಶವನ್ನು ವಿವಕ್ಷಿಸಿ, ಬ್ರಹ್ಮನ ಸರ್ವಕರ್ತೃತ್ವಗುಣವು ಬರುತ್ತದೆ ಎಂದು ಅತಿವ್ಯಾಪ್ತಿ.

**तृतीयेऽपि सत्यं कर्तृत्वमसम्भवि । असत्यं तु प्रधानादावतिव्याप्तम् । सिद्धान्तिनोऽनिष्टं च ।**

ಇನ್ನು ಮಿಥ್ಯಾವಾದಿಗಳು ಹೇಳುವಂತೆ ವಿಜ್ಞಾನಮಯ ಹಾಗೂ ಅವ್ಯಯ ಎಂಬೆರಡು ಪದಗಳಿಗೂ ಲಕ್ಷಣಾವನ್ನು ಒಪ್ಪಿ, ಚಿನ್ಮಾತ್ರೈಕ್ಯವನ್ನು ಹೇಳಬೇಕೆಂಬ ಮೂರನೆಯ ಪಕ್ಷದಲ್ಲಿ ಹೀಗೆ ವಿಕಲ್ಪ ಮಾಡುತ್ತೇವೆ - ಬ್ರಹ್ಮನಲ್ಲಿರುವ ಸರ್ವಕರ್ತೃತ್ವ ಎಂಬ ಗುಣವು ಸತ್ಯವೋ, ಅಥವಾ ಸುಳ್ಳೋ ? ಒಂದು ವೇಳೆ ಸತ್ಯವಾದರೆ ಬ್ರಹ್ಮನಲ್ಲಿ ಯಾವುದೇ ಗುಣಗಳಿಲ್ಲವೆಂದು ಒಪ್ಪಿರುವುದರಿಂದ ಅಸಂಭವದೋಷ ಬರುತ್ತದೆ. ಮಿಥ್ಯಾಭೂತವಾದ ಸರ್ವಕರ್ತೃತ್ವವು ಪ್ರಧಾನ, ಜೀವ ಇವರಲ್ಲಿಯೂ ಕೂಡ ಇರುತ್ತದೆ. ಆದ್ದರಿಂದ ಸರ್ವಕರ್ತೃತ್ವವೆಂಬ ಬ್ರಹ್ಮಲಕ್ಷಣಕ್ಕೆ ಪ್ರಧಾನಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಸಿದ್ಧಾಂತಿಗಳಿಗೆ ಮಿಥ್ಯಾಭೂತವಾದ ಸರ್ವಕರ್ತೃತ್ವವು ಅನಿಷ್ಟವೂ ಆಗಿದೆ.

**एतदेव पक्षत्रयमभिप्रेत्य टीकायां ''जगत्कारणत्वादीश्वरैकनिष्ठं न सम्भवति'' इत्युक्तम् ।**

ಈ ಮೂರು ಬಗೆಯ ಪಕ್ಷಗಳನ್ನು ಮನಸ್ಸಿಲ್ಲಿಟ್ಟುಕೊಂಡು ಟೀಕೆಯಲ್ಲಿ 'ಜಗತ್ಕಾರಣತ್ವಾದೀಶ್ವರೈಕನಿಷ್ಠಂ ನ ಸಂಭವತಿ' ಜಗತ್ಕಾರಣತ್ವವು ಕೇವಲ ಈಶ್ವರನಲ್ಲಿ ಇರಲಾರದು ಎಂಬ ವಾಕ್ಯವು ಹೊರಟಿದೆ.

**एवञ्च ''उभयगतविरुद्धधर्मत्यागेन'' इति टीकावाक्य उपरितनो वा शब्दोऽनुषंजनीयः ।**

ಆದ್ದರಿಂದ 'ಉಭಯಗತವಿರುದ್ಧಧರ್ಮತ್ಯಾಗೇನ' ಎಂಬ ಟೀಕಾವಾಕ್ಯದಲ್ಲಿ ಮುಂದಿರುವ 'ವಾ' ಶಬ್ದವನ್ನು ಅನುಷಂಗ ಮಾಡಿಕೊಳ್ಳಬೇಕು. ಆವಾಗ ಬ್ರಹ್ಮನಲ್ಲಿರುವ ಧರ್ಮವನ್ನು ತ್ಯಾಗ ಮಾಡುವಿಕೆ ಎಂಬ ಮೊದಲನೆಯ ಪಕ್ಷವು ಜೀವನಲ್ಲಿರುವ ಧರ್ಮವನ್ನು ತ್ಯಾಗಮಾಡುವಿಕೆ ಎಂಬ ಎರಡನೆಯ ಪಕ್ಷವು ಎರಡೂ ಕಡೆ ಇರುವ ವಿರುದ್ಧಧರ್ಮಗಳನ್ನು ತ್ಯಾಗಮಾಡುವಿಕೆ ಎಂಬ ಮೂರನೆಯ ಪಕ್ಷವು ಟೀಕಾವಾಕ್ಯದಿಂದಲೇ ಹೇಳಿದಂತಾಗುತ್ತದೆ.

**(यद्वा तत्राद्यद्वितीययोः ''उभयगतविरुद्धधर्मत्यागेन'' इति टीकायां ब्रह्मणः सर्वकर्तृत्वं जीवस्य तु तन्नेति व्यवस्थात्याग एवाभिप्रेतः । ननु मिथ्यावादिरीत्योभयत्र विशिष्टरूपत्यागः । तृतीये तु ''जीवस्येश्वरसालक्षण्यग्रहणेन**

**वेश्वरस्य जीवसालक्षण्यग्रहणेन वा'' इति टीकायामन्यतरपरिशेषमात्रमभिप्रेतम् । न त्वेकगतधर्मत्यागः ।)**

ಅಥವಾ 'ಉಭಯಗತವಿರುದ್ಧರ್ಮತ್ಯಾಗೇನ' ಎಂಬ ಟೀಕೆಯಲ್ಲಿರುವ ವಾಕ್ಯವನ್ನು ಮೂರು ಪಕ್ಷಗಳಲ್ಲಿಯೂ ಕೂಡಿಸಬಹುದು. ಬ್ರಹ್ಮನಿಗೆ ಮಾತ್ರ ಸರ್ವಕರ್ತೃತ್ವವಿದೆ. ಜೀವನಿಗಿಲ್ಲ ಎಂಬ ವ್ಯವಸ್ಥೆಯ ತ್ಯಾಗವನ್ನು ಪ್ರಥಮಪಕ್ಷ ಹಾಗೂ ದ್ವಿತೀಯ ಪಕ್ಷಗಳಲ್ಲಿ ವಿವಕ್ಷಿಸಬೇಕು. ಉಭಯಗತ-ವಿರುದ್ಧರ್ಮತ್ಯಾಗವನ್ನು ಮೂರನೆಯ ಪಕ್ಷದಲ್ಲಿ ಕಂಠತಃ ಹೇಳಬಹುದು. 'ಪರೇಽವ್ಯಯೇ' ಇತ್ಯಾದಿ ವಾಕ್ಯದಲ್ಲಿ ಅವ್ಯಯ ಪದದಿಂದ ಸರ್ವಕರ್ತೃತ್ವವಿಶಿಷ್ಟನಾದ ಬ್ರಹ್ಮ ಎಂಬರ್ಥವನ್ನು ಬಿಟ್ಟಿದ್ದೇವೆ. 'ವಿಜ್ಞಾನಮಯಃ' ಎಂಬಲ್ಲಿ ಅಸರ್ವಕರ್ತೃತ್ವವಿಶಿಷ್ಟನಾದ ಜೀವೆಂಬರ್ಥವನ್ನೂ ಕೂಡ ಬಿಡಲಾಗಿದೆ. ಹೀಗೆ ಮೂರನೆಯ ಪಕ್ಷದಲ್ಲಿ ಉಭಯಗತವಿರುದ್ಧಧರ್ಮಗಳನ್ನು ತ್ಯಾಗ ಮಾಡಲಾಗಿದೆ. ಬ್ರಹ್ಮನಿಗೆ ಜೀವನ ಸಾಲಕ್ಷಣ್ಯವನ್ನು ಪ್ರಥಮಪಕ್ಷದಲ್ಲಿ ಹೇಳಲಾಗಿದೆ. ಜೀವನಿಗೆ ಬ್ರಹ್ಮನ ಸಾಲಕ್ಷಣ್ಯವನ್ನು ಎರಡನೆಯ ಪಕ್ಷದಲ್ಲಿ ಹೇಳಲಾಗಿದೆ. ಎರಡು ಪಕ್ಷಗಳಲ್ಲಿ ಸರ್ವಕರ್ತೃತ್ವಾದಿಗಳು ಬ್ರಹ್ಮನಿಗೆ ಮಾತ್ರ ಜೀವನಿಗಿರುವುದಿಲ್ಲ ಎಂಬ ವ್ಯವಸ್ಥೆಯು ನಾಶವಾಯಿತು. ಮೂರನೆಯ ಪಕ್ಷದಲ್ಲಿ 'ಜೀವಸ್ಯ ಈಶ್ವರಸಾಲಕ್ಷಣ್ಯಗ್ರಹಣೇನ ವಾ ಈಶ್ವರಸ್ಯ ಜೀವಸಾಲಕ್ಷಣ್ಯಗ್ರಹಣೇನ ವಾ' ಎಂಬ ಟೀಕೆಯು ಅನ್ಯತರಪರಿಶೇಷಾಭಿಪ್ರಾಯದಿಂದಷ್ಟೇ ಹೊರಟಿದೆ ಹೊರತು, ಸರ್ವಕರ್ತೃತ್ವವಾಗಲೀ, ಅಸರ್ವಕರ್ತೃತ್ವವಾಗಲೀ ಬಿಡಬೇಕೆಂಬ ಉದ್ದೇಶದಿಂದಲ್ಲ. ಎರಡರಲ್ಲಿ ಎರಡು ಉಳಿದರೆ ಸಾಕು ಎಂದಭಿಪ್ರಾಯ.

**पूर्वपक्षोपसंहारटीकायां ''परमार्थत इत्युक्तिरपि तात्त्विकाभेदेनाव्यवस्था चेत्काल्पनिकभेदेन व्यवस्था किं न स्यादिति शङ्कायां परमार्थतो ब्रह्मैव कारणं नतु जीव इति सिद्धान्तहानिरिति समाधातुम् । नतु मिथ्यावादिप्रक्रियया व्यवहारतो ब्रह्मैव कर्तृ न जीव इति व्यवस्थासिद्धावपि परमार्थतः सा न सिध्यतीति वक्तुम् । प्रस्तुतानुपयोगित्वात् ।**

ಪೂರ್ವಪಕ್ಷವನ್ನು ಉಪಸಂಹಾರ ಮಾಡುವ ಟೀಕೆಯಲ್ಲಿ 'ಪರಮಾರ್ಥತಃ' ಎಂದು ಹೇಳಿದ್ದರಿಂದ ಈಶ್ವರನೇ ಜಗತ್ಕರ್ತಾ ಎಂಬ ವ್ಯವಸ್ಥೆಯು ಪಾರಮಾರ್ಥಿಕವಾಗಿ ಯುಕ್ತವಾಗುವುದಿಲ್ಲ. ವ್ಯವಹಾರಿಕವಾಗಿ ಸಿದ್ಧವಾಗುತ್ತದೆ ಎಂದು ಹೇಳಿದಂತೆ ಕಾಣಿಸುತ್ತದೆ. ಹೀಗೆ ಹೇಳಿದರೆ ಪ್ರಕೃತಕ್ಕೆ ಉಪಯೋಗವೇ ಆಗುವುದಿಲ್ಲ. ಹೀಗೆ ಉಪಸಂಹಾರ ಮಾಡುವುದರಿಂದ ಯಾವುದೇ ಪ್ರಯೋಜನವಿರುವುದಿಲ್ಲ. ಆದರೂ ಕೂಡ 'ಪರಮಾರ್ಥತಃ' ಎಂದು ಏಕೆ ಬರೆದಿದ್ದಾರೆ ಎಂದರೆ ಪಾರಮಾರ್ಥಿಕವಾಗಿ ವ್ಯವಸ್ಥೆಯು ಕೂಡದಿದ್ದರೂ ಕಾಲ್ಪನಿಕವಾದ

ವ್ಯವಸ್ಥೆಯನ್ನು ಹೇಳಬಹುದಲ್ಲವೇ ? ಎಂದು ಆಶಂಕಿಸಿದರೆ ವ್ಯಾವಹಾರಿಕವಾಗಿ ವ್ಯವಸ್ಥೆಯು ಕೂಡಲಿ ಎಂದರೆ ನಿಮ್ಮ ಸಿದ್ಧಾಂತವೇ ನಾಶವಾಗುತ್ತದೆ. ಪಾರಮಾರ್ಥಿಕವಾಗಿ ಬ್ರಹ್ಮನೇ ಜಗತ್ ಕಾರಣ ಹೊರತು, ಜೀವನಲ್ಲ ಎಂಬುದು ನಿಮ್ಮ ಸಿದ್ಧಾಂತ. ಈಗ ವ್ಯಾವಹಾರಿಕವಾಗಿ ಕಾರಣತ್ವವನ್ನು ಕೂಡಿಸುವುದಾದರೆ ಅಪಸಿದ್ಧಾಂತ ಬರುತ್ತದೆ. ಆದ್ದರಿಂದ ಪೂರ್ವಪಕ್ಷಿಯು ವ್ಯಾವಹಾರಿಕವಾಗಿ ವ್ಯವಸ್ಥೆಯು ಉಪಪನ್ನವಾಗಲಿ ಎಂಬ ಅಭಿಪ್ರಾಯವನ್ನು ಹೊಂದಿದ್ದಾನೆಂಬ ಕಾರಣದಿಂದಲ್ಲ. ಹಾಗೇ ಹೇಳುವುದರಿಂದ ಪ್ರಕೃತದಲ್ಲಿ ಯಾವುದೇ ಉಪಯೋಗವಿರುವುದಿಲ್ಲ.

**सुधायां तु प्रत्यक्षस्य प्राबल्याद्ब्रह्मणः प्रत्यक्षसिद्धा सर्वकर्तृजीवसालक्षण्यमेव वक्तव्यमित्यसम्भव एव निर्धारितः ।**

ನ್ಯಾಯಸುಧೆಯಲ್ಲಿ ಪ್ರತ್ಯಕ್ಷವೇ ಪ್ರಬಲವಾಗಿರುವುದರಿಂದ ಬ್ರಹ್ಮನು ಜೀವನಿಂದ ಅಭಿನ್ನನಾಗಿದ್ದಾನೆಂದು ಹೇಳಬೇಕು. ಜೀವನಾದರೂ ಅಸರ್ವಕರ್ತೃ ಎಂದು ಪ್ರತ್ಯಕ್ಷಸಿದ್ಧನಾಗಿದ್ದಾನೆ. ಇಂಥ ಜೀವನ ಸಾಲಕ್ಷಣ್ಯವನ್ನು ಹೊಂದಿರುವ ಕಾರಣ ಬ್ರಹ್ಮನಲ್ಲಿಯೂ ಕೂಡ ಅಸರ್ವಕರ್ತೃತ್ವವೇ ಬರುತ್ತದೆ. ಆದ್ದರಿಂದ ಬ್ರಹ್ಮನ ಸರ್ವಕರ್ತೃತ್ವಲಕ್ಷಣಕ್ಕೆ ಅಸಂಭವದೋಷವೇ ಬರುತ್ತದೆಂದು ತಿಳಿಯಬೇಕೆಂದು ನಿರ್ಧಾರವಾಗಿ ಹೇಳಿರುತ್ತಾರೆ.

**प्रकाशः —**

एवं पक्षभेदेनाविरोधमुक्त्वा पक्षैक्येनापि तमाह — **तृतीयस्त्विति** ।। एतं **वेति** ।। अयं च पक्षः ''द्वितीयनिराकरणेन तृतीयपक्षस्य निरस्तत्वात्'' इति सुधावाक्यादवगम्यत इति भावः ।

ಇಲ್ಲಿಯ ತನಕ ಎರಡು ಬಗೆಯ ಪೂರ್ವಪಕ್ಷಗಳನ್ನು ತೋರಿಸಿದ್ದಾಯಿತು. ಸಂಸಾರಾವಸ್ಥೆಯಲ್ಲಿಯೂ ಕೂಡ ಜೀವನು ಬ್ರಹ್ಮನಿಂದ ಅಭಿನ್ನನಾಗಿರುತ್ತಾನೆ. ಮೋಕ್ಷಾವಸ್ಥೆಯಲ್ಲಿಯೂ ಕೂಡ ಅಭಿನ್ನನಾಗಿರುತ್ತಾನೆ ಎಂಬುದು ಮೊದಲನೆಯ ಪೂರ್ವಪಕ್ಷ. ಸಂಸಾರಾವಸ್ಥೆಯಲ್ಲಿ ಭಿನ್ನನಾಗಿದ್ದು, ಮೋಕ್ಷಾವಸ್ಥೆಯಲ್ಲಿ ಅಭಿನ್ನನಾಗಿರುತ್ತಾನೆಂಬುದು ಎರಡನೆಯ ಪೂರ್ವಪಕ್ಷ. ಈ ಎರಡು ಬಗೆಯ ಪೂರ್ವಪಕ್ಷಗಳನ್ನು ವಿವಕ್ಷಿಸಿ ಭಾಷ್ಯ ಹಾಗೂ ಅನುವ್ಯಾಖ್ಯಾನಗಳಲ್ಲಿ ಒಂದೇ ಯುಕ್ತಿಯನ್ನು ಪೂರ್ವಪಕ್ಷ ಹಾಗೂ ಸಿದ್ಧಾಂತಗಳಲ್ಲಿ ಬಳಸಲಾಗಿದೆ ಎಂದು ಸಮರ್ಥಿಸಿದ್ದಾಯಿತು. ಪ್ರಕೃತ ಸಂಸಾರಾವಸ್ಥೆಯಲ್ಲಿ ಜೀವನು ಬ್ರಹ್ಮನಿಂದ ಭಿನ್ನಾಭಿನ್ನನಾಗಿದ್ದಾನೆ. ಮೋಕ್ಷಾವಸ್ಥೆಯಲ್ಲಿ ಅಭಿನ್ನನಾಗಿದ್ದಾನೆ ಎಂಬ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ. ಮೂರನೆಯ ಈ ಪೂರ್ವಪಕ್ಷವನ್ನು ವಿವಕ್ಷಿಸಿದಾಗ ಒಂದೇ ಪಕ್ಷದಲ್ಲಿಯೇ ಭಾಷ್ಯ ಹಾಗೂ ಅನುವ್ಯಾಖ್ಯಾನಗಳ ಮಾತುಗಳು ಉಪಪನ್ನವಾಗುತ್ತದೆ. ಹಿಂದೆ ಪ್ರಥಮಪೂರ್ವಪಕ್ಷದಂತೆ ಭಾಷ್ಯದ

ಮಾತನ್ನು ಎರಡನೆಯ ಪೂರ್ವಪಕ್ಷದ ಸಿದ್ಧಾಂತಕ್ಕಾಗಿ ಅನುವ್ಯಾಖ್ಯಾನ ಮಾತನ್ನು ಯೋಜನೆ ಮಾಡಲಾಗಿತ್ತು. ಆದರೆ ಈಗ ಒಂದೇ ಪೂರ್ವಪಕ್ಷದಲ್ಲಿ ಭಾಷ್ಯದ ಮಾತನ್ನು ಅದರ ನಿರಾಕರಣೆಗಾಗಿ ಅನುವ್ಯಾಖ್ಯಾನದ ಮಾತನ್ನು ಯೋಜನೆ ಮಾಡುತ್ತಿದ್ದಾರೆ 'ತೃತೀಯಸ್ತು' ಇತ್ಯಾದಿ ಗ್ರಂಥದಿಂದ.

ಗ್ರಂಥದಲ್ಲಿ 'ಏತಂ ವಾ ಪಕ್ಷಮಾಶ್ರಿತ್ಯ' ಎಂದು ಹೇಳಿರುತ್ತಾರೆ. ಈ ಪಕ್ಷವು 'ದ್ವಿತೀಯನಿರಾಕರಣೇನ ತೃತೀಯಪಕ್ಷಸ್ಯ ನಿರಸ್ತತ್ವಾತ್' ಎರಡನೆಯ ಪಕ್ಷವನ್ನು ನಿರಾಕರಣೆ ಮಾಡಿದ್ದರಿಂದ ಮೂರನೆಯ ಪಕ್ಷವೂ ಕೂಡ ನಿರಾಕೃತವಾಯಿತು ಎಂಬ ಸುಧಾವಾಕ್ಯದಿಂದ ತಿಳಿಯುತ್ತದೆ.

**प्रकाशः** – ''जीवाभेदो ह्युभयगतविरुद्धधर्मत्यागेन जीवस्येश्वरसालक्षण्यग्रहणेन वेश्वरस्य जीवसालक्षण्यग्रहणेन वा सम्भवति'' इति टीकां विवरीतुमाह – **अत्र चेति** ।।

'ಜೀವಾಭೇದೋ ಹ್ಯುಭಯಗತವಿರುದ್ಧಧರ್ಮತ್ಯಾಗೇನ ಜೀವಸ್ಯೇಶ್ವರಸಾಲಕ್ಷಣ್ಯಗ್ರಹಣೇನ ವೇಶ್ವರಸ್ಯ ಜೀವಸಾಲಕ್ಷಣ್ಯಗ್ರಹಣೇನ ವಾ ಸಂಭವತಿ' ಎಂಬ ಟೀಕೆಯನ್ನು ವಿವರಣೆ ಮಾಡಲು 'ಅತ್ರ ಚ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – **एकपदेति** ।। जीवपरवाचिपदयोर्मध्ये इत्यर्थः ।। **वैयर्थ्यादिति** ।। भेदभ्रमनिरासार्थत्वात्तस्येति भावः ।। **असत्यं त्विति** ।। तदुक्तं सुधायां ''नच काल्पनिकं लक्षणमस्त्विति वाच्यम् । अनङ्गीकारात् । प्रधानादिष्वपि सम्भवेनातिप्रसङ्गाच'' इति ।

ಜೀವನನ್ನು ಹೇಳುವ ಮತ್ತು ಬ್ರಹ್ಮನನ್ನು ಹೇಳುವ ಪದಗಳ ನಡುವೆ ಒಂದು ಪದಕ್ಕೆ ಮಾತ್ರ ಲಕ್ಷಣಾವನ್ನು ಮಾಡಬೇಕು ಎಂದು ಇದರ ಅರ್ಥ. 'ವೈಯರ್ಥ್ಯಾತ್' ಎಂದರೆ ಭೇದಭ್ರಮನಿರಾಸಾರ್ಥ ಐಕ್ಯೋಪದೇಶವು ವ್ಯರ್ಥವಾಗುತ್ತದೆ ಎಂದು ತಿಳಿಯಬೇಕು. 'ಅಸತ್ಯಂ ತ್ವಿತಿ' ಇತ್ಯಾದಿ ವಾಕ್ಯದಲ್ಲಿ ಹೇಳಿದ ವಿಷಯವು 'ನಚ ಕಾಲ್ಪನಿಕಂ ಲಕ್ಷಣಮಸ್ತ್ವಿತಿ ವಾಚ್ಯಮ್ । ಅನಂಗೀಕಾರಾತ್ । ಪ್ರಧಾನಾದಿಷ್ವಪಿ ಸಂಭವೇನಾತಿಪ್ರಸಂಗಾಚ್ಚ' ಎಂಬ ನ್ಯಾಯಸುಧೆಯ ಆಧಾರದಲ್ಲಿ ಹೊರಟಿದೆ.

**प्रकाशः** – उक्तलक्षणदोषेषु टीकाविरोधमाशङ्क्याह – **पूर्वपक्षेति** ।। **न त्विति** ।। येनोक्तातिव्याप्त्यादिदोषो न युक्तस्स्यादिति भावः ।।

ಹಿಂದೆ ಹೇಳಿದ ಲಕ್ಷಣಗಳ ದೋಷಗಳಲ್ಲಿ ಟೀಕೆಯ ವಿರೋಧವನ್ನು ಆಶಂಕಿಸುತ್ತಿದ್ದಾರೆ 'ಪೂರ್ವಪಕ್ಷ' ಇತ್ಯಾದಿಯಾಗಿ. 'ನ ತು' ಇತ್ಯಾದಿ ವಾಕ್ಯದಿಂದ ಹಿಂದೆ ಹೇಳಲ್ಪಟ್ಟ ಅತಿವ್ಯಾಪ್ತ್ಯಾದಿ ದೋಷಗಳು ಅಯುಕ್ತವಾಗುತ್ತಿದ್ದವು ಎಂದು ಹೇಳಿರುತ್ತಾರೆ.

**प्रकाशः – प्रस्तुतेति ।।** ''सर्वथा न जगत्करणत्वादीश्वरैकनिष्ठम्'' इति प्रस्तुतेत्यर्थः । एतेन ''न ब्रह्मणो जगत्कारणत्वं वास्तवं भवति'' इति सुधावाक्यमप्युक्ताभिप्रायमिति भावः ।

'ಸರ್ವಥಾ ನ ಜಗತ್ಕಾರಣತ್ವಾದೀಶ್ವರೈಕನಿಷ್ಠಮ್' ಎಂಬ ವಾಕ್ಯದಿಂದ ಪ್ರಸ್ತುತವಾದದ್ದಕ್ಕೆ ಅನುಪಯೋಗಿಯಾಗಿದೆ ಎಂದು ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ 'ನ ಬ್ರಹ್ಮಣಃ ಜಗತ್ಕಾರಣತ್ವಂ ವಾಸ್ತವಂ ಭವತಿ' ಎಂಬ ಸುಧಾವಾಕ್ಯವೂ ಕೂಡ ಗ್ರಂಥದಲ್ಲಿ ಹೇಳಿದ ಅಭಿಪ್ರಾಯವುಳ್ಳದ್ದಾಗಿದೆ ಎಂದು ತಿಳಿಯಬೇಕು.

**प्रकाशः – ननु तत्र जीवसालक्षण्यमेव भाति । तत्कथमित्यत आह – सुधायां त्विति ।।**

ನ್ಯಾಯಸುಧೆಯಲ್ಲಿ ಜೀವಸಾಲಕ್ಷಣ್ಯವನ್ನಷ್ಟೇ ಹೇಳಿದಂತೆ ಕಾಣಸುತ್ತಿದೆ. ಇದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ 'ಸುಧಾಯಾಂ ತು' ಇತ್ಯಾದಿ ವಾಕ್ಯದಿಂದ ಉತ್ತರವನ್ನು ನೀಡಿದ್ದಾರೆ.




ಸಂಸಾರದಶೆಯಲ್ಲಿ ಜೀವನು ಬ್ರಹ್ಮನಿಂದ ಭಿನ್ನಾಭಿನ್ನನಾಗಿರುತ್ತಾನೆ. ಮೋಕ್ಷದಶೆಯಲ್ಲಿ ಅಭಿನ್ನನಾಗಿರುತ್ತಾನೆಂದು ಶ್ರುತಿ ಸಾರುತ್ತಿದೆ. ಇದು ಮೂರನೆಯ ಪೂರ್ವಪಕ್ಷ. ಹೀಗೆ ಭೇದಾಭೇದವನ್ನು ಒಪ್ಪಿದಾಗ 'ಏಕೀಭವಂತೀ' ಎಂಬಲ್ಲಿರುವ ಚ್ವಿ ಪ್ರತ್ಯಯವು ಅಭೂತತದ್ಭಾವಾರ್ಥದಲ್ಲಿ ಉಪಪನ್ನವಾಗುತ್ತದೆ. ಸಂಸಾರದಶೆಯಲ್ಲಿ ಇಲ್ಲದ ಅತ್ಯಂತ ಅಭೇದವು ಮೋಕ್ಷದಶೆಯಲ್ಲಿ ಉಂಟಾಗುವುದರಿಂದ ಚ್ವಿ ಪ್ರತ್ಯಯವು ಹೊಸದೊಂದು ಧರ್ಮವನ್ನು ವಿಧಿಸುತ್ತವೆ. 'ನ ಹ್ಯನ್ಯಸ್ಯ ಅನ್ಯತ್ವಯುಜ್ಯತೇ' ಎಂಬ ಭಾಷ್ಯದ ಮಾತಿನಲ್ಲಿ ಮೊದಲು ಭಿನ್ನರಾದವರು ಅನಂತರ ಅಭಿನ್ನರಾಗಲು ಸಾಧ್ಯವಿಲ್ಲವೆಂದು ಹೇಳಿದ್ದಕ್ಕೂ ವಿರೋಧವಿಲ್ಲ. ಮೊದಲೂ ಕೂಡ ಜೀವರು ಅಭಿನ್ನರೇ ಆಗಿರುತ್ತಾರೆ. ಭಾಷ್ಯದಲ್ಲಿ ಭಿನ್ನರಾದವರು ಅನಂತರ ಅಭಿನ್ನರಾಗಲು ಸಾಧ್ಯವಿಲ್ಲವೆಂಬುದನ್ನು ಪೂರ್ವಪಕ್ಷಯುಕ್ತಿಯನ್ನಾಗಿ ಹೇಳಿದ್ದಾರೆ. ಅನುವ್ಯಾಖ್ಯಾನದಲ್ಲಿ ಇದನ್ನೇ ಸಿದ್ಧಾಂತ ಯುಕ್ತಿಯನ್ನಾಗಿ ಹೇಳಿದ್ದಾರೆ. ಭಾಷ್ಯ ಹಾಗೂ ಅನುವ್ಯಾಖ್ಯಾನಗಳಿಗೆ ಆಪಾತತಃ ವಿರೋಧ ಬಂದಂತೆ ಕಾಣಸುತ್ತದೆ. ಆದರೆ ಹಿಂದೆ ಹೇಳಿದ ಮೊದಲನೆಯ ಪೂರ್ವಪಕ್ಷವನ್ನು ವಿವಕ್ಷಿಸಿ ಭಾಷ್ಯವು ಹೊರಟದೆ. ಎರಡನೆಯ ಪೂರ್ವಪಕ್ಷಕ್ಕೆ ನಿರಾಸಕವಾಗಿ ಅನುವ್ಯಾಖ್ಯಾನವು ಹೊರಟದೆ ಎಂಬುದು ಒಂದು ಸಮಾಧಾನ. ಮೂರನೆಯ ಈ ಪೂರ್ವಪಕ್ಷವನ್ನು ವಿವಕ್ಷಿಸಿದರೆ ಸಂಸಾರದಶೆಯಲ್ಲಿ ಭೇದಾಭೇದವಿರುವುದರಿಂದ ಮೋಕ್ಷದಸೆಯಲ್ಲಿಯೂ ಅಭೇದವನ್ನು ಹೇಳಬಹುದು ಎಂಬುದು ಭಾಷ್ಯದ ಪೂರ್ವಪಕ್ಷದ ಅಭಿಪ್ರಾಯ. ಇದರ ನಿರಾಕರಣೆಗಾಗಿ ಅನುವ್ಯಾಖ್ಯಾನದಲ್ಲಿ 'ನ ಹನ್ಯಸ್ಯ ಅನ್ಯತ್ವಂ ಯುಜ್ಯತೇ' ಎಂಬ ಮಾತು ಹೊರಟದೆ. ಯಾವರೀತಿಯಾಗಿ ಮೊದಲು ಭೇದವಿದ್ದರೆ ಅಭೇದವು

ಬರುವುದಿಲ್ಲವೋ, ಅದೇ ರೀತಿಯಾಗಿ ಮೊದಲು ಭೇದಾಭೇದವಿದ್ದರೂ ಕೂಡ ಅನಂತರ ಅಭೇದ ಬರಲು ಸಾಧ್ಯವಿಲ್ಲ ಎಂಬುದು ಅನುವ್ಯಾಖ್ಯಾನದ ಅಭಿಪ್ರಾಯ.

ಮೂರು ಬಗೆಯ ಈ ಪೂರ್ವಪಕ್ಷಗಳು ಪುನಃ ಮೂರು ಮೂರು ಪ್ರಕಾರವನ್ನು ಹೊಂದಿವೆ. 'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇऽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯಲ್ಲಿ ವಿಜ್ಞಾನಮಯ ಶಬ್ದವು ವಿಶಿಷ್ಟನಾದ ಜೀವನನ್ನು ಹೇಳುತ್ತಿದೆ. ಅವ್ಯಯಪದವು ವಿಶಿಷ್ಟನಾದ ಬ್ರಹ್ಮನನ್ನು ಹೇಳುತ್ತಿವೆ. ಎರಡು ವಿಶಿಷ್ಟಗಳಿಗೆ ಐಕ್ಯವು ಅನುಪಪನ್ನವಾಗುವುದರಿಂದ ಒಂದು ಪದಕ್ಕೆ ಮಾತ್ರ ಲಕ್ಷಣಾವನ್ನು ಆಶ್ರಯಿಸಿ ಐಕ್ಯವನ್ನು ಹೇಳಬೇಕು. ವಿಜ್ಞಾನಮಯ ಪದಕ್ಕೆ ಮುಖ್ಯಾರ್ಥವನ್ನು ಸ್ವೀಕರಿಸಿ, ಬ್ರಹ್ಮನಿಗೆ ಜೀವನಿಂದ ಅಭೇದವನ್ನು ಹೇಳಿದರೆ ಜೀವನಲ್ಲಿರುವ ಅಸರ್ವಕರ್ತೃತ್ವವು ಬ್ರಹ್ಮನಲ್ಲಿ ಬರುವುದರಿಂದ ಅಸಂಭವದೋಷ ಬರುತ್ತದೆ. ಅವ್ಯಯಪದಕ್ಕೆ ಮುಖ್ಯಾರ್ಥವನ್ನು ಸ್ವೀಕರಿಸಿ ವಿಜ್ಞಾನಮಯಶಬ್ದಕ್ಕೆ ಗೌಣಾರ್ಥವನ್ನು ಸ್ವೀಕರಿಸಿದಾಗ ಜೀವನಿಗೆ ಬ್ರಹ್ಮನಿಂದ ಅಭೇದವನ್ನು ಹೇಳಿದಂತಾಗುತ್ತದೆ. ಆವಾಗ ಬ್ರಹ್ಮನಲ್ಲಿರುವ ಸರ್ವಕರ್ತೃತ್ವವು ಜೀವನಲ್ಲಿ ಬರುವುದರಿಂದ ಅತಿವ್ಯಾಪ್ತಿದೋಷ ಬರುತ್ತದೆ. ಹೀಗೆ ಎರಡು ಪಕ್ಷಗಳನ್ನು ವಿವಕ್ಷಿಸಬೇಕು. ವಿಜ್ಞಾನಮಯ ಹಾಗೂ ಅವ್ಯಯ ಎರಡೂ ಪದಗಳಿಗೆ ಲಕ್ಷಣಾವನ್ನು ಆಶ್ರಯಿಸಿ ಚಿನ್ಮಾತ್ರಗಳೆರಡಕ್ಕೆ ಐಕ್ಯವನ್ನು ಒಪ್ಪುವುದು ಮೂರನೆಯ ಪಕ್ಷ. ಮೂರನೆಯ ಪಕ್ಷದಲ್ಲಿ ಅಸಂಭವ ಹಾಗೂ ಅತಿವ್ಯಾಪ್ತಿಗಳೆಂಬ ಎರಡು ದೋಷಗಳೂ ಕೂಡ ಬರುತ್ತವೆ.

''ಏಕೀಭವಂತಿ' ಎಂಬ ಶ್ರುತಿಯು ಸ್ಥಾನೈಕ್ಯವನ್ನೇ ಹೇಳುತ್ತಿದೆ'

ಸಿದ್ಧಾಂತ

## तात्पर्यचन्द्रिका

**सिद्धान्तमाह ।। नञध्याहारेणेत्यादिना ।। अयं भावः ।।**

**वाक्यान्तरविरोधाच्च पूर्वापरविरोधतः ।**

**उपपत्तिविरोधाच्च नैव युक्तं मतत्रयम् ।।१।।**

ಅಧಿಕರಣದ ಸಿದ್ಧಾಂತಭಾಗವನ್ನು 'ನಞ್‌ಧ್ಯಾಹಾರೇಣ ಇತ್ಯಾದಿ ಟೀಕೆಯಿಂದ ಪ್ರಾರಂಭಿಸಿದ್ದಾರೆ. ಸಿದ್ಧಾಂತದ ಸಾರ ಹೀಗಿದೆ -

ವಾಕ್ಯಾಂತರವಿರೋಧಾಚ್ಚ ಪೂರ್ವಾಪರವಿರೋಧತಃ।

ಉಪಪತ್ತಿವಿರೋಧಾಚ್ಚ ನೈವ ಯುಕ್ತಂ ಮತತ್ರಯಮ್ ॥೧॥

ಈ ಹಿಂದೆ ಮಾಡಿದ ಮೂರು ಬಗೆಯ ಪೂರ್ವಪಕ್ಷಗಳಿಗೂ ಬೇರೆ ಶ್ರುತಿವಾಕ್ಯಗಳ ವಿರೋಧ ಬರುತ್ತದೆ. ಹಿಂದಿನ ಮುಂದಿನ ವಾಕ್ಯಗಳಿಂದಲೇ ವಿರೋಧವು ಸ್ಪಷ್ಟವಾಗಿ ಕಾಣಿಸುತ್ತಿದೆ. ಯುಕ್ತಿವಿರೋಧವೂ ಕೂಡ ತಪ್ಪಿದ್ದಲ್ಲ. ಆದ್ದರಿಂದ ಮೂರು ಪೂರ್ವಪಕ್ಷಗಳೂ ಕೂಡ ಅಯುಕ್ತವಾಗಿವೆ.

**उक्तं द्विविधं पक्षत्रयमपि मुक्तावभेदसापेक्षम् । स एव त्वसिद्धः । ''एकीभवन्ति'' इति श्रुतेर्भाष्ये ''यथोदकम्'' इति श्रुत्यन्तरादि विरोधोक्तेः ।**

ಮೂರು ಬಗೆಯ ಪೂರ್ವಪಕ್ಷಗಳು ಮೋಕ್ಷದಲ್ಲಿ ಅಭೇದವನ್ನು ಒಪ್ಪಿಯೇ ಹೊರಟಿವೆ. ಆದರೆ ಮೋಕ್ಷದಲ್ಲಿ ಜೀವಬ್ರಹ್ಮರಿಗೆ ಅಭೇದವು ಯಾವ ಪ್ರಮಾಣದಿಂದಲೂ ಸಿದ್ಧವಾಗಿಲ್ಲ. 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಗೆ 'ಯಥೋದಕಮ್ ಶುದ್ಧಮಾಸಿಕ್ತಮ್' ಎಂಬ ಕಾಠಕೋಪನಿಷತ್ತಿನ ವಾಕ್ಯದಿಂದ ವಿರೋಧವು ಬರುತ್ತದೆ. (ಶುದ್ಧವಾದ ನೀರಿಗೆ ಮತ್ತಷ್ಟು ಶುದ್ಧವಾದ ನೀರನ್ನು ಬೆರೆಸಿದಾಗ ಇರುವ ನೀರು ಹೆಚ್ಚಾಗುತ್ತದೆ ಹೊರತು, ಐಕ್ಯವು ಬರುವುದಿಲ್ಲ. ಅದರಂತೆ ಚತುರ್ಮುಖನು ಪರಮಾತ್ಮನ ಜೊತೆಯೇ ಸಾದೃಶ್ಯವನ್ನು ಹೊಂದುತ್ತಾನೆ. ಚತುರ್ಮುಖನೇ ಹೀಗೆ ಪರಮಾತ್ಮನ ಸಾದೃಶ್ಯವನ್ನು ಹೊಂದುವಾಗ ಉಳಿದವರು ಪರಮಾತ್ಮನ ಜೊತೆ ಐಕ್ಯವನ್ನು ಹೊಂದುವುದಿಲ್ಲವೆಂದು ಪ್ರತ್ಯೇಕವಾಗಿ ಹೇಳಲೇ ಬೇಕಾಗಿಲ್ಲ.)

**न्यायविवरणे च ''निरञ्जनः परमं साम्यम्'' इति पूर्ववाक्यविरोधस्य ''परात्परं पुरुषमुपैति दिव्यम्'' इत्युत्तरवाक्यविरोधस्य चोक्तेः ।**

ನ್ಯಾಯವಿವರಣದಲ್ಲಿ 'ನಿರಂಜನಃ ಪರಮಂ ಸಾಮ್ಯಮ್' ಎಂಬ ಹಿಂದಿನ ವಾಕ್ಯದ ವಿರೋಧವನ್ನು 'ಪರಾತ್ಪರಂ ಪುರುಷಮುಪೈತಿ ದಿವ್ಯಮ್' ಎಂಬ ಮುಂದಿನ ವಾಕ್ಯದ ವಿರೋಧವನ್ನು ತೋರಿಸಿದ್ದಾರೆ.

**अभेदपरत्वे च परेणाव्ययेनेति तृतीया स्यान्न तु सप्तमी । तथा ''सायं गोष्ठे गाव एकीभवन्ति'' इतिवत्स्थानैक्यस्यैव प्रतीतेः ।**

'ಏಕೀಭವಂತಿ' ಎಂಬ ಶ್ರುತಿಯು ಅಭೇದಪರವಾಗುವುದಾದರೆ 'ಪರೇಣ' ಎಂದು ಸಹಯೋಗಾರ್ಥದಲ್ಲಿ ತೃತೀಯಾವಿಭಕ್ತಿಯನ್ನು ಪ್ರಯೋಗಿಸಬೇಕಿತ್ತು. 'ಪರೇ' ಎಂಬ ಸಪ್ತಮೀ ವಿಭಕ್ತಿಯನ್ನು ಪ್ರಯೋಗಿಸಬಾರದಿತ್ತು. ಸಪ್ತಮೀವಿಭಕ್ತಿಯಿಂದ 'ಸಾಯಂ ಗೋಷ್ಠೇ ಗಾವ ಏಕೀಭವಂತಿ' ಸಾಯಂಕಾಲದಲ್ಲಿ ಎಲ್ಲಾ ಹಸುಗಳು ಒಂದಾಗುತ್ತವೆ ಎಂಬ ಪ್ರಯೋಗದಂತೆ ಸ್ಥಾನೈಕ್ಯವನ್ನೇ ಹೇಳುತ್ತದೆ ಹೊರತು, ಸ್ವರೂಪೈಕ್ಯವನ್ನು ಹೇಳುವುದಿಲ್ಲ.

**तथा ''कर्माणि विज्ञानमयश्च आत्मा'' इति पूर्ववाक्यस्यकर्म शब्दविरोधः। कर्मणां ब्रह्मणैक्यायोगादित्यादिबाधकानां च ग्रन्थान्तर उक्तेः ।**

ಮತ್ತು 'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ' ಎಂಬ ಹಿಂದಿನ ವಾಕ್ಯದಲ್ಲಿರುವ ಕರ್ಮಶಬ್ದದ ವಿರೋಧವೂ ಕೂಡ ತಪ್ಪಿದ್ದಲ್ಲ. ವಿಜ್ಞಾನಮಯಶಬ್ದದಿಂದ ಪ್ರತಿಪಾದ್ಯನಾದ ಬ್ರಹ್ಮನಿಗೆ ಐಕ್ಯವನ್ನು

ಹೇಳುವುದಾದರೆ ಕರ್ಮಶಬ್ದಪ್ರತಿಪಾದ್ಯವಾದ ಕರ್ಮಕ್ಕೂ ಕೂಡ ಬ್ರಹ್ಮನಿಂದ ಐಕ್ಯವನ್ನು ಹೇಳಬೇಕಾದೀತು. ಆದರೆ ನೀವೇ ಕರ್ಮಗಳಿಗೆ ಬ್ರಹ್ಮನಿಂದ ಐಕ್ಯವನ್ನು ಹೇಳಿರುವುದಿಲ್ಲ. ಹೀಗೆ ಅನೇಕ ಬಾಧಕಗಳನ್ನು ಬೇರೆ ಗ್ರಂಥಗಳಲ್ಲಿ ತೋರಿಸಲಾಗಿದೆ.

**भेदाभेदपक्षेऽपि पूर्वमप्यभेदस्य विद्यमानत्वेनाद्यान्त्यपक्षयोः च्विप्रत्ययस्य चायोगात् मध्यान्त्यपक्षयोः ''नान्यदन्यत्वम्'' इत्यनुव्याख्यानोक्तोपपत्ति-विरोधाच्चान्यपरत्वात् ।**

ಸಂಸಾರಾವಸ್ಥೆಯಲ್ಲಿ ಜೀವರಿಗೆ ಬ್ರಹ್ಮನಿಂದ ಭೇದಾಭೇದವಿರುತ್ತದೆ, ಮೋಕ್ಷಾವಸ್ಥೆಯಲ್ಲಿ ಮಾತ್ರ ಅತ್ಯಂತಾಭೇದವಿರುತ್ತದೆ ಎಂಬ ಮೂರನೆಯ ಪಕ್ಷವೂ ಕೂಡ ಅತ್ಯಂತ ಅಯುಕ್ತವಾಗಿದೆ. ಯಾವ ರೀತಿಯಾಗಿ ಮೊದಲು ಭೇದವಿದ್ದರೆ ಅನಂತರ ಅಭೇದವು ಬರುವುದಿಲ್ಲವೋ, ಅದೇ ರೀತಿಯಾಗಿ ಮೊದಲು ಭೇದಾಭೇದವಿದ್ದರೂ ಕೂಡ ಅನಂತರ ಅಭೇದವು ಬರುವುದಿಲ್ಲ. ಮೊದಲನೆಯ ಪೂರ್ವಪಕ್ಷದಲ್ಲಿ ಹಾಗೂ ಮೂರನೆಯ ಪೂರ್ವಪಕ್ಷದಲ್ಲಿ ಅಭೇದವನ್ನು ಒಪ್ಪಿರುವುದರಿಂದ ಚ್ವಿಪ್ರತ್ಯಯವು ಅಯುಕ್ತವಾಗುತ್ತದೆ. ಎರಡನೆಯ ಮತ್ತು ಮೂರನೆಯ ಪೂರ್ವಪಕ್ಷಗಳಿಗೆ 'ನಾನ್ಯದನ್ಯತ್ವಮ್' ಎಂಬ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಯುಕ್ತಿಯ ವಿರೋಧವು ಬರುತ್ತದೆ.

**किञ्च**

**भिन्ननद्यब्धिदृष्टान्तं वदन्तीयं श्रुतिः स्वयम् ।**
**गौणार्थपरतां स्वस्या आचष्टे स्पष्टमेव नः ॥१॥**

**श्रूयते हि ''एकीभवन्ति'' इत्यस्यानन्तरमेव ''यथा नद्यः स्यन्दमानाः समुद्रायणाः समुद्रं प्राप्यास्तं गच्छन्ति'' इति भिन्ननदीसमुद्रदृष्टान्तः ।**

ಮತ್ತು

ಭಿನ್ನನದ್ಯಬ್ಧಿದೃಷ್ಟಾಂತಂ ವದಂತೀಯಂ ಶ್ರುತಿಃ ಸ್ವಯಮ್ ।
ಗೌಣಾರ್ಥಪರತಾಂ ಸ್ವಸ್ಯಾ ಆಚಷ್ಟೇ ಸ್ಪಷ್ಟಮೇವ ನಃ ॥

ಈ ಆಥರ್ವಣಶ್ರುತಿಯು ಭಿನ್ನವಾದ ನದೀ ಸಮುದ್ರಗಳ ದೃಷ್ಟಾಂತವನ್ನು ಸ್ವತಃ ತಾನೇ ಹೇಳುವ ಮೂಲಕ ತನಗೆ ಗೌಣಾರ್ಥ ಮಾಡಬೇಕೆಂದು ಸ್ಪಷ್ಟವಾಗಿ ವ್ಯಾಖ್ಯಾನ ಮಾಡಿಕೊಳ್ಳುತ್ತಿದೆ.

'ಏಕೀಭವಂತಿ' ಎಂಬ ಶ್ರುತಿಯ ಅನಂತರವೇ 'ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ ಗಚ್ಛಂತಿ' ಎಂಬ ಭಿನ್ನವಾದ ನದೀ ಸಮುದ್ರಗಳ ದೃಷ್ಟಾಂತಗಳನ್ನು ಶ್ರುತಿ ಹೇಳಿದೆ. ನದೀಗಳು ಸಮುದ್ರವನ್ನು ಹೊಂದುತ್ತವೆ ಹೊರತು, ಸಮುದ್ರವೇ ಆಗುವುದಿಲ್ಲ. ಆದರಂತೆ ಸಕಲ ಸಾತ್ವಿಕ ಜೀವರು ಪರಮಾತ್ಮನ ಸ್ಥಾನವನ್ನೇ ಹೊಂದುತ್ತಾರೆಂದೇ ವ್ಯಾಖ್ಯಾನ ಮಾಡಬೇಕು.

एवञ्च

रथ्याजलं विष्णुपदीजलेनैकत्वमागतम् ।
इतस्ततो गता गावः सायमेकत्वमागताः ॥१॥
एकीभूता तु सा सेनापाण्डवानभ्यवर्तत ।
इत्यादिवद्भवेदेकीभवन्तीत्यादिवेदवाक् ॥२॥

ಆದ್ದರಿಂದ

ರಥ್ಯಾಜಲಂ ವಿಷ್ಣುಪದೀಜಲೇನೈಕತ್ವಮಾಗತಮ್ ।
ಇತಸ್ತತೋ ಗತಾ ಗಾವಃ ಸಾಯಮೇಕತ್ವಮಾಗತಾಃ ॥೧॥
ಏಕೀಭೂತಾ ತು ಸಾ ಸೇನಾಪಾಂಡವಾನಭ್ಯವರ್ತತ ।
ಇತ್ಯಾದಿವದ್ಭವೇದೇಕೀಭವಂತೀತ್ಯಾದಿವೇದವಾಕ್ ॥೨॥

'ರಸ್ತೆಯ ನೀರು ಗಂಗಾನದಿಯಲ್ಲಿ ಒಂದಾಯಿತು'. 'ಎಲ್ಲೆಡೆ ಸಂಚರಿಸುತ್ತಿರುವ ಹಸುಗಳು ಸಾಯಂಕಾಲ ಕೊಟ್ಟಿಗೆಯಲ್ಲಿ ಒಂದಾದವು'. 'ಬೇರೆ ಬೇರೆ ಕಡೆಯಿರುವ ಸೇನೆಯು ಪಾಂಡವರ ಜೊತೆ ಒಂದಾಯಿತು'. ಈ ಎಲ್ಲಾ ಪ್ರಯೋಗಗಳಲ್ಲಿ 'ಒಂದಾಯಿತು' ಎಂಬ ಪ್ರಯೋಗಕ್ಕೆ 'ಒಂದೇ ಸ್ಥಾನವನ್ನು ಹೊಂದಿದವು' ಎಂಬರ್ಥವನ್ನು ನಾವು ತಿಳಿಯುತ್ತೇವೆ. ಅದರಂತೆ ಮುಕ್ತಜೀವರೆಲ್ಲರೂ ಪರಮಾತ್ಮನ ಸ್ಥಾನವನ್ನು ಹೊಂದಿದರು ಎಂಬುದಾಗಿ 'ಏಕೀಭವಂತಿ' ಎಂಬ ವೇದವಚನವು ಹೇಳುತ್ತಿದೆ.

नच जलस्य जलान्तरमेलनेनैक्यम् । ''तादृगेव'' इति भाष्योक्तसावधारण श्रुत्या ''यतो वृद्धिः प्रदृश्यत'' इति सयुक्तिकस्मृत्या च विरोधात् ।

ಒಂದು ನೀರು ಮತ್ತೊಂದು ನೀರಿನ ಜೊತೆಗೆ ಸೇರಿದ ಮಾತ್ರಕ್ಕೆ ಐಕ್ಯವನ್ನು ಹೊಂದುವುದಿಲ್ಲ. 'ತಾದೃಗೇವ' ಎಂಬುದಾಗಿ ಭಾಷ್ಯದಲ್ಲಿ ಉದಾಹರಿಸಿದ ಸಾವಧಾರಣವಾದ ಶ್ರುತಿಯಿಂದ ಸಾದೃಶ್ಯವೇ ತಿಳಿಯುತ್ತದೆ ಹೊರತು, ಐಕ್ಯವಲ್ಲ. ಹಾಗೇ ಐಕ್ಯಾರ್ಥವನ್ನು ಹೇಳಿದರೆ 'ಯತೋ ವೃದ್ಧಿ ಪ್ರದೃಶ್ಯತೇ' ಎಂಬ ಯುಕ್ತಿಬದ್ಧವಾದ ಸ್ಮೃತಿಯಿಂದ ವಿರೋಧವು ಬರುತ್ತದೆ.

किञ्च

मानभेदात् स्पर्शरसपूर्वभेदाच्च नीरयोः ।
मेलनेऽप्यभिदानास्ति यथैव क्षीरनीरयोः ॥१॥

ಮಾನಭೇದಾತ್ ಸ್ಪರ್ಶರಸಪೂರ್ವಭೇದಾಚ್ಚ ನೀರಯೋಃ ।
ಮೇಲನೇಽಪ್ಯಭಿದಾನಾಸ್ತಿ ಯಥೈವ ಕ್ಷೀರನೀರಯೋಃ ॥೧॥

ಭೋಕ್ತ್ರಧಿಕರಣ (೨-೧-೫)

ಮತ್ತು ಹಾಲಿನ ಜೊತೆಗೆ ನೀರನ್ನು ಸೇರಿಸಿದಾಗ ನೀರೇ ಹಾಲಾಗುವುದಿಲ್ಲ, ಹಾಲಿನಂತಾಗುತ್ತದೆ ಎಂಬುದು ನಮಗೆ ಕಂಡಿರುವ ಉದಾಹರಣೆ. ನೀರಿಗೆ ನೀರನ್ನು ಸೇರಿಸಿದಾಗ ಪರಿಮಾಣದಲ್ಲಿ ಭೇದವು ಕಾಣಸುತ್ತದೆ. ಬಿಸಿನೀರಿಗೆ ತಣ್ಣಗಿರುವ ನೀರನ್ನು ಸೇರಿಸಿದಾಗ ಸ್ಪರ್ಶದಲ್ಲಿ ಭೇದವು ಕಾಣಸುತ್ತದೆ. ಶುದ್ಧವಾದ ನೀರಿಗೆ ಉಪ್ಪುನೀರನ್ನು ಸೇರಿಸಿದಾಗ ರಸಭೇದವು ಕಾಣಸುತ್ತದೆ. ಆದ್ದರಿಂದ ನೀರಿಗೆ ನೀರು ಸೇರಿದಾಗ ಐಕ್ಯವುಂಟಾಗುವುದಿಲ್ಲ. ಸಾದೃಶ್ಯವಷ್ಟೇ ಉಂಟಾಗುತ್ತದೆಂದು ಹೇಳಬೇಕು.

**न केवलं ''यतो वृद्धिः'' इति स्मृत्युक्तं परिमाणभेदमात्रम् । किन्तु शीतोष्णयोर्मधुरोषरयोस्सङ्गतसरित्सम्बन्धिजलयोर्मेलने स्पर्शादिभेदोऽपि दृश्यते ।**

'ಯತೋ ವೃದ್ಧಿಃ' ಎಂಬ ಸ್ಮೃತಿಯಲ್ಲಿ ಹೇಳಿದಂತೆ ನೀರಿಗೆ ಮತ್ತಷ್ಟು ನೀರು ಸೇರಿದಾಗ ಪರಿಮಾಣದಲ್ಲಿ ವೈಲಕ್ಷಣ್ಯವಿದೆ ಎಂಬುದಷ್ಟೇ ತಿಳಿಯುವುದಲ್ಲ. ತಣ್ಣೀರಿಗೆ ಬಿಸಿನೀರು ಸೇರಿದಾಗ ಸ್ಪರ್ಶಭೇದದ ಅನುಭವವೂ ಕೂಡ ನಮಗೆ ಬರುತ್ತದೆ. ಸಿಹಿ ನೀರಿಗೆ ಉಪ್ಪುನೀರು ಸೇರಿದಾಗ ರಸದ ಭೇದವು ಅನುಭವಕ್ಕೆ ಬರುತ್ತದೆ. ಪರಸ್ಪರ ನದಿಗಳು ಒಟ್ಟಿಗೆ ಸೇರಿದಾಗಲೂ ವೈಲಕ್ಷಣ್ಯಜ್ಞಾನವು ನಮಗೆ ಬರುತ್ತದೆ.

**अन्यथा हंसेन विविच्यमानयोः क्षीरनीरयोरप्यभेदः स्यात् । द्रुतस्वर्णताम्रयोर्मेलनेनाभेदे तत्कार्ये पणादौ केवलस्वर्णादि कार्यपणान्मूल्यादिभेदश्च न स्यात् ।**

ಹೀಗೊಪ್ಪದಿದ್ದರೆ ಹಂಸಪಕ್ಷಿಯು ಹಾಲು ಮತ್ತು ನೀರುಗಳನ್ನು ಬೇರ್ಪಡಿಸಿದಾಗಲೂ ಅಭೇದವು ಇಲ್ಲದಿರಬೇಕಾದೀತು. ಸುವರ್ಣ ಹಾಗೂ ತಾಮ್ರಗಳನ್ನು ಕಾಯಿಸಿ ದ್ರವವನ್ನಾಗಿ ಮಾಡಿ, ಪುನಃ ಎರಡನ್ನು ಒಟ್ಟಿಗೆ ಸೇರಿಸಿದರೆ ಕೇವಲ ಸುವರ್ಣಕ್ಕೆ ಎಷ್ಟು ಬೆಲೆ ಇರುತ್ತದೋ, ತಾಮ್ರವನ್ನು ಸೇರಿಸಿದ ಸುವರ್ಣಕ್ಕೂ ಅಷ್ಟೇ ಬೆಲೆಯು ಲೋಕದಲ್ಲಿ ಇರಬೇಕಾದೀತು. ಆದರೆ ಯಾರೂ ಕೂಡ ಶುದ್ಧ ಬಂಗಾರಕ್ಕೆ ಎಷ್ಟು ಬೆಲೆಯನ್ನು ನೀಡುತ್ತಾರೋ, ತಾಮ್ರಮಿಶ್ರಿತವಾದ ಸುವರ್ಣಕ್ಕೆ ಅಷ್ಟು ಬೆಲೆಯನ್ನು ನೀಡುವುದಿಲ್ಲ.

**क्षीरे सिक्ता सुरा च क्षीरं स्यात् । प्रसिद्धश्च लोके सङ्गतानां कृष्णादिसप्तनदीजलानां गङ्गादिसहस्रनदीजलानां च पुनः प्रत्येकं समुद्रसङ्गमार्थं विभक्तानां विलक्षणपूर्वरूपरसादिमत्तया भेदः ।**

ಹಾಲಿಗೆ ಒಂದು ಹನಿ ಸುರೆಯನ್ನು ಸೇರಿಸಿದರೆ ಅದೂ ಕೂಡ ನಿಷಿದ್ಧವಾಗದೇ ಹಾಲೇ ಆಗಬೇಕಾದೀತು.

ಮತ್ತು ಲೋಕದಲ್ಲಿ ಕೃಷ್ಣ ಮೊದಲಾದ ಏಳು ನದಿಗಳು ಒಟ್ಟಿಗೆ ಸೇರುತ್ತವೆ. ಗಂಗಾದಿ ಸಾವಿರ ನದಿಗಳು ಒಟ್ಟಿಗೆ ಸೇರುತ್ತವೆ, ಪುನಃ ಪ್ರತ್ಯೇಕವಾಗಿ ವಿಭಕ್ತವಾಗಿ ಸಮುದ್ರವನ್ನು ಸೇರುತ್ತವೆಂಬುದು ಲೋಕದಲ್ಲಿ ಪ್ರಸಿದ್ಧವಾಗಿದೆ. ಒಟ್ಟಿಗೆ ಸೇರಿದಾಗ ಮತ್ತು ವಿಭಕ್ತವಾದಾಗ ಈ ನದಿಗಳಲ್ಲಿರುವ ರೂಪರಸಾದಿಗಳ ಭೇದಜ್ಞಾನವು ನಮಗೆ ಅನುಭವಕ್ಕೆ ಬರುತ್ತಿದೆ.(೧)

**किञ्च "अवस्थितेरिति काशकृत्स्नः" इति सूत्रे भामत्यामेव "का पुनर्नद्यभिमता आयुष्मतः । किं पाथः परमाणव उतैषां संस्थानभेद आहोस्वित्तदारब्धोऽवयवी । तत्र संस्थानभेदस्य वाऽवयविनो वा समुद्र निवेशे विनाशात्कस्य समुद्रेणैकता । नदीपाथः परमाणूनां तु समुद्रपाथः परमाणुभ्यः पूर्वावस्थितेभ्यो भेद एव । नाभेदः । एवं समुद्रादपि तेषां भेद एव" इत्यादिना नदीसमुद्रयोरभेदो निरस्तः ।**

ಆಯುಷ್ಮಂತನಾದ ಪೂರ್ವಪಕ್ಷಿಯಾದ ನಿನ್ನ ಅಭಿಪ್ರಾಯವೇನು ? ನದೀ ಮತ್ತು ಸಮುದ್ರಗಳಿಗೆ ಐಕ್ಯವಿಲ್ಲ ಎಂಬುದು ಭಾಮತಿಯ ಮಾತಿನಿಂದಲೇ ಸ್ಪಷ್ಟವಾಗುತ್ತದೆ. 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಭಾಮತಿಯಲ್ಲಿ ಹೀಗೆ ಹೇಳಲಾಗಿದೆ - 'ಕಾ ಪುನರ್ನದ್ಯಭಿಮತಾ ಆಯುಷ್ಮತಃ । ಕಿಂ ಪಾಥಃ ಪರಮಾಣವ ಉತೈಷಾಂ ಸಂಸ್ಥಾನಭೇದ ಆಹೋಸ್ವಿತ್ತದಾರಬ್ಧೋಽವಯವೀ । ತತ್ರ ಸಂಸ್ಥಾನಭೇದಸ್ಯ ವಾಽವಯವಿನೋ ವಾ ಸಮುದ್ರ ನಿವೇಶೇ ವಿನಾಶಾತ್ಕಸ್ಯ ಸಮುದ್ರೇಣೈಕತಾ । ನದೀಪಾಥಃ ಪರಮಾಣೂನಾಂ ತು ಸಮುದ್ರಪಾಥಃ ಪರಮಾಣುಭ್ಯಃ ಪೂರ್ವಾವಸ್ಥಿತೇಭ್ಯೋ ಭೇದ ಏವ । ನಾಭೇದಃ । ಏವಂ ಸಮುದ್ರಾದಪಿ ತೇಷಾಂ ಭೇದ ಏವ' ನದಿಯು ಸಮುದ್ರದಲ್ಲಿ ಐಕ್ಯವಾಗುತ್ತದೆ ಎಂದು ಹೇಳುವ ನಿಮ್ಮ ಅಭಿಪ್ರಾಯವೇನು? ನದಿಯಲ್ಲಿರುವ ಪರಮಾಣುಗಳನ್ನು ನದಿಯೆಂದು ಕರೆಯುತ್ತೀರೋ? ಎಲ್ಲಾ ಪರಮಾಣುಗಳ ಸಂಸ್ಥಾನವಿಶೇಷವನ್ನು ನದಿಯೆಂದು ಕರೆಯುತ್ತೀರೋ? ಅಥವಾ ಪರಮಾಣುಗಳಿಂದ ಆರಬ್ಧವಾದ ಅವಯವಿಯನ್ನು ನದಿಯೆಂದು ಕರೆಯುತ್ತೀರೋ? ಸಂಸ್ಥಾನವಿಶೇಷವನ್ನಾಗಲೀ, ಅವಯವಿಯನ್ನಾಗಲೀ ನದಿಯೆಂದು ಕರೆಯಲು ಸಾಧ್ಯವಿಲ್ಲ. ಯಾವಾಗ ಸಮುದ್ರದಲ್ಲಿ ನದಿಯು ಪ್ರವೇಶ ಮಾಡಿತೋ, ಆವಾಗ ಪರಮಾಣುಗಳೆಲ್ಲ ವಿಭಕ್ತವಾಗುವುದರಿಂದ ಅವಯವಿಯು

(೧) ವಸಿಷ್ಠರು ಒಮ್ಮೆ ತೀರ್ಥಯಾತ್ರೆಗೆ ಹೋಗಿದ್ದರು. ತಮ್ಮ ಕಮಂಡಲುವಿನಲ್ಲಿ ಎಲ್ಲಾ ನದಿಗಳ ನೀರನ್ನು ಬೆರೆಸಿಕೊಂಡು ಸ್ವರ್ಗಲೋಕಕ್ಕೆ ಒಮ್ಮೆ ತೆರಳಿದ್ದರು. ಆವಾಗ ಅಲ್ಲಿ ಗಂಗಾನೀರನ್ನು ಕೇಳಿದಾಗ ತಮ್ಮ ಕಮಂಡಲುವಿನ ಗಂಗಾನೀರನ್ನು ಮಾತ್ರ ತೆಗೆದುಕೊಟ್ಟರೆಂಬ ಕಥೆಯು ಪ್ರಸಿದ್ಧವಾಗಿದೆ. ಅದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

ಮತ್ತು ಹಾಲಿನ ಜೊತೆಗೆ ನೀರನ್ನು ಸೇರಿಸಿದಾಗ ನೀರೇ ಹಾಲಾಗುವುದಿಲ್ಲ, ಹಾಲಿನಂತಾಗುತ್ತದೆ ಎಂಬುದು ನಮಗೆ ಕಂಡಿರುವ ಉದಾಹರಣೆ. ನೀರಿಗೆ ನೀರನ್ನು ಸೇರಿಸಿದಾಗ ಪರಿಮಾಣದಲ್ಲಿ ಭೇದವು ಕಾಣಿಸುತ್ತದೆ. ಬಿಸಿನೀರಿಗೆ ತಣ್ಣಗಿರುವ ನೀರನ್ನು ಸೇರಿಸಿದಾಗ ಸ್ಪರ್ಶದಲ್ಲಿ ಭೇದವು ಕಾಣಿಸುತ್ತದೆ. ಶುದ್ಧವಾದ ನೀರಿಗೆ ಉಪ್ಪುನೀರನ್ನು ಸೇರಿಸಿದಾಗ ರಸಭೇದವು ಕಾಣಿಸುತ್ತದೆ. ಆದ್ದರಿಂದ ನೀರಿಗೆ ನೀರು ಸೇರಿದಾಗ ಐಕ್ಯವುಂಟಾಗುವುದಿಲ್ಲ. ಸಾದೃಶ್ಯವಷ್ಟೇ ಉಂಟಾಗುತ್ತದೆಂದು ಹೇಳಬೇಕು.

**न केवलं ''यतो वृद्धिः'' इति स्मृत्युक्तं परिमाणभेदमात्रम् । किन्तु शीतोष्णयोर्मधुरोषरयोस्सङ्गतसरित्सम्बन्धिजलयोर्मेलने स्पर्शादिभेदोऽपि दृश्यते ।**

'ಯತೋ ವೃದ್ಧಿಃ' ಎಂಬ ಸ್ಮೃತಿಯಲ್ಲಿ ಹೇಳಿದಂತೆ ನೀರಿಗೆ ಮತ್ತಷ್ಟು ನೀರು ಸೇರಿದಾಗ ಪರಿಮಾಣದಲ್ಲಿ ವೈಲಕ್ಷಣ್ಯವಿದೆ ಎಂಬುದಷ್ಟೇ ತಿಳಿಯುವುದಲ್ಲ. ತಣ್ಣೀರಿಗೆ ಬಿಸಿನೀರು ಸೇರಿದಾಗ ಸ್ಪರ್ಶಭೇದದ ಅನುಭವವೂ ಕೂಡ ನಮಗೆ ಬರುತ್ತದೆ. ಸಿಹಿ ನೀರಿಗೆ ಉಪ್ಪುನೀರು ಸೇರಿದಾಗ ರಸದ ಭೇದವು ಅನುಭವಕ್ಕೆ ಬರುತ್ತದೆ. ಪರಸ್ಪರ ನದಿಗಳು ಒಟ್ಟಿಗೆ ಸೇರಿದಾಗಲೂ ವೈಲಕ್ಷಣ್ಯಜ್ಞಾನವು ನಮಗೆ ಬರುತ್ತದೆ.

**अन्यथा हंसेन विविच्यमानयोः क्षीरनीरयोरप्यभेदः स्यात् । द्रुतस्वर्णताम्रयोर्मेलनेनाभेदे तत्कार्ये पणादौ केवलस्वर्णादि कार्यपणान्मूल्यादिभेदश्च न स्यात् ।**

ಹೀಗೊಪ್ಪದಿದ್ದರೆ ಹಂಸಪಕ್ಷಿಯು ಹಾಲು ಮತ್ತು ನೀರುಗಳನ್ನು ಬೇರ್ಪಡಿಸಿದಾಗಲೂ ಅಭೇದವು ಇಲ್ಲದಿರಬೇಕಾದೀತು. ಸುವರ್ಣ ಹಾಗೂ ತಾಮ್ರಗಳನ್ನು ಕಾಯಿಸಿ ದ್ರವವನ್ನಾಗಿ ಮಾಡಿ, ಪುನಃ ಎರಡನ್ನು ಒಟ್ಟಿಗೆ ಸೇರಿಸಿದರೆ ಕೇವಲ ಸುವರ್ಣಕ್ಕೆ ಎಷ್ಟು ಬೆಲೆ ಇರುತ್ತದೋ, ತಾಮ್ರವನ್ನು ಸೇರಿಸಿದ ಸುವರ್ಣಕ್ಕೂ ಅಷ್ಟೇ ಬೆಲೆಯು ಲೋಕದಲ್ಲಿ ಇರಬೇಕಾದೀತು. ಆದರೆ ಯಾರೂ ಕೂಡ ಶುದ್ಧ ಬಂಗಾರಕ್ಕೆ ಎಷ್ಟು ಬೆಲೆಯನ್ನು ನೀಡುತ್ತಾರೋ, ತಾಮ್ರಮಿಶ್ರಿತವಾದ ಸುವರ್ಣಕ್ಕೆ ಅಷ್ಟು ಬೆಲೆಯನ್ನು ನೀಡುವುದಿಲ್ಲ.

**क्षीरे सिक्ता सुरा च क्षीरं स्यात् । प्रसिद्धश्च लोके सङ्गतानां कृष्णादिसप्तनदीजलानां गङ्गादिसहस्रनदीजलानां च पुनः प्रत्येकं समुद्रसङ्गमार्थं विभक्तानां विलक्षणपूर्वरूपरसादिमत्तया भेदः ।**

ಹಾಲಿಗೆ ಒಂದು ಹನಿ ಸುರೆಯನ್ನು ಸೇರಿಸಿದರೆ ಅದೂ ಕೂಡ ನಿಷಿದ್ಧವಾಗದೇ ಹಾಲೇ ಆಗಬೇಕಾದೀತು.

ಮತ್ತು ಲೋಕದಲ್ಲಿ ಕೃಷ್ಣ ಮೊದಲಾದ ಏಳು ನದಿಗಳು ಒಟ್ಟಿಗೆ ಸೇರುತ್ತವೆ. ಗಂಗಾದಿ ಸಾವಿರ ನದಿಗಳು ಒಟ್ಟಿಗೆ ಸೇರುತ್ತವೆ, ಪುನಃ ಪ್ರತ್ಯೇಕವಾಗಿ ವಿಭಕ್ತವಾಗಿ ಸಮುದ್ರವನ್ನು ಸೇರುತ್ತವೆಂಬುದು ಲೋಕದಲ್ಲಿ ಪ್ರಸಿದ್ಧವಾಗಿದೆ. ಒಟ್ಟಿಗೆ ಸೇರಿದಾಗ ಮತ್ತು ವಿಭಕ್ತವಾದಾಗ ಈ ನದಿಗಳಲ್ಲಿರುವ ರೂಪರಸಾದಿಗಳ ಭೇದಜ್ಞಾನವು ನಮಗೆ ಅನುಭವಕ್ಕೆ ಬರುತ್ತಿದೆ.[೧]

**किञ्च ''अवस्थितेरिति काशकृत्स्न.'' इति सूत्रे भामत्यामेव ''का पुनर्नद्यभिमता आयुष्मतः । किं पाथः परमाणव उतैषां संस्थानभेद आहोस्वित्तदारब्धोऽवयवी । तत्र संस्थानभेदस्य वाऽवयविनो वा समुद्र निवेशे विनाशात्कस्य समुद्रेणैकता । नदीपाथः परमाणूनां तु समुद्रपाथः परमाणुभ्यः पूर्वावस्थितेभ्यो भेद एव । नाभेदः । एवं समुद्रादपि तेषां भेद एव'' इत्यादिना नदीसमुद्रयोरभेदो निरस्तः ।**

ಆಯುಷ್ಮಂತನಾದ ಪೂರ್ವಪಕ್ಷಿಯಾದ ನಿನ್ನ ಅಭಿಪ್ರಾಯವೇನು ? ನದೀ ಮತ್ತು ಸಮುದ್ರಗಳಿಗೆ ಐಕ್ಯವಿಲ್ಲ ಎಂಬುದು ಭಾಮತಿಯ ಮಾತಿನಿಂದಲೇ ಸ್ಪಷ್ಟವಾಗುತ್ತದೆ. 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಭಾಮತಿಯಲ್ಲಿ ಹೀಗೆ ಹೇಳಲಾಗಿದೆ - 'ಕಾ ಪುನರ್ನದ್ಯಭಿಮತಾ ಆಯುಷ್ಮತಃ । ಕಿಂ ಪಾಥಃ ಪರಮಾಣವ ಉತೈಷಾಂ ಸಂಸ್ಥಾನಭೇದ ಆಹೋಸ್ವಿತ್ತದಾರಬ್ಧೋಽವಯವೀ । ತತ್ರ ಸಂಸ್ಥಾನಭೇದಸ್ಯ ವಾಽವಯವಿನೋ ವಾ ಸಮುದ್ರ ನಿವೇಶೇ ವಿನಾಶಾತ್ಕಸ್ಯ ಸಮುದ್ರೇಣೈಕತಾ । ನದೀಪಾಥಃ ಪರಮಾಣೂನಾಂ ತು ಸಮುದ್ರಪಾಥಃ ಪರಮಾಣುಭ್ಯಃ ಪೂರ್ವಾವಸ್ಥಿತೇಭ್ಯೋ ಭೇದ ಏವ । ನಾಭೇದಃ । ಏವಂ ಸಮುದ್ರಾದಪಿ ತೇಷಾಂ ಭೇದ ಏವ' ನದಿಯು ಸಮುದ್ರದಲ್ಲಿ ಐಕ್ಯವಾಗುತ್ತದೆ ಎಂದು ಹೇಳುವ ನಿಮ್ಮ ಅಭಿಪ್ರಾಯವೇನು? ನದಿಯಲ್ಲಿರುವ ಪರಮಾಣುಗಳನ್ನು ನದಿಯೆಂದು ಕರೆಯುತ್ತೀರೋ? ಎಲ್ಲಾ ಪರಮಾಣುಗಳ ಸಂಸ್ಥಾನವಿಶೇಷವನ್ನು ನದಿಯೆಂದು ಕರೆಯುತ್ತೀರೋ? ಅಥವಾ ಪರಮಾಣುಗಳಿಂದ ಆರಬ್ಧವಾದ ಅವಯವಿಯನ್ನು ನದಿಯೆಂದು ಕರೆಯುತ್ತೀರೋ? ಸಂಸ್ಥಾನವಿಶೇಷವನ್ನಾಗಲೀ, ಅವಯವಿಯನ್ನಾಗಲೀ ನದಿಯೆಂದು ಕರೆಯಲು ಸಾಧ್ಯವಿಲ್ಲ. ಯಾವಾಗ ಸಮುದ್ರದಲ್ಲಿ ನದಿಯು ಪ್ರವೇಶ ಮಾಡಿತೋ, ಆವಾಗ ಪರಮಾಣುಗಳೆಲ್ಲ ವಿಭಕ್ತವಾಗುವುದರಿಂದ ಅವಯವಿಯು

(೧) ವಸಿಷ್ಠರು ಒಮ್ಮೆ ತೀರ್ಥಯಾತ್ರೆಗೆ ಹೋಗಿದ್ದರು. ತಮ್ಮ ಕಮಂಡಲುವಿನಲ್ಲಿ ಎಲ್ಲಾ ನದಿಗಳ ನೀರನ್ನು ಬೆರಸಿಕೊಂಡು ಸ್ವರ್ಗಲೋಕಕ್ಕೆ ಒಮ್ಮೆ ತೆರಳಿದ್ದರು. ಆವಾಗ ಅಲ್ಲಿ ಗಂಗಾನೀರನ್ನು ಕೇಳಿದಾಗ ತಮ್ಮ ಕಮಂಡಲುವಿನ ಗಂಗಾನೀರನ್ನು ಮಾತ್ರ ತೆಗೆದುಕೊಟ್ಟರೆಂಬ ಕಥೆಯು ಪ್ರಸಿದ್ಧವಾಗಿದೆ. ಅದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

ನಾಶವಾಗುತ್ತದೆ. ಎಲ್ಲಾ ಪರಮಾಣುಗಳು ಸೇರಿ, ಯಾವ ಸಂಸ್ಥಾನವಿಶೇಷ ಉತ್ಪನ್ನವಾಗಿತ್ತೋ ಅದೂ ಕೂಡ ನಾಶವಾಗುತ್ತದೆ. ಆದ್ದರಿಂದ ಸಂಸ್ಥಾನವಿಶೇಷಕ್ಕೂ ಸಮುದ್ರಕ್ಕೂ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ನದಿಯ ಪರಮಾಣುಗಳಿಗೂ ಸಮುದ್ರದ ಪರಮಾಣುಗಳಿಗೂ ಐಕ್ಯವನ್ನು ಹೇಳಬೇಕು. ಇದೂ ಕೂಡ ಸಾಧ್ಯವಿಲ್ಲ. ಏಕೆಂದರೆ ಸಮುದ್ರದ ಪರಮಾಣುಗಳು ಮೊದಲೇ ಇದ್ದವು. ನದಿಯ ಪರಿಮಾಣುಗಳು ಈಗ ಬಂದಿವೆ. ಇವೆರಡಕ್ಕೆ ಐಕ್ಯವನ್ನು ಹೇಳಲು ಹೇಗೆ ಸಾಧ್ಯ? ಹೀಗೆ ಭಾಮತಿಯಲ್ಲಿ ನದೀ ಮತ್ತು ಸಮುದ್ರಗಳಿಗೆ ಐಕ್ಯವನ್ನು ನಿರಾಕರಣೆ ಮಾಡಲಾಗಿದೆ.

**एवञ्च –**

**माषादिवच राश्यादौ सभादौ ब्राह्मणादिवत् ।**
**जले जलान्तरस्यापि संश्लेषो न त्वभिन्नता ॥१॥**
**द्रवद्रव्यत्वेनान्योन्यं व्यामिश्रणात्तु भेदाप्रतीतिरिति ।**

ಆದ್ದರಿಂದ

ಮಾಷಾದಿವಚ್ಚ ರಾಶ್ಯಾದೌ ಸಭಾದೌ ಬ್ರಾಹ್ಮಣಾದಿವತ್ ।
ಜಲೇ ಜಲಾಂತರಸ್ಯಾಪಿ ಸಂಶ್ಲೇಷೋ ನ ತ್ವಭಿನ್ನತಾ ॥೧॥

ಉದ್ದಿನ ರಾಶಿಯಲ್ಲಿ ಪುನಃ ಉದ್ದು ಸೇರಿದಾಗ ಹೇಗೆ ಅಭೇದವು ಬರುವುದಿಲ್ಲವೋ, ಸಭೆಯಲ್ಲಿ ಬ್ರಾಹ್ಮಣನು ಪ್ರವೇಶ ಮಾಡಿದಾಗ ಸಭೆಯಿಂದ ಬ್ರಾಹ್ಮಣನಿಗೆ ಅಭೇದವು ಹೇಗೆ ಬರುವುದಿಲ್ಲವೋ, ಅದೇ ರೀತಿಯಾಗಿ ಮೊದಲಿರುವ ನೀರಿನಲ್ಲಿ ಮತ್ತಷ್ಟು ನೀರು ಸೇರಿದಾಗ ಸಂಶ್ಲೇಷವನ್ನೇ ಹೇಳಬೇಕು. ಹೊರತು, ಐಕ್ಯವನ್ನು ಹೇಳಬಾರದು.

ಏಕೆಂದರೆ ಮೊದಲಿರುವ ನೀರು ಹಾಗೂ ಅನಂತರದ ನೀರು ಎರಡೂ ಕೂಡ ದ್ರವದ್ರವ್ಯವಾಗಿರುವುದರಿಂದ ಪರಸ್ಪರ ಬೆರೆತಿರುವುದರಿಂದ ಇರುವ ಅಭೇದವು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅಷ್ಟೇ ಹೊರತು ಭೇದವೇ ಇಲ್ಲವೆಂದು ಹೇಳಬಾರದು. (ಈ ದೃಷ್ಟಾಂತದ ಮಾತಿನಂತೆ ಮುಕ್ತಜೀವರು ಬ್ರಹ್ಮನಲ್ಲಿ ಐಕ್ಯವನ್ನು ಹೊಂದುವುದಿಲ್ಲ ಹೊರತು ಬ್ರಹ್ಮನ ಆಕೃತಿಯಂತೆ ತಾವೂ ಕೂಡ ಆಕೃತಿಯನ್ನು ಪಡೆಯುತ್ತಾರೆ. ಅಥವಾ ಬ್ರಹ್ಮನ ಸ್ಥಾನವನ್ನು ಪಡೆಯುತ್ತಾರೆ ಎಂದೇ ವ್ಯಾಖ್ಯಾನ ಮಾಡಬೇಕು.)

**प्रकाशः –**

**सङ्ग्रहं व्याचष्टे – उक्तं द्विविधमिति ॥** एकपदलक्षणयोभयपदलक्षण-येत्युक्तद्विविधमित्यर्थः । प्राक् त्रैविध्योक्तावप्येक पदलक्षणापक्षेऽवान्तरभेदम-विवक्षितत्वाद्विविधमित्युक्तम् ।

ಸಿದ್ಧಾಂತದ ಸಂಗ್ರಹವನ್ನು ಗ್ರಂಥಕಾರರು 'ವಾಕ್ಯಾಂತರವಿರೋಧಾಚ್ಚ' ಎಂಬ ಶ್ಲೋಕದಲ್ಲಿ ಮಾಡಿರುತ್ತಾರೆ. ಸ್ವತಃ ತಾವೇ ಸಂಗ್ರಹಶ್ಲೋಕವನ್ನು 'ಉಕ್ತಂ ದ್ವಿವಿಧಮ್' ಇತ್ಯಾದಿ ವಾಕ್ಯದಿಂದ ವಿವರಣೆ ಮಾಡುತ್ತಿದ್ದಾರೆ. ಗ್ರಂಥದಲ್ಲಿ 'ದ್ವಿವಿಧಮ್ ಪಕ್ಷತ್ರಯಂ' ಎಂಬುದಾಗಿ ಹಿಂದೆ ಎರಡು ಬಗೆಯ ಪೂರ್ವಪಕ್ಷಗಳನ್ನು ಹೇಳಲಾಗಿದೆಯೆಂದು ಉಲ್ಲೇಖಿಸಿದ್ದಾರೆ. ವಿಚಾರ ಮಾಡಿದರೆ ಒಟ್ಟು ಮೂರು ಬಗೆಯ ಪೂರ್ವಪಕ್ಷಗಳನ್ನು ಹಿಂದೆ ತೋರಿಸಲಾಗಿತ್ತು. ಆದರೆ ಇಲ್ಲಿ 'ದ್ವಿವಿಧಮ್' ಎಂಬುದಾಗಿ ಎರಡು ಬಗೆಯ ಪೂರ್ವಪಕ್ಷಗಳೆಂದು ಉಲ್ಲೇಖಿಸಲು ಕಾರಣವಿದೆ - 'ಪರೇऽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯಲ್ಲಿ ಏಕಪದಲಕ್ಷಣ ಹಾಗೂ ಉಭಯಪದ ಲಕ್ಷಣ ಎಂಬ ಎರಡೇ ಪ್ರಕಾರಗಳು ಉಳಿಯುತ್ತವೆ. ಏಕಪದಲಕ್ಷಣ ಪಕ್ಷದಲ್ಲಿ ಜೀವವಾಚಕವಾದ ಪದಕ್ಕೆ ಲಕ್ಷಣಾ ಮಾಡಬೇಕೆಂಬುದು ಒಂದು ಪ್ರಕಾರ. ಬ್ರಹ್ಮವಾಚಕವಾದ ಪದಕ್ಕೆ ಲಕ್ಷಣಾ ಮಾಡಬೇಕೆಂಬುದು ಮತ್ತೊಂದು ಪ್ರಕಾರ. ಇವೆರಡನ್ನು ಏಕಪದಲಕ್ಷಣಾ ಎಂದು ಸಂಗ್ರಹಿಸಿ, ಎರಡೂ ಪದಗಳಿಗೆ ಲಕ್ಷಣಾವನ್ನು ಮಾಡುವ ಪಕ್ಷವೆಂದು ಗ್ರಂಥಕಾರರು ಪರಿಗಣಿಸಿದ್ದಾರೆ.

**प्रकाशः** – श्रौतत्वात् कथमसिद्ध इत्यत आह – **एकीभवन्तीति** ।। ''उदकं तूदके सिक्तम्'' इति स्मृतिरादिपदार्थः ।।

ಮೋಕ್ಷದಲ್ಲಿ ಅಭೇದವು ಅಸಿದ್ಧವೆಂದು ಗ್ರಂಥದಲ್ಲಿ ಹೇಳಿದ್ದಾರೆ. ಆದರೆ ಏಕೀಭವಂತಿ' ಎಂಬ ಶ್ರುತಿಯಿಂದ ಅಭೇದವು ಸಿದ್ಧವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಏಕೀಭವಂತಿ' ಇತ್ಯಾದಿ ವಾಕ್ಯದಿಂದಲೇ ಉತ್ತರಿಸುತ್ತಿದ್ದಾರೆ. ಆದಿಪದದಿಂದ 'ಉದಕಂ ತೂದಕೇ ಸಿಕ್ತಮ್' ಎಂಬ ಸ್ಮೃತಿಯನ್ನು ವಿವಕ್ಷಿಸಬೇಕು. ಶುದ್ಧವಾದ ನೀರನ್ನು, ಶುದ್ಧವಾದ ನೀರಿನಲ್ಲಿ ಬೆರೆಸಿದಾಗ ಐಕ್ಯವು ಉಂಟಾಗುವುದಿಲ್ಲ ಎಂದು ಸ್ಮೃತಿವಾಕ್ಯ ಹೇಳುತ್ತಿದೆ.

**प्रकाशः** – द्वितीयपादं विवृणोति ।। **न्यायविवरणे चेति** ।। एतेन ''निरञ्जन'' इत्यादिटीकैतन्मूलेत्युक्तं भवति ।

'ಪೂರ್ವಾಪರವಿರೋಧತಃ' ಎಂಬ ಎರಡನೆಯ ಪಾದವನ್ನು ಗ್ರಂಥಕಾರರು 'ನ್ಯಾಯವಿವರಣೇ ಚ' ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ. ನ್ಯಾಯವಿವರಣವನ್ನು ಉಲ್ಲೇಖಿಸಿದ್ದರಿಂದ 'ನಿರಂಜನ' ಇತ್ಯಾದಿ ಟೀಕೆಯು ನ್ಯಾಯವಿವರಣದ ವ್ಯಾಖ್ಯಾನವಾಗಿದೆಯೆಂದೂ ಕೂಡ ಹೇಳಿದಂತಾಯಿತು.

**प्रकाशः** – तृतीयपादं व्यनक्ति ।। **अभेदेति** ।। सहयोगे तृतीयाभिधानादिति भावः ।

'ವಾಕ್ಯಾಂತರವಿರೋಧಾಚ್ಚ' ಎಂಬ ಮೂರನೆಯ ಪಾದದಲ್ಲಿ ಐಕ್ಯಪ್ರತಿಪಾದಕವಾದ ಶ್ರುತಿಗೆ ಬೇರೆ ಶ್ರುತಿವಾಕ್ಯಗಳ ವಿರೋಧವನ್ನು ಹೇಳಿದ್ದಾರೆ. ಅದನ್ನು 'ಅಭೇದಪರತ್ವೇ ಚ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಒಂದು ವೇಳೆ ಶ್ರುತಿಯು ಐಕ್ಯಪರವಾದರೆ 'ಪರೇಣ' ಎಂಬುದಾಗಿ ತೃತೀಯಾವಿಭಕ್ತಿಯು

ಇರಬೇಕಿತ್ತು. ಸಹಯೋಗದಲ್ಲಿ ತೃತೀಯಾವಿಭಕ್ತಿಯನ್ನು ಹೇಳಬೇಕೆಂದು ವ್ಯಾಕರಣವು ಹೇಳಿದೆ. ಆದರೆ ಶ್ರುತಿಯಲ್ಲಿ 'ಪರೇ' ಎಂಬುದಾಗಿ ಸಪ್ತಮಿವಿಭಕ್ತಿಯಲ್ಲಿ ಹೇಳಿದ್ದರಿಂದ ಸ್ಥಾನೈಕ್ಯವನ್ನೇ ವಿವಕ್ಷಿಸಬೇಕು.

**प्रकाशः – ननु कर्माण्येकीभवन्तीत्यस्य चित्स्वरूपे भ्रान्त्यारोपितानि ज्ञानेन निवर्त्यंत इत्यभिप्राय इत्यत आह – इत्यादिबाधकानां चेति ।। तथात्वे विज्ञानात्मनोऽपि निवृत्तिस्स्यात्। सकृच्छ्तैकीभावशब्दस्यार्थद्वयायोगात् ।**

'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ' ಎಂಬ ಹಿಂದಿನ ವಾಕ್ಯದಲ್ಲಿ ವಿಜ್ಞಾನಮಯ ಶಬ್ದದ ಜೊತೆಗೆ ಕರ್ಮಶಬ್ದವನ್ನು ಪ್ರಯೋಗಿಸಿದ್ದರಿಂದ ವಿಜ್ಞಾನಮಯನಾದ ಜೀವನಿಗೆ ನೀವು ಬ್ರಹ್ಮನಲ್ಲಿ ಐಕ್ಯವನ್ನು ಹೇಳುವುದಾದರೆ ಕರ್ಮಕ್ಕೂ ಕೂಡ ಐಕ್ಯವನ್ನು ಹೇಳಬೇಕಾಗುತ್ತದೆ. ಆದರೆ ಕರ್ಮಗಳಿಗೆ ಬ್ರಹ್ಮನ ಜೊತೆಗೆ ಐಕ್ಯವನ್ನು ಹೇಳಲು ಸಾಧ್ಯವಿಲ್ಲವೆಂದು ನೀವೂ ಕೂಡ ಒಪ್ಪಿರುತ್ತೀರಿ ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಇದರ ಮೇಲೆ ಪೂರ್ವಪಕ್ಷಿಯು ಹೀಗೆ ಆಕ್ಷೇಪ ಮಾಡುತ್ತಾನೆ -

ಆಕ್ಷೇಪ - ಕರ್ಮಗಳೆಲ್ಲವೂ ಚಿತ್‌ಸ್ವರೂಪದಲ್ಲಿ ಭ್ರಾಂತಿಯಿಂದ ಆರೋಪಿತವಾಗಿವೆ. ಚಿತ್ ಸ್ವರೂಪದ ಯಥಾರ್ಥಜ್ಞಾನವು ಬಂದಾಗ ಭ್ರಾಂತಿಯು ನಿವೃತ್ತವಾಗುತ್ತದೆ. ಹೀಗೆ ಚಿತ್‌ಸ್ವರೂಪದಲ್ಲಿ ಆರೋಪಿತವಾಗುವ ಕಾರಣದಿಂದಲೇ ಕರ್ಮಗಳು ಬ್ರಹ್ಮನಲ್ಲಿ ಐಕ್ಯವನ್ನು ಹೊಂದಿವೆ ಎಂದು ಶ್ರುತಿ ಹೇಳುತ್ತಿದೆ. ಆದ್ದರಿಂದ 'ಕರ್ಮಾಣಿ ವಿಜ್ಞಾನಮಯಶ್ಚ' ಎಂಬ ಶ್ರುತಿಯು ಜೀವನಿಗೆ ಹಾಗೂ ಕರ್ಮಗಳಿಗೆ ಐಕ್ಯವನ್ನು ಹೇಳುತ್ತವೆಂದೇ ನಾವು ವ್ಯಾಖ್ಯಾನ ಮಾಡುತ್ತೇವೆ.

ಸಮಾಧಾನ - ಈ ಆಕ್ಷೇಪಕ್ಕೆ 'ಇತ್ಯಾದಿಬಾಧಕಾನಾಂ' ಇತ್ಯಾದಿ ಗ್ರಂಥದಿಂದಲೇ ಉತ್ತರಿಸಿದ್ದಾರೆ. ಒಂದುವೇಳೆ ಕರ್ಮಗಳಿಗೆ ಬ್ರಹ್ಮನಲ್ಲಿ ಆರೋಪಿತತ್ವವಿರುವ ಕಾರಣದಿಂದಲೇ ಐಕ್ಯವನ್ನು ವಿವಕ್ಷಿಸುವುದಾದಲ್ಲಿ ಜೀವನಿಗೂ ಕೂಡ ಅಂಥ ಐಕ್ಯವನ್ನು ಹೇಳಬೇಕಾಗುತ್ತದೆ. ಭ್ರಾಂತಿಯಿಂದ ಕರ್ಮಗಳಿಗೆ ನಿವೃತ್ತಿಯನ್ನು ಹೇಳಿದಂತೆ ವಿಜ್ಞಾನರೂಪನಾದ ಜೀವನಿಗೂ ಕೂಡ ನಿವೃತ್ತಿಯನ್ನು ಹೇಳಬೇಕಾಗುತ್ತದೆ. ಏಕೆಂದರೆ ಒಮ್ಮೆ ಮಾತ್ರ ಶ್ರುತವಾದ 'ಏಕೀಭಾವ' ಶಬ್ದಕ್ಕೆ ಎರಡು ಅರ್ಥಗಳನ್ನು ಹೇಳಬಾರದು.

**प्रकाशः – ''आकाशः सम्भूत'' इत्यादौ त्वनन्यगत्या तथात्वमुपेयते ।**

ಆಕ್ಷೇಪ - 'ಆಕಾಶಃ ಸಂಭೂತಃ' ಎಂಬ ಶ್ರುತಿಯಲ್ಲಿ ಸಂಭೂತ ಶಬ್ದವು ಒಮ್ಮೆ ಮಾತ್ರ ಪಠಿತವಾಗಿದ್ದರೂ ತತ್ವವಾದಿಗಳಾದ ನೀವು ಅನೇಕಾರ್ಥಗಳನ್ನು ಒಪ್ಪುತ್ತೀರಿ. ಜಡಭೂತವಾದ ಆಕಾಶವು ಮೊದಲು ಇರಲಿಲ್ಲ ಅನಂತರ ಹುಟ್ಟಿತು ಎಂದು ಅರ್ಥೈಸುತ್ತೀರಿ. ಆಕಾಶಾಭಿಮಾನಿಯಾದ ದೇವತೆಗೆ ಕೇವಲ ದೇಹದ ಉತ್ಪತ್ತಿಯನ್ನು ಹೇಳುತ್ತೀರಿ. ಅಂತರ್ಯಾಮಿಯಾದ ಪರಮಾತ್ಮನಿಗೆ ಅಭಿವ್ಯಕ್ತಿಯನ್ನು ಹೇಳುತ್ತೀರಿ. ಹೀಗೆ ಒಮ್ಮೆ ಶ್ರುತವಾದ ಶಬ್ದಕ್ಕೆ ಅನೇಕಾರ್ಥಗಳನ್ನು ನೀವು ಹೇಳುವಂತೆ ನಾವೂ ಸಹ ಒಮ್ಮೆ ಶ್ರುತವಾದ ಏಕೀಭವಂತಿ ಎಂಬ ಪದಕ್ಕೆ ಜೀವನ ವಿಷಯದಲ್ಲಿ ಬೇರೆ ಅರ್ಥವನ್ನು ಕರ್ಮದ ವಿಷಯದಲ್ಲಿ ಬೇರೆ ಅರ್ಥವನ್ನು ಹೇಳಿದರೆ ಏನು ತಪ್ಪು ?

ಸಮಾಧಾನ - 'ಆಕಾಶಃ ಸಂಭೂತಃ' ಎಂಬಲ್ಲಿ ಬೇರೆ ಗತಿಯಿಲ್ಲದೇ ನಾವು ಅನೇಕಾರ್ಥವನ್ನು ಹೇಳುತ್ತೇವೆ. ಭೂತಾಕಾಶದ ದೃಷ್ಟಿಯಿಂದ ಇಲ್ಲದ ಪದಾರ್ಥವು ಹುಟ್ಟಿತೆಂದೇ ಅರ್ಥೈಸಬೇಕು. ಅಭಿಮಾನಿದೇವತೆಯಲ್ಲಿ ದೇಹಮಾತ್ರದ ಉತ್ಪತ್ತಿಯೆಂಬರ್ಥವನ್ನು ಹೇಳಬೇಕು. ಪರಮಾತ್ಮನ ವಿಷಯದಲ್ಲಿ ಅಭಿವ್ಯಕ್ತಿಯನ್ನು ಮಾತ್ರ ಹೇಳಬೇಕು. ಈ ಅರ್ಥಗಳನ್ನು ಹೇಳುವುದು ಅತ್ಯಂತ ಅನಿವಾರ್ಯ. ಆದರೆ ನಿಮಗೆ ಅಂಥ ಅನಿವಾರ್ಯತೆ ಇರುವುದಿಲ್ಲ. 'ಏಕೀಭವಂತಿ' ಎಂಬ ಶ್ರುತಿಗೆ ನಾವು ವ್ಯಾಖ್ಯಾನ ಮಾಡುವಂತೆ ಸ್ಥಾನೈಕ್ಯವನ್ನು ಮತ್ಯೈಕ್ಯವನ್ನು ಹೇಳಿಯೇ ವ್ಯಾಖ್ಯಾನ ಮಾಡಬಹುದು.

**प्रकाशः** – किञ्च कर्मणां निवृत्त्युपगतौ तेषां कलात्वेन ''गताः कलाः पञ्चदश'' इत्यत्र कर्मभिस्सह षोडशकला इत्येवोक्तिस्स्यान्न तु पृथङ्निवृत्त्युक्तिः ।

ಮತ್ತು ಕರ್ಮಗಳಿಗೆ ಬ್ರಹ್ಮಜ್ಞಾನದಿಂದ ನಿವೃತ್ತಿಯನ್ನು ಒಪ್ಪುವುದಾದರೆ ಕರ್ಮಾಣಿ ಎಂಬ ಪದವೇ ವ್ಯರ್ಥವಾಗುತ್ತದೆ. ಕರ್ಮಗಳೆಲ್ಲವೂ ಕಲಾರೂಪವಾಗಿರುವುದರಿಂದ ಇದೇ ಶ್ರುತಿಯ ಹಿಂದಿನ ವಾಕ್ಯದಲ್ಲಿ 'ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ' ಎಂಬುದಾಗಿ ಕರ್ಮಗಳು ಷೋಡಶಕಲೆಯಲ್ಲಿಯೇ ಸೇರಿರುತ್ತವೆ. ಕರ್ಮಗಳ ಜೊತೆಗೆ ಷೋಡಶಕಲೆಗಳು ನಿವೃತ್ತವಾಗುತ್ತವೆ ಎಂದೇ ಹೇಳಬೇಕು. ಹೊರತು, ಪ್ರತ್ಯೇಕವಾಗಿ ಕರ್ಮಾಣಿ ಎಂದು ಹೇಳಿದ್ದು ತಪ್ಪಾಗುತ್ತದೆ.

**प्रकाशः** – ''किञ्च कर्मणां विज्ञानात्मना सहोक्तिश्च व्यर्था । निवृत्त्यर्थत्वे ''एकीभवन्ति'' इत्यत्रामुख्यार्थत्वस्य त्वयापि स्वीकार्यत्वात्'' इत्यादीनां तत्वनिर्णयटीकायां न्यायामृते चोक्तेरित्यर्थः ।

ಒಂದು ವೇಳೆ ನಿವೃತ್ತಿಗೋಸ್ಕರ ಜೀವನ ಜೊತೆಯಲ್ಲಿ ಹೇಳಿದ್ದಾರೆ ಎನ್ನುವುದಾದರೆ 'ಏಕೀಭವಂತಿ' ಎಂಬ ಶ್ರುತಿಗೆ ಅಮುಖ್ಯಾರ್ಥವನ್ನು ನೀನೂ ಕೂಡ ಸ್ವೀಕರಿಸಿದಂತಾಯಿತು ಇತ್ಯಾದಿಯಾಗಿ 'ಕಿಂಚ ಕರ್ಮಣಾಂ ವಿಜ್ಞಾನಾತ್ಮನಾ ಸಹೋಕ್ತಿಶ್ಚ ವ್ಯರ್ಥಾ । ನಿವೃತ್ಯರ್ಥತ್ವೇ 'ಏಕೀಭವಂತಿ' ಇತ್ಯತ್ರಾಮುಖ್ಯಾರ್ಥತ್ವಸ್ಯ ತ್ವಯಾಪಿ ಸ್ವೀಕಾರ್ಯತ್ವಾತ್' ಎಂದು ತತ್ವನಿರ್ಣಯಟೀಕೆಯಲ್ಲಿ ಮತ್ತು ನ್ಯಾಯಾಮೃತದಲ್ಲಿ ಅನೇಕ ದೋಷವನ್ನು ಹೇಳಿದ್ದಾರೆ. ಅದನ್ನೂ ಕೂಡ ಇಲ್ಲಿ ಇಟ್ಟುಕೊಳ್ಳಬೇಕು.

**प्रकाशः** – ननु स्थानैक्यपरत्वेऽमुख्यार्थत्वं श्रुतेस्स्यादिति चेन्न । कथितबाधकैर्मुख्यार्थत्यागस्यावश्यकत्वात् । वाक्यशेषबलाच्च मुख्यार्थत्यागो युज्यत इति भावेनाह – **किञ्चेति** ।।

ಆಕ್ಷೇಪ - 'ಏಕೀಭವಂತಿ' ಎಂಬ ಶ್ರುತಿಗೆ ಸ್ಥಾನೈಕ್ಯಪರವಾಗಿ ವ್ಯಾಖ್ಯಾನ ಮಾಡುವುದಾದರೆ ಅಮುಖ್ಯಾರ್ಥವನ್ನು ಒಪ್ಪಿದಂತಾಗುತ್ತದಲ್ಲವೇ?

ಸಮಾಧಾನ - ಹೌದು ! ಶ್ರುತಿಯ ಆಪಾತತಃ ಅರ್ಥವನ್ನು ಸ್ವೀಕರಿಸಲು ಬಾಧಕಗಳು ಬಂದಾಗ ಮುಖ್ಯಾರ್ಥವನ್ನು ತ್ಯಾಗಮಾಡಬೇಕು. ನದೀ, ಸಮುದ್ರಗಳೆಂಬ ವಾಕ್ಯಶೇಷದ ಆಧಾರದಿಂದ ಮುಖ್ಯಾರ್ಥತ್ಯಾಗವು ಯುಕ್ತವೂ ಆಗಿದೆ. ಈ ಅಭಿಪ್ರಾಯದಿಂದ 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – अयं च परिहारो भाष्ये यथोदकं शुद्धे शुद्धमित्यादिस्मृत्युक्तया तुल्यन्यायतया सूचितः । तत्वनिर्णये कण्ठोक्तः । व्याचष्टे ।। **श्रूयते हीति** ।।

ಈ ಪರಿಹಾರವನ್ನು ಭಾಷ್ಯದಲ್ಲಿ 'ಯಥೋದಕಂ ಶುದ್ಧೇ ಶುದ್ಧಮ್' ಇತ್ಯಾದಿ ಮಾತಿನಿಂದ ತುಲ್ಯನ್ಯಾಯದಿಂದ ಸೂಚನೆ ಮಾಡಿದ್ದಾರೆ. ತತ್ವನಿರ್ಣಯದಲ್ಲಿ ಕಂಠತಃ ಹೇಳಿರುತ್ತಾರೆ. ಅದನ್ನು ಗ್ರಂಥಕಾರರು 'ಶ್ರೂಯತೇ ಹಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – पर्यवसितं श्रुत्यर्थमाह – **एवञ्चेति** ।। रथ्येति स्वसङ्ग्रहः – **एकीभूतेति** ।। न्यायविवरणोक्तो मत्यैक्ये दृष्टान्तोऽयम् । प्राक्तनद्वयं तु स्थानैक्ये ।

'ಏಕೀಭವಂತಿ' ಎಂಬ ಶ್ರುತಿಗೆ ಪರ್ಯವಸಿತವಾದ ವ್ಯಾಖ್ಯಾನವನ್ನು 'ಏವಂಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ರಥ್ಯಾಜಲಂ' ಎಂಬ ಶ್ಲೋಕವು ಗ್ರಂಥಕಾರರು ಮಾಡಿದ ಸಂಗ್ರಹಾತ್ಮಕವಾಗಿದೆ. ಹೊರತು ಬೇರೆ ಯಾವ ಪ್ರಮಾಣಗಳ ಉಲ್ಲೇಖವಲ್ಲ. 'ಏಕೀಭೂತಾತ್ ತಥಾ' ಎಂಬ ಶ್ಲೋಕದಲ್ಲಿ ಹೇಳಿದ್ದು ನ್ಯಾಯವಿವರಣದಲ್ಲಿ ಉಲ್ಲೇಖಿಸಿದ ಮತ್ಯೈಕ್ಯದ ದೃಷ್ಟಾಂತವಾಗಿದೆ. 'ರಥ್ಯಾಜಲಂ' ಎಂಬ ಶ್ಲೋಕದಲ್ಲಿ ಹೇಳಿದ ಎರಡು ದೃಷ್ಟಾಂತಗಳು ಸ್ಥಾನೈಕ್ಯಕ್ಕೆ ದೃಷ್ಟಾಂತಗಳಾಗಿವೆ.

**प्रकाशः** – तदुक्तं

जीवस्य परमैक्यं तु बुद्धिसारूप्यमेव तु ।
एकस्थाननिवासो वा व्यक्तिस्थानमपेक्ष्य तु ।। इति ।

ಇದನ್ನೇ

ಜೀವಸ್ಯ ಪರಮೈಕ್ಯಂ ತು ಬುದ್ಧಿಸಾರೂಪ್ಯಮೇವ ತು ।
ಏಕಸ್ಥಾನನಿವಾಸೋ ವಾ ವ್ಯಕ್ತಿಸ್ಥಾನಮಪೇಕ್ಷ್ಯ ತು ॥

ಬ್ರಹ್ಮನ ಜೊತೆಗೆ ಜೀವನು ಏಕೀಭೂತನಾಗುತ್ತಾನೆ ಎಂಬುದಕ್ಕೆ ಸಮಾನ ಬುದ್ಧಿಯುಳ್ಳವನಾಗುತ್ತಾನೆ ಎಂದರ್ಥ. ಅಥವಾ ಒಂದೇ ಸ್ಥಾನವನ್ನು ಪಡೆಯುತ್ತಾನೆ ಎಂದು ವ್ಯಾಖ್ಯಾನ ಮಾಡಿದ್ದಾರೆ.

**प्रकाशः** – भिन्ननदीत्युक्तं भेदं साधयति ।। **नचेति** ।। ननु मानभेदाद्भेदः प्रागेव ''यतो वृद्धिः'' इति स्मृत्युक्तया साधितः । पुनः कथं सङ्ग्रहे तदुपादानमित्यतो विवृणोति ।। **न केवलमिति** ।।

ವಾಕ್ಯಶೇಷದಲ್ಲಿ ಭಿನ್ನವಾದ ನದಿಯ ದೃಷ್ಟಾಂತವನ್ನು ಹೇಳಲಾಗಿದೆ. ನದಿಗಳಿಗಿರುವ ಪರಸ್ಪರ ಭೇದವನ್ನು ಗ್ರಂಥಕಾರರು 'ನಚ' ಇತ್ಯಾದಿ ವಾಕ್ಯದಿಂದ ಸಾಧನೆ ಮಾಡುತ್ತಿದ್ದಾರೆ. ಪರಿಮಾಣಭೇದದಿಂದ ನೀರಿನಲ್ಲಿ ಭೇದವು ಬರುತ್ತದೆಂದು ಹಿಂದೆ 'ಯತೋ ವೃದ್ಧಿಃ' ಎಂಬ ಸ್ಮೃತಿವಾಕ್ಯದಿಂದಲೇ ಸಾಧಿಸಿದ್ದಾಗಿದೆ.

ಪುನಃ ಅದನ್ನೇ ಮಾನಭೇದಾತ್ ಎಂಬ ಸಂಗ್ರಹಶ್ಲೋಕದಲ್ಲಿ ಏಕೆ ಉಪಪಾದನೆ ಮಾಡಿದ್ದಾರೆ ? ಎಂಬ ಪ್ರಶ್ನೆಗೆ ತಾವೇ 'ನ ಕೇವಲಮ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः – द्रुतेति ।। द्रवीभूतेत्यर्थः । ननु भवतु लोके वृद्ध्याद्युपलम्भेन भेदः। नदीसमुद्रयोस्तु तदनुपलम्भात्कथं भेद इति चेन्न । तुल्यन्यायतयाऽनुमान सिद्धत्वात् । ''नहि भिन्नानां नदीजलपरमाणूनां सामुद्राणुभिरैक्यं युज्यते'' इति तत्वनिर्णयादौ भगवत्पादादिभिर्भेदसमर्थनाच्च ।**

'ದ್ರುತಸ್ವರ್ಣ' ಎಂಬಲ್ಲಿ 'ದ್ರುತ' ಶಬ್ದಕ್ಕೆ ದ್ರವತ್ವರೂಪವಾದದ್ದು ಎಂದರ್ಥ.

ಲೋಕದಲ್ಲಿ ಮೊದಲಿನ ನೀರಿಗೆ ಮತ್ತಷ್ಟು ನೀರು ಸೇರಿಸಿದಾಗ ನೀರು ಹೆಚ್ಚಾಗುತ್ತದೆಂದು ಕಂಡಿದೆ. ಆದ್ದರಿಂದ ಮೊದಲಿನ ನೀರಿಗೂ ಅನಂತರದ ನೀರಿಗೂ ಭೇದವನ್ನು ಒಪ್ಪೋಣ. ಆದರೆ ಸಮುದ್ರದಲ್ಲಿ ನದಿಯು ಸೇರಿದಾಗ ಸಮುದ್ರವು ಹೆಚ್ಚಾಗಿದ್ದು ನಮಗೆ ಕಾಣಸುತ್ತಿಲ್ಲ. ಹೀಗಿರುವಾಗ ನದೀ ಮತ್ತು ಸಮುದ್ರಗಳಿಗೆ ಭೇದವನ್ನು ಏಕೆ ಒಪ್ಪಬೇಕು ? ಎಂದು ಪ್ರಶ್ನಿಸಬಾರದು. ಲೋಕದಲ್ಲಿ ಕಂಡಿರುವ ಉದಾಹರಣೆಯ ನ್ಯಾಯದಿಂದ ನದಿಯ ನೀರು ಸಮುದ್ರಕ್ಕೆ ಸೇರಿದಾಗಲೂ ಸಮುದ್ರದ ನೀರು ಹೆಚ್ಚಾಗುತ್ತದೆಂದು ಅನುಮಾನ ಮಾಡಬೇಕು. 'ನಹಿ ಭಿನ್ನಾನ್ನಾಂ ನದೀಜಲಪರಮಾಣೂನಾಂ ಸಾಮುದ್ರಾಣುಭಿಃ ಐಕ್ಯಂ ಯುಜ್ಯತೇ' ಭಿನ್ನವಾದ ನದೀ ಜಲದ ಪರಮಾಣುಗಳು ಸಮುದ್ರದ ಜಲದ ಪರಮಾಣುಗಳು ಐಕ್ಯವನ್ನು ಹೊಂದುವುದಿಲ್ಲವಷ್ಟೇ ಎಂಬುದಾಗಿ ತತ್ವನಿರ್ಣಯದಲ್ಲಿ ಶ್ರೀಮದಾಚಾರ್ಯರೇ ನದೀ ಸಮುದ್ರಗಳ ನೀರಿಗೆ ಭೇದವನ್ನು ಸಮರ್ಥನೆ ಮಾಡಿರುತ್ತಾರೆ.

**प्रकाशः – अङ्गीकृतश्च त्वयापीत्याह – किं चेति ।। दृष्टान्ते भेदोपलम्भोऽस्ति नात्रेत्यतो बीजमाह – द्रवेति ।।**

ಅದ್ವೈತಿಯಾದ ನೀನೂ ಕೂಡ ನದೀ ಸಮುದ್ರಗಳ ನೀರಿಗೆ ಭೇದವನ್ನು ಒಪ್ಪಿರುವಿ ಎಂಬುದಾಗಿ 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ. ಮಾಷಾದಿವ ಎಂಬ ಶ್ಲೋಕದಲ್ಲಿ ಹೇಳಿದ ದೃಷ್ಟಾಂತಗಳಲ್ಲಿ ಭೇದದ ಉಪಲಬ್ಧಿಯು ಅನುಭೂತವಾಗಿದೆ. ಆದರೆ ನೀರಿನಲ್ಲಿ ಭೇದದ ಉಪಲಬ್ಧವು ಅನುಭೂತವಾಗಿಲ್ಲವಲ್ಲವೇ? ಎಂಬ ಪ್ರಶ್ನೆಗೆ ದ್ರವದ್ರವ್ಯತ್ವೇನ ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಎರಡೂ ನೀರುಗಳು ದ್ರವದ್ರವ್ಯರೂಪವಾಗಿರುವುದರಿಂದ ಪರಸ್ಪರ ಮಿಶ್ರಣವಾದರೂ ಭೇದ ಪ್ರತೀತಿಯು ಬರುವುದಿಲ್ಲ.




'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಮುಕ್ತರಾದ ಜೀವರಿಗೆ ಬ್ರಹ್ಮನಿಂದ ಐಕ್ಯವನ್ನು ಹೇಳಲು ಹೊರಟಿಯೇ ಇಲ್ಲ. ಹಾಗೇನಾದರೂ ಹೇಳಿದ್ದರೆ ಮೂರು ಬಗೆಯ ಪೂರ್ವಪಕ್ಷಗಳು. ಒಂದೊಂದು ಪೂರ್ವಪಕ್ಷಗಳಲ್ಲಿ ಮೂರು ಮೂರು ಪ್ರಕಾರಗಳು. ಉದ್ಭವವಾಗುತ್ತಿದ್ದವು. ಆದರೆ ಮುಕ್ತರಿಗೂ ಬ್ರಹ್ಮನಿಗೂ ಅಭೇದವು ಅಸಿದ್ಧವೇ ಆಗಿದೆ. ಆದ್ದರಿಂದ

ವಾಕ್ಯಾಂತರವಿರೋಧಾಚ್ಚ ಪೂರ್ವಾಪರವಿರೋಧತಃ ।
ಉಪಪತ್ತಿವಿರೋಧಾಚ್ಚ ನೈವ ಯುಕ್ತಂ ಮತತ್ರಯಮ್ ॥೧॥

ಈ ಹಿಂದೆ ಮಾಡಿದ ಮೂರು ಬಗೆಯ ಪೂರ್ವಪಕ್ಷಗಳಿಗೂ ಬೇರೆ ಶ್ರುತಿವಾಕ್ಯಗಳ ವಿರೋಧ ಬರುತ್ತದೆ. ಹಿಂದಿನ ಮುಂದಿನ ವಾಕ್ಯಗಳಿಂದಲೇ ವಿರೋಧವು ಸ್ಪಷ್ಟವಾಗಿ ಕಾಣಿಸುತ್ತಿದೆ. ಯುಕ್ತಿವಿರೋಧವೂ ಕೂಡ ತಪ್ಪಿದ್ದಲ್ಲ. ಆದ್ದರಿಂದ ಮೂರು ಪೂರ್ವಪಕ್ಷಗಳೂ ಕೂಡ ಅಯುಕ್ತವಾಗಿವೆ.

'ಸಾಯಂಕಾಲ ಎಲ್ಲಾ ಹಸುಗಳು ಒಂದಾಗುತ್ತವೆ' ಎಂದು ಹೇಳಿದರೆ ಪ್ರತಿಯೊಬ್ಬರೂ ಕೂಡ ಸ್ಥಾನೈಕ್ಯವನ್ನೇ ತಿಳಿಯುತ್ತಾರೆ ಹೊರತು, ಹಸುಗಳಿಗೆ ಐಕ್ಯವನ್ನು ತಿಳಿಯುವುದಿಲ್ಲ. ಅದೇ ರೀತಿಯಾಗಿ ಮುಕ್ತಜೀವರು ಬ್ರಹ್ಮನ ಜೊತೆಯಲ್ಲಿ ಒಂದಾಗುತ್ತಾರೆ ಎಂದರೆ ಸ್ಥಾನೈಕ್ಯವನ್ನು ಹೊಂದುತ್ತಾರೆಂದೇ ಅರ್ಥ. 'ಏಕೀಭವಂತಿ' ಎಂಬ ಶ್ರುತಿಯು ತನ್ನನ್ನು ತಾನೇ ವ್ಯಾಖ್ಯಾನ ಮಾಡಿಕೊಳ್ಳುತ್ತದೆ.

ಭಿನ್ನನದ್ಯಬ್ಧಿದೃಷ್ಟಾಂತಂ ವದಂತೀಯಂ ಶ್ರುತಿಃ ಸ್ವಯಮ್ ।
ಗೌಣಾರ್ಥಪರತಾಂ ಸ್ವಸ್ಯಾ ಆಚಷ್ಟೇ ಸ್ಪಷ್ಟಮೇವ ನಃ ॥

ಈ ಆಥರ್ವಣಶ್ರುತಿಯು ಭಿನ್ನವಾದ ನದೀ ಸಮುದ್ರಗಳ ದೃಷ್ಟಾಂತವನ್ನು ಸ್ವತಃ ತಾನೇ ಹೇಳುವ ಮೂಲಕ ತನಗೆ ಗೌಣಾರ್ಥ ಮಾಡಬೇಕೆಂದು ಸ್ಪಷ್ಟವಾಗಿ ವ್ಯಾಖ್ಯಾನ ಮಾಡಿಕೊಳ್ಳುತ್ತಿದೆ.

ಆದ್ದರಿಂದ

ರಥ್ಯಾಜಲಂ ವಿಷ್ಣುಪದೀಜಲೇನೈಕತ್ವಮಾಗತಮ್ ।
ಇತಸ್ತತೋ ಗತಾ ಗಾವಃ ಸಾಯಮೇಕತ್ವಮಾಗತಾಃ ॥೧॥

ಏಕೀಭೂತಾ ತು ಸಾ ಸೇನಾಪಾಂಡವಾನಭ್ಯವರ್ತತ ।
ಇತ್ಯಾದಿವದ್ಭವೇದೇಕೀಭವಂತೀತ್ಯಾದಿವೇದವಾಕ್ ॥೨॥

'ರಸ್ತೆಯ ನೀರು ಗಂಗಾನದಿಯಲ್ಲಿ ಒಂದಾಯಿತು'. 'ಎಲ್ಲೆಡೆ ಸಂಚರಿಸುತ್ತಿರುವ ಹಸುಗಳು ಸಾಯಂಕಾಲ ಕೊಟ್ಟಿಗೆಯಲ್ಲಿ ಒಂದಾದವು'. 'ಬೇರೆ ಬೇರೆ ಕಡೆಯಿರುವ ಸೇನೆಯು ಪಾಂಡವರ ಜೊತೆ ಒಂದಾಯಿತು'. ಈ ಎಲ್ಲಾ ಪ್ರಯೋಗಗಳಲ್ಲಿ 'ಒಂದಾಯಿತು' ಎಂಬ ಪ್ರಯೋಗಕ್ಕೆ 'ಒಂದೇ ಸ್ಥಾನವನ್ನು ಹೊಂದಿದವು' ಎಂಬರ್ಥವನ್ನು

ನಾವು ತಿಳಿಯುತ್ತೇವೆ. ಅದರಂತೆ ಮುಕ್ತಜೀವರೆಲ್ಲರೂ ಪರಮಾತ್ಮನ ಸ್ಥಾನವನ್ನು ಹೊಂದಿದರು ಎಂಬುದಾಗಿ 'ಏಕೀಭವಂತಿ' ಎಂಬ ವೇದವಚನವು ಹೇಳುತ್ತಿದೆ.

ಮಾನಭೇದಾತ್ ಸ್ಪರ್ಶರಸಪೂರ್ವಭೇದಾಚ್ಚ ನೀರಯೋಃ ।
ಮೇಲನೇಽಪ್ಯಭಿಧಾನಾಸ್ತಿ ಯಥೈವ ಕ್ಷೀರನೀರಯೋಃ ॥೧॥

ಮತ್ತು ಹಾಲಿನ ಜೊತೆಗೆ ನೀರನ್ನು ಸೇರಿಸಿದಾಗ ನೀರೇ ಹಾಲಾಗುವುದಿಲ್ಲ, ಹೊರತು ಹಾಲಿನಂತಾಗುತ್ತದೆ ಎಂಬುದು ನಮಗೆ ಕಂಡಿರುವ ಉದಾಹರಣೆ. ನೀರಿಗೆ ನೀರನ್ನು ಸೇರಿಸಿದಾಗ ಪರಿಮಾಣದಲ್ಲಿ ಭೇದವು ಕಾಣಸುತ್ತದೆ. ಬಿಸಿನೀರಿಗೆ ತಣ್ಣಗಿರುವ ನೀರನ್ನು ಸೇರಿಸಿದಾಗ ಸ್ಪರ್ಶದಲ್ಲಿ ಭೇದವು ಕಾಣಸುತ್ತದೆ. ಶುದ್ಧವಾದ ನೀರಿಗೆ ಉಪ್ಪುನೀರನ್ನು ಸೇರಿಸಿದಾಗ ರಸಭೇದವು ಕಾಣಸುತ್ತದೆ. ಆದ್ದರಿಂದ ನೀರಿಗೆ ನೀರು ಸೇರಿದಾಗ ಐಕ್ಯವುಂಟಾಗುವುದಿಲ್ಲ. ಸಾದೃಶ್ಯವಷ್ಟೇ ಉಂಟಾಗುತ್ತದೆಂದು ಹೇಳಬೇಕು.

ಮಾಷಾದಿವಚ್ಚ ರಾಶ್ಯಾದೌ ಸಭಾದೌ ಬ್ರಾಹ್ಮಣಾದಿವತ್ ।
ಜಲೇ ಜಲಾಂತರಸ್ಯಾಪಿ ಸಂಶ್ಲೇಷೋ ನ ತ್ವಭಿನ್ನತಾ ॥೧॥

ಉದ್ದಿನ ರಾಶಿಯಲ್ಲಿ ಪುನಃ ಉದ್ದು ಸೇರಿದಾಗ ಹೇಗೆ ಅಭೇದವು ಬರುವುದಿಲ್ಲವೋ, ಸಭೆಯಲ್ಲಿ ಬ್ರಾಹ್ಮಣನು ಪ್ರವೇಶ ಮಾಡಿದಾಗ ಸಭೆಯಿಂದ ಬ್ರಾಹ್ಮಣನಿಗೆ ಅಭೇದವು ಹೇಗೆ ಬರುವುದಿಲ್ಲವೋ, ಅದೇ ರೀತಿಯಾಗಿ ಮೊದಲಿರುವ ನೀರಿನಲ್ಲಿ ಮತ್ತಷ್ಟು ನೀರು ಸೇರಿದಾಗ ಸಂಶ್ಲೇಷವನ್ನೇ ಹೇಳಬೇಕೇ ಹೊರತು, ಐಕ್ಯವನ್ನು ಹೇಳಬಾರದು.

### ಅದ್ವೈತಿಗಳ ಅಧಿಕರಣಶರೀರ

## तात्पर्यचन्द्रिका

**यदुक्तं परैः ब्रह्मण उपादानत्वे भोक्तुः शरीरस्य भोग्यत्वापत्तेर्भोग्यस्य च शब्दादेर्भोक्तृत्वापत्तेस्तयोरविभागः स्यात् । द्वयोरपि परमकारणब्रह्मणोऽनन्यत्वादिति प्राप्ते**

ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - ಜಗತ್ತಿಗೆ ಬ್ರಹ್ಮನು ಉಪಾದಾನಕಾರಣನಾಗಿದ್ದಾನೆ ಎಂದು ಹಿಂದಿನ ಅಸದಧಿಕರಣದಲ್ಲಿ ಸಮರ್ಥನೆ ಮಾಡಲಾಯಿತು. ಹಾಗಾದಲ್ಲಿ ಶಾರೀರನಾದ ಭೋಕ್ತೃಜೀವನು ಬ್ರಹ್ಮನಿಂದ ಅಭಿನ್ನನಾಗಿದ್ದಾನೆ. ಭೋಕ್ತ್ಯವಾದ ಶಬ್ದಾದಿವಿಷಯಗಳೂ ಕೂಡ ಬ್ರಹ್ಮನಿಂದ ಅಭಿನ್ನವಾಗಿವೆ ಎಂದು ಹೇಳಿದಂತಾಗುತ್ತದೆ. 'ಯತ್ ಯದಭಿನ್ನಾಭಿನ್ನಂ ತತ್ ತದಭಿನ್ನಂ' ಎಂಬ ನಿಯಮದಂತೆ ಶಬ್ದಾದಿವಿಷಯಗಳು ಶಾರೀರದಿಂದ ಅಭಿನ್ನವಾದ ಬ್ರಹ್ಮನಿಂದ ಅಭಿನ್ನವಾಗಿರುವ ಕಾರಣ ಶಾರೀರನಾದ ಜೀವನಿಂದಲೂ ಕೂಡ ಅಭಿನ್ನವಾಗುತ್ತವೆ. ಆವಾಗ

ಭೋಕ್ತೃವಾದ ಶಾರೀರಿಗೆ ಭೋಗ್ಯತ್ವವು, ಭೋಗ್ಯವಾದ ಶಬ್ದಾದಿವಿಷಯಗಳಿಗೆ ಭೋಕ್ತೃತ್ವವು ಬರಬೇಕಾಗುತ್ತದೆ. ಶಬ್ದಾದಿಗಳು 'ಭೋಗ್ಯ', ಶಾರೀರನು 'ಭೋಕ್ತೃ' ಎಂಬ ವಿಭಾಗವೇ ಇಲ್ಲದಂತಾಗುತ್ತದೆ. ಏಕೆಂದರೆ ಎರಡೂ ಕೂಡ ಪರಮಕಾರಣನಾದ ಬ್ರಹ್ಮನಿಂದ ಏಕೀಭೂತವಾಗಿವೆ. ಇಷ್ಟು ಪೂರ್ವಪಕ್ಷ.

**मैवं एकसमुद्रकार्याणां फेनतरङ्गादीनामिव विभागोपपत्तेरिति सिद्धान्त इति।।**

ಫೇನ ಹಾಗೂ ತರಂಗಗಳೆರಡೂ ಸಮುದ್ರದ ಕಾರ್ಯವೇ ಆಗಿವೆ. ಆದರೂ ಕೂಡ ಫೇನವು ತರಂಗಕ್ಕಿಂತ ಹೇಗೆ ಭಿನ್ನವೋ? ಅದರಂತೆ ಭೋಕ್ತೃನಾದ ಶಾರೀರ, ಭೋಗ್ಯವಾದ ಶಬ್ದಾದಿಗಳೆರಡೂ ಬ್ರಹ್ಮನ ಕಾರ್ಯವೇ ಆಗಿದ್ದರೂ ಪರಸ್ಪರ ಇವುಗಳಲ್ಲಿ ಭೇದವಿರುತ್ತದೆ. ಆದ್ದರಿಂದ ಭೋಕ್ತೃವಿಗೆ ಭೋಗ್ಯತ್ವಾಪತ್ತಿಯು, ಭೋಗ್ಯಕ್ಕೆ ಭೋಕ್ತೃತ್ವಾಪತ್ತಿಯು ಬರುವುದಿಲ್ಲ. ಇಷ್ಟು ಸಿದ್ಧಾಂತ.

**तन्न ।। विवर्तसिद्धान्ते साङ्कर्यशङ्कानुदयात् ।**

ಅದ್ವೈತಿಗಳ ಈ ಅಧಿಕರಣ ಶರೀರ ತಪ್ಪು. ವಿವರ್ತಸಿದ್ಧಾಂತವಾದ ಅದ್ವೈತಮತದಲ್ಲಿ ಹೀಗೆ ಸಾಂಕರ್ಯಶಂಕೆಯೇ ಹುಟ್ಟುವುದಿಲ್ಲ. ಭೋಕ್ತೃನಾದ ಜೀವ, ಭೋಗ್ಯವಾದ ಶಬ್ದಾದಿಗಳು ಎಲ್ಲದರ ಆರೋಪಕ್ಕೆ ಬ್ರಹ್ಮನು ಅಧಿಷ್ಠಾನನಾಗಿರುವಾಗ ಸಾಂಕರ್ಯದ ಆಶಂಕೆಯೇ ಬರುವುದಿಲ್ಲ.

**किञ्च पूर्वपक्षिणा किं कार्याणां चेतनाचेतनत्वरूपेण विभागो न स्यादित्यापाद्यते किं वा येन केनचिद्रूपेण ।**

ಮತ್ತು ಪೂರ್ವಪಕ್ಷ ಮಾಡುವಾಗ ಭೋಕ್ತೃ, ಭೋಗ್ಯಗಳಿಗೆ ವಿಭಾಗವೇ ಇಲ್ಲದಿರಬೇಕಾದೀತೆಂದು ಆಪತ್ತಿಯನ್ನು ಮಾಡಲಾಯಿತು. ಇದರ ಅಭಿಪ್ರಾಯವೇನು ? ಚೇತನಾಚೇತನಸ್ವರೂಪದಿಂದ ವಿಭಾಗವು ಇಲ್ಲದಿರಬೇಕಾದೀತು ಎಂಬುದು ಆಪಾದನೆಯ ಅಭಿಪ್ರಾಯವೋ ? ಅಥವಾ ಬೇರೆ ಯಾವುದಾದರು ರೂಪದಿಂದ ವಿಭಾಗವು ಇಲ್ಲದಿರಬೇಕಾದೀತು ಎಂಬುದು ಆಪಾದನೆಯ ಅಭಿಪ್ರಾಯವೋ?

**नाद्यः । चेतनस्यानादित्वेन कार्ये तद्विभागाभावेनेष्टापत्तेः ।**

ಮೊದಲನೆಯ ಪಕ್ಷ ತಪ್ಪು. ಚೇತನಪದಾರ್ಥವು ಅನಾದಿಯಾಗಿರುವುದರಿಂದ ಕಾರ್ಯದಲ್ಲಿ ಚೇತನವು ಸೇರುವುದೇ ಇಲ್ಲ. ಭೋಗ್ಯವಾದ ಶಬ್ದಾದಿ ಪದಾರ್ಥಗಳಷ್ಟೇ ಕಾರ್ಯಪದಾರ್ಥದಲ್ಲಿ ಸೇರುತ್ತವೆ. ಆದ್ದರಿಂದ 'ಕಾರ್ಯಪದಾರ್ಥಗಳಲ್ಲಿ ಚೇತನಾಚೇತನತ್ವವೆಂಬ ವಿಭಾಗವೇ ಇಲ್ಲದಿರಬೇಕಾದೀತು' ಎಂದು ಆಪತ್ತಿ ಮಾಡಿದರೆ ಇದು ಇಷ್ಟಾಪತ್ತಿಯೇ ಆಗುತ್ತದೆ.

**ननु चेतनस्यानादित्वेऽपि ब्रह्माभेदाद्ब्रह्मकार्यत्वेन ब्रह्माभिन्नं यज्जडं तद्रूपत्वापत्तिरिति चेन्न ।**

ಆಕ್ಷೇಪ - ಕಾರ್ಯಗಳ ಮಧ್ಯದಲ್ಲಿ ವ್ಯತ್ಯಾಸವಿಲ್ಲದಿರಬೇಕಾದೀತು ಎಂಬುದು ನಮ್ಮ ಆಪಾದನೆಯ ಅಭಿಪ್ರಾಯವಲ್ಲ. ಚೇತನತ್ವ ಮತ್ತು ಅಚೇತನತ್ವರೂಪದಿಂದ ಪ್ರಮಿತವಾದ ವಿಭಾಗವು ಇಲ್ಲದಿರಬೇಕಾದೀತು ಎಂಬುದು ಆಪಾದನೆಯ ಅಭಿಪ್ರಾಯ. ಅನಾದಿಯಾದ ಚೇತನವು ಬ್ರಹ್ಮನಿಂದ ಅಭಿನ್ನವಾಗಿದೆ. ಜಡಪದಾರ್ಥವು ಬ್ರಹ್ಮನ ಕಾರ್ಯವಾಗಿದ್ದು, ಬ್ರಹ್ಮನಿಂದ ಅಭಿನ್ನವಾಗಿದೆ. ಚೇತನವು ಅನಾದಿಯಾಗಿದ್ದರೂ ಕೂಡ ಬ್ರಹ್ಮನಿಂದ ಅಭಿನ್ನವಾಗಿರುವ ಜಡಪದಾರ್ಥದಿಂದ ಐಕ್ಯವನ್ನು ಹೊಂದಬೇಕಾದೀತು ಎಂದು ಆಪಾದನೆ ಮಾಡಬಹುದಲ್ಲವೇ?

**''दृश्यतेतु'' इत्यतीताधिकरणस्थसूत्रेणैव जडोपादानत्वेऽपि ब्रह्मणश्चेतनत्वाहानेरुक्तत्वेन ब्रह्माभेदेन जीवस्य जडत्वाप्राप्तेः ।**

ಸಮಾಧಾನ - ಇದು ತಪ್ಪು. ಹೀಗೆ ಹೇಳುವುದಾದರೆ ಪೂರ್ವಪಕ್ಷವೇ ಉದಯವಾಗುವುದಿಲ್ಲ. 'ಅಭಿಮಾನಿವ್ಯಪದೇಶಸ್ತು' ಎಂಬ ಸೂತ್ರದ ಅನಂತರ 'ದೃಶ್ಯತೇ ತು' ಎಂಬ ಸೂತ್ರವು ಪ್ರಸಕ್ತವಾಗಿದೆ. ಆ ಸೂತ್ರದಲ್ಲಿ ವಿಲಕ್ಷಣವಾಗಿದ್ದರೂ ಕೂಡ ಉಪಾದಾನ-ಉಪಾದೇಯಭಾವವು ಯುಕ್ತವಾಗುತ್ತದೆ ಎಂದು ಸಮರ್ಥಿಸಲಾಗಿತ್ತು. ಆ ಸೂತ್ರದಿಂದಲೇ ಜಗತ್ತು ಜಡಭೂತವಾಗಿದ್ದರೂ ಬ್ರಹ್ಮನು ಉಪಾದಾನನಾಗುತ್ತಾನೆಂದು ಸಿದ್ಧವಾಗುತ್ತದೆ. ಜಡಪದಾರ್ಥಕ್ಕೆ ಬ್ರಹ್ಮನು ಉಪಾದಾನನಾಗಿದ್ದಾನೆ ಎಂಬ ಕಾರಣದಿಂದ ಬ್ರಹ್ಮನಲ್ಲಿರುವ ಚೇತನತ್ವಕ್ಕೆ ಹಾನಿಯು ಬರುವುದಿಲ್ಲ. ಈ ವಿಷಯವು 'ದೃಶ್ಯತೇ ತು' ಎಂಬ ಸೂತ್ರದಿಂದ ಸಿದ್ಧವಾಗಿದೆ. ಹೀಗಿರುವಾಗ ಬ್ರಹ್ಮನಿಂದ ಅಭಿನ್ನನಾದ ಜೀವನಿಗೆ ಜಡತ್ವವು ಪ್ರಾಪ್ತವೇ ಆಗುವುದಿಲ್ಲ. ಜಡಕ್ಕೆ ಉಪಾದಾನಕಾರಣನಾಗಿರುವ ಬ್ರಹ್ಮನಲ್ಲಿಯೇ ಚೇತನತ್ವವು ನಾಶವಾಗುವುದಿಲ್ಲ ಎಂದು ಸಿದ್ಧವಾದ ಮೇಲೆ ಜೀವನಿಗೆ ಜಡತ್ವಪ್ರಾಪ್ತಿಯಾದರೂ ಹೇಗೆ ತಾನೇ ಬರುತ್ತದೆ ?

**नान्त्यः । एकमहासुवर्णपिण्डकार्याणां कटकमकुटाद्यवस्थानां भेदस्यैव दर्शनेन ब्रह्मकार्याणामप्याकाशवाय्वादीनां भेदसम्भवात् ।**

ಬೇರೆ ಯಾವುದಾದರೂ ರೂಪದಿಂದ ವಿಭಾಗವಿಲ್ಲದಿರಬೇಕಾದೀತು ಎಂಬ ಎರಡನೆಯ ಪಕ್ಷವೂ ಕೂಡ ಅಯುಕ್ತ. ಒಂದು ಮಹಾಸುವರ್ಣಪಿಂಡದಿಂದ ಬಳೆ, ಕಿರೀಟ, ಹಾರ ಮೊದಲಾದ ಅನೇಕ ಆಭರಣಗಳು ಉತ್ಪನ್ನವಾಗುತ್ತವೆ. ಈ ಎಲ್ಲಾ ಆಭರಣಗಳಿಗೂ ಪರಸ್ಪರ ಭೇದವೇ ಲೋಕದಲ್ಲಿ ಕಂಡಿದೆ. ಅದರಂತೆ ಬ್ರಹ್ಮನ ಕಾರ್ಯವೆನಿಸಿದ ಆಕಾಶ ವಾಯು ಮೊದಲಾದವುಗಳಲ್ಲಿಯೂ ಪರಸ್ಪರ ಭೇದವು ಇರಬಹುದು.

**सुवर्णपिण्डं सावयवं ब्रह्म तु निरवयवमिति चेत्तर्हि त्वन्मते ''कृत्स्नप्रसक्तिः'' इति सूत्र इव निरवयवस्य ब्रह्मणो युगपदनेकद्रव्योपादानत्वं न युक्तमिति पूर्वपक्षयितव्यम् । नतु कार्याणां विभागो न युक्त इति । तस्मान्न पूर्वपक्षोदयः ।**

ಸುವರ್ಣಪಿಂಡವು ಸಾವಯವವಾಗಿದೆ. ಬ್ರಹ್ಮನು ನಿರಯವನಾಗಿದ್ದಾನೆಂಬ ವ್ಯತ್ಯಾಸವಿದೆ. ಆದ್ದರಿಂದ ಸುವರ್ಣದ ಕಾರ್ಯವಾದ ಆಭರಣಗಳಲ್ಲಿ ಭೇದವಿರಬಹುದು. ಬ್ರಹ್ಮನ ಕಾರ್ಯವಾದ ಪದಾರ್ಥಗಳಲ್ಲಿ ಭೇದವು ಇರಬೇಕಾಗಿಲ್ಲವೆಂದು ಪ್ರಶ್ನಿಸಬಾರದು. ನಿಮ್ಮ ಅದ್ವೈತಮತದಲ್ಲಿ 'ಕೃತ್ಸ್ನ ಪ್ರಸಕ್ತಿಃ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಂತೆ ನಿರವಯನಾದ ಬ್ರಹ್ಮನು ಒಟ್ಟಿಗೆ ಅನೇಕ ದ್ರವ್ಯಗಳಿಗೆ ಉಪಾದಾನನಾಗುವುದಿಲ್ಲವೆಂದಷ್ಟೇ ನೀವು ಪೂರ್ವಪಕ್ಷ ಮಾಡಬೇಕು. ಅದನ್ನು ಬಿಟ್ಟು ಕಾರ್ಯಗಳಲ್ಲಿ ಪರಸ್ಪರ ಭೇದವಿಲ್ಲದಿರಬೇಕಾದೀತು ಎಂಬ ಪೂರ್ವಪಕ್ಷವು ಅಸಂಗತವಾಗುತ್ತದೆ. ಆದ್ದರಿಂದ ನಿಮ್ಮ ಅಧಿಕರಣಶರೀರದಲ್ಲಿ ಪೂರ್ವಪಕ್ಷದ ಉದಯವೇ ಆಗುವುದಿಲ್ಲ.

**सिद्धान्तोऽप्ययुक्तः । विवर्तवादे फेनतरङ्गादिदृष्टान्तोक्तययुक्तेः ।**

ಸಿದ್ಧಾಂತವೂ ಕೂಡ ಅಯುಕ್ತವಾಗಿದೆ. ವಿವರ್ತವಾದದಲ್ಲಿ ಫೇನತರಂಗಾದಿಗಳ ದೃಷ್ಟಾಂತವನ್ನು ನೀಡಿದ್ದೇ ಅಯುಕ್ತವಾಗಿದೆ.

**फेनतरङ्गादीनां भिन्नानेकजलावयवोपादान कत्वेनैकोपादानकत्वाभावाच्च ।**

ಫೇನತರಂಗದ ದೃಷ್ಟಾಂತವು ವಿಷಮವಾಗಿದೆ. ಫೇನಕ್ಕೆ ಉಪಾದಾನಕಾರಣವಾದ ಜಲದ ಅವಯವವೇ ಬೇರೆ. ತರಂಗಕ್ಕೆ ಉಪಾದಾನವಾದ ಜಲದ ಅವಯವಗಳೇ ಬೇರೆ. ಎರಡಕ್ಕೂ ಒಂದೇ ಉಪಾದಾನಕಾರಣವೇ ಇರುವುದಿಲ್ಲ. ಆದ್ದರಿಂದ ಫೇನತರಂಗಗಳ ದೃಷ್ಟಾಂತದಿಂದ ಕಾರ್ಯಗಳಲ್ಲಿ ಪರಸ್ಪರ ಭೇದಗಳಿರಬಹುದೆಂಬ ಸಿದ್ಧಾಂತವು ಅಯುಕ್ತವಾಗಿದೆ.

**प्रकाशः –**

सुधोक्तं विवृण्वन् परमतमनूद्य निराह – **ब्रह्मण इति ।।**

ನ್ಯಾಯಸುಧೆಯಲ್ಲಿ ಪರಮತವನ್ನು ನಿರಾಕರಣೆ ಮಾಡಿದ್ದಾರೆ. ಪ್ರಕೃತ ಗ್ರಂಥಕಾರರು ನ್ಯಾಯಸುಧೆಯನ್ನು ವಿವರಿಸಲು ಪರಮತವನ್ನು ಅನುವಾದ ಮಾಡಿ, ನಿರಾಕರಣೆ ಮಾಡಲು ಹೊರಟಿದ್ದಾರೆ.

**प्रकाशः – विवर्तेति ।।** ब्रह्मतादात्म्यरूपशङ्काबीजाभावादिति भावः ।

ವಿವರ್ತಮತದಲ್ಲಿ ಬ್ರಹ್ಮನಲ್ಲಿ ಸಕಲಪದಾರ್ಥಗಳು ಆರೋಪಿತವಾಗಿವೆ ಎಂದು ಒಪ್ಪಿರುತ್ತಾರೆ. ಸಕಲ ಪದಾರ್ಥಗಳ ಆರೋಪಕ್ಕೆ ಬ್ರಹ್ಮನು ಅಧಿಷ್ಠನಾದ ಮೇಲೆ ಆರೋಪಕ್ಕೂ, ಅಧಿಷ್ಠಾನಕ್ಕೂ ಭೇದವು

ಇರಲೇಬೇಕು. ಹೀಗೆ ಪೂರ್ವಪಕ್ಷ ಮಾಡುವಾಗ ಬ್ರಹ್ಮನಿಗೂ ಆರೋಪಿತವಾದ ಪದಾರ್ಥಗಳಿಗೂ ಐಕ್ಯವನ್ನು ವಿವಕ್ಷಿಸಲಾಗಿದೆ. ಇದು ಅಯುಕ್ತ.

**प्रकाशः –** ''भोक्तृत्वापत्तित इति यन्मतं तत्कुतो हरिः । भोक्त्रापत्तेरिति प्राह'' इत्यनुव्याख्यानोक्तिरुपलक्षणम् । पूर्वोत्तरपक्षदोषोक्तेरिति भावः ।

'ಭೋಕ್ತೃತ್ವಾಪತ್ತಿತ ಇತಿ ಯನ್ಮತಂ ತತ್ಕುತೋ ಹರಿಃ। ಭೋಕ್ತ್ರಾಪತ್ತೇರಿತಿ ಪ್ರಾಹ'

ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಸೂತ್ರದಲ್ಲಿರುವ ಭೋಕ್ತೃಶಬ್ದಕ್ಕೆ ಭೋಕ್ತೃತ್ವ ಎಂಬರ್ಥವನ್ನು ವಿವಕ್ಷಿಸುವುದಾದರೆ, ಸೂತ್ರಕಾರರು 'ಭೋಕ್ತೃತ್ವಾಪತ್ತೇಃ' ಎಂದೇ ಹೇಳುತ್ತಿದ್ದರು ಎಂಬ ದೋಷವನ್ನು ಹೇಳಿದ್ದಾರೆ. ಇದು ಉಪಲಕ್ಷಣವಾಗಿದೆಯೆಂದು ತಿಳಿದು ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷಗಳಲ್ಲಿ ಗ್ರಂಥಕಾರರು ಬೇರೆ ದೋಷಗಳನ್ನು ಹೇಳಿರುತ್ತಾರೆ.

**प्रकाशः –** परिणामपक्षेऽपि दोषमाह – **किञ्चेति ।। कार्य इति ।।** कार्यप्रपञ्चे चेतना-चेतनविभागाभावेनेत्यर्थः ।

ಬ್ರಹ್ಮನು ಜಗತ್ತಿಗೆ ಪರಿಣಾಮಕಾರಣನಾಗಿದ್ದಾನೆ ಹೊರತು, ಆರೋಪಾಧಿಷ್ಠಾನವಲ್ಲ ಎಂಬ ಪಕ್ಷದಲ್ಲಿಯೂ ದೋಷವನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಕಾರ್ಯೇ' ಎಂದರೆ ಕಾರ್ಯಪ್ರಪಂಚದಲ್ಲಿ ಚೇತನ ಹಾಗೂ ಅಚೇತನಗಳೆಂಬ ವಿಭಾಗವೇ ಇರುವುದಿಲ್ಲವೆಂದರ್ಥ.

**प्रकाशः –** ननु सुवर्णस्यैकैकभागेन कटकादिजनकतया भिन्नावयवोपादानतया कार्यभेदो युक्तः । नैवं ब्रह्मणीत्यन्योपादानस्यैवान्यं प्रत्युपादानत्वात्साङ्कर्यशङ्क्यात्याश ाङ्क्य निरस्यति ।। **सुवर्णेति ।।**

ಸುವರ್ಣದಲ್ಲಿ ಬೇರೆ ಬೇರೆ ಭಾಗವಿರುವುದರಿಂದ ಕಟಕವೆಂಬ ಕಾರ್ಯವೇ ಬೇರೆ. ಮುಕುಟವೆಂಬ ಕಾರ್ಯವೇ ಬೇರೆ ಆಗುತ್ತದೆ. ಎರಡು ಕಾರ್ಯಗಳಿಗೆ ಉಪಾದಾನಕಾರಣವು ಭಿನ್ನವಾಗಿದೆ. ಆದರೆ ಬ್ರಹ್ಮನಲ್ಲಿ ಹೀಗೆ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಎರಡಕ್ಕೂ ಒಂದೇ ಉಪಾದಾನಕಾರಣವಾದಾಗ ಎರಡೂ ಕಾರ್ಯಗಳಿಗೆ ಪರಸ್ಪರ ಸಾಂಕರ್ಯದೋಷವು ಬರಬೇಕಾದೀತು ಎಂದು ಅದ್ವೈತಿಗಳು ಆಪತ್ತಿ ಮಾಡುತ್ತಾರೆ. ಅದನ್ನು ಗ್ರಂಥದಲ್ಲಿ 'ಸುವರ್ಣ' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ.

**प्रकाशः –** इति पूर्वपक्षयितव्यमिति ।। तत्सिद्ध्युत्तरकालीनत्वादेतद्विचारस्येति भावः ।

'ಇತಿ ಪೂರ್ವಪಕ್ಷಯಿತವ್ಯಮ್' ಎಂಬುದರ ಅಭಿಪ್ರಾಯ ಹೀಗಿದೆ - ನಿರವಯವನಾದ ಬ್ರಹ್ಮನಿಗೆ ಉಪಾದಾನಕಾರಣತ್ವವು ಯುಕ್ತವಾಗುತ್ತದೆಂಬುದನ್ನು ಮೊದಲು ವಿಚಾರ ಮಾಡಬೇಕು. ಅನಂತರ ಕಾರ್ಯದಲ್ಲಿ ಭೇದವು ಬರುತ್ತದೋ, ಇಲ್ಲವೋ ? ಎಂಬುದನ್ನು ವಿಚಾರ ಮಾಡಬೇಕು.

ಭೋಕ್ತ್ರಧಿಕರಣ (೨-೧-೫)




ಅದ್ವೈತಿಗಳ ಅಧಿಕರಣಶರೀರ ಹೀಗಿದೆ - ಹಿಂದಿನ ಅಸದಧಿಕರಣದಲ್ಲಿ ಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ಸಮರ್ಥಿಸಿದ್ದಾಯಿತು. ಚೇತನಾಚೇತನಪದಾರ್ಥಗಳಿಗೆಲ್ಲಾ ಬ್ರಹ್ಮನು ಉಪಾದಾನಕಾರಣನಾದರೆ ಚೇತನಪದಾರ್ಥವು ಅಚೇತನಪದಾರ್ಥಗಳಿಂದ ಐಕ್ಯವನ್ನು ಹೊಂದಬೇಕಾಗುತ್ತದೆ. ಶಾರೀರನಾದ ಜೀವನಿಗೂ ಬ್ರಹ್ಮನೇ ಉಪಾದಾನಕಾರಣ. ಘಟಪಟಾದಿ ಪದಾರ್ಥಗಳಿಗೂ ಬ್ರಹ್ಮನೇ ಉಪಾದಾನಕಾರಣ. ಆದ್ದರಿಂದ ಜೀವನಿಗೂ ಘಟಪಟಾದಿ ಪದಾರ್ಥಗಳಿಗೂ ಐಕ್ಯವು ಬರಬೇಕಾಗುತ್ತದಲ್ಲವೇ? ಎಂಬುದು ಪೂರ್ವಪಕ್ಷ. ಫೇನ ಹಾಗೂ ತರಂಗಗಳೆರಡೂ ಒಂದೇ ಸಮುದ್ರದ ಕಾರ್ಯವಾಗಿದ್ದರೂ ಪರಸ್ಪರ ಭಿನ್ನವಾಗಿವೆ. ಅದರಂತೆ ಘಟಪಟಾದಿ ಪದಾರ್ಥಗಳು ಶಾರೀರಿಕನಾದ ಜೀವನು ಒಬ್ಬನೇ ಬ್ರಹ್ಮನ ಕಾರ್ಯವಾಗಿದ್ದರೂ ಪರಸ್ಪರ ಭೇದವು ಬರಬಹುದೆಂದು ಸಿದ್ಧಾಂತ.

ಅದ್ವೈತಿಗಳ ಈ ಅಧಿಕರಣ ಅಯುಕ್ತವಾಗಿದೆ. ಸಕಲಪದಾರ್ಥಗಳ ಆರೋಪಕ್ಕೆ ಬ್ರಹ್ಮನು ಅಧಿಷ್ಠಾನನಾಗಿದ್ದಾನೆಂಬುದು ಅದ್ವೈತಿಗಳ ಸಿದ್ಧಾಂತ. ಘಟಪಟಾದಿಪದಾರ್ಥಗಳೂ ಕೂಡ ಬ್ರಹ್ಮನಲ್ಲಿ ಆರೋಪಿತವಾಗಿವೆ. ಶಾರೀರಕನಾದ ಜೀವನು ಆರೋಪಿತನಾಗಿದ್ದಾನೆಂದು ಹೇಳಿದಾಗ ಪರಸ್ಪರ ಕಾರ್ಯಪದಾರ್ಥಗಳಲ್ಲಿ ಸಾಂಕರ್ಯ ಬರುತ್ತದೆಂಬ ಆಪತ್ತಿಗೆ ಅವಕಾಶವೇ ಇಲ್ಲ. ಒಂದು ವೇಳೆ ಬ್ರಹ್ಮನು ಆರೋಪಕ್ಕೆ ಅಧಿಷ್ಠಾನನಲ್ಲ. ಪರಿಣಾಮಕಾರಣನಾಗಿದ್ದಾನೆಂದು ಅದ್ವೈತಿಗಳು ಹೇಳುವುದಾದರೆ ಚೇತನಾಚೇತನತ್ವರೂಪದಿಂದ ವಿಭಾಗವು ಕೂಡದಿರಬೇಕಾದೀತು ಎಂದು ಆಪತ್ತಿ ಮಾಡಬೇಕು. ಆದರೆ ಚೇತನಪದಾರ್ಥವು ಅನಾದಿಯಾಗಿರುವುದರಿಂದ ಕಾರ್ಯವಿಭಾಗದಲ್ಲಿ ಸೇರುವುದೇ ಇಲ್ಲ. ಬೇರೆ ಯಾವುದಾದರೂ ರೂಪದಿಂದ ಪರಸ್ಪರ ಭೇದವಿಲ್ಲದಿರಬೇಕಾದೀತು ಎಂಬ ಆಪತ್ತಿಯೂ ಕೂಡ ತಪ್ಪು. ಒಂದೇ ಸುವರ್ಣದ ಕಾರ್ಯಭೂತವಾಗಿ ಕಟಕ, ಮುಕುಟ ಮೊದಲಾದ ಅನೇಕ ಆಭರಣಗಳು ಉತ್ಪನ್ನವಾಗುತ್ತವೆ. ಈ ಆಭರಣಗಳಲ್ಲಿ ಪರಸ್ಪರ ಭೇದವು ಲೋಕದಲ್ಲಿ ಸಿದ್ಧವಾಗಿದೆ. ಅದರಂತೆ ಒಬ್ಬನೇ ಬ್ರಹ್ಮನ ಕಾರ್ಯವಾಗಿರುವ ಆಕಾಶ, ವಾಯು ಮೊದಲಾದವುಗಳಲ್ಲಿಯೂ ಕೂಡ ಭೇದವು ಬರುತ್ತದೆ. ಹೀಗಿರುವಾಗ ಪೂರ್ವಪಕ್ಷದ ಉದಯಕ್ಕೆ ಅವಕಾಶವೇ ಇಲ್ಲ. ಸಿದ್ಧಾಂತವೂ ಕೂಡ ತಪ್ಪು. ಫೇನ ಹಾಗೂ ತರಂಗಗಳು ಒಂದೇ ಸಮುದ್ರದ ಕಾರ್ಯವೆಂದು ದೃಷ್ಟಾಂತವನ್ನಾಗಿ ಅದ್ವೈತಿಗಳು ನೀಡಿದರು. ಆದರೆ ಫೇನಕ್ಕೆ ಉಪಾದಾನಕಾರಣವಾದ ಸಮುದ್ರದ ಅವಯವಗಳೇ ಬೇರೆ. ತರಂಗಕ್ಕೆ ಉಪಾದಾನಕಾರಣವಾದ ಸಮುದ್ರದ ಅವಯವಗಳೇ ಬೇರೆ. ಎರಡಕ್ಕೂ ಕೂಡ ಒಂದು ಉಪಾದಾನಕಾರಣವಾಗಲು ಸಾಧ್ಯವಿಲ್ಲ. ಈ ದೃಷ್ಟಾಂತದಿಂದ ಒಬ್ಬನೇ ಬ್ರಹ್ಮನ ಕಾರ್ಯವಾಗಿದ್ದರೂ ಭೇದವಿರಬಹುದೆಂದು ಅದ್ವೈತಿಗಳಿಂದ ಸಮರ್ಥಿಸಲು ಸಾಧ್ಯವಿಲ್ಲ.

ರಾಮಾನುಜರ ಪ್ರಕಾರ ಅಧಿಕರಣಶರೀರ ಮತ್ತು ವಿಮರ್ಶೆ

**तात्पर्यचन्द्रिका**

**केचित्तु ब्रह्मणः शरीरित्वे जीववद्दुःखादि भोक्तृत्वापत्तेरविभागः स्यादिति शङ्कानिरासार्थमिदं सूत्रमित्याहुः ।**

ರಾಮಾನುಜರ ಅಧಿಕರಣಶರೀರ ಹೀಗಿದೆ - ಬ್ರಹ್ಮನು ಶರೀರಿಯಾಗಿದ್ದಾನೆಂದು ಸಮರ್ಥಿಸಿದ್ದಾಯಿತು. ಹಾಗಾದಲ್ಲಿ ಶರೀರಿಯಾದ ಜೀವನಿಗೆ ದುಃಖಾದಿಗಳ ಭೋಗವು ಹೇಗೆ ಇರುತ್ತದೋ, ಅದರಂತೆ ಬ್ರಹ್ಮನಿಗೂ ಕೂಡ ದುಃಖಾದಿಗಳ ಭೋಗವು ಬರಬೇಕಾದೀತು. ಜೀವನಿಗಿಂತ ಬ್ರಹ್ಮನಲ್ಲಿ ಯಾವುದೇ ವ್ಯತ್ಯಾಸವಿಲ್ಲದಿರಬೇಕಾದೀತು. ಈ ಆಶಂಕೆಯನ್ನು ಪರಿಹರಿಸಲು 'ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾತ್ ಲೋಕವತ್' ಎಂಬ ಸೂತ್ರವು ಹೊರಟಿದೆ ಎನ್ನುತ್ತಾರೆ.

**तन्न । अस्मद्रीत्या भोक्तुर्जीवस्य ब्रह्मत्वापत्तेरित्यल्पाध्याहारेणोपपत्तौ ब्रह्मणः शरीरित्व इत्यापादकाध्याहारस्य आपाद्येऽपि दुःखादि पदाध्याहारस्य भोक्तृशब्दे भावप्रधानतायाश्च कल्प्यत्वात् ।**

ಇದು ತಪ್ಪು. ನಾವು ಹೇಳುವಂತೆ 'ಭೋಕ್ತುರ್ಜೀವಸ್ಯ ಬ್ರಹ್ಮತ್ವಾಪತ್ತೇಃ' ಭೋಕ್ತೃವಾದ ಜೀವನಿಗೆ ಬ್ರಹ್ಮತ್ವವು ಬರಬೇಕಾದೀತು ಎಂಬುದಾಗಿ ಒಂದು ಪದವನ್ನು ಅಧ್ಯಾಹಾರ ಮಾಡಿ ಸೂತ್ರವನ್ನು ವ್ಯಾಖ್ಯಾನ ಮಾಡಲು ಬರುವಾಗ 'ಬ್ರಹ್ಮಣಃ ಶರೀರತ್ವೇ' ಇತ್ಯಾದಿಯಾಗಿ ಆಪಾದಕವನ್ನು ಅಧ್ಯಾಹಾರ ಮಾಡಿ, ಪುನಃ ಆಪಾದ್ಯದಲ್ಲಿಯೂ ಕೂಡ ದುಃಖಾದಿಪದಗಳನ್ನು ಅಧ್ಯಾಹಾರ ಮಾಡುವುದು ತಪ್ಪಾಗುತ್ತದೆ. ಮತ್ತು 'ಭೋಕ್ತ್ರಾಪತ್ತೇಃ' ಎಂಬುದಕ್ಕೆ ಭೋಕ್ತೃತ್ವ ಆಪತ್ತೇಃ ಎಂಬುದಾಗಿ ಭಾವಪ್ರಧಾನವನ್ನೂ ಕೂಡ ನೀವು ಕಲ್ಪನೆ ಮಾಡಬೇಕು.

**अस्याः शङ्कायाः ''सम्भोगप्राप्तिः'' इत्यत्रैव निरस्तत्वाच ।**

ಅಷ್ಟೇ ಅಲ್ಲದೇ ನೀವು ಮಾಡುತ್ತಿರುವ ಆಶಂಕೆಯನ್ನು 'ಸಂಭೋಗಪ್ರಾಪ್ತಿಃ' ಎಂಬ ಸೂತ್ರದಲ್ಲಿಯೇ ನಿರಾಕರಣೆ ಮಾಡಿದ್ದಾಗಿದೆ.

**ननु तत्र शरीरान्तरावस्थानमात्रप्रयुक्तभोक्तृत्वाशङ्काया निरासः । इह तु शरीरस्वामित्वप्रयुक्ताया इति चेन्न ।**

'ಸಂಭೋಗಪ್ರಾಪ್ತಿಃ ಇತಿ ಚೇನ್ನ' ಎಂಬ ಸೂತ್ರದಲ್ಲಿ ಬೇರೆ ಶರೀರದಲ್ಲಿಯೂ ಬ್ರಹ್ಮನು ಇರುವುದಾದರೆ ತತ್ಪ್ರಯುಕ್ತವಾದ ಸುಖ-ದುಃಖಾದಿಗಳ ಭೋಗವು ಬರಬೇಕಾದೀತು ಎಂಬ ಆಶಂಕೆಯನ್ನು ನಿರಾಕರಣೆ ಮಾಡಲಾಗಿದೆ. ಆದರೆ ಈ ಅಧಿಕರಣದಲ್ಲಿ ಬ್ರಹ್ಮನು ಶರೀರಕ್ಕೆ

ಸ್ವಾಮಿಯಾದರೆ ತತ್ಪ್ರಯುಕ್ತವಾದ ಸುಖದುಃಖಾದಿಗಳು ಬ್ರಹ್ಮನಿಗೆ ಬರಬೇಕಾಗುತ್ತದೆ ಎಂಬ ಆಶಂಕೆಯನ್ನು ಪರಿಹರಿಸಲಾಗಿದೆ. ಹೀಗೆ ವ್ಯತ್ಯಾಸವಿರುವುದರಿಂದ 'ಸಂಭೋಗಪ್ರಾಪ್ತಿಃ' ಸೂತ್ರದಿಂದ ಗತಾರ್ಥತ್ವವು ಹೇಗೆ ಬರುತ್ತದೆ ?

**तथापि त्वया तत्र ''नहि शरीरान्तरवर्तित्वमेव सुखदुःखहेतुः । अपि तु पुण्यपापरूपकर्मवशत्वम् । तत्त्वपहतपाप्मनः परमात्मनो न सम्भवति'' इत्युक्तत्वात् । अत्र च ''नहि जीवस्य शरीरधातुसाम्यवैषम्यनिमित्तसुखदुःख-भोक्तृत्वं सशरीरत्वकृतम् । अपि तु पुण्यपापरूपकर्मकृतम् । अपहतपाप्मनस्तु परमात्मनः स्थूलसूक्ष्मरूपकृत्स्नजगच्छरीरत्वेऽपि कर्मसम्बन्धगन्धो नास्ति'' इत्युक्तत्वात् परिहारभेदाभावात् ।**

ಆದರೂ ಕೂಡ ಆಶಂಕೆಯಲ್ಲಿ ವ್ಯತ್ಯಾಸವಿದ್ದರೂ ಪರಿಹಾರದಲ್ಲಿ ಏನೂ ವ್ಯತ್ಯಾಸವಿಲ್ಲ. ಎರಡು ಅಧಿಕರಣಗಳಲ್ಲಿ ನೀನು ಮಾಡಿದ ವ್ಯಾಖ್ಯಾನದ ಮಾತುಗಳು ಹೀಗಿವೆ - ರಾಮಾನುಜನಾದ ನೀನು ಆ ಸೂತ್ರವನ್ನು ವ್ಯಾಖ್ಯಾನ ಮಾಡಬೇಕಾದರೆ 'ನಹಿ ಶರೀರಾಂತರವರ್ತಿತ್ವಮೇವ ಸುಖದುಃಖಹೇತುಃ । ಅಪಿ ತು ಪುಣ್ಯಪಾಪರೂಪಕರ್ಮವಶತ್ವಮ್ । ತತ್ತ್ವಪಹತಪಾಪ್ಮನಃ ಪರಮಾತ್ಮನೋ ನ ಸಂಭವತಿ' ಕೇವಲ ಶರೀರದ ಒಳಗಿದ್ದ ಮಾತ್ರಕ್ಕೆ ಸುಖದುಃಖಕ್ಕೆ ಕಾರಣನಾಗುವುದಿಲ್ಲ. ಹೊರತಾಗಿ ಪುಣ್ಯಪಾಪರೂಪವಾದ ಧರ್ಮದ ಅಧೀನವಾಗಿಯೇ ಸುಖ-ದುಃಖಾದಿಗಳು ಬರುತ್ತವೆ. ಬ್ರಹ್ಮನು ಅಂಥ ಪುಣ್ಯಪಾಪವೆಂಬ ಕರ್ಮಗಳ ಅಧೀನ-ನಾಗುವುದಿಲ್ಲ. ಏಕೆಂದರೆ ಅವನು ಅಪಹತಪಾಪ್ಮನಾಗಿದ್ದಾನೆಂದು ಶ್ರುತಿಗಳು ಸಾರುತ್ತಿವೆ. ಹೀಗೆ 'ಸಂಭೋಗಪ್ರಾಪ್ತಿರಿತಿ' ಎಂಬ ಸೂತ್ರದಲ್ಲಿ ನೀವು ಹೇಳಿರುತ್ತೀರಿ. ಈ ಅಧಿಕರಣದಲ್ಲಿ 'ನಹಿ ಜೀವಸ್ಯ ಶರೀರಧಾತುಸಾಮ್ಯವೈಷಮ್ಯನಿಮಿತ್ತಸುಖದುಃಖಭೋಕ್ತೃತ್ವಂ ಸಶರೀರತ್ವಕೃತಮ್ । ಅಪಿ ತು ಪುಣ್ಯಪಾಪರೂಪಕರ್ಮಕೃತಮ್ । ಅಪಹತಪಾಪ್ಮನಸ್ತು ಪರಮಾತ್ಮನಃ ಸ್ಥೂಲಸೂಕ್ಷ್ಮರೂಪ-ಕೃತ್ಸ್ನಜಗತ್ ಶರೀರತ್ವೇऽಪಿ ಕರ್ಮಸಂಬಂಧಗಂಧೋ ನಾಸ್ತಿ' ಜೀವನಿಗೆ ಶರೀರಧಾತುಸಾಮ್ಯ-ವೈಷಮ್ಯನಿಮಿತ್ತಕವಾದ ಸುಖದುಃಖರೂಪವಾದ ಭೋಕ್ತೃತ್ವವು ಶರೀರನಿಮಿತ್ತಕವಾಗಿ ಬರುತ್ತಿರುವುದಲ್ಲ. ಪುಣ್ಯಪಾಪರೂಪವಾದ ಕರ್ಮನಿಮಿತ್ತವಾಗಿಯೇ ಅಂಥ ಸುಖದುಃಖಾದಿಗಳನ್ನು ಜೀವನು ಅನುಭವಿಸುತ್ತಿದ್ದಾನೆ. ಅಪಹತಪಾಪ್ಮಸ್ವರೂಪನಾದ ಪರಮಾತ್ಮನಲ್ಲಿ ಸ್ಥೂಲರೂಪವಾದ ಹಾಗೂ ಸೂಕ್ಷ್ಮರೂಪವಾದ ಸಮಸ್ತ ಜಗತ್ತು ಶರೀರವಾಗಿದರೂ ಕೂಡ ಕರ್ಮಸಂಬಂಧದ ಗಂಧವೂ ಕೂಡ ಇರುವುದಿಲ್ಲ. ಹೀಗೆ ಆಕ್ಷೇಪದಲ್ಲಿ ವ್ಯತ್ಯಾಸವಿದ್ದರೂ ಪರಿಹಾರದಲ್ಲಿ ಯಾವುದೇ ವ್ಯತ್ಯಾಸವನ್ನು ನೀವು ಹೇಳಿರುವುದಿಲ್ಲ. ಒಂದೇ ಪರಿಹಾರವಿದ್ದಾಗ ಪುನಃ ಬೇರೆ ಅಧಿಕರಣವು ಹೊರಡುವ ಅವಶ್ಯಕತೆ ಇಲ್ಲ.

**अतिदेशत्वे तु तदानन्तर्यं स्यात् ।**

ಒಂದು ವೇಳೆ 'ಸಂಭೋಗಪ್ರಾಪ್ತಿಃ' ಎಂಬ ಸೂತ್ರದಲ್ಲಿ ಹೇಳಿದ ಪರಿಹಾರವನ್ನು ಅತಿದೇಶ ಮಾಡಲು ಈ ಅಧಿಕರಣ ಹೊರಟಿದೆ ಎನ್ನುವುದಾದರೆ, ಆ ಸೂತ್ರದ ಅನಂತರವೇ 'ಭೋಕ್ತ್ರಾಪತ್ತೇಃ' ಎಂಬ ಸೂತ್ರವು ಇರಬೇಕಿತ್ತು. ಮಧ್ಯದಲ್ಲಿ ಬೇರೆ ಸೂತ್ರಗಳೆಲ್ಲವನ್ನು ನಿವೇಶ ಮಾಡಿದ್ದಕ್ಕೆ ಯಾವುದೇ ಕಾರಣವಿರುವುದಿಲ್ಲ.

**नन्वत्रोक्तं सुखदुःखादेः कर्मोपाधिकत्वं स्वीकृत्य सुखदुःखादिरहितस्यापीशस्य सन्निधानप्रयुक्तायाः जीवगतदुःखादिभोक्तृताशङ्कायास्तत्र निरास इति चेत्**

ಆಕ್ಷೇಪ - ಈ ಅಧಿಕರಣದಲ್ಲಿ ಸುಖದುಃಖಾದಿಗಳು ಕರ್ಮೋಪಾಧಿಕವಾಗಿದೆಯೆಂದು ಸಮರ್ಥಿಸಲಾಗಿದೆ. ಇದನ್ನು ಅವಲಂಬಿಸಿ, 'ಸಂಭೋಗಪ್ರಾಪ್ತಿಃ' ಎಂಬ ಸೂತ್ರದಲ್ಲಿ ಸುಖ-ದುಃಖಾದಿರಹಿತನಾಗಿದ್ದರೂ ಕೂಡ ಈಶ್ವರನಿಗೆ ಸನ್ನಿಧಾನ ಪ್ರಯುಕ್ತವಾಗಿ ಜೀವನಲ್ಲಿರುವ ದುಃಖಾದಿಗಳ ಭೋಗವು ಬರಲಿ ಎಂದು ಆಶಂಕಿಸಲಾಗಿದೆ. ಅದರ ಪರಿಹಾರವನ್ನು 'ಸಂಭೋಗಪ್ರಾಪ್ತಿಃ ಇತಿ ಚೇನ್ನ ವೈಶೇಷ್ಯಾತ್' ಎಂಬ ಸೂತ್ರವು ಮಾಡುತ್ತಿದೆ.

**तत्र शङ्कितं भोक्तृत्वं किं स्वगतत्वेनान्यगतदुःखाद्यनुसन्धातृत्वं किं वा तत्साक्षात्कारित्वमात्रम् ।**

ಸಮಾಧಾನ - ಹಾಗಾದರೆ 'ಸಂಭೋಗಪ್ರಾಪ್ತಿಃ' ಎಂಬ ಸೂತ್ರದಲ್ಲಿ ಆಶಂಕಿಸಲ್ಪಟ್ಟ ಭೋಕ್ತೃತ್ವವು ಬೇರೆಯವರಲ್ಲಿರುವ ಸುಖಾದಿಗಳ ಅನುಸಂಧಾನವು ಸ್ವಗತವಾಗಿ ಬ್ರಹ್ಮನಿಗೆ ಅನುಭವ ಬರುತ್ತದೋ? ಅಥವಾ ಬೇರೆಯವರಲ್ಲಿ ದುಃಖಾದಿಗಳು ಇದೆ ಎಂಬ ಸಾಕ್ಷಾತ್ಕಾರವಷ್ಟೇ ಬ್ರಹ್ಮನಿಗೆ ಬರುತ್ತದೋ?

**नाद्यः । जीवस्याप्यन्यगतदुःखादौ स्वगतत्वभ्रान्तेरभावेन तदापादनायोगात् । नान्त्यः । इष्टापत्तेरिति ।। छ ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् भोक्तृधिकरणमं सम्पूर्णम् ।।५।।**

ಪ್ರಥಮಪಕ್ಷ ಅಯುಕ್ತ. ಜೀವನಿಗೂ ಕೂಡ ಬೇರೆಯವರಲ್ಲಿರುವ ದುಃಖಾದಿಗಳನ್ನು ನೋಡಿ, ತನ್ನಲ್ಲಿಯೇ ಆ ದುಃಖವು ಉಂಟಾಗುತ್ತಿದೆ ಎಂಬ ಭ್ರಾಂತಿಯು ಬರುವುದಿಲ್ಲ. ಆದ್ದರಿಂದ ಜೀವನಿಗೂ, ಬ್ರಹ್ಮನಿಗೂ ಯಾವುದೇ ವ್ಯತ್ಯಾಸವನ್ನು ತೋರಿಸಲಾಗದು. ಹೀಗಿರುವಾಗ

ಆಪಾದನೆಯೂ ಕೂಡ ಅಯುಕ್ತವಾಗುತ್ತದೆ. ಎರಡನೆಯ ಪಕ್ಷವು ತಪ್ಪು. ಕೇವಲ ಬೇರೆಯವರಲ್ಲಿರುವ ದುಃಖಾದಿಗಳ ಸಾಕ್ಷಾತ್ಕಾರವಷ್ಟೇ ಬ್ರಹ್ಮನಿಗೆ ಬರುತ್ತದೆ ಎಂದು ಆಪತ್ತಿ ಮಾಡಿದರೆ ಇದು ಇಷ್ಟಾಪತ್ತಿ. ಏಕೆಂದರೆ ಸಿದ್ಧಾಂತಿಗಳಾದ ನಾವು ಬ್ರಹ್ಮನನ್ನು ಸರ್ವಜ್ಞನೆಂದು ಒಪ್ಪಿರುವುದರಿಂದ, ಬೇರೆಯವರ ದುಃಖಾದಿಗಳ ಸಾಕ್ಷಾತ್ಕಾರವು ಬ್ರಹ್ಮನಿಗಿರುವುದು ದೋಷವಾಗುವುದಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಭೋಕ್ತ್ರಧಿಕರಣವು ಸಂಪೂರ್ಣವಾಯಿತು

**प्रकाशः –**

सुधायामद्वैतिमते यथानुव्याख्यानं सूत्राक्षरास्वारस्यमुक्त्वा ''ये तु व्याचक्षते चिदचिद्वस्तु शरीरत्वे ब्रह्मणो जीववद्दुःखादिभोक्तृत्वापत्तेः'' इत्यादिना रामानुजमतमप्यनूद्य सम्भोगसूत्रेण गतार्थत्वादिना दूषितम् । तत्सूत्राक्षरास्वरस्यस्याप्युपलक्षणमिति भावेन तन्मते सूत्रार्थमनूद्य निराह – **केचित्त्विति ।।**

ನ್ಯಾಯಸುಧೆಯಲ್ಲಿ ಅದ್ವೈತಿಗಳ ಮತವನ್ನು ಸ್ಪಷ್ಟವಾಗಿ ಉಲ್ಲೇಖ ಮಾಡಿದ್ದಾರೆ. ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುತ್ತಾ ಸೂತ್ರಾರ್ಥಗಳ ಸ್ವಾರಸ್ಯವನ್ನು ಹೇಳಿ ಅನಂತರ 'ಯೇ ತು ವ್ಯಾಚಕ್ಷತೇ ಚಿದಚಿದ್ವಸ್ತು ಶರೀರತ್ವೇ ಬ್ರಹ್ಮಣೋ ಜೀವವದ್ ದುಃಖಾದಿಭೋಕ್ತೃತ್ವಾಪತ್ತೇಃ' ರಾಮಾನುಜರು ಹೀಗೆ ವ್ಯಾಖ್ಯಾನ ಮಾಡುತ್ತಾರೆ - 'ಚಿದಚಿದ್ವಸ್ತುವು ಬ್ರಹ್ಮನ ಶರೀರವಾದರೆ, ಬ್ರಹ್ಮನಿಗೂ ಕೂಡ ಜೀವನ ಸುಖ-ದುಃಖಾದಿಗಳ ಅನುಭವವು ಬರಬೇಕಾದೀತು' ಇತ್ಯಾದಿ ವಾಕ್ಯದಿಂದ ರಾಮಾನುಜಮತವನ್ನು ಅನುವಾದ ಮಾಡಿ, ಸಂಭೋಗಸೂತ್ರದಿಂದ ಗತಾರ್ಥತ್ವವನ್ನು ಹೇಳಿ ದೂಷಣೆ ಮಾಡಿದ್ದಾರೆ. ಈ ದೋಷವು ರಾಮಾನುಜರ ಸೂತ್ರಾಕ್ಷರ ಸ್ವಾರಸ್ಯಕ್ಕೂ ಕೂಡ ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ ರಾಮಾನುಜ ಮತದ ಪ್ರಕಾರ ಸೂತ್ರಾಕ್ಷರವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ 'ಕೇಚಿತ್ತು' ಇತ್ಯಾದಿ ವಾಕ್ಯದಿಂದ.

**प्रकाशः –** स्थूलसूक्ष्मचिदचिद्वस्तुशरीरस्य कार्यकारणरूपत्वात्स्वभावविभाग उपपद्यत इत्युक्तम् ।

ಸ್ಥೂಲಚಿದಚಿದ್ವಸ್ತುಶರೀರಕ್ಕೆ ಸೂಕ್ಷ್ಮಚಿದಚಿದ್ವಸ್ತು ಶರೀರವು ಕಾರಣವಾಗಿದೆ. ಆದ್ದರಿಂದ ಕಾರ್ಯ ಹಾಗೂ ಕಾರಣಗಳ ಸ್ವಭಾವದಲ್ಲಿ ವ್ಯತ್ಯಾಸವು ಯುಕ್ತವಾಗುತ್ತದೆ.

**प्रकाशः** – तन्न युक्तम् । ब्रह्मणः शरीरित्वे तस्य जीववच्छरीरधातुसाम्यवैषम्यनिमित्तसुखदुःखादिभोक्तृत्वापत्तेस्स्वभावविभागो न स्यात्

ಇದು ತಪ್ಪು. ಬ್ರಹ್ಮನು ಶರೀರಿಯಾದರೆ, ಜೀವನಂತೆ ಬ್ರಹ್ಮನೂ ಕೂಡ ಶರೀರಧಾತುಸಾಮ್ಯವೈಷಮ್ಯ-ನಿಮಿತ್ತಕವಾದ ಸುಖದುಃಖಾದಿಗಳ ಭೋಕ್ತೃತ್ವವನ್ನು ಹೊಂದಬೇಕಾದೀತು. ಆವಾಗ ಸ್ವಭಾವವಿಭಾಗವು ಯುಕ್ತವಾಗುವುದಿಲ್ಲವಷ್ಟೇ ?

**प्रकाशः** – इति चेन्न । यथा कान्तारनिपतितस्यापि नृपस्य न दंशमशकाद्युपद्रवस्तथाऽत्रापि स्यादित्याहुरित्यर्थः ।।

ಇದು ತಪ್ಪು. ಯಾವರೀತಿಯಾಗಿ ಕಾಡನ್ನು ಕುರಿತು ತೆರಳಿದ ರಾಜನಿಗೆ ಕ್ಷುದ್ರಪ್ರಾಣಿಗಳ ಹಾಗೂ ಮಶಕ ಮೊದಲಾದ ಕೀಟಗಳ ಉಪದ್ರವವು ಇರುವುದಿಲ್ಲ. ಆದರೆ ಸಾಮಾನ್ಯ ವ್ಯಕ್ತಿಯು ಕಾಡಿಗೆ ತೆರಳಿದರೆ ಎಲ್ಲಾ ಬಗೆಯ ಉಪದ್ರವಗಳು ಅವನಿಗೆ ಇರುತ್ತದೆ. ಅದರಂತೆ ಬ್ರಹ್ಮನಿಗೆ ಎಲ್ಲವೂ ಶರೀರವಾಗಿದ್ದರೂ, ಯಾವುದೇ ಸುಖ-ದುಃಖಗಳ ಲೇಪವು ಉಂಟಾಗುವುದಿಲ್ಲ ಎಂದು ವ್ಯಾಖ್ಯಾನ ಮಾಡಿದ್ದಾರೆ.

**प्रकाशः** – **भावेति** ।। अयं च दोषः प्राचीनपक्षेऽपि योज्यः ।। **सम्भोगेति**।। ननु तद्भाष्य एतदेवाशङ्क्य तत्र ह्युपास्यतया हृदयायतने सन्निधानस्य शरीरान्तर्वर्तित्वमात्रेण भोगप्रसङ्गो न विद्यत इत्युक्तम् ।

ಗ್ರಂಥದಲ್ಲಿ 'ಭಾವಪ್ರಧಾನಕಾರ್ಯಶ್ಚ ಕಲ್ಪ್ಯತ್ವಾತ್' ಎಂದು ರಾಮಾನುಜರಿಗೆ ಸೂತ್ರದಲ್ಲಿ ಭಾವಪ್ರಧಾನನಿರ್ದೇಶ ಮಾಡಬೇಕಾದೀತು ಎಂಬ ದೋಷವನ್ನು ಹೇಳಿದ್ದಾರೆ. ಈ ದೋಷವು ಅದ್ವೈತಮತದಲ್ಲಿಯೂ ಕೂಡ ಸಮಾನವಾಗಿದೆ.

'ಸಂಭೋಗ' ಸೂತ್ರದಿಂದ ವೈಯರ್ಥ್ಯವು ಬರುವುದಿಲ್ಲ. ಸಂಭೋಗಸೂತ್ರದ ಭಾಷ್ಯದಲ್ಲಿ ಹೀಗೆ ಆಕ್ಷೇಪ ಮಾಡಿ ಉಪಾಸ್ಯನಾಗಿ ಬ್ರಹ್ಮನು ಹೃದಯದಲ್ಲಿ ಸನ್ನಿಹಿತನಾಗಿದ್ದಾನೆಂದು ಉಪಾಸನೆ ಮಾಡಬೇಕು. ಆದ್ದರಿಂದ ಎಲ್ಲರ ಶರೀರದ ಹೃದಯಭಾಗದಲ್ಲಿ ನೆಲೆಸಿರುವ ಮಾತ್ರದಿಂದ ಎಲ್ಲರ ಸುಖ-ದುಃಖಾದಿಗಳ ಭೋಗವು ಬ್ರಹ್ಮನಿಗೆ ಇರುವುದಿಲ್ಲವೆಂದು ಸಂಭೋಗ ಸೂತ್ರದಲ್ಲಿ ಪರಿಹರಿಸಲಾಗಿದೆ.

**प्रकाशः** – इह तु जीववद्ब्रह्मणोऽपि शरीरित्वे तद्वदेव सुख-दुःखयोर्भोक्तृत्वप्रसङ्गो दुर्वार इत्युच्यत इत्यनेन समाहितमित्यतस्तदाशङ्क्य निराह – **नन्विति** ।।

ಈ ಸೂತ್ರದಲ್ಲಿ ಜೀವನಂತೆ ಬ್ರಹ್ಮನೂ ಕೂಡ ಶರೀರವುಳ್ಳವನಾದರೆ, ಜೀವನಂತೆ ಬ್ರಹ್ಮನಿಗೆ ಶರೀರಸ್ವಾಮ್ಯತ್ವವಿರುವುದರಿಂದ ಸುಖ-ದುಃಖಾದಿಗಳ ಭೋಗವು ಬರಬೇಕಾದೀತು ಎಂದು ಆಕ್ಷೇಪ ಮಾಡಿ, ಸಮಾಧಾನವನ್ನು ನೀಡಲಾಗಿದೆ. ಆದ್ದರಿಂದ ಎರಡು ಸೂತ್ರಗಳ ಆರಂಭಕ್ಕೆ ಆಕ್ಷೇಪಗಳು

ಭಿನ್ನವಾಗಿರುವುದರಿಂದ ಗತಾರ್ಥತ್ವವು ಹೇಗೆ ಬರುತ್ತದೆ ? ಎಂಬ ಆಕ್ಷೇಪವನ್ನು 'ನನು' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः – इष्टापत्तेरिति ।।** सर्वज्ञत्वादीश्वरस्य सुखदुःखादिसाक्षात्कारस्य त्वयापि स्वीकृतत्वादिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे भोक्त्रधिकरणं सम्पूर्णम् ।।९।।**

ಈಶ್ವರನು ಸರ್ವಜ್ಞನಾದ್ದರಿಂದ ಸಕಲರ ಸುಖ-ದುಃಖಾದಿಗಳ ಸಾಕ್ಷಾತ್ಕಾರ ಈಶ್ವರನಿಗೆ ಇರುತ್ತದೆಂದು ಒಪ್ಪಿಕೊಳ್ಳಲೇಬೇಕು. ನೀನೂ ಕೂಡ ಹಾಗೇ ಒಪ್ಪಿರುತ್ತಿ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಭೋಕ್ತ್ರಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




ಬ್ರಹ್ಮನಿಗೆ ಸಮಸ್ತ ಜಗತ್ತು ಶರೀರವಾಗಿದೆ. ಸಕಲಜೀವರೂ ಕೂಡ ಬ್ರಹ್ಮನ ಶರೀರವೇ ಆಗಿದ್ದಾರೆ. ಹಾಗಾದರೆ ಸಕಲ ಜೀವರಿಗೆ ಬರುವ ಸುಖ-ದುಃಖಾದಿಗಳ ಭೋಗವು ಬ್ರಹ್ಮನಿಗೂ ಕೂಡ ಬರಬೇಕಾದೀತು ಎಂಬ ಆಕ್ಷೇಪದ ಪರಿಹಾರಕ್ಕಾಗಿ 'ಭೋಕ್ತ್ರಾಪತ್ತೇಃ' ಎಂಬ ಸೂತ್ರವು ಹೊರಟಿದೆ ಎಂದು ರಾಮಾನುಜರು ವ್ಯಾಖ್ಯಾನ ಮಾಡುತ್ತಾರೆ. ಇದೂ ಕೂಡ ಸರಿಯಲ್ಲ. ಸೂತ್ರದಲ್ಲಿ ಅನೇಕ ಪದಗಳನ್ನು ಅಧ್ಯಾಹಾರ ಮಾಡಿಕೊಂಡು, ಆಪಾದ್ಯ-ಆಪಾದಕಭಾವವನ್ನು ರಾಮಾನುಜರು ತೋರಿಸಬೇಕು. 'ಭೋಕ್ತೃತ್ವಾಪತ್ತೇಃ' ಎಂಬುದಾಗಿ ಭಾವಪ್ರಧಾನವನ್ನೂ ಕೂಡ ಕಲ್ಪನೆ ಮಾಡಬೇಕು. ಮತ್ತು ಸಂಭೋಗಸೂತ್ರದಲ್ಲಿಯೇ ಈ ಆಕ್ಷೇಪವನ್ನು ಪರಿಹರಿಸಿದ್ದಾಗಿದೆ. ಪುನಃ ಈ ಅಧಿಕರಣವು ಹೊರಡುವುದು ವ್ಯರ್ಥ. ಬ್ರಹ್ಮನಿಗೆ ಸಮಸ್ತ ಜಗತ್ತು ಶರೀರವಾದರೆ, ಸಕಲಜೀವರ ಸುಖ-ದುಃಖಾದಿಗಳ ಅನುಸಂಧಾನ ಬ್ರಹ್ಮನಿಗೆ ಬರಬೇಕಾಗುತ್ತದೆ ಎಂದು ಆಕ್ಷೇಪ ಮಾಡಿ, ಪುಣ್ಯ-ಪಾಪಗಳೆಂಬ ಕರ್ಮದ ಲೇಪವಿಲ್ಲದ ಬ್ರಹ್ಮನಿಗೆ ಜೀವನ ಸುಖ-ದುಃಖಾದಿಗಳ ಅನುಸಂಧಾನವು ಬರುವುದಿಲ್ಲವೆಂದು 'ಸಂಭೋಗ' ಸೂತ್ರದಲ್ಲಿಯೇ ನೀವು ಸಮರ್ಥನೆ ಮಾಡಿದ್ದೀರಿ. ಪುನಃ ಅದೇ ವಿಷಯವನ್ನು ಹೇಳಲು ಈ ಅಧಿಕರಣವು ಹೊರಟರೆ ಪುನರುಕ್ತಿ ಬರುತ್ತದೆ. ಆದ್ದರಿಂದ ರಾಮಾನುಜರ ಅಧಿಕರಣಶರೀರವು ಅತ್ಯಂತ ಅಯುಕ್ತವಾಗಿದೆ.

# ಆರಂಭಣಾಧಿಕರಣ

(೨-೧-೬)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಆರಂಭಣಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — तदनन्यत्वमारम्भणशब्दादिभ्यः ॥**

'ಕಿಂಸ್ವಿದಾಸೀದಧಿಷ್ಠಾನಮಾರಂಭಣಂ ಕಥಮಸ್ವಿತ್ಕಥಾಸೀತ್' ಎಂಬುದಾಗಿ ಪ್ರಳಯಕಾಲದಲ್ಲಿ ಯಾವ ಉಪಾದಾನವಿತ್ತು ಯಾವ ಅಧಿಷ್ಠಾನವಿತ್ತು ? ಹೀಗೆ ಸ್ವತಂತ್ರವಾದ ಉಪಾದಾನವನ್ನು ಅಧಿಷ್ಠಾನವನ್ನು ಶ್ರುತಿಯು ಆಕ್ಷೇಪ ಮಾಡುತ್ತಿದೆ. ಈ ಆಕ್ಷೇಪ ಬಲದಿಂದಲೇ ಪ್ರಳಯಕಾಲದಲ್ಲಿ ಪರಮಾತ್ಮನನ್ನು ಬಿಟ್ಟು ಇತರ ಯಾವುದೇ ಸ್ವತಂತ್ರ ಪದಾರ್ಥಗಳು ಇರಲಿಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಜಗತ್ತಿಗೆ ಸ್ವತಂತ್ರಕಾರಣನಾದವನು ಪರಮಾತ್ಮ ಮಾತ್ರ ಎಂಬುದು ನಿಶ್ಚಯವಾಗುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका — तदनन्यत्वमारम्भणशब्दादिभ्यः ॥ तदनन्यत्वं तस्य स्वतन्त्रकारणस्य** ब्रह्माभिन्नत्वं वाच्यम् । कुतः **आरम्भणशब्दादिभ्यः** आरम्भणे फलोपलक्षितकिंस्वि दासीदित्यधिष्ठानाद्याक्षेपकवाक्यात् स्वातन्त्र्यादियुक्तिभिश्चेत्यर्थः ॥१॥

ಅರ್ಥ -- ತದನನ್ಯತ್ವಂ = ಸ್ವತಂತ್ರಕಾರಣನಾದವನು ಬ್ರಹ್ಮನು ಮಾತ್ರ ಎಂಬುದು ಸಿದ್ಧವಾಗುತ್ತದೆ. ಏಕೆಂದರೆ 'ಆರಂಭಣಶಬ್ದಾದಿಭ್ಯಃ ಕಿಂಸ್ವಿದಾಸೀದಧಿಷ್ಠಾನಮಾರಂಭಣಂ ಕಥಮಸ್ವಿತ್ಕಥಾಸೀತ್' ಎಂಬುದಾಗಿ

ಅಧಿಷ್ಠಾನ ಉಪಾದಾನಗಳನ್ನು ಶ್ರುತಿ ವಾಕ್ಯವು ಆಕ್ಷೇಪ ಮಾಡುತ್ತಿದೆ. ಮತ್ತು ಸ್ವಾತಂತ್ರ್ಯಾದಿ ಯುಕ್ತಿಗಳಿಂದಲೂ ಶ್ರೀಹರಿಯೇ ಜಗತ್ಕಾರಣನಾಗಿದ್ದಾನೆಂದು ಸ್ಪಷ್ಟವಾಗುತ್ತದೆ. (ಆರಂಭಣಪದದಿಂದ ಅಧಿಷ್ಠಾನಾದಿ ಸಾಧನ ಕಲಾಪಗಳನ್ನು ಲಕ್ಷಣಾಯಾ ತಿಳಿಯಬೇಕು).

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — ।। तदनन्यत्वमारम्भणशब्दादिभ्यः ।।१।।**

**स्वतन्त्रबहुसाधना सृष्टिर्लोके दृष्टा ।**

**नैवं ब्रह्मणः । स्वरूपसामर्थ्यादेव तस्य सृष्टिः ।**

ಅನುವಾದ - ಲೋಕದಲ್ಲಿ ಅನೇಕ ಬಗೆಯ ಸೃಷ್ಟಿಗಳು ಸ್ವತಂತ್ರವಾದ ಕಾರಣಗಳಿಂದ ಸಹಿತವಾಗಿರುವುದು ಕಂಡಿದೆ. ಆದರೆ ಬ್ರಹ್ಮನ ವಿಷಯದಲ್ಲಿ ಹೀಗಿಲ್ಲ. ಯಾವುದೇ ಸ್ವತಂತ್ರಸಾಧನೆಗಳನ್ನು ಅಪೇಕ್ಷೆ ಪಡದೆ ತನ್ನ ಸ್ವರೂಪಭೂತವಾದ ಸಾಮರ್ಥ್ಯದಿಂದಲೇ ಜಗತ್ತಿನ ಸೃಷ್ಟಿವ್ಯಾಪಾರದಲ್ಲಿ ತೊಡಗಲು ಸಮರ್ಥನಾಗಿದ್ದಾನೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕರ್ತೃತ್ವ ವಿಷಯದಲ್ಲಿ ಅನೇಕ ಬಗೆಯ ಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು ತೋರಿಸಲು ಸೂತ್ರವನ್ನೇ ಮೊದಲು ಪಠಣ ಮಾಡುತ್ತಿದ್ದಾರೆ. ಲೋಕೇ = ಲೋಕದಲ್ಲಿ ಸ್ವತಂತ್ರಬಹುಸಾಧನಕರ್ತೃವಿಗಿಂತ ಅತಿರಿಕ್ತವಾದ ಸ್ವತಂತ್ರವಾದ ಸತ್ತಾ, ಶಕ್ತಿ, ಪ್ರವೃತ್ತಿ ಮೊದಲಾದವುಗಳನ್ನು ಹೊಂದಿರುವ ಅಧಿಷ್ಠಾನ ಕಾರಣ ಮೊದಲಾದ ಅನೇಕ ಬಗೆಯ ಸಾಮಗ್ರಿಗಳು ಸ್ವತಂತ್ರವಾಗಿರುವುದು. ದೃಷ್ಟಾ = ಕಂಡಿರುತ್ತದೆ. ಬ್ರಹ್ಮಣಃ = ಬ್ರಹ್ಮನ ಸೃಷ್ಟಿವಿಷಯದಲ್ಲಿ, ನೈವಂ = ಹೀಗಿರುವುದಿಲ್ಲ. ಕಿಂತು = ವಿಪರೀತವಾಗಿ, ಸ್ವರೂಪಸಾಮರ್ಥ್ಯಾದೇವ = ಯಾವುದೇ ಸ್ವತಂತ್ರ- ಸಾಧನೆಗಳನ್ನು ಅಪೇಕ್ಷೆ ಪಡೆದೆ ತನ್ನ ಸಾಮರ್ಥ್ಯದಿಂದಲೇ, ತಸ್ಯ = ಬ್ರಹ್ಮನ, ಸೃಷ್ಟಿಃ = ಸೃಷ್ಟಿ ವ್ಯಾಪಾರವು ಯುಕ್ತವಾಗುತ್ತದೆ.

**भाष्यम् — किं स्विदासीदधिष्ठानमारम्भणं कतमत्स्वित्कथाऽऽसीत्, इति (ऋ.१०.८१.२.) ह्याक्षेपः ।**

ಅನುವಾದ - ಪರಮಾತ್ಮನ ಸೃಷ್ಟಿವ್ಯಾಪಾರವು ಮತ್ತೊಂದು ಸಾಧನದ ಅಧೀನವಾಗಿ ನಡೆಯಲು

ಸಾಧ್ಯವಿಲ್ಲ. ಏಕೆಂದರೆ 'ಕಿಂ ಸ್ವಿದಾಸೀತ್' ಎಂಬ ಶ್ರುತಿಯು ಪರಮಾತ್ಮನ ಸೃಷ್ಟಿಗಾಗಿ ಬೇರೆ ಯಾವ ಸಾಮಗ್ರಿಗಳು ಬೇಕು ? ಎಂದು ಆಕ್ಷೇಪ ಮಾಡುತ್ತದೆ. ಕಿಂ ಶಬ್ದವು ಪ್ರಶ್ನಾರ್ಥಕವಲ್ಲ, ಆಕ್ಷೇಪಾರ್ಥದಲ್ಲೇ ಇರುತ್ತದೆ. ಪ್ರಶ್ನಾರ್ಥಕವಾಗಿದ್ದಲ್ಲಿ ಅಧಿಷ್ಠಾನಾದಿಗಳನ್ನು ಹೇಳಬೇಕಿತ್ತು. ಆದರೆ ಅಧಿಷ್ಠಾನ ಹಾಗೂ ಸಾಮಗ್ರಿಗಳನ್ನು ಶ್ರುತಿಯು ಹೇಳುತ್ತಿಲ್ಲ.

ಪ್ರತಿಪಾದಾರ್ಥ -- ಪರಮಾತ್ಮನು ಸ್ವತಂತ್ರಸಾಧನೆಗಳನ್ನು ಏಕೆ ಅಪೇಕ್ಷಿಸುವುದಿಲ್ಲ ? ಎಂಬ ಪ್ರಶ್ನೆಗೆ ಆರಂಭಣ ಎಂಬ ಸೂತ್ರದ ಅಂಶವನ್ನು ವ್ಯಾಖ್ಯಾನ ಮಾಡುತ್ತಾ ಉತ್ತರಿಸುತ್ತಿದ್ದಾರೆ. ಕಿಂ ಸ್ವಿದಾಸೀದಧಿಷ್ಠಾನಮ್ = ಸೃಷ್ಟಿ ಮಾಡುವ ಪರಮಾತ್ಮನಿಗೆ ಯಾವ ಆಶ್ರಯ, ಆರಂಭಣಂ ಕತಮಹ = ಸಾಮಗ್ರಿಯಾದರೂ ಯಾವುದು? ಕಥಾऽऽಸೀತ್ = ಯಾವುದು ತಾನೆ ಇದ್ದೀತು? ಇತಿ = ಹೀಗೆ, ಆಕ್ಷೇಪಃ = ಆಕ್ಷೇಪವಷ್ಟೆ?

## भाष्यम् – अधिष्ठानाद्यनुक्तेः आदिशब्दाद् युक्तिभिश्च।

ಅನುವಾದ - ಪರಮಾತ್ಮನಿಗೆ ಸೃಷ್ಟಿ ಮಾಡಲು ಯಾವುದೇ ಆಶ್ರಯಗಳನ್ನು ಶ್ರುತಿಯು ಹೇಳುತ್ತಿಲ್ಲ. ಸೂತ್ರದಲ್ಲಿರುವ ಆದಿ ಶಬ್ದದಿಂದ ಯುಕ್ತಿಗಳಿಂದಲೂ ಸ್ವತಂತ್ರವಾದ ಅಧಿಷ್ಠಾನಗಳು ಇರಲಿಲ್ಲವೆಂದು ತಿಳಿಯುತ್ತದೆ.

ಪ್ರತಿಪದಾರ್ಥ -- ಕಿಂ ಶಬ್ದವು ಪ್ರಶ್ನೆ ಹಾಗೂ ಆಕ್ಷೇಪ ಎರಡೂ ಅರ್ಥದಲ್ಲಿ ಸಮಾನವಾಗಿರುವುದರಿಂದ ಪ್ರಶ್ನಾರ್ಥಕವೆಂದು ಹೇಗೆ ನಿಶ್ಚಯಿಸಬೇಕು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ಅಧಿಷ್ಠಾನಾದ್ಯನುಕ್ತೇಃ = ಅಧಿಷ್ಠಾನ ಮೊದಲಾದವುಗಳನ್ನು ಹೇಳದಿರುವುದರಿಂದ, ಆದಿಶಬ್ದಾದ್ = ಸೂತ್ರದಲ್ಲಿರುವ ಆದಿಶಬ್ದದಿಂದ, ಯುಕ್ತಿಭಿಶ್ಚ = ಮುಂದೆ ಹೇಳುವ ಯುಕ್ತಿಗಳಿಂದಲೂ ಮೇಲಿನ ವಿಷಯವು ಸಿದ್ಧವಾಗುತ್ತದೆ.

## भाष्यम् – परतन्त्रो ह्यपेक्षेत स्वतन्त्रः किमपेक्षते।
## साधनानां साधनत्वं यतः किं तस्य साधनैः ।। इत्यादिभिः

ಅನುವಾದ - ಯಾವ ಕರ್ತೃವು ಅಸ್ವತಂತ್ರನಾಗಿರುತ್ತಾನೋ ಅವನು ತಾನು ಮಾಡುವ ಸೃಷ್ಟಿಗೆ ಮತ್ತೊಂದು ಸಾಮಗ್ರಿಯನ್ನು ಅಪೇಕ್ಷೆ ಪಡಬೇಕು? ಸ್ವತಂತ್ರನಾದ ಪರಮಾತ್ಮನಾದರೂ ಬೇರೆ ಯಾವುದನ್ನು ತಾನೆ ಅವಲಂಬಿಸಬೇಕು? ಸಾಧನಗಳಲ್ಲಿರುವ ಸಾಧನತ್ವವೂ ಕೂಡ ಯಾರ ಅಧೀನವಾಗಿದೆಯೋ ಅಂಥ ವ್ಯಕ್ತಿಗೆ ಸಾಧನೆಗಳಿಂದ ಏನು ಪ್ರಯೋಜನ ?

ಪ್ರತಿಪದಾರ್ಥ -- ಯುಕ್ತಿಗಳಿಗೆ ಆಭಾಸತ್ವಶಂಕೆಯನ್ನು ನಿರಾಸ ಮಾಡಲು ಸ್ಮೃತಿಸಿದ್ಧತ್ವವನ್ನು ಹೇಳುತ್ತಿದ್ದಾರೆ. ಪರತಂತ್ರಃ = ಅಸ್ವತಂತ್ರನಾದವನು, ಅಪೇಕ್ಷತೇ = ಬೇರೆ ಸಾಧನೆಗಳನ್ನು ಅಪೇಕ್ಷಿಸುತ್ತಾನೆ. ಸ್ವತಂತ್ರಃ = ಸ್ವತಂತ್ರನಾದ ಪರಮಾತ್ಮನು, ಕಿಮಪೇಕ್ಷತೇ = ಯಾವುದನ್ನು ತಾನೆ ಅಪೇಕ್ಷಿಸುತ್ತಾನೆ. ಸಾಧನಾನಾಂ = ಸಾಧನೆಗಳಾದ ಪ್ರಕೃತ್ಯಾದಿಗಳಿಗೆ, ಸಾಧನತ್ವಮ್ = ಸಾಧನತ್ವವು, ಯತಃ = ಯಾವ ಪರಮಾತ್ಮನಿಂದ ಬಂದಿರುತ್ತದೋ, ತಸ್ಯ = ಅಂಥ ಪರಮಾತ್ಮನಿಗೆ, ಸಾಧನಾದಿಭಿಃ = ಸಾಧನೆಗಳಿಂದ, ಕಿಂ = ಆಗಬೇಕಾದುದ್ದೇನು? ಇತ್ಯಾದಿಭಿಃ = ಇವೇ ಮೊದಲಾದ ಪ್ರಮಾಣವಚನಗಳಿಂದ ಶ್ರೀಹರಿಯು ಸ್ವತಂತ್ರನೆಂದು ಸಿದ್ಧವಾಗುತ್ತದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र हरेः स्वातन्त्र्येण जगत्कारणत्वे युक्तिविरोधपरिहारादस्ति शास्त्रादिसङ्गतिः ।**

ಶ್ರೀಹರಿಯು ಜಗತ್ತಿಗೆ ಸ್ವತಂತ್ರಕಾರಣನಾಗಿದ್ದಾನೆ. ಈ ವಿಷಯದಲ್ಲಿ ಪ್ರಾಪ್ತವಾಗುವ ಯುಕ್ತಿ ವಿರೋಧವನ್ನು ಪರಿಹಾರ ಮಾಡಲು ಆರಂಭಣಾಧಿಕರಣವು ಹೊರಡುತ್ತಿದೆ. ಆದ್ದರಿಂದ ಈ ಅಧಿಕರಣಕ್ಕೆ ಶಾಸ್ತ್ರಸಂಗತಿ ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ.

**तत्वप्रकाशिका – विष्णुर्जगत्सृष्ट्यादिकर्तेति उक्तम् । तस्य च स्वतन्त्रसाधनानपेक्षत्वे युक्तिविरोधप्राप्तौ न सर्वगुणत्वं तेन सिध्यतीत्यसौ निराकर्तव्य एव ।**

ಮಹಾವಿಷ್ಣುವು ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾಗಿದ್ದಾನೆಂದು ಈ ಹಿಂದೆ ಪ್ರತಿಪಾದನೆ ಮಾಡಲಾಗಿದೆ. ಅಂಥ ಮಹಾವಿಷ್ಣು ಸ್ವತಂತ್ರವಾದ ಸಾಧನವನ್ನು ಅಪೇಕ್ಷಿಪಡದೆ ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ ಎಂದು ಹೇಳುವುದಾದರೆ ಯುಕ್ತಿವಿರೋಧವು ಪ್ರಾಪ್ತವಾಗುತ್ತದೆ. ಆದ್ದರಿಂದ ಬ್ರಹ್ಮನು ಸ್ವತಂತ್ರ ಕಾರಣನಲ್ಲವೆಂದು ಹೇಳಬೇಕು. ಆವಾಗ ಸರ್ವಗುಣತ್ವವು ಅವನಲ್ಲಿ ಸಿದ್ಧವಾಗುವುದಿಲ್ಲ. ಅದಕ್ಕಾಗಿ ಯುಕ್ತಿವಿರೋಧವನ್ನು ಪರಿಹಾರ ಮಾಡುವುದು ಅತ್ಯಂತ ಅನಿವಾರ್ಯ.

**तत्वप्रकाशिका – तज्जगत्सृष्ट्यादिकं विषयः । किं स्वतन्त्रसाधनसापेक्षं न वेति संशयः । लोकदृष्टिरलौकिकत्वं च सन्देहबीजम् । स्वतन्त्रसाधनसापेक्षमिति पूर्वः पक्षः ।**

ಈ ಅಧಿಕರಣದಲ್ಲಿ ಜಗತ್‌ಸೃಷ್ಟ್ಯಾದಿಗಳು ವಿಷಯ. ಜಗತ್‌ಸೃಷ್ಟ್ಯಾದಿಗಳಿಗೆ ಸ್ವತಂತ್ರಸಾಧನದ ಅಪೇಕ್ಷೆ ಇದೆಯೋ ಅಥವಾ ಇಲ್ಲವೋ ? ಎಂಬುದೇ ಸಂದೇಹ. ಲೋಕದಲ್ಲಿ ಘಟ ಮೊದಲಾದ ಪದಾರ್ಥಗಳು ಉತ್ಪತ್ತಿಯಾಗಬೇಕಾದರೆ ಕರ್ತೃವಿಗಿಂತ ಅತಿರಿಕ್ತವಾದ ಮಣ್ಣು ಮೊದಲಾದವುಗಳನ್ನು ಅಪೇಕ್ಷೆ ಪಡುವುದು ಕಂಡಿದೆ. ಆದರೆ ಅಲೌಕಿಕವಾದ ಜಗತ್ತಿನ ಸೃಷ್ಟಿವಿಷಯದಲ್ಲಿ ಮಣ್ಣು ಮೊದಲಾದವುಗಳಂತೆ ಮತ್ತೊಂದು ಸಾಧನೆಗಳು ಬೇಕಾಗಿರುವುದಿಲ್ಲ. ಇದು ಸಂದೇಹಬೀಜ ಸ್ವತಂತ್ರವಾದ ಸಾಧನೆಯನ್ನು ಅಪೇಕ್ಷಿಸುತ್ತಾನೆ ಎಂಬುದು ಈ ಅಧಿಕರಣದ ಪೂರ್ವಪಕ್ಷ.

**तत्वप्रकाशिका – विप्रतिपन्ना सृष्टिः कर्तृव्यतिरिक्तस्वतन्त्रसाधनसापेक्षा सृष्टित्वात् घटादिसृष्टिवदिति युक्तिसिद्धत्वात् । अन्यथा तद्विरोधात् ।**

'ವಿಪ್ರತಿಪನ್ನಾ ಸೃಷ್ಟಿಃ ಕರ್ತೃವ್ಯತಿರಿಕ್ತಸ್ವತಂತ್ರಸಾಧನಸಾಪೇಕ್ಷಾ ಸೃಷ್ಟಿತ್ವಾತ್ ಘಟಾದಿಸೃಷ್ಟಿವತ್' ಘಟ ಸೃಷ್ಟಿಯು ಸೃಷ್ಟಿಯಾದ್ದರಿಂದ ಕರ್ತೃವ್ಯತಿರಿಕ್ತವಾದ ಸ್ವತಂತ್ರಸಾಧನೆಯನ್ನು ಅಪೇಕ್ಷಿಪಡುತ್ತದೆ. ಅದೇ ರೀತಿಯಾಗಿ ವಿಪ್ರತಿಪನ್ನವಾದ ಸೃಷ್ಟಿಯೂ ಕೂಡ ಸೃಷ್ಟಿಯಾಗಿರುವುದರಿಂದ ಕರ್ತೃವ್ಯತಿರಿಕ್ತವಾಗಿರುವುದರಿಂದ ಸ್ವತಂತ್ರಸಾಧನವನ್ನು ಅಪೇಕ್ಷಿಪಡುತ್ತದೆಂಬುದು ಯುಕ್ತಿಯಿಂದ ಸಿದ್ಧವಾಗುತ್ತದೆ. ಹೀಗೆ ಒಪ್ಪದಿದ್ದರೆ ಯುಕ್ತಿಯ ವಿರೋಧವು ಜಗತ್‌ಸೃಷ್ಟ್ಯಾದಿಗಳಿಗೆ ತಪ್ಪಿದ್ದಲ್ಲ.

**तत्वप्रकाशिका – घटसृष्टौ मृदादीनि खलु स्वतन्त्रसाधनानि । तानि विना सृष्ट्यनुपपत्तेः ।**

ಘಟದ ಉತ್ಪತ್ತಿಯಾಗಬೇಕಾದರೆ ಮಣ್ಣು ಮೊದಲಾದವುಗಳು ಸ್ವತಂತ್ರಸಾಧನೆಯಾಗಿವೆ. ಮಣ್ಣು ಮೊದಲಾದವುಗಳು ಇಲ್ಲದೆ ಘಟದ ಉತ್ಪತ್ತಿನಡೆಯಲು ಸಾಧ್ಯವೇ ಇಲ್ಲ.

**तत्वप्रकाशिका – अतो ब्रह्म स्वतन्त्रसाधनसापेक्षमेव सृष्ट्यादिकर्त्रिति न तस्य जगज्जन्मादिकारणत्वेन सर्वगुणपूर्णत्वसिद्धिरिति प्राप्ते सिद्धान्तयत्सूत्रमुपन्यस्य व्याचष्टे ।। तदनन्यत्वमिति ।।**

ಅದರಂತೆ ಬ್ರಹ್ಮನೂ ಕೂಡ ಜಗತ್ತನ್ನು ಸೃಷ್ಟಿಮಾಡಬೇಕಾದರೆ ಸ್ವತಂತ್ರವಾದ ಸಾಧನೆಯನ್ನು ಅಪೇಕ್ಷಿಪಟ್ಟು ಸೃಷ್ಟಿಯನ್ನು ಮಾಡಬೇಕು. ಆದ್ದರಿಂದ ಬ್ರಹ್ಮನಿಗೆ ಜಗಜ್ಜನ್ಮಾದಿಕಾರಣತ್ವೇನ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಉಪನ್ಯಾಸ ಮಾಡಿ 'ತದನನ್ಯತ್ವಮ್' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – यद्यपि घटादिसृष्टिः स्वतन्त्रबहुसाधनसापेक्षा दृष्टा तथाऽपि नैतद्दृष्टान्ते न ब्रह्मणो जगत्सृष्टिस्तथा कल्प्या । किन्तु स्वतन्त्रसाधनस्य तदनन्यत्वं । किमुक्तं भवति - स्वरूपसामर्थ्यादेव तस्य सृष्टिः । कुतः ? यतः किंस्विदिति श्रुतावधिकष्ठानादिसाधनाद्याक्षेपः क्रियते । आक्षेपस्य विपर्यये पर्यवसानात् । अनुमानं तु श्रुतिविरोधादप्रमाणमेवेति भावः ।**

ವಾಸ್ತವಿಕವಾಗಿ ಘಟ ಮೊದಲಾದವುಗಳ ಉತ್ಪತ್ತಿಯು ಸ್ವತಂತ್ರವಾದ ಅನೇಕ ಸಾಧನೆಯನ್ನು ಅಪೇಕ್ಷೆ ಪಟ್ಟಿರುವುದು ಲೋಕದಲ್ಲಿ ಕಂಡಿದೆ. ಆದರೂ ಕೂಡ ಈ ದೃಷ್ಟಾಂತದಿಂದ ಬ್ರಹ್ಮನ ಜಗತ್‌ಸೃಷ್ಟಿಯಲ್ಲಿ ಸ್ವತಂತ್ರವಾದ ಸಾಧನೆಯನ್ನು ಕಲ್ಪಿಸುವುದು ತಪ್ಪು.

ಇದರಿಂದ ಏನು ಹೇಳಿದಂತಾಯಿತು ? ಎಂದರೆ ಸ್ವರೂಪಸಾಮರ್ಥ್ಯದಿಂದಲೇ ಬ್ರಹ್ಮನು ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ. ಏಕೆಂದರೆ 'ಕಿಂಸ್ವಿದಾಸೀತ್' ಎಂಬ ಶ್ರುತಿಯಲ್ಲಿ ಅಧಿಷ್ಠಾನ ಮುಂತಾದ ಸಾಧನೆಗಳು ಬ್ರಹ್ಮನ ಸೃಷ್ಟಿಗೆ ಏಕೆ ಬೇಕು ? ಎಂದು ಆಕ್ಷೇಪ ಮಾಡಲಾಗಿದೆ. ಈ ಆಕ್ಷೇಪವನ್ನು ವಿಪರ್ಯಪರ್ಯವಸಾನ ಮಾಡಬೇಕು. ಮತ್ತು ಬ್ರಹ್ಮನ ಸೃಷ್ಟಿಗೆ ಸಾಧನೆಗಳನ್ನು ಶ್ರುತಿಯಲ್ಲಿ ಹೇಳಿಯೇ ಇಲ್ಲ. ಆದ್ದರಿಂದ ಅಂಥ ಸ್ವತಂತ್ರಸಾಧನೆಗಳು ಯಾವುದೂ ಕೂಡ ಇಲ್ಲವೆಂದೇ ಸ್ಪಷ್ಟವಾಗಿ ತಿಳಿಯುತ್ತದೆ. ಅನುಮಾನವು ಶ್ರುತಿವಿರುದ್ಧವಾದ್ದರಿಂದ ಅಪ್ರಮಾಣವೆಂದು ತಿಳಿಯಬೇಕು.

**तत्वप्रकाशिका – ईश्वरसृष्टेः स्वतन्त्रसाधनसापेक्षत्वमात्रसाधने सिद्धसाधनता स्यादिति बहित्युक्तम् ।**

ಈಶ್ವರಸೃಷ್ಟಿಗೆ ಸ್ವತಂತ್ರವಾದ ಸಾಧನೆಯ ಅಪೇಕ್ಷೆಯಿದೆ ಎಂದು ಅನುಮಾನದಿಂದ ಸಾಧಿಸುವುದಾದರೆ ಸಿದ್ಧಸಾಧನತಾದೋಷ ಬರುತ್ತದೆ. ಏಕೆಂದರೆ ಸ್ವತಂತ್ರವಾದ ತನ್ನ ಜ್ಞಾನ ಇಚ್ಛಾದಿಗಳನ್ನು ಈಶ್ವರನು ಅಪೇಕ್ಷೆ ಪಡುತ್ತಾನೆಂದು ನಾವೂ ಕೂಡ ಒಪ್ಪಿದ್ದೇವೆ. ಈ ಸಿದ್ಧಸಾಧನ ದೋಷವನ್ನು ಪರಿಹಾರ ಮಾಡಿಕೊಳ್ಳಲು ಈಶ್ವರನಿಗಿಂತ ಬೇರೆಯಾದ ಅನೇಕ ಸಾಧನೆಗಳ ಅಪೇಕ್ಷೆಯು ಬರಬೇಕಾದೀತೆಂದು ಸಾಧಿಸಬೇಕು. ಈಶ್ವರಸೃಷ್ಟಿಗೆ ಬಹುಸಾಧನಸಾಪೇಕ್ಷತ್ವವನ್ನು ಒಪ್ಪಿಲ್ಲವೆಂದು ಸಿದ್ಧಸಾಧನತಾದೋಷಕ್ಕೆ ಅವಕಾಶವಿಲ್ಲ.

**तत्वप्रकाशिका – विश्वकर्मा हरिः यतो येनाधिष्ठानादिना भूमिं द्यां च जनयन् जनयिता विशेषेण बभूव । येन च महिम्ना विश्वतश्चक्षुरावृणोत् तदधिष्ठानं किमासीत् ।**

ಸಮಗ್ರ ಜಗತ್ತನ್ನು ಸೃಷ್ಟಿ ಮಾಡುವ ಶ್ರೀಹರಿಯು ಯಾವ ಅಧಿಷ್ಠಾನಾದಿಗಳಿಂದ ಭೂಮಿಯನ್ನು ಹಾಗೂ ಅಂತರಿಕ್ಷವನ್ನು ಸೃಷ್ಟಿ ಮಾಡಿ ವಿಶೇಷನಾಗಿ ಇದ್ದನೋ ಯಾವ ಮಹಿಮೆಯಿಂದ ವಿಶ್ವತಶ್ಚಕ್ಷುವಾಗಿ ಎಲ್ಲಾ ಅಧಿಷ್ಠಾನವನ್ನು ಆವರಿಸಿರುವನೋ ಅಂಥ ಅಧಿಷ್ಠಾನವಾದರೂ ಸೃಷ್ಟಿಯ ಆದಿಯಲ್ಲಿ ಯಾವುದಿತ್ತು ?

**तत्वप्रकाशिका – आरभ्यतेऽनेनेत्यारम्भणं साधनं वा कतमदासीत् । कथंरूपं चाऽसीत् । न किञ्चित्कथमपीत्यर्थः । किंशब्दस्य प्रश्नाक्षेपयोः समत्वात्प्रश्नोऽयं किं न स्यादित्यत आह – अधिष्ठानादिति ।।**

'ಆರಭ್ಯತೇ ಅನೇನೇತಿ ಆರಂಭಣಮ್' ಎಂಬ ವ್ಯುತ್ಪತ್ತಿಯಿಂದ ಸೃಷ್ಟಿಯ ಪ್ರಾರಂಭದಲ್ಲಿ ಯಾವ ಸಾಧನವಿತ್ತು ಮತ್ತು ಅದು ಯಾವ ರೂಪದಿಂದ ಇತ್ತು ? ಮತ್ತು ಹೇಗಿತ್ತು ? ಯಾವುದೂ ಇರಲಿಲ್ಲ ಹೇಗೂ ಇರಲಿಲ್ಲ ಎಂಬುದು ಈ ಶ್ರುತಿಯು ಅಭಿಪ್ರಾಯ.

'ಕಿಂ' ಶಬ್ದಕ್ಕೆ ಆಕ್ಷೇಪವೆಂದಷ್ಟೆ ಅರ್ಥವಲ್ಲ. ಪ್ರಶ್ನೆ ಎಂಬರ್ಥವೂ ಇರುತ್ತದೆ. ಆದ್ದರಿಂದ ಪ್ರಶ್ನಾರ್ಥದಲ್ಲಿ 'ಕಿಂ' ಶಬ್ದವನ್ನೇಕೆ ಇಲ್ಲಿ ಹೇಳಬಾರದು ? ಎಂಬ ಪ್ರಶ್ನೆಗೆ ಉತ್ತರಿಸಲು 'ಅಧಿಷ್ಠಾನಾನುಕ್ತೇಃ ಎಂಬ ಭಾಷ್ಯದ ಮಾತು ಹೊರಟಿದೆ.

**तत्वप्रकाशिका – प्रश्नश्चेत्परिहारो वक्तव्यः । किंस्विद्धिमस्य भेषजमित्यादिवत् । अत्र परिहारायाधिष्ठानाद्यनुक्तेर्नायं प्रश्नः किं त्वाक्षेप एवेति भावः । युक्तिविरुद्धं चानुमानमिति भावेनाऽह – आदीति ।। अत्रापरतन्त्रत्वात्स्वतन्त्रत्वात्साधनसत्ताप्रदत्वादिति व्यतिरेकिहेतुत्रयं सूचितं भवति ।। १९ ।।**

ಒಂದುವೇಳೆ ಕಿಂಶಬ್ದವು ಪ್ರಶ್ನಾರ್ಥದಲ್ಲಿ ಇದ್ದಿದ್ದರೆ ಉತ್ತರವನ್ನು ನೀಡುವ ವಾಕ್ಯವಿರಬೇಕಿತ್ತು. ಉದಾ - 'ಕಿಂಸ್ವಿದ್ಧಿಮಸ್ಯ ಭೇಷಜಮ್' ಛಳಿಗೆ ಯಾವುದು ಔಷಧಿಯೆಂದು ತೈತ್ತಿರೀಯೋಪನಿಷತ್ತಿನಲ್ಲಿ ಪ್ರಶ್ನಿಸಿದಾಗ ಅಗ್ನಿಯು ಔಷಧಿಯೆಂದು ಉತ್ತರಿಸಲಾಗಿದೆ. ಅದೇ ರೀತಿಯಾಗಿ ಇಲ್ಲಿಯೂ ಕೂಡ ಅಧಿಷ್ಠಾನಾದಿಗಳನ್ನು ಹೇಳಬೇಕಾಗಿತ್ತು. ಹೇಳಿಲ್ಲವಾದ್ದರಿಂದ 'ಕಿಂ' ಶಬ್ದವು ಪ್ರಶ್ನಾರ್ಥದಲ್ಲಿ ಇಲ್ಲವೆಂದು ಸ್ಪಷ್ಟವಾಗುತ್ತದೆ. ಆಕ್ಷೇಪಾರ್ಥದಲ್ಲೇ 'ಕಿಂ' ಶಬ್ದವನ್ನು ವಿವಕ್ಷಿಸಬೇಕು. ಅನುಮಾನವು ಯುಕ್ತಿವಿರುದ್ಧವಾಗಿದೆ ಎಂಬುದಾಗಿ 'ಆದಿ' ಇತ್ಯಾದಿ ಭಾಷ್ಯದ ಮಾತಿನಿಂದ ಸಮರ್ಥಿಸುತ್ತಿದ್ದಾರೆ.

'ಅಪರತಂತ್ರತ್ವಾತ್, ಸ್ವತಂತ್ರತ್ವಾತ್, ಸಾಧನಸತ್ತಾಪ್ರದತ್ವಾತ್' ಎಂಬ ಮೂರು ವ್ಯತಿರೇಕ ಹೇತುಗಳನ್ನು ಭಾಷ್ಯದಲ್ಲಿ ಸೂಚಿಸಿದ್ದಾರೆ.

## ಬ್ರಹ್ಮಸೂತ್ರ

**सूत्रम् – भावे चोपलब्धेः ।।**

ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೇ ಸ್ವತಂತ್ರಕಾರಣವು ಪ್ರಳಯಕಾಲದಲ್ಲಿ ಇರುವುದಿಲ್ಲ. ಏನಾದರೂ ಇದ್ದಿದ್ದಲ್ಲಿ ಶ್ರುತ್ಯಾದಿಪ್ರಮಾಣಗಳಿಂದ ತಿಳಿದುಬರುತ್ತಿತ್ತು.

## ಸೂತ್ರದೀಪಿಕಾ

**सूत्रदीपिका – भावे चोपलब्धेः** ।। यतः ईश्वरान्यस्वतन्त्रसाधनस्य **भावे** सत्त्वे । **उपलब्धेः** दर्शनस्य । प्रसङ्ग इति शेषः । अतोऽपि नास्त्यन्यत् स्वतन्त्रसाधनमित्यर्थः ।।२।।

ಅರ್ಥ -- ಯಾವ ಕಾರಣದಿಂದ ಈಶ್ವರನಿಗಿಂತ ಭಿನ್ನವಾದ ಮತ್ತೊಂದು ಸ್ವತಂತ್ರಸಾಧನವು ಭಾವೇ = ಪ್ರಳಯಕಾಲದಲ್ಲಿ ಇದ್ದಿದ್ದರೆ ಉಪಲಬ್ಧೇಃ = ಶ್ರುತ್ಯಾದಿ ಪ್ರಮಾಣಗಳಿಂದ ತಿಳಿಯಬೇಕಿತ್ತು. ಈ ಕಾರಣದಿಂದಲೂ ಪ್ರಳಯಕಾಲದಲ್ಲಿ ಮತ್ತೊಂದು ಸ್ವತಂತ್ರಕಾರಣವಿರುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। भावे चोपलब्धेः ।।२।।**

**स्वतन्त्रसाधनभावे प्रमाणैरुपलभ्येत ।**

ಅನುವಾದ - ಸ್ವತಂತ್ರವಾದ ಸಾಧನೆಗಳು ಇದ್ದಿದ್ದರೆ ಪ್ರಮಾಣಗಳಿಂದ ತಿಳಿಯಬೇಕಿತ್ತು.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ಸ್ವತಂತ್ರಸಾಧನೆಯನ್ನು ನಿರಾಕರಣೆ ಮಾಡುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಸ್ವತಂತ್ರಸಾಧನಭಾವೇ = ಸ್ವತಂತ್ರವಾದ ಸಾಧನಗಳು ಇರುವುದಾದಲ್ಲಿ, ಪ್ರಮಾಣೈಃ = ಪ್ರತ್ಯಕ್ಷಾದಿ ಪ್ರಮಾಣಗಳಿಂದ ಉಪಲಭ್ಯೇತ = ತೋರಬೇಕಾಗಿತ್ತು.

**भाष्यम् –**

**'अनुक्तं पञ्चभिर्वेदैर्न वस्त्वस्ति कुतश्चन ।**
**अतो वेदत्वमेतेषां यतस्ते सर्ववेदकाः ।' इति स्कान्दे ।।२।।**

ಅನುವಾದ - ಐದು ವೇದಗಳಿಂದ ಪ್ರತಿಪಾದ್ಯವಾಗದ ವಸ್ತುವೇ ಜಗತ್ತಿನಲ್ಲಿ ಇರುವುದಿಲ್ಲ. ಪ್ರತಿಯೊಂದು ವಿಷಯವನ್ನು ತಿಳಿಸುವುದರಿಂದಲೇ ವೇದ ಎಂಬ ನಾಮವನ್ನು ಪಡೆದಿದೆ. ಹೀಗೆ ಸ್ಕಾಂದಪುರಾಣವು ಪ್ರತಿಪಾದನೆ ಮಾಡುತ್ತಿದೆ.

ಪ್ರತಿಪದಾರ್ಥ -- ಪ್ರಮಾಣಗಳಿಂದ ತೋರದಿದ್ದರೂ ಏಕಿರಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಪಂಚಭಿಃ = ಮಹಾಭಾರತದ ಜೊತೆ ಸೇರಿದ ಐದು, ವೇದೈಃ = ವೇದಗಳಿಂದ, ಅನುಕ್ತಮ್ = ಹೇಳದೇ ಇರುವ, ವಸ್ತು = ಪದಾರ್ಥವು, ಕಿಂಚ = ಯಾವುದು, ನಾಸ್ತಿ = ಇರುವುದಿಲ್ಲ. ಯತಃ = ಯಾವ ಕಾರಣದಿಂದ, ತೇ = ಆ ವೇದಗಳು, ಸರ್ವವೇದಕಾಃ = ಎಲ್ಲವನ್ನು ತಿಳಿಸುತ್ತವೆಯೋ, ಅತಃ = ಆದ್ದರಿಂದ, ತೇಷಾಂ = ಅವುಗಳಿಗೆ, ವೇದತ್ವಂ = ವೇದ ಎಂಬ ಹೆಸರು ಸಾರ್ಥಕವಾಗಿದೆ. ಇತಿ = ಹೀಗೆ, ಸ್ಕಾಂದೇ = ಸ್ಕಾಂದ ಪುರಾಣದಲ್ಲಿ ಹೇಳಲಾಗಿದೆ.

## ತತ್ವಪ್ರಕಾಶಿಕಾ

**तत्वप्रकाशिका – युक्त्यन्तरेण स्वतन्त्रसाधनं प्रतिक्षिपत्सूत्रमुपन्यस्य व्याचष्टे – भावे चेति ।।**

ಮತ್ತೊಂದು ಯುಕ್ತಿಯಿಂದ ಸ್ವತಂತ್ರಸಾಧನೆಯನ್ನು ನಿರಾಕರಣೆ ಮಾಡುವ ಸೂತ್ರವನ್ನು ಪಠಿಸಿ 'ಭಾವೇ ಚ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – यदि भगवत्सृष्टौ तदतिरिक्तं स्वतन्त्रसाधनमस्ति तर्हि वेदादिप्रमाणैरुपलभ्येत न चोपलभ्यते । अतो नास्तीत्यर्थः ।**

ಒಂದುವೇಳೆ ಭಗವಂತನ ಸೃಷ್ಟಿಯಲ್ಲಿ ತನಗಿಂತ ಬೇರೆಯಾದ ಮತ್ತೊಂದು ಸ್ವತಂತ್ರಸಾಧನವು ಇರುವುದಾದಲ್ಲಿ ವೇದಾದಿಪ್ರಮಾಣಗಳಿಂದ ಅದು ಉಪಲಬ್ಧವಾಗಬೇಕಿತ್ತು. ಆದರೆ ಯಾವುದೇ ಪ್ರಮಾಣಗಳಿಂದಲೂ ಉಪಲಬ್ಧವಾಗುತ್ತಿಲ್ಲ. ಆದ್ದರಿಂದ ಅಂಥ ಸ್ವತಂತ್ರಸಾಧನವು ಇಲ್ಲವೆಂದೇ ತಿಳಿಯಬೇಕು.

**तत्वप्रकाशिका – प्रमाणानुपलब्धमपि किं न स्यादित्यत आह – अनुक्तमिति ।। भगवद्गुणादिकं मामन्यतस्तदुक्तमेवेत्यदोषः ।। १६ ।।**

ಪ್ರಮಾಣದಿಂದ ಉಪಲಬ್ಧವಾಗುವುದಿಲ್ಲವೆಂದ ಮಾತ್ರಕ್ಕೆ ಏಕೆ ಇರಬಾರದು ? ಎಂಬ ಪ್ರಶ್ನೆಗೆ 'ಅನುಕ್ತಮ್' ಇತ್ಯಾದಿಯಾಗಿ ಉತ್ತರಿಸಿದ್ದಾರೆ. ಭಗವದ್‌ಗುಣಾದಿಗಳು ಇವೆ ಎಂದರೆ ಎಲ್ಲವೂ ವೇದಪ್ರತಿಪಾದ್ಯವಾಗಿವೆ ಎಂದರ್ಥ. ಸಂತ್ಯಶ್ರುತಾಃ ಎಂಬುದಾಗಿ ವೇದ ಅನುಕ್ತವಾದ ಭಗವದ್ ಗುಣಗಳು ಇವೆ ಎಂಬುದಕ್ಕೆ ಸಾಮಾನ್ಯವಾಗಿ ವೇದಪ್ರತಿಪಾದ್ಯವಾಗಿವೆ ಎಂಬರ್ಥವನ್ನೇ ತಿಳಿಯಬೇಕು. ಆದ್ದರಿಂದ ವೇದಪ್ರಮಾಣದಿಂದ ಸಿದ್ಧವಾದದ್ದು ಮಾತ್ರ ಅಸ್ತಿತ್ವವನ್ನು ಹೊಂದಲು ಸಾಧ್ಯ.

## ಬ್ರಹ್ಮಸೂತ್ರ

**सूत्रम् – सत्त्वाच्चावरस्य ।।**

'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯು ನೀರಿನಿಂದ ಪ್ರಪಂಚದ ಹುಟ್ಟುವಿಕೆಯನ್ನು ಹೇಳುತ್ತಿದೆ. ಇದರಿಂದ ಬ್ರಹ್ಮಾತಿರಿಕ್ತವಾದ ಸಾಧನವು ಸಿದ್ಧವಾಯಿತಲ್ಲವೇ ? ಎಂದು ಆಕ್ಷೇಪ ಮಾಡಬಾರದು. ನೀರು ಮೊದಲಾದವೆಲ್ಲವೂ ಪರಮಾತ್ಮನ ಅಧೀನವಾದ ಸಾಧನಗಳಾದ್ದರಿಂದ ಜಗತ್ಕಾರಣವಾಗಲಾರವು.

## ಸೂತ್ರದೀಪಿಕಾ

**सूत्रदीपिका – सत्वाच्चावरस्य ।।** चोऽवधारणे । **अवरस्य** अस्वतन्त्रसाधनस्य **सत्त्वादेव** 'अद्भ्यः सम्भूतः' इति वाक्यं तत्परं भवतीति न तद्विरोध इत्यर्थः।।३।।

ಅರ್ಥ -- ಚ ಶಬ್ದವು ಅವಧಾರಣಾರ್ಥದಲ್ಲಿದೆ. ಅವರಸ್ಯ = ಅಸ್ವತಂತ್ರ ಸಾಧನವಾದ ಸತ್ವಾತ್ ಚ = ಅದ್ಭ್ಯಃ ಸಂಭೂತಃ ಎಂಬ ಶ್ರುತಿಯು ನೀರಿನಿಂದ ಪ್ರಪಂಚ ಹುಟ್ಟಿದೆ ಎಂದು ಹೇಳುತ್ತದೆ. ಇಷ್ಟರಿಂದಲೇ ಬ್ರಹ್ಮಾತಿರಿಕ್ತವಾದ ಸ್ವತಂತ್ರಸಾಧನವಿದೆ ಎಂದು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿವಿರೋಧಕ್ಕೆ ಅವಕಾಶವಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – 'अद्भ्यः सम्भूतः पृथिव्यै रसाच्च' (तै.आ. ३.१३.) इत्यादिना साधनान्तरप्रतीतेः कथमनुपलब्धिरित्यत आह –**

**।। सत्वाच्चावरस्य ।।३।।**

**अवरस्य तदधीनस्य साधनस्य सत्त्वात् ।**

ಅನುವಾದ - ನೀರಿನಿಂದ ಭೂಮಿಯು ಹುಟ್ಟಿತು ಎಂಬುದು ಪ್ರಸಿದ್ಧವಾಗಿದೆ. 'ಅದ್‌ಭ್ಯಃ ಸಂಭೂತೋ ಹಿರಣ್ಯಗರ್ಭಃ' ಇವೇ ಮೊದಲಾದ ಶ್ರುತಿಗಳಿಂದ ಜಗತ್ತಿನ ಸೃಷ್ಟಿಗೆ ಸಾಧನೆಗಳು ತೋರುತ್ತಿರುವುದರಿಂದ ಶ್ರುತಿಯಲ್ಲಿ ಬೇರೆ ಸಾಧನೆಗಳನ್ನೇ ಹೇಳಿರುವುದಿಲ್ಲವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಸತ್ವಾಚ್ಚಾವರಸ್ಯ' ಎಂಬ ಸೂತ್ರ ಉತ್ತರಿಸುತ್ತಿದೆ. ಭಗವದಧೀನವಾದ ಸಾಧನೆಗಳು ಇರುವುದರಿಂದ ಶ್ರುತಿಯ ವಿರೋಧವಿಲ್ಲ.

ಪ್ರತಿಪದಾರ್ಥ -- 'ಅದ್‌ಭ್ಯಃ ಸಂಭೂತಃ' ಎಂಬ ಶ್ರುತಿಯಲ್ಲಿ 'ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಯುಗೇಯುಗೇ' ಇವೆ ಮೊದಲಾದ ಸ್ಮೃತಿವಾಕ್ಯಗಳಲ್ಲಿಯೂ ಸಾಧನೆಗಳ ಇರುವಿಕೆಯು ಪ್ರತೀತವಾಗುತ್ತದೆ. ಆದ್ದರಿಂದ ಯಾವುದೇ ಸಾಧನೆಗಳು ಇರುವುದಿಲ್ಲವೆಂದು ಹೇಗೆ ಹೇಳುತ್ತೀರಿ? ಎಂದು ಆಶಂಕಿಸಿ ಅದಕ್ಕೆ ಉತ್ತರವನ್ನು ನೀಡಲು ಸೂತ್ರಕ್ಕೆ ಅವತಾರಿಕೆಯನ್ನು ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ -- ಅದ್‌ಭ್ಯಃ = ನೀರಿನಿಂದ, ಪೃಥಿವೀ = ಭೂಮಿಯು, ಸಂಭೂತಃ = ಹುಟ್ಟಿತು. ವೈ = ಇದು ಪ್ರಸಿದ್ಧವಾಗಿದೆ. ರಸಾಚ್ಚ = ರಸದಿಂದಲೂ ಕೂಡ ಭೂಮಿಯು ಹುಟ್ಟಿತು. ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ, ಸಾಧನಾಂತರಪ್ರತೀತೇಃ = ಬೇರೆ ಸಾಧನೆಗಳಿರುವುದು ಪ್ರತೀತವಾಗುತ್ತಿದೆ. ಹೀಗಿರುವಾಗ, ಕಥಂ = ಹೇಗೆ, ಅನುಪಲಬ್ಧಿಃ = ಬೇರೆ ಸಾಧನಗಳೇ ಇಲ್ಲವೆಂದು ಹೇಳುತ್ತೀರಿ? ಇತ್ಯತಃ = ಈ ಪೂರ್ವಪಕ್ಷಕ್ಕೆ, ಆಹ = ಉತ್ತರಿಸುತ್ತಿದ್ದಾರೆ.

ಅವರಸ್ಯ = ಸೂತ್ರದಲ್ಲಿರುವ ಅವರ ಎಂಬ ಪದಕ್ಕೆ, ತದಧೀನಸ್ಯ = ಭಗವದಧೀನವಾದ ಸಾಧನಸ್ಯ = ಪಂಚಭೂತಗಳು, ಸತ್ವಾತ್ = ಇರುವುದರಿಂದ ಎಂದರ್ಥ.

**भाष्यम् – 'काल आसीत्पुरुष आसीत्परम आसीत् तद् यदासीत्तदावृतमासीत् तदधीनमासीदथ ह्येक एव परम आसीद् यस्यैतदासीन्न ह्येतदासीत्' इति हि काषायणश्रुतिः ।।३।।**

**ಅನುವಾದ - ಪ್ರಳಯಕಾಲದಲ್ಲಿ ಕಾಲಪುರುಷ ಮೊದಲಾದವುಗಳು ಇದ್ದವು. ಇವೆಲ್ಲವೂ ಪರಮಾತ್ಮನಿಂದ ಆವೃತವಾಗಿದ್ದವು. ಅಂದರೆ ಅವನ ಅಧೀನವಾಗಿದ್ದವು. ಆದ್ದರಿಂದ ಪರಮಾತ್ಮನೊಬ್ಬನೇ ಪ್ರಳಯಕಾಲದಲ್ಲಿ ಇರುತ್ತಾನೆ. ಯಾರ ದೆಸೆಯಿಂದ ಇವೆಲ್ಲವೂ ಹುಟ್ಟವೆಯೋ ಅವನೇ ಪರಮಾತ್ಮನು ಇದು ಯಾವುದೂ ಕೂಡ ಮೊದಲು ಇರಲಿಲ್ಲ. ಹೀಗೆ ಕಾಷಾಯಣ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.**

ಪ್ರತಿಪದಾರ್ಥ -- ಈ ಶ್ರುತಿಯಲ್ಲಿ ಸಾಧನೆಗಳು ಇದ್ದವು ಎಂದಷ್ಟೆ ತಿಳಿಯುತ್ತಿದೆ. ಭಗವದಧಿ ೯ನವಾಗಿವೆ ಎಂದು ತಿಳಿಯುತ್ತಿಲ್ಲ. ಹೀಗಿರುವಾಗ ಲೋಕರೂಢಿಗೆ ಅನುಸಾರಿಯಾಗಿ ಅದು ಸ್ವತಂತ್ರವೆಂದು ಏಕೆ ಹೇಳಬಾರದು ? ಎಂಬ ಪ್ರಶ್ನೆಗೆ ಚ ಶಬ್ದದಿಂದ ಸೂಚಿತವಾದ ಶ್ರುತಿಯನ್ನು 'ಕಾಲಃ' ಎಂಬುದಾಗಿ ಉದಾಹರಿಸುತ್ತಿದ್ದಾರೆ. ಕಾಲಃ = ಕಾಲವು, ಆಸೀತ್ = ಇತ್ತು, ಪುರುಷಃ = ಪುರುಷನು, ಆಸೀತ್ = ಇದ್ದನು. ಪರಮಃ = ಪರಮಾತ್ಮನೂ ಕೂಡ, ಆಸೀತ್ = ಇದ್ದನು. ಯದಾಸೀತ್ = ಯಾವ ಕಾರಣದಿಂದ ಇವುಗಳೆಲ್ಲವೂ ಇದ್ದವೊ, ತತ್ = ಆ ಕಾರಣದಿಂದ, ಆವೃತಮಾಸೀತ್ = ಶ್ರೀಹರಿಯನ್ನೇ ಆಶ್ರಯಿಸಿದ್ದವು. ಆದ್ದರಿಂದ ತದಧೀನಮಾಸೀತ್ = ಅವನ ಅಧೀನಗಳಾಗಿಯೇ ಇದ್ದವು, ಅತಃ = ಆದ್ದರಿಂದ, ಪರಮ ಆಸೀತ್ = ಪರಮಾತ್ಮನೊಬ್ಬನೇ ಮುಖ್ಯವಾಗಿದ್ದನು. ಯಸ್ಮೈತದಾಸೀತ್ = ಇವೆಲ್ಲವೂ ಅವನ ಅಧೀನವೇ ಆಗಿದ್ದವು, ನ ಹಿ ಏತದಾಸೀತ್ = ಯಾವುದೂ ಕೂಡ ಸ್ವತಂತ್ರವಾಗಿ ಇರಲಿಲ್ಲ. ಇತಿ = ಹೀಗೆ, ಕಾಷಾಯಣಶ್ರುತಿಃ = ಕಾಷಾಯಣ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

## ತತ್ವಪ್ರಕಾಶಿಕಾ

**तत्वप्रकाशिका – ननु 'अद्भ्यः सम्भूतः' इति श्रुतौ 'प्रकृतिं स्वामवष्टभ्य विसृजामि' इति स्मृतौ च भगवदितरस्वतन्त्रसाधनप्रतीतेर्न तदनुपलब्धिरित्याशङ्क्य तत्परिहारत्वेन सूत्रमवतार्य व्याचष्टे – अद्भ्य इति।।**

ಅದ್‌ಭ್ಯಃ ಎಂಬ ಶ್ರುತಿಯಲ್ಲಿ ಮತ್ತು 'ಪ್ರಕೃತಿಸ್ವಾಮವಷ್ಟಭ್ಯ ವಿಸೃಜಾಮಿ' ಎಂಬ ಗೀತಾ ಸ್ಮೃತಿಯಲ್ಲಿಯೂ ಭಗವಂತನಿಗಿಂತ ಭಿನ್ನವಾದ ಸ್ವತಂತ್ರಸಾಧನವು ಪ್ರತೀತವಾಗುತ್ತದೆ. ಆದ್ದರಿಂದ ಸ್ವತಂತ್ರಸಾಧನವು ಪ್ರಮಾಣಪ್ರಮಿತವಲ್ಲವೆಂದು ಹೇಳುವುದು ಹೇಗೆ ? ಎಂದು ಆಶಂಕಿಸಿ ಅದಕ್ಕೆ ಪರಿಹಾರವನ್ನು ಹೇಳುವ ಸೂತ್ರಕ್ಕೆ ಅವತಾರಿಕೆಯನ್ನು ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅದ್‌ಭ್ಯಃ' ಇತ್ಯಾದಿಯಾಗಿ.

**तत्वप्रकाशिका – नात्र स्वतन्त्रसाधनमुच्यते किं तु भगवदधीनमेव । तदधीनसाधनस्य सत्त्वाभ्युपगमान्नोक्तविरोध इति भावः ।**

'ಅದ್‌ಭ್ಯಃ ಸಂಭೂತಃ' ಎಂಬ ಶ್ರುತಿಯಲ್ಲಿ ಸ್ವತಂತ್ರಸಾಧನವನ್ನು ಹೇಳುತ್ತಿಲ್ಲ. ಹೊರತಾಗಿ ಭಗವದಧೀನವಾದ ಸಾಧನವನ್ನೇ ಹೇಳಲಾಗಿದೆ. ಭಗದಧೀನವಾದ ಸಾಧನವನ್ನು ಒಪ್ಪಿರುವ ಕಾರಣ ಹಿಂದಿನ ಸೂತ್ರದಿಂದ ವಿರೋಧವು ಬರುವುದಿಲ್ಲ.

**तत्वप्रकाशिका – तत्पुरुषाख्यो हिरण्यगर्भो विश्वकर्मणो हरेः सकाशादबाद्युपलक्षितभूतैः रसोपलक्षिततन्मात्राभिश्चोत्पन्नः ।**

ಪುರುಷ ಎಂಬ ಹೆಸರಿನ ಹಿರಣ್ಯಗರ್ಭನು ಸಮಸ್ತ ಜಗತ್ತಿಗೆ ಕರ್ತೃವಾದ ಶ್ರೀಹರಿಯ ದೆಸೆಯಿಂದ ನೀರು ಮೊದಲಾದವುಗಳಿಂದ ಉಪಲಕ್ಷಿತವಾದ ಸಕಲಭೂತಗಳು ರಸಗಳು ಅದರಿಂದ ಉಪಲಕ್ಷಿತವಾದ ಪಂಚತನ್ಮಾತ್ರಗಳು ಇವುಗಳಿಂದ ಸಹಿತನಾಗಿ ಹುಟ್ಟಿದನು.

**तत्वप्रकाशिका – सर्वस्मादधिकत्वेन समवर्तत । तस्य तत्पुरुषस्याग्रत एव जातं विश्वं ब्रह्माण्डाख्यं रूपं त्वष्टा भगवान् धारयन् वर्तत इत्यर्थः ।**

ಆ ಹಿರಣ್ಯಗರ್ಭನು ಎಲ್ಲ ಪದಾರ್ಥಗಳಿಗಿಂತ ಉತ್ತಮನಾಗಿ ಉತ್ಪನ್ನನಾದನು ಪುರುಷನಾಮಕನಾಗಿ ಚತುರ್ಮುಖನಿಗಿಂತಲೂ ಮೊದಲೇ ಹುಟ್ಟಿದ ಬ್ರಹ್ಮಾಂಡರೂಪವನ್ನು ಧರಿಸಿ ಬ್ರಹ್ಮಾಂಡವನ್ನು ಧರಿಸಿದ್ದಾನೆ ಎಂದರ್ಥ.

**तत्वप्रकाशिका – ननु साधनमात्रमत्र प्रतीयते न तु तदधीनमिति तच्च लोकानुसारात् स्वतन्त्रमेव किं न स्यादित्यत आह – काल इति ।।**

ಈ ಶ್ರುತಿಯಲ್ಲಿ ಕೇವಲ ಸಾಧನವು ಪ್ರತೀತವಾಗುತ್ತಿದೆ. ಅದಕ್ಕೆ ಭಗವದಧೀನತ್ವವು ತಿಳಿಯುತ್ತಿಲ್ಲ. ಆದ್ದರಿಂದ ಘಟಕ್ಕೆ ದಂಡ ಮೊದಲಾದವುಗಳು ಸ್ವತಂತ್ರಸಾಧನಗಳಂತೆ ಶ್ರೀಹರಿಯ ಸೃಷ್ಟಿಗೆ ಸ್ವತಂತ್ರ ಸಾಧನಗಳು ಏಕೆ ಇರಬಾರದು ? ಎಂಬ ಪ್ರಶ್ನೆಗೆ 'ಕಾಲ ಆಸೀತ್' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – यस्मात्तदा यदासीत्तद्भगवदधीनमासीत् तस्मादेक एव परम आसीदित्युच्यते । कीदृशोऽसौ यस्य सकाशादेतदासीत् । कुतः ? न ह्येतत्पूर्वमासीदित्यर्थः ।**

ಯಾವ ಕಾರಣದಿಂದ ಪ್ರಳಯದಲ್ಲಿ ಯಾವ ಪದಾರ್ಥವು ಇರುತ್ತದೋ ಅದು ಭಗವದಧೀನವಾಗಿದೆ. ಆದ್ದರಿಂದ 'ಏಕ ಏವ ಪರಮ ಆಸೀತ್' ಪ್ರಳಯಕಾಲದಲ್ಲಿ ಒಂದೇ ಒಂದು ಶ್ರೇಷ್ಠವಾದ ವಸ್ತು ಇತ್ತು ಎಂದು ಶ್ರುತಿಯು ಹೇಳುತ್ತಿದೆ. ಅಂಥ ಹುಟ್ಟಿದ ವಸ್ತುವು ಎಂಥ ಸ್ವರೂಪವನ್ನು ಪಡೆದಿದೆ? ಯಾರ ದೆಸೆಯಿಂದ ಇದು ಅಸ್ತಿತ್ವವನ್ನು ಪಡೆದಿದೆ ? ಎಂಬ ಪ್ರಶ್ನೆಗೆ ಮೊದಲು ಇಲ್ಲದೆ ಅನಂತರ ಹುಟ್ಟಿರುವುದರಿಂದ ಭಗವದಧೀನವಾಗಿದೆ ಎಂದರ್ಥ.

**तत्वप्रकाशिका – साधनाद्याक्षेपतत्सद्भावोक्त्यन्यथानुपपत्तिश्चास्य समाधानम् ।।**

ಪರಮಾತ್ಮನು ಯಾವುದೇ ಸಾಧನಗಳನ್ನು ಅಪೇಕ್ಷೆ ಪಡದೆ ಸೃಷ್ಟಿಯನ್ನು ಮಾಡಲು ಸಮರ್ಥನಾಗಿದ್ದಾನೆ. ಆದರೂ ಕೂಡ ಆ ಸಾಧನಗಳಿಗೆ ಸಾಧನತ್ವವನ್ನು ಕೊಟ್ಟು ಅವುಗಳಿಗೂ ಅಸ್ತಿತ್ವವನ್ನು ನೀಡಲು ಸಾಧನಗಳನ್ನು ಉಪಯೋಗಿಸಿಕೊಳ್ಳುತ್ತಾನೆ. ಇದೊಂದು ಅವನ ಲೀಲೆ.

ಸಾಧನಗಳು ಏಕೆ ಬೇಕು? ಎಂಬ ಆಕ್ಷೇಪವನ್ನು ಶ್ರುತಿಯು ಒಂದು ಕಡೆ ಮಾಡುತ್ತಿದೆ. ಮತ್ತೊಂದು ಕಡೆ ಸಾಧನೆಗಳನ್ನು ಉಪಯೋಗಿಸಿಕೊಂಡು ಸೃಷ್ಟಿಯನ್ನು ಮಾಡುತ್ತಾನೆ ಎಂದು ಹೇಳುತ್ತಿದೆ. ಈ ಎರಡನ್ನು ಹೊಂದಿಸಬೇಕೆಂದರೆ ಸಾಧನಗಳು ಭಗವದಧೀನವಾಗಿವೆ ಎಂದೇ ಸಿದ್ಧವಾಗುತ್ತದೆ. 'ಭಗವದಧೀನತ್ವಂ ಅನ್ಯಥಾ ಸಾಧನಾದ್ಯಾಕ್ಷೇಪಾ ತತ್‌ಸದ್ಭಾವೋಪಪತ್ತಿಶ್ಚ ನೋಪಪದ್ಯತೇ' ಎಂಬ ಅನ್ಯಥಾನುಪಪತ್ತಿ ಪ್ರಮಾಣದಿಂದ ಭಗವಂತನು ತನ್ನ ಅಧೀನವಾದ ಸಾಧನೆಗಳನ್ನು ಉಪಯೋಗಿಸಿಕೊಂಡು ಸೃಷ್ಟಿಯಲ್ಲಿ ತೊಡಗುತ್ತಾನೆಂಬ ಸಮಾಧಾನವನ್ನು ತಿಳಿಯಬೇಕು.

## ಬ್ರಹ್ಮಸೂತ್ರ

### सूत्रम् – असद्व्यपदेशान्नेति चेन्न धर्मान्तरेण वाक्यशेषात् ॥

ಪ್ರಳಯಕಾಲದಲ್ಲಿ ಯಾವುದೇ ಪದಾರ್ಥಗಳೂ ಕೂಡ ಇರಲು ಸಾಧ್ಯವಿಲ್ಲ. ಏಕೆಂದರೆ 'ನಾಸದಾಸೀತ್' ಎಂಬ ಶ್ರುತಿಯು ಏನೂ ಇರಲಿಲ್ಲವೆಂದು ತಿಳಿಸುತ್ತಿದೆ. ಹೀಗಿರುವಾಗ ಅಸ್ವತಂತ್ರಸಾಧನಗಳು ಇದ್ದವು ಎಂದು ಹೇಗೆ ಹೇಳುತ್ತೀರಿ. ಇದು ತಪ್ಪು. ಏಕೆಂದರೆ 'ನಾಸದಾಸೀತ್' ಎಂಬ ಶ್ರುತಿಯ ಅಭಿಪ್ರಾಯ ಸ್ವತಂತ್ರ ಸಾಧನಗಳು ಇರಲಿಲ್ಲ ಎಂದಷ್ಟೇ ಹೊರತು ಅಸ್ವತಂತ್ರ ಸಾಧನಗಳು ಇರಲಿಲ್ಲ ಎಂದಲ್ಲ. ಏಕೆಂದರೆ ಇದೇ ಶ್ರುತಿಯ ಮುಂದಿನ ವಾಕ್ಯದಲ್ಲಿ, ತಮ ಆಸೀತ್ = ಪ್ರಕೃತಿಯು ಪ್ರಳಯಕಾಲದಲ್ಲಿ ಇತ್ತು ಎಂದು ಹೇಳಲಾಗಿದೆ.

## ಸೂತ್ರದೀಪಿಕಾ

**सूत्रदीपिका – असद्व्यपदेशान्नेति चेन्न धर्मान्तरेण वाक्यशेषात् ॥ असद्व्यपदेशात्** 'नासदासीत्' इत्यन्यस्यासत्त्ववचनात् । अन्यसत्त्वं न युक्तमिति चेन्न । कुतः? यतः तन्निषेधः **धर्मान्तरेणा**स्वातन्त्र्यादिधर्मविशेषेण युज्यते । कुत एतत् **वाक्यशेषात्** । 'तम आसीत्' इत्यवशिष्टवाक्यशेषादित्यर्थः ॥४॥

ಅರ್ಥ -- ಅಸದ್‌ವ್ಯಪದೇಶಾತ್= 'ನಾಸದಾಸೀತ್' ಎಂಬ ಶ್ರುತಿಯು ಪ್ರಳಯಕಾಲದಲ್ಲಿ ಯಾವುದೇ ಪದಾರ್ಥಗಳು ಇರಲಿಲ್ಲ ಎಂದು ಹೇಳುತ್ತಿರುವುದರಿಂದ ನೀರು ಮೊದಲಾದ ಪದಾರ್ಥಗಳಿದ್ದವು ಎಂದು ಹೇಳುವುದು ಅಯುಕ್ತವಲ್ಲವೇ ? ಇತಿ ಚೇನ್ನ = ಇದು ತಪ್ಪು. ಏಕೆಂದರೆ ಆ ನಿಷೇಧವು ಧರ್ಮಾಂತರೇಣ = ಅಸ್ವಾತಂತ್ರ್ಯ ಮೊದಲಾದ ಧರ್ಮದ ವಿಶೇಷದಿಂದ ಯುಕ್ತವಾಗುತ್ತದೆ. ಅಂದರೆ ಸ್ವತಂತ್ರವಾಗಿ ಪ್ರಳಯಕಾಲದಲ್ಲಿ ಇರುವುದಿಲ್ಲ ಎಂಬರ್ಥದಲ್ಲಿ ಪರ್ಯವಸಾನಗೊಳ್ಳುತ್ತದೆ. ಏಕೆಂದರೆ ಇದೇ ಶ್ರುತಿಯ ವಾಕ್ಯಶೇಷಾತ್ = 'ತಮ ಆಸೀತ್' ಎಂಬ ಮುಂದಿನ ಭಾಗದಲ್ಲಿ ಪ್ರಕೃತಿ ಮೊದಲಾದವುಗಳ ಅಸ್ತಿತ್ವವನ್ನು ಒಪ್ಪಲಾಗಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् — ।। असद्व्यपदेशान्नेति चेन्न धर्मान्तरेण वाक्यशेषात् ।।४।।**

**'नासदासीत्'' (ऋ. १०.१२९.१) इति सर्वस्यासत्त्वव्यपदेशान्नेति चेत् ।**

ಅನುವಾದ - 'ನಾಸದಾಸೀತ್' 'ನೋಸದಾಸೀತ್' ಇವೇ ಮೊದಲಾದ ಶ್ರುತಿಗಳು ಪ್ರಳಯಕಾಲದಲ್ಲಿ ಯಾವುದೂ ಕೂಡ ಇರಲಿಲ್ಲವೆಂದು ಹೇಳುತ್ತಿವೆ. ಹೀಗಿರುವಾಗ ಪರಮಾತ್ಮನ ಅಧೀನವಾದ ಸಾಧನೆಗಳು ಇದ್ದವೆಂದು ಹೇಗೆ ಹೇಳುತ್ತೀರಿ? ಹೀಗೆ ಆಕ್ಷೇಪ ಮಾಡಬಾರದು.

ಪ್ರತಿಪದಾರ್ಥ -- ಹಿಂದೆ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ ಸಮಾಧಾನ ಹೇಳುವ ಸೂತ್ರವನ್ನು ಉಪನ್ಯಾಸ ಮಾಡಿ ಆಕ್ಷೇಪ- ಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ನಾಸದಾಸೀತ್ ನೋಸದಾಸೀತ್' ಇವೇ ಮೊದಲಾದ ಶ್ರುತಿಗಳಿಂದ ಪ್ರಳಯಕಾಲದಲ್ಲಿ, ಸರ್ವಸ್ಯಾಸತ್ವವ್ಯಪದೇಶಾತ್ = ಯಾವುದೂ ಕೂಡ ಇಲ್ಲವೆಂದು ಹೇಳಿದ್ದರಿಂದ, ನ = ಪರಮಾತ್ಮನ ಅಧೀನವಾದ ಸಾಮಗ್ರಿಗಳು ಇದ್ದವು ಎಂಬುದು ತಪ್ಪು. ಇತಿ ಚೇತ್ = ಹೀಗೆ ಆಕ್ಷೇಪ ಮಾಡಬಾರದು.

**भाष्यम् — न, अव्यक्तत्वपारतन्त्र्यादिधर्मान्तरेण हि तदुच्यते ।**

ಅನುವಾದ - ಅವ್ಯಕ್ತತ್ವ ಪರತಂತ್ರತ್ವ ಮೊದಲಾದ ಬೇರೆ ಧರ್ಮಗಳಿಂದ ಆ ವಸ್ತುಗಳು ಪ್ರಳಯಕಾಲದಲ್ಲಿ ಇದ್ದವೆಂದು ತಿಳಿಯಬೇಕು.

ಪ್ರತಿಪದಾರ್ಥ -- ಸೂತ್ರದ ಪರಿಹಾರ ಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಅವ್ಯಕ್ತತ್ವ ಸೂಕ್ಷ್ಮರೂಪದಲ್ಲಿರುವುದು ಪಾರತಂತ್ರ್ಯ, ಆದಿ = ಇವೇ ಮೊದಲಾದ, ಧರ್ಮಾಂತರೇಣ = ಬೇರೆ ಧರ್ಮಗಳ ಮೂಲಕವಾಗಿ, ತದುಚ್ಯತೇ = ಯಾವುದೂ ಇರಲಿಲ್ಲವೆಂದು ಹೇಳಲಾಗಿದೆ.

**भाष्यम् — 'तम आसीत्' (ऋ. १०.१२९.३) इत्यादिवाक्यशेषात् ।**

ಅನುವಾದ - ಹೀಗೆ ವ್ಯಾಖ್ಯಾನ ಮಾಡಬೇಕೆಂದರೆ 'ನಾಸದಾಸೀತ್' ಎಂಬ ಶ್ರುತಿಯ ಮುಂದಿನ ಭಾಗವು 'ತಮ ಆಸೀತ್' ಎಂಬುದಾಗಿ ಪ್ರಕೃತಿಗೆ ಅಸ್ತಿತ್ವವನ್ನು ಪ್ರತಿಪಾದನೆ ಮಾಡುತ್ತಿದೆ.

ಪ್ರತಿಪದಾರ್ಥ -- ಬೇರೆ ಧರ್ಮದಿಂದ ಅಸತ್ವವನ್ನು ಹೇಳುವ ಅನಿವಾರ್ಯತೆ ಏನಿದೆ? ಸ್ವರೂಪತಃ ಅಸತ್ ಆದ್ದರಿಂದಲೇ ಅಸತ್ವವನ್ನು ಹೇಳಿರಬಹುದಲ್ಲವೆ? ಎಂಬ ಪ್ರಶ್ನೆಗೆ

ಉತ್ತರಿಸುತ್ತಿದ್ದಾರೆ - ತಮ ಆಸೀತ್ ಇತಿ = ತಮಸ್ಸು ಇತ್ತು ಎಂಬ, ವಾಕ್ಯಶೇಷಾತ್ = ವಾಕ್ಯಶೇಷದ ಬಲದಿಂದ ಧರ್ಮಾಂತರದಿಂದಲೇ ಅಸತ್ವವನ್ನು ಹೇಳಬೇಕು.

**ಭಾಷ್ಯಮ್ – न चान्यत्र प्रमाणमस्ति ।**

ಅನುವಾದ - ಇದಕ್ಕೆ ವಿರುದ್ಧವಾಗಿ ಅದ್ವೈತಿಗಳು ಚೇತನಾಚೇತನಾತ್ಮಕವಾದ ಪ್ರಪಂಚವು ಬ್ರಹ್ಮನಿಂದ ಅಭಿನ್ನವಾಗಿದೆ ಎಂದು ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಈ ಅರ್ಥದಲ್ಲಿ ಯಾವುದೇ ಆಧಾರವಿರುವುದಿಲ್ಲ.

ಪ್ರತಿಪದಾರ್ಥ -- ಪರರ ಅಪವ್ಯಾಖ್ಯಾನವನ್ನು ನಿರಾಕರಣೆ ಮಾಡುತ್ತಿದ್ದಾರೆ. ಅನ್ಯತ್ರ = ಚೇತನಾಚೇತನಾತ್ಮಕವಾದ ಪ್ರಪಂಚವು ಬ್ರಹ್ಮನಿಗಿಂತ ಅಭಿನ್ನವಾಗಿದೆ ಎಂಬ ವಿಷಯದಲ್ಲಿ, ಪ್ರಮಾಣಂ = ಯಾವುದೇ ಬಗೆಯ ಆಧಾರವು, ನಚ ಅಸ್ತಿ = ಇರುವುದೇ ಇಲ್ಲ.

**ಭಾಷ್ಯಮ್ – 'अजो ह्येको जुषमाणोऽनुशेते जहात्येनां भुक्तभोगामजोऽन्यः ।' (ಮಹಾನಾ. ೧೦.೯.)**

ಅನುವಾದ - ಒಬ್ಬನೇ ಜೀವನು ಜಡಪ್ರಕೃತಿಯನ್ನು ಅನುಭವಿಸುತ್ತಾ ಸಂಸಾರದಲ್ಲಿ ಮುಳುಗಿದ್ದಾನೆ. ಮತ್ತೊಬ್ಬನು ಜಡಪ್ರಕೃತಿಯನ್ನು ಅನುಭವಿಸಿ ಬಿಟ್ಟಿದ್ದಾನೆ.

ಪ್ರತಿಪದಾರ್ಥ -- ಹಿಂದೆ ಹೇಳಿದ್ದನ್ನು ಉಪಪಾದನೆ ಮಾಡಲು ನಿರವಕಾಶ ಪ್ರಮಾಣವನ್ನು ಹೇಳುತ್ತಿದ್ದಾರೆ. ಏಕ ಅಜಃ = ಒಬ್ಬ ಜೀವನು, ಜುಷಮಾಣಃ = ಜಡಪ್ರಕೃತಿಯನ್ನು ಅನುಭವಿಸುತ್ತಾ, ಅನುಶೇತೇ = ಸಂಸಾರದಲ್ಲಿ ಮುಳುಗಿದ್ದಾನೆ. ಅನ್ಯಃ ಅಜಃ = ಜನನ ಮರಣ ರಹಿತನಾದ ಮತ್ತೊಬ್ಬ ಜೀವನು, ಭುಕ್ತಭೋಗಾಂ = ಜಡಪ್ರಕೃತಿಯನ್ನು ಅನುಭವಿಸಿ, ಜಹಾತಿ = ಬಿಟ್ಟಿರುತ್ತಾನೆ. ಹೀಗೆ ಈ ಶ್ರುತಿಯು ಸಂಸಾರಿಜೀವರಿಗೂ ಮುಕ್ತಜೀವರಿಗೂ ಭೇದವನ್ನು ಹೇಳುತ್ತಿದೆ.

**ಭಾಷ್ಯಮ್ – 'अनाद्यनन्तं जगदेतदीदृक् प्रवर्तते नात्र विचार्यमस्ति ।**
**न चान्यथा क्वापि च कस्य चेदमभूत् पुरा नापि तथा भविष्यत् ।।'**

ಅನುವಾದ - ಈ ಜಗತ್ತು ಅನಾದಿಕಾಲದಿಂದ ಅನಂತಕಾಲದ ತನಕ ಒಂದೇ ರೀತಿಯಾಗಿರುತ್ತದೆ. ಇದರಲ್ಲಿ ವಿವಾದವಿಲ್ಲ. ಹಿಂದೆಯಾಗಲಿ ಮುಂದೆಯಾಗಲಿ ಯಾರೋಬ್ಬರಿಗೂ ಬೇರೆ ರೀತಿಯಾಗಿ ಕಂಡಿರುವುದಿಲ್ಲ.

ಪ್ರತಿಪದಾರ್ಥ -- ಅದ್ವೈತಿಗಳು ಹೇಳಿದ ಬ್ರಹ್ಮೈಕ್ಯಕ್ಕೆ ವಿರೋಧವನ್ನು ಹೇಳಿ ಅಚೇತನಪ್ರಪಂಚಕ್ಕೆ ಬಾಧ್ಯತ್ವರೂಪವಾದ ವಿರೋಧ- ಪ್ರಮಾಣವನ್ನು ಹೇಳುತ್ತಿದ್ದಾರೆ. ಅನಾದ್ಯನಂತಂ = ಆದಿ ಅಂತ್ಯಗಳಿಲ್ಲದ, ಈದೃಕ್ = ಇಂಥ, ಇದಂ = ಈ, ಜಗತ್ = ಜಗತ್ತು, ಕ್ವಾಪಿ ಕಸ್ಯ ಚ = ಎಂದಿಗೂ ಯಾರಿಗೂ, ಅನ್ಯಥಾ = ಮಿಥ್ಯಾಭೂತವಾಗಿ, ನಚ = ತೋರುವುದಿಲ್ಲ. ಪುರಾ = ಹಿಂದೆ, ನ ಚಾಭೂತ್ = ಹಾಗೆ ತೋರಿರುವುದಿಲ್ಲ.

ನಾಪಿಭವಿಷ್ಯತ್ = ಭವಿಷ್ಯತ್‌ಕಾಲದಲ್ಲಿಯೂ ಮಿಥ್ಯಾಭೂತವಾಗಿ ತೋರುವುದಿಲ್ಲ. ಆತ್ರ = ಈ ವಿಷಯದಲ್ಲಿ, ವಿಚಾರ್ಯಂ = ಚರ್ಚೆಯು, ನಾಸ್ತಿ = ಇರುವುದಿಲ್ಲ.

**भाष्यम् — असत्यमप्रतिष्ठं ते जगदाहुरनीश्वरम् । (गी.१६.८.)**

ಅನುವಾದ - ಕೃಷ್ಣಪರಮಾತ್ಮನು ಗೀತೆಯಲ್ಲಿ ಅಸುರರು ಜಗತ್ತನ್ನು ಮಿಥ್ಯಾಭೂತವೆಂದು ತಿಳಿಯುತ್ತಾರೆಂದು ಹೇಳಿರುತ್ತಾನೆ.

ಪ್ರತಿಪದಾರ್ಥ -- ವಿಶ್ವಮಿಥ್ಯಾತ್ವದ ಮತವು ಅಸುರರಮತವಾದ್ದರಿಂದ ಅಯುಕ್ತವಾಗಿದೆ ಎನ್ನಲು ಗೀತಾಸ್ಮೃತಿಯನ್ನು ಪ್ರಮಾಣವಾಗಿ ನೀಡುತ್ತಿದ್ದಾರೆ. ಜಗತ್ = ಜಗತ್ತನ್ನು, ಅಸತ್ಯಂ = ಮಿಥ್ಯಾಭೂತವೆಂದು, ಅಪ್ರತಿಷ್ಠಂ = ಬಾಧ್ಯವೆಂದು, ಅನೀಶ್ವರಮ್ = ಈಶ್ವರನನ್ನು ಒಪ್ಪದವರು, ಆಹುಃ = ಹೇಳುತ್ತಾರೆ.

**भाष्यम् — 'असत्यमाहुर्जगदेतदज्ञाः शक्तिं हरेर्ये न विदुः परां हि ।**
**यस्सत्यरूपं जगदेतदीदृक् सृष्ट्वा त्वभूत् सत्यकर्मा महात्मा ।'**

ಅನುವಾದ - ಕೆಲವರು ಈ ಜಗತ್ತನ್ನು ಮಿಥ್ಯಾಭೂತವೆಂದು ತಿಳಿಯುತ್ತಾರೆ. ಇವರು ಶ್ರೀ ಹರಿಯ ಮಹಿಮೆಯನ್ನು ತಿಳಿಯದ ಅಜ್ಞಾನಿಗಳು. ಪರಮಾತ್ಮನ ಅಸದೃಶವಾದ ಸೃಷ್ಟ್ಯಾದಿಸಾಮರ್ಥ್ಯವನ್ನು ಇವರು ಎಂದೂ ಕೂಡ ತಿಳಿಯಲಾರರು. ಸತ್ಯವಾದ ಈ ಜಗತ್ತನ್ನು ಸೃಷ್ಟಿಮಾಡಿ ಸತ್ಯಕರ್ಮನು ಮಹಾತ್ಮನು ಎನಿಸಿಕೊಂಡಿದ್ದಾನೆ.

ಪ್ರತಿಪದಾರ್ಥ -- ವಿಶ್ವಮಿಥ್ಯಾತ್ವವನ್ನು ಅಸುರರು ಪ್ರತಿಪಾದನೆ ಮಾಡುತ್ತಾರೆಂದು ಹೇಳಿದ್ದು ಯುಕ್ತವಾಗಿದೆ. ಏಕೆಂದರೆ ವಿಷ್ಣುವಿನ ಮಹಿಮೆಗೆ ಅದು ವಿರುದ್ಧವಾಗಿದೆಯೆಂದು ಉಪಪಾದನೆ ಮಾಡುತ್ತಿದ್ದಾರೆ. ಅಜ್ಞಾಃ = ಅಜ್ಞಾನಿಗಳು, ಏತದ್ ಜಗತ್ = ಸತ್ಯವಾದ ಈ ಜಗತ್ತನ್ನು , ಅಸತ್ಯಂ = ಮಿಥ್ಯಾಭೂತವೆಂದು, ಆಹುಃ = ಹೇಳುತ್ತಾರೆ. ಯೇ = ಯಾವ ಮೂರ್ಖರು, ಹರೇಃ = ಶ್ರೀಹರಿಯ, ಪರಾಂ = ಉತ್ತಮವಾದ, ಶಕ್ತಿಂ = ಸಾಮರ್ಥ್ಯವನ್ನು, ನ ವಿದುಃ = ತಿಳಿಯುವುದಿಲ್ಲ. ಯಃ = ಯಾವ ಪರಮಾತ್ಮನು, ಸತ್ಯರೂಪಂ = ಸತ್ಯವಾದ, ಈದೃಗ್ = ಇಂಥ, ಜಗತ್ = ಜಗತ್ತನ್ನು, ಸೃಷ್ಟ್ವಾ = ಸೃಷ್ಟಿಮಾಡಿ, ಸತ್ಯಕರ್ಮಾ = ಸತ್ಯವಾದ ಕರ್ಮವುಳ್ಳವನೆಂದು, ಮಹಾತ್ಮಾ = ಮಹಾತ್ಮನೆಂದು, ಅಭೂತ್ = ಆಗಿರುತ್ತಾನೆ.

**भाष्यम् —'अथ हैनमाहुः सत्यकर्मेति सत्यं ह्येवेदं विश्वमसौ सृजते ।' अथ हैनमाहुर्नित्यकर्मेति नित्यं ह्येवासौ कुरुते'**

ಅನುವಾದ - ಪರಮಾತ್ಮನು ಸತ್ಯವಾದ ಜಗತ್ತನ್ನು ಸೃಷ್ಟಿ ಮಾಡಿರುವುದರಿಂದ ಸತ್ಯಕರ್ಮ ಎನಿಸಿಕೊಂಡಿದ್ದಾನೆ. ನಿತ್ಯವಾಗಿಯೂ ಸೃಷ್ಟ್ಯಾದಿವ್ಯಾಪಾರದಲ್ಲಿ ತೊಡಗಿರುವುದರಿಂದ ನಿತ್ಯಕರ್ಮ ಎನಿಸಿಕೊಂಡಿದ್ದಾನೆ.

ಪ್ರತಿಪದಾರ್ಥ -- ಅಥ = ಆದ್ದರಿಂದಲೇ, ಏನಂ = ಈ ವಿಷ್ಣುವನ್ನು, ಸತ್ಯಕರ್ಮೇತಿ = ಸತ್ಯವಾದ ಕ್ರಿಯೆವುಳ್ಳವನನ್ನಾಗಿ, ಆಹುಃ = ಹೇಳುತ್ತಾರೆ. ಅಸೌ = ಈ ಶ್ರೀಹರಿಯು, ಸತ್ಯಂ = ಪರಮ ಸತ್ಯವಾದ, ಇದಂ ವಿಶ್ವಂ = ಈ ಬ್ರಹ್ಮಾಂಡವನ್ನು, ಸೃಜತೇ = ಸೃಷ್ಟಿ ಮಾಡುತ್ತಾನೆ. ಮತ್ತೊಂದು ಶ್ರುತಿಯಲ್ಲಿ ಹೀಗೆ ಹೇಳಲಾಗಿದೆ - ಅಸೌ ಹಿ = ಈ ಪರಮಾತ್ಮನು, ನಿತ್ಯಮೇವ = ನಿರಂತರವಾಗಿ, ಕರ್ಮ ಕುರುತೇ = ಸೃಷ್ಟ್ಯಾದಿಕ್ರಿಯೆಗಳಲ್ಲಿ ತೊಡಗುತ್ತಾನೆ. ಅಥ = ಆದ್ದರಿಂದ, ಏನಂ = ಇವನನ್ನು, ನಿತ್ಯಕರ್ಮಾ = ನಿತ್ಯವಾದ ಕರ್ಮವುಳ್ಳವನು, ಇತಿ = ಎಂದು, ಆಹುಃ = ಜ್ಞಾನಿ ಜನರು ಹೇಳುತ್ತಾರೆ.

**ಭಾಷ್ಯಮ್ – 'यच्चिकेत सत्यमित्तन्न मोघम्' (ऋ.१०.५५.६) इत्यादि श्रुतिस्मृतिभ्यः।**

ಅನುವಾದ - ಭಗವಂತನು ಯಾವುದನ್ನು ಸೃಷ್ಟಿ ಮಾಡುತ್ತಾನೊ ಅವೆಲ್ಲವೂ ಸತ್ಯವೇ ಆಗಿದೆ. ಮಿಥ್ಯಾಭೂತವಲ್ಲ. ಇವೇ ಮೊದಲಾದ ಶ್ರುತಿ-ಸ್ಮೃತಿಗಳಿಂದ ಅಚೇತನವಾದ ಜಗತ್ತು ಸತ್ಯಭೂತವಾಗಿದೆ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಬ್ರಹ್ಮಭಿನ್ನವಾದದ್ದು ಮಿಥ್ಯಾಭೂತವಾಗಿದೆ ಎಂದು ಹೇಳಬಾರದು.

ಪ್ರತಿಪದಾರ್ಥ -- ಮತ್ತೊಂದು ಪ್ರಮಾಣದಿಂದ ವಿಶ್ವಸತ್ವವನ್ನು ದೃಢವಾಗಿ ಸಾಧಿಸುತ್ತಿದ್ದಾರೆ. ಯಚ್ಚಿಕೇತ = ಶ್ರೀಹರಿಯು ಯಾವುದನ್ನು ಸೃಷ್ಟಿ ಮಾಡಲು ಇಚ್ಛಿಸುತ್ತಾನೊ ಅವೆಲ್ಲವೂ ಸತ್ಯವೇ ಆಗಿವೆ. ತನ್ನ ಮೋಘಮ್ = ಅದು ಎಂದೂ ವ್ಯರ್ಥವಾಗುವುದಿಲ್ಲ. ಇತ್ಯಾದಿ ಶ್ರುತಿಸ್ಮೃತಿಭ್ಯಃ = ಇವೇ ಮೊದಲಾದ ಶ್ರುತಿಸ್ಮೃತಿಗಳ ಆಧಾರದಿಂದ ಪರಮಾತ್ಮನು ಸೃಷ್ಟಿಮಾಡಿದ ಜಗತ್ತು ಸತ್ಯವಾಗಿದೆ ಎಂದು ಸಿದ್ಧವಾಗುತ್ತದೆ.

**ಭಾಷ್ಯಮ್ – 'परस्परविरोधे तु वाक्यायां यत्र युक्तता ।**
**तथैवार्थः परिज्ञेयो नावाक्या युक्तिरिष्यते ।।' इति बृहत्संहितायाम्।।**

ಅನುವಾದ - ಎರಡು ವಾಕ್ಯಗಳಿಗೆ ಪರಸ್ಪರ ವಿರೋಧ ಬಂದರೆ ಯುಕ್ತಿಯ ಸಹಾಯದಿಂದ ಒಂದು ವಾಕ್ಯದ ಅರ್ಥವನ್ನು ನಿರ್ಧಾರ ಮಾಡಬೇಕು. ವಾಕ್ಯದ ಸಹಾಯವಿಲ್ಲದ ಕೇವಲ ಯುಕ್ತಿಯು ಪ್ರಮಾಣವೇ ಆಗುವುದಿಲ್ಲ. ಹೀಗೆ ಬೃಹತ್‌ಸಂಹಿತೆಯು ಹೇಳುತ್ತಿದೆ.

ಪ್ರತಿಪದಾರ್ಥ--'ಜೀವೋ ಬ್ರಹ್ಮಣೋ ನ ಭಿದ್ಯತೇ ಚೇತನತ್ವಾತ್, ಬ್ರಹ್ಮವತ್, ಪ್ರಪಂಚೋ ವಾ ಬಾಧ್ಯೋ ದೃಶ್ಯತ್ವಾಚ್ಛುಕ್ತಿರಜತವತ್' ಇವೇ ಮೊದಲಾದ ಅನುಮಾನಪ್ರಮಾಣಗಳಿಂದ ಜೀವಬ್ರಹ್ಮೈಕ್ಯವು ಪ್ರಪಂಚಕ್ಕೆ ಮಿಥ್ಯಾತ್ವವು ಸಿದ್ಧವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ವಾಕ್ಯಾನಾಂ = ಎರಡು ವೇದವಾಕ್ಯಗಳಲ್ಲಿ, ಪರಸ್ಪರ ವಿರೋಧೇ ತು = ಪರಸ್ಪರ ವಿರೋಧ ಬಂದರೆ, ಯತ್ರ = ಯಾವ ವಾಕ್ಯವಿಷಯದಲ್ಲಿ, ಯುಕ್ತತಾ = ಯುಕ್ತಿಯುಕ್ತತೆಯು, ತಥೈವ = ಹಾಗೆಯೇ ಯುಕ್ತಿಗೆ ಅನುಗುಣವಾದ, ಅರ್ಥಃ = ಅರ್ಥವು, ಪರಿಜ್ಞೇಯಃ = ತಿಳಿಯಲ್ಪಡಬೇಕು. ಅವಾಕ್ಯಾ = ವಾಕ್ಯಕ್ಕೆ ಅನುಗುಣವಾಗದ, ಯುಕ್ತಿಃ = ಯುಕ್ತಿಯು, ನ ಇಷ್ಯತೇ = ಯೋಗ್ಯವೆನಿಸುವುದಿಲ್ಲ. ಇತಿ = ಹೀಗೆ, ಬೃಹತ್ಸಂಹಿತಾಯಾಮ್ = ಬೃಹತ್ಸಂಹಿತೆಯಲ್ಲಿ ಹೇಳಲಾಗಿದೆ.

**भाष्यम् –'विरुद्धवत् प्रतीयन्ते आगमा यत्र वै मिथः ।**
**तत्र दृष्टानुसारेण तेषामर्थोऽन्ववेक्ष्यते ।।' इति च ।**

ಅನುವಾದ - ಎರಡು ವೇದವಾಕ್ಯಗಳಲ್ಲಿ ವಿರುದ್ಧವಾದ ಅರ್ಥವು ಕಂಡರೆ ಪ್ರತ್ಯಕ್ಷಕ್ಕೆ ಅನುಗುಣವಾಗಿಯೇ ಅರ್ಥವನ್ನು ತಿಳಿಯಬೇಕು.

ಪ್ರತಿಪದಾರ್ಥ -- ಹಿಂದೆ ಉದಾಹರಿಸಿದ ಶ್ರುತ್ಯಾದಿಗಳು ಸತ್ಯತ್ವ ವಿಷಯದಲ್ಲಿ ಹೇಗೆ ಪ್ರಮಾಣವಾಗಿದೆಯೊ ಅದೇರೀತಿಯಾಗಿ ಪ್ರಪಂಚವು ಮಿಥ್ಯಾರೂಪವಾಗಿದೆ ಎನ್ನಲು 'ವಾಚಾರಂಭಣಂ' ಎಂಬ ಶ್ರುತಿಯು ಪ್ರಮಾಣವಾಗಲಿ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ- ಆಗಮಾಃ = ವೇದಗಳು, ಯತ್ರ = ಯಾವ ವಿಷಯದಲ್ಲಿ, ಮಿಥಃ = ಪರಸ್ಪರವಾಗಿ, ವಿರುದ್ಧವತ್ = ವಿರೋಧವುಳ್ಳವುಗಳಂತೆ, ಪ್ರತೀಯಂತೇ = ಕಾಣಿಸುತ್ತವೋ, ತತ್ರ = ಆ ವಿಷಯದಲ್ಲಿ, ದೃಷ್ಟಾನುಸಾರೇಣ = ಪ್ರತ್ಯಕ್ಷಕ್ಕೆ ಅನುಸಾರಿಯಾಗಿ, ತೇಷಾಂ = ಆ ವಾಕ್ಯಗಳಿಗೆ, ಅರ್ಥಃ = ಅರ್ಥವು, ಅನ್ವವೇಕ್ಷ್ಯತೇ = ಅಂಗೀಕರಿಸಬೇಕು.

**भाष्यम् – 'ईशोऽनीशो जगन्मिथ्या न पूज्यो गुरुरित्यपि ।**
**इत्यादिवद्विरुद्धानि वचनान्यथ युक्तयः ।**
**प्रमाणैर्बहुभिर्ज्ञेया आभासा इति वैदिकैः ।।**

ಅನುವಾದ - ಪರಮಾತ್ಮನು ಸ್ವಾಮಿಯಲ್ಲ. ಜಗತ್ತು ಮಿಥ್ಯಾಭೂತವಾಗಿದೆ ಗುರುಗಳು ಪೂಜ್ಯರಲ್ಲ ಇವೇ ಮೊದಲಾದ ವಿರುದ್ಧವಾದ ಮಾತುಗಳು ಮತ್ತು ಯುಕ್ತಿಗಳು ಅನೇಕ ಪ್ರಮಾಣಗಳಿಂದ ವಿರುದ್ಧವಾಗಿವೆ. ಆದ್ದರಿಂದಲೇ ಅಪ್ರಮಾಣವಾಗಿವೆ. ಪರಸ್ಪರ ವಿರುದ್ಧವಾದ ಇಂಥ ಮಾತುಗಳು ಕಂಡು ಬಂದರೆ ಒಂದಕ್ಕೆ ಮಾತ್ರ ಪ್ರಾಮಾಣ್ಯವನ್ನು ಒಪ್ಪಬೇಕು.

ಪ್ರತಿಪದಾರ್ಥ -- ಈಶಃ = ಪರಮಾತ್ಮನು, ಅನೀಶಃ = ಸ್ವಾಮಿಯಲ್ಲ, ಜಗತ್ = ವಿಶ್ವವು, ಮಿಥ್ಯಾ = ಮಿಥ್ಯಾಭೂತವಾಗಿದೆ, ಗುರುರಿತ್ಯಪಿ = ಗುರುವೂ ಕೂಡ, ನ ಪೂಜ್ಯಃ = ಪೂಜ್ಯನಲ್ಲ, ಇತ್ಯಾದಿವತ್ = ಇವೇ ಮೊದಲಾದ ಮಾತಿನಂತೆ, ವಿರುದ್ಧಾನಿ = ಲೋಕವಿರುದ್ಧಗಳಾದ, ವಚನಾನಿ = ಪ್ರಮಾಣಗಳು, ಅಥ = ಮತ್ತು, ಯುಕ್ತಯಃ = ಯುಕ್ತಿಗಳು, ಬಹುಭಿಃ = ಅನೇಕ ವಿಧವಾದ, ಪ್ರಮಾಣೈಃ = ಪ್ರಮಾಣಗಳಿಂದ, ಆಭಾಸಾಃ ಇತಿ = ಪ್ರಮಾಣಾಭಾಸಗಳೆಂದು, ವೈದಿಕೈಃ = ವೇದಪ್ರಾಮಾಣ್ಯವನ್ನು ಒಪ್ಪುವರು, ಜ್ಞೇಯಾಃ = ತಿಳಿದುಕೊಳ್ಳಬೇಕು.

**भाष्यम् – वेदवेदानुसारेषु विरोधेऽन्यार्थकल्पना ।**
**अन्येषां तु विरुद्धानां विप्रलम्भोऽथवा भ्रमः ।।'**

**इति च भागवततन्त्रे ।**

ಅನುವಾದ - ವೇದ ಹಾಗೂ ವೇದಾನುಸಾರಿಯಾದ ಪುರಾಣಗಳಲ್ಲಿ ಪರಸ್ಪರವಾಗಿ ವಿರೋಧ ಬಂದರೆ ಯುಕ್ತಿಗೆ ಅನುಸಾರಿಯಾದ ಅರ್ಥವನ್ನು ಸ್ವೀಕರಿಸಿ ಉಳಿದ ವಾಕ್ಯದ ಅರ್ಥವನ್ನು

ಅದಕ್ಕೆ ಅನುಗುಣವಾಗಿ ಹೊಂದಿಸಬೇಕು. ವಿರುದ್ಧವಾದ ವಾಕ್ಯಗಳು ಮೋಸಕ್ಕಾಗಿ ಅಥವಾ ಭ್ರಾಂತಿಮೂಲಕವಾಗಿ ಪ್ರಯೋಗಿಸಿರುತ್ತಾರೆ. ಹೀಗೆ ಭಾಗವತತಂತ್ರವು ಹೇಳುತ್ತದೆ

ಪ್ರತಿಪದಾರ್ಥ -- ವೇದವೇದಾನುಸಾರೇಷು = ವೇದ ಹಾಗೂ ವೇದಾನುಸಾರಿಯಾದ ಗ್ರಂಥಗಳಲ್ಲಿ ಪರಸ್ಪರ ವಿರೋಧವು ಕಂಡು ಬಂದರೆ, ಅನ್ಯಾರ್ಥಕಲ್ಪನಾ = ವಿರೋಧವಿಲ್ಲದ ಅರ್ಥವನ್ನು ಕಲ್ಪನೆ ಮಾಡುವುದು ಯುಕ್ತವಾಗುತ್ತದೆ. ವಿರುದ್ಧಾನಾಮ್ = ಪರಸ್ಪರ ವಿರುದ್ಧವಾದ ಅರ್ಥಗಳುಳ್ಳ, ಅನ್ಯೇಷಾಂ = ವೇದವಿರುದ್ಧ- ವಾದವುಗಳಲ್ಲಿ, ವಿಪ್ರಲಂಭಃ = ವಂಚಕತನವು ಅಥವಾ, ಭ್ರಮಃ = ಅಜ್ಞಾನಮೂಲಕತ್ವವು ಇರುತ್ತದೆ. ಇತಿ ಚ = ಹೀಗೆ, ಭಾಗವತತಂತ್ರೇ = ಭಾಗವತತಂತ್ರದಲ್ಲಿ ಹೇಳಲಾಗಿದೆ.

भाष्यम् –

'शास्त्रार्थयुक्तोऽनुभवः प्रमाणं तूत्तमं मतम् ।
मध्यमं त्वागमो ज्ञेयः प्रत्यक्षमधमं स्मृतम् ।।
प्रत्यक्षयोरागमयोर्विरोधे निश्चयाय तु ।
अनुमाद्या न स्वतन्त्राः प्रमाणपदवीं ययुः ।।'

इति पुरुषोत्तमतन्त्रे ।।९।।

ಅನುವಾದ - ಶಾಸ್ತ್ರಾರ್ಥದಿಂದ ಕೂಡಿರುವ ಅನುಭವವು ಉತ್ತಮಪ್ರಮಾಣ ಎನಿಸುತ್ತದೆ. ಅನುಪ್ರಮಾಣವಾದ ಆಗಮವು ಮಧ್ಯಮ ಪ್ರಮಾಣವಾಗಿದೆ. ಪ್ರತ್ಯಕ್ಷವು ಅಧಮಪ್ರಮಾಣವಾಗಿದೆ. ಎರಡು ಪ್ರತ್ಯಕ್ಷಗಳಲ್ಲಿ ಅಥವಾ ಎರಡು ವಾಕ್ಯಗಳಲ್ಲಿ ಪರಸ್ಪರವಿರೋಧ ಬಂದರೆ ಅದರ ನಿರ್ಣಯಕ್ಕಾಗಿ ಅನುಮಾನವನ್ನು ಅನುಸರಿಸಬೇಕು. ಅನುಮಾನವು ಸ್ವತಂತ್ರವಾಗಿ ಎಂದೂ ಪ್ರಮಾಣವಾಗುವುದಿಲ್ಲ. ಹೀಗೆ ಪುರುಷೋತ್ತಮತಂತ್ರದಲ್ಲಿ ಹೇಳಲಾಗಿದೆ.

ಪ್ರತಿಪದಾರ್ಥ -- ಶಾಸ್ತ್ರಾರ್ಥಯುಕ್ತಾನುಭವಃ = ಶಾಸ್ತ್ರದ ಆಧಾರದಲ್ಲಿರುವ ಅನುಭವವು, ಉತ್ತಮಂ ಪ್ರಮಾಣಂ = ಉತ್ತಮ ಪ್ರಮಾಣವಿದ್ದು, ಮತಂ = ತಿಳಿಯಬೇಕು, ಆಗಮಃ = ಆಗಮವು, ಮಧ್ಯಮಂ = ಮಧ್ಯಮಪ್ರಮಾಣವೆಂದು, ಜ್ಞೇಯಃ = ತಿಳಿಯಬೇಕು. ಪ್ರತ್ಯಕ್ಷಂ = ಪ್ರತ್ಯಕ್ಷವು, ಅಧಮಂ = ಅಧಮ ಪ್ರಮಾಣವೆಂದು, ಸ್ಮೃತಂ = ಹೇಳಲ್ಪಟ್ಟಿದೆ.

ಪ್ರತ್ಯಕ್ಷಯೋಃ = ಎರಡು ಪ್ರತ್ಯಕ್ಷಗಳಿಗೆ, ಆಗಮಯೋಃ = ಎರಡು ಆಗಮ ವಾಕ್ಯಗಳಿಗೆ, ವಿರೋಧೇಃ = ವಿರೋಧವು ಬಂದರೆ, ನಿಶ್ಚಯಾಯ ತು = ಅವುಗಳ ನಿಶ್ಚಯಕ್ಕೋಸ್ಕರ, ಅನುಮಾದ್ಯಾ = ಅನುಮಾನವು ಸಹಾಯ ಮಾಡುತ್ತದೆ. ಈ ಅನುಮಾನಗಳು, ಸ್ವತಂತ್ರಾಃ = ಸ್ವತಂತ್ರವಾಗಿ, ಪ್ರಮಾಣಪದವೀಂ = ಪ್ರಾಮಾಣ್ಯವನ್ನು, ನ ಯಯುಃ = ಎಂದಿಗೂ ಹೊಂದುವುದಿಲ್ಲ. ಇತಿ ಚ = ಹೀಗೆ, ಪುರುಷೋತ್ತಮತಂತ್ರೇ = ಪುರುಷೋತ್ತಮತಂತ್ರದಲ್ಲಿ ಹೇಳಲಾಗಿದೆ.

## ತತ್ವಪ್ರಕಾಶಿಕಾ

**तत्वप्रकाशिका – उक्तमाक्षिप्य समादधत् सूत्रमुपन्यस्याक्षेपांशं तावद् व्याचष्टे – असदिति ।।**

ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡಿದ ಸೂತ್ರವನ್ನು ಉಪನ್ಯಾಸ ಮಾಡಿ ಸೂತ್ರದ ಆಕ್ಷೇಪಾಂಶವನ್ನು ಮೊದಲು 'ಅಸತ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – साधनान्तरसत्त्वमभ्युपेत्य तस्यैश्वराधीनत्वं यदुदितं न तद्युक्तम् । 'नासदासीत्' इति श्रुतौ प्रलये सर्वस्यासत्त्वव्यपदेशात् । साधनान्तरस्यैवाभावे परमात्माधीनतावर्णनं तु सुतरामयुक्तमिति भावः ।**

ಬೇರೆ ಸಾಧನೆಗಳಿಗೆ ಅಸ್ತಿತ್ವವನ್ನು ಅಂಗೀಕರಿಸಿ ಅವುಗಳು ಭಗವಂತನ ಅಧೀನವಾಗಿವೆ ಎಂದು ಹಿಂದಿನ ಸೂತ್ರದಲ್ಲಿ ಪ್ರತಿಪಾದನೆ ಮಾಡಲಾಯಿತು. ಇದು ಯುಕ್ತವಲ್ಲ. ಏಕೆಂದರೆ 'ನಾಸದಾಸೀತ್' ಎಂಬ ಶ್ರುತಿಯು ಪ್ರಳಯಕಾಲದಲ್ಲಿ ಯಾವುದೇ ಪದಾರ್ಥಗಳು ಇರುವುದಿಲ್ಲವೆಂದು ಪ್ರತಿಪಾದನೆ ಮಾಡುತ್ತಿದೆ. ಬೇರೆ ಸಾಧನೆಗಳೇ ಇಲ್ಲದಿದ್ದಾಗ ಅವುಗಳಿಗೆ ಪರಮಾತ್ಮನ ಅಧೀನತ್ವವನ್ನು ವರ್ಣನೆ ಮಾಡುವುದು ಅತ್ಯಂತ ಅಯುಕ್ತವಾಗಿದೆ.

**तत्वप्रकाशिका – तदानीं प्रलये पञ्च भूतानि नासुः । गुणत्रयं यच्च परं व्योम प्रकृतिर्मृत्युरमृतं दिवारात्र्योश्च प्रभावो नासीत् । एतदभावात्किं कुत्र कस्य सुखार्थमावृणोत् ? न किमपि ।**

ನಾಸದಾಸೀತ್ ಶ್ರುತ್ಯರ್ಥ ಹೀಗಿದೆ - ತದಾನೀಂ = ಪ್ರಳಯಕಾಲದಲ್ಲಿ ಪಂಚಭೂತಗಳು ನ = ಇರಲಿಲ್ಲ. ಗುಣತ್ರಯವೂ ಕೂಡ ಯಚ್ಚ ಪರಂ ವ್ಯೋಮ = ಪ್ರಕೃತಿಯು ಮೃತ್ಯುಃ = ಮರಣವು ಅಮೃತಂ = ಸ್ವರ್ಗಾದಿಗಳು ರಾತ್ರಿ ಹಗಲುಗಳ ಪ್ರಭಾವವು ಇರಲಿಲ್ಲ. ಇದು ಯಾವುದೂ ಕೂಡ ಇಲ್ಲದ ಕಾರಣ ಯಾರ ಸುಖಕ್ಕಾಗಿ ಯಾರಿಗಾಗಿ ಇವು ಆವರಿಸುತ್ತವೆ? ಯಾರ ಸುಖಕ್ಕಾಗಿಯೂ ಅಲ್ಲ.

**तत्वप्रकाशिका – यच्चेतनप्रकृतिरूपमम्भस्तदप्यासीत्किं नैवासीत् । किं तु निवातं ब्रह्मैकमेव स्वसामर्थ्येनाचेष्टत न तु तस्मादन्यत्परमासेत्यर्थः ।**

ಜಡರೂಪವಾದ ಪ್ರಕೃತಿ ಇರಲಿಲ್ಲ. ಆದರೆ ಚೇತನಪ್ರಕೃತಿರೂಪವಾದ ಜಲಾವರಣವು ಪ್ರಳಯಕಾಲದಲ್ಲಿ ಇತ್ತೋ ಅಂದರೆ ಅದೂ ಕೂಡ ಇರಲಿಲ್ಲ. ಹೊರತಾಗಿ ಪರಬ್ರಹ್ಮನು ಮಾತ್ರ ತನ್ನ ಸಾಮರ್ಥ್ಯದಿಂದ ಕ್ರಿಯಾಶೀಲನಾಗಿದ್ದ. ತನಗಿಂತ ಅತಿರಿಕ್ತವಾದ ಯಾವ ಪದಾರ್ಥವೂ ಇರಲಿಲ್ಲ ಎಂಬುದು ಶ್ರುತಿಯ ಅರ್ಥ.

**तत्वप्रकाशिका – परिहारांशं व्याचष्टे – नेति ।।**

ಸೂತ್ರದಲ್ಲಿರುವ ಪರಿಹಾರಾಂಶಭಾಗವನ್ನು 'ನಾಸದಾಸೀತ್' ಇತ್ಯಾದಿ ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – भवेदेतद्यदि तस्यां श्रुतौ साधनानां स्वरूपासत्त्वाभिप्रायेणासत्त्वव्यपदेशो भवेत् । नैतदस्ति । साधनानामव्यक्तत्वपरतन्त्रत्वाधमत्वविकृतरूपविनाशादिधर्मान्तरापेक्षयाऽसत्त्वस्य व्यपदिष्टत्वात् । अव्यक्तादौ तद्यपदेशस्य लोके दृष्टत्वात् ।**

ಒಂದುವೇಳೆ 'ನಾಸದಾಸೀತ್' ಎಂಬ ಶ್ರುತಿಯಲ್ಲಿ ಯಾವುದೇ ಸಾಧನಗಳು ಸ್ವರೂಪತಃ ಇರುವುದೇ ಇಲ್ಲವೆಂದು ಅಸತ್ವವನ್ನು ಹೇಳಿದಲ್ಲಿ ಅವಾಗ ಅಸತ್ವವನ್ನು ಹೇಳಿದ್ದರೆ ಆಕ್ಷೇಪವು ಕೂಡುತ್ತಿತ್ತು.ಆದರೆ ಹಾಗೆ ಯಾವ ಸಾಧನೆಗಳಿಗೂ ಸ್ವರೂಪತಃ ಸತ್ವವನ್ನು ಶ್ರುತಿಯಲ್ಲಿ ಹೇಳಿರುವುದಿಲ್ಲ. ಸಾಧನಗಳಿಗೆ ಅವ್ಯಕ್ತತ್ವ ಪರತಂತ್ರತ್ವ, ಅಧಮತ್ವ, ವಿಕಾರ, ವಿನಾಶ ಮೊದಲಾದ ಬೇರೆ ಧರ್ಮಗಳ ದೃಷ್ಟಿಯಿಂದ ಅಸತ್ವವನ್ನು ಹೇಳಲಾಗಿದೆ. ಹೊರತು ಸ್ವರೂಪತಃ ಅಸತ್ವವನ್ನು ಹೇಳುತ್ತಿಲ್ಲ. ಲೋಕದಲ್ಲಿ ಯಾವುದು ಸ್ಪಷ್ಟವಾಗಿ ಕಾಣುವುದಿಲ್ಲವೋ ಅಥವಾ ಪರತಂತ್ರವಸ್ತುವೋ ಅದನ್ನು ಅಸತ್ತಾಗಿದೆ ಎಂದು ವ್ಯವಹಾರ ಮಾಡುವುದು ಕಂಡಿದೆ.

**तत्वप्रकाशिका – न च वाच्यं स्वरूपासत्त्वाभिप्रायेणासत्त्वोक्तिः किं न स्यादिति । वाक्यशेषे प्रकृत्यादिसत्त्वश्रवणादिति भावः ।**

ಸ್ವರೂಪತಃ ಸಾಧನಗಳು ಇಲ್ಲವೆಂಬ ಅಭಿಪ್ರಾಯದಿಂದಲೇ ಶ್ರುತಿಯು ಅಸತ್ವವ್ಯವಹಾರವನ್ನು ಮಾಡುತ್ತಿದೆ. ಹೀಗೇಕೆ ಹೇಳಬಾರದು ? ಎಂಬ ಪ್ರಶ್ನೆ ತಪ್ಪು. ಏಕೆಂದರೆ 'ತಸ್ಮಾದ್ ಅನ್ಯತ್' ಎಂಬ ಶ್ರುತಿಯ ವಾಕ್ಯಶೇಷದಲ್ಲಿ ಪ್ರಕೃತ್ಯಾದಿಗಳ ಇರುವಿಕೆಯು ಶ್ರುತವಾಗಿದೆ. ಆದ್ದರಿಂದ ಸ್ವರೂಪತಃ ಅಸತ್ವವನ್ನು ವಿವಕ್ಷಿಸಿದರೆ ಶ್ರುತಿಯ ವಿರೋಧ ಬರುತ್ತದೆ.

**तत्वप्रकाशिका – यत्तमोऽपरिमितं सलिलं भूत्वाऽऽसीत्प्रकृत्याख्यं तेनेदं सर्वं गूहितमासीदित्यर्थः । अन्यथा तस्माद्धान्यन्न परः किञ्चनासेति परशब्दवैयर्थ्यम् ।**

ಯಾವ ತಮಸ್ಸು ಅಪರಿಮಿತವಾಗಿ ನೀರಿನ ರೂಪವನ್ನು ತಾಳಿತ್ತೋ ಅದೇ ಪ್ರಕೃತಿಯೆಂದು ಕರೆಸಿಕೊಳ್ಳುತ್ತದೆ. ಈ ಪ್ರಕೃತಿಯಿಂದಲೇ ಎಲ್ಲವೂ ಕೂಡ ಆವೃತವಾಗಿತ್ತು. ಹೀಗೊಪ್ಪದೆ ಸ್ವರೂಪತಃ ಅಸತ್ತಾಗಿತ್ತು ಎಂಬುದೇ ಶ್ರುತಿಯ ಅರ್ಥವೆಂದು ವಿವಕ್ಷಿಸಿದರೆ 'ತಸ್ಮಾದ್ ಅನ್ಯತ್' ಎಂಬ ವಾಕ್ಯಶೇಷದಲ್ಲಿ 'ನಪರಃ ಕಿಂಚನಾಸ' ಎಂಬಲ್ಲಿ ಪರಶಬ್ದವು ವ್ಯರ್ಥವಾಗಬೇಕಾದೀತು.

**तत्वप्रकाशिका – अथ परकृतापव्याख्यां निराचष्टे – न चेति ।। अतीताधिकरणे व्यवहारमभ्युपेत्य चेतनाचेतनविभागो निरूपितः ।**

ಅದ್ವೈತಿಗಳ ಅಪವ್ಯಾಖ್ಯಾನವನ್ನು 'ನ ಚ' ಇತ್ಯಾದಿ ಭಾಷ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

ಹಿಂದಿನ ಅಧಿಕರಣದಲ್ಲಿ ವ್ಯವಹಾರವನ್ನು ಅಂಗೀಕರಿಸಿ ಚೇತನ ಹಾಗೂ ಅಚೇತನ ಎಂಬ ವಿಭಾಗವನ್ನು ನಿರೂಪಣೆ ಮಾಡಲಾಗಿತ್ತು. .

**तत्वप्रकाशिका – इदानीं तु पारमार्थिकीं दशामवचम्ब्य चेतनाचेतनस्य ब्रह्मानन्यत्वमुच्यते ।**

ಪ್ರಕೃತ ಈ ಅಧಿಕರಣದಲ್ಲಿ ಪಾರಮಾರ್ಥಿಕವಾದ ಅವಸ್ಥಿತಿಯನ್ನು ಅವಲಂಬಿಸಿ ಜಡ ಹಾಗೂ ಚೇತನಗಳಿಗೆ ಬ್ರಹ್ಮಸ್ವರೂಪವನ್ನು ನಿರೂಪಣೆ ಮಾಡಲಾಗಿದೆ.

**तत्वप्रकाशिका – 'वाचारम्भणम्' इत्यादिश्रुतेरिति व्याख्यानं न युक्तम्। प्रपञ्चस्य ब्रह्मानन्यत्वे प्रमाणाभावादिति भावः ।**

'ವಾಚಾರಂಭಣಮ್' ಎಂಬ ಶ್ರುತಿಯು ಜಡ ಚೇತನಗಳಿಗೆ ಬ್ರಹ್ಮಭೇದವನ್ನು ಹೇಳಲು ಪ್ರಮಾಣವಾಗಿದೆ. ಎಂಬುದಾಗಿ ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ. ಇದು ಅಯುಕ್ತವಾಗಿದೆ. ಪ್ರಪಂಚವು ಬ್ರಹ್ಮನಿಗಿಂತ ಅಭಿನ್ನವಾಗಿದೆ ಎನ್ನಲು ಯಾವುದೇ ಪ್ರಮಾಣ ಇರುವುದಿಲ್ಲ.

**तत्वप्रकाशिका – न केवलं चेतनानामचेतनानां चानन्यत्वे प्रमाणाभावः। किं तु प्रमाणविरुद्धं चेति भावेनाह – अजो हीति ।।**

ಚೇತನ ಹಾಗೂ ಅಚೇತನಪದಾರ್ಥಗಳಿಗೆ ಐಕ್ಯವಿದೆ ಎನ್ನಲು ಪ್ರಮಾಣ ಇರುವುದಿಲ್ಲ. ಅಷ್ಟೇ ಅಲ್ಲ ಪ್ರಮಾಣವಿರುದ್ಧವೇ ಆಗಿದೆ. ಈ ಅಭಿಪ್ರಾಯದಿಂದ 'ಅಜೋಹಿ' ಇತ್ಯಾದಿ ಭಾಷ್ಯದ ಮಾತು ಹೊರಟಿದೆ.

**तत्वप्रकाशिका – रजःसत्त्वतमोगुणात्मिकां स्वसदृशमहदादिकार्याणि जनयन्तीं प्रकृतिं सेवमानः कश्चिज्जीवोऽनुवर्तते ।**

ಒಬ್ಬ ಜೀವನು ಸತ್ವ ರಜಸ್ಸು ಹಾಗೂ ತಮಸ್ಸುಗಳೆಂಬ ಮೂರು ಗುಣಗಳಿಂದ ಕೂಡಿದ ತನಗೆ ಸದೃಶವಾದ ಮಹತ್ತತ್ವ ಮೊದಲಾದ ಕಾರ್ಯಗಳನ್ನು ಉತ್ಪತ್ತಿ ಮಾಡುವ ಪ್ರಕೃತಿಯನ್ನು ಸೇವಿಸುವವನಾಗಿ ಅದನ್ನು ಅನುಸರಿಸುತ್ತಾನೆ.

**तत्वप्रकाशिका – कश्चिदस्यां भोगान् भुक्त्वा जहातीति मुक्तामुक्तयोः परस्परं भेदः श्रूयते ।**

ಮತ್ತೊಬ್ಬ ಜೀವನು ಈ ಪ್ರಕೃತಿಯಿಂದ ಅನೇಕ ಭೋಗಗಳನ್ನು ಅನುಭವಿಸಿ ಅದನ್ನು ತ್ಯಾಗ ಮಾಡುತ್ತಾನೆ. ಹೀಗೆ ಮುಕ್ತ ಹಾಗೂ ಅಮುಕ್ತರಲ್ಲಿ ಪರಸ್ಪರ ಭೇದವಿರುವುದು ಶ್ರುತಿಯಿಂದ ತಿಳಿಯುತ್ತದೆ.

**तत्वप्रकाशिका – अत्रेश्वरोऽपि मुक्त उच्यते । अचेतनप्रपञ्चस्य ब्रह्मानन्यत्वं नाम बाधितत्वं विवक्षितं परस्य, तच्च प्रमाणविरुद्धमिति भावेनाह – अनादीति ।।**

ಈ ಶ್ರುತಿಯಲ್ಲಿ ಮುಕ್ತಪದದಿಂದ ಈಶ್ವರನೂ ಕೂಡ ಪ್ರತಿಪಾದ್ಯನಾಗಿದ್ದಾನೆ. ಅಚೇತನ ಪ್ರಪಂಚಕ್ಕೆ ಬ್ರಹ್ಮನಿಂದ ಅಭೇದವಿದೆ ಎಂದರೆ ಬಾಧಿತತ್ವವು ವಿವಕ್ಷಿತವೆಂದು ಅದ್ವೈತಿಯು ಹೇಳುತ್ತಾನೆ. ಆದರೆ ಅದ್ವೈತಿಯ ಈ ಅಭಿಪ್ರಾಯವು ಪ್ರಮಾಣಕ್ಕೆ ವಿರುದ್ಧವಾಗಿದೆ. ಈ ಅಭಿಪ್ರಾಯದಿಂದ 'ಅನಾದ್ಯನಂತಂ' ಎಂಬ ಭಾಷ್ಯವು ಹೊರಟಿದೆ.

**तत्वप्रकाशिका – नित्यमबाध्यं जीवो न ब्रह्मणो भिद्यते चेतनत्वात् ब्रह्मवत्। प्रपञ्चो बाध्यो दृश्यत्वाच्छुक्तिरजतवदित्यादियुक्तिसद्भावात् कथं प्रमाणाभाव इत्यत आह – परस्परेति ।।**

ಶ್ರುತಿಯಲ್ಲಿ ನಿತ್ಯಶಬ್ದಕ್ಕೆ ಅಬಾಧ್ಯವೆಂದರ್ಥ. ಜೀವನು ಚೇತನನಾದ್ದರಿಂದ ಬ್ರಹ್ಮನಿಗಿಂತ ಭಿನ್ನನಲ್ಲ.ಈ ವಿಷಯದಲ್ಲಿ ಬ್ರಹ್ಮನು ದೃಷ್ಟಾಂತನಾಗಿದ್ದಾನೆ. ಅನುಮಾನಸ್ವರೂಪವನ್ನು ಹೀಗೆ ತಿಳಿಯಬೇಕು - 'ಜೀವಃ ನ ಬ್ರಹ್ಮಣೋ ಭಿದ್ಯತೇ ಚೇತನತ್ವಾತ್ ಬ್ರಹ್ಮವತ್' ಎಂದು. ಪ್ರಪಂಚವು ಕಣ್ಣಿಗೆ ಕಾಣಸುತ್ತಿರುವುದರಿಂದ ಶುಕ್ತಿರಜತಾದಿಗಳಂತೆ ಬಾಧ್ಯವಾಗಿದೆ ಎಂಬುದನ್ನು ಅನುಮಾನದಿಂದ ಹೀಗೆ ಸಾಧಿಸುತ್ತಾರೆ - 'ಪ್ರಪಂಚಃ ಬಾಧ್ಯಃ ದೃಶ್ಯತ್ವಾತ್ ಶುಕ್ತಿರಜತವತ್' ಇವೇ ಮೊದಲಾದ ಅನುಮಾನ ಪ್ರಮಾಣದಿಂದ ಪ್ರಪಂಚವು ಬಾಧ್ಯವೆಂದು ಸಿದ್ಧವಾಗುತ್ತಿರುವಾಗ ಬಾಧ್ಯತ್ವ ವಿಷಯದಲ್ಲಿ ಪ್ರಮಾಣವಿಲ್ಲವೆಂದು ಹೇಗೆ ಹೇಳುತ್ತಿರಿ ? ಈ ಪ್ರಶ್ನೆಗೆ 'ಪರಸ್ಪರ ವಿರೋಧೇ ತು' ಎಂಬ ಭಾಷ್ಯದ ಮಾತಿನಿಂದ ಉತ್ತರಿಸಲಾಗಿದೆ.

**तत्वप्रकाशिका – वाक्यानां विरोध एवैकवाक्यानुसारियुक्तिसिद्धार्थो ग्राह्यो न केवलयुक्तिसिद्धार्थ इत्यर्थः । सन्तु तर्हि वाचारम्भणमित्यादि-श्रुतिस्मृतयः प्रमाणमत्रेत्यत आह – विरुद्धवदिति ।।**

ವಾಕ್ಯಗಳಿಗೆ ಪರಸ್ಪರ ವಿರೋಧ ಬಂದಾಗ ಮಾತ್ರ ಒಂದು ವಾಕ್ಯಕ್ಕೆ ಅನುಸಾರಿಯಾದ ಯುಕ್ತಿಯನ್ನು ಸ್ವೀಕರಿಸಿ ಅದರ ಅರ್ಥವನ್ನು ಸ್ವೀಕಾರ ಮಾಡಬೇಕು. ವಾಕ್ಯಗಳಿಗೆ ಪರಸ್ಪರ ವಿರೋಧ ಬಂದಾಗ ಶ್ರುತಿಗೆ ಅನುಕೂಲವಾದ ಯುಕ್ತಿಸಿದ್ಧವಾದ ಅರ್ಥವನ್ನು ಸ್ವೀಕಾರ ಮಾಡಬೇಕು. ಹೊರತು ಕೇವಲ ಯುಕ್ತಿಸಿದ್ಧವಾದ ಅರ್ಥವು ಗ್ರಾಹ್ಯವಾಗಿರುವುದಿಲ್ಲ. ಹಾಗಾದರೆ ಜಗನ್ಮಿಥ್ಯಾತ್ವದ ವಿಷಯದಲ್ಲಿ ಅನುಮಾನವು ಪ್ರಮಾಣವಾಗುವುದು ಬೇಡ. 'ವಾಚಾರಂಭಣಂ' ಇವೇ ಮೊದಲಾದ ಶ್ರುತಿ-ಸ್ಮೃತಿಗಳು ಪ್ರಮಾಣವಾಗುತ್ತವೆ ಅಲ್ಲವೆ ? ಎಂಬ ಪ್ರಶ್ನೆಗೆ 'ವಿರುದ್ಧವತ್ ಪ್ರತಿಯಂತೇ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – नैताभिः श्रुतिभिरनन्यत्वं सिध्यति उदाहृतश्रुतिविरोधात्।**

ಆಪಾತತಃ ಪ್ರತೀತವಾದ ಅರ್ಥಗಳನ್ನು ಹೇಳುವ ಶ್ರುತಿಗಳು ಅಭೇದದ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಆ ಶ್ರುತಿಗಳಿಗೆ ಹಿಂದೆ ಉದಾಹರಿಸಿದ ಪ್ರಬಲವಾದ ಶ್ರುತಿಯಿಂದ ವಿರೋಧ ಬರುತ್ತದೆ.

**तत्वप्रकाशिका – न च तर्हि परस्परविरोधादप्रामाण्यम् ।**

ಶ್ರುತಿಗಳಿಗೆ ಪರಸ್ಪರ ವಿರೋಧ ಬಂದಾಗ ಎರಡಕ್ಕೂ ಕೂಡ ಅಪ್ರಾಮಾಣ್ಯವನ್ನೇ ಹೇಳಬೇಕಲ್ಲವೆ ?ಎಂದು ಪ್ರಶ್ನಿಸಬಾರದು.

**तत्वप्रकाशिका – विरोधे प्रत्यक्षानुसारेण तद्विरुद्धानन्यत्वश्रुत्यादेर्व्याख्येयत्वादिति भावः ।**

ಎರಡು ಶ್ರುತಿಗಳಲ್ಲಿ ಪರಸ್ಪರ ವಿರೋಧವು ಪ್ರಾಪ್ತವಾದರೆ ಪ್ರತ್ಯಕ್ಷಾನುಸಾರಿಯಾಗಿ ಭೇದಶ್ರುತಿಗೆ ವಿರುದ್ಧವಾದ ಅಭೇದ ಶ್ರುತಿಗಳಿಗೆ ವ್ಯಾಖ್ಯಾನ ಮಾಡಬೇಕು.

**तत्वप्रकाशिका – एतेन श्रुतियुक्तिभ्यामनन्यत्वसिद्धिरित्यपास्तम् । प्रत्यक्षस्य ततोऽपि बलवत्त्वाद्युक्तीनामाभासत्वाच्च**

ಹೀಗೆ ಹೇಳಿದ್ದರಿಂದ ಶ್ರುತಿಯುಕ್ತಿಗಳಿಂದ ಅಭೇದವು ಸಿದ್ಧವಾಗಬಹುದಲ್ಲವೆ ? ಎಂಬ ಮತ್ತೊಂದು ಆಕ್ಷೇಪವನ್ನು ಕೂಡ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಜೀವೇಶ್ವರರಿಗೆ ಭೇದವನ್ನು ಗ್ರಹಣ ಮಾಡುವ ಸಾಕ್ಷಿಪ್ರತ್ಯಕ್ಷವು ಯುಕ್ತಿ ಹಾಗೂ ಶ್ರುತಿಗಳಿಗಿಂತ ಪ್ರಬಲವಾಗಿದೆ. ಮತ್ತು ಯುಕ್ತಿಯು ಆಭಾಸವಾಗಿದೆ.

**तत्वप्रकाशिका – दृष्टमिति प्रबलबहुप्रमाणदर्शनं वा । स्मर्यते च प्रपञ्चमिथ्यात्ववादिश्रुत्यादेरप्यन्यार्थवर्णनमिति भावेनाह – ईश इति ।। आभासत्वमेव विभज्याह – वेदेति ।।**

'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದಾಗಿ ಸಕಲಕ್ಕೂ ಅಭೇದವನ್ನು ಹೇಳುವ ಶ್ರುತಿಗೆ ಸಾಕ್ಷಿವಿರೋಧವನ್ನು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ ದೃಷ್ಟಾನುಸಾರ ಶಬ್ದಕ್ಕೆ ಪ್ರಬಲವಾದ ಅನೇಕ ಪ್ರಮಾಣಗಳಿಂದ ಎಂಬರ್ಥವನ್ನು ವಿವಕ್ಷಿಸಬೇಕು. ನಮ್ಮ ಪ್ರತ್ಯಕ್ಷ ಪ್ರಮಾಣವಾಗದಿದ್ದರೂ ಒಂದೊಂದು ವಿಷಯದಲ್ಲಿ ಒಬ್ಬೊಬ್ಬರ ಪ್ರತ್ಯಕ್ಷ ಇರುವುದರಿಂದ ದೋಷವಿಲ್ಲ. ಪ್ರಪಂಚಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವ ಶ್ರುತ್ಯಾದಿಗಳಿಗೂ ಸ್ಮೃತಿಗಳಲ್ಲಿ ಬೇರೆ ಅರ್ಥವನ್ನು ವರ್ಣಿಸಲಾಗಿದೆ. ಈ ಅಭಿಪ್ರಾಯದಿಂದ 'ಈಶೋನೀಶಃ' ಎಂಬ ಪ್ರಮಾಣವನ್ನು ಭಾಷ್ಯದಲ್ಲಿ ಉದಾಹರಿಸಿದ್ದಾರೆ ಯುಕ್ತಿಗಳಲ್ಲಿರುವ ಆಭಾಸತ್ವವೇ ಬೇರೆ. ಶ್ರುತಿಗಳಲ್ಲಿರುವ ಆಭಾಸತ್ವವೇ ಬೇರೆ. ಈ ವ್ಯತ್ಯಾಸವನ್ನು 'ವೇದವೇದಾನುಸಾರೇ ತು' ಎಂಬುದರಿಂದ ತೋರಿಸುತ್ತಿದ್ದಾರೆ.

**तत्वप्रकाशिका – वेदादेस्तदर्थ एवाभासत्वमन्यार्थकल्पना तु कर्तव्यैव । तदितरेषां विप्रलम्भोऽथ वा भ्रमः कारणं कल्पनीयम् ।**

ವೇದಾದಿಗಳು ಆಪಾತತಃ ತೋರುವ ಅರ್ಥದಲ್ಲಿ ಅಪ್ರಾಮಾಣಿಕಗಳಾಗಿವೆ. ಅಂಥ ಸಂದರ್ಭದಲ್ಲಿ ಆ ವೇದವಾಕ್ಯಗಳಿಗೆ ಬೇರೆ ಅರ್ಥವನ್ನೇ ಕಲ್ಪನೆ ಮಾಡಬೇಕು. ವೇದ ಹಾಗೂ ವೇದಕ್ಕೆ ಅನುಸಾರಿಯಲ್ಲದ ಪ್ರಮಾಣಗಳಿಗೆ ವಿಪರೀತವಾದ ಅರ್ಥಪ್ರತಿಪಾದನೆಯು ವಿಪ್ರಲಂಭ ಅಥವಾ ಭ್ರಮೆಯ ಮೂಲವಷ್ಟೇ ಆಗಿರುತ್ತದೆ ಎಂದು ತಿಳಿಯಬೇಕು.

**तत्वप्रकाशिका – ननु प्रमाणत्वाविशेषात् कुतो न युक्तेरर्थसाधकत्वमित्यत आह – शास्त्रर्थेति ।।**

ಪ್ರಮಾಣವಾಗಿರುವುದರಿಂದ ಅರ್ಥಸಾಧಕತ್ವವು ಯುಕ್ತಿಗೇಕೆ ಬರುವುದಿಲ್ಲ ? ಎಂಬ ಪ್ರಶ್ನೆಗೆ ಉತ್ತರವಾಗಿ 'ಶಾಸ್ತ್ರಾರ್ಥ' ಎಂಬ ಪ್ರಮಾಣವನ್ನು ಉಲ್ಲೇಖಿಸುತ್ತಿದ್ದಾರೆ.

**तत्वप्रकाशिका – तदनुकूलः साक्षादर्थविषयत्वात् । यथार्थज्ञानमुत्तमं प्रमाणम् । आगमस्य तत्साधनभूतस्य सर्वविषयत्वान्मध्यमत्वम् । प्रत्यक्षस्यानुप्रमाणस्यासर्वविषयस्वावरत्वम् । अनुप्रमाणमनुमानं प्रमाणान्तर-साहाय्ययुक्तमसर्वविषयमिति सर्वावरमिति । अतोऽर्थान्तरस्याप्रामाणिकत्वात् प्रमाणविरुद्धत्वाचोक्त एव सूत्रार्थ इति स्थितम् ।। १८ ।।**

'ಶಾಸ್ತ್ರಾರ್ಥಯುಕ್ತೋ ಅನುಭವಃ' ಎಂಬ ಪ್ರಮಾಣಶ್ಲೋಕದಲ್ಲಿ 'ಶಾಸ್ತ್ರಾರ್ಥಯುಕ್ತ' ಎಂಬ ಪದಕ್ಕೆ ಶಾಸ್ತ್ರಾರ್ಥಕ್ಕೆ ಅನುಕೂಲವಾದ ಅರ್ಥ ಎಂದರ್ಥ. ಯಥಾರ್ಥಜ್ಞಾನವು ಉತ್ತಮಪ್ರಮಾಣ. ಆಗಮವು ಕೇವಲಪ್ರಮಾಣಕ್ಕೆ ಅನುಕೂಲವಾದ್ದರಿಂದ ಮಧ್ಯಮ ಪ್ರಮಾಣವಾಗಿದೆ ಪ್ರತ್ಯಕ್ಷವು ಅನುಪ್ರಮಾಣವಾಗಿದೆ. ಇದು ಸರ್ವವಿಷಯಕವಲ್ಲ. ಆದ್ದರಿಂದ ಅಧಮಪ್ರಮಾಣ. ಅನುಪ್ರಮಾಣವೆನಿಸಿದ ಅನುಮಾನವು ಬೇರೆ ಪ್ರಮಾಣವನ್ನು ಅಪೇಕ್ಷಿಸುವುದರಿಂದ ಮತ್ತು ಅಸರ್ವವಿಷಯಕವಾದ್ದರಿಂದ ಎಲ್ಲ ಪ್ರಮಾಣಗಳಿಗಿಂತ ಅಧಮವಾಗಿದೆ. ಆದ್ದರಿಂದ ಈ ಸೂತ್ರಕ್ಕೆ ಮೇಲೆ ಹೇಳಿದ ಅರ್ಥಕ್ಕಿಂತ ಬೇರೆ ಅರ್ಥವು ಅಪ್ರಾಮಾಣಿಕವಾಗಿದೆ. ಮತ್ತು ಪ್ರಮಾಣವಿರುದ್ಧವೂ ಆಗಿದೆ. ನಾವು ಹೇಳಿದ ಸೂತ್ರಾರ್ಥವೇ ನಿರ್ದುಷ್ಟವಾಗಿದೆ.

## ಬ್ರಹ್ಮಸೂತ್ರ

**सूत्रम् — युक्तेः शब्दान्तराच्च ।।**

ಪ್ರಳಯಕಾಲದಲ್ಲಿ ಪರಮಾತ್ಮನು ಪ್ರಕೃತಿ ಮೊದಲಾದ ಬೇರೆ ಪರಿಕರಗಳನ್ನು ಪಡೆದು ಸೃಷ್ಟಿಯನ್ನು ಪ್ರಾರಂಭಿಸುತ್ತಾನೆ. ಶಕ್ತನಾದ ಪರಮಾತ್ಮನಿಗೆ ಪ್ರಕೃತ್ಯಾದಿಗಳ ಅವಶ್ಯಕತೆ ಇಲ್ಲದಿದ್ದರೂ ಕೇವಲ ಲೀಲೆಗಾಗಿ ಮಾತ್ರ ಅವಲಂಬಿಸಿದ್ದಾನೆ. ಇದರಿಂದ ಅವನ ಸ್ವಾತಂತ್ರ್ಯಕ್ಕೆ ಯಾವ ಬಗೆಯಲ್ಲಿಯೂ ಚ್ಯುತಿ ಬರುವುದಿಲ್ಲ.

## ಸೂತ್ರದೀಪಿಕಾ

**सूत्रदीपिका — युक्तेः शब्दान्तराच्च ।।** प्रलये युक्तेः लीलया दण्डमवष्टभ्य गन्तुः पङ्गुत्वाभाववत् भगवतोऽपि लीलया स्वाधीनसाधनावलम्बस्य युक्तत्वात् । शब्दान्तरात् । तस्माच्छक्तोऽपीत्यागमविशेषाच्च उक्तं युक्तमित्यर्थः ।।५।।

ಅರ್ಥ -- ಯುಕ್ತೇಃ = ಲೀಲೆಯಿಂದ ಕೈಯಲ್ಲಿ ಕೋಲು ಹಿಡಿದು ಹೋಗುವ ವ್ಯಕ್ತಿಗೆ ಕುಂಟನೆಂದು ಯಾರೂ ಹೇಳುವುದಿಲ್ಲ. ಅದರಂತೆ ಭಗವಂತನೂ ಕೂಡ ಲೀಲೆಯಿಂದ ತನ್ನದೇ ಅಧೀನವಾದ ಪ್ರಕೃತ್ಯಾದಿ ಸಾಧನಗಳನ್ನು ಅವಲಂಬಿಸಿ ಸೃಷ್ಟಿಯನ್ನು ಮಾಡುತ್ತಾನೆಂಬುದು ಯುಕ್ತವಾಗುತ್ತದೆ. ಶಬ್ದಾಂತರಾಚ್ಚ = 'ತಸ್ಮಾತ್ ಶಕ್ತೋಽಪಿ' ಎಂಬ ವಿಶೇಷಶ್ರುತಿ ಪ್ರಮಾಣವಿರುವುದರಿಂದ ಈ ವಿಚಾರವು ದೃಢವಾಗುತ್ತದೆ.

## ಬ್ರಹ್ಮಸೂತ್ರಭಾಷ್ಯ

**भाष्यम् — ।। युक्तेः शब्दान्तराच्च ।।६।।**

**'साधनानां साधनत्वं यदाऽऽत्माधीनमिष्यते ।**
**तदा साधनसम्पत्तिरैश्वर्यद्योतिका भवेत् ।।'**

**इत्यादेः साधनान्तरेण सृष्टिर्युक्ता । 'अद्भ्यः सम्भूतो हिरण्यगर्भ इत्यष्टौ' (महाना. १.१२.) इत्यादिशब्दान्तराच्च ।।६।।**

ಅನುವಾದ - ಸೃಷ್ಟಿಗೆ ಯಾವ ಸಾಧನೆಗಳಿವೆಯೋ ಅವುಗಳಲ್ಲಿರುವ ಸಾಧನತ್ವವು ಪರಮಾತ್ಮನ ಅಧೀನವಾಗಿದೆ. ತನ್ನ ಅಧೀನವೇ ಆದ ಸಲಕರಣೆಗಳನ್ನು ಉಪಯೋಗಿಸಿಕೊಂಡು ಸೃಷ್ಟಿಮಾಡುವುದು ಪರಮಾತ್ಮನ ಉತ್ಕರ್ಷಕ್ಕೆ ಪೂರಕವೇ ಆಗುತ್ತದೆ. ಹೀಗೆ ಹೇಳುವ ಪ್ರಮಾಣವಾಕ್ಯಗಳಿರುವುದರಿಂದ ಪರಮಾತ್ಮನು ಬೇರೆ ಸಾಧನ ಪರಿಕರಗಳನ್ನು

ಉಪಯೋಗಿಸಿಕೊಂಡೇ ಜಗತ್‌ಸೃಷ್ಟಿಯ ವ್ಯಾಪಾರದಲ್ಲಿ ನೀರು ಮೊದಲಾದವುಗಳಿಂದ ಚತುರ್ಮುಖಬ್ರಹ್ಮನು, ಎಂಟು ದಿಕ್‌ಪಾಲಕರು ಹುಟ್ಟಿದರು ಇವೇ ಮೊದಲಾದ ಆಗಮ ಪ್ರಮಾಣದಿಂದ ಇತರ ಸಾಧನೆಗಳಿಂದಲೇ ಭಗವಂತನು ಸೃಷ್ಟಿಯನ್ನು ಮಾಡುತ್ತಾನೆಂದು ಸಿದ್ಧವಾಗುತ್ತದೆ.

ಪ್ರತಿಪದಾರ್ಥ -- ಬೇರೆ ಸಾಧನೆಗಳನ್ನು ಅಂಗೀಕಾರ ಮಾಡಿ ಅವುಗಳಿಗೆ ಈಶ್ವರಾಧೀನತ್ವವನ್ನು ಒಪ್ಪುವುದಕ್ಕಿಂತ ಬೇರೆ ಸಾಧನೆಗಳೇ ಇರುವುದಿಲ್ಲ ಎಂದು ಒಪ್ಪುವುದು ಸುಲಭವಲ್ಲವೆ? ಎಂಬ ಆಕ್ಷೇಪಕ್ಕೆ ಉತ್ತರಿಸುವವರಾಗಿ ಮುಂದಿನ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಸಾಧನಾನಾಂ = ಪ್ರಕೃತ್ಯಾದಿ ಸಾಧನಗಳಿಗೆ. ಸಾಧನತ್ವಂ = ಸಾಧನೆ ಆಗುವಿಕೆಯ ಅರ್ಹತೆಯು, ಯದಾ = ಯಾವಾಗ, ಆತ್ಮಾಧೀನಂ = ಪರಮಾತ್ಮನ ಅಧೀನವೆಂದು, ಇಷ್ಯತೇ = ಒಪ್ಪಲಾಗುತ್ತದೋ, ತದಾ = ಆವಾಗ, ಸಾಧನಸಂಪತ್ತಿಃ = ಪರಿಕರಗಳ ಸಂಪತ್ತಿಯು, ಐಶ್ವರ್ಯದ್ಯೋತಿಕಾ = ಭಗವಂತನ ಐಶ್ವರ್ಯಕ್ಕೆ ಜ್ಞಾಪಕವೇ, ಭವೇತ್ = ಆಗುತ್ತದೆ. ಇತ್ಯಾದೇಃ = ಇವೇ ಮೊದಲಾದ ಆಗಮಗಳಿಂದ, ಸಾಧನಾಂತರೇಣ = ತನಗಿಂತ ಭಿನ್ನವಾದ ಸಾಧನೆಗಳಿಂದ ಭಗವಂತನ ಸೃಷ್ಟಿಯು ಯುಕ್ತವಾಗುತ್ತದೆ. ಅದ್‌ಭ್ಯಃ = ನೀರಿನ ದೆಸೆಯಿಂದ, ಹಿರಣ್ಯಗರ್ಭಃ = ಹಿರಣ್ಯಗರ್ಭನು, ಸಂಭೂತಃ = ಹುಟ್ಟಿದನು. ಅಷ್ಟೌ = ಎಂಟು ಬಗೆಯ ದಿಕ್‌ಪಾಲಕರು, ಸಂಭೂತಃ = ಹುಟ್ಟಿದರು. ಇತ್ಯಾದಿಶಬ್ದಾಂತರಾಚ್ಚ = ಇವೇ ಮೊದಲಾದ ಆಗಮಪ್ರಮಾಣ ಇರುವುದರಿಂದ ಸೃಷ್ಟಿ ವ್ಯಾಪಾರದಲ್ಲಿ ತೊಡಗುತ್ತಾನೆ ಎಂದು ಸಿದ್ಧವಾಗುತ್ತದೆ.

## ತತ್ವಪ್ರಕಾಶಿಕಾ

**तत्वप्रकाशिका – ननु साधनान्तरमभ्युपगम्य तस्यैश्वराधीनत्वकथनाद्वरं साधनाभावकथनमेव साधनशून्यस्य सृष्ट्यादिकर्तृत्वाभ्युपगमे महिमाधिक्यलाभादित्याशङ्कां परिहरत्सूत्रमुपन्यस्य व्याचष्टे ।। युक्तेरिति ।।**

ಈಶ್ವರನಿಗಿಂತ ಅತಿರಿಕ್ತವಾದ ಸಾಧನೆಯನ್ನು ಪ್ರಳಯಕಾಲದಲ್ಲಿ ಒಪ್ಪಬೇಕು. ಮತ್ತು ಅದಕ್ಕೆ ಭಗದಧೀನತ್ವವನ್ನು ಒಪ್ಪಬೇಕು. ಇದನ್ನೆಲ್ಲಾ ಕಲ್ಪನೆ ಮಾಡುವುದಕ್ಕಿಂತ ಈಶ್ವರನಿಗಿಂತ ಅತಿರಿಕ್ತವಾದ ಸಾಧನವೇ ಇರುವುದಿಲ್ಲವೆಂದು ಹೇಳುವುದು ಶ್ರೇಷ್ಠಸಾಧನೆಗಳನ್ನು ಉಪಯೋಗಿಸಿಕೊಳ್ಳದೆ ಸೃಷ್ಟ್ಯಾದಿವ್ಯಾಪಾರವನ್ನು ಮಾಡುತ್ತಾನೆ ಎಂದು ಒಪ್ಪುವುದರಿಂದ ಭಗವಂತನಲ್ಲಿ ಅತಿಶಯಮಹಿಮೆಯ ಲಾಭವಾಗುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡಲು ಮುಂದಿನಸೂತ್ರ ಹೊರಟಿದೆ. ಅದನ್ನು ಯುಕ್ತೇಃ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – न महिमाधिक्यलाभाय साधनाभावोऽभ्युपेयः । साधनान्तरेण सृष्टेरपि युक्तत्वात् महिमाविरोधित्वात् स्वाधीनसाधनैः प्रवृत्तेरप्यैश्वर्यद्योतकत्वस्य साधनानामिति वाक्यसिद्धत्वाल्लोकसिद्धत्वाच्च ।**

ಪರಮಾತ್ಮನಲ್ಲಿ ಮಹಿಮಾಧಿಕ್ಯ ಇರುವ ಸಾಧನವನ್ನು ಅಲ್ಲಗಳೆಯುವ ಅವಶ್ಯಕತೆಯಿಲ್ಲ. ಸೃಷ್ಟಿಯು ನಡೆಯಬೇಕೆಂದರೆ ಭಗದಧೀನವಾದ ಸಾಧನವನ್ನು ಒಪ್ಪಲೇಬೇಕು. ಇದರಿಂದ ಸೃಷ್ಟಿಯು ಯುಕ್ತವಾಗುತ್ತದೆ. ಮತ್ತು ಭಗವಂತನ ಮಹಿಮೆಗೂ ಕೂಡ ವಿರೋಧ ಇರುವುದಿಲ್ಲ. ತನ್ನ ಅಧೀನವೇ ಆದ ಸಾಧನಗಳಿಂದ ಸೃಷ್ಟಿಯ ವ್ಯಾಪಾರವನ್ನು ಮಾಡಿದರೆ ಅದು ಐಶ್ವರ್ಯಕ್ಕೆ ದ್ಯೋತಕವಾಗುತ್ತದೆ ಹೊರತು ವಿರೋಧವಾಗುವುದಿಲ್ಲ. ಈ ವಿಷಯವು 'ಸಾಧನಾನಾಮ್' ಎಂಬ ಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣದಿಂದ ಸಿದ್ಧವಾಗಿದೆ. ಲೋಕದಲ್ಲಿಯೂ ಕೂಡ ತನ್ನ ಅಧೀನರಾದ ಸೇವಕಜನರಿಂದ ರಾಜನು ಕೆಲಸ ಮಾಡಿಸುವುದು ಕಂಡಿರುತ್ತದೆ.

**तत्वप्रकाशिका – तर्ह्युभयथापिमहिमोत्कर्षसिद्धौ किं साधनसत्त्व-पक्षाग्रहेणेति चेन्न ।**

ಪರಮಾತ್ಮನಿಗೆ ಸಾಧನಗಳು ಇರಲಿ ಬಿಡಲಿ ಅವನ ಮಹಿಮೆಯ ಉತ್ಕರ್ಷದ ಸಿದ್ಧಿಗೆ ಯಾವುದೇ ಅಡ್ಡಿಯಿಲ್ಲ. ಹೀಗಿರುವಾಗ ಸಾಧನೆಗಳನ್ನು ಒಪ್ಪಲೇಬೇಕೆಂಬ ಆಗ್ರಹವೇಕೆ? ಈ ಪ್ರಶ್ನೆಯು ಅಸಂಗತ.

**तत्वप्रकाशिका – निरपेक्षतया स्रष्टृत्वस्योभयपक्षेऽपि साम्येन महिमोत्कर्ष-लाभसाम्येऽपि साधनसत्वाभ्युपगमेनैकाकिनः सकाशात्सोपस्करस्याधिकोत्कर्ष-लाभात् 'अद्भ्यः सम्भूतः' इत्यादौ प्रतीतेश्च तत्राग्रह इति भावः ।**

ಪರಮಾತ್ಮನು ಸಾಧನೆಗಳನ್ನು ಅಪೇಕ್ಷೆಪಡದೆ ಸೃಷ್ಟಿ ಮಾಡಿದರೆ ಮತ್ತು ಸಾಧನೆಯನ್ನು ಅಪೇಕ್ಷಿಸಿ ಸೃಷ್ಟಿ ಮಾಡಿದರೆ ಮಹಿಮೋತ್ಕರ್ಷವು ಲಾಭವಾಗುತ್ತದೆ ಎಂಬುದು ಸಮಾನ. ಆದರೂ ಕೂಡ ಏಕಾಕಿಯಾಗಿ ಎಲ್ಲವನ್ನು ಸೃಷ್ಟಿ ಮಾಡುತ್ತಾನೆ ಎಂಬ ವಿಷಯಕ್ಕಿಂತಲೂ ಸಾಧನಸಹಿತವಾಗಿ ಸೃಷ್ಟಿ ಮಾಡುತ್ತಾನೆಂಬುದು ಇನ್ನು ಹೆಚ್ಚಿನ ಉತ್ಕರ್ಷಕ್ಕೆ ಕಾರಣವಾಗಿದೆ. 'ಅದ್‌ಭ್ಯಃ ಸಂಭೂತಃ' ಎಂಬ ಶ್ರುತಿಯಲ್ಲಿ ಸಾಧನೆಗಳನ್ನು ಉಪಯೋಗಿಸಿಕೊಂಡು ಸೃಷ್ಟಿ ಮಾಡುತ್ತಾನೆಂದು ಹೇಳಿರುವುದರಿಂದ ಸಾಧನೆಗಳ ಸತ್ವವಿಷಯದಲ್ಲಿ ನಾವು ಆಗ್ರಹವನ್ನು ಮಾಡುತ್ತಿದ್ದೇವೆ.

**तत्वप्रकाशिका – प्राचीनश्रुतिसंग्रहार्थं शब्दान्तरादित्युक्तम् ।। १९ ।।**

'ಸತ್ವಾಚ್ಚಾವರಸ್ಯ' ಎಂಬ ಸೂತ್ರದ ಭಾಷ್ಯದಲ್ಲಿ ಉದಾಹರಿಸಿದ 'ಅದ್‌ಭ್ಯಃ ಸಂಭೂತಃ ಪೃಥಿವ್ಯೈರಸಾಚ್ಚ' ಮತ್ತು 'ತಮ ಆಸೀತ್' ಇವೇ ಮೊದಲಾದ ಶ್ರುತಿಗಳ ಸಂಗ್ರಹಕ್ಕೆ 'ಶಬ್ದಾಂತರಾತ್' ಎಂದು ಸೂತ್ರದಲ್ಲಿ ಹೇಳಿರುತ್ತಾರೆ.

## ಬ್ರಹ್ಮಸೂತ್ರ

**सूत्रम् – पटवच्च ॥**

ಪರಮಾತ್ಮನು ಯಾವ ಪ್ರಕೃತ್ಯಾದಿಗಳನ್ನು ಪಡೆದು ಸೃಷ್ಟಿ ಮಾಡುತ್ತಾನೋ ಅಂತಹ ಸಾಮಗ್ರಿಗಳು ಪರಮಾತ್ಮನಿಗಿಂತ ಭಿನ್ನವೇ ಆಗಿರುತ್ತವೆಂದು ತಿಳಿಯಬೇಕು. ಈ ವಿಷಯದಲ್ಲಿ ಅನುಮಾನ ಪ್ರಮಾಣವಿದೆ. ಜಗತ್ತಿನ ಸೃಷ್ಟಿಯು ಕರ್ತೃವಾದ ಜೀವನಿಗಿಂತ ಭಿನ್ನವಾದ ಸಾಮಗ್ರಿಗಳಿಂದ ಉಂಟಾಗಿದೆ ಬಟ್ಟೆಯ ಸೃಷ್ಟಿಯಂತೆ.

## ಸೂತ್ರದೀಪಿಕಾ

**सूत्रदीपिका – पटवच्च ।। पटसृष्टिवच्च** विश्वसृष्टिरपि कर्तृभिन्नसाधानन्तर-साध्येत्यर्थः ।।६।।

ಅರ್ಥ -- ಪಟವಚ್ಚ = ಬಟ್ಟೆಯ ಸೃಷ್ಟಿಯಂತೆ ವಿಶ್ವದ ಸೃಷ್ಟಿಯೂ ಕೂಡ ಕರ್ತೃವಾದ ಜೀವನಿಗಿಂತ ಭಿನ್ನವಾದ ಸಾಮಗ್ರಿಗಳಿಂದ ಉಂಟಾಗಿದೆ. ಅನುಮಾನ ಸ್ವರೂಪವನ್ನು ಹೀಗೆ ತಿಳಿಯಬೇಕು - 'ವಿಮತಾ ಸೃಷ್ಟಿಃ ಕರ್ತೃಭಿನ್ನಸಾಧನಸಾಧ್ಯಾ ಸೃಷ್ಟಿತ್ವಾತ್ ಪಟಸೃಷ್ಟಿವತ್'.

## ಬ್ರಹ್ಮಸೂತ್ರಭಾಷ್ಯ

**भाष्यम् – ।। पटवच्च ।।७।।**

**साधनान्तरेण हि पटादिसृष्टिर्दृष्टा ।।७।।**

ಅನುವಾದ - ಲೋಕದಲ್ಲಿ ಕರ್ತೃವಿಗಿಂತ ಬೇರೆಯಾದ ಸಾಧನೆಗಳಿಂದ ಬಟ್ಟೆ ಮೊದಲಾದ ವಸ್ತುಗಳು ಹುಟ್ಟುವುದು ಕಂಡಿದೆ.

ಪ್ರತಿಪದಾರ್ಥ -- ಕೇವಲ ಶ್ರುತಿಯಿಂದಷ್ಟೇ ಸಿದ್ಧವಾಗಿರುವುದಲ್ಲ. ಯುಕ್ತಿಯಿಂದಲೂ ಕೂಡ ಸಾಧನೆಗಳು ಸೃಷ್ಟಿಗೆ ಅನಿವಾರ್ಯವೆಂದು ಸಿದ್ಧವಾಗಿದೆ. ಇದನ್ನು ಸೂತ್ರಕಾರರೇ ಸಮರ್ಥನೆ ಮಾಡುತ್ತಿದ್ದಾರೆ. ಸಾಧನಾಂತರೇಣ = ಕರ್ತೃವಿಗಿಂತ ಅತಿರಿಕ್ತವಾದ ಬೇರೆ ಸಾಧನೆಗಳಿಂದ, ಪಟಾದಿಸೃಷ್ಟಿರ್ದೃಷ್ಟಾ = ಬಟ್ಟೆ ಮೊದಲಾದವುಗಳ ಹುಟ್ಟುವಿಕೆಯು ದೃಷ್ಟ ಕಂಡಿದೆ.

## ತತ್ವಪ್ರಕಾಶಿಕಾ

**तत्वप्रकाशिका – साधनसद्भावस्य युक्तिसिद्धत्वाच तत्राग्रह इत्यर्थप्रतिपादकं सूत्रमुपन्यस्य व्याचष्टे ।। पटवचेति ।।**

ಸಾಧನದ ಇರುವಿಕೆಯು ಪ್ರಳಯಕಾಲದಲ್ಲಿ ಯುಕ್ತಿಯಿಂದ ಸಿದ್ಧವಾಗಿದೆ. ಆದ್ದರಿಂದ ಸಾಧನವನ್ನು ಅಪೇಕ್ಷಿಸಿ ಸೃಷ್ಟಿಯನ್ನು ಮಾಡುತ್ತಾನೆಂಬ ಆಗ್ರಹವನ್ನು ಮಾಡುತ್ತೇವೆಂದು ಪ್ರತಿಪಾದನೆ ಮಾಡುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪಟವಚ್ಚ' ಇತ್ಯಾದಿಯಾಗಿ.

**तत्वप्रकाशिका – विप्रतिपन्ना सृष्टिः कर्तृव्यतिरिक्तसाधनसाघ्या सृष्टित्वात्पटसृष्टिवदित्यर्थः ।।**

ಕರ್ತೃವಿಗಿಂತ ಅತಿರಿಕ್ತವಾದ ಮತ್ತೊಂದು ಸಾಧನೆಯು ಇದೆಯೋ ಇಲ್ಲವೋ ? ಎಂಬ ವಿವಾದವಿರುವ ಸೃಷ್ಟಿಯು ಕರ್ತೃಭಿನ್ನವಾದ ಮತ್ತೊಂದು ಸಾಧನದಿಂದ ಸಾಧ್ಯವಾಗಿದೆ. ಸೃಷ್ಟಿಯಾಗಿರುವುದರಿಂದ ಪಟಸೃಷ್ಟಿಯಂತೆ. ಹೀಗೆ ನಿರ್ದುಷ್ಟವಾದ ಅನುಮಾನದಿಂದ ಕರ್ತೃವಿಗಿಂತ ಅತಿರಿಕ್ತವಾದ ಸಾಧನಾಂತರವು ಸಿದ್ಧವಾಗುತ್ತದೆ.

## ಬ್ರಹ್ಮಸೂತ್ರ

**सूत्रम् – यथा प्राणादिः ।।**

ಪ್ರಕೃತ್ಯಾದಿ ಸಾಮಗ್ರಿಗಳು ಸ್ವತಂತ್ರ ಸಾಧನಗಳಲ್ಲ. ಯಾವ ರೀತಿಯಾಗಿ 'ಯಃ ಪ್ರಾಣೇ ತಿಷ್ಠನ್' ಎಂಬ ಶ್ರುತಿಯು ಪ್ರಾಣ, ದೇಹ ಮೊದಲಾದ ವಸ್ತುಗಳಲ್ಲಿ ಭಗವಂತನು ನೆಲೆಸಿ ವ್ಯಾಪಾರಗಳನ್ನು ಮಾಡುತ್ತಾನೆಂದು ಹೇಳುವುದರ ಮೂಲಕ ಅವುಗಳಿಗೆ ಅಸ್ವಾತಂತ್ರ್ಯವನ್ನು ತಿಳಿಸುತ್ತಿದೆಯೋ ಅದರಂತೆ 'ಪ್ರಕೃತಿಂ ಪುರುಷಂ ಚೈವ' ಇತ್ಯಾದಿ ಶ್ರುತಿಯೂ ಕೂಡ ವಿಶ್ವಕಾರಣವಾದ ಪ್ರಕೃತ್ಯಾದಿಗಳಲ್ಲಿ ಭಗವಂತನು ಪ್ರವೇಶ ಮಾಡಿದ್ದಾನೆಂದು ತಿಳಿಸುತ್ತಿದೆ. ಪ್ರಾಣಾದಿಗಳು ಅಸ್ವತಂತ್ರ ಸಾಧನವಾದಂತೆ ಈ ಪ್ರಕೃತ್ಯಾದಿಗಳೂ ಕೂಡ ಅಸ್ವತಂತ್ರಸಾಧನವೆಂದು ತಿಳಿಯಬೇಕು.

## ಸೂತ್ರದೀಪಿಕಾ

**सूत्रदीपिका – यथा प्राणादिः ।। यथा प्राणदेहेन्द्रियादिकं न स्वतन्त्रम् । एवं प्रकृत्यादिसाधनान्तरमपीत्यर्थः ।।८।।**

ಅರ್ಥ -- ಯಥಾ ಪ್ರಾಣಾದಿಃ = ಯಾವ ರೀತಿಯಾಗಿ 'ಪ್ರಾಣೇ ತಿಷ್ಠನ್' ಇತ್ಯಾದಿಯಾಗಿ ಈಶ್ವರನ ಪ್ರವೇಶದಿಂದ ಪ್ರಾಣಾದಿಗಳು ಸ್ವತಂತ್ರ ಸಾಧನವಲ್ಲವೆಂದು ತಿಳಿಯುತ್ತದೆ. ಇಲ್ಲದಿದ್ದರೆ ಅವುಗಳಲ್ಲಿ ಈಶ್ವರನ ಪ್ರವೇಶವೇ ವ್ಯರ್ಥವಾಗುತ್ತದೋ, ಅದರಂತೆ 'ಪ್ರಕೃತಿಂ ಪುರುಷಂ ಚೈವ' ಇತ್ಯಾದಿ ಶ್ರುತಿಗಳು ಹೇಳುತ್ತಿರುವ ಸಾಧನಗಳಲ್ಲಿಯೂ ಈಶ್ವರನ ಪ್ರವೇಶವಿರುವುದರಿಂದ ಸ್ವತಂತ್ರ ಸಾಧನಗಳಾಗುವುದಿಲ್ಲ.

॥ ಸೂತ್ರದೀಪಿಕೆಯಲ್ಲಿ ಆರಂಭಣಾಧಿಕರಣವು ಸಮಾಪ್ತವಾಯಿತು ॥
ಆರಂಭಣಾಧಿಕರಣ (೨-೧-೬)

**भाष्यम् – ।। यथा प्राणादिः ।।८।।**

**तच्च साधनजातं तेनानुप्रविष्टमेव यथा शरीरेन्द्रियादिः ।**

ಅನುವಾದ - ಪರಮಾತ್ಮನು ಸೃಷ್ಟಿಯ ವ್ಯಾಪಾರದಲ್ಲಿ ತೊಡಗಲು ಯಾವ ಸಾಧನ-ಸಮೂಹವನ್ನು ಅಪೇಕ್ಷಿಸುತ್ತಾನೊ ಅವುಗಳಲ್ಲಿ ಸ್ವತಃ ಅವನೇ ಪ್ರವೇಶವನ್ನು ಮಾಡುತ್ತಾನೆ ಶರೀರ ಇಂದ್ರಿಯಗಳಂತೆ. ಹೀಗೆ ಕೂರ್ಮಪುರಾಣವು ಹೇಳಿದೆ.

ಪ್ರತಿಪದಾರ್ಥ -- ಕರ್ತೃವಿಗಿಂತ ಅತಿರಿಕ್ತವಾದ ಸ್ವತಂತ್ರಸಾಧನವನ್ನು ಒಪ್ಪಬಹುದಲ್ಲವೆ? ಎಂದು ಆಶಂಕಿಸಿ ಪರಿಹಾರ ನೀಡುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಯಥಾ = ಹೇಗೆ, ತಚ್ಚ = ಆ, ಸಾಧನಜಾತಂ = ಪ್ರಕೃತ್ಯಾದಿ ಸಾಧನಸಮೂಹವು, ತೇನ = ಆ ಪರಮಾತ್ಮನಿಂದ, ಅನುಪ್ರವಿಷ್ಟಮೇವ = ಪ್ರವೇಶಿಸಲ್ಪಟ್ಟಿದ್ದೇ ಆಗಿದೆ.

**भाष्यम् –**

**'प्रकृतिं पुरुषं चैव प्रविश्य पुरुषोत्तमः ।**
**क्षोभयामास भगवान् सृष्ट्यर्थं जगतः प्रभुः ।।' इति कौर्मे ।।८।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये आरम्भणाधिकरणम् ।। ६ ।।**

ಅನುವಾದ - ಪ್ರಕೃತಿ, ಚತುರ್ಮುಖಬ್ರಹ್ಮ ಇವರ ಒಳಗೆ ಪುರುಷೋತ್ತಮನು ಪ್ರವೇಶವನ್ನು ಮಾಡಿ ಜಗತ್ತಿನ ಸೃಷ್ಟಿಗಾಗಿ ಅವುಗಳನ್ನು ಉನ್ಮುಖವಾಗಿ ಮಾಡುತ್ತಾನೆ.

ಪ್ರತಿಪದಾರ್ಥ -- ಸಾಧನಗಳು ಭಗವಂತನಿಂದ ಅನುಪ್ರವೇಶವನ್ನು ಪಡೆದಿವೆ ಎಂದು ಏಕೆ ಒಪ್ಪಬೇಕು ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಪ್ರಕೃತಿಂ = ಪ್ರಕೃತಿಯನ್ನು, ಪುರುಷಂ = ಜೀವನನ್ನು, ಪ್ರವಿಶ್ಯ = ಪ್ರವೇಶಮಾಡಿ, ಪುರುಷೋತ್ತಮಃ = ಪುರುಷೋತ್ತಮನಾದ, ಭಗವಾನ್ = ನಾರಾಯಣನು, ಸೃಷ್ಟ್ಯರ್ಥಂ = ಸೃಷ್ಟಿಗೋಸ್ಕರ, ಜಗತಃ = ಜಗತ್ತನ್ನು, ಕ್ಷೋಭಯಾಮಾಸ = ಉದ್ಯುಕ್ತಗಳನ್ನಾಗಿ ಮಾಡಿದನು.

ಇಲ್ಲಿಗೆ ಆರಂಭಣಾಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – तर्हि विमता सृष्टिः कर्तृव्यतिरिक्तस्वतन्त्रसाधनसापेक्षा सृष्टित्वात्पटसृष्टिवदिति । विप्रतिपन्नं वा साधनं स्वतन्त्रं साधनत्वात्तुर्यादिवदित्यपि स्यादित्याशङ्क्य परिहरत्सूत्रमुपन्यस्य व्याचष्टे ।। यथेति ।।**

'ವಿವಾದವಿಷಯವಾದ ವಿಶ್ವಸೃಷ್ಟಿಯು ಕರ್ತೃವಿಗಿಂತ ಅತಿರಿಕ್ತವಾದ ಸ್ವತಂತ್ರವಾದ ಮತ್ತೊಂದು ಸಾಧನೆಯನ್ನು ಅಪೇಕ್ಷಿಪಡುತ್ತದೆ. ಸೃಷ್ಟಿಯಾದ್ದರಿಂದ ಪಟಸೃಷ್ಟಿಯಂತೆ' ಅಥವಾ 'ವಿಪ್ರತಿಪನ್ನಮ್ ಸಾಧನಮ್ ಸ್ವತಂತ್ರಂ ಸಾಧನತ್ವಾತ್ ತುರ್ಯಾದಿವತ್' 'ವಿಪ್ರತಿಪನ್ನವಾದ ಪ್ರಕೃತ್ಯಾದಿ ಸಾಧನವು ಸ್ವಂತತ್ರವಾಗಿದೆ. ಸಾಧನವಾದ್ದರಿಂದ ಬಟ್ಟೆಯನ್ನು ಸೃಷ್ಟಿಮಾಡುವ ಯಂತ್ರದಂತೆ' ಹೀಗೆ ಅನುಮಾನದಿಂದ ಪುನಃ ಸಾಧನವು ಸ್ವತಂತ್ರವಾಗಿದೆ ಎಂದು ಸಾಧಿಸಬಹುದಲ್ಲವೇ? ಎಂದು ಆಕ್ಷೇಪ ಮಾಡಿದರೆ ಇದನ್ನು ಪರಿಹರಿಸುವ 'ಯಥಾ ಪ್ರಾಣಾದಿಃ' ಎಂಬ ಮುಂದಿನ ಸೂತ್ರವು ಹೊರಟಿದೆ. ಅದನ್ನು 'ತಚ್ಚ' ಇತ್ಯಾದಿ ಭಾಷ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – न तत्साधनं स्वतन्त्रं प्रेरणार्थं भगवताऽनुप्रविष्टत्वात् तथा शरीरेन्द्रियप्राणादिः ।**

ಪ್ರಕೃತಿ ಮುಂತಾದ ಸಾಧನಗಳು 'ನ ಸ್ವತಂತ್ರಮ್' ಪ್ರಕೃತಿ ಮೊದಲಾದ ಸಾಧನಗಳು ಸ್ವತಂತ್ರವಲ್ಲ. ಅವುಗಳನ್ನು ಪ್ರೇರಣೆ ಮಾಡುವುದಕ್ಕಾಗಿ ಭಗವಂತನು ಪ್ರಕೃತ್ಯಾದಿಗಳಲ್ಲಿ ಪ್ರವೇಶ ಮಾಡುತ್ತಾನೆ. ಅದೇ ರೀತಿಯಾಗಿ ದೇಹ, ಇಂದ್ರಿಯ, ಪ್ರಾಣ ಮೊದಲಾದವುಗಳಲ್ಲಿಯೂ ಕೂಡ ಪರಮಾತ್ಮನು ಪ್ರವೇಶ ಮಾಡುತ್ತಾನೆ. ಹೀಗೆ ಅನುಮಾನವನ್ನು ಮಾಡಬೇಕು. 'ತತ್ಸಾಧನಂ ಸ್ವತಂತ್ರಂ ಪ್ರೇರಣಾರ್ಥಂ ಭಗವತಾ ಅನುಪ್ರವಿಷ್ಟತ್ವಾತ್' ಎಂದು.

**तत्वप्रकाशिका – 'यः प्राणे तिष्ठन्' इत्यादेरीश्वरेणानुप्रविष्टत्वान्न स्वतन्त्रम्। अन्यथाऽनुप्रवेशवैयर्थ्यादिति भावः।**

'ಯಃ ಪ್ರಾಣೇ ತಿಷ್ಠನ್' ಇತ್ಯಾದಿ ಶ್ರುತಿಗಳಲ್ಲಿ ಪ್ರೇರಣೆಗೊಸ್ಕರ ಭಗವಂತನು ಆಯಾ ಪದಾರ್ಥಗಳಲ್ಲಿ ಪ್ರವೇಶ ಮಾಡುತ್ತಾನೆಂದು ಹೇಳಲಾಗಿದೆ. ಆದದ್ದರಿಂದ ಸಾಧನ ಪದಾರ್ಥಗಳು ಸ್ವತಂತ್ರವಾಗಲು ಸಾಧ್ಯವಿಲ್ಲ. ಪ್ರರಣೆಗೋಸ್ಕರ ಅವನು ಪ್ರವೇಶ ಮಾಡದಿದ್ದರೆ. ಅವನ ಪ್ರವೇಶವೇ ವ್ಯರ್ಥವಾಗಬೇಕಾದೀತು.

**तत्वप्रकाशिका – साधनानां भगवदनुप्रविष्टत्वमेव कुत इत्यत आह – प्रकृतिमिति ।।**

ಸಾಧನೆಗಳಲ್ಲಿ ಭಗವಂತ ಅನುಪ್ರವೇಶವು ಯಾವ ಪ್ರಮಾಣದಿಂದ ಸಿದ್ಧವಾಗಿದೆ ಎಂಬ ಪ್ರಶ್ನೆಗೆ 'ಪ್ರಕೃತಿಂ ಪುರುಷಂ ಚೈವ' ಎಂಬ ಕೂರ್ಮಪುರಾಣವು ಆಧಾರವಾಗಿದೆ ಎಂದು ಉದಾಹರಿಸುತ್ತಿದ್ದಾರೆ.

**तत्वप्रकाशिका – क्षोभयामास उन्मुखीचकार । अतो भगवतः स्वातन्त्र्येण सर्वकर्तृत्वे विरोधगन्धाभावाद्युक्तं सर्वगुणपूर्णत्वमिति सिद्धम् ।।**

ಭಾಷ್ಯದಲ್ಲಿ ಉದಾಹರಿಸಿದ ವಚನದಲ್ಲಿ 'ಕ್ಷೋಭಯಾಮಾಸ' ಎಂಬ ಪದಕ್ಕೆ ಸೃಷ್ಟಿಗೆ ಉನ್ಮುಖವನ್ನಾಗಿ ಮಾಡಿದನು ಎಂದರ್ಥ. ಆದ್ದರಿಂದ ಭಗವಂತನು ಸ್ವತಂತ್ರವಾಗಿ ಸರ್ವಕರ್ತೃವಾಗಿದ್ದಾನೆ ಎಂಬ ವಿಷಯದಲ್ಲಿ ವಿರೋಧದ ಗಂಧವೂ ಕೂಡ ಇರುವುದಿಲ್ಲ. ಆದ್ದರಿಂದ ಪ್ರಥಮಸೂತ್ರದ ಬ್ರಹ್ಮಶಬ್ದದಿಂದ ಪ್ರತಿಪಾದ್ಯವಾದ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಆರಂಭಣಾಧಿಕರಣ ಮುಗಿಯಿತು.

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## आरम्भणाधिकरणम्

### ಅವಸರಸಂಗತಿ ಮತ್ತು ಸಂಶಯಕೋಟಿಗಳು

**।। तदनन्यत्वमारम्भणशब्दादिभ्यः ।। अत्र बहुयुक्तिविरोधः परिह्रियते । तत्र च बहुत्वं महदादिकं कर्त्रन्यस्वतन्त्रकारणसापेक्षम् । सृष्टत्वात् । घटवत् । तत्सृष्टिस्तत्सापेक्षा । सृष्टित्वात् । घटसृष्टिवदिति प्रयोगभेदमात्रान्न भवति ।**

'ತದನನ್ಯತ್ವಮಾರಂಭಣಶಬ್ದಾದಿಭ್ಯಃ' ಎಂಬ ಸೂತ್ರದಿಂದ ಆರಂಭಣಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ ಬಹುಬಗೆಯ ಯುಕ್ತಿಗಳ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ಯುಕ್ತಿಗಳು ಬಹುಬಗೆಯಾಗಿವೆ ಎಂಬುದರ ಅರ್ಥವೇನು ? ಎಂಬುದನ್ನು ಪ್ರಾರಂಭದಲ್ಲಿ ವಿಚಾರ ಮಾಡಬೇಕು. ಕೇವಲ ಪ್ರಮೇಯಭೇದವಿಲ್ಲದೇ ಒಂದೇ ವಿಷಯದಲ್ಲಿ ಅನೇಕ ಅನುಮಾನಗಳನ್ನು ಹೇಳಿದ ಮಾತ್ರಕ್ಕೆ ಬಹುಬಗೆಯ ಯುಕ್ತಿಗಳನ್ನು ಹೇಳಿದಂತಾಗುವುದಿಲ್ಲ. ಉದಾಹರಣೆ - 'ಮಹದಾದಿಕಂ ಕರ್ತ್ರನ್ಯಸ್ವತಂತ್ರಕಾರಣಸಾಪೇಕ್ಷಮ್ ಸೃಷ್ಟತ್ವಾತ್ ಘಟವತ್' ಘಟವು ಕುಲಾಲನಿಂದ ಹುಟ್ಟಿದೆ. ಮತ್ತು ಕುಲಾಲನಿಗಿಂತ ಬೇರೆಯಾದ ಮಣ್ಣು, ನೀರು ಮೊದಲಾದ ಸ್ವತಂತ್ರ ಕಾರಣವನ್ನು ಅಪೇಕ್ಷಿಸಿದೆ. ಅದರಂತೆ ಮಹದಾದಿತತ್ವಗಳು ಹುಟ್ಟಿರುವುದರಿಂದ ಬ್ರಹ್ಮನೆಂಬ ಕರ್ತೃವಿಗಿಂತ ಭಿನ್ನವಾದ ಬೇರೆ ಸ್ವತಂತ್ರಕಾರಣವನ್ನು ಅಪೇಕ್ಷಿಸುತ್ತದೆ. ಹೀಗೆ ಒಂದು ಬಗೆಯ ಅನುಮಾನದಿಂದ ಸಾಧನೆ ಮಾಡಿದ ಮೇಲೆ ಇದೇ ವಿಷಯವನ್ನು ಮತ್ತೊಂದು ರೀತಿಯಲ್ಲಿ ಅನುಮಾನದಿಂದ ಸಾಧಿಸಬಹುದು. 'ಮಹದಾದಿಸೃಷ್ಟಿಃ ಕರ್ತ್ರನ್ಯಸ್ವತಂತ್ರಕಾರಣಸಾಪೇಕ್ಷಾ ಸೃಷ್ಟಿತ್ವಾತ್ ಘಟಸೃಷ್ಟಿವತ್' ಘಟಸೃಷ್ಟಿಯು ಸೃಷ್ಟಿಯಾಗಿರುವುದರಿಂದ ಕರ್ತೃವಿಗಿಂತ ಭಿನ್ನವಾದ ಸ್ವತಂತ್ರಕಾರಣವನ್ನು ಅಪೇಕ್ಷಿಸಿದೆ. ಅದೇ ರೀತಿಯಾಗಿ ಮಹದಾದಿ ಸೃಷ್ಟಿಗಳು ಸೃಷ್ಟಿಯಾಗಿರುವುದರಿಂದ ಕರ್ತೃವಿಗಿಂತ ಭಿನ್ನವಾದ ಸ್ವತಂತ್ರಕಾರಣವನ್ನು ಅಪೇಕ್ಷಿಸುತ್ತದೆ ಎಂದು. ಈ ಎರಡು ಅನುಮಾನಗಳು ಒಂದೇ ವಿಷಯವನ್ನು ಪ್ರತಿಪಾದನೆ ಮಾಡುತ್ತಿವೆ. ಹೊರತು, ಪ್ರಮೇಯದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ. ಹೀಗೆ ಪ್ರಯೋಗಭೇದಮಾತ್ರದಿಂದ ಯುಕ್ತಿಗಳು ಬಹುಬಗೆಯೆಂದು ಕರೆಸಿಕೊಳ್ಳುವುದಿಲ್ಲ. ಆದ್ದರಿಂದ

ಪ್ರಮೇಯದಲ್ಲಿ ಭೇದವಿರುವಂತಹ (೧)ಅನೇಕ ಅನುಮಾನಗಳನ್ನು ಪ್ರಯೋಗ ಮಾಡುವುದೇ ಈ ಅಧಿಕರಣದ ಪೂರ್ವಪಕ್ಷಯುಕ್ತಿಯಾಗಿದೆ. ಅದು ಹೀಗೆ -

**किन्तु महदादिसृष्टिः कर्त्रनधीनसत्ताकाधिष्ठानसापेक्षा । तथा तदनधीन-शक्तिकाधिष्ठानसापेक्षा । तथोक्तरूपकरणसापेक्षा । सृष्टित्वात् । एवं स्थित्यादिरपीति प्रमेयभेदादिति नातिप्रसङ्गः ।**

'ಮಹದಾದಿಸೃಷ್ಟಿಃ ಕರ್ತ್ರನಧೀನಸತ್ತಾಕಾಧಿಷ್ಠಾನಸಾಪೇಕ್ಷಾ ಸೃಷ್ಟಿತ್ವಾತ್' ಮಹದಾದಿಸೃಷ್ಟಿಯು ಸೃಷ್ಟಿಯಾಗಿರುವುದರಿಂದ ಕರ್ತ್ರನಧೀನಸತ್ತಾಕವಾದ ಅಧಿಷ್ಠಾನವನ್ನು ಅಪೇಕ್ಷಿಸುತ್ತದೆ. ಮತ್ತು ಮಹದಾದಿಸೃಷ್ಟಿಯು ಸೃಷ್ಟಿಯಾಗಿರುವುದರಿಂದ ಕರ್ತೃವಿನ ಅಧೀನವಾಗದ ಶಕ್ತಿಯುಳ್ಳ ಅಧಿಷ್ಠಾನವನ್ನು ಅಪೇಕ್ಷಿಸುತ್ತದೆ. ಮತ್ತು ಮಹದಾದಿಸೃಷ್ಟಿಯು ಸೃಷ್ಟಿಯಾಗಿರುವುದರಿಂದ ಕರ್ತ್ರನಧೀನಸತ್ತಾಕವಾದ ಅಧಿಷ್ಠಾನವನ್ನು ಅಪೇಕ್ಷಿಸುತ್ತದೆ. ಇದೇ ರೀತಿಯಾಗಿ ಸೃಷ್ಟ್ಯಾದಿಗಳಲ್ಲಿಯೂ ಅನುಮಾನ ಪ್ರಯೋಗವನ್ನು ತಿಳಿಯಬೇಕು. ಪ್ರತಿಯೊಂದು ಅನುಮಾನಗಳ ಪ್ರಮೇಯವು ಭಿನ್ನಭಿನ್ನ-ವಾಗಿರುವುದರಿಂದ ಬಹುಯುಕ್ತಿವಿರೋಧ ಎಂಬ ಪೂರ್ವಪಕ್ಷಯುಕ್ತಿಯು ಸಮಂಜಸವಾಗುತ್ತದೆ.

ಬಹುಯುಕ್ತಿವಿರೋಧವೆಂಬ ಪೂರ್ವಪಕ್ಷಯುಕ್ತಿಗೆ ಯಾವುದೇ ಅತಿಪ್ರಸಂಗ ಬರುವುದಿಲ್ಲ.(೨)

**पूर्वत्रेश्वरस्य विश्वकर्तृत्वमेव नेति शङ्का परास्ता । अत्र तु श्रुतिसिद्धं तदुपेत्य**

(೧) ಪ್ರಮೇಯಭೇದವಿರುವ ಬಹುಬಗೆಯ ಯುಕ್ತಿಗಳನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು -
೧. 'ಮಹದಾದಿಸೃಷ್ಟಿಃ ಕರ್ತ್ರನಧೀನಸತ್ತಾಕಾಧಿಷ್ಠಾನಸಾಪೇಕ್ಷಾ ಸೃಷ್ಟಿತ್ವಾತ್'
೨. 'ಮಹದಾದಿಸೃಷ್ಟಿಃ ಕರ್ತ್ರನಧೀನಪ್ರವೃತ್ತಿಕಾಧಿಷ್ಠಾನಸಾಪೇಕ್ಷಾ ಸೃಷ್ಟಿತ್ವಾತ್'
೩. 'ಮಹದಾದಿಸೃಷ್ಟಿಃ ಕರ್ತ್ರನಧೀನಶಕ್ತಿಕಾಧಿಷ್ಠಾನಸಾಪೇಕ್ಷಾ ಸೃಷ್ಟಿತ್ವಾತ್'
೪. 'ಮಹದಾದಿಸೃಷ್ಟಿಃ ಕರ್ತ್ರನಧೀನಸತ್ತಾಕಾಧಿಷ್ಠಾನಕರಣಸಾಪೇಕ್ಷಾ ಸೃಷ್ಟಿತ್ವಾತ್'
೫. 'ಮಹದಾದಿಸೃಷ್ಟಿಃ ಕರ್ತ್ರನಧೀನಶಕ್ತಿಕಕರಣಸಾಪೇಕ್ಷಾ ಸೃಷ್ಟಿತ್ವಾತ್'
೬. 'ಮಹದಾದಿಸೃಷ್ಟಿಃ ಕರ್ತ್ರನಧೀನಪ್ರವೃತ್ತಿಕಾಕರಣ ಸಾಪೇಕ್ಷಾ ಸೃಷ್ಟಿತ್ವಾತ್'
ಇದೇ ರೀತಿಯಾಗಿ ಸ್ಥಿತಿ, ಲಯ, ನಿಯಮನ ಮೊದಲಾದವುಗಳನ್ನು ಪಕ್ಷವನ್ನಾಗಿ ಮಾಡಿ, ಇದೇ ಬಗೆಯ ಅನೇಕ ಅನುಮಾನಗಳನ್ನು ಸ್ವತಃ ತಿಳಿದುಕೊಳ್ಳಬೇಕು.

(೨) ಅತಿಪ್ರಸಂಗವೆಂದರೆ ಹೀಗೆ ತಿಳಿಯಬೇಕು. ಹಿಂದಿನ ಅಧಿಕರಣಗಳಲ್ಲಿ ಯುಕ್ತಿವಿರೋಧವನ್ನು ಹೇಳಲಾಯಿತು. ಅಭಿಮಾನ್ಯಧಿಕರಣದಲ್ಲಿ 'ಮೃತ್ ನ ವಕ್ತೀ ಮೃತ್ತ್ವಾತ್' ಎಂಬ ಯುಕ್ತಿಯ ವಿರೋಧವನ್ನು ಪೂರ್ವಪಕ್ಷದಲ್ಲಿ ತೋರಿಸಲಾಯಿತು. ಒಂದುವೇಳೆ ಪ್ರಮೇಯದಲ್ಲಿ ಭೇದವಿಲ್ಲದೇ ಪ್ರಯೋಗದಲ್ಲಿ ಭೇದವಿದ್ದಮಾತ್ರದಿಂದ ಯುಕ್ತಿಗಳಲ್ಲಿ ಬಹುತ್ವವು ಬರುವುದಾದರೆ, ಅಭಿಮಾನ್ಯಧಿಕರಣದಲ್ಲಿಯೂ ಕೂಡ ವಕ್ತೃತ್ವಾಭಾವವನ್ನು ಸಾಧನೆ ಮಾಡಲು ಅನೇಕ ಬಗೆಯ ಅನುಮಾನಗಳನ್ನು ಪ್ರಯೋಗ ಮಾಡಬಹುದೆಂಬ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಈ ಅಧಿಕರಣದಲ್ಲಿ ಪ್ರಮೇಯಭೇದವಿರುವ ಅನೇಕ ಅನುಮಾನಗಳ ವಿರೋಧ ಬರುತ್ತದೆಯೆಂದು ತಿಳಿಯಬೇಕು.

**स्वानधीनसत्तादियुक्तसाधनसापेक्षं तदिति शङ्का निरस्यत इति सङ्गतिः ।**

ಅಧಿಕರಣಸಂಗತಿ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಈಶ್ವರನಿಗೆ ವಿಶ್ವಕರ್ತೃತ್ವವೇ ಇರುವುದಿಲ್ಲವೆಂದು ಆಶಂಕಿಸಿ, ಪರಿಹರಿಸಿದ್ದಾಯಿತು. ಈ ಅಧಿಕರಣದಲ್ಲಿ ವಿಶ್ವಕರ್ತೃತ್ವವು ಶ್ರುತಿಸಿದ್ಧವಾಗಿದೆ ಎಂದು ಒಪ್ಪಿ, ತನ್ನ ಅಧೀನವಾಗದ ಸತ್ತಾ ಮೊದಲಾದವುಗಳನ್ನು ಹೊಂದಿರುವ ಬೇರೆ ಸಾಧನೆಗಳನ್ನು ಈಶ್ವರನು ಅಪೇಕ್ಷೆ ಪಡುತ್ತಾನೆ ಎಂಬ ಆಶಂಕೆಯನ್ನು ಪರಿಹರಿಸಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣವು ಸಂಗತವಾಗುತ್ತದೆ.

**अत्र जन्मादिसूत्रे विवक्षितं ब्रह्मणः स्वतन्त्रसाधनान्तरनिरपेक्षकर्तृत्वं युक्तिविरुद्धमुत नेति चिन्ता ।**

ಅಧಿಕರಣದ ಸಂಶಯಪರಂಪರೆ ಹೀಗಿದೆ - ಜನ್ಮಾದ್ಯಧಿಕರಣದಲ್ಲಿ ಬ್ರಹ್ಮನು ಸ್ವತಂತ್ರಸಾಧನವನ್ನು ಅಪೇಕ್ಷೆ ಪಡದೇ ಜಗತ್ತಿಗೆ ಕರ್ತೃವಾಗಿದ್ದಾನೆಂದು ಸಮರ್ಥಿಸಲಾಯಿತು. ಈ ಪ್ರಮೇಯವು ಯುಕ್ತಿವಿರುದ್ಧವೋ, ಅಲ್ಲವೋ ?ಎಂಬುದು ಪ್ರಧಾನ ಸಂಶಯ.

**तदर्थं ''किंस्विदासीदधिष्ठानमारम्भणम्'' इत्यत्र किंशब्दः किं परिहाराध्याहारेण प्रश्नार्थः किं वा तदनध्याहारेणाक्षेपार्थ इति ।**

ಈ ಸಂಶಯದ ಪರಿಹಾರಕ್ಕಾಗಿ 'ಕಿಂಸ್ವಿದಾಸೀದಧಿಷ್ಠಾನಮ್ ಆರಂಭಣಮ್' ಎಂಬ ಶ್ರುತಿಯಲ್ಲಿರುವ 'ಕಿಂ'ಶಬ್ದವು ಪರಿಹಾರ ಭಾಗವನ್ನು ಅಧ್ಯಾಹಾರ ಮಾಡಿಕೊಂಡು ಪ್ರಶ್ನಾರ್ಥಕವೆಂದು ಹೇಳಬೇಕೋ? ಅಥವಾ ಪರಿಹಾರಭಾಗವನ್ನು ಅಧ್ಯಾಹಾರ ಮಾಡಿಕೊಳ್ಳದೇ ಆಕ್ಷೇಪಾರ್ಥವುಳ್ಳದ್ದೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''अद्भ्यस्सम्भूतः'' इत्यादिश्रुतिः किं स्वतन्त्रसाधनान्तरपरोत परतन्त्रसाधनान्तरपरेति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ 'ಅದ್ಭ್ಯಃ ಸಂಭೂತಃ' ಇತ್ಯಾದಿ ಶ್ರುತಿಯು ಮತ್ತೊಂದು ಸ್ವತಂತ್ರಸಾಧನವನ್ನು ಹೇಳುತ್ತಿದೆಯೋ? ಅಥವಾ ಮತ್ತೊಂದು ಪರತಂತ್ರಸಾಧನವನ್ನೇ ಹೇಳುತ್ತಿದೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं कर्तुः स्वतन्त्रसाधनापेक्षा किं कर्तृत्वप्रयुक्तोताशक्तिप्रयुक्तेति ।**

ಅದಕ್ಕಾಗಿ ಯಾರೇ ಒಬ್ಬ ಕರ್ತೃವು ಸ್ವತಂತ್ರಸಾಧನವನ್ನು ಅಪೇಕ್ಷೆ ಪಡುವುದಕ್ಕೆ ಕಾರಣ ಕರ್ತೃತ್ವದ ಇರುವಿಕೆಯೋ? ಅಥವಾ ತನ್ನಲ್ಲಿ ಶಕ್ತಿಯಿಲ್ಲದ ಕಾರಣ ಮತ್ತೊಂದು ಸ್ವತಂತ್ರಸಾಧನೆಯನ್ನು ಅಪೇಕ್ಷೆ ಪಡುತ್ತಾನೆಂದೋ? ಎಂಬ ಸಂಶಯವು ಪರಿಹಾರವಾಗಬೇಕು.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**तदनन्यत्वं ।। टीकायामस्फुटत्वात्सुधोक्तमेवाधिकरणोपाधिं पूर्वापरापौनरुक्तयायाह – अत्रेति ।।**

'ತದನನ್ಯತ್ವಂ ಆರಂಭಣಶಬ್ದಾದಿಭ್ಯಃ' ಎಂಬುದಾಗಿ ಆರಂಭಣಾಧಿಕರಣವು ಪ್ರಾರಂಭವಾಗುತ್ತಿದೆ. ಆರಂಭಣಾಧಿಕರಣದ ಉಪಾಧಿಯು ಟೀಕೆಯಲ್ಲಿ ಸ್ಪಷ್ಟವಾಗಿ ಕಾಣಸುವುದಿಲ್ಲ. ನ್ಯಾಯಸುಧೆಯಲ್ಲಿ ಅಧಿಕರಣದ ಉಪಾಧಿಯು ಸ್ಪಷ್ಟವಾಗಿ ಹೇಳಲ್ಪಟ್ಟದೆ. ಗ್ರಂಥಕಾರರು 'ಅತ್ರ' ಇತ್ಯಾದಿ ವಾಕ್ಯದಿಂದ ನ್ಯಾಯಸುಧೆಯಲ್ಲಿ ಹೇಳಿದ ಅಧಿಕರಣ ಉಪಾಧಿಯನ್ನು ವಿವರಿಸುತ್ತಿದ್ದಾರೆ. ಇದರಿಂದ ಹಿಂದಿನ ಅಧಿಕರಣಗಳಿಂದ ಪುನರುಕ್ತಿದೋಷಗಳನ್ನೂ ಕೂಡ ಪರಿಹರಿಸಿದಂತಾಗುತ್ತದೆ.

**प्रकाशः – ननु सुधायां महदादिसृष्टिः कर्तृभिन्नस्वतन्त्रकारणसापेक्षा । सृष्टित्वात्पटसृष्टिवत् । महदादिकं कर्तृव्यतिरिक्तकारणायत्तोत्पत्त्यादिकम् । कार्यत्वात् घटवदित्यादिना प्रयोगभेदोक्तया तेनैव बहुत्वमिति भाति ।**

ನ್ಯಾಯಸುಧೆಯಲ್ಲಿ ಯುಕ್ತಿಯಲ್ಲಿರುವ ಬಹುತ್ವವೆಂದರೆ ಪ್ರಯೋಗಬಾಹುಲ್ಯವೆಂದು ವಿವಕ್ಷಿಸಿದಂತೆ ಕಾಣಸುತ್ತಿದೆ. 'ಮಹದಾದಿಸೃಷ್ಟಿಃ ಕರ್ತೃಭಿನ್ನಸ್ವತಂತ್ರಕಾರಣಸಾಪೇಕ್ಷಾ । ಸೃಷ್ಟಿತ್ವಾತ್ ಪಟಸೃಷ್ಟಿವತ್' ಪಟಸೃಷ್ಟಿಯು ಸೃಷ್ಟಿಯಾದ್ದರಿಂದ ಕರ್ತೃಭಿನ್ನವಾದ ಸ್ವತಂತ್ರಕಾರಣವನ್ನು ಅಪೇಕ್ಷಿಸಿದೆ. ಅದರಂತೆ ಮಹದಾದಿ ಸೃಷ್ಟಿಯೂ ಕೂಡ ಸೃಷ್ಟಿಯಾದುದರಿಂದ ಕರ್ತೃಭಿನ್ನವಾದ ಸ್ವತಂತ್ರಕಾರಣವನ್ನು ಅಪೇಕ್ಷಿಸಬೇಕು ಎಂದು ಅನುಮಾನದಿಂದ ಪ್ರಯೋಗ ಮಾಡಿ ಇದೇ ವಿಷಯವನ್ನು ಮತ್ತೊಂದು ಬಗೆಯಲ್ಲಿ ಅನುಮಾನ ಮಾಡಿದ್ದಾರೆ. ಮಹದಾದಿಕಂ ಕರ್ತೃವ್ಯತಿರಿಕ್ತರಣಾಯತ್ತೋತ್ಪತ್ತ್ಯಾದಿಕಮ್ । ಕಾರ್ಯತ್ವಾತ್ ಘಟವತ್' ಘಟವು ಕಾರ್ಯವಾದ್ದರಿಂದ ಕರ್ತೃವ್ಯತಿರಿಕ್ತವಾದ ಕಾರಣದ ಅಧೀನವಾದ ಉತ್ಪತ್ತಿಯುಳ್ಳದ್ದಾಗಿದೆ. ಅದರಂತೆ ಮಹದಾದಿಗಳೂ ಕೂಡ ಕಾರ್ಯವಾಗಿರುವುದರಿಂದ ಕರ್ತೃವಿಗಿಂತ ಭಿನ್ನವಾದ ಕಾರಣದ ಅಧೀನವಾಗಿ ಉತ್ಪತ್ತ್ಯಾದಿಗಳನ್ನು ಹೊಂದಿದೆ. ಹೀಗೆ ಅನುಮಾನ ಮಾಡಿದಾಗಲೂ ಹಿಂದಿನ ಅನುಮಾನದ ವಿಷಯವೇ ಸಿದ್ಧವಾಗುತ್ತದೆ. ಪ್ರಮೇಯದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ. ಪ್ರಯೋಗದಲ್ಲಷ್ಟೇ ವ್ಯತ್ಯಾಸವಿದೆ. ಇಂಥ ಅನೇಕ ಅನುಮಾನಗಳ ವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸುತ್ತಾದ್ದಾರೆಂದು ನ್ಯಾಯಸುಧೆಯ ವಾಕ್ಯಗಳನ್ನು ಗಮನಿಸಿದಾಗ ಆಪಾತತಃ ಭಾಸವಾಗುತ್ತದೆ.

**स्वानधीनसत्तादियुक्तसाधनसापेक्षं तदिति शङ्का निरस्यत इति सङ्गतिः ।**

ಅಧಿಕರಣಸಂಗತಿ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಈಶ್ವರನಿಗೆ ವಿಶ್ವಕರ್ತೃತ್ವವೇ ಇರುವುದಿಲ್ಲವೆಂದು ಆಶಂಕಿಸಿ, ಪರಿಹರಿಸಿದ್ದಾಯಿತು. ಈ ಅಧಿಕರಣದಲ್ಲಿ ವಿಶ್ವಕರ್ತೃತ್ವವು ಶ್ರುತಿಸಿದ್ಧವಾಗಿದೆ ಎಂದು ಒಪ್ಪಿ, ತನ್ನ ಅಧೀನವಾಗದ ಸತ್ತಾ ಮೊದಲಾದವುಗಳನ್ನು ಹೊಂದಿರುವ ಬೇರೆ ಸಾಧನಗಳನ್ನು ಈಶ್ವರನು ಅಪೇಕ್ಷೆ ಪಡುತ್ತಾನೆ ಎಂಬ ಆಶಂಕೆಯನ್ನು ಪರಿಹರಿಸಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣವು ಸಂಗತವಾಗುತ್ತದೆ.

**अत्र जन्मादिसूत्रे विवक्षितं ब्रह्मणः स्वतन्त्रसाधनान्तरनिरपेक्षकर्तृत्वं युक्तिविरुद्धमुत नेति चिन्ता ।**

ಅಧಿಕರಣದ ಸಂಶಯಪರಂಪರೆ ಹೀಗಿದೆ - ಜನ್ಮಾದ್ಯಧಿಕರಣದಲ್ಲಿ ಬ್ರಹ್ಮನು ಸ್ವತಂತ್ರಸಾಧನವನ್ನು ಅಪೇಕ್ಷೆ ಪಡದೇ ಜಗತ್ತಿಗೆ ಕರ್ತೃವಾಗಿದ್ದಾನೆಂದು ಸಮರ್ಥಿಸಲಾಯಿತು. ಈ ಪ್ರಮೇಯವು ಯುಕ್ತಿವಿರುದ್ಧವೋ, ಅಲ್ಲವೋ ?ಎಂಬುದು ಪ್ರಧಾನ ಸಂಶಯ.

**तदर्थं ''किंस्विदासीदधिष्ठानमारम्भणम्'' इत्यत्र किंशब्दः किं परिहाराध्याहारेण प्रश्नार्थः किं वा तदनध्याहारेणाक्षेपार्थ इति ।**

ಈ ಸಂಶಯದ ಪರಿಹಾರಕ್ಕಾಗಿ 'ಕಿಂಸ್ವಿದಾಸೀದಧಿಷ್ಠಾನಮ್ ಆರಂಭಣಮ್' ಎಂಬ ಶ್ರುತಿಯಲ್ಲಿರುವ 'ಕಿಂ'ಶಬ್ದವು ಪರಿಹಾರ ಭಾಗವನ್ನು ಅಧ್ಯಾಹಾರ ಮಾಡಿಕೊಂಡು ಪ್ರಶ್ನಾರ್ಥಕವೆಂದು ಹೇಳಬೇಕೋ? ಅಥವಾ ಪರಿಹಾರಭಾಗವನ್ನು ಅಧ್ಯಾಹಾರ ಮಾಡಿಕೊಳ್ಳದೇ ಆಕ್ಷೇಪಾರ್ಥವುಳ್ಳದ್ದೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''अद्भ्यस्सम्भूतः'' इत्यादिश्रुतिः किं स्वतन्त्रसाधनान्तरपरोत परतन्त्रसाधनान्तरपरेति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ 'ಅದ್ಭ್ಯಃ ಸಂಭೂತಃ' ಇತ್ಯಾದಿ ಶ್ರುತಿಯು ಮತ್ತೊಂದು ಸ್ವತಂತ್ರಸಾಧನವನ್ನು ಹೇಳುತ್ತಿದೆಯೋ? ಅಥವಾ ಮತ್ತೊಂದು ಪರತಂತ್ರಸಾಧನವನ್ನೇ ಹೇಳುತ್ತಿದೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं कर्तुः स्वतन्त्रसाधनापेक्षा किं कर्तृत्वप्रयुक्तोताशक्तिप्रयुक्तेति ।**

ಅದಕ್ಕಾಗಿ ಯಾರೇ ಒಬ್ಬ ಕರ್ತೃವು ಸ್ವತಂತ್ರಸಾಧನವನ್ನು ಅಪೇಕ್ಷೆ ಪಡುವುದಕ್ಕೆ ಕಾರಣ ಕರ್ತೃತ್ವದ ಇರುವಿಕೆಯೋ? ಅಥವಾ ತನ್ನಲ್ಲಿ ಶಕ್ತಿಯಿಲ್ಲದ ಕಾರಣ ಮತ್ತೊಂದು ಸ್ವತಂತ್ರಸಾಧನೆಯನ್ನು ಅಪೇಕ್ಷೆ ಪಡುತ್ತಾನೆಂದೋ? ಎಂಬ ಸಂಶಯವು ಪರಿಹಾರವಾಗಬೇಕು.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**तदनन्यत्वं ।। टीकायामस्फुटत्वात्सुधोक्तमेवाधिकरणोपाधिं पूर्वापरापौनरुक्तयायाह – अत्रेति ।।**

'ತದನನ್ಯತ್ವಂ ಆರಂಭಣಶಬ್ದಾದಿಭ್ಯಃ' ಎಂಬುದಾಗಿ ಆರಂಭಣಾಧಿಕರಣವು ಪ್ರಾರಂಭವಾಗುತ್ತಿದೆ. ಆರಂಭಣಾಧಿಕರಣದ ಉಪಾಧಿಯು ಟೀಕೆಯಲ್ಲಿ ಸ್ಪಷ್ಟವಾಗಿ ಕಾಣಿಸುವುದಿಲ್ಲ. ನ್ಯಾಯಸುಧೆಯಲ್ಲಿ ಅಧಿಕರಣದ ಉಪಾಧಿಯು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಗ್ರಂಥಕಾರರು 'ಅತ್ರ' ಇತ್ಯಾದಿ ವಾಕ್ಯದಿಂದ ನ್ಯಾಯಸುಧೆಯಲ್ಲಿ ಹೇಳಿದ ಅಧಿಕರಣ ಉಪಾಧಿಯನ್ನು ವಿವರಿಸುತ್ತಿದ್ದಾರೆ. ಇದರಿಂದ ಹಿಂದಿನ ಅಧಿಕರಣಗಳಿಂದ ಪುನರುಕ್ತಿದೋಷಗಳನ್ನೂ ಕೂಡ ಪರಿಹರಿಸಿದಂತಾಗುತ್ತದೆ.

**प्रकाशः** – ननु सुधायां महदादिसृष्टिः कर्तृभिन्नस्वतन्त्रकारणसापेक्षा । सृष्टित्वात्पटसृष्टिवत् । महदादिकं कर्तृव्यतिरिक्तकारणायत्तोत्पत्त्यादिकम् । कार्यत्वात् घटवदित्यादिना प्रयोगभेदोक्तया तेनैव बहुत्वमिति भाति ।

ನ್ಯಾಯಸುಧೆಯಲ್ಲಿ ಯುಕ್ತಿಯಲ್ಲಿರುವ ಬಹುತ್ವವೆಂದರೆ ಪ್ರಯೋಗಬಾಹುಲ್ಯವೆಂದು ವಿವಕ್ಷಿಸಿದಂತೆ ಕಾಣಿಸುತ್ತಿದೆ. 'ಮಹದಾದಿಸೃಷ್ಟಿಃ ಕರ್ತೃಭಿನ್ನಸ್ವತಂತ್ರಕಾರಣಸಾಪೇಕ್ಷಾ । ಸೃಷ್ಟಿತ್ವಾತ್ ಪಟಸೃಷ್ಟಿವತ್' ಪಟಸೃಷ್ಟಿಯು ಸೃಷ್ಟಿಯಾದ್ದರಿಂದ ಕರ್ತೃಭಿನ್ನವಾದ ಸ್ವತಂತ್ರಕಾರಣವನ್ನು ಅಪೇಕ್ಷಿಸಿದೆ. ಅದರಂತೆ ಮಹದಾದಿ ಸೃಷ್ಟಿಯೂ ಕೂಡ ಸೃಷ್ಟಿಯಾದುದರಿಂದ ಕರ್ತೃಭಿನ್ನವಾದ ಸ್ವತಂತ್ರಕಾರಣವನ್ನು ಅಪೇಕ್ಷಿಸಬೇಕು ಎಂದು ಅನುಮಾನದಿಂದ ಪ್ರಯೋಗ ಮಾಡಿ ಇದೇ ವಿಷಯವನ್ನು ಮತ್ತೊಂದು ಬಗೆಯಲ್ಲಿ ಅನುಮಾನ ಮಾಡಿದ್ದಾರೆ. ಮಹದಾದಿಕಂ ಕರ್ತೃವ್ಯತಿರಿಕ್ತರಣಾಯತ್ತೋತ್ಪತ್ತ್ಯಾದಿಕಮ್ । ಕಾರ್ಯತ್ವಾತ್ ಘಟವತ್' ಘಟವು ಕಾರ್ಯವಾದ್ದರಿಂದ ಕರ್ತೃವ್ಯತಿರಿಕ್ತವಾದ ಕಾರಣದ ಅಧೀನವಾದ ಉತ್ಪತ್ತಿಯುಳ್ಳದ್ದಾಗಿದೆ. ಅದರಂತೆ ಮಹದಾದಿಗಳೂ ಕೂಡ ಕಾರ್ಯವಾಗಿರುವುದರಿಂದ ಕರ್ತೃವಿಗಿಂತ ಭಿನ್ನವಾದ ಕಾರಣದ ಅಧೀನವಾಗಿ ಉತ್ಪತ್ತ್ಯಾದಿಗಳನ್ನು ಹೊಂದಿದೆ. ಹೀಗೆ ಅನುಮಾನ ಮಾಡಿದಾಗಲೂ ಹಿಂದಿನ ಅನುಮಾನದ ವಿಷಯವೇ ಸಿದ್ಧವಾಗುತ್ತದೆ. ಪ್ರಮೇಯದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ. ಪ್ರಯೋಗದಲ್ಲಷ್ಟೇ ವ್ಯತ್ಯಾಸವಿದೆ. ಇಂಥ ಅನೇಕ ಅನುಮಾನಗಳ ವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸುತ್ತಾದ್ದಾರೆಂದು ನ್ಯಾಯಸುಧೆಯ ವಾಕ್ಯಗಳನ್ನು ಗಮನಿಸಿದಾಗ ಆಪಾತತಃ ಭಾಸವಾಗುತ್ತದೆ.

**प्रकाशः – तथात्वे पूर्वत्रापि ईशो न सर्वकर्ता । असर्वकर्तृजीवाभिन्नत्वात् । सर्वकर्तृत्वं वा नेशनिष्ठम् । असर्वकर्तृजीवाभिन्नेऽयुक्तत्वादित्यादिरूपेण पूर्वत्रापि प्रयोगभेदसम्पादनसौलभ्यादित्यत आह – तत्र च बहुत्वमिति ।।**

ನ್ಯಾಯಸುಧೆಯ ಮಾತುಗಳಂತೆ ಪ್ರಯೋಗಭೇದದಿಂದಲೇ ಬಹುಯುಕ್ತಿವಿರೋಧವು ಪೂರ್ವಪಕ್ಷದ ಯುಕ್ತಿಯಾದರೆ ಹಿಂದಿನ ಅಧಿಕರಣಗಳಲ್ಲಿಯೂ ಹೀಗೆಯೇ ಹೇಳಬಹುದು. 'ಈಶಃ ನ ಸರ್ವಕರ್ತಾ ಅಸರ್ವಕರ್ತೃಜೀವಾಭಿನ್ನತ್ವಾತ್' ಅಸರ್ವಕರ್ತೃವಾದ ಜೀವನಿಂದ ಅಭಿನ್ನನಾದ ಕಾರಣ ಈಶ್ವರನು ಸರ್ವಕರ್ತೃವಲ್ಲ ಎಂಬ ಅನುಮಾನದಿಂದ ಅಸರ್ವಕರ್ತೃತ್ವವು ಸಿದ್ಧವಾಗುತ್ತದೆ. ಇದೇ ಅಸರ್ವಕರ್ತೃತ್ವವನ್ನು ಮತ್ತೊಂದು ಬಗೆಯಿಂದಲೂ ಅನುಮಾನದಿಂದ ಸಾಧನೆ ಮಾಡಬಹುದು. 'ಸರ್ವಕರ್ತೃತ್ವಂ ವಾ ನೇಶನಿಷ್ಠಮ್ । ಅಸರ್ವಕರ್ತೃಜೀವಾಭಿನ್ನೇಽಯುಕ್ತತ್ವಾತ್' ಅಸರ್ವಕರ್ತೃವಾದ ಜೀವಾಭಿನ್ನನಲ್ಲಿ ಅಯುಕ್ತವಾದ್ದರಿಂದ ಈಶ್ವರನಲ್ಲಿ ಸರ್ವಕರ್ತೃತ್ವವು ಇರುವುದಿಲ್ಲ. ಹೀಗೆ ಹಿಂದಿನ ಅಧಿಕರಣದಲ್ಲಿಯೂ ಪ್ರಯೋಗಭೇದವನ್ನು ಸಂಪಾದನೆ ಮಾಡಬಹುದಲ್ಲವೇ? ಆದ್ದರಿಂದ ಬಹುಯುಕ್ತಿವಿರೋಧ ಎಂಬ ಪೂರ್ವಪಕ್ಷಯುಕ್ತಿಗೆ ಅತಿಪ್ರಸಂಗದೋಷ ಬರುತ್ತದೆ. ಈ ಆಕ್ಷೇಪವನ್ನು ಪರಿಹರಿಸಲು ಗ್ರಂಥದಲ್ಲಿ 'ತತ್ರ ಚ ಬಹುತ್ವಮ್' ಇತ್ಯಾದಿ ವಾಕ್ಯಗಳು ಹೊರಟಿವೆ.

**प्रकाशः – ''कर्त्रनधीनसत्ताशक्त्यादिमत्कारणान्तरसापेक्षा खलु पटादिसृष्टिर्दृष्टा'' इति सुधावाक्यं हृदि कृत्वाह – किन्तु महदादीति ।। प्रयोगभेदप्रदर्शनं तु शिष्यव्युत्पादनार्थमिति भावः ।।**

ನ್ಯಾಯಸುಧೆಯಲ್ಲಿ 'ಕರ್ತ್ರನಧೀನಸತ್ತಾಶಕ್ತ್ಯಾದಿಮತ್ಕಾರಣಾಂತರಸಾಪೇಕ್ಷಾ ಖಲು ಪಟಾದಿಸೃಷ್ಟಿರ್ದೃಷ್ಟಾ' ಎಂಬ ವಾಕ್ಯವೂ ಕೂಡ ಶ್ರುತವಾಗಿದೆ. ಇಲ್ಲಿ ಆದಿಪದದಿಂದ 'ಕಾರಣಾಂತಸಾಪೇಕ್ಷಾ' ಎಂಬ ಮಾತಿನಿಂದ ಬೇರೆ ಬೇರೆ ಪ್ರಮೇಯಗಳನ್ನು ಹೇಳುವ ಅನೇಕ ಅನುಮಾನಗಳನ್ನು ವಿವಕ್ಷಿಸಬೇಕೆಂದು ಸ್ಪಷ್ಟವಾಗಿ ಹೇಳಿರುತ್ತಾರೆ. ಆದ್ದರಿಂದ ಪ್ರಮೇಯದಲ್ಲಿ ಭೇದವಿಲ್ಲದೆ ಪ್ರಯೋಗದಲ್ಲಿ ಮಾತ್ರ ಭೇದವಿರುವಿಕೆಯು ಪೂರ್ವಪಕ್ಷಿಯುಕ್ತಿಯಲ್ಲವೆಂದು ಸ್ಪಷ್ಟವಾಗುತ್ತದೆ. ನ್ಯಾಯಸುಧೆಯ ಈ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು 'ಕಿಂತು ಮಹದಾದಿ' ಇತ್ಯಾದಿ ವಾಕ್ಯವು ಹೊರಟಿದೆ. ಹಾಗಾದರೆ ಒಂದೇ ಪ್ರಮೇಯದಲ್ಲಿ ಅನೇಕ ಪ್ರಯೋಗಗಳನ್ನೇಕೆ ತೋರಿಸಿದ್ದಾರೆ ? ಎಂದರೆ ಅದು ಕೇವಲ ಶಿಷ್ಯರಿಗೆ ವ್ಯುತ್ಪತ್ತಿ ಬರಬೇಕೆಂಬ ಉದ್ದೇಶದಿಂದ ಹೊರತು, ಅದನ್ನೇ ಉಪಾಧಿಯನ್ನಾಗಿ ತಿಳಿಯಬಾರದು.

**प्रकाशः – एवमिति ।। स्थितिः कर्त्रनधीनसत्ताशक्त्यादिमदधिष्ठानसापेक्षा । एवं संहतिनियमनादयोपीत्यर्थः ।।**

'ಏವಮ್' ಎಂಬುದರ ಅಭಿಪ್ರಾಯ ಹೀಗಿದೆ - ಸೃಷ್ಟಿಯನ್ನು ಪಕ್ಷವನ್ನಾಗಿ ಮಾಡಿದಂತೆ ಸ್ಥಿತಿಯನ್ನೂ ಕೂಡ ಪಕ್ಷವನ್ನಾಗಿ ಮಾಡಿ, 'ಸ್ಥಿತಿಃ ಕರ್ತ್ರನಧೀನಸತ್ತಾಶಕ್ತ್ಯಾದಿಮದಧಿಷ್ಠಾನಸಾಪೇಕ್ಷಾ ಸ್ಥಿತಿತ್ವಾತ್' ಇತ್ಯಾದಿ

ಅನುಮಾನವನ್ನು ತಿಳಿಯಬೇಕು. ಇದೇ ರೀತಿಯಲ್ಲಿ ಸಂಹಾರ, ನಿಯಮನ ಮೊದಲಾದವುಗಳನ್ನೂ ಕೂಡ ಪಕ್ಷವನ್ನಾಗಿ ಮಾಡಿ, ಅನುಮಾನಗಳ ಸ್ವರೂಪವನ್ನು ತಿಳಿಯಬೇಕು.

**प्रकाशः – तदुपेत्येति ।।** एतेन ''असदिति चेत्'' इति प्रागपि प्रलये सर्वासत्त्वमाशङ्कितमिहापि ''असद्व्यपदेशात्'' इति तदाशङ्क्यत इति पौनरुक्त्यं निरस्तं बोध्यम् ।।

ಹೀಗೆ ಪ್ರಮೇಯದಲ್ಲಿ ವ್ಯತ್ಯಾಸವಿದೆಯೆಂದು ಹೇಳಿದ್ದರಿಂದ 'ಅಸದಿತಿ ಚೇತ್' ಎಂಬ ಹಿಂದಿನ ಅಸದಧಿಕರಣದ ಸೂತ್ರದಲ್ಲಿ ಯಾವ ವಿಷಯವು ಪ್ರತಿಪಾದಿತವಾಗಿದೆಯೋ, ಅದನ್ನೇ ಈ ಅಧಿಕರಣದಲ್ಲಿರುವ 'ಅಸದ್ವ್ಯಪದೇಶಾತ್' ಎಂಬ ಸೂತ್ರವೂ ಕೂಡ ಪ್ರತಿಪಾದನೆ ಮಾಡುತ್ತಿದೆ ಎಂಬ ಆಶಂಕೆಯನ್ನು ಪರಿಹರಿಸಿದಂತಾಯಿತು. ಹಿಂದಿನ ಅಸದಧಿಕರಣದಲ್ಲಿ ಪ್ರಳಯಕಾಲದಲ್ಲಿ ಯಾವ ಪದಾರ್ಥವೂ ಕೂಡ ಇರುವುದಿಲ್ಲ. ಪ್ರಾಗಭಾವವಷ್ಟೇ ಇರುತ್ತದೆ. ಅಂಥ ಪ್ರಾಗಭಾವವನ್ನೇ ಜಗತ್ತಿಗೆ ಕಾರಣವೆಂದು ಹೇಳಬೇಕೆಂದು ಸಮರ್ಥಿಸಲಾಯಿತು. ಈ ಅಧಿಕರಣದ 'ಅಸದ್ವ್ಯಪದೇಶಾತ್' ಎಂಬ ಸೂತ್ರವೂ ಕೂಡ ಅದೇ ಆಶಂಕೆಯನ್ನು ಮಾಡಿ, ಉತ್ತರಿಸುತ್ತಿದೆ. ಆದ್ದರಿಂದ ಪುನರುಕ್ತಿ ಬರುತ್ತದಲ್ಲವೇ? ಎಂಬ ಶಂಕೆಗೆ ಈಗ ಆಸ್ಪದವಿಲ್ಲ. ಏಕೆಂದರೆ ಹಿಂದಿನ ಅಸದಧಿಕರಣದಲ್ಲಿ ಬ್ರಹ್ಮನನ್ನು ಒಪ್ಪದೇ ಪ್ರಾಗಭಾವವನ್ನಷ್ಟೇ ಒಪ್ಪಿ, ಜಗತ್‌ಕಾರಣತ್ವವನ್ನು ಸಮರ್ಥಿಸಲಾಗಿತ್ತು. ಆದರೆ ಈ ಅಧಿಕರಣದಲ್ಲಿ ಬ್ರಹ್ಮನನ್ನು ಒಪ್ಪಿ, ಇರುವಂಥ ಬ್ರಹ್ಮನು ಸ್ವತಂತ್ರಕಾರಣನಲ್ಲ ಎಂದು ಸಮರ್ಥಿಸುವ ಮೂಲಕ ಅಸತ್ವವನ್ನು ಆಕ್ಷೇಪಿಸಲಾಗಿದೆ. ಆದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲ.

**प्रकाशः – सङ्गतिरिति ।।** सामान्यविशेषविचाररूपेण ''अत्ता गुहां'' इत्यत्रेवावसरसङ्गतिरित्यर्थः ।

ಸಾಮಾನ್ಯವಿಶೇಷವಿಚಾರೂಪವಾದ ಸಂಗತಿಯನ್ನು ಇಲ್ಲಿ ತಿಳಿಯಬೇಕು. ಉದಾಹರಣೆ ಅತ್ತ್ರಧಿಕರಣದಲ್ಲಿ ಸರ್ವಾತ್ತೃತ್ವವನ್ನು ಪರಮಾತ್ಮನಲ್ಲಿ ಸಮರ್ಥಿಸಿದ ಮೇಲೆ ಮುಂದಿನ ಗುಹಾಧಿಕರಣದಲ್ಲಿ ಕರ್ಮಫಲಭೋಕ್ತೃತ್ವ ಎಂಬ ವಿಶೇಷವಿಚಾರವನ್ನು ಮಾಡಲಾಗಿತ್ತು. ಸಾಮಾನ್ಯವಿಚಾರವನ್ನು ಮಾಡಿದ ಮೇಲಷ್ಟೇ ವಿಶೇಷವಿಚಾರವು ಸಂಗತವಾಗುತ್ತದೆ. ಅದೇ ರೀತಿಯಾಗಿ ಇಲ್ಲಿಯೂ ಕೂಡ ಜನ್ಮಾಧಿಕರಣದಲ್ಲಿ ವಿಶ್ವಕರ್ತೃತ್ವವೇ ಇಲ್ಲವೆಂದು ಆಕ್ಷೇಪ ಮಾಡಿ ಉತ್ತರಿಸಲಾಗಿತ್ತು. ಈ ಅಧಿಕರಣದಲ್ಲಿ ವಿಶ್ವಕರ್ತೃತ್ವವನ್ನು ಪರಮಾತ್ಮನಲ್ಲಿ ಒಪ್ಪಿ, ಅವನು ಅಪೇಕ್ಷಿಸುವ ಸಾಧನೆಗಳೂ ಕೂಡ ಸ್ವತಂತ್ರವಾಗಿವೆ ಎಂದು ಆಕ್ಷೇಪಿಸಲಾಗಿದೆ. ಸಾಮಾನ್ಯ ವಿಚಾರವನ್ನು ಮಾಡಿದ ಮೇಲೆ ವಿಶೇಷವಿಚಾರವು ಪ್ರಸಕ್ತವಾಗುತ್ತಿರುವುದರಿಂದ ಅವಸರಸಂಗತಿಯಿರುತ್ತದೆಂದು ತಿಳಿಯಬೇಕು.

**प्रकाशः** –''तज्जगत्सृष्ट्यादिकं विषय'' इत्यादिटीकां व्यनक्ति ।। **अत्र जन्मादीति ।। युक्तीति ।।** प्रागुदाहृतयुक्तीत्यर्थः । सौत्रारम्भणशब्देत्यतदंशसूचितां चिन्तामाह – **किंस्विदिति ।।** सत्वाचावसरस्येति सूत्रसूचितामाह – **अङ्गयः इति।।**

'ತಜ್ಜಗತ್ಸ್ರಷ್ಟ್ಯಾದಿಕಂ ವಿಷಯಃ' ಇತ್ಯಾದಿ ಟೀಕೆಯನ್ನು 'ಅತ್ರ ಜನ್ಮಾದಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಯುಕ್ತಿ' ಎಂದರೆ ಹಿಂದೆ ಉದಾಹರಿಸಲ್ಪಟ್ಟ ಯುಕ್ತಿ ಎಂದರ್ಥ. ಸೂತ್ರದಲ್ಲಿರುವ ಆರಂಭಣಶಬ್ದದಿಂದ ಸೂಚಿತವಾದ ಸಂಶಯವನ್ನು 'ಕಿಂಸ್ವಿದಿತಿ' ಇತ್ಯಾದಿಯಾಗಿ ತೋರಿಸಿದ್ದಾರೆ. ಸತ್ವಾಚ್ಚಾವರಸ್ಯ' ಎಂಬ ಸೂತ್ರದಿಂದ ಸೂಚಿತವಾದ ಸಂಶಯಕೋಟಿಯನ್ನು 'ಅದ್ಭ್ಯಃ' ಇತ್ಯಾದಿಯಾಗಿ ತೋರಿಸಿದ್ದಾರೆ.

**प्रकाशः** – यद्यायःकल्पस्तदा ईश्वरस्य कर्तृत्वेन स्वतन्त्रसाधनस्यावश्यकत्वेन ''अद्भ्य''इत्यादेस्तत्परत्वावश्यंभावात्तदनुरोधेन ''किंस्वित्'' इत्यस्य स्वतन्त्रसाधनाक्षेपायोगेन प्रश्नार्थत्वात्तादृशकर्तृत्वं युक्तिविरुद्धम् । द्वितीये तु नेति व्यक्तमिति भावः । सूत्रान्तरसूचिता तूहनीयेति भावः ।

ಪೂರ್ವಪಕ್ಷದ ಫಲ - ಈ ಸಂಶಯಕೋಟಿಗಳಲ್ಲಿ ಮೊದಲನೆಯ ಪಕ್ಷಗಳನ್ನು ಒಪ್ಪಿದರೆ ಈಶ್ವರನು ಜಗತ್ಕರ್ತೃವಾಗಿದ್ದರೂ ಸ್ವತಂತ್ರವಾದ ಬೇರೆ ಸಾಧನೆಗಳನ್ನು ಅಪೇಕ್ಷಿಸಬೇಕಾಗುತ್ತದೆ. ಆವಾಗ 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯು ಬೇರೆ ಸ್ವತಂತ್ರಸಾಧನೆಯನ್ನು ಹೇಳುತ್ತದೆಂದು ಒಪ್ಪಬೇಕಾಗುತ್ತದೆ. ಅದಕ್ಕನುಸಾರಿಯಾಗಿ 'ಕಿಂಸ್ವಿದಾಸೀತ್' ಎಂಬ ಶ್ರುತಿಯಲ್ಲಿರುವ 'ಕಿಂಸ್ವಿತ್' ಎಂಬ ಪದವು ಪರಿಹಾರಭಾಗವನ್ನು ಅಧ್ಯಾಹಾರ ಮಾಡುವ ಮೂಲಕ ಪ್ರಶ್ನಾರ್ಥಕವೇ ಆಗುತ್ತದೆ. ಆದ್ದರಿಂದ ಜನ್ಮಾಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಸ್ವತಂತ್ರಸಾಧನವನ್ನು ಅಪೇಕ್ಷೆ ಪಡದ ಈಶ್ವರನ ಕರ್ತೃತ್ವವು ಯುಕ್ತಿವಿರುದ್ಧವಾಗುತ್ತದೆ.

ಸಿದ್ಧಾಂತದ ಫಲ - ಯಾರೇ ಒಬ್ಬ ಕರ್ತೃವು ಸ್ವತಂತ್ರಸಾಧನೆಯನ್ನು ಏಕೆ ಅಪೇಕ್ಷಿಸುತ್ತಾನೆಂದರೆ ತನ್ನಲ್ಲಿ ಶಕ್ತಿ ಇಲ್ಲದಾಗ ಮಾತ್ರ. ಈಶ್ವರನು ಸರ್ವಶಕ್ತನಾದ್ದರಿಂದ ಮತ್ತೊಂದು ಸ್ವತಂತ್ರಸಾಧನೆಯನ್ನು ಅಪೇಕ್ಷಿಸುವುದಿಲ್ಲ. ಆದ್ದರಿಂದ 'ಅದ್ಭ್ಯಃ ಸಂಭೂತಃ' ಇತ್ಯಾದಿ ಶ್ರುತಿಯು ಈಶ್ವರನ ಅಧೀನವಾದ ನೀರು ಮೊದಲಾದ ಸಾಧನೆಗಳನ್ನೇ ಹೇಳುತ್ತಿದೆ. ಆದ್ದರಿಂದಲೇ 'ಕಿಂಸ್ವಿದಾಸೀತ್' ಎಂಬ ಶ್ರುತಿಯಲ್ಲಿರುವ 'ಕಿಂ' ಶಬ್ದವು ಆಕ್ಷೇಪಾರ್ಥದಲ್ಲಿ ಪ್ರಯುಕ್ತವಾಗಿದೆಯೆಂದೇ ಸಿದ್ಧವಾಗುತ್ತದೆ ಹೊರತು, ಪ್ರಶ್ನಾರ್ಥದಲ್ಲಿ ಅಲ್ಲ. ಹೀಗಿರುವಾಗ ಜನ್ಮಾದ್ಯಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಮತ್ತೊಂದು ಸ್ವತಂತ್ರಸಾಧನೆಯನ್ನು ಅಪೇಕ್ಷೇ ಪಡದ ನಿರಪೇಕ್ಷಕರ್ತೃತ್ವವು ಯಾವುದೇ ಯುಕ್ತಿಗಳ ವಿರೋಧವಿಲ್ಲದೆ ಈಶ್ವರನಲ್ಲಿ ಸಿದ್ಧವಾಗುತ್ತದೆ.




ಆರಂಭಣಾಧಿಕರಣದಲ್ಲಿ 'ಬಹುಯುಕ್ತಿವಿರೋಧ' ಎಂಬುದು ಪೂರ್ವಪಕ್ಷಯುಕ್ತಿ. ಅನೇಕ ಬಗೆಯ ಯುಕ್ತಿಗಳ ವಿರೋಧವನ್ನು ಈ ಅಧಿಕರಣದಲ್ಲಿ ಸಮರ್ಥಿಸಲಾಗಿದೆ. ಬಾಹುಲ್ಯವಿರುವ ಪ್ರಯುಕ್ತವೇ ಯುಕ್ತಿಗಳು ಪ್ರಬಲವಾಗುತ್ತವೆ. ಹೊರತು ಶ್ರುತಿಗಳ ಬೆಂಬಲವು ಈ ಅಧಿಕರಣದಲ್ಲಿ ಅನಾವಶ್ಯಕ. ಯುಕ್ತಿಗಳು ಬೇರೆ ಬೇರೆ

ಪ್ರಮೇಯವನ್ನು ಸಮರ್ಥಿಸುವ ಮೂಲಕ ಬಹುಬಗೆಯಾಗಿವೆ ಎಂದು ತಿಳಿಯಬೇಕು. ಹೊರತು, ಒಂದೇ ಪ್ರಮೇಯವನ್ನು ಸಮರ್ಥಿಸುವ ಮೂಲಕ ಬಹುಬಗೆಯಾಗಿವೆ ಎಂದು ತಿಳಿಯಬಾರದು.

ಹಿಂದಿನ ಭೋಕ್ತ್ರಧಿಕರಣದಲ್ಲಿ ಬ್ರಹ್ಮನಲ್ಲಿ ವಿಶ್ವಕರ್ತೃತ್ವವೇ ಇಲ್ಲವೆಂದು ಆಕ್ಷೇಪ ಮಾಡಿ ಉತ್ತರಿಸಲಾಯಿತು. ಈ ಅಧಿಕರಣದಲ್ಲಿ ವಿಶ್ವಕರ್ತೃತ್ವವನ್ನೊಪ್ಪಿ ಜಗತ್ತನ್ನು ನಿರ್ಮಾಣ ಮಾಡಲು ಬ್ರಹ್ಮನು ಯಾವ ಸಾಧನೆಗಳನ್ನು ಉಪಯೋಗಿಸಿಕೊಳ್ಳುತ್ತಾನೋ, ಅಂಥ ಸಾಧನೆಗಳೆಲ್ಲವೂ ಸ್ವತಂತ್ರವಾಗಿವೆ ಎಂಬ ಆಕ್ಷೇಪವನ್ನು ಪರಿಹರಿಸಲಾಗಿದೆ. ಸಾಮಾನ್ಯವಾಗಿ ವಿಚಾರ ಮಾಡಿದ ಮೇಲೆ ವಿಶೇಷವಿಚಾರವು ಪ್ರಸಕ್ತವಾಗುತ್ತದೆ. ಅತ್ತೃತ್ವಾಧಿಕರಣದಲ್ಲಿ ಸಾಮಾನ್ಯವಾಗಿ ಬ್ರಹ್ಮನಲ್ಲಿ ಅತ್ತೃತ್ವವೆಂಬ ಗುಣವನ್ನು ಸಮರ್ಥನೆ ಮಾಡಿದ ಮೇಲೆ ಫಲಭೋಕ್ತೃತ್ವವೆಂಬ ವಿಶೇಷವಿಚಾರವನ್ನು ಗುಹಾಧಿಕರಣದಲ್ಲಿ ಮಾಡಿದಂತೆ.

ಪೂರ್ವಪಕ್ಷದ ಫಲ - ಈ ಸಂಶಯಕೋಟಿಗಳಲ್ಲಿ ಮೊದಲನೆಯ ಪಕ್ಷಗಳನ್ನು ಒಪ್ಪಿದರೆ ಈಶ್ವರನು ಜಗತ್ ಕರ್ತೃವಾಗಿದ್ದರೂ ಸ್ವತಂತ್ರವಾದ ಬೇರೆ ಸಾಧನೆಗಳನ್ನು ಅಪೇಕ್ಷಿಸಬೇಕಾಗುತ್ತದೆ. ಆವಾಗ 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯು ಬೇರೆ ಸ್ವತಂತ್ರಸಾಧನೆಯನ್ನು ಹೇಳುತ್ತದೆಂದು ಒಪ್ಪಬೇಕಾಗುತ್ತದೆ. ಅದಕ್ಕನುಸಾರಿಯಾಗಿ 'ಕಿಂಸ್ವಿದಾಸೀತ್' ಎಂಬ ಶ್ರುತಿಯಲ್ಲಿರುವ 'ಕಿಂಸ್ವಿತ್' ಎಂಬ ಪದವು ಪರಿಹಾರಭಾಗವನ್ನು ಅಧ್ಯಾಹಾರ ಮಾಡುವ ಮೂಲಕ ಪ್ರಶ್ನಾರ್ಥಕವೇ ಆಗುತ್ತದೆ. ಆದ್ದರಿಂದ ಜನ್ಮಾದ್ಯಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಸ್ವತಂತ್ರಸಾಧನವನ್ನು ಅಪೇಕ್ಷೆ ಪಡದ ಈಶ್ವರನ ಕರ್ತೃತ್ವವು ಯುಕ್ತಿವಿರುದ್ಧವಾಗುತ್ತದೆ.

ಸಿದ್ಧಾಂತದ ಫಲ - ಯಾರೇ ಒಬ್ಬ ಕರ್ತೃವು ಸ್ವತಂತ್ರಸಾಧನೆಯನ್ನು ಏಕೆ ಅಪೇಕ್ಷಿಸುತ್ತಾನೆಂದರೆ ತನ್ನಲ್ಲಿ ಶಕ್ತಿ ಇಲ್ಲದಾಗ ಮಾತ್ರ. ಈಶ್ವರನು ಸರ್ವಶಕ್ತನಾದ್ದರಿಂದ ಮತ್ತೊಂದು ಸ್ವತಂತ್ರ ಸಾಧನೆಯನ್ನು ಅಪೇಕ್ಷಿಸುವುದಿಲ್ಲ. ಆದ್ದರಿಂದ 'ಅದ್ಭ್ಯಃ ಸಂಭೂತಃ' ಇತ್ಯಾದಿ ಶ್ರುತಿಯು ಈಶ್ವರನ ಅಧೀನವಾದ ನೀರು ಮೊದಲಾದ ಸಾಧನೆಗಳನ್ನೇ ಹೇಳುತ್ತಿದೆ. ಆದ್ದರಿಂದಲೇ 'ಕಿಂಸ್ವಿದಾಸೀತ್' ಎಂಬ ಶ್ರುತಿಯಲ್ಲಿರುವ 'ಕಿಂ' ಶಬ್ದವು ಆಕ್ಷೇಪಾರ್ಥದಲ್ಲಿ ಪ್ರಯುಕ್ತವಾಗಿದೆಯೆಂದೇ ಸಿದ್ಧವಾಗುತ್ತದೆ ಹೊರತು, ಪ್ರಶ್ನಾರ್ಥದಲ್ಲಿ ಅಲ್ಲ. ಹೀಗಿರುವಾಗ ಜನ್ಮಾದ್ಯಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಮತ್ತೊಂದು ಸ್ವತಂತ್ರಸಾಧನೆಯನ್ನು ಅಪೇಕ್ಷೆ ಪಡದ ನಿರಪೇಕ್ಷಕರ್ತೃತ್ವವು ಯಾವುದೇ ಯುಕ್ತಿಗಳ ವಿರೋಧವಿಲ್ಲದೆ ಈಶ್ವರನಲ್ಲಿ ಸಿದ್ಧವಾಗುತ್ತದೆ.

## ಪೂರ್ವಪಕ್ಷ

### ಈಶ್ವರನಂತೆ ಕಾಲ, ಕರ್ಮ, ಪ್ರಕೃತಿಗಳೂ ಕೂಡ ಸ್ವತಂತ್ರ

## तात्पर्यचन्द्रिका

**पूर्वपक्षमाह ।। स्वतन्त्रेति ।। अयं भावः । उक्तानुमानैरीशोऽपि स्वतन्त्रसाधनापेक्षः । यदि चेशत्वात्तदनपेक्षा तर्हि तत एव स्वाधीनसत्ताकमप्यान्तरं ज्ञानेच्छादिकं बाह्यं च कालकर्मप्रधानादिसाधनं नापेक्षेत ।**

ಟೀಕೆಯಲ್ಲಿ ಸ್ವತಂತ್ರ ಇತ್ಯಾದಿ ವಾಕ್ಯದಿಂದ ಪೂರ್ವಪಕ್ಷವನ್ನು ಹೇಳುತ್ತಿದ್ದಾರೆ. ಪೂರ್ವಪಕ್ಷದ ಅಭಿಪ್ರಾಯ ಹೀಗಿದೆ - ಹಿಂದೆ ಪ್ರಯೋಗಿಸಿದ ಅನುಮಾನಗಳಿಂದ ಈಶ್ವರನೂ ಕೂಡ ಸೃಷ್ಟಿಯನ್ನು ಮಾಡಲು ಸ್ವತಂತ್ರಸಾಧನಗಳನ್ನು ಅಪೇಕ್ಷಿಸುತ್ತಾನೆ. ಒಂದುವೇಳೆ ಎಲ್ಲರಿಗೂ ನಿಯಾಮಕನಾದ್ದರಿಂದ ಈಶ್ವರನು ಮತ್ತೊಂದು ಸ್ವತಂತ್ರಸಾಧನೆಗಳನ್ನು ಅಪೇಕ್ಷಿಸುವುದಿಲ್ಲ ಎನ್ನುವುದಾದರೆ ತನ್ನ ಅಧೀನವಾಗಿ ಸತ್ತಾಪ್ರವೃತ್ತಿ ಮೊದಲಾದವುಗಳನ್ನು ಹೊಂದಿರುವ ಆಂತರಿಕವಾದ ಜ್ಞಾನೇಚ್ಛೆಗಳನ್ನೂ ಕೂಡ ಅಪೇಕ್ಷಿಸಬಾರದು. ಬಾಹ್ಯವಾದ ಕಾಲ, ಕರ್ಮ, ಪ್ರಕೃತಿ ಮೊದಲಾದ ಸಾಧನೆಗಳನ್ನೂ ಕೂಡ ಅಪೇಕ್ಷಿಸಬಾರದು.

**''किं स्विदासीत्'' इति वाक्यं तु ''अद्भ्यः सम्भूत'' इत्यादिभिः स्वतन्त्रसाधनोक्तेस्तदविरोधाय परिहाराध्याहारेण प्रश्नो वाऽस्मदादेरिव सर्गानन्तरभाविसाधनं नेत्येवंपरं वा ।**

'ಕಿಂ ಸ್ವಿದಾಸೀತ್' ಎಂಬ ಶ್ರುತಿವಾಕ್ಯವೂ ಕೂಡ ಪ್ರಶ್ನೆಯನ್ನೇ ಮಾಡುತ್ತಿದೆ. ಏಕೆಂದರೆ 'ಅದ್ಭ್ಯಃ ಸಂಭೂತ' ಎಂಬ ಶ್ರುತಿಯು ಸ್ವತಂತ್ರವಾಗಿ ನೀರು ಮೊದಲಾದವುಗಳಿಗೆ ಕಾರಣತ್ವವನ್ನು ಹೇಳುತ್ತಿದೆ. ಈ ಶ್ರುತಿಯ ವಿರೋಧವು ಬಾರದಿರಲು 'ಕಿಂ ಸ್ವಿದಾಸೀತ್' ಎಂಬ ಶ್ರುತಿವಾಕ್ಯದಲ್ಲಿ ಉತ್ತರ ನೀಡುವ ವಾಕ್ಯವನ್ನು ಅಧ್ಯಾಹಾರ ಮಾಡುವ ಮೂಲಕ ಪ್ರಶ್ನೆಯನ್ನೇ ಮಾಡಬೇಕು. ಅಥವಾ ನಮ್ಮಂತೆ ಈಶ್ವರನು ಸೃಷ್ಟಿಯ ಅನಂತರದಲ್ಲಿರುವ ಪರಿಕರಗಳನ್ನು ಹೊದಿರುವುದಿಲ್ಲ ಎಂದೂ ಕೂಡ ಅರ್ಥವನ್ನು ಮಾಡಬಹುದು. (ನಾವು ಯಾವ ಪರಿಕರಗಳಿಂದ ಘಟ ಮೊದಲಾದ ಪದಾರ್ಥಗಳನ್ನು ಸೃಷ್ಟಿ ಮಾಡುತ್ತೇವೋ, ಅಂಥ ಪರಿಕರಗಳು ಸೃಷ್ಟಿಯ ಆರಂಭದಲ್ಲಿ ಈಶ್ವರನಿಗೆ ಇರುತ್ತದೇನು ಎಂಬುದಾಗಿ ಆಕ್ಷೇಪಾರ್ಥವನ್ನೂ ಕೂಡ ವಿವಕ್ಷಿಸಬಹುದು.

**यद्यपि ''अद्भ्यः सम्भूत'' इत्यादौ साधनान्तरमेवोक्तम् । नतु तस्य स्वातन्त्र्यम् ।**

ವಾಸ್ತವಿಕವಾಗಿ 'ಅದ್ಭ್ಯಃ ಸಂಭೂತ' ಎಂಬ ಶ್ರುತಿಯಲ್ಲಿ ನೀರು ಮೊದಲಾದವುಗಳಿಗೆ ಕಾರಣತ್ವವನ್ನಷ್ಟೆ ಪ್ರತಿಪಾದಿಸಲಾಗಿದೆ. ಹೊರತು, ಅವುಗಳಿಗೆ ಸ್ವಾತಂತ್ರ್ಯವನ್ನು ಕಂಠತಃ ಹೇಳಿರುವುದಿಲ್ಲ.

**तथापि पारतन्त्र्यानुक्तौ स्वातन्त्र्यं स्वतः प्राप्तम् । लोके स्वतन्त्रसाधनापेक्षत्वे च कर्तृत्वमेव तन्त्रम् । लाघवात् ।**

ಆದರೂ ಕೂಡ ಅರ್ಥಾತ್ ಸ್ವತಂತ್ರವಾದ ಕಾರಣತ್ವವು ಸಿದ್ಧವಾಗುತ್ತದೆ. ಅದು ಹೀಗೆ - ಶ್ರುತಿಯಲ್ಲಿ ಸ್ಪಷ್ಟವಾಗಿ ನೀರು ಮೊದಲಾದವುಗಳು ಪರತಂತ್ರಕಾರಣಗಳೆಂದು ಹೇಳಿರುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯವು ಕಾರಣತ್ವದಲ್ಲಿ ಸ್ವತಃ ಪ್ರಾಪ್ತವಾಗುತ್ತದೆ. ಏಕೆಂದರೆ ಲೋಕದಲ್ಲಿ ಸ್ವಾತಂತ್ರ್ಯವಿದ್ದರೆ ಮಾತ್ರ ಕರ್ತೃತ್ವವಿರುವುದು ಕಂಡಿದೆ. ಹೀಗೆ ಹೇಳುವುದರಿಂದ ಲಾಘವವಿದೆ.

**न त्वशक्तकर्तृत्वम् । गौरवात् ।**

ಅಶಕ್ತಕರ್ತೃತ್ವವು ಸ್ವತಂತ್ರ ಅಸಾಧನದ ಅಪೇಕ್ಷೆಗೆ ತಂತ್ರವಲ್ಲ. ಕೇವಲ ಸ್ವತಂತ್ರಸಾಧನದ ಅಪೇಕ್ಷೆಗೆ ಕರ್ತೃತ್ವವೇ ತಂತ್ರವೆಂದು ಹೇಳಲು ಬರುವಾಗ, ಅಶಕ್ತಕರ್ತೃತ್ವವನ್ನು ತಂತ್ರವೆಂದು ಹೇಳುವುದು ಗುರುಭೂತವಾಗಿದೆ.

**सर्वस्येशाधीनत्वश्रुतिश्च तत्सृष्टविषया । नतु सृष्ट्युपकरणविषया ।**

'ದ್ರವ್ಯಂ ಕರ್ಮ ಚ ಕಾಲಶ್ಚ' ಇತ್ಯಾದಿ ವಾಕ್ಯಗಳು ಸಕಲಪದಾರ್ಥಗಳೂ ಕೂಡ ಈಶ್ವರನ ಅಧೀನವೆಂದು ಸಾರುತ್ತಿರುವಾಗ ಈಶ್ವರನು ಬೇರೆ ಸ್ವತಂತ್ರ ಪದಾರ್ಥಗಳನ್ನು ಅವಲಂಬಿಸಲು ಹೇಗೆ ಸಾಧ್ಯ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಏಕೆಂದರೆ ಯಾವ ಪದಾರ್ಥಗಳನ್ನು ಈಶ್ವರನು ಸೃಷ್ಟಿ ಮಾಡಿದ್ದಾನೋ, ಅಂಥ ಪದಾರ್ಥಗಳಷ್ಟೇ ಈಶಾಧೀನವಾಗಿವೆ ಎಂದು 'ದ್ರವ್ಯಂ ಕರ್ಮ ಚ' ಇತ್ಯಾದಿ ವಾಕ್ಯಗಳು ಪ್ರತಿಪಾದನೆ ಮಾಡುತ್ತಿವೆ ಹೊರತು ಜಗತ್ತಿನ ಸೃಷ್ಟಿಯನ್ನು ಮಾಡಲು ಯಾವ ಪರಿಕರಗಳನ್ನು ಈಶ್ವರನು ಅವಲಂಬಿಸುತ್ತಾನೋ, ಅಂಥ ಪದಾರ್ಥಗಳಿಗೆ ಈಶ್ವರಾಧೀನತ್ವವನ್ನು ಎಲ್ಲಿಯೂ ಹೇಳಿರುವುದಿಲ್ಲ.

**अन्यथा साधनादिकमीशेन साधनान्तरेण साध्यम् । तदप्यन्येनेत्यनवस्थेति ।**

ಹೀಗೊಪ್ಪದಿದ್ದರೆ ಸೃಷ್ಟಿಗೆ ಬೇಕಾಗಿರುವ ಪರಿಕರಗಳೂ ಕೂಡ ಈಶ್ವರನಿಂದಲೇ ಉತ್ಪನ್ನವಾಗುವುದಾದರೆ ಆ ಪದಾರ್ಥಗಳನ್ನು ನಿರ್ಮಾಣ ಮಾಡಲು ಮತ್ತಷ್ಟು ಪರಿಕರಗಳು ಬೇಕಾಗುತ್ತವೆ. ಸೃಷ್ಟಿಗೆ ಬೇಕಾಗಿರುವ ಪರಿಕರಗಳೂ ಕೂಡ ಈಶ್ವರನಿಂದಲೇ ಉತ್ಪನ್ನವಾಗುವುದಾದರೆ ಆ ಪದಾರ್ಥಗಳನ್ನು ನಿರ್ಮಾಣ ಮಾಡಲು ಮತ್ತಷ್ಟು ಪರಿಕರಗಳು ಬೇಕಾಗುತ್ತವೆ. ಅವೂ ಕೂಡ ಈಶ್ವರನಿರ್ಮಿತವಾದ್ದರಿಂದ ಅವುಗಳ ಉತ್ಪತ್ತಿಗೆ ಕಾರಣಭೂತವಾಗಿ ಬೇರೆ ಪದಾರ್ಥಗಳನ್ನು ಕಲ್ಪನೆ ಮಾಡಬೇಕಾಗುತ್ತದೆ. ಹೀಗೆ ಕಲ್ಪನೆ ಮಾಡುತ್ತಾ ಹೊರಟರೆ ಅನವಸ್ಥಾದೋಷವು ಬರುತ್ತದೆ.

**प्रकाशः –**

प्रागुक्तसृष्टित्वादिहेतूनामनीशकर्तृकसृष्टित्वमुपाधिमाशङ्क्य ''युक्तेः'' इति सूत्रांशन्यावर्त्यं समाधिमाह – यदि चेति ।।

ಅಧಿಕರಣದ ಪೂರ್ವಪಕ್ಷ ಹೀಗಿದೆ - ಈಶ್ವರನು ಜಗತ್ತನ್ನು ಸೃಷ್ಟಿ ಮಾಡುವಾಗ ಕಾಲ, ಕರ್ಮ, ಪ್ರಕೃತಿ ಮೊದಲಾದವುಗಳನ್ನು ಅವಲಂಬಿಸುತ್ತಾನೆ. ಇವುಗಳು ಈಶ್ವರಾಧೀನವಲ್ಲ. ಹೊರತು, ಈಶ್ವರನು ಹೇಗೆ ಸ್ವತಂತ್ರನೋ? ಅದರಂತೆ ಇವುಗಳೂ ಕೂಡ ಸ್ವತಂತ್ರವಾಗಿವೆ. ಈ ವಿಷಯದಲ್ಲಿ ಹಿಂದೆ ಹೇಳಿದ 'ಮಹದಾದಿಸೃಷ್ಟಿಃ ಕರ್ತ್ರನಧೀನಸತ್ತಾಕಾಧಿಷ್ಠಾನಸಾಪೇಕ್ಷಾ ಸೃಷ್ಟಿತ್ವಾತ್' ಇತ್ಯಾದಿ ಅನುಮಾನಗಳೇ ಆಧಾರವಾಗಿವೆ.

ಸಿದ್ಧಾಂತಿಗಳು ಅನುಮಾನದಲ್ಲಿ 'ಅನೀಶಕರ್ತೃಕಸೃಷ್ಟಿತ್ವ' ಎಂಬುದನ್ನು ಉಪಾಧಿಯನ್ನಾಗಿ ಹೇಳಬಹುದು. ಆದರೆ ಸಿದ್ಧಾಂತಿಗಳಿಗೆ ಹೀಗೆ ಹೇಳಲು ಸಾಧ್ಯವಿಲ್ಲ ಎಂಬುದನ್ನು 'ಯುಕ್ತೇಃ' ಎಂಬ ಸೂತ್ರಾಂಶದಿಂದ ವ್ಯಾವರ್ತ್ಯವಾದ ಸಮಾಧಾನವನ್ನು 'ಯದಿ ಚ' ಇತ್ಯಾದಿ ವಾಕ್ಯದಿಂದ ಪೂರ್ವಪಕ್ಷದಲ್ಲಿ ತೋರಿಸಲಾಗಿದೆ.

**प्रकाशः – नापेक्षेतेति ।।** तथा च बाधकतर्कसध्रीचीनतया ''अनुकूलेन तर्केण'' इति न्यायात्पक्ष एव उपाधेः साध्यव्यापकताभङ्ग इति भावः ।

'ನಾಪೇಕ್ಷೇತ' ಎಂಬುದರ ಅಭಿಪ್ರಾಯ ಹೀಗಿದೆ - ಸಿದ್ಧಾಂತಿಗಳು ಅನೀಶಕರ್ತೃಕಸೃಷ್ಟಿತ್ವವನ್ನು ಉಪಾಧಿಯನ್ನಾಗಿ ಹೇಳಿದರೆ, ಈ ಉಪಾಧಿಯು ಪ್ರತಿತರ್ಕದಿಂದ ಪರಾಹತವಾಗಿದೆ. 'ಅನುಕೂಲೇನ ತರ್ಕೇಣ ಸನಾಥೇ ಸತಿ ಸಾಧನೇ' ಎಂಬ ನ್ಯಾಯದಿಂದ ಯಾವ ಅನುಮಾನದಲ್ಲಿ ಅನುಕೂಲತರ್ಕವಿರುತ್ತದೋ, ಅಂಥ ಅನುಮಾನಕ್ಕೆ ಉಪಾಧಿದೋಷವನ್ನು ಹೇಳಿದರೆ ಪಕ್ಷದಲ್ಲಿಯೇ ಸಾಧ್ಯವ್ಯಾಪಕತ್ವಕ್ಕೆ ಭಂಗ ಬರುತ್ತದೆ.

**प्रकाशः –** ननु युक्तिः श्रुतिबाधितेत्यतस्तां सावकाशयति ।। **किं स्विदिति ।।**

ಪೂರ್ವಪಕ್ಷಿಗಳು ಪ್ರಯೋಗಿಸಿದ ಯುಕ್ತಿಯು ಶ್ರುತಿಯಿಂದ ಬಾಧಿತವಾಗುತ್ತದಲ್ಲವೇ? ಎಂದು ಸಿದ್ಧಾಂತಿಗಳು ಪ್ರಶ್ನಿಸಿದರೆ ಪೂರ್ವಪಕ್ಷಿಗಳು ಸಿದ್ಧಾಂತಿಗಳು ಹೇಳಿದ ಶ್ರುತಿಯನ್ನೇ ಸಾವಕಾಶ ಮಾಡುತ್ತಿದ್ದಾರೆ 'ಕಿಂಸ್ವಿತ್' ಇತ್ಯಾದಿಯಾಗಿ.

**प्रकाशः –** ''किं स्विदासीदधिष्ठानमारम्भणं कतमत्स्वित्कथासीत् । यतो भूमिं जनयन्विश्वकर्मा विद्यामौर्णोन्महिना विश्वचक्षाः'' । इत्यष्टमाष्टकस्थश्रुतौ किंशब्दस्य प्रश्नाक्षेपसाधारण्येपि ''किंस्विद्धिमस्य भेषजम्'' इत्यस्य ''अग्निर्हिमस्य'' इति परिहारानुरोधात्प्रश्नार्थत्वमिवात्रापि तथात्वं युक्तम् ।

'ಕಿಂ ಸ್ವಿದಾಸೀತ್ ಅಧಿಷ್ಠಾನಮ್ ಆರಂಭಣಂ ಕತಮಸ್ವಿತ್ ಕಥಾಸೀತ್ ।
ಯತೋ ಭೂಮಿಂ ಜನಯನ್ವಿಶ್ವಕರ್ಮಾ ವಿದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ' ॥

ಈ ಶ್ರುತಿಯಲ್ಲಿರುವ 'ಕಿಂ' ಶಬ್ದವು ಪ್ರಶ್ನಾರ್ಥದಲ್ಲಿಯೂ, ಆಕ್ಷೇಪಾರ್ಥದಲ್ಲಿಯೂ ಯುಕ್ತವಾಗಬಹುದು. ಆದರೆ ಪ್ರಕೃತ ಪ್ರಶ್ನಾರ್ಥದಲ್ಲಿಯೇ ಅರ್ಥವನ್ನು ಹೇಳಬೇಕು. 'ಕಿಂಸ್ವಿದ್ಧಿಮಸ್ಯ ಭೇಷಜಮ್' ಎಂದು ಪ್ರಶ್ನಿಸಿದಾಗ 'ಅಗ್ನಿರ್ಹಿಮಸ್ಯ ಭೇಷಜಮ್' ಎಂಬ ಪರಿಹಾರವಾಕ್ಯವನ್ನು ಅನುಸರಿಸಿ, ಕಿಂಸ್ವಿದ್ಧಿಮಸ್ಯ' ಎಂಬಲ್ಲಿರುವ 'ಕಿಂ' ಶಬ್ದಕ್ಕೆ ಪ್ರಶ್ನಾರ್ಥವನ್ನು ಮಾಡುವಂತೆ ಇಲ್ಲಿಯೂ ಕೂಡ ಪ್ರಶ್ನಾರ್ಥವನ್ನೇ ವಿವಕ್ಷಿಸಬೇಕು.

**प्रकाशः –** न चाध्याहारो निर्बीजः । ''अद्भ्यः सम्भूतः पृथिव्यै रसाच्च विश्वकर्मणस्समवर्तताधि । तस्य त्वष्टा विदधद्रूपमेति तत्पुरुषस्य विश्वमाजानमग्रे''। इति तैत्तिरीयश्रुतौ. तत्पुरुषाख्यो हिरण्यगर्भो विश्वकर्मणो हरेस्सकाशादबाद्युपलक्षितभूतै रसोपलक्षिततन्मात्राभिश्चोत्पन्न इत्युक्त्या स्वतन्त्राबादिसाधनप्रतीतेरित्यर्थः ।

ಪರಿಹಾರಭಾಗವನ್ನು ಅಧ್ಯಾಹಾರ ಮಾಡಲು ಯಾವುದೇ ಕಾರಣವಿರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು.

'ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ ವಿಶ್ವಕರ್ಮಣಃ ಸಮವರ್ತತಾಧಿ।
ತಸ್ಯ ತ್ವಷ್ಟಾ ವಿದಧದ್ರೂಪಮೇತಿ ತತ್ಪುರುಷಸ್ಯ ವಿಶ್ವಮಾಜಾನಮಗ್ರೇ ॥'

ಎಂಬುದಾಗಿ ತೈತ್ತಿರೀಯಶ್ರುತಿಯಲ್ಲಿ ತತ್ಪುರುಷನೆಂಬ ಹೆಸರುಳ್ಳ ಹಿರಣ್ಯಗರ್ಭನು ವಿಶ್ವಕರ್ಮನೆಂಬ ಹೆಸರುಳ್ಳ ಶ್ರೀಹರಿಯ ದೆಸೆಯಿಂದ ಉತ್ಪನ್ನನಾದನು. ಅಬಾಧಿಗಳಿಂದ ಉಪಲಕ್ಷಿತವಾದ ಸಕಲಭೂತಪದಾರ್ಥಗಳ ಜೊತೆಗೆ ರಸಶಬ್ದದಿಂದ ಉಪಲಕ್ಷಿತವಾದ ಸಕಲ ತನ್ಮಾತ್ರಗಳ ಜೊತೆಗೆ ಚತುರ್ಮುಖನು ಹುಟ್ಟಿದನು ಎಂದು ಹೇಳಲಾಗಿದೆ. ಈ ವಾಕ್ಯವನ್ನು ಗಮನಿಸಿದಾಗ ಅಬಾದಿಗಳು ಸ್ವತಂತ್ರಸಾಧನವೆಂದು ಪ್ರತೀತವಾಗುತ್ತವೆ.

**प्रकाशः** – आक्षेपार्थत्वमुपेत्याप्याह – **अस्मदिति** ।। श्रौताधिष्ठानादि-शब्दस्तद्विशेषपर इत्यर्थः ।

'ಕಿಂ' ಶಬ್ದಕ್ಕೆ ಆಕ್ಷೇಪಾರ್ಥವನ್ನೂ ಕೂಡ ಸ್ವೀಕರಿಸಿ ಮತ್ತೊಂದು ಅರ್ಥವನ್ನು 'ಅಸ್ಮತ್' ಇತ್ಯಾದಿಯಾಗಿ ಹೇಳಿದ್ದಾರೆ. ಶ್ರುತಿಯಲ್ಲಿರುವ ಅಧಿಷ್ಠಾನಾದಿ ಶಬ್ದಗಳು ವಿಶೇಷವಾದ ಅಧಿಷ್ಠಾನಾದ್ಯರ್ಥಗಳನ್ನು ಹೇಳುತ್ತವೆಯೆಂದು ತಿಳಿಯಬೇಕು.

**प्रकाशः** –भाष्ये स्वतन्त्रसाधनपरतयोदाहृतां श्रुतिमाक्षिप्य सुधोक्तमेव समाधिमाह – **यद्यपीति** ।।

ಭಾಷ್ಯದಲ್ಲಿ ಸ್ವತಂತ್ರಸಾಧನಪರವಾಗಿ ಉದಾಹರಿಸಿದ ಶ್ರುತಿಯನ್ನು ಆಕ್ಷೇಪ ಮಾಡಿ, ನ್ಯಾಯಸುಧೆಯಲ್ಲಿ ಹೇಳಿದ ಸಮಾಧಾನವನ್ನು 'ಯದ್ಯಪಿ' ಇತ್ಯಾದಿ ವಾಕ್ಯದಿಂದ ತೋರಿಸಿದ್ದಾರೆ.

**प्रकाशः** –एतेन ''सत्त्वाच्चावरस्य'' इति सूत्रव्यावर्त्योक्तिपरा ''नन्वद्भ्य'' इत्यादिटीका विवृता । गौरवतर्कपराहतत्वाच्चोपाधेस्साध्यव्यापकत्वं नेत्याह – **लोक इति** ।।

ಹೀಗೆ ಹೇಳಿದ್ದರಿಂದ 'ಸತ್ತ್ವಾಚ್ಚಾವರಸ್ಯ' ಎಂಬ ಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಪ್ರತಿಪಾದನೆ ಮಾಡುವ 'ನನ್ವದ್ಭ್ಯಃ' ಇತ್ಯಾದಿ ಟೀಕಾವಾಕ್ಯವನ್ನು ವಿವರಣೆ ಮಾಡಿದಂತಾಯಿತು. ಹಿಂದೆ ಸಿದ್ಧಾಂತಿಗಳು ಹೇಳಿದ ಉಪಾಧಿಗೆ ಅನುಕೂಲತರ್ಕದಿಂದ ಸಾಧ್ಯವ್ಯಾಪಕತ್ವವು ಭಂಗವಾಗುತ್ತದೆ ಎಂದು ಹೇಳಿದರು. ಈಗ ಗೌರವತರ್ಕದಿಂದಲೂ ಕೂಡ ಪರಾಹತವಾಗುವುದರಿಂದ ಸಾಧ್ಯವ್ಯಾಪಕತ್ವವು ಭಂಗವಾಗುತ್ತದೆ ಎಂದು 'ಲೋಕೇ' ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ.

**प्रकाशः** – यद्वा ''यदि च'' इत्यादिना हेतूनामप्रयोजकत्वशङ्का निराकृता । ''लोक'' इत्यादिना सोपाधिकत्वमाशङ्क्य निरस्यत इति ज्ञेयम् ।।

ಅಥವಾ ವ್ಯವಹಿತವಾಗಿ ಉಪಾಧಿಗೆ ದೋಷವನ್ನು ಹೇಳುವುದು ತಪ್ಪಾಗುತ್ತದೆ ಎಂದು ಪ್ರಶ್ನಿಸಿದರೆ 'ಯದಿ ಚ' ಇತ್ಯಾದಿ ವಾಕ್ಯದಿಂದ ಪೂರ್ವಪಕ್ಷದ ಹೇತುಗಳಿಗೆ ಸಿದ್ಧಾಂತಿಗಳು ಅಪ್ರಯೋಜಕತ್ವಾಶಂಕೆಯನ್ನು ಮಾಡಿದರೆ ಅದನ್ನು ನಿರಾಕರಣೆ ಮಾಡುತ್ತಿದ್ದಾರೆಂದೂ ಕೂಡ ತಿಳಿಯಬಹುದು. ಅಪ್ರಯೋಜಕತ್ವವನ್ನು ಆಶಂಕಿಸಿ ಹಿಂದೆ ನಿರಾಕರಣೆ ಮಾಡಿದ್ದರು. ಈಗ 'ಲೋಕ' ಇತ್ಯಾದಿ ವಾಕ್ಯದಿಂದ ಹೇತುವಿಗೆ ಸೋಪಾಧಿಕತ್ವವನ್ನು ಆಶಂಕಿಸಿ ನಿರಾಕರಣೆ ಮಾಡುತ್ತಿದ್ದಾರೆ ಎಂಬ ಸಮಾಧಾನವನ್ನೂ ಕೂಡ ತಿಳಿಯಬಹುದು.

**प्रकाशः – सर्वस्येति ।।**

द्रव्यं कर्म च कालश्च स्वभावश्चेतना धृतिः ।
यत्प्रसादादिमे संति न सन्ति यदुपेक्षया ।।

इत्यादिश्रुतिरित्यर्थः । ननु भवेदनादित्वे तदनधीनता । साधनादिकमपि तेनैव सृष्टमस्त्वित्यत आह – **अन्यथेति** ।।

ಸಕಲ ಪದಾರ್ಥಗಳು ಈಶ್ವರಾಧೀನವಾಗಿದೆ ಎಂದು ಶ್ರುತಿ ಹೀಗೆ ಹೇಳುತ್ತಿದೆ -

ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವಶ್ಚೇತನಾ ಧೃತಿಃ।
ಯತ್ಪ್ರಸಾದಾದಿಮೇ ಸತಿಂ ನ ಸಂತಿ ಯದುಪೇಕ್ಷಯಾ ॥

ದ್ರವ್ಯ, ಕರ್ಮ, ಕಾಲ, ಸ್ವಭಾವ, ಚೇತನ ಇವುಗಳೆಲ್ಲವೂ ಈಶ್ವರನ ಪ್ರಸಾದದಿಂದಷ್ಟೇ ಅಸ್ತಿತ್ವವನ್ನು ಪಡೆದಿದೆ. ಅವನು ಉಪೇಕ್ಷಿಸಿದರೆ ಎಲ್ಲವೂ ನಾಶವಾಗುತ್ತದೆ.

**प्रकाशः** – ननु भवेदनादित्वे तदनधीनता । साधनादिकमपि तेनैव सृष्टमस्त्वित्यत आह – **अन्यथेति** ।।

ಸಕಲ ಪದಾರ್ಥಗಳು ಅನಾದಿಯಾದರೆ ಈಶ್ವರನ ಅಧೀನವಾಗುವುದಿಲ್ಲವೆಂದು ಹೇಳಬಹುದಿತ್ತು. ಆದರೆ ಈಶ್ವರನು ಯಾವ ಪರಿಕರಗಳನ್ನು ಸೃಷ್ಟಿಗಾಗಿ ಉಪಯೋಗಿಸಿಕೊಳ್ಳುತ್ತಾನೋ, ಅವುಗಳೂ ಕೂಡ ಈಶ್ವರನಿಂದಲೇ ನಿರ್ಮಿತವಾಗಿವೆಯೆಂದು ಒಪ್ಪಬಹುದಲ್ಲವೇ? ಎಂಬ ಪ್ರಶ್ನೆಗೆ 'ಅನ್ಯಥಾ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.




ಹಿಂದಿನ ಅಧಿಕರಣದಲ್ಲಿ ಈಶ್ವರನೇ ಜಗತ್ತನ್ನು ಸೃಷ್ಟಿ ಮಾಡುತ್ತಾನೆಂದು ಸಮರ್ಥಿಸಲಾಯಿತು. ಅದನ್ನು ಒಪ್ಪಬಹುದು. ಆದರೆ ತಾನೊಬ್ಬನೇ ಸ್ವತಂತ್ರನು, ಉಳಿದೆಲ್ಲವೂ ಕೂಡ ಅಸ್ವತಂತ್ರವಾಗಿವೆ ಎಂಬ ಪ್ರಮೇಯವನ್ನು

ಒಪ್ಪುವ ಅವಶ್ಯಕತೆಯಿಲ್ಲ. ಕುಂಬಾರನು ಘಟವನ್ನು ಸೃಷ್ಟಿ ಮಾಡಬೇಕಾದರೆ, ಮಣ್ಣು, ನೀರು, ದಂಡ, ಚಕ್ರ ಮೊದಲಾದ ಪರಿಕರಗಳನ್ನು ಉಪಯೋಗಿಸಿಕೊಳ್ಳುತ್ತಾನೆ. ಕುಲಾಲನು ಹೇಗೆ ಸ್ವತಂತ್ರನಾಗಿದ್ದಾನೋ, ಅವನು ಉಪಯೋಗಿಸಿಕೊಳ್ಳುವ ಪರಿಕರಗಳೂ ಕೂಡ ಸ್ವತಂತ್ರವೇ ಆಗಿವೆ. ಇದೇ ರೀತಿಯಾಗಿ ಬ್ರಹ್ಮನು ಜಗತ್ತನ್ನು ಸೃಷ್ಟಿ ಮಾಡುವಾಗ ಪ್ರಕೃತಿ, ಕಾಲ, ಕರ್ಮ, ಮೊದಲಾದ ಪರಿಕರಗಳನ್ನು ಉಪಯೋಗಿಸಿಕೊಳ್ಳುತ್ತಾನೆ. ಅಷ್ಟೇ ಅಲ್ಲದೇ ತನ್ನಲ್ಲಿರುವ ಜ್ಞಾನ, ಇಚ್ಛಾ, ಪ್ರಯತ್ನ ಇವುಗಳನ್ನೂ ಕೂಡ ಉಪಯೋಗಿಸಿಕೊಳ್ಳುತ್ತಾನೆ. ಇವೆಲ್ಲವೂ ಕೂಡ ಸ್ವತಂತ್ರವಾಗಿವೆ ಎಂದೇ ಒಪ್ಪಬೇಕು. ಹೀಗೆ ಹೇಳಿದಾಗ ಯಾವುದೇ ಶ್ರುತಿಗಳ ವಿರೋಧವೂ ಕೂಡ ಇರುವುದಿಲ್ಲ. 'ಕಿಂಸ್ವಿದಾಸೀತ್' ಎಂಬ ವಾಕ್ಯದಲ್ಲಿ 'ಕಿಂ' ಶಬ್ದವು ಆಕ್ಷೇಪಾರ್ಥದಲ್ಲಿ ಇರುವುದಿಲ್ಲ. ಹೊರತು, ಪ್ರಶ್ನಾರ್ಥದಲ್ಲಿ ಇದೆ. ಏಕೆಂದರೆ 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯಲ್ಲಿ ನೀರು ಮೊದಲಾದವು ಸ್ವತಂತ್ರಕಾರಣವಾಗಿವೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಆದ್ದರಿಂದ 'ಕಿಂಸ್ವಿದಾಸೀತ್' ಎಂಬ ಶ್ರುತಿಯಲ್ಲಿರುವ 'ಕಿಂ' ಶಬ್ದವು ಪ್ರಶ್ನಾರ್ಥದಲ್ಲಿ ಇರುತ್ತದೆಂದೇ ಒಪ್ಪಬೇಕು.

ದ್ರವ್ಯಂ ಕರ್ಮಚ ಕಾಲಶ್ಚ ಸ್ವಭಾವಶ್ಚೇತನಾ ಧೃತಿಃ ।
ಯತ್ಪ್ರಸಾದಾದಿಮೇ ಸತಿಂ ನ ಸಂತಿ ಯದುಪೇಕ್ಷಯಾ ॥

ದ್ರವ್ಯ, ಕರ್ಮ, ಕಾಲ, ಸ್ವಭಾವ, ಚೇತನ ಇವುಗಳೆಲ್ಲವೂ ಈಶ್ವರನ ಪ್ರಸಾದದಿಂದಷ್ಟೇ ಅಸ್ತಿತ್ವವನ್ನು ಪಡೆದಿದೆ. ಅವನು ಉಪೇಕ್ಷಿಸಿದರೆ ಎಲ್ಲವೂ ನಾಶವಾಗುತ್ತದೆ. ಈ ಶ್ರುತಿಯು ಪ್ರತಿಪಾದನೆ ಮಾಡುವಂತೆ ಎಲ್ಲವೂ ಕೂಡ ಈಶ್ವರಾಧೀನವೇ ಆಗಿದೆ. ಅವನು ಉಪಯೋಗಿಸಿಕೊಳ್ಳುವ ಆ ಪರಿಕರಗಳೂ ಕೂಡ ಇವನ ಅಧೀನವಾಗಿದೆ ಎಂದೇ ಹೇಳಬೇಕಲ್ಲವೇ? ಎಂದು ಸಿದ್ಧಾಂತಿಗಳು ಪ್ರಶ್ನಿಸಬಹುದು. ಆದರೆ ಈಶ್ವರನು ಯಾವ ಪದಾರ್ಥಗಳನ್ನು ಸೃಷ್ಟಿ ಮಾಡಿದ್ದಾನೋ, ಆ ಪದಾರ್ಥಗಳಿಗಷ್ಟೇ ಈಶ್ವರಾಧೀನ್ಯವನ್ನು ಹೇಳುತ್ತಿದೆ. ಹೊರತು, ಈಶ್ವರನು ನಿರ್ಮಾಣ ಮಾಡದ ಪ್ರಕೃತಿ, ಕಾಲ, ಕರ್ಮ ಮೊದಲಾದವುಗಳು ಈಶ್ವರಾಧೀನವೆಂದು ಪ್ರತಿಪಾದನೆ ಮಾಡುತ್ತಿಲ್ಲ. ಹಾಗೇನಾದರು ಪ್ರಕೃತಿ ಮೊದಲಾದವುಗಳಿಗೂ ಈಶ್ವರಾಧೀನ್ಯವನ್ನು ಒಪ್ಪಿದರೆ ಅನವಸ್ಥಾದೋಷ ಬರುತ್ತದೆ. ಪ್ರಕೃತಿ ಮೊದಲಾದವುಗಳನ್ನು ನಿರ್ಮಾಣ ಮಾಡಲು ಕಾರಣಭೂತವಾಗಿ ಇನ್ನು ಕೆಲವು ಪರಿಕರಗಳನ್ನು ಒಪ್ಪಬೇಕು. ಅವುಗಳ ನಿರ್ಮಾಣಕ್ಕೆ ಕಾರಣಭೂತವಾಗಿ ಇನ್ನೂ ಕೆಲವು ಪರಿಕರಗಳನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ಅನಿವಾರ್ಯವಾಗಿ ಈಶ್ವರನು ಜಗತ್ತನ್ನು ಸೃಷ್ಟಿ ಮಾಡಲು ಯಾವ ಪ್ರಕೃತ್ಯಾದಿಗಳನ್ನು ಉಪಾದಾನಕಾರಣವನ್ನಾಗಿ ಬಳಸಿಕೊಳ್ಳುತ್ತಾನೋ, ಅವುಗಳನ್ನು ಸ್ವತಂತ್ರವೆಂದೇ ಹೇಳಬೇಕು. ಇಷ್ಟು ಪೂರ್ವಪಕ್ಷ.

### ಸಿದ್ಧಾಂತ

### ಈಶ್ವರನು ಸೃಷ್ಟಿಗಾಗಿ ಪ್ರಕೃತ್ಯಾದಿಗಳನ್ನು ಅಪೇಕ್ಷಿಸುವುದು ಕೇವಲ ಲೀಲೆಗೋಸ್ಕರ

## तात्पर्यचन्द्रिका

**सिद्धान्तमाह ।। सिद्धान्तयदिति ।। अयं भावः -**

**स्वतन्त्रसाधनापेक्षा लोकेऽशक्तिनिबन्धना ।**
**ईश्वरस्य त्वसामर्थ्यं न कुत्रापीश्वरत्वतः ॥१॥**

द्रव्यस्य कर्मकालादेः श्रूयते चेशतंत्रता ।
नानाशिल्पेषु निपुणः साधनं स्वयमेव हि ॥२॥

सम्पाद्यते न कार्याणि कुर्वंल्लोकेपि दृश्यते ।
स्वाधीनसाधनादानं त्वीशस्य न विरुध्यते ॥३॥

प्रमितत्वाच्च लीलात्वादीशत्वाघातुकत्वतः ।
लीलया दण्डमालंब्य गच्छन् किं पङ्गुतां व्रजेत् ॥४॥

ಅಧಿಕರಣದ ಸಿದ್ಧಾಂತವನ್ನು ಟೀಕೆಯಲ್ಲಿ 'ಸಿದ್ಧಾಂತಯತ್' ಇತ್ಯಾದಿಯಾಗಿ ಸ್ಥಾಪನೆ ಮಾಡುತ್ತಿದ್ದಾರೆ - ಟೀಕೆಯಲ್ಲಿ ಹೇಳಿದ ಸಿದ್ಧಾಂತದ ಒಟ್ಟು ಅಭಿಪ್ರಾಯ ಹೀಗಿದೆ -

ಸ್ವತಂತ್ರಸಾಧನಾಪೇಕ್ಷಾ ಲೋಕೇಽಶಕ್ತಿನಿಬಂಧನಾ ।
ಈಶ್ವರಸ್ಯ ತ್ವಸಾಮರ್ಥ್ಯಂ ನ ಕುತ್ರಾಪೀಶ್ವರತ್ವತಃ ॥೧॥
ದ್ರವಸ್ಯ ಕರ್ಮಕಾಲಾದೇಃ ಶ್ರೂಯತೇ ಚೇಶತಂತ್ರತಾ ।
ನಾನಾಶಿಲ್ಪೇಷು ನಿಪುಣಃ ಸಾಧನಂ ಸ್ವಯಮೇವ ಹಿ ॥೨॥
ಸಂಪಾದ್ಯತೇ ನ ಕಾರ್ಯಾಣಿ ಕುರ್ವಂಲ್ಲೋಕೇಪಿ ದೃಶ್ಯತೇ ।
ಸ್ವಾಧೀನಸಾಧನಾದಾನಂ ತ್ವೀಶಸ್ಯ ನ ವಿರುಧ್ಯತೇ ॥೩॥
ಪ್ರಮಿತತ್ವಾಚ್ಚ ಲೀಲಾತ್ವಾದೀಶತ್ವಾಘಾತುಕತ್ವತಃ ।
ಲೀಲಯಾ ದಂಡಮಾಲಂಬ್ಯ ಗಚ್ಛನ್ ಕಿಂ ಪಂಗುತಾಂ ವ್ರಜೇತ್ ॥೪॥

ಅಸಾಮರ್ಥ್ಯವಿದ್ದರೆ ಮಾತ್ರ ಸ್ವತಂತ್ರವಾದ ಬೇರೆ ಪರಿಕರಗಳನ್ನು ಅಪೇಕ್ಷಿಸಿ ಸೃಷ್ಟಿಯನ್ನು ಮಾಡುವುದು ಕುಲಾಲ ಮೊದಲಾದವರಲ್ಲಿ ನಾವು ಕಂಡಿದ್ದೇವೆ. ಆದರೆ ಈಶ್ವರನು ಸರ್ವಸಮರ್ಥನಾದ್ದರಿಂದ ಈಶ್ವರನಲ್ಲಿ ಅಸಾಮರ್ಥ್ಯವಿದೆಯೆಂದು ಎಲ್ಲಿಯೂ ಹೇಳಿಲ್ಲವಾದ್ದರಿಂದ ಸ್ವತಂತ್ರವಾದ ಬೇರೆ ಸಾಧನೆಗಳನ್ನು ಅವನು ಅವಲಂಬಿಸಬೇಕಾಗಿಲ್ಲ.

'ದ್ರವ್ಯಂ ಕರ್ಮ ಚ ಕಾಲಶ್ಚ' ಎಂಬ ಶ್ರುತಿಯು, ಪ್ರಕೃತಿ, ಕರ್ಮ ಮೊದಲಾದವುಗಳೆಲ್ಲವೂ ಈಶ್ವರನ ಅಧೀನವಾಗಿವೆ ಎಂಬುದಾಗಿ ಘೋಷಣೆ ಮಾಡುತ್ತಿದೆ. ಯಾವರೀತಿಯಾಗಿ ಅನೇಕ ಶಿಲ್ಪಗಳನ್ನು ನಿರ್ಮಾಣ ಮಾಡುವುದರಲ್ಲಿ ನಿಪುಣನಾದ ಶಿಲ್ಪಿಕಾರನು 'ಉಳಿ' ಮೊದಲಾದ ಕೆತ್ತನೆಯ ಸಾಮಗ್ರಿಗಳನ್ನು ಸ್ವತಃ ತಾನೇ ನಿರ್ಮಾಣ ಮಾಡಿಕೊಳ್ಳುತ್ತಾನೋ, ಮತ್ತು ಅದೇ ಪರಿಕರಗಳಿಂದ ಶಿಲ್ಪಗಳನ್ನು ನಿರ್ಮಾಣ ಮಾಡುನೋ, ಇದರಂತೆ ಈಶ್ವರನೂ ಕೂಡ ತನ್ನ ಅಧೀನವೇ ಆಗಿರುವ ಪ್ರಕೃತಿ, ಕರ್ಮ ಮೊದಲಾದ ಸಾಧನಗಳನ್ನು ಉಪಯೋಗಿಸಿಕೊಂಡು, ಜಗತ್ತನ್ನು ಸೃಷ್ಟಿ ಮಾಡುತ್ತಾನೆ.

ಈ ವಿಷಯವು ಪ್ರಮಾಣಸಿದ್ಧವಾಗಿದೆ. ಸರ್ವಸಮರ್ಥನಾಗಿದ್ದರೂ ತನ್ನ ಅಧೀನವಾದ ಪ್ರಕೃತಿ ಮೊದಲಾದವುಗಳನ್ನು ಈಶ್ವರನು ಅಪೇಕ್ಷಿಸುವುದು ಕೇವಲ ಲೀಲೆಯಿಂದ. ಇಂಥ ಸ್ವಾಧೀನ

ಪರಿಕರಗಳನ್ನು ಉಪಯೋಗಿಸಿಕೊಳ್ಳುವುದರಿಂದ ತನ್ನಲ್ಲಿರುವ ಈಶತ್ವಕ್ಕೆ ಭಂಗವೂ ಕೂಡ ಇಲ್ಲ. ನಡೆಯುವ ವ್ಯಕ್ತಿಯು ಲೀಲೆಗೋಸ್ಕರ ಕೈಯಲ್ಲಿ ಕೋಲನ್ನು ಹಿಡಿದಂತೆ ಅವನೂ ಕೂಡ ಲೀಲೆಯಿಂದಷ್ಟೇ ಪ್ರಕೃತಿ ಮೊದಲಾದವುಗಳನ್ನು ಉಪಯೋಗಿಸಿಕೊಂಡಿದ್ದಾನೆ. ಕೈಯಲ್ಲಿ ಕೋಲನ್ನು ಹಿಡಿದ ಮಾತ್ರಕ್ಕೆ ಕುಂಟನೆಂದು ಯಾರೂ ಹೇಳುವುದಿಲ್ಲವಷ್ಟೇ.

**अनादिसाधनानामपीशाधीनत्वान्नानवस्था ।**

ಪ್ರಕೃತಿ, ಕರ್ಮ ಮೊದಲಾದವುಗಳು ಈಶ್ವರಾಧೀನವಾದರೆ, ಅವುಗಳ ಉತ್ಪತ್ತಿಗೆ ಪುನಃ ಬೇರೆ ಪರಿಕರಗಳನ್ನು ಒಪ್ಪಬೇಕಾಗುತ್ತದೆ. ಅವುಗಳೂ ಕೂಡ ಸಾದಿಯಾದ್ದರಿಂದ ಅನವಸ್ಥಾದೋಷ ಬರುತ್ತದಲ್ಲವೇ? ಎಂಬುದಾಗಿ ಹಿಂದೆ ಪೂರ್ವಪಕ್ಷದಲ್ಲಿ ಆಕ್ಷೇಪಿಸಲಾಗಿತ್ತು.

ಈ ಆಕ್ಷೇಪಕ್ಕೂ ಈಗ ಅವಕಾಶವಿಲ್ಲ. ಪ್ರಕೃತಿ, ಕರ್ಮ ಮೊದಲಾದವುಗಳನ್ನು ಸಾದಿಯೆಂದು ನಾವು ಹೇಳುವುದೇ ಇಲ್ಲ ಹೊರತು, ಅನಾದಿಯಾಗಿವೆ ಎಂದು ಹೇಳುತ್ತೇವೆ. ಅನಾದಿಯಾದ ಮಾತ್ರಕ್ಕೆ ಈಶ್ವರನ ಅಧೀನವಾಗಬಾರದೆಂದೇನೂ ನಿಯಮವಿಲ್ಲ. ಅನಾದಿಯಾದ ಸಾಧನೆಗಳೂ ಕೂಡ ಈಶ್ವರಾಧೀನವಾದ್ದರಿಂದ ಅನವಸ್ಥಾದೋಷವು ಬರುವುದಿಲ್ಲ.

**साधनान्तरस्य च "अद्भ्यः सम्भूतः" इत्यादिभाष्योदाहृतश्रुतिसिद्धत्वान्न तन्मात्राक्षेपः । किन्तु स्वतन्त्रसाधनाक्षेप एवेति ॥**

'ಅದ್ಭ್ಯಃ ಸಂಭೂತ' ಇತ್ಯಾದಿಯಾಗಿ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಿಂದ ಜಗತ್ತಿನ ಸೃಷ್ಟಿಗೆ ಬೇರೆ ಸಾಧನೆಗಳು ಇರುತ್ತವೆಂದು ಸಿದ್ಧವಾಗಿದೆ. ಆದ್ದರಿಂದ ಬೇರೆ ಸಾಧನೆಗಳೇ ಇರುವುದಿಲ್ಲ ಎಂಬುದಾಗಿ ಆಕ್ಷೇಪ ಮಾಡಬಾರದು. ಹೊರತು, ಸ್ವತಂತ್ರವಾದ ಸಾಧನೆಗಳು ಇರುವುದಿಲ್ಲವೆಂದೇ ಆಕ್ಷೇಪ ಮಾಡಬೇಕು. ಆದ್ದರಿಂದ 'ಕಿಂಸ್ವಿದಾಸೀತ್' ಎಂಬ ಶ್ರುತಿಯಲ್ಲಿರುವ 'ಕಿಂ' ಶಬ್ದವು 'ಈಶ್ವರನನ್ನು ಬಿಟ್ಟು ಬೇರೆ ಸ್ವತಂತ್ರಸಾಧನೆಗಳು ಇರುತ್ತವೇನು ?' ಎಂಬ ಆಕ್ಷೇಪಾರ್ಥದಲ್ಲಿ ಹೊರಟಿದೆ.

**बह्वित्युक्तमिति ॥ "बहुसाधन" इति भाष्ये साधनस्य बहुत्वं ज्ञानेच्छाद्यन्य दण्डादिस्थानीयसाधनबहुत्वं विवक्षितमिति भावः ॥**

"ಸ್ವತಂತ್ರಬಹುಸಾಧನಾಸೃಷ್ಟಿಃ ಲೋಕೇ ದೃಷ್ಟಾ ನೈವಂ ಬ್ರಹ್ಮಣಃ ರೂಪಸಾಮರ್ಥ್ಯಾದೇವ ತಸ್ಯ ಸೃಷ್ಟಿಃ' ಎಂಬುದಾಗಿ ಭಾಷ್ಯದಲ್ಲಿ ಬಹುಸಾಧನ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಸಾಧನೆಯು ಬಹುವಾಗಿದೆ ಎಂಬುದಕ್ಕೆ ಏನರ್ಥ ಎಂಬುದನ್ನು ಟೀಕೆಯಲ್ಲಿ ವಿಚಾರ ಮಾಡಿದ್ದಾರೆ. ಒಂದು ವೇಳೆ ಭಾಷ್ಯದಲ್ಲಿ 'ಬಹು' ಎಂದು ಹೇಳದೇ ಇದ್ದರೆ ಸಿದ್ಧಸಾಧನ ದೋಷವು ಬರುತ್ತಿತ್ತು. 'ಈಶ್ವರಕರ್ತೃಕಾಸೃಷ್ಟಿಃ ಸ್ವತಂತ್ರಸಾಧನಸಾಧ್ಯ ಸೃಷ್ಟಿತ್ವಾತ್ ಘಟಾದಿಸೃಷ್ಟಿವತ್' ಈ ಅನುಮಾನದಿಂದ ಸ್ವತಂತ್ರಸಾಧನಸಾಧ್ಯತ್ವವನ್ನು ಸಾಧಿಸಿದಾಗ ಸಿದ್ಧಸಾಧನದೋಷವು ಬರುತ್ತದೆ. ಏಕೆಂದರೆ ಈಶ್ವರನ

ಜ್ಞಾನ, ಇಚ್ಛೆ ಮೊದಲಾದ ಗುಣಗಳು ಈಶ್ವರನಂತೆ ಸ್ವತಂತ್ರವೇ ಆಗಿವೆ. ಈ ಸಿದ್ಧಸಾಧನ ದೋಷದ ಪರಿಹಾರಕ್ಕಾಗಿ ಭಾಷ್ಯದಲ್ಲಿ 'ಬಹು' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಕೇವಲ ಜ್ಞಾನ ಇಚ್ಛೆ ಮೊದಲಾದ ಗುಣಗಳಷ್ಟೇ ಸ್ವತಂತ್ರವಾದರೆ ಸಾಲದು. ಜ್ಞಾನ, ಇಚ್ಛೆ ಮೊದಲಾದವುಗಳಿಗಿಂತ ಭಿನ್ನವಾದ ದಂಡಾದಿಸ್ಥಾನದಲ್ಲಿರುವ ಪ್ರಕೃತಿ ಮೊದಲಾದವುಗಳೂ ಕೂಡ ಸ್ವತಂತ್ರವಾಗಬೇಕೆಂಬುದು ಅನುಮಾನದ ಉದ್ದೇಶ. ಪ್ರಕೃತಿ ಮೊದಲಾದವುಗಳು ಈಶ್ವರನಂತೆ ಸ್ವತಂತ್ರವೆಂದು ಸಿದ್ಧಾಂತಿಗಳು ಒಪ್ಪಿರುವುದಿಲ್ಲವಾದ್ದರಿಂದ ಸಿದ್ಧಸಾಧನಾದೋಷವು ಬರುವುದಿಲ್ಲ. ಹೀಗೆ ಟೀಕೆಯಲ್ಲಿ 'ಈಶ್ವರ ಸೃಷ್ಟೇಃ ಸ್ವತಂತ್ರಸಾಧನಸಾಪೇಕ್ಷಸ್ಯತ್ವ ಸಾಧನೇ ಸಿದ್ಧಸಾಧನತಾ ಸ್ಯಾದಿತಿ ಬಹು ಇತ್ಯುಕ್ತಮ್' ಎಂಬುದಾಗಿ ಹೇಳಿರುತ್ತಾರೆ.

**ईश्वरोपि मुक्त उच्यत इति ।। अद्वैतिमते मुक्तेश्वरयोरभेदात् । ''अजोन्य'' इति श्रुत्यैव ब्रह्मणः संसारिभ्यो भेदोपि सिद्ध इत्यर्थः ।।**

ಟೀಕೆಯಲ್ಲಿ 'ಈಶ್ವರೋಪಿ ಮುಕ್ತ ಉಚ್ಯತೇ' ಜೀವನಷ್ಟೇ ಅಲ್ಲ, ಈಶ್ವರನೂ ಕೂಡ ಮುಕ್ತನೆಂದು ಅದ್ವೈತಿಗಳು ಹೇಳುತ್ತಾರೆ ಎಂದು ಹೇಳಲಾಗಿದೆ. ಇದರ ಅಭಿಪ್ರಾಯ ಹೀಗಿದೆ - ಅದ್ವೈತಮತದಲ್ಲಿ ಮುಕ್ತನು ಶುದ್ಧಚೈತನ್ಯಸ್ವರೂಪನಾಗಿರುತ್ತಾನೆ. ಆದ್ದರಿಂದ ಮುಕ್ತನಿಗೂ ಈಶ್ವರನಿಗೂ ಅಭೇದವಿರುತ್ತದೆಂದು ಒಪ್ಪಿರುತ್ತಾರೆ. 'ಅಜೋಽನ್ಯಃ' ಎಂಬ ಶ್ರುತಿಯಿಂದ ಸಂಸಾರಿಗೂ ಮುಕ್ತನಿಗೂ ಆಪಾತತಃ ಭೇದವನ್ನು ಹೇಳಿದಂತೆ ಕಾಣಿಸುತ್ತದೆ. ಅದಕ್ಕೋಸ್ಕರ 'ಈಶ್ವರೋಪಿ ಮುಕ್ತ ಉಚ್ಯತೇ' ಎಂಬ ಟೀಕೆಯು ಹೊರಟಿದೆ. 'ಅಪಿ' ಶಬ್ದದಿಂದ ಕೇವಲ ಮುಕ್ತರಿಗೂ ಅಮುಕ್ತರಿಗೂ ಭೇದವಷ್ಟೇ ಅಲ್ಲ ಬ್ರಹ್ಮನಿಗೂ, ಸಂಸಾರಿಗಳಿಗೂ ಕೂಡ ಭೇದವು ಈ ಶ್ರುತಿಯಿಂದ ಸಿದ್ಧವಾಗುತ್ತದೆಂದು ತಿಳಿಯಬೇಕು.

**श्रुतियुक्तिभ्यामिति ।। प्राक्केवला युक्तिः श्रुतिश्च शङ्किता । अत्र तु श्रुतिसहिता युक्तिरिति भेदः ।**

ಟೀಕಾಪಂಕ್ತಿ ಹೀಗಿದೆ - 'ಏತೇನ ಶ್ರುತಿಯುಕ್ತಿಭ್ಯಾಮ್ ಅನನ್ಯಥಾಸಿದ್ಧಿಃ ಇತ್ಯಪಾರ್ಥಮ್' ಇದರ ಅಭಿಪ್ರಾಯ ಹೀಗಿದೆ - ಜಗತ್ತು ಬ್ರಹ್ಮನಿಗಿಂತ ಅನನ್ಯ = ಮಿಥ್ಯಾ ಎಂದು ಅದ್ವೈತಿಗಳು ಹೇಳುತ್ತಾರೆ. ಇದಕ್ಕೆ ವಾಚಾರಂಭಣಂ ಇತ್ಯಾದಿ ಶ್ರುತಿಯು ಪ್ರಮಾಣವಾಗಿದೆ. ಈ ಶ್ರುತಿಗೆ ವಿರುದ್ಧವಾಗಿ ನಾವು ಜೀವಬ್ರಹ್ಮಭೇದಸಾಧಕವಾದ ಅನೇಕ ಶ್ರುತಿಗಳನ್ನು ಹೇಳುತ್ತೇವೆ. ನಾವು ಹೇಳುವ ಅನೇಕ ಶ್ರುತಿಗಳಿಂದ ಮಿಥ್ಯಾತ್ವಪ್ರತಿಪಾದಕವಾದ ಶ್ರುತಿಗೆ ಬಾಧವು ಬರುತ್ತದೆ. ಎರಡೂ ಕೂಡ ಶ್ರುತಿಯೇ ಆಗಿರುವುದರಿಂದ ಪರಸ್ಪರ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಕೇವಲ ಶ್ರುತಿಗಿಂತಲೂ ಪ್ರತ್ಯಕ್ಷದ ಬೆಂಬಲವಿರುವ ಶ್ರುತಿಯು ಪ್ರಬಲವಾಗುತ್ತದೆ. ಪ್ರತ್ಯಕ್ಷವಾದರೂ ಭೇದವನ್ನು ಜಗತ್ಸೃಷ್ಟಿತ್ವವನ್ನು ತಿಳಿಸುತ್ತಿದೆ. ಹೀಗೆ ಹೇಳಿದ್ದರಿಂದ ಹಿಂದೆ ಕೇವಲ ಯುಕ್ತಿಯನ್ನು ಮತ್ತು ಶ್ರುತಿಯನ್ನು ಆಶಂಕಿಸಲಾಗಿತ್ತು. ಆದರೆ ಇಲ್ಲಿ

ಶ್ರುತಿಸಹಿತವಾದ ಯುಕ್ತಿಯನ್ನು, ಯುಕ್ತಿಸಹಿತವಾದ ಶ್ರುತಿಯನ್ನು, ಅದ್ವೈತಿಗಳು ಆಕ್ಷೇಪ ಮಾಡಿದರೆ ನಮ್ಮಲ್ಲಿ ಪ್ರತ್ಯಕ್ಷಸಹಿತವಾದ ಶ್ರುತಿಯಿರುವುದರಿಂದ ಅವೆರಡನ್ನೂ ಕೂಡ ಬಾಧಿಸುತ್ತದೆ ಎಂದು ತಿಳಿಯಬೇಕು.

**साक्षिप्रत्यक्षस्य सर्वस्मात्प्रबलत्वेपि प्रत्यक्षमात्रस्य श्रुतितो दुर्बलत्वात्पूर्वत्रारुच्या दृष्टशब्दं प्रकारान्तरेण व्याचष्टे ।। दृष्टमितीति ।।**

ಸಾಕ್ಷಿಪ್ರತ್ಯಕ್ಷವು ಎಲ್ಲಾ ಪ್ರಮಾಣಗಳಿಗಿಂತ ಪ್ರಬಲವಾಗಿದ್ದರೂ, ಕೇವಲ ಪ್ರತ್ಯಕ್ಷವು ಶ್ರುತಿಗಿಂತ ದುರ್ಬಲವಾಗಿದೆ. ಆದ್ದರಿಂದ ಹಿಂದಿನ ಪಕ್ಷದಲ್ಲಿ ಅಸ್ವಾರಸ್ಯವಿರುವುದರಿಂದ ದೃಷ್ಟಶಬ್ದಕ್ಕೆ ಮತ್ತೊಂದು ಪ್ರಕಾರದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ದೃಷ್ಟಮಿತಿ ಪ್ರಬಲಬಹುಪ್ರಮಾಣದರ್ಶನಂ ವಾ' ಎಂಬುದಾಗಿ.

**भाष्ये ''अनुमाद्या'' इत्यत्राद्यशब्दोऽनुमाविशेषार्थापत्त्यादिपरः ।**

'ಅನುಮಾದ್ಯಾ' ಎಂಬಲ್ಲಿರುವ 'ಆದ್ಯ' ಎಂಬ ಪದದಿಂದ ಅನುಮಾನದ ವಿಶೇಷಪ್ರಭೇದವೆನಿಸಿದ ಅರ್ಥಾಪತ್ತಿಯನ್ನು ತೆಗೆದುಕೊಳ್ಳಬೇಕು. ಹಿಂದೆ ಪ್ರತ್ಯಕ್ಷ ಹಾಗೂ ಆಗಮಗಳನ್ನು ಹೇಳಿದ್ದಾಗಿದೆ. ಅವುಗಳನ್ನು ಆದ್ಯಪದದಿಂದ ತೆಗೆದುಕೊಳ್ಳಲಾಗದು. ಅರ್ಥಾಪತ್ತಿಯು ಅನುಮಾನಸ್ವರೂಪವೇ ಆಗಿದ್ದರೂ ಗೋಬಲಿವರ್ದನ್ಯಾಯದಿಂದ ಅನುಮಾನವಿಶೇಷವೆಂದು ಪರಿಗಣಿಸಬೇಕು.

**यद्यपि ''किं स्विदासीत्'' इति श्रुतावधिष्ठानं प्रथममुक्तम् । तथाप्यारम्भणशब्दार्थस्य करणस्य साधनेष्वतिशयितत्वात्सूत्र आरम्भणशब्दः ।**

ಪ್ರಶ್ನೆ - ಶ್ರುತ್ಯನುಸಾರಿಯಾದ ಸೂತ್ರದಲ್ಲಿ 'ತದನ್ಯತ್ವಂ ಅಧಿಷ್ಠಾನಶಬ್ದಾದಿಭ್ಯಃ' ಎಂದು ಹೇಳಬೇಕಿತ್ತು. 'ಕಿಂ ಸ್ವಿದಾಸೀತ್ ಅಧಿಷ್ಠಾನಂ ಆರಂಭಣಂ ಕಿಂಸ್ವಿದಾಸೀತ್' ಎಂಬುದಾಗಿ ಶ್ರುತಿಯಲ್ಲಿ ಮೊದಲು ಅಧಿಷ್ಠಾನ ಶಬ್ದವೇ ಪ್ರಸಕ್ತವಾಗಿದೆಯಲ್ಲವೇ?

ಉತ್ತರ - ಆರಂಭಣ ಶಬ್ದವು ಅರ್ಥತಃ ಪ್ರಧಾನವಾಗಿದೆ. 'ಆರಭ್ಯತೇ ಅನೇನ ಇತಿ ಆರಂಭಣಂ' ಎಂಬ ವ್ಯುತ್ಪತ್ತಿಯಿಂದ 'ಕರಣ' ಎಂಬರ್ಥವನ್ನು ಹೇಳುತ್ತಿದೆ. ಸ್ವತಂತ್ರಸಾಧನವಾದದ್ದೇ 'ಕರಣ' ಎನಿಸುತ್ತದೆ. ಯಾವುದು ಸಾಧನಗಳಲ್ಲಿ ಅತ್ಯಂತ ಶ್ರೇಷ್ಠವೋ, ಮತ್ತು ಹತ್ತಿರವೋ, ಅಂಥ ಶ್ರೇಷ್ಠವಾದ ಸಾಧನೆ ಮತ್ತೊಂದು ಇರುವುದಿಲ್ಲವೋ, ಅದನ್ನೇ ಕರಣ ಎಂದು ಕರೆಯಲಾಗಿದೆ. ಪರಮಾತ್ಮನಿಗಿಂತ ಮತ್ತೊಂದು ಸ್ವತಂತ್ರಸಾಧನವು ಇಲ್ಲವೆಂದು ತಿಳಿಸಲು ಶ್ರುತಿಯಲ್ಲಿ ಆರಂಭಣಶಬ್ದವಿದೆ. ಇದನ್ನು ತಿಳಿಸುವುದಕ್ಕಾಗಿಯೇ ಸೂತ್ರದಲ್ಲಿಯೂ ಕೂಡ ಆರಂಭಣಶಬ್ದದ ಪ್ರತೀಕವನ್ನೇ ಸ್ವೀಕರಿಸಿದ್ದಾರೆ.

**अनेन च प्रतीकतया ''किं स्विदासीत्'' इत्यारम्भणाक्षेपवाक्यस्य गृहीतत्वात् साधनान्तराभावसिद्धिरिति सुधायामेवोक्तम् ।**

ಹೀಗೆ ಆರಂಭಣಶಬ್ದವನ್ನು ಸೂತ್ರದಲ್ಲಿ ಪ್ರತೀಕವನ್ನಾಗಿ ಸ್ವೀಕರಿಸಿದ್ದರಿಂದ 'ಕಿಂ ಸ್ವಿದಾಸೀತ್' ಎಂಬ ಆರಂಭಣಾಕ್ಷೇಪವಾಕ್ಯವು ಈಶ್ವರನನ್ನು ಬಿಟ್ಟು ಮತ್ತೊಂದು ಸಾಧನೆಯಿಲ್ಲ ಎಂದು ತಿಳಿಸುತ್ತಿದೆ ಎಂಬ ಸುಧೆಯನ್ನು ವ್ಯಾಖ್ಯಾನ ಮಾಡಿದಂತಾಯಿತು.

**''आरम्भणशब्दादिभ्य'' इत्यत्रादिशब्देनेश्वरस्य स्वतन्त्रसाधनानपेक्षत्वे स्वातन्त्र्यादिरूपा युक्तिरुक्ता ।**

'ಆರಂಭಣಶಬ್ದಾದಿಭ್ಯಃ' ಎಂಬಲ್ಲಿರುವ ಆದಿಶಬ್ದದಿಂದ ಈಶ್ವರನು ಸ್ವತಂತ್ರಸಾಧನೆಯನ್ನು ಅಪೇಕ್ಷೆ ಪಡುವುದಿಲ್ಲವಾದ್ದರಿಂದ ಸ್ವಾತಂತ್ರ್ಯವನ್ನು ಹೊಂದಿರುತ್ತಾನೆ ಎಂಬ ಯುಕ್ತಿಯನ್ನು ಹೇಳಿದಂತಾಯಿತು. 'ಈಶ್ವರಃ ಸೃಷ್ಟೌ ಸಾಧನಾನಂತರಂ ನ ಅಪೇಕ್ಷತೇ ಸ್ವತಂತ್ರತ್ವಾತ್' ಎಂಬುದೇ ಆ ಯುಕ್ತಿ.

**''युक्तेः'' इत्यत्र तु साधनं विना कर्तुं शक्तस्यापि स्वेच्छया लीलया स्वाधीन-साधनान्तरोपादानमैश्वर्याविरोधित्वाद्युक्तमित्युक्तम् ।**

'ಆರಂಭಣಶಬ್ದಾದಿಭ್ಯಃ' ಮೊದಲನೆಯ ಸೂತ್ರದಲ್ಲಿ ಯುಕ್ತಿಯನ್ನು ಹೇಳಿದ ಮೇಲೆ ಪುನಃ 'ಯುಕ್ತೇಃ ಶಬ್ದಾಂತರಾಚ್ಚ' ಎಂಬ ಸೂತ್ರದಿಂದ ಯುಕ್ತಿಯನ್ನೇ ಹೇಳಿದರೆ ಪುನರುಕ್ತಿ ಬರುತ್ತದಲ್ಲವೇ? ಎಂದು ಶಂಕಿಸಬಾರದು. ಈ ಸೂತ್ರದಲ್ಲಿರುವ 'ಯುಕ್ತೇಃ' ಎಂಬ ಪದಕ್ಕೆ ಯುಕ್ತವಾದ್ದರಿಂದ ಎಂದಷ್ಟೇ ಅರ್ಥ ಹೊರತು, ಯುಕ್ತಿಯೆಂಬ ಪ್ರಮಾಣವಿರುವುದರಿಂದ ಎಂದರ್ಥವಲ್ಲ. ಸರ್ವಸಮರ್ಥನಾದ ಈಶ್ವರನು ಸಾಧನಗಳನ್ನು ಅವಲಂಬಿಸದೆ ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ. ಆದರೂ ಕೂಡ ಸ್ವೇಚ್ಛೆಯಿಂದ ಕೇವಲ ಲೀಲೆಗೋಸ್ಕರ ತನ್ನ ಅಧೀನವೇ ಆಗಿರುವ ಪ್ರಕೃತಿ, ಕಾಲ ಮೊದಲಾದ ಸಾಧನೆಗಳನ್ನು ಉಪಾದಾನಕಾರಣವನ್ನಾಗಿ ಮಾಡಿಕೊಳ್ಳುತ್ತಾನೆ. ಇದರಿಂದ ಅವನ ಐಶ್ವರ್ಯಕ್ಕೆ ಯಾವುದೇ ಚ್ಯುತಿ ಬರುವುದಿಲ್ಲ. ಹೀಗೆ 'ಯುಕ್ತೇಃ ಶಬ್ದಾಂತರಾಚ್ಚ' ಎಂಬ ಸೂತ್ರವು ಸಮರ್ಥನೆ ಮಾಡಿದೆ.

**''पटवच'' इत्यत्र तु साधनमात्रमस्तीत्यत्र सृष्टित्वादियुक्तिरुक्ता ।**

'ಪಟವಚ್ಚ' ಎಂಬ ಸೂತ್ರದಲ್ಲಿ ದೃಷ್ಟಾಂತವನ್ನು ಹೇಳಿರುವುದರಿಂದ ಯುಕ್ತಿಯನ್ನು ಹೇಳಿದಂತಾಯಿತಲ್ಲವೇ? ಎಂದು ಸಂದೇಹ ಪಡಬಾರದು. ಸಾಧನೆಯ ಅಪೇಕ್ಷೆಯೇ ಇರುವುದಿಲ್ಲ ಎಂಬುದಕ್ಕೆ 'ಈಶ್ವರಸೃಷ್ಟಿಃ ಸಾಧನನಿರಪೇಕ್ಷಾ ಸೃಷ್ಟಿತ್ವಾತ್' ಎಂದು ಪೂರ್ವಪಕ್ಷಿಯು ಆಕ್ಷೇಪ ಮಾಡಿದರೆ, ಈಶ್ವರನಿಗೆ ಸಾಧನಾ ಅಪೇಕ್ಷೆ ಇದೆ ಎಂದು ಸಮರ್ಥಿಸಲು ಸೃಷ್ಟಿತ್ವಾದಿ ಯುಕ್ತಿಯನ್ನು ಹೇಳಿರುತ್ತಾರೆ. ಆದ್ದರಿಂದ ಪುನರುಕ್ತಿಯು ಬರುವುದಿಲ್ಲ.

**''यथा प्राणादिः'' इत्यत्र तु साधनं स्वतन्त्रं साधनत्वादिति पूर्वपक्षयुक्तेर्बाधा युक्तमिति न पुनरुक्तिः ।**

'ಯಥಾ ಪ್ರಾಣಾದಿಃ' ಎಂಬ ಸೂತ್ರದಲ್ಲಿಯೂ ಪೂರ್ವಪಕ್ಷದ ಯುಕ್ತಿಗೆ ಬಾಧವನ್ನಷ್ಟೇ ಹೇಳಿದ್ದಾರೆ ಪ್ರತ್ಯೇಕವಾದ ಸಿದ್ಧಾಂತಯುಕ್ತಿಯನ್ನು ಹೇಳಿರುವುದಿಲ್ಲ. 'ಸಾಧನಂ ಸ್ವತಂತ್ರಂ ಸಾಧನತ್ವಾತ್' ಎಂಬ ಯುಕ್ತಿಯಿಂದ ಈಶ್ವರನು ಅಪೇಕ್ಷಿಸುವ ಸಾಧನೆಗಳು ಸ್ವತಂತ್ರವಾಗಿವೆ ಎಂದು ಪೂರ್ವಪಕ್ಷ ಮಾಡಲಾಗಿತ್ತು. ಈ ಸೂತ್ರದಲ್ಲಿ ಈಶ್ವರನು ಅಪೇಕ್ಷಿಸುವ ಸಾಧನಗಳು ಈಶ್ವರನ ಅಧೀನವೇ ಆಗಿರುವುದರಿಂದ ಸ್ವತಂತ್ರವಲ್ಲವೆಂದು ಸಮರ್ಥಿಸಿ, ಪೂರ್ವಪಕ್ಷಯುಕ್ತಿಗೆ ಬಾಧವನ್ನು ಹೇಳಲಾಗಿದೆ.

**''सत्त्वाचावरस्य'' इत्यत्र तु स्वतन्त्रसाधनास्तित्वे शङ्किताया ''अद्भ्यः सम्भूतः'' इत्यादिश्रुतेः परतन्त्रसाधनपरत्वं ''काल आसीत्'' इत्यादिश्रुत्यन्तर-संवादेनोक्तम् ।**

'ಸತ್ತ್ವಾಚ್ಚಾವರಸ್ಯ' ಎಂಬ ಸೂತ್ರದಲ್ಲಿ ಸ್ವತಂತ್ರವಾದ ಸಾಧನೆಗಳಿವೆ ಎಂಬ ವಿಷಯದಲ್ಲಿ ಪೂರ್ವಪಕ್ಷಿಯು ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಿದ್ದನು. ಆದರೆ ಈ ಶ್ರುತಿಯು ಈಶ್ವರಾಧೀನವಾದ ಸಾಧನೆಗಳಿದ್ದವು ಎಂಬ ವಿಷಯದಲ್ಲೇ ಪ್ರಮಾಣವಾಗಿವೆ ಹೊರತು, ಸ್ವತಂತ್ರವಾದ ಸಾಧನೆಗಳಿದ್ದವು ಎಂಬ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಈ ವಿಷಯದಲ್ಲಿ 'ಕಾಲ ಆಸೀತ್' ಇತ್ಯಾದಿ ಶ್ರುತಿಯ ಸಂವಾದವಿದೆ. 'ಕಾಲ ಆಸೀತ್' ಎಂಬ ಶ್ರುತಿಯಲ್ಲಿ ಸ್ಪಷ್ಟವಾಗಿ ಈಶ್ವರ ಕಾಲ ಮೊದಲಾದವುಗಳಿದ್ದವು ಎಂದು ಹೇಳಲಾಗಿದೆ.

**''शब्दान्तराच्च'' इत्यत्र तु परतन्त्रमपि साधनं मास्त्विति शङ्कानिरासाय तदस्तित्वे ''अद्भ्य'' इत्यादिश्रुतिरुक्तेति भेदः ।**

'ಶಬ್ದಾಂತರಾಚ್ಚ' ಎಂಬ ಸೂತ್ರದಲ್ಲಿ ಈಶ್ವರಾಧೀನವಾದ ಸಾಧನೆಗಳನ್ನು ಒಪ್ಪಿಯೂ ಉಪಯೋಗವಿಲ್ಲ. ಆದ್ದರಿಂದ ಯಾವುದೇ ಸಾಧನೆಗಳೇ ಇರುವುದಿಲ್ಲ ಎಂಬ ಆಶಂಕೆಯನ್ನು ನಿರಾಕರಿಸಲು ಈಶ್ವರಾಧೀನವಾದ ಕಾಲ, ಪ್ರಕೃತಿ ಮೊದಲಾದ ಸಾಧನೆಗಳ ವಿಷಯದಲ್ಲಿ 'ಅದ್ಭ್ಯಃ ಸಂಭೂತ' ಇತ್ಯಾದಿ ಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಲಾಗಿದೆ. ಆದ್ದರಿಂದ ಪ್ರತಿಯೊಂದು ಸೂತ್ರಗಳ ಪ್ರಮೇಯವು ಭಿನ್ನಭಿನ್ನ-ವಿಷಯಕವಾದ್ದರಿಂದ ಪುನರುಕ್ತಿದೋಷಕ್ಕೆ ಅವಕಾಶವಿಲ್ಲ. ಮತ್ತು ಸೂತ್ರಾನುಗುಣ್ಯವೂ ಇರುತ್ತದೆ.

**अनुव्याख्याने तु**

**शक्तोऽपि भगवान् विष्णुरकर्तुं कर्तुमन्यथा ।**
**स्वभिन्नं कारणाभिन्नं भिन्नं विश्वं करोत्यजः ।।**

**इति सोपपत्तिका श्रुतिरपि शब्दान्तरशब्दार्थ इत्युक्तम् ।**

'ಶಬ್ದಾಂತರಾಚ್ಚ' ಎಂಬ ಸೂತ್ರದಲ್ಲಿರುವ ಶಬ್ದಾಂತರ ಶಬ್ದಕ್ಕೆ ಅನುವ್ಯಾಖ್ಯಾನದಲ್ಲಿ ಹೀಗೆ ವ್ಯಾಖ್ಯಾನ ಮಾಡಿದ್ದಾರೆ -

ಶಕ್ತೋಽಪಿ ಭಗವಾನ್ವಿಷ್ಣುರಕರ್ತ್ರುಂ ಕರ್ತುಮನ್ಯಥಾ ।
ಸ್ವಭಿನ್ನಂ ಕಾರಣಾಭಿನ್ನಂ ಭಿನ್ನಂ ವಿಶ್ವಂ ಕರೋತ್ಯಜಃ ॥

ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವು ಕರ್ತುಂ ಅಕರ್ತುಂ ಅನ್ಯಥಾಕರ್ತ್ರುಂ' ಸಮರ್ಥನಾಗಿದ್ದಾನೆ. ಇವನು ತನಗಿಂತ ಭಿನ್ನವಾದ ಯಾವ ಉಪಾದಾನಕಾರಣಗಳಿವೆಯೋ, ಅವುಗಳಿಂದ ಅಭಿನ್ನವಾದ ತನಗಿಂತ ಭಿನ್ನವಾದ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಹೀಗೆ ಉಪಪತ್ತಿಸಹಿತವಾದ ಶ್ರುತಿಯೂ ಕೂಡ ಶಬ್ದಾಂತರಶಬ್ದದ ಅರ್ಥವಾಗಿದೆ.

**तथानुव्याख्याने न केवलं भाष्यरीत्या ''तम आसीत्'' इति वाक्यशेषान्यथानुपपत्त्या ''नासदासीत्'' इत्यादेः स्वतन्त्रसाधननिषेधपरता । किन्तु ''नपर'' इति साक्षात्स्वातन्त्र्यनिषेधाच्चेति वक्तुं ''तस्माद्धान्यन्नपरः किं चनास'' इति वाक्यमपि सौत्रवाक्यशेषशब्दार्थ इत्युक्तम् ।**

ಸೂತ್ರದಲ್ಲಿರುವ ವಾಕ್ಯಶೇಷ ಶಬ್ದದ ಅರ್ಥವನ್ನೂ ಕೂಡ ಅನುವ್ಯಾಖ್ಯಾನದಲ್ಲಿ ಹೀಗೆ ವ್ಯಾಖ್ಯಾನ ಮಾಡಿರುತ್ತಾರೆ - ಕೇವಲ ಭಾಷ್ಯದ ಪ್ರಕಾರ 'ತಮ ಆಸೀತ್' ಎಂಬ ವಾಕ್ಯಶೇಷದ ಅನ್ಯಥಾನುಪಪತ್ತಿಯಿಂದ 'ನಾಸದಾಸೀತ್' ಎಂಬ ಶ್ರುತಿಯು ಸ್ವತಂತ್ರಸಾಧನೆಯನ್ನು ನಿಷೇಧ ಮಾಡುತ್ತಿರುವುದಷ್ಟೇ ಅಲ್ಲ ಹೊರತಾಗಿ 'ನ ಪರಃ' ಎಂಬುದಾಗಿ ನೇರವಾಗಿಯೇ ಅಂಥ ಉಪಾದಾನಕಾರಣಗಳಲ್ಲಿ ಸ್ವಾತಂತ್ರ್ಯವಿಲ್ಲವೆಂದು ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಇದನ್ನು ತಿಳಿಸಲು 'ತಸ್ಮಾದ್ಧಾನ್ಯನ್ನಪರಃ ಕಿಂಚನಾಸ' ಎಂಬ ವಾಕ್ಯವೂ ಕೂಡ ಸೂತ್ರದಲ್ಲಿರುವ ವಾಕ್ಯಶೇಷದ ಶಬ್ದದಿಂದ ಪ್ರತಿಪಾದ್ಯವಾಗಿದೆ ಎಂದು ತಿಳಿಯಬೇಕು.

**प्रकाशः –**

''युक्तिविरुद्धं चानुमानम्'' इत्यादिसौत्रादिपदोक्तयुक्तिविवृतिपरभाष्य-टीकोक्तन्यायं सङ्गृह्णाति ।। **स्वतन्त्रेति** ।।

'ಯುಕ್ತಿವಿರುದ್ಧಂ ಚ ಅನುಮಾನಮ್' ಎಂಬುದಾಗಿ ಭಾಷ್ಯದಲ್ಲಿ ಹೇಳಿರುತ್ತಾರೆ. ಪ್ರಥಮಸೂತ್ರದಲ್ಲಿರುವ ಆದಿಪದದಿಂದ ಈ ವಿಷಯವು ತಿಳಿಯಲ್ಪಡುತ್ತದೆ. ಅಂಥ ಯುಕ್ತಿಯನ್ನು ವಿವರಣೆ ಮಾಡುವ ಟೀಕೆಯಲ್ಲಿ ಹೇಳಲ್ಪಟ್ಟ ಸಿದ್ಧಾಂತ ನ್ಯಾಯವನ್ನು ಗ್ರಂಥಕಾರರು 'ಸ್ವತಂತ್ರ' ಇತ್ಯಾದಿ ಶ್ಲೋಕದಿಂದ ಸಂಗ್ರಹಿಸುತ್ತಿದ್ದಾರೆ.

**प्रकाशः –** एतेन स्वतन्त्रकर्तृत्वादीश्वरो नोक्तविधसाधनापेक्षः । व्यतिरेकेण कुलालादिवदित्यादियुक्तिबाधिताः प्रागुक्तहेतव इत्युक्तं भवति ।

ಹೀಗೆ ಹೇಳಿದ್ದರಿಂದ ಈಶ್ವರನು ಸ್ವತಂತ್ರಕರ್ತೃವಾಗಿರುವ ಕಾರಣ ಪ್ರಕೃತಿ, ಕಾಲ ಮೊದಲಾದ ಬೇರೆ ಸ್ವತಂತ್ರಸಾಧನಗಳನ್ನು ಅಪೇಕ್ಷಿಸುವುದಿಲ್ಲ ಎಂದು ಅನುಮಾನವನ್ನು ಮಾಡಿದಂತಾಯಿತು. 'ಈಶ್ವರಃ

ಸ್ವತಂತ್ರಸಾಧನಾಪೇಕ್ಷಾ ನ ಭವತಿ ಸ್ವತಂತ್ರಕರ್ತೃತ್ವಾತ್ ವ್ಯತಿರೇಕೇಣ ಕುಲಾಲಾದಿವತ್' ಈ ಯುಕ್ತಿಯಿಂದ ಪೂರ್ವಪಕ್ಷಿಯಿಂದ ಹೇಳಲ್ಪಟ್ಟ ಹೇತುಗಳೆಲ್ಲವೂ ಬಾಧಿತವಾಗುತ್ತದೆಂದು ತಿಳಿಸಿದ್ದಾರೆ.

**प्रकाशः** – ननूक्तमप्रयोजकोयं हेतुरित्यतस्तदनुग्राहिका श्रुतिरस्तीति भावेन ''सत्त्वाच'' इति सूत्रभाष्यटीकातात्पर्यमाह – **द्रव्यस्येति ॥**

ಸ್ವತಂತ್ರಕರ್ತೃತ್ವವೆಂಬ ಹೇತುವಿರಲಿ, ಆದರೂ ಸ್ವತಂತ್ರವಾದ ಬೇರೆ ಸಾಧನೆಗಳನ್ನು ಅಪೇಕ್ಷಿಸಲಿ ಎಂಬುದಾಗಿ ಅನುಮಾನದಲ್ಲಿ ಅಪ್ರಯೋಜಕಾಶಂಕೆ ಬರುತ್ತದಲ್ಲವೇ? ಎಂಬ ಸಂದೇಹಕ್ಕೆ ಅನುಕೂಲತರ್ಕಕ್ಕೆ ಪೂರಕವಾದ ಶ್ರುತಿಯಿರುತ್ತದೆ. ಒಂದುವೇಳೆ ಸ್ವತಂತ್ರವಾದ ಬೇರೆ ಸಾಧನೆಗಳನ್ನು ಅಪೇಕ್ಷಿಸುವುದಾದರೆ ಈಶ್ವರನಲ್ಲಿ ಸ್ವತಂತ್ರಕರ್ತೃತ್ವವೂ ಕೂಡ ಇಲ್ಲದಿರುವ ಪರಿಸ್ಥಿತಿ ಬರುತ್ತದೆ. ಆದರೆ ಈಶ್ವರನು ಸ್ವತಂತ್ರಕರ್ತೃವಾಗಿದ್ದಾನೆನ್ನಲು ಅನೇಕ ಶ್ರುತಿಗಳು ಆಧಾರವಾಗಿವೆ ಎಂಬುದನ್ನು 'ಸತ್ತ್ವಾಚ್ಚ' ಎಂಬ ಸೂತ್ರವು ಪ್ರತಿಪಾದನೆ ಮಾಡುತ್ತಿದೆ. ಈ ಸೂತ್ರದ ಭಾಷ್ಯಟೀಕೆಗಳ ತಾತ್ಪರ್ಯವನ್ನು ಎರಡನೆಯ ಶ್ಲೋಕದಿಂದ 'ದ್ರವಸ್ಯ' ಇತ್ಯಾದಿಯಾಗಿ ಗ್ರಂಥಕಾರರು ಸಂಗ್ರಹಿಸಿದ್ದಾರೆ.

**प्रकाशः** – ''द्रव्यं कर्मच'' इति श्रुताविति भावः । एतेन ''अद्भ्य'' इत्यादेरप्येतच्छत्यनुरोधेन परतन्त्रसाधनपरतया तत्संवादाभावेन ''किं स्विदासीत्'' इत्यादेराक्षेपपरतया परतन्त्रसाधनपरानेकश्रुतिसहितयुक्तिबाधिताः पूर्ववाद्युक्त-केवलहेतवः ।

'ದ್ರವ್ಯಂ ಕರ್ಮ ಚ ಕಾಲಸ್ಯ' ಎಂಬ ಶ್ರುತಿಯನ್ನು 'ದ್ರವ್ಯಸ್ಯ ಕರ್ಮಕಾಲಾದೇಃ' ಎಂಬ ಮಾತಿನಿಂದ ಸಂಗ್ರಹಿಸಿದ್ದಾರೆ. ಹೀಗೆ ಹೇಳಿದ್ದರಿಂದ ಪೂರ್ವಪಕ್ಷಿಗಳು ಹೇಳಲ್ಪಟ್ಟ ಯುಕ್ತಿಗಳು ಬಾಧಿತವಾದವು. 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯೂ ಕೂಡ 'ದ್ರವ್ಯಂ ಕರ್ಮಚ ಕಾಲಸ್ಯ' ಎಂಬ ಶ್ರುತಿಗೆ ಅನುಸಾರಿಯಾಗಿ ಪರತಂತ್ರಸಾಧನೆಯನ್ನೇ ಹೇಳುತ್ತಿದೆ ಎಂದು ವ್ಯಾಖ್ಯಾನ ಮಾಡಬೇಕು. ಯಾವಾಗ 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯ ಸಂವಾದ ಇರುವುದಿಲ್ಲವೋ, ಆವಾಗ 'ಕಿಂ ಸ್ವಿದಾಸೀತ್' ಎಂಬ ಶ್ರುತಿಯಲ್ಲಿರುವ 'ಕಿಂ' ಶಬ್ದವು ಪ್ರಶ್ನಾರ್ಥಕವಲ್ಲ, ಆಕ್ಷೇಪಾರ್ಥಕವೆಂದು ನಿರ್ಣಯವಾಗುತ್ತದೆ. ಆದ್ದರಿಂದ ಪರತಂತ್ರಸಾಧನವನ್ನು ಪ್ರತಿಪಾದನೆ ಮಾಡುವ ಅನೇಕ ಶ್ರುತಿಗಳಿಂದ ಸಹಿತವಾದ ಯುಕ್ತಿಗಳಿಂದ ಪೂರ್ವಪಕ್ಷಿ ಹೇಳಲ್ಪಟ್ಟ ಯುಕ್ತಿಗಳು ಬಾಧಿತವಾಗುತ್ತವೆ.

**प्रकाशः** – एतद्बलादेव गुर्वप्यनीशकर्तृत्वमेवोक्तसाध्ये प्रयोजकं कल्प्यम् । तेन प्रमितत्यागायोगादिति भावस्सूचितः ।

ಈ ಆಧಾರದಿಂದ ಗುರುವಾಗಿದ್ದರೂ ಕೂಡ ಅನೀಶಕರ್ತೃಕತ್ವವನ್ನೇ ಸಾಧ್ಯದಲ್ಲೇ ಪ್ರಯೋಜಕವೆಂದು ಕಲ್ಪನೆ ಮಾಡಬೇಕು. ಆದ್ದರಿಂದ ಪ್ರಮಿತವಾದದ್ದನ್ನು ತ್ಯಾಗ ಮಾಡಿದಂತಾಗುವುದಿಲ್ಲ ಎಂಬ ಭಾವನೆಯನ್ನು ಸೂಚನೆ ಮಾಡಿದಂತಾಯಿತು.

**प्रकाशः** – नन्वीशस्य स्वतन्त्रत्वे महदादिसाधनसम्पादनेन कार्यनिर्माणमयुक्तम्। साधननिरपेक्षेणैव करणप्रसङ्गादित्यतः ''युक्तेः'' इति सूत्रांशभाष्यादितात्पर्यमाह – **नानेति ।।**

ಈಶ್ವರನು ಸ್ವತಂತ್ರನಾದರೆ ಮಹತ್ತತ್ತ್ವ ಮೊದಲಾದ ಸಾಧನೆಗಳನ್ನು ಸಂಪಾದನೆ ಮಾಡಿ, ಜಗತ್ತೆಂಬ ಕಾರ್ಯವನ್ನು ನಿರ್ಮಾಣ ಮಾಡಲು ಸಾಧ್ಯವಿಲ್ಲ. ಏಕೆಂದರೆ ಅವನು ಸ್ವತಂತ್ರನಾದ್ದರಿಂದ ಮಹದಾದಿ ಸಾಧನೆಗಳನ್ನು ಅಪೇಕ್ಷೆ ಪಡದೇ ಜಗತ್ತನ್ನು ನಿರ್ಮಾಣ ಮಾಡಬಹುದಲ್ಲವೇ? ಈ ಪ್ರಶ್ನೆಗೆ 'ಯುಕ್ತೇಃ' ಎಂಬ ಸೂತ್ರಾಂಶದ ಭಾಷ್ಯದ ತಾತ್ಪರ್ಯವನ್ನು 'ನಾನಾಶಿಲ್ಪೇಷು' ಇತ್ಯಾದಿ ಶ್ಲೋಕದ ಭಾಗದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – नन्वीशस्य शक्तत्वाल्लोकवैषम्यमित्यत आह – **स्वाधीनेति ।।** तुरीयपादोक्तं व्यनक्ति – ***लीलयेति*** **।।**

ಈಶ್ವರನು ಶಕ್ತನಾದ್ದರಿಂದ ಲೌಕಿಕ ದೃಷ್ಟಾಂತವನ್ನು ಹೇಳುವ ಅವಶ್ಯಕತೆಯಿಲ್ಲ. ಅಲೌಕಿಕನಾದ ಈಶ್ವರನು ಉಪಾದಾನಕಾರಣಾದಿಗಳನ್ನು ಬಿಟ್ಟು ಕೂಡ ಸೃಷ್ಟಿ ಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ 'ಸ್ವಾಧೀನ' ಎಂಬ ಶ್ಲೋಕದ ಭಾಗದಿಂದ ಉತ್ತರಿಸಿದ್ದಾರೆ. ತನ್ನ ಅಧೀನವಾದ ಪರಿಕರಗಳನ್ನು ಉಪಯೋಗಿಸಿಕೊಂಡು ಸೃಷ್ಟಿ ಮಾಡಿದಾಗ ಅವನಲ್ಲಿರುವ ಈಶತ್ವಕ್ಕೆ ಭಂಗ ಬರುವುದಿಲ್ಲ. ಇದನ್ನೇ 'ಲೀಲೆಯಾ ದಂಡಮಾಲಂಬ್ಯ' ಎಂಬುದರಿಂದ ದೃಷ್ಟಾಂತವನ್ನು ನೀಡಿ ಸ್ಪಷ್ಟಪಡಿಸಿದ್ದಾರೆ.

**प्रकाशः** – ननु साधनानामीशायत्तत्वेऽनवस्थोक्तेति चेन्न । अन्ततोऽनादित्वोपगमात् । न चानादित्वेऽन्याधीनत्वायोगः । गायत्र्यधिकरण एवास्यार्थस्योपपादनादिति भावेनाह – **अनादीति ।।**

ಪ್ರಕೃತಿ, ಕಾಲ ಮೊದಲಾದ ಸಾಧನೆಗಳು ಈಶ್ವರಾಧೀನವಾದರೆ ಅನವಸ್ಥಾದೋಷ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಕೃತಿ, ಕಾಲ ಮೊದಲಾದವುಗಳನ್ನು ಅನಾದಿ ಎಂದು ನಾವು ಒಪ್ಪಿರುತ್ತೇವೆ. ಅನಾದಿಯಾದ ಮಾತ್ರಕ್ಕೆ ಈಶ್ವರನ ಅಧೀನವಾಗಬಾರದೆಂದೇನೂ ನಿಯಮವಿಲ್ಲ. ಗಾಯತ್ರ್ಯಧಿಕರಣದಲ್ಲಿ ಈ ವಿಷಯವನ್ನು ಸ್ಪಷ್ಟವಾಗಿ ಉಪಪಾದನೆ ಮಾಡಿದ್ದೇವೆ. ಈ ಅಭಿಪ್ರಾಯದಿಂದ 'ಅನಾದಿ' ಇತ್ಯಾದಿ ವಾಕ್ಯವು ಹೊರಟದೆ.

**प्रकाशः** – ननु ''किं स्विदासीत्'' इति सौत्रश्रुतौ साधनमात्राक्षेपो भाति । अन्यथा तद्विशेषलक्षणापत्तेः कथं साधनान्तरोपगमनमित्यत आह – **साधनेति ।।**

'ಕಿಂ ಸ್ವಿದಾಸೀತ್' ಎಂಬಲ್ಲಿರುವ ಶ್ರುತಿಯು ಯಾವುದೇ ಸಾಧನೆಗಳಿಲ್ಲದಿರುವುದಿಲ್ಲವೆಂದು ಆಕ್ಷೇಪ ಮಾಡಿದಂತೆ ತೋರುತ್ತದೆ. ಇಲ್ಲದಿದ್ದರೆ ವಿಶೇಷವಾದ ಸಾಧನೆಗಳೆಂದು ಹೇಳಬೇಕಾಗಿತ್ತು. ಹೀಗೆ ಆಕ್ಷೇಪ

ಮಾಡುತ್ತಿರುವಾಗ ಬೇರೆ ಸಾಧನೆಗಳನ್ನು ಹೇಗೆ ಒಪ್ಪುತ್ತೀರಿ ? ಎಂಬ ಪ್ರಶ್ನೆಗೆ 'ಸಾಧನಾಂತರಸ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – आद्यसूत्रे ''सिद्धसाधनता स्यादित्यतो बह्वित्युक्तम्'' इति वाक्योक्तसिद्धसाधनतां व्यनक्ति ।। **बह्विति** ।।

ಪ್ರಥಮಸೂತ್ರದಲ್ಲಿ 'ಸಿದ್ಧಸಾಧನತಾ ಸ್ಯಾದಿತ್ಯತೋ ಬಹ್ವಿತ್ಯುಕ್ತಮ್' ಎಂಬ ವಾಕ್ಯದಿಂದ ಹೇಳಲ್ಪಟ್ಟ ಸಿದ್ಧಸಾಧನತಾದೋಷವನ್ನು ಗ್ರಂಥದಲ್ಲಿ 'ಬಹ್ವಿತ್ಯುಕ್ತಮ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – एवमस्पष्टानि कानिचिद्वाक्यानि व्यक्तीकृत्य सूत्रविचारमारभते ।। **यद्यपीति** ।।

ಇಲ್ಲಿಯತನಕ ಟೀಕೆಯಲ್ಲಿರುವ ಕೆಲವು ಅಸ್ಪಷ್ಟವಾದ ವಾಕ್ಯಗಳನ್ನು ವ್ಯಾಖ್ಯಾನ ಮಾಡಿ, ಸೂತ್ರದ ಆನುಗುಣ್ಯದ ಬಗ್ಗೆ, ಸೂತ್ರಾರ್ಥವಿಚಾರದ ಬಗ್ಗೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – अन्यत्तु तन्त्रदीपिकायां व्यक्तीकृतमस्माभिः । ''प्राचीनश्रुतिसङ्ग्रहाय शब्दान्तरादित्युक्तम्'' इति टीकयैकार्थत्वप्रतीतेराह – प्रकारान्तरेणापि पौनरुक्त्यं निराह – **अनुव्याख्यानेत्विति** ।।

ಗ್ರಂಥದಲ್ಲಿ ಟೀಕೆಯಲ್ಲಿರುವ ಶಬ್ದಗಳ ಸ್ವಾರಸ್ಯವನ್ನು ವರ್ಣನೆ ಮಾಡಿದ್ದಾರೆ. ಇನ್ನೂ ಹೆಚ್ಚಿನ ವಿಚಾರವನ್ನು ನಾವು ಬರೆದಿರುವ ತಂತ್ರದೀಪಿಕಾಗ್ರಂಥವನ್ನು ಓದಿ ತಿಳಿದುಕೊಳ್ಳಬೇಕು. 'ಪ್ರಾಚೀನಶ್ರುತಿಸಂಗ್ರಹಾಯ ಶಬ್ದಾಂತರಾದಿತ್ಯುಕ್ತಮ್' ಹಿಂದೆ ಉಲ್ಲೇಖಿಸಿದ ಶ್ರುತಿಯನ್ನು ಸಂಗ್ರಹಿಸಲು 'ಶಬ್ದಾಂತರಾತ್' ಎಂದು ಹೇಳಿದ್ದಾರೆ. ಹೀಗೆ ಈ ಟೀಕಾಮಾತನ್ನು ನೋಡಿದಾಗ ಒಂದೇ ಅರ್ಥವನ್ನು ಪ್ರತಿಪಾದನೆ ಮಾಡಿದಂತೆ ಕಾಣಸುತ್ತದೆ. ಅದಕ್ಕೋಸ್ಕರ 'ಶಬ್ದಾಂತರಾಚ್ಚ' ಇತ್ಯಾದಿ ವಾಕ್ಯವು ಹೊರಟಿದೆ. ಮತ್ತೊಂದು ಪ್ರಕಾರದಿಂದ ಪೌನರುಕ್ತ್ಯವನ್ನು 'ಅನುವ್ಯಾಖ್ಯಾನೇ ತು' ಇತ್ಯಾದಿಯಾಗಿ ನಿರಾಕರಿಸಿದ್ದಾರೆ.

**प्रकाशः** – विरोधमाशङ्क्य वर्णकभेदेन समाधत्ते ।। **तथेति** ।। ''तद्वशस्य भावो नपर इत्यत'' इत्यनुव्याख्याने इत्यर्थः । शिष्टं सुगममिति भावः ।

ಸೂತ್ರದಲ್ಲಿರುವ ವಿರೋಧವನ್ನು ಆಶಂಕಿಸಿ, ಬೇರೆ ವ್ಯಾಖ್ಯಾನದಿಂದ ಸಮಾಧಾನವನ್ನು ಮಾಡಲು 'ತಥಾ' ಇತ್ಯಾದಿ ವಾಕ್ಯವು ಹೊರಟಿದೆ. 'ತದ್ವಶಸ್ಯ ಭಾವೋ ನಪರಃ ಇತ್ಯತ' ಎಂಬ ಅನುವ್ಯಾಖ್ಯಾನದಲ್ಲಿ ಎಂದರ್ಥ. ಉಳಿದ ವಿಚಾರವು ಅತ್ಯಂತ ಸರಳವಾಗಿ ತಿಳಿಯುತ್ತದಾದ್ದರಿಂದ ವ್ಯಾಖ್ಯಾನ ಮಾಡಿಲ್ಲ.

ಆರಂಭಣಾಧಿಕರಣ (2-1-6)




ಸ್ವತಂತ್ರಸಾಧನಾಪೇಕ್ಷಾ ಲೋಕೇಽಶಕ್ತಿನಿಬಂಧನಾ ।
ಈಶ್ವರಸ್ಯ ತ್ವಸಾಮರ್ಥ್ಯಂ ನ ಕುತ್ರಾಪೀಶ್ವರತ್ವತಃ ॥೧॥

ದ್ರವಸ್ಯ ಕರ್ಮಕಾಲಾದೇಃ ಶ್ರೂಯತೇ ಚೇಶತಂತ್ರತಾ ।
ನಾನಾಶಿಲ್ಪೇಷು ನಿಪುಣಃ ಸಾಧನಂ ಸ್ವಯಮೇವ ಹಿ ॥೨॥

ಸಂಪಾದ್ಯತೇ ನ ಕಾರ್ಯಾಣಿ ಕುರ್ವಂಲ್ಲೋಕೇಪಿ ದೃಶ್ಯತೇ ।
ಸ್ವಾಧೀನಸಾಧನಾದಾನಂ ತ್ವೀಶಸ್ಯ ನ ವಿರುಧ್ಯತೇ ॥೩॥

ಪ್ರಮಿತತ್ವಾಚ್ಚ ಲೀಲಾತ್ವಾದೀಶತ್ವಾಘಾತುಕತ್ವತಃ ।
ಲೀಲಯಾ ದಂಡಮಾಲಂಬ್ಯ ಗಚ್ಛನ್ ಕಿಂ ಪಂಗುತಾಂ ವ್ರಜೇತ್ ॥೪॥

ಅಸಾಮರ್ಥ್ಯವಿದ್ದರೆ ಮಾತ್ರ ಸ್ವತಂತ್ರವಾದ ಬೇರೆ ಪರಿಕರಗಳನ್ನು ಅಪೇಕ್ಷಿಸಿ ಸೃಷ್ಟಿಯನ್ನು ಮಾಡುವುದು ಕುಲಾಲ ಮೊದಲಾದವರಲ್ಲಿ ನಾವು ಕಂಡಿದ್ದೇವೆ. ಆದರೆ ಈಶ್ವರನು ಸರ್ವಸಮರ್ಥನಾದ್ದರಿಂದ ಈಶ್ವರನಲ್ಲಿ ಅಸಾಮರ್ಥ್ಯವಿದೆಯೆಂದು ಎಲ್ಲಿಯೂ ಹೇಳಿಲ್ಲವಾದ್ದರಿಂದ ಸ್ವತಂತ್ರವಾದ ಬೇರೆ ಸಾಧನೆಗಳನ್ನು ಅವನು ಅವಲಂಬಿಸಬೇಕಾಗಿಲ್ಲ.

'ದ್ರವ್ಯಂ ಕರ್ಮ ಚ ಕಾಲಶ್ಚ' ಎಂಬ ಶ್ರುತಿಯು, ಪ್ರಕೃತಿ, ಕರ್ಮ ಮೊದಲಾದವುಗಳೆಲ್ಲವೂ ಈಶ್ವರನ ಅಧೀನವಾಗಿವೆ ಎಂಬುದಾಗಿ ಘೋಷಣೆ ಮಾಡುತ್ತಿದೆ. ಯಾವರೀತಿಯಾಗಿ ಅನೇಕ ಶಿಲ್ಪಗಳನ್ನು ನಿರ್ಮಾಣ ಮಾಡುವುದರಲ್ಲಿ ನಿಪುಣನಾದ ಶಿಲ್ಪಿಕಾರನು 'ಉಳಿ' ಮೊದಲಾದ ಕೆತ್ತನೆಯ ಸಾಮಗ್ರಿಗಳನ್ನು ಸ್ವತಃ ತಾನೇ ನಿರ್ಮಾಣ ಮಾಡಿಕೊಳ್ಳುತ್ತಾನೋ, ಮತ್ತು ಅದೇ ಪರಿಕರಗಳಿಂದ ಶಿಲ್ಪಗಳನ್ನು ನಿರ್ಮಾಣ ಮಾಡುತ್ತಾನೆಂದು ಲೋಕದಲ್ಲಿ ಕಂಡಿದೆಯೋ, ಇದರಂತೆ ಈಶ್ವರನೂ ಕೂಡ ತನ್ನ ಅಧೀನವೇ ಆಗಿರುವ ಪ್ರಕೃತಿ, ಕರ್ಮ ಮೊದಲಾದ ಸಾಧನೆಗಳನ್ನು ಉಪಯೋಗಿಸಿಕೊಂಡು, ಜಗತ್ತನ್ನು ಸೃಷ್ಟಿ ಮಾಡುತ್ತಾನೆ.

ಈ ವಿಷಯವು ಪ್ರಮಾಣಸಿದ್ಧವಾಗಿದೆ. ಸರ್ವಸಮರ್ಥನಾಗಿದ್ದರೂ ತನ್ನ ಅಧೀನವಾದ ಪ್ರಕೃತಿ ಮೊದಲಾದವುಗಳನ್ನು ಈಶ್ವರನು ಅಪೇಕ್ಷಿಸುವುದು ಕೇವಲ ಲೀಲೆಯಿಂದ. ಇಂಥ ಸ್ವಾಧೀನ ಪರಿಕರಗಳನ್ನು ಉಪಯೋಗಿಸಿಕೊಳ್ಳುವುದರಿಂದ ತನ್ನಲ್ಲಿರುವ ಈಶತ್ವಕ್ಕೆ ಭಂಗವೂ ಕೂಡ ಇಲ್ಲ. ನಡೆಯುವ ವ್ಯಕ್ತಿಯು ಲೀಲೆಗೋಸ್ಕರ ಕೈಯಲ್ಲಿ ಕೋಲನ್ನು ಹಿಡಿದಂತೆ. ಅವನೂ ಕೂಡ ಲೀಲೆಯಿಂದಷ್ಟೇ ಪ್ರಕೃತಿ ಮೊದಲಾದವುಗಳನ್ನು ಉಪಯೋಗಿಸಿಕೊಂಡಿದ್ದಾನೆ. ಕೈಯಲ್ಲಿ ಕೋಲನ್ನು ಹಿಡಿದ ಮಾತ್ರಕ್ಕೆ ಕುಂಟನೆಂದು ಯಾರೂ ಹೇಳುವುದಿಲ್ಲವಷ್ಟೇ.

ಪ್ರಕೃತಿ, ಕಾಲ, ಕರ್ಮ ಇವುಗಳು ಅನಾದಿಯಾಗಿವೆ. ಅಂದಮಾತ್ರಕ್ಕೆ ಈಶ್ವರನ ಅಧೀನವಾಗಬಾರದೆಂದೇನೂ ನಿಯಮವಿಲ್ಲ. ಅನಾದಿಯಾಗಿದ್ದರೂ ಕೂಡ ಅನೇಕ ಪದಾರ್ಥಗಳು ಈಶ್ವರಾಧೀನವಾಗಿವೆ. ಇಂಥ ಪ್ರಕೃತ್ಯಾದಿಗಳನ್ನು

ಪರಿಕರಗಳನ್ನಾಗಿ ಮಾಡಿಕೊಂಡು ಈಶ್ವರನು ಸೃಷ್ಟಿಯನ್ನು ಮಾಡುತ್ತಾನಾದ್ದರಿಂದ ಹಿಂದೆ ಪೂರ್ವಪಕ್ಷದಲ್ಲಿ ಆಕ್ಷೇಪಿಸಿದ ದೋಷಗಳಿಗೆ ಅವಕಾಶವಿಲ್ಲ. 'ಕಿಂ ಸ್ವಿದಾಸೀತ್' ಎಂಬ ಶ್ರುತಿಯಲ್ಲಿರುವ 'ಕಿಂ' ಶಬ್ದವು ಈಶ್ವರನನ್ನು ಬಿಟ್ಟು, ಬೇರೆ ಯಾವ ಸ್ವತಂತ್ರಪದಾರ್ಥಗಳಿವೆ ?ಎಂಬುದಾಗಿ ಆಕ್ಷೇಪವನ್ನು ಮಾಡುತ್ತಿದೆ. 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿ ಈಶ್ವರಾಧೀನವಾದ ಸಾಧನೆಗಳನ್ನೇ ಸಮರ್ಥನೆ ಮಾಡುತ್ತಿದೆ. ಆದ್ದರಿಂದ ಪೂರ್ವಪಕ್ಷದಲ್ಲಿ ಹೇಳಿದಂತೆ ಸ್ವತಂತ್ರಸಾಧನದ ವಿಷಯದಲ್ಲಿ 'ಅದ್ಭ್ಯಃ ಸಂಭೂತ' ಎಂಬ ಶ್ರುತಿಯನ್ನು ಆಧಾರವನ್ನಾಗಿ ವಿವಕ್ಷಿಸಬಾರದು.

ಈ ಅಧಿಕರಣದ ಪ್ರತಿಯೊಂದು ಸೂತ್ರಗಳೂ ಕೂಡ ಅತ್ಯಂತ ಅರ್ಥಪೂರ್ಣವಾಗಿವೆ. 'ಕಿಂ ಸ್ವಿದಾಸೀತ್' ಎಂಬ ಶ್ರುತಿಯಲ್ಲಿ ಮೊದಲು ಅಧಿಷ್ಠಾನಶಬ್ದವು ಕೇಳಿಸುತ್ತಿರುವುದರಿಂದ 'ಆರಂಭಣಶಬ್ದಾದಿಭ್ಯಃ' ಎಂದು ಹೇಳುವ ಬದಲು 'ಅಧಿಷ್ಠಾನಶಬ್ದಾದಿಭ್ಯಃ' ಎಂದು ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಪ್ರಥಮಶ್ರುತವಾದ ಅಧಿಷ್ಠಾನಶಬ್ದವನ್ನು ಬಿಟ್ಟು, ಆರಂಭಣಶಬ್ದವನ್ನು ಸೂತ್ರಕಾರರು ಉಲ್ಲೇಖಿಸಲು ಬಹಳ ಅರ್ಥವಿದೆ. ಆರಂಭಣಶಬ್ದಕ್ಕೆ 'ಕರಣ' ಎಂದರ್ಥ. ಯಾವುದು ಸಾಧನೆಗಳ ನಡುವೆ ಹೆಚ್ಚು ಅನಿವಾರ್ಯವಾಗಿ ಅವ್ಯವಹಿತ-ಪೂರ್ವವರ್ತಿಯಾಗಿರುತ್ತದೋ, ಅದನ್ನು 'ಕರಣ' ಎನ್ನುತ್ತಾರೆ. ಜಗತ್ತಿನ ಸೃಷ್ಟಿಗೆ ಎಲ್ಲಾ ಸಾಧನೆಗಳ ನಡುವೆ ಸ್ವತಂತ್ರನಾದವನು ಶ್ರೇಷ್ಠನಾದವನು ಪರಮಾತ್ಮನೇ ಆಗಿರುತ್ತಾನೆ. ಮತ್ತು ಪರಮಾತ್ಮನಿಂದ ಮಾತ್ರ ಜಗತ್ತಿನ ಸೃಷ್ಟಿಯಾಗಲು ಸಾಧ್ಯ. 'ಕಿಂ ಸ್ವಿದಾಸೀತ್' ಎಂಬ ಶ್ರುತಿಯಲ್ಲಿರುವ ಆರಂಭಣಶಬ್ದವು ಪರಮಾತ್ಮನಲ್ಲಿ ಇಂಥ ಅತಿಶಯತ್ವವನ್ನು ಬಣ್ಣಿಸುತ್ತಿದೆ. ಈ ಪ್ರಮೇಯವನ್ನು ಎತ್ತಿಹಿಡಿಯಲು ಆರಂಭಣಶಬ್ದವನ್ನು ಪ್ರಯೋಗಿಸಿದ್ದಾರೆ. ಇದರಿಂದ ಸ್ವತಂತ್ರನಾದ ಈಶ್ವರನನ್ನು ಹೊರತಾಗಿ, ಬೇರೆ ಯಾವುದೇ ಸ್ವತಂತ್ರಪದಾರ್ಥಗಳು ಇರುವುದಿಲ್ಲವೆಂದೂ ಕೂಡ ತಿಳಿಯುತ್ತದೆ. 'ಯುಕ್ತೇಃ' ಎಂಬ ಸೂತ್ರದ ಭಾಗದಿಂದ ಈಶ್ವರನು ಸರ್ವಸಮರ್ಥನಾಗಿದ್ದರೂ ಕೇವಲ ಲೀಲೆಯಿಂದಷ್ಟೇ ಪ್ರಕೃತಿ ಮೊದಲಾದ ಇತರ ಪದಾರ್ಥಗಳನ್ನು ಪರಿಕರಗಳನ್ನಾಗಿ ಮಾಡಿಕೊಳ್ಳುತ್ತಾನೆ ಎಂದು ಹೇಳಿದ್ದಾರೆ. ಬೇರೆ ಸಾಧನೆಗಳನ್ನು ಅಪೇಕ್ಷಿಸುವುದರಿಂದ ಈಶ್ವರನ ಐಶ್ವರ್ಯಕ್ಕೆ ವಿರೋಧ ಬರುವುದಿಲ್ಲವೆಂಬುದು ಯುಕ್ತವಾಗಿದೆ ಎಂದರ್ಥ. ಹೊರತು, 'ಯುಕ್ತೇಃ' ಎಂಬ ಸೂತ್ರಭಾಗಕ್ಕೆ ಯುಕ್ತಿಯೆಂಬ ಪ್ರಮಾಣವಿರುವುದರಿಂದ ಎಂಬರ್ಥವನ್ನು ತಿಳಿಯಬಾರದು. 'ಪಟವಚ್ಚ' ಎಂಬ ಸೂತ್ರದಲ್ಲಿ ಬೇರೆ ಸಾಧನೆಗಳಿರುವುದರಿಂದ ಸೃಷ್ಟಿಮಾಡುವಿಕೆಯು ಯುಕ್ತವಾಗುತ್ತದೆ ಎಂದು ಹೇಳಿದ್ದಾರೆ. 'ಯಥಾ ಪ್ರಾಣಾದಿಃ' ಎಂಬ ಸೂತ್ರದಲ್ಲಿ ಪ್ರಕೃತಿ ಮೊದಲಾದವುಗಳೂ ಕೂಡ ಸಾಧನೆಯಾಗಿರುವುದರಿಂದ ಸ್ವತಂತ್ರವೇ ಆಗಬೇಕು ಎಂಬ ಪೂರ್ವಪಕ್ಷಗಳ ಯುಕ್ತಿಯನ್ನು ನಿರಾಕರಿಸಿದ್ದಾರೆ. ಸಾಮಾನ್ಯವಾಗಿ ಈ ಎಲ್ಲಾ ಸೂತ್ರಗಳನ್ನು ಮೇಲ್ನೋಟಕ್ಕೆ ನೋಡಿದಾಗ ಯುಕ್ತಿಯನ್ನು ಪ್ರತಿಪಾದನೆ ಮಾಡಲು ಹೊರಟಿವೆ ಆಪತತಃ ತೋರುತ್ತದೆ. ಆದರೆ ಗ್ರಂಥದಲ್ಲಿ ಪ್ರತಿಯೊಂದು ಸೂತ್ರಗಳು ಹೊಸ, ಹೊಸ ಪ್ರಮೇಯವನ್ನು ಹೇಳುತ್ತಿವೆ ಹೊರತು, ಯುಕ್ತಿಯನ್ನಷ್ಟೇ ಹೇಳುತ್ತಿಲ್ಲವೆಂದು ತಿಳಿಸಿದ್ದಾರೆ. 'ಸತ್ವಾಚ್ಚಾವರಸ್ಯ' ಎಂಬ ಸೂತ್ರದಲ್ಲಿಯೂ 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಗೆ ಸ್ವತಂತ್ರಸಾಧನಪರತ್ವವು ಇರುವುದಿಲ್ಲವೆಂದು ಸಮರ್ಥಿಸಿ. 'ಕಾಲ ಆಸೀತ್' ಎಂಬ ಶ್ರುತಿಯು ಈಶ್ವರಾಧೀನವಾದ ಪದಾರ್ಥದ ಅಸ್ತಿತ್ವವನ್ನೇ ಹೇಳುತ್ತಿದೆಯೆಂಬ ಸಂವಾದ ಪ್ರಮಾಣವನ್ನು ನೀಡಿದ್ದಾರೆ. 'ಶಬ್ದಾಂತರಾಚ್ಚ' ಎಂಬ ಸೂತ್ರದಲ್ಲಿ ಸಾಧನಗಳು ಪರತಂತ್ರವಾಗುವುದಾದರೆ ಅವುಗಳು ಸಾಧನೆಯಾಗುವುದು ಬೇಡ ಎಂಬ ಆಶಂಕೆಯನ್ನು ನಿರಾಕರಿಸಿ, 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯ ಆಧಾರದಿಂದ ಪ್ರಕೃತಿ ಮೊದಲಾದವುಗಳನ್ನು ಜಗತ್ತಿನ ಸೃಷ್ಟಿಗೆ ಸಾಧನೆಗಳೆಂದು ಒಪ್ಪಬೇಕೆಂದು ಸಮರ್ಥಿಸಿದ್ದಾರೆ. ಅನುವ್ಯಾಖ್ಯಾನದಲ್ಲಿ 'ಶಬ್ದಾಂತರಾಚ್ಚ' ಎಂಬ ಸೂತ್ರದ ವ್ಯಾಖ್ಯಾನವನ್ನು ಪರೋಕ್ಷವಾಗಿ ಮಾಡಿರುತ್ತಾರೆ -

ಶಕ್ತೋऽಪಿ ಭಗವಾನ್ವಿಷ್ಣುರಕರ್ತ್ಯಂ ಕರ್ತುಮನ್ಯಥಾ ।
ಸ್ವಭಿನ್ನಂ ಕಾರಣಾಭಿನ್ನಂ ಭಿನ್ನಂ ವಿಶ್ವಂ ಕರೋತ್ಯಜಃ ॥

ಆರಂಭಣಾಧಿಕರಣ (2-1-6)

ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವು 'ಕರ್ತುಂ ಅಕರ್ತುಂ ಅನ್ಯಥಾಕರ್ತ್ಯುಂ' ಸಮರ್ಥನಾಗಿದ್ದಾನೆ. ಇವನು ತನಗಿಂತ ಭಿನ್ನವಾದ ಯಾವ ಉಪಾದಾನಕಾರಣಗಳಿವೆಯೋ, ಅವುಗಳಿಂದ ಅಭಿನ್ನವಾದ ತನಗಿಂತ ಭಿನ್ನವಾದ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಹೀಗೆ ಉಪಪತ್ತಿಸಹಿತವಾದ ಶ್ರುತಿಯೂ ಕೂಡ ಶಬ್ದಾಂತರಶಬ್ದದ ಅರ್ಥವಾಗಿದೆ.

### ಅದ್ವೈತಮತದಲ್ಲಿ ಅಧಿಕರಣಶರೀರ

## तात्पर्यचन्द्रिका

**अन्ये तु पूर्वत्राभ्युपेत्य व्यावहारिकं भेदं ''स्याल्लोकवत्'' इत्युक्तम् । अत्र तु तत्वतः कार्यस्य विश्वस्य कारणब्रह्मणो नान्यत्वं ''वाचारम्भणं विकारो नामधेयम्। इदं सर्वं यदयमात्मा'' इत्यादिश्रुतेरित्युच्यत इत्याहुः ।**

ಅದ್ವೈತಿಗಳ ಅಧಿಕರಣಶರೀರ ಹೀಗಿದೆ - ಹಿಂದಿನ ಅಧಿಕರಣದಲ್ಲಿ ವ್ಯಾವಹಾರಿಕಭೇದವನ್ನು ಒಪ್ಪಿಕೊಂಡು, 'ಸ್ಯಾಲ್ಲೋಕವತ್' ಎಂಬುದಾಗಿ ಸೂತ್ರಕಾರರು ಹೇಳಿದರು. ಈ ಅಧಿಕರಣದಲ್ಲಿ ಪಾರಮಾರ್ಥಿಕವಾದ ಕಾರ್ಯಪ್ರಪಂಚಕ್ಕೆ ಕಾರಣನಾದ ಬ್ರಹ್ಮನ ದೆಸೆಯಿಂದ ಭೇದವೇ ಇರುವುದಿಲ್ಲ. 'ವಾಚಾರಂಭಣಂ ವಿಕಾರೋ ನಾಮಧೇಯಮ್', 'ಇದಂ ಸರ್ವಂ ಯದಯಮಾತ್ಮಾ' ಇತ್ಯಾದಿ ಶ್ರುತಿಗಳಿಂದ ಬ್ರಹ್ಮನಿಗಿಂತ ಅತಿರಿಕ್ತವಾದ ಪ್ರಪಂಚವೇ ಇಲ್ಲವೆಂದು ತಿಳಿಯುತ್ತಿದೆ ಎಂಬುದಾಗಿ ಸಮರ್ಥನೆ ಮಾಡುತ್ತಿದ್ದಾರೆ.

**तत्र न तावत् ब्रह्माभेदस्तदनन्यत्वम् । अनृतस्य विश्वस्य सत्यब्रह्माभेदायोगात्। अनङ्गीकाराच्च ।**

ಸೂತ್ರದಲ್ಲಿರುವ 'ಅನನ್ಯತ್ವ' ಎಂಬ ಶಬ್ದಕ್ಕೆ ಬ್ರಹ್ಮಾಭೇದವೆಂಬ ಅರ್ಥವನ್ನು ವಿವಕ್ಷಿಸಲು ಸಾಧ್ಯವಿಲ್ಲ. ಸುಳ್ಳಾದ ಜಗತ್ತಿಗೆ ಸತ್ಯವಾದ ಬ್ರಹ್ಮನಿಂದ ಅಭೇದವು ಯುಕ್ತವಾಗುವುದಿಲ್ಲ. ಜಡವಾದ ಜಗತ್ತಿಗೂ ಚೇತನನಾದ ಬ್ರಹ್ಮನಿಂದ ಅಭೇದವನ್ನು ನಿಮ್ಮ ಸಿದ್ಧಾಂತದಲ್ಲಿಯೂ ಕೂಡ ಅಂಗೀಕಾರ ಮಾಡಿರುವುದಿಲ್ಲ.

**अज्ञानविशिष्टेनोपादानेनाभेदोऽस्तीति चेन्न । मुमुक्षुज्ञेयशुद्धब्रह्मज्ञानादेव सर्वविज्ञानार्थं शुद्धेनैवाभेदस्य वक्तव्यत्वात् ।**

ಆಕ್ಷೇಪ - ಅಜ್ಞಾನವಿಶಿಷ್ಟನಾದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆ. ಇವನಿಗೂ ಜಗತ್ತಿಗೂ ಅಭೇದವನ್ನು ಸೂತ್ರಕಾರರು ಹೇಳುತ್ತಿದ್ದಾರೆ.

ಸಮಾಧಾನ - ಹೀಗೆ ಹೇಳಬಾರದು. ಮುಮುಕ್ಷುವಿನಿಂದ ಜ್ಞೇಯನಾದವನು ಶುದ್ಧಬ್ರಹ್ಮ. ಇವನ ಜ್ಞಾನದಿಂದಲೇ ಸಕಲವೂ ಕೂಡ ತಿಳಿದಂತಾಗುತ್ತದೆಂದು ಉದ್ದಾಲಕರು ಪ್ರಶಂಸೆ ಮಾಡಿರುತ್ತಾರೆ.

ಮಿಥ್ಯಾಭೂತವಾದ ಅಜ್ಞಾನವಿಶಿಷ್ಟಬ್ರಹ್ಮನಿಗೂ ಮತ್ತು ಜಗತ್ತಿಗೂ ಅಭೇದವಿರುವುದರಿಂದ ಸಮಸ್ತ ಜಗತ್ತು ಜ್ಞಾತವಾಗುತ್ತದೆಂದು ಏಕೆ ಪ್ರಶಂಸೆ ಮಾಡಬೇಕು. ಕೇವಲ ಶುದ್ಧಬ್ರಹ್ಮನ ಜ್ಞಾನವನ್ನೇ ಪ್ರಶಂಸೆ ಮಾಡಿ, ಶುದ್ಧಬ್ರಹ್ಮನಿಂದ ಅಭೇದವನ್ನೇ ಸೂತ್ರಕಾರರು ಹೇಳಬೇಕಲ್ಲವೇ?

**अन्यथाऽविद्यापि ''येनाश्रुतं श्रुतम्'' इत्यादि वाक्योक्तज्ञेयकोटिनिविष्टा स्यात् ।**

ಹೀಗೊಪ್ಪದಿದ್ದರೆ ಅಜ್ಞಾನವಿಶಿಷ್ಟನಲ್ಲಿ ಅಜ್ಞಾನವೂ ಕೂಡ ವಿಶೇಷಣವಾಗಿ ಸೇರಿರುವುದರಿಂದ ಮೋಕ್ಷಕ್ಕಾಗಿ ಅಜ್ಞಾನವನ್ನೂ ಕೂಡ ತಿಳಿಯಬೇಕೆಂದು ಹೇಳಬೇಕಾದೀತು. 'ಯೇನಾಶ್ರುತಂ ಶ್ರುತಮ್' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಞೇಯಕೋಟಿಯಲ್ಲಿ ಅಜ್ಞಾನವೂ ಕೂಡ ಸೇರಿಕೊಳ್ಳಬೇಕಾದೀತು.

**नापि ''न खल्वनन्यत्वमित्यभेदं ब्रूमः । किन्तु भेदं व्यासेधामः'' इति भामत्युक्तरीत्या ततो भेदाभावमात्रं तदनन्यत्वम् । भेदाभावेऽभेदध्रौव्यात् ।**

ಆಕ್ಷೇಪ - ಭಾಮತಿಯಲ್ಲಿ ಸೂತ್ರದಲ್ಲಿರುವ ಅನನ್ಯತ್ವಶಬ್ದದ ವ್ಯಾಖ್ಯಾನವನ್ನು ಹೀಗೆ ಮಾಡಲಾಗಿದೆ - 'ನ ಖಲ್ವನನ್ಯತ್ವಮಿತ್ಯಭೇದಂ ಬ್ರೂಮಃ । ಕಿಂತು ಭೇದಂ ವ್ಯಾಸೇಧಾಮಃ' ಅನನ್ಯತ್ವಶಬ್ದಕ್ಕೆ ಬ್ರಹ್ಮಪ್ರತಿಯೋಗಿಕವಾದ ಭೇದಾಭಾವ ಎಂದರ್ಥ. ಹೊರತು ಬ್ರಹ್ಮಾಭೇದವೆಂದರ್ಥವಲ್ಲ. ಬ್ರಹ್ಮಪ್ರತಿಯೋಗಿಕವಾದ ಭೇದವಿಲ್ಲ ಎಂದು ಹೇಳಿದಾಗ ಭೇದವನ್ನು ನಿರಾಕರಣೆ ಮಾಡುತ್ತಿದ್ದಾರೆ . ('ವ್ಯಾಸೇಧಾಮಃ'-ನಿರಾಕರಣೆ ಮಾಡುತ್ತೇವೆ) ಅಭೇದವಿದೆಯೆಂದು ಹೇಳುತ್ತಿಲ್ಲ. 'ನ ಖಲ್ವನನ್ಯತ್ವಮಿತ್ಯಭೇದಂ ಬ್ರೂಮಃ । ಕಿಂತು ಭೇದಂ ವ್ಯಾಸೇಧಾಮಃ' ಎಂದು ಭಾಮತಿಯಲ್ಲಿ ಹೇಳಲಾಗಿದೆ. ಆದ್ದರಿಂದ ಭೇದಾಭಾವವನ್ನೇ ಅನನ್ಯತ್ವವೆಂದು ವಿವಕ್ಷಿಸುತ್ತೇವೆ.

ಸಮಾಧಾನ - ಜಗತ್ತಿಗೆ ಬ್ರಹ್ಮನ ದೆಸೆಯಿಂದ ಭೇದವಿಲ್ಲವೆಂದು ಹೇಳಿದರೆ, ಅಭೇದವಿದೆಯೆಂದು ಹೇಳಿದಂತೆ ಆಯಿತು. ಭೇದ ಹಾಗೂ ಅಭೇದಗಳು ಪರಸ್ಪರ ವಿರಹವ್ಯಾಪ್ಯವಾಗಿವೆ. ಭೇದವಿಲ್ಲದಿದ್ದರೆ, ಅಭೇದವಿರಲೇಬೇಕು. ಭೇದವೂ ಇಲ್ಲ, ಅಭೇದವೂ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ.

**भेदाभावे सत्यनृतव्यवस्थायोगाच्च ।**

ಅಭೇದದ ವಿಧಾನವನ್ನು ಮಾಡದೇ ಭೇದಾಭಾವವೆಂದಷ್ಟೇ ವಿವಕ್ಷಿಸಿದರೂ ಕೂಡ ಮತ್ತೊಂದು ದೋಷ ಬರುತ್ತದೆ. ಬ್ರಹ್ಮ ಮಾತ್ರ ಸತ್ಯನು, ಜಗತ್ತು ಸುಳ್ಳು ಎಂಬ ವ್ಯವಸ್ಥೆಯನ್ನು ನೀವು ಮಾಡಬೇಕು. ಅಭೇದವಿದ್ದರೆ ಈ ವ್ಯವಸ್ಥೆಯು ಹೇಗೆ ಕೂಡುವುದಿಲ್ಲವೋ, ಅದರಂತೆ ಭೇದಾಭಾವವಿದ್ದಾಗಲೂ ಬ್ರಹ್ಮನು ಸತ್ಯ, ಜಗತ್ತು ಸುಳ್ಳು ಎಂಬ ವ್ಯವಸ್ಥೆಯು ಕೂಡುವುದಿಲ್ಲ.

**अभेदाभावेन व्यवस्थायां तेनैवैकविज्ञानेन सर्वविज्ञानाभावोपि स्यात् ।**

ಆಕ್ಷೇಪ - ಜಗತ್ತಿಗೂ, ಬ್ರಹ್ಮನಿಗೂ ಯಾವ ಕಾಲದಲ್ಲಿ ಭೇದವಿಲ್ಲವೆಂದು ನಾನು ಹೇಳುತ್ತೇನೋ, ಅದೇ ಕಾಲದಲ್ಲಿ ಅಭೇದವನ್ನೂ ಕೂಡ ಇಲ್ಲವೆನ್ನುತ್ತೇನೆ. ಹೀಗೆ ಭೇದ ಮತ್ತು ಅಭೇದ ಎರಡೂ ಇಲ್ಲದ ವ್ಯವಸ್ಥೆಯನ್ನು ಕೂಡಿಸಬಹುದಲ್ಲವೇ?

ಸಮಾಧಾನ - ಹಾಗಾದರೆ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆಯೂ ಕೂಡ ಅನುಪಪನ್ನವಾಗಬೇಕಾದೀತು. ಅಭೇದವಿದ್ದರೆ ಮಾತ್ರ ಈ ಪ್ರತಿಜ್ಞೆಯು ಉಪಪನ್ನವಾಗುತ್ತದೆ.

**यदि चैकविज्ञानेन सर्वविज्ञानानुपपत्त्या भेदाभावो व्यवस्थानुपपत्त्या चाभेदाभावः कल्प्येत तर्हि तदुभयानुपपत्त्या लाघवाय तथा ''इदं सर्वं यदयमात्मा नेति नेति'' इत्यादिसामानाधिकरण्यश्रुतिभेदश्रुत्योर्मृत्पिण्डादिदृष्टान्तस्य च स्वारस्याय भेदाभेदावेव किं न कल्प्येते ।**

ಆಕ್ಷೇಪ - ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಶ್ರುತಿಯು ಹೇಳುತ್ತಿದೆ. ಇದರ ಅನ್ಯಥಾನುಪಪತ್ತಿಯಿಂದ ಜಗತ್ತಿಗೂ ಬ್ರಹ್ಮನಿಗೂ ಭೇದವಿಲ್ಲವೆಂದು ಕಲ್ಪನೆ ಮಾಡುತ್ತೇನೆ. ಭೇದವಿಲ್ಲವೆಂದ ಮಾತ್ರಕ್ಕೆ ಅಭೇದವಿದೆ ಎಂದರ್ಥವಲ್ಲ. ಬ್ರಹ್ಮಮಾತ್ರನು ಸತ್ಯ, ಜಗತ್ತು ಮಿಥ್ಯಾ ಎಂಬ ವ್ಯವಸ್ಥೆಯನ್ನು ಕೂಡಿಸುವುದಕ್ಕಾಗಿ ಅಭೇದವೂ ಕೂಡ ಇರುವುದಿಲ್ಲವೆಂದು ಕಲ್ಪಿಸುತ್ತೇನೆ.

ಸಮಾಧಾನ - ಹಾಗಾದರೆ ಉಭಯ ಅನ್ಯಥಾನುಪಪತ್ತಿಯಿಂದ ಜಗತ್ತಿಗೂ, ಬ್ರಹ್ಮನಿಗೂ ಭೇದಾಭೇದವನ್ನೇ ಕಲ್ಪಿಸುವುದು ಸಮಂಜಸವಾಗುತ್ತದೆ. ಭೇದಾಭಾವ, ಅಭೇದಾಭಾವಗಳನ್ನು ಕಲ್ಪನೆ ಮಾಡುವುದಕ್ಕಿಂತ, ಭೇದಾಭೇದವನ್ನು ಕಲ್ಪನೆ ಮಾಡುವುದು ಲಘುವಾಗುತ್ತದೆ. ಅದು ಹೀಗೆ - ಏಕವಿಜ್ಞಾನೇನ ಸರ್ವವಿಜ್ಞಾನದ ಅನ್ಯಥಾನುಪಪತ್ತಿಯಿಂದ ಜಗತ್ತಿಗೂ, ಬ್ರಹ್ಮನಿಗೂ ಅಭೇದವು ಸಿದ್ಧವಾಗುತ್ತದೆ. ಸತ್ಯತ್ವಮಿಥ್ಯಾತ್ವಗಳ ವ್ಯವಸ್ಥಾನ್ಯಥಾನುಪಪತ್ತಿಯಿಂದ ಭೇದವು ಸಿದ್ಧವಾಗುತ್ತದೆ. ಮತ್ತು 'ಇದಂ ಸರ್ವಂ ಯದಯಮಾತ್ಮಾ' ಎಂಬುದಾಗಿ ಸಾಮಾನಾಧಿಕರಣ್ಯವನ್ನು ಹೇಳುತ್ತಿರುವ ಶ್ರುತಿಯು ಅಭೇದಕ್ಕೆ ಗಮಕವಾಗಿದೆ. ಅನಂತರ 'ನೇತಿ ನೇತಿ' ಎಂಬ ಶ್ರುತಿಯು ಪರಮಾತ್ಮನು ಜಗತ್ತೂ ಆಗಿರುವುದಿಲ್ಲ. ಮೂರ್ತಪ್ರಪಂಚವೂ ಆಗಿರುವುದಿಲ್ಲ ಎಂಬುದಾಗಿ ಭೇದವನ್ನು ಪ್ರತಿಪಾದನೆ ಮಾಡುತ್ತಿದೆ. ಸಾಮಾನಾಧಿಕರಣ್ಯಶ್ರುತಿಯಿಂದ ಅಭೇದಸಿದ್ಧವಾಗುತ್ತದೆ. 'ನೇತಿ ನೇತಿ' ಎಂಬ ಶ್ರುತಿಯಿಂದ ಭೇದವು ಸಿದ್ಧವಾಗುತ್ತದೆ. ಇವೆರಡರ ಸ್ವಾರಸ್ಯಕ್ಕೋಸ್ಕರ ಭೇದಾಭೇದವನ್ನು ಒಪ್ಪುವುದು ಅತ್ಯಂತ ಸಮಂಜಸವಾಗುತ್ತದೆ.

ಮತ್ತು ಶ್ರುತಿಯಲ್ಲಿ ಮೃತ್ಪಿಂಡ ಮತ್ತು ಮೃಣ್ಮಯಗಳ ದೃಷ್ಟಾಂತವನ್ನು ನೀಡಲಾಗಿದೆ. ಶ್ರುತಿಯಲ್ಲಿಯೂ ಕೂಡ ಭೇದಾಭೇದವೇ ತಿಳಿಯುತ್ತದೆ. ಹೀಗೆ ಎಲ್ಲಾ ರೀತಿಯಿಂದಲೂ ಸ್ವಾರಸ್ಯಬರುವುದರಿಂದ ಭೇದಾಭಾವ, ಅಭೇದಾಭಾವವನ್ನು ಒಪ್ಪುವುದಕ್ಕಿಂತ ಭೇದಾಭೇದವನ್ನು ಒಪ್ಪುವುದೇ ಸೂಕ್ತವಾಗುತ್ತದೆ.

**ब्रह्मण एकरसत्वश्रुतिरप्यनेकरसात्प्रपञ्चाद्भेदाभावेप्यभेदाभावमात्रेणेवाऽभेदेपि भेदेनैवोपपन्नास्तु ।**

ಆಕ್ಷೇಪ - ಬ್ರಹ್ಮನಿಗೂ ಪ್ರಪಂಚಕ್ಕೂ ಭೇದಾಭೇದವನ್ನು ಹೇಳಲಾಗದು. ಅಭೇದವನ್ನು ಹೇಳಿದರೆ 'ಏಕರಸಂ ಪ್ರಂಪಚೋಪಶಮಂ' ಎಂಬ ಶ್ರುತಿಯು ಬ್ರಹ್ಮನನ್ನು 'ಏಕರಸ' (ಅಖಂಡ = ಏಕಪ್ರಕಾರ) ಎಂದು ಕರೆಯುತ್ತಿದೆ. ಆದರೆ ಜಗತ್ತು ಅನೇಕ ರಸಾತ್ಮಕವಾಗಿದೆ. ಬ್ರಹ್ಮನಂತೆ ಅಖಂಡವಾಗಿರುವುದಿಲ್ಲ. ಒಂದುವೇಳೆ ಜಗತ್ತಿಗೂ ಬ್ರಹ್ಮನಿಗೂ ಭೇದವನ್ನು ಹೇಳಿ, ಅಭೇದವನ್ನೂ ಕೂಡ ಹೇಳಿದರೆ, ಅನೇಕ ರಸಾತ್ಮಕವಾದ ಪ್ರಪಂಚದ ದೆಸೆಯಿಂದ ಬ್ರಹ್ಮನು ಅಖಂಡನೂ ಆಗಿರುವ ಕಾರಣ, ಅನೇಕ ರಸತ್ವವು ಬ್ರಹ್ಮನಲ್ಲಿ ಬರುತ್ತವೆ. ಆವಾಗ 'ಏಕರಸಂ ಪ್ರಪಂಚೋಪಶಮಂ' ಎಂಬ ಶ್ರುತಿಯು ಅನುಪಪನ್ನವಾಗುತ್ತದಲ್ಲವೆ?

ಸಮಾಧಾನ - ಈ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಬಹುದು. ನೀವು ಭೇದಾಭಾವ ಮತ್ತು ಅಭೇದಾಭಾವವನ್ನು ಒಪ್ಪುತ್ತಿದ್ದೀರಿ. ಹಾಗಾದರೆ ಯಾವ ಕಾರಣದಿಂದ ಬ್ರಹ್ಮನಿಗೂ, ಪ್ರಪಂಚಕ್ಕೂ ಭೇದವಿಲ್ಲವೋ, ಆ ಕಾರಣದಿಂದಲೇ ಅನೇಕ ರಸವಾದ ಪ್ರಪಂಚದಿಂದ ಬ್ರಹ್ಮನಿಗೆ ಭೇದವಿಲ್ಲದ ಕಾರಣ ಬ್ರಹ್ಮನೂ ಕೂಡ ಅನೇಕ ರಸಸ್ವರೂಪನಾಗಬೇಕಾದೀತು ಎಂದು ನಾವು ಆಕ್ಷೇಪಿಸುತ್ತೇವೆ. ಆವಾಗ ನೀವು ಭೇದಾಭಾವವಿದ್ದರೂ ಕೂಡ ಜೊತೆಯಲ್ಲಿ ಅಭೇದಾಭಾವವಿರುವುದರಿಂದ ಜಗತ್ತು ಅನೇಕರಸ- ಸ್ವರೂಪವಾದರೂ, ಬ್ರಹ್ಮನು ಅನೇಕ ರಸಸ್ವರೂಪನಾಗಬೇಕಾಗಿಲ್ಲ ಎಂಬ ವ್ಯವಸ್ಥೆಯನ್ನು ಮಾಡುತ್ತೀರಿ. ನಾವೂ ಕೂಡ ಇದೇ ರೀತಿಯಲ್ಲೇ ವ್ಯವಸ್ಥೆಯನ್ನು ಮಾಡುತ್ತೇವೆ. ಬ್ರಹ್ಮನಿಗೂ ಪ್ರಪಂಚಕ್ಕೂ ಅಭೇದವಿದ್ದರೂ ಭೇದವು ಇರುವುದರಿಂದ ಬ್ರಹ್ಮನು ಏಕರಸಸ್ವರೂಪನಾಗುತ್ತಾನೆ. ಪ್ರಪಂಚವು ಅನೇಕ ರಸಸ್ವರೂಪವಾಗುತ್ತದೆ.

(ಅನೇಕ ರಸಸ್ವರೂಪವಾದ ಪ್ರಪಂಚಕ್ಕಿಂತ ಬ್ರಹ್ಮನಲ್ಲಿ ಭೇದವಿಲ್ಲದಿದ್ದರೂ ಅಭೇದವಿರುವುದಿಲ್ಲ ಎಂಬ ಕಾರಣದಿಂದ ಬ್ರಹ್ಮನಿಗೆ ಏಕರಸತ್ವಶ್ರುತಿಯು ಉಪಪನ್ನವಾಗುತ್ತದೆಂದು ನೀವು ಹೇಗೆ ವ್ಯಾಖ್ಯಾನ ಮಾಡುತ್ತೀರೋ, ಅದರಂತೆ ನಾವೂ ಕೂಡ ಬ್ರಹನಿಗೆ ಪ್ರಪಂಚದ ದೆಸೆಯಿಂದ ಅಭೇದವಿದ್ದರೂ ಕೂಡ ಭೇದವಿರುವ ಕಾರಣದಿಂದ ಬ್ರಹ್ಮನು ಏಕರಸಸ್ವರೂಪನಾಗುತ್ತಾನೆ. ಪ್ರಪಂಚವು ಅನೇಕರಸಸ್ವರೂಪಾಗುತ್ತದೆಂದು ವ್ಯಾಖ್ಯಾನ ಮಾಡುತ್ತೇವೆ.)

**यथा च सत्यस्यानृताभेदो न युक्तस्तथा ततो भेदाभावापि ।**

ಸತ್ಯಕ್ಕೆ ಅನೃತಾಭೇದವು ಹೇಗೆ ಅನುಪಪನ್ನವೋ, ಅದರಂತೆ ಸತ್ಯಕ್ಕೆ ಅನೃತದ ಜೊತೆಗೇ ಭೇದಾಭಾವವೂ ಕೂಡ ಅನುಪಪನ್ನವಾಗಿದೆ. ಆದ್ದರಿಂದ ಭೇದವೂ ಇರುವುದಿಲ್ಲ. ಅಭೇದವೂ ಇರುವುದಿಲ್ಲ ಎಂದು ಹೇಳುವುದಕ್ಕಿಂತ ಭೇದಾಭೇದವಿರುತ್ತದೆಂದು ಹೇಳುವುದೇ ಲೇಸು.

(ಪ್ರಪಂಚಕ್ಕೂ, ಬ್ರಹ್ಮನಿಗೂ ಸಮಸತ್ತಾಕವಾದ ಭೇದವಿದೆ ಎಂದರೆ, ಸತ್ಯವಾದ ಭೇದ, ಸತ್ಯವಾದ ಅಭೇದವಿದೆ ಎಂಥರ್ಥ. ಇಂಥ ಭೇದಾಭೇದವನ್ನೇ ನೀನು ಒಪ್ಪಬೇಕಾಗುತ್ತದೆಂಬುದು ಗ್ರಂಥಕಾರರ

ಅಭಿಪ್ರಾಯ. ಆದ್ದರಿಂದ 'ಭೇದಾಭಾವಮಾತ್ರಂ ತದನನ್ಯತ್ವಮ್' ಎಂಬ ಎರಡನೆಯ ಪಕ್ಷವು ನಿರಸ್ತವಾಯಿತು.)

**नापि ब्रह्मव्यतिरेकेणासत्त्वं तदनन्यत्वम् । विशेषनिषेधस्य शेषाभ्यनुज्ञानार्थत्वे नानन्दादिवज्जीवचैतन्यवच्च ब्रह्मात्मकत्वापातात् ।**

ಆಕ್ಷೇಪ - 'ಬ್ರಹ್ಮವ್ಯತಿರೇಕೇಣ ಅಸತ್ತ್ವಂ ತದನನ್ಯತ್ವಮ್' ಬ್ರಹ್ಮನಿಗಿಂತ ಅತಿರಿಕ್ತವಾದ ಜಗತ್ತು ಇರುವುದಿಲ್ಲ. ಇದನ್ನೇ ಅನನ್ಯತ್ವವೆಂದು ಹೇಳುತ್ತೇವೆ.

ಸಮಾಧಾನ - ಇದೂ ಕೂಡ ತಪ್ಪು. ಒಂದನ್ನು ವಿಶೇಷವಾಗಿ ನಿಷೇಧ ಮಾಡಿದರೆ, ಇನ್ನೊಂದಕ್ಕೆ ಸಮ್ಮತಿ ಕೊಟ್ಟಂತಾಗುತ್ತದೆ. (ದೇವದತ್ತನು ಮಾತ್ರ ಬರಬಾರದು ಎಂದು ಹೇಳಿದಾಗ, ಯಜ್ಞದತ್ತನು ಬರಬಹುದೆಂದು ಅರ್ಥಾತ್‌ಸಿದ್ಧವಾಗುತ್ತದೆ.) ಜಗತ್ತು ಇಲ್ಲವೆಂದು ಹೇಳದೇ ಬ್ರಹ್ಮನಿಗಿಂತ ಅತಿರಿಕ್ತವಾಗಿ ಇರುವುದಿಲ್ಲವೆಂದು ಹೇಳಿದರೆ, ಬ್ರಹ್ಮಸ್ವರೂಪವೆಂದು ಹೇಳಿದಂತಾಯಿತು. ಆವಾಗ ಆನಂದಾದಿಗಳು ಹೇಗೆ ಬ್ರಹ್ಮಾತ್ಮಕವೋ, ಅಥವಾ ಜೀವರು ಹೇಗೆ ಬ್ರಹ್ಮಾತ್ಮಕರೋ, ಅದೇ ರೀತಿಯಾಗಿ ಜಗತ್ತೂ ಕೂಡ ಬ್ರಹ್ಮಾತ್ಮಕವೆಂದು ಹೇಳಿದಂತಾಯಿತು. ಇದು ನಿಮ್ಮ ಸಿದ್ಧಾಂತಕ್ಕೆ ವಿರುದ್ಧವಾಗಿದೆ.

**ब्रह्मण्यारोपितत्वं तु न तदनन्यत्वशब्दार्थः । शुक्त्यारोपिते रूप्ये तदनन्यशब्दाप्रयोगात् ।**

ಆಕ್ಷೇಪ - 'ಬ್ರಹ್ಮಣಿ ಆರೋಪಿತತ್ವಂ ತು ನ ತದನನ್ಯತ್ವಮ್' ಬ್ರಹ್ಮನಲ್ಲಿ ಜಗತ್ತು ಆರೋಪಿತವಾದ್ದರಿಂದ ಬ್ರಹ್ಮನಿಗಿಂತ ಅಭಿನ್ನವಾಗಿದೆಯೆಂದು ಹೇಳುತ್ತೇವೆ.

ಸಮಾಧಾನ - ಹೀಗೂ ಕೂಡ ಹೇಳಲಾಗದು. ಅನನ್ಯಶಬ್ದದಿಂದ ಆರೋಪಿತತ್ವ ಎಂಬರ್ಥವು ತಿಳಿಯುವುದೇ ಇಲ್ಲ. ಶುಕ್ತಿಯಲ್ಲಿ ಆರೋಪಿತವಾದ ರಜತವನ್ನು ಶುಕ್ತಿಯಿಂದ ಅನನ್ಯವಾಗಿದೆಯೆಂದು ಯಾರೂ ಕರೆಯುವುದಿಲ್ಲ. ಅದರಂತೆ ಜಗತ್ತು ಆರೋಪಿತವಾದ ಕಾರಣದಿಂದ ಅನನ್ಯವೆಂದು ಕರೆಯಬಾರದು.

**प्रातिभासिकव्यावहारिकयोर्व्यावहारिकपारमार्थिकाभ्यामन्यत्वाभावेऽनिर्वाच्यत्वासिद्धेश्च (रूप्यमिदं नेति तदन्यशब्दस्यैव प्रयोगाच्च) एकविज्ञानेन सर्वविज्ञानायोगाच्च। मृत्पिण्डादिदृष्टान्तानुपपत्तेश्च ।।**

ಯಾವುದು ಎಲ್ಲಿ ಆರೋಪಿತವೋ, ಅದು ಅದಕ್ಕಿಂತ ಅನನ್ಯವಾಗುವುದಾದರೆ, ಪ್ರಾತಿಭಾಸಿಕವಾದ ರಜತವು ವ್ಯಾವಹಾರಿಕವಾದ ಶುಕ್ತಿಯಲ್ಲಿ ಆರೋಪಿತವಾದ್ದರಿಂದ ಪ್ರಾತಿಭಾಸಿಕವು ವ್ಯಾವಹಾರಿಕವಾದ ಶುಕ್ತಿಯಿಂದ ಅನನ್ಯವಾಯಿತು. ಮತ್ತು ವ್ಯಾವಹಾರಿಕವಾದ ಜಗತ್ತು ಪಾರಮಾರ್ಥಿಕನಾದ ಬ್ರಹ್ಮನಲ್ಲಿ

ಆರೋಪಿತವಾದ್ದರಿಂದ ವ್ಯಾವಹಾರಿಕವು ಪಾರಮಾರ್ಥಿಕವಾಯಿತು. ಆವಾಗ ಅನಿರ್ವಚನೀಯತ್ವವೇ ಅಸಿದ್ಧವಾಗುತ್ತದೆ. ಏಕೆಂದರೆ ಪಾರಮಾರ್ಥಿಕನಾದ ಬ್ರಹ್ಮನಿಂದ ಅನನ್ಯವಾಗಿರುವ ವ್ಯಾವಹಾರಿಕವಾದ ಜಗತ್ತೂ ಕೂಡ ಪಾರಮಾರ್ಥಿಕವೇ ಆಯಿತಲ್ಲವೇ? ಅಂಥ ವ್ಯಾವಹಾರಿಕಜಗತ್ತಿನಲ್ಲಿ ಸೇರಿರುವ ಶುಕ್ತಿಯೇ ಈಗ ಪಾರಮಾರ್ಥಿಕವಾಯಿತು. ಅಂಥ ಶುಕ್ತಿಯಲ್ಲಿ ಆರೋಪಿತವಾದ ಶುಕ್ತಿಯ ಜೊತೆ ಅನನ್ಯವಾಗಿರುವ ರಜತವೂ ಕೂಡ ಪಾರಮಾರ್ಥಿಕವೇ ಆಯಿತು. ಹೀಗೆ ಒಪ್ಪಿದರೆ, ಜಗತ್ತಿನಲ್ಲಿ ಅನಿರ್ವಾಚ್ಯವಾರ್ತೆಯೇ ಇಲ್ಲದಂತಾಗುತ್ತದೆ.

'ರೂಪ್ಯಮಿದಂ ನೇತಿ ತದನ್ಯಶಬ್ದಸ್ಯೈವ ಪ್ರಯೋಗಾಚ್ಚ' ಎಂಬ ಪಾಠವನ್ನು ವಿವಕ್ಷಿಸಿದಾಗ ಹೀಗೆ ಅರ್ಥವನ್ನು ತಿಳಿಯಬೇಕು - ಭ್ರಮೆಯು ಬರುವ ಕಾಲದಲ್ಲಿ 'ಇದಂ ರಜತಂ' ಎಂಬ ಜ್ಞಾನವು ಬರುತ್ತದೆ. ಬಾಧಕಾಲದಲ್ಲಿ 'ನೇದಂ ರಜತಂ' ಎಂಬ ಜ್ಞಾನವು ಬರುತ್ತದೆ. ಬಾಧಕಾಲದಲ್ಲಿ ಶುಕ್ತಿಯು ರಜತಕ್ಕಿಂತ ಭಿನ್ನವಾಗಿದೆಯೆಂದೇ ತಿಳಿಯುತ್ತದೆ ಹೊರತು, ಶುಕ್ತಿಯು ರಜತದ ದೆಸೆಯಿಂದ ಅನನ್ಯವಾಗಿದೆಯೆಂದು ಯಾರೂ ತಿಳಿಯುವುದಿಲ್ಲ. ಆದ್ದರಿಂದಲೂ ಆರೋಪಿತತ್ವವನ್ನು ಅನನ್ಯಶಬ್ದಾರ್ಥವೆಂದು ತಿಳಿಯಬಾರದು.

ಮತ್ತೊಂದು ದೋಷ - ಜಗತ್ತು ಬ್ರಹ್ಮನಲ್ಲಿ ಆರೋಪಿತವಾದಾಗ ಬ್ರಹ್ಮನು ಅಧಿಷ್ಠಾನನು, ಜಗತ್ತು ಆರೋಪಿತವೂ ಆಗಿರುತ್ತದೆ. ಆವಾಗ ಏಕವಿಜ್ಞಾನದಿಂದ ಸರ್ವವೂ ಕೂಡ ವಿಜ್ಞಾತವಾಗುತ್ತದೆಂದು ಶ್ರುತಿ ಹೇಳಿದ್ದು ಅಯುಕ್ತವಾಗುತ್ತದೆ.

ಮತ್ತೊಂದು ದೋಷ - ಮೃತ್ಪಿಂಡ ಹಾಗೂ ಮೃಣ್ಮಯಗಳ ದೃಷ್ಟಾಂತವನ್ನೂ ಕೂಡ ಕೂಡಿಸಲು ಸಾಧ್ಯವಿಲ್ಲ. ಮೃತ್ಪಿಂಡದಲ್ಲಿ ಮೃಣ್ಮಯವು ಆರೋಪಿತವಾಗಿರುವುದಿಲ್ಲ. ಕೇವಲ ಉಪಾದಾನ ಉಪಾದೇಯಭಾವವಿರುತ್ತದೆ ಹೊರತು, ಅಧಿಷ್ಠಾನಅಧ್ಯಸ್ತಭಾವ ಇರುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿ ನೀಡಿರುವ ಮೃತ್ಪಿಂಡಾದಿ ದೃಷ್ಟಾಂತವೂ ಕೂಡ ಅನುಪಪನ್ನವಾಗುತ್ತದೆ.

**कथं हि ब्रह्मविज्ञानाद्विज्ञातं सकलं भवेत् ।**
**नहि शुक्तिस्वरूपस्य विज्ञानाद् रजतज्ञता ॥१॥**

**प्रत्युत –**

ಕಥಂ ಹಿ ಬ್ರಹ್ಮವಿಜ್ಞಾನಾದ್ವಿಜ್ಞಾತಂ ಸಕಲಂ ಭವೇತ್ ।
ನಹಿ ಶುಕ್ತಿಸ್ವರೂಪಸ್ಯ ವಿಜ್ಞಾನಾದ್ರಜತಜ್ಞತಾ ॥೧॥

ಬ್ರಹ್ಮನು ಅಧಿಷ್ಠಾನನಾಗಿದ್ದಾನೆ, ಜಗತ್ತು ಆರೋಪಿತವಾಗಿದೆ. ಅಧಿಷ್ಠಾನನಾದ ಬ್ರಹ್ಮನ ಜ್ಞಾನದಿಂದ ಆರೋಪಿತವಾದ ಜಗತ್ತಿನ ಜ್ಞಾನವನ್ನು ಹೇಳಲು ಹೇಗೆ ಸಾಧ್ಯ ? ಶುಕ್ತಿಯ ಸ್ವರೂಪವನ್ನು ಯಾರು ತಿಳಿದಿರುತ್ತಾನೋ, ಅವನಿಗೆ ರಜತಜ್ಞಾನವು ಬರಲು ಸಾಧ್ಯವಿಲ್ಲ. ಹೊರತಾಗಿ

**शुक्तितत्वापरिज्ञानाद्यथैव रजतज्ञता ।**
**ब्रह्मतत्वापरिज्ञानात्तथा सर्वज्ञतोचिता ॥१॥**

ಶುಕ್ತಿತತ್ತ್ವಾಪರಿಜ್ಞಾನಾದ್ಯಥೈವ ರಜತಜ್ಞತಾ ।
ಬ್ರಹ್ಮತತ್ತ್ವಾಪರಿಜ್ಞಾನಾತ್ ತಥಾ ಸರ್ವಜ್ಞತೋಚಿತಾ ॥೧॥

ಅವನಿಗೆ ಶುಕ್ತಿತತ್ತ್ವದ ಬಗ್ಗೆ ತಿಳಿಯದ ಕಾರಣ ರಜತಜ್ಞಾನವು ಬಂದಿರುತ್ತದೆ. ಆದ್ದರಿಂದ ಅಧಿಷ್ಠಾನದ ಅಜ್ಞಾನವು ಆರೋಪಿತದ ಜ್ಞಾನಕ್ಕೆ ಕಾರಣವಾಗಿರುತ್ತದೆ ಹೊರತು, ಅಧಿಷ್ಠಾನದ ಜ್ಞಾನವು ಆರೋಪಿತಜ್ಞಾನಕ್ಕೆ ಸರ್ವಥಾ ಕಾರಣವಲ್ಲ. ಅದರಂತೆ ಬ್ರಹ್ಮತತ್ತ್ವದ ಅಪರಿಜ್ಞಾನದಿಂದಲೇ ಸಮಗ್ರ ಜಗತ್ತಿನ ಜ್ಞಾನವು ಬರುತ್ತದೆಂದು ಹೇಳುವುದು ಉಚಿತ. ಹೊರತು, ಬ್ರಹ್ಮಜ್ಞಾನದಿಂದ ಸಮಸ್ತ ಜಗತ್ತಿನ ಜ್ಞಾನವು ಬರುತ್ತದೆಂದು ಹೇಳುವುದು ಸರ್ವಥಾ ಯುಕ್ತವಾಗುವುದಿಲ್ಲ.

**प्रकाशः —**

''न चान्यत्र प्रमाणमस्ति'' इत्यादिना पराभिमतं तदनन्यत्वमप्रामाणिकं प्रमाणविरुद्धं चेति भाष्यटीकयोरुक्तं ''कथं च तदनन्यता । जगतस्त्वविकारित्व उक्तन्यायेन साधित'' इत्यनुव्याख्यानसुधयोः प्रपञ्चितम् । तद्व्यक्तीकर्तुं परभाष्योक्तं सङ्ग्रहेणानुवदति ।। **पूर्वत्रेति** ।।

'ನ ಚಾನ್ಯತ್ರ ಪ್ರಮಾಣಮಸ್ತಿ' ಇತ್ಯಾದಿಯಾಗಿ ಪರವಾದಿಗಳಿಗೆ ಅಭಿಮತವಾದ 'ಅನನ್ಯತ್ವ' ಎಂಬ ಸೂತ್ರದ ವ್ಯಾಖ್ಯಾನವು ಅಪ್ರಾಮಾಣಿಕವಾಗಿದೆ. ಮತ್ತು ಪ್ರಮಾಣವಿರುದ್ಧವಾಗಿದೆ ಎಂದು ಭಾಷ್ಯ ಹಾಗೂ ಟೀಕೆಗಳಲ್ಲಿ ಹೇಳಿರುತ್ತಾರೆ. 'ಕಥಂ ಚ ತದನನ್ಯಥಾ । ಜಗತಸ್ತ್ವವಿಕಾರಿತ್ವ ಉಕ್ತನ್ಯಾಯೇನ ಸಾಧಿತ'' ಎಂಬುದಾಗಿ ಅನುವ್ಯಾಖ್ಯಾನ ಹಾಗೂ ನ್ಯಾಯಸುಧೆಯಲ್ಲಿಯೂ ಪರವಾದಿಗಳ ನಿರಾಕರಣೆಯನ್ನು ವಿವರವಾಗಿ ಮಾಡಿರುತ್ತಾರೆ. ಅದನ್ನೇ ಸ್ಪಷ್ಟಪಡಿಸಲು 'ಪೂರ್ವತ್ರ' ಇತ್ಯಾದಿ ಗ್ರಂಥದಿಂದ ಪರಭಾಷ್ಯದ ವಿಚಾರವನ್ನು ಸಂಗ್ರಹಿಸಿ ಅನುವಾದ ಮಾಡುತ್ತಿದ್ದಾರೆ.

(ಹಿಂದಿನ ಅಧಿಕರಣದಲ್ಲಿ ಪ್ರಪಂಚಕ್ಕೂ ಬ್ರಹ್ಮನಿಗೂ ಅಭೇದವಿದ್ದರೆ ಭೋಗ್ಯಕ್ಕೂ, ಭೋಕ್ತೃವಿಗೂ ಭೇದವಿಲ್ಲದಿರಬೇಕಾದೀತು ಎಂದು ಪೂರ್ವಪಕ್ಷವನ್ನು ಮಾಡಿಕೊಂಡು, ಫೇನವು ಮತ್ತು ತರಂಗವು ಸಮುದ್ರೋಪಾದಾನಕವಾದ್ದರಿಂದ ಅಭಿನ್ನವಾಗಿದ್ದರೂ ಪರಸ್ಪರ ಫೇನಕ್ಕೂ ತರಂಗಕ್ಕೂ ಭೇದವಿರುವುದು ಲೋಕದಲ್ಲಿ ಕಂಡಿದೆ. ಅದೇ ರೀತಿಯಾಗಿ ಇಲ್ಲಿಯೂ ಕೂಡ ಭೋಗ್ಯ ಹಾಗೂ ಭೋಕ್ತೃಗಳಿಗೆ ಭೇದವು ಯುಕ್ತವಾಗುತ್ತದೆ. ವ್ಯಾವಹಾರಿಕಭೇದವನ್ನು ಹೇಳಬಹುದೆಂದು ಸೂತ್ರಕಾರರು ಸಮರ್ಥಿಸಿದರು. ಪ್ರಕೃತ ಈ ಅಧಿಕರಣದಲ್ಲಿ ಪಾರಮಾರ್ಥಿಕವಾದ ಭೇದವಿರುವುದಿಲ್ಲವೆಂದು ಸಮರ್ಥನೆ ಮಾಡಲು ಸೂತ್ರಕಾರರು ಹೊರಟದ್ದಾರೆ.)

**प्रकाशः – सौत्रादिपदोपात्तश्रुतिमाह – इदं सर्वमिति ।। किं मुख्याभेदोऽत्राभिमत उत भेदाभावमात्रं यद्वा ब्रह्मव्यतिरेकेणासत्त्वमथ तत्रारोपितत्वमिति विकल्पान्हृदिकृत्वाऽऽद्यं निराह – तत्र नतावदिति ।।**

ಸೂತ್ರದಲ್ಲಿರುವ ಆದಿಪದದಿಂದ ಯಾವ ಶ್ರುತಿಯನ್ನು ವಿವಕ್ಷಿಸಿದ್ದಾರೋ, ಅದನ್ನು 'ಇದಂ ಸರ್ವಮ್' ಎಂಬುದರಿಂದ ಹೇಳಿದ್ದಾರೆ. ಅನನ್ಯತ್ವ ಶಬ್ದಕ್ಕೆ ಏನು ಅರ್ಥ ? ೧. ಬ್ರಹ್ಮನಿಂದ ಪ್ರಪಂಚಕ್ಕಿರುವ ಅಭೇದವನ್ನೇ ಅನನ್ಯತ್ವವೆನ್ನುತ್ತೀರೋ ? ೨. ಪ್ರಪಂಚಕ್ಕೆ ಬ್ರಹ್ಮನಿಂದ ಭೇದವಿಲ್ಲವೆಂಬುದನ್ನು ಅನನ್ಯತ್ವವೆನ್ನುತ್ತೀರೋ? ೩. ಬ್ರಹ್ಮನಿಗಿಂತ ಅತಿರಿಕ್ತವಾಗಿ ಬೇರೆ ಜಗತ್ತು ಇರುವುದಿಲ್ಲ. ಇದನ್ನು ಅನನ್ಯತ್ವವೆನ್ನುತ್ತೀರೋ? ೪. ಬ್ರಹ್ಮನಲ್ಲಿ ಜಗತ್ತು ಆರೋಪಿತವಾಗಿದೆ. ಇದನ್ನು ಅನನ್ಯತ್ವವೆನ್ನುತ್ತೀರೋ ? ಈ ನಾಕು ಪಕ್ಷಗಳಲ್ಲಿ ಮೊದಲನೆಯ ಪಕ್ಷವನ್ನು 'ತತ್ರ ನ ತಾವತ್' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः – अनङ्गीकाराच्चेति ।। ''कारणात्परमार्थतोऽनन्यत्वं व्यतिरेकेणाभावः कार्यस्यावगन्तव्य'' इति तद्भाष्योक्तेरिति भावः ।**

'ಕಾರಣಾತ್ ಪರಮಾರ್ಥತೋಽನನ್ಯತ್ವಂ ವ್ಯತಿರೇಕೇಣಾಭಾವಃ ಕಾರ್ಯಸ್ಯಾವಗಂತವ್ಯ' ಬ್ರಹ್ಮವ್ಯತಿರೇಕದಿಂದ ಜಗತ್ತು ಇರುವುದಿಲ್ಲವೆಂದಷ್ಟೇ ಅರ್ಥ ಹೊರತು, ಬ್ರಹ್ಮನಿಗೂ ಜಗತ್ತಿಗೂ ಅಭೇದವನ್ನು ತಿಳಿಯಬಾರದು ಎಂದು ನಿಮ್ಮ ಭಾಷ್ಯದಲ್ಲಿ ನೀವೇ ಹೇಳಿರುತ್ತೀರಿ.

**प्रकाशः – विवरणरीत्या शङ्कते ।। अज्ञानेति ।। विशिष्टे शुद्धं प्रविष्टमित्यत आह – अन्यथेति ।।**

ವಿವರಣಕಾರನ ಪ್ರಕಾರ ಅಜ್ಞಾನವಿಶಿಷ್ಟನಾದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆ. ಆದ್ದರಿಂದ ಅಜ್ಞಾನವಿಶಿಷ್ಟನಾದ ಬ್ರಹ್ಮನೂ ಕೂಡ ಮಿಥ್ಯಾಭೂತನಾಗಿದ್ದಾನೆ. ಜಗತ್ತೂ ಕೂಡ ಮಿಥ್ಯಾಭೂತವಾಗಿದೆಯೆಂದು ಹೇಳಬಹುದು. ಈ ಪಕ್ಷದಲ್ಲಿ ಜಗತ್ತಿಗೂ ಬ್ರಹ್ಮನಿಗೂ ಅಭೇದವನ್ನು ಹೇಳಬಹುದಲ್ಲವೇ? ಎಂಬ ಆಶಂಕೆಯನ್ನು ಅನ್ಯಥಾ ಇತ್ಯಾದಿಯಾಗಿ ಮಾಡುತ್ತಿದ್ದಾರೆ.

ಇದು ತಪ್ಪು. ಶುದ್ಧಬ್ರಹ್ಮನ ಜ್ಞಾನದಿಂದ ಜಗತ್ತಿನ ಜ್ಞಾನವನ್ನು ಹೇಳಬೇಕೇ ಹೊರತು, ಅಜ್ಞಾನವಿಶಿಷ್ಟಬ್ರಹ್ಮಜ್ಞಾನದಿಂದ ಜಗತ್ತಿನ ಜ್ಞಾನವನ್ನು ಹೇಳಬಾರದು.

ವಿಶಿಷ್ಟರಲ್ಲಿ ಶುದ್ಧನೂ ಕೂಡ ಸೇರಿದ್ದಾನಲ್ಲವೇ? ಆದ್ದರಿಂದ ವಿಶಿಷ್ಟನು ಜೀವನಾದಾಗ, ಶುದ್ಧನೂ ಕೂಡ ಜ್ಞೇಯವಾಗುತ್ತಾನೆಂಬ ಪ್ರಶ್ನೆಗೆ 'ಅನ್ಯಥಾ' ಇತ್ಯಾದಿಯಾಗಿ ಉತ್ತರಿಸಿದ್ದಾರೆ. ಮುಮುಕ್ಷುಜ್ಞೇಯನಾದವನು ಅಜ್ಞಾನವಿಶಿಷ್ಟನಾದ ಬ್ರಹ್ಮನೆಂದು ಹೇಳಿದಂತಾಯಿತು. ತತ್‌ಪ್ರವಿಷ್ಟನಾದ ಶುದ್ಧನು ಜ್ಞೇಯನಾಗುವುದಾದರೆ, ಅಜ್ಞಾನವಿಶಿಷ್ಟನಲ್ಲಿ ಪ್ರವಿಷ್ಟವಾದ ಅಜ್ಞಾನವೂ ಕೂಡ ಮುಮುಕ್ಷುವಿನಿಂದ ಜ್ಞೇಯವಾಗಬೇಕಾದೀತು ಎಂಬ ಅಭಿಪ್ರಾಯವನ್ನು ತಿಳಿಯಬೇಕು.

ಆರಂಭಣಾಧಿಕರಣ (2-1-6)

**प्रकाशः – द्वितीयमाशङ्क्य निराह – नापि न खल्विति ।। अभेदेति ।।** परस्परविरुद्धयोरेकस्याभावेऽपरस्य सत्त्वनियमादिति भावः ।

ಭೇದಾಭಾವವನ್ನಷ್ಟೇ ಅನನ್ಯತ್ವಶಬ್ದಾರ್ಥವೆನ್ನುತ್ತೇವೆಂಬ ಎರಡನೆಯ ಶಬ್ದವನ್ನು 'ನಾಪಿ ನ ಖಲು' ಎಂಬ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ. ಪರಸ್ಪರ ವಿರುದ್ಧವಾದ ಎರಡು ಧರ್ಮಗಳ ನಡುವೆ ಒಂದನ್ನು ನಿಷೇಧ ಮಾಡಿದರೆ, ಮತ್ತೊಂದನ್ನು ವಿಧಾನ ಮಾಡಿದಂತಾಗುತ್ತದೆ.

**प्रकाशः – विरोधे विप्रतिपत्तावाह – भेदेति ।। लाघवायेति ।।** अभावापेक्षया भावस्य लघुत्वादिति भावः ।

ಭೇದಾಭಾವಕ್ಕೂ ಅಭೇದಾಭಾವಕ್ಕೂ ಪರಸ್ಪರ ವಿರೋಧವನ್ನೇ ನಾನು ಒಪ್ಪುವುದಿಲ್ಲ. ಆದ್ದರಿಂದ ಭೇದವಿಲ್ಲ ಅನ್ನುವ ಮಾತ್ರದಿಂದ ಅಭೇದವಿರಬೇಕೆಂದು ನಿಯಮವನ್ನು ಮಾಡಲಾಗದು. ಹೀಗೆ ಅದ್ವೈತಿಯು ಆಕ್ಷೇಪ ಮಾಡಿದರೆ ಭೇದವಿಲ್ಲವೆಂದರೆ ಅಭೇದವಿರಬೇಕೆಂದು ನಾವು ಆಕ್ಷೇಪ ಮಾಡುವುದಿಲ್ಲ. ಸತ್ಯತ್ವ ಹಾಗೂ ಮಿಥ್ಯಾತ್ವಗಳ ವ್ಯವಸ್ಥೆಯೇ ಕೂಡದಿರಬೇಕಾದೀತು ಎಂದು ಆಕ್ಷೇಪ ಮಾಡುತ್ತೇವೆ.

ಭೇದಾಭಾವ, ಅಭೇದಾಭಾವ ಎಂದು ಹೇಳುವುದಕ್ಕಿಂತ ಭೇದಾಭೇದವನ್ನು ಹೇಳುವುದು ಲಘುವಾಗಿದೆ. ಅಭಾವಕ್ಕಿಂತಲೂ ಭಾವವು ಲಘುಭೂತವೆಂದು ತಿಳಿಯಬೇಕು.

**प्रकाशः –** ''एकधेवानुद्रष्टव्यम्'' इत्यादिश्रुतिविरोधभयादेवमाश्रीयत इत्यत आह – **ब्रह्मण इति ।।**

ಬ್ರಹ್ಮನು ಏಕರಸಸ್ವರೂಪನಾಗಿದ್ದಾನೆಂದು ಶ್ರುತಿ ಹೇಳಿದೆ. ಅನೇಕರಸಸ್ವರೂಪವಾದ ಪ್ರಪಂಚಕ್ಕೂ ಬ್ರಹ್ಮನಿಗೂ ಭೇದವಿಲ್ಲವೆಂದೂ ಕೂಡ ಹೇಳುತ್ತಿದ್ದೀರಿ. ಆವಾಗ ಬ್ರಹ್ಮನಲ್ಲಿರುವ ಏಕರಸತ್ವವು ಭಗ್ನವಾಗುತ್ತದೆ. ಆದರೂ ಕೂಡ ಅಭೇದಾಭಾವದಿಂದ ಏಕರಸತ್ವವನ್ನು ಹೇಗೆ ಉಪಪಾದನೆ ಮಾಡುತ್ತೀರೋ, ಹಾಗೇ ನಾವೂ ಕೂಡ ಅಭೇದವಿದ್ದರೂ ಭೇದವಿರುವುದರಿಂದ ಪ್ರಪಂಚವು ಅನೇಕರಸಸ್ವರೂಪವಾಗುತ್ತದೆ. ಬ್ರಹ್ಮನು ಏಕರಸಸ್ವರೂಪನಾಗುತ್ತಾನೆಂದು ಕೂಡಿಸುತ್ತೇವೆ. 'ಏಕಧೇವಾನುದ್ರಷ್ಟವ್ಯಮ್' ಇತ್ಯಾದಿ ಶ್ರುತಿವಿರೋಧದ ಭಯದಿಂದ ಹೀಗೆ ಒಪ್ಪುವುದು ಅನಿವಾರ್ಯವೆಂದು ನೀವು ಹೇಳಿದರೆ 'ಬ್ರಹ್ಮಣಃ' ಇತ್ಯಾದಿಯಾಗಿ ಗ್ರಂಥಕಾರರು ಉತ್ತರಿಸಿದ್ದಾರೆ.

**प्रकाशः –** अनृततादात्म्यं सत्यब्रह्मणो न युक्तमित्यत आह – **यथाचेति ।।**

ಅನೃತವಾದ ಜಗತ್ತಿಗೂ, ಬ್ರಹ್ಮನಿಗೂ ಅಭೇದವನ್ನು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ 'ಯಥಾಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅದ್ವೈತಿಗಳಾದ ನೀವೂ ಕೂಡ ಭೇದಾಭಾವವನ್ನು ಹೇಗೆ ಹೇಳುತ್ತೀರೆಂದು ಪ್ರತಿಬಂಧಿ ಆಕ್ಷೇಪವನ್ನು ತಿಳಿಯಬೇಕು.

**प्रकाशः –** ननु यथा तुच्छस्य निस्स्वरूपत्वेन तत्र सत्यभेदो नास्ति अत एव भेदाभावेऽभेदध्रौव्यादित्यपि व्यभिचारि तथा च तत्र भेदाभेदयोरभावेपि यथा व्यवस्था तथाऽत्रापि स्यादिति चेत् ।

ಆಕ್ಷೇಪ - ಶಶವಿಷಾಣವು ನಿಃಸ್ವರೂಪವಾಗಿದೆ. ನಿಃಸ್ವರೂಪವಾದ ಶಶವಿಷಾಣಕ್ಕೆ, ಸತ್ಯಸ್ವರೂಪವಾದ ಘಟದಿಂದ ಭೇದವಿರುವುದಿಲ್ಲ. ಅಂದಮಾತ್ರಕ್ಕೆ ಅಭೇದವಿದೆ ಎಂದರ್ಥವಲ್ಲ. (ಅಸತ್‌ಪದಾರ್ಥಕ್ಕೆ ಸತ್ಯವಾದ ಘಟದಿಂದ ಭೇದವನ್ನು ಒಪ್ಪಿದರೆ ಧರ್ಮವನ್ನು ಒಪ್ಪಿದಂತಾಗುತ್ತದೆ. ತತ್ವವಾದಿಗಳು ಅಸತ್ ಪದಾರ್ಥದಲ್ಲಿ ಯಾವುದೇ ಧರ್ಮವನ್ನು ಒಪ್ಪಿರುವುದಿಲ್ಲ) ಹೀಗೊಪ್ಪಿದಾಗ 'ಭೇದಾಭಾವೇऽಭೇದಧ್ರೌವ್ಯಾತ್' ಎಂಬ ವ್ಯಾಪ್ತಿಯು ವ್ಯಭಿಚರಿತವಾಗುತ್ತದೆ. ಆದ್ದರಿಂದ ಭೇದವೂ ಇರುವುದಿಲ್ಲ. ಅಭೇದವೂ ಇರುವುದಿಲ್ಲ. ಆದರೂ ಘಟವು, ಸತ್ಯ ಶಶವಿಷಾಣವು ಅಸತ್ಯ ಎಂಬ ವ್ಯವಸ್ಥೆಯನ್ನು ನೀವು ಹೇಗೆ ಮಾಡುತ್ತೀರೋ, ಅದರಂತೆ ನಾವೂ ಕೂಡ ಜಗತ್ತು ಸುಳ್ಳು, ಬ್ರಹ್ಮನು ಸತ್ಯವೆಂಬ ವ್ಯವಸ್ಥೆಯನ್ನು ಮಾಡುತ್ತೇವೆ.

**प्रकाशः –** न तुच्छेऽसत्यभेदाभावेपि सत्ये तुच्छभेदस्य सत्त्वात् । यथोक्तं ''सदसद्वैलक्षण्ये मिथ्यात्वे सिद्धसाधनता'' इत्यादौ । अत एव ततोऽनृतादित्युक्तमत्रापि निस्स्वरूपस्यापि प्रतियोगित्वं धर्मिसत्तानिरपेक्षधर्मत्वाद्युक्त मित्यन्यत्र व्यक्तमिति भावः ।

ಸಮಾಧಾನ - ಇದು ತಪ್ಪು. ಶಶವಿಷಾಣದಲ್ಲಿ ಸತ್ಯದ ದೆಸೆಯಿಂದ ಭೇದವಿರುವುದಿಲ್ಲ. ಆದರೆ ಸತ್ಯವಾದ ಘಟಕ್ಕೆ ಶಶವಿಷಾಣದ ದೆಸೆಯಿಂದ ಭೇದವಿದೆ ಎಂದು ಒಪ್ಪುತ್ತೇವೆ. ಇದನ್ನೇ 'ಸದಸದ್ವೈಲಕ್ಷಣ್ಯೇ ಮಿಥ್ಯಾತ್ವೇ ಸಿದ್ಧಸಾಧನತಾ' ಎಂಬ ಮಾತಿನಿಂದ ವಿಶ್ವಮಿಥ್ಯಾತ್ವಾನುಮಾನಖಂಡನದಲ್ಲಿ ಶ್ರೀಮದಾಚಾರ್ಯರು ಹೇಳಿರುತ್ತಾರೆ. ಜಗತ್ತಿಗೆ ಅಸದ್ವೈಲಕ್ಷಣ್ಯವನ್ನು ನಾವು ಒಪ್ಪಿದ್ದೇವೆ. ಏಕೆಂದರೆ ಜಗತ್ತು ಅಸತ್‌ಪದಾರ್ಥವಲ್ಲ. ಅಸತ್ತಿಗೆ ಜಗತ್ತಿನ ಜೊತೆ ಭೇದವಿಲ್ಲದಿದ್ದರೂ ಜಗತ್ತಿಗೆ ಅಸತ್‌ಪದಾರ್ಥದ ಜೊತೆ ಭೇದವನ್ನು ಹೇಳಬಹುದು. ಆದ್ದರಿಂದ ಸಿದ್ಧಸಾಧನತಾ ಬರುತ್ತದೆ ಎಂದು.

ಈ ಅಭಿಪ್ರಾಯದಿಂದಲೇ ಗ್ರಂಥಕಾರರು 'ಅನೃತಸ್ಯ ಭೇದಃ' ಎಂದು ಹೇಳದೇ 'ಅನೃತಾತ್ ಭೇದಃ' ಎಂದು ಹೇಳಿರುತ್ತಾರೆ. ನಿಃಸ್ವರೂಪವಾದ ಶಶವಿಷಾಣವು ಹೇಗೆ ಪ್ರತಿಯೋಗಿಯಾಗುತ್ತದೆ ? ಎಂದರೆ ಧರ್ಮಿಸತ್ತಾನಿರಪೇಕ್ಷವಾದ ಧರ್ಮವನ್ನು ಶಶವಿಷಾಣದಲ್ಲಿ ಒಪ್ಪುತ್ತೇವೆ. ಇದನ್ನು ನ್ಯಾಯಾಮೃತಾದಿ ಗ್ರಂಥಗಳಲ್ಲಿ ಗ್ರಂಥಕಾರರೇ ವಿಶದಪಡಿಸಿದ್ದಾರೆ.

**प्रकाशः –** तृतीयं कल्पं परभाष्योक्तमाशङ्क्याह – **नापीति** ।।

ಬ್ರಹ್ಮನಿಗಿಂತ ಅತಿರಿಕ್ತವಾದ ಜಗತ್ತು ಇರುವುದಿಲ್ಲ ಎಂಬ ಮೂರನೆಯ ಪಕ್ಷವು ಪರಭಾಷ್ಯದಲ್ಲಿ ಉಕ್ತವಾಗಿದೆ. ಅದನ್ನು ಗ್ರಂಥಕಾರರು 'ನಾಪಿ' ಇತ್ಯಾದಿ ವಾಕ್ಯದಿಂದ ಆಕ್ಷೇಪ ಮಾಡುತ್ತಿದ್ದಾರೆ.

**प्रकाशः – विशेषेति** ।। अन्यथा ''व्यतिरेकेण'' इति विशेषणवैयर्थ्यापत्तिरिति भावः ।। **आनन्देति** ।। तयोरपि ब्रह्मातिरेकेणासत्त्वात्तयोरप्यनृतत्वापत्तिरिति भावः। चतुर्थं निराह – **ब्रह्मणीति** ।।

ಜಗತ್ತು ಬ್ರಹ್ಮನಿಗಿಂತ ಅತಿರಿಕ್ತವಾಗಿ ಇಲ್ಲವೆಂದೇಕೆ ಹೇಳಬೇಕು. ಸರ್ವಥಾ ಜಗತ್ತೇ ಇಲ್ಲವೆಂದು ಹೇಳಿದ ಮೇಲೆ ಬ್ರಹ್ಮವ್ಯತಿರೇಕೇಣ ಎಂಬ ಶಬ್ದವನ್ನು ಪ್ರಯೋಗ ಮಾಡಿದರೆ, ಬ್ರಹ್ಮಸ್ವರೂಪದಿಂದ ಇದೆ ಎಂಬ ಅರ್ಥವೇ ತಿಳಿಯುತ್ತದೆ. ಆವಾಗ ಆನಂದ, ಜೀವ ಇವುಗಳಿಗೆ ಹೇಗೆ ಬ್ರಹ್ಮಾತ್ಮಕತ್ವವಿದೆಯೋ, ಅದರಂತೆ ಜಗತ್ತಿಗೂ ಬ್ರಹ್ಮಾತ್ಮಕತ್ವವಿದೆಯೆಂದು ಹೇಳಿದಂತಾಯಿತು. ಇಲ್ಲದಿದ್ದರೆ 'ಬ್ರಹ್ಮವ್ಯತಿರೇಕೇಣ' ಎಂಬ ವಿಶೇಷಣಕ್ಕೆ ವೈಯರ್ಥ್ಯ ಬರುತ್ತದೆ.

ಜಗತ್ತು ಬ್ರಹ್ಮವ್ಯತಿರೇಕದಿಂದ ಇಲ್ಲದ ಕಾರಣ ಜಗತ್ತು ಮಿಥ್ಯಾಭೂತವಾಗಿದೆಯೆಂದು ಹೇಳಿದರೆ, ಆನಂದ, ಜೀವ ಇವುಗಳೂ ಕೂಡ ಬ್ರಹ್ಮವ್ಯತಿರೇಕೇಣ ಇಲ್ಲದ ಕಾರಣ ಮಿಥ್ಯಾಭೂತವಾಗಿದೆಯೆಂದು ಹೇಳಬೇಕಾದೀತು. ಬ್ರಹ್ಮನಲ್ಲಿ ಆರೋಪಿತವಾಗಿದೆಯೆಂಬ ನಾಕನೆಯ ಪಕ್ಷವನ್ನು 'ಬ್ರಹ್ಮಣಿ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ.

**प्रकाशः** – नन्वभिन्ने यथा तदन्यत्वं नास्त्येवमधिष्ठानाध्यस्तयोरन्यत्वं नेति गौण्या वृत्त्या तदनन्यत्वपदेनारोपाधिष्ठानतोच्यत इत्यत आह – **प्रातिभासिकेति** ।। शुक्तिरूप्यप्रपञ्चयोश्शुक्तिब्रह्मभ्यामित्यर्थः ।। **अनिर्वाच्यत्वेति** ।। त्वदभिमत द्विरूपेत्यर्थः ।। **एकेति** ।। अधिष्ठानज्ञानेनाध्यस्तज्ञानादर्शनादिति भावः ।

ಆಕ್ಷೇಪ - 'ಅನನ್ಯತ್ವ' ಶಬ್ದಕ್ಕೆ ಬ್ರಹ್ಮನಲ್ಲಿ ಆರೋಪಿತವೆಂಬ ಅರ್ಥವನ್ನು ಹೇಳಲು ಸಾಧ್ಯವೇ ಇಲ್ಲವೆಂದು ಹೇಳಿದಿರಿ. ಆದರೆ ಗೌಣೀವೃತ್ತಿಯಿಂದ ನಾವು ಹೇಳುತ್ತೇವೆ. ಅಭಿನ್ನವಾದ ಪದಾರ್ಥದಲ್ಲಿ ಹೇಗೆ ಭೇದವು ಇರುವುದಿಲ್ಲವೋ? ಅದರಂತೆ ಅಧಿಷ್ಠಾನ ಅಧ್ಯಸ್ತಗಳಲ್ಲಿಯೂ ಕೂಡ ಭೇದವು ಇರುವುದಿಲ್ಲ. ಈ ವಿವಕ್ಷೆಯಿಂದ ಅನನ್ಯತ್ವವಿರುತ್ತದೆಂದು ಗೌಣವಾಗಿ ಹೇಳುತ್ತೇವೆ.

(ಘಟಕ್ಕೆ ಕುಂಭಕ್ಕಿಂತ ಅನ್ಯತ್ವವಿರುವುದಿಲ್ಲ. ಅದರಂತೆ ಅಧಿಷ್ಠಾನವಾದ ಶುಕ್ತಿಗೆ ಆರೋಪಿತವಾದ ರಜತದಿಂದ ಅನ್ಯತ್ವವಿರುವುದಿಲ್ಲ. ಆದ್ದರಿಂದ ಅನನ್ಯತ್ವವೆಂಬ ಶಬ್ದಪ್ರಯೋಗವನ್ನು ಗೌಣೀವೃತ್ತಿಯಿಂದ ಮಾಡಬಹುದು.)

ಸಮಾಧಾನ - ಪ್ರಾತಿಭಾಸಿಕವು ವ್ಯಾವಹಾರಿಕಕ್ಕಿಂತ ಭಿನ್ನವಲ್ಲ. ವ್ಯಾವಹಾರಿಕವು ಪಾರಮಾರ್ಥಿಕಕ್ಕಿಂತ ಭಿನ್ನವಲ್ಲವೆಂದು ಹೇಳಿದರೆ ಅನಿರ್ವಾಚ್ಯತ್ವವೇ ಭಗ್ನವಾಗುತ್ತದೆ. ಶುಕ್ತಿರೂಪ್ಯಕ್ಕೆ ಶುಕ್ತಿಯ ದೆಸೆಯಿಂದ ಪ್ರಪಂಚಕ್ಕೆ ಬ್ರಹ್ಮನ ದೆಸೆಯಿಂದ ಭೇದವಿಲ್ಲವೆಂದು ಹೇಳುತ್ತಿದ್ದೀರಿ. ಪಾರಮಾರ್ಥಿಕದ ಜೊತೆಗೆ ಅನ್ಯತ್ವವಿಲ್ಲದ ಕಾರಣ ವ್ಯಾವಹಾರಿಕವು ಪಾರಮಾರ್ಥಿಕವಾಗುತ್ತದೆ. ಪ್ರಾತಿಭಾಸಿಕವೂ ಕೂಡ ಪಾರಮಾರ್ಥಿಕವಾಗುತ್ತದೆ. ಹೀಗೊಪ್ಪಿದಾಗ ಅನಿರ್ವಾಚ್ಯತ್ವವೇ ಇಲ್ಲದಂತಾಗುತ್ತದೆ.

**प्रकाशः** – एकविज्ञानेनेत्युक्तं प्रमेयं ''नहि सत्यज्ञानेन मिथ्याज्ञानं भवति । नहि शुक्तिज्ञो रजतज्ञ इत्युच्यत'' इत्यादितत्वनिर्णय तट्टीकयोरुक्तरीत्या व्यनक्ति।। **कथं हीति** ।।

'ಏಕವಿಜ್ಞಾನೇನ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಪ್ರಮೇಯವು 'ನಹಿ ಸತ್ಯಜ್ಞಾನೇನ ಮಿಥ್ಯಾಜ್ಞಾನಂ ಭವತಿ । ನಹಿ ಶುಕ್ತಿಜ್ಞೋ ರಜತಜ್ಞ ಇತ್ಯುಚ್ಯತೇ' ಸತ್ಯಜ್ಞಾನದಿಂದ ಮಿಥ್ಯಾಜ್ಞಾನವು ಉಂಟಾಗುವುದಿಲ್ಲ. ಶುಕ್ತಿಯನ್ನು ತಿಳಿಯದೇ ರಜತವನ್ನು ತಿಳಿಯಲು ಸಾಧ್ಯವಿಲ್ಲ ಇತ್ಯಾದಿಯಾಗಿ ತತ್ವನಿರ್ಣಯಟೀಕೆಯಲ್ಲಿ ಹೇಳಿದ್ದಾರೆ. ಅದನ್ನೇ 'ಕಥಂ ಹಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

**ಪ्रकाशः** – नन्वधिष्ठानज्ञानमन्वयव्यतिरेकाभ्यामध्यस्तज्ञानहेतुः । तथा चाधिष्ठानब्रह्मज्ञाने सत्येवाध्यस्तप्रपञ्चज्ञानं नान्यथेत्यत उक्तम् – **विज्ञानादिति ।। सत्यमेवम् ।।**

'ಇದಂ ರಜತಂ' ಎಂಬ ಜ್ಞಾನ ಬರಬೇಕಾದರೆ ಮೊದಲು ಶುಕ್ತಿಗೂ ಇಂದ್ರಿಯಕ್ಕೂ ಸನ್ನಿಕರ್ಷ ಆಗಬೇಕು. ಅನಂತರ ಶುಕ್ತಿಯ ಸಾಮಾನ್ಯಜ್ಞಾನ ಬರುತ್ತದೆ. 'ಇದಂತ್ವ ಪ್ರಕಾರವಾದ ಸಾಮಾನ್ಯಜ್ಞಾನವು ಬಂದರೆ ಮಾತ್ರ ರಜತಜ್ಞಾನವು ಬರುತ್ತದೆ. ಸಾಮಾನ್ಯಜ್ಞಾನವು ಬಾರದಿದ್ದರೆ, ರಜತಜ್ಞಾನವು ಬರುವುದಿಲ್ಲ. ಆದ್ದರಿಂದ ಅಧಿಷ್ಠಾನದ ಸಾಮಾನ್ಯಜ್ಞಾನ ಇದ್ದರೆ ಮಾತ್ರ ಅಧ್ಯಸ್ತದ ಜ್ಞಾನವು ಬರುತ್ತದೆ. ಅಧಿಷ್ಠಾನದ ಸಾಮಾನ್ಯಜ್ಞಾನವು ಬಾರದಿದ್ದರೆ, ಅಧ್ಯಸ್ತದ ಜ್ಞಾನವು ಬರುವುದಿಲ್ಲ. ಹೀಗೆ ಅನ್ವಯವ್ಯತಿರೇಕಗಳಿಂದ ಅಧಿಷ್ಠಾನಜ್ಞಾನವು ಅಧ್ಯಸ್ತಜ್ಞಾನಕ್ಕೆ ಹೇತುವಾಗಿದೆ ಎಂದು ನಿಶ್ಚಯವಾಗುತ್ತದೆ. ಬ್ರಹ್ಮನು ಅಧಿಷ್ಠಾನ-ಭೂತನಾಗಿದ್ದಾನೆ. ಜಗತ್ತು ಅಧ್ಯಸ್ತವಾಗಿದೆ. ಆದ್ದರಿಂದ ಬ್ರಹ್ಮಜ್ಞಾನವು ಜಗತ್ತಿನ ಜ್ಞಾನಕ್ಕೆ ಕಾರಣವೆಂದು ಹೇಳಬಹುದಲ್ಲವೇ? ಈ ಪ್ರಶ್ನೆಗೆ 'ವಿಜ್ಞಾನಾತ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**ಪ्रकाशः – सत्यमेवम् ।।** तथापि प्रकृते ब्रह्मज्ञानं न यादृशतादृशम् । मुमुक्षुं प्रत्युपदिश्यमानत्वात् । किन्तु ब्रह्मतत्वज्ञानम् । ब्रह्मणोऽधिष्ठानत्वे तत्र स्यात् । शुक्तितत्वज्ञानादत्राध्यस्तरूप्यज्ञानादर्शनात् । अत एव ''शुक्तिस्वरूपस्य'' इत्युक्तमिति भावः ।

ಆದರೂ ಕೂಡ ಪ್ರಕೃತದಲ್ಲಿ ಯಾದೃಶತಾದೃಶವಾದ ಬ್ರಹ್ಮಜ್ಞಾನವನ್ನು ನಾವು ಹೇಳುತ್ತಿಲ್ಲ. ಮುಮುಕ್ಷುವನ್ನು ಕುರಿತು ಉಪದೇಶಿಸುತ್ತಿರುವುದರಿಂದ ಯಥಾರ್ಥವಾದ ಬ್ರಹ್ಮತತ್ವಜ್ಞಾನವನ್ನೇ ಹೇಳುತ್ತಿದ್ದೇವೆ. ಒಂದುವೇಳೆ ಬ್ರಹ್ಮನು ಅಧಿಷ್ಠಾನನಾದರೆ ಇದು ಯುಕ್ತವಾಗುವುದಿಲ್ಲ. ಉಪನಿಷತ್ತಿನಲ್ಲಿರುವ ಬ್ರಹ್ಮತತ್ವಜ್ಞಾನದಿಂದ ಜಗತ್ತಿನ ಜ್ಞಾನವನ್ನು ಹೇಳಲಾಗಿದೆ. ಇದು ಹೇಗೆ ಕೂಡುತ್ತದೆ ? ಬ್ರಹ್ಮತತ್ವದ ಅಪರಿಜ್ಞಾನದಿಂದ ಜಗತ್ತಿನ ಜ್ಞಾನ ಹೇಳಬಹುದೇ ಹೊರತು, ಬ್ರಹ್ಮತತ್ವಜ್ಞಾನದಿಂದ ಜಗತ್ತಿನ ಜ್ಞಾನವನ್ನು ಹೇಳಲು ಸರ್ವಥಾ ಬರುವುದಿಲ್ಲ. ಏಕೆಂದರೆ ಅಧಿಷ್ಠಾನಭೂತವಾದ ಶುಕ್ತಿತತ್ವದ ಜ್ಞಾನವಿದ್ದಾಗ ಅಧ್ಯಸ್ತವಾದ ಶುಕ್ತಿರೂಪ್ಯಜ್ಞಾನ ಬರುವುದು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಗ್ರಂಥದಲ್ಲಿ 'ಶುಕ್ತಿಸ್ವರೂಪಸ್ಯ' ಎಂದು ಪ್ರಯೋಗಿಸಿದ್ದಾರೆ.

**ಪ्रकाशः – किं चारोपितत्वाङ्गीकार एकविज्ञानप्रतिकूल इत्याह – प्रत्युतेति।। ब्रह्मतत्वेति ।।** इह च तत्तत्वज्ञानेन सर्वज्ञतोच्यमाना न युक्तेति भावः ।।

ಮತ್ತು ಜಗತ್ತನ್ನು ಬ್ರಹ್ಮನಲ್ಲಿ ಆರೋಪಿತವೆಂದು ಅಂಗೀಕಾರ ಮಾಡಿದರೆ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತೀತಿಯೂ ಕೂಡ ವಿರುದ್ಧವಾಗುತ್ತದೆಂದು 'ಪ್ರತ್ಯುತ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಬ್ರಹ್ಮತತ್ತ್ವ' ಇತ್ಯಾದಿ ಶ್ಲೋಕದ ಅಭಿಪ್ರಾಯ ಹೀಗಿದೆ - ಬ್ರಹ್ಮತತ್ತ್ವಜ್ಞಾನದಿಂದ ಸಮಸ್ತ ಜಗತ್ತನ್ನು ತಿಳಿದಂತಾಗುತ್ತದೆಂದು ಶ್ರುತಿ ಹೇಳುವುದು ಅಯುಕ್ತವಾಗಬೇಕಾದೀತು ಎಂದು.




ಸೂತ್ರಕಾರರು ಹಿಂದಿನ ಅಧಿಕರಣದಲ್ಲಿ ವ್ಯಾವಹಾರಿಕವಾದ ಭೇದವನ್ನು ವಿವಕ್ಷಿಸಿ 'ಲೋಕವತ್ತು' ಎಂಬ ಉದಾಹರಣೆಯಿಂದ ಭೋಕ್ತೃ ಹಾಗೂ ಭೋಗಪದಾರ್ಥಗಳಿಗೆ ಭೇದವನ್ನು ಸಮರ್ಥನೆ ಮಾಡಿದರು. ಈ ಅಧಿಕರಣದಲ್ಲಿ ಬ್ರಹ್ಮನಿಗೂ ಜಗತ್ತಿಗೂ ಪಾರಮಾರ್ಥಿಕವಾದ ಭೇದವಿರುವುದಿಲ್ಲವೆಂದು ಸಮರ್ಥನೆ ಮಾಡುತ್ತಿದ್ದಾರೆ. ಏಕೆಂದರೆ ಕಾರ್ಯವಾದ ಪ್ರಪಂಚವೆಲ್ಲವೂ ಕಾರಣನಾದ ಬ್ರಹ್ಮಸ್ವರೂಪವೇ ಆಗಿದೆಯೆಂಬುದಾಗಿ ವಾಚಾರಂಭಣೀಯಂ ವಿಕಾರೋ ನಾಮಧೇಯಂ' ಎಂಬ ಶ್ರುತಿ ಪ್ರತಿಪಾದನೆ ಮಾಡುತ್ತಿದೆ. ಸೂತ್ರದಲ್ಲಿರುವ ಆರಂಭಣಶಬ್ದದಿಂದ ಈ ಶ್ರುತಿಯು ಸೂಚಿತವಾಗಿದೆ. ಆದಿಪದದಿಂದ 'ಐತ್ಮ್ಯಾರ್ಥೇ ಇದಂ ಸರ್ವಂ' ಎಂಬ ಶ್ರುತಿಯು ಸೂಚಿತವಾಗಿದೆ. ಐತ್ಮ್ಯಾರ್ಥೇ ಶ್ರುತಿಯೂ ಕೂಡ ಜಗತ್ತನ್ನು ಬ್ರಹ್ಮನೆಂದೇ ಹೇಳುತ್ತಿದೆ.

ಇವರ ಈ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. ಅನ್ಯತ್ರ ಶಬ್ದಕ್ಕೆ ಜಗತ್ತು ಬ್ರಹ್ಮನಿಂದ ಅಭಿನ್ನವಾಗಿದೆ ಎಂಬರ್ಥವನ್ನು ವಿವಕ್ಷಿಸಲು ಬರುವುದಿಲ್ಲ. ಏಕೆಂದರೆ ಜಡವಾದ ಜಗತ್ತನ್ನು ಬ್ರಹ್ಮಸ್ವರೂಪವೆಂದು ನೀನೂ ಕೂಡ ಅಂಗೀಕಾರ ಮಾಡಿಲ್ಲ. ಭೇದಾಭಾವವೇ ಅನನ್ಯತ್ವ ಎನಿಸಿಕೊಳ್ಳುತ್ತದೆ ಎಂಬುದೂ ಕೂಡ ತಪ್ಪು. ಭೇದಾಭಾವವು ಅಭೇದದಲ್ಲಿಯೇ ಪರ್ಯವಸಾನವಾಗುವುದರಿಂದ ಪುನಃ ಪ್ರಥಮಪಕ್ಷದಲ್ಲಿ ಹೇಳಿದ ದೋಷವು ಪ್ರಾಪ್ತವಾಗುತ್ತದೆ. ಬ್ರಹ್ಮವ್ಯತಿರೇಕೇಣ ಅಸತ್ವವನ್ನು ಅನ್ಯನತ್ವ ಎನ್ನಬೇಕು. ಜಗತ್ತು ಬ್ರಹ್ಮನಿಗಿಂತ ಅತಿರಿಕ್ತವಾಗಿ ಇರುವುದಿಲ್ಲ ಎಂದು ಹೇಳಿದಾಗ ಜಗತ್ತನ್ನು ಬ್ರಹ್ಮನೆಂದೇ ಹೇಳಿದಂತಾಗುತ್ತದೆ. ಬ್ರಹ್ಮನಲ್ಲಿ ಆರೋಪಿತವಾಗಿರುವುದರಿಂದ ಬ್ರಹ್ಮನಿಂದ ಅನನ್ಯವಾಗಿದೆ ಎಂದು ಹೇಳಬೇಕು. ಇದೂ ಕೂಡ ಸರಿಯಲ್ಲ. ಶುಕ್ತಿಯಲ್ಲಿ ಆರೋಪಿತವಾದ ರಜತವನ್ನು ಯಾರೂ ಕೂಡ ಶುಕ್ತಿಯಿಂದ ಅಭಿನ್ನವಾಗಿದೆಯೆಂದು ಪ್ರಯೋಗ ಮಾಡುವುದಿಲ್ಲ. ಆದ್ದರಿಂದ ಈ ಜಗತ್ತು ಬ್ರಹ್ಮನಿಗಿಂತ ಅಭಿನ್ನವಾಗಿದೆ ಎಂಬ ಸೂತ್ರದ ವ್ಯಾಖ್ಯಾನವು ಅಯುಕ್ತವಾಗಿದೆ.

ಕಥಂ ಹಿ ಬ್ರಹ್ಮವಿಜ್ಞಾನಾದ್ವಿಜ್ಞಾತಂ ಸಕಲಂ ಭವೇತ್ ।
ನಹಿ ಶುಕ್ತಿಸ್ವರೂಪಸ್ಯ ವಿಜ್ಞಾನಾದ್ ರಜತಜ್ಞತಾ ॥೧॥

ಬ್ರಹ್ಮನು ಅಧಿಷ್ಠಾನನಾಗಿದ್ದಾನೆ, ಜಗತ್ತು ಆರೋಪಿತವಾಗಿದೆ. ಅಧಿಷ್ಠಾನನಾದ ಬ್ರಹ್ಮನ ಜ್ಞಾನದಿಂದ ಆರೋಪಿತವಾದ ಜಗತ್ತಿನ ಜ್ಞಾನವನ್ನು ಹೇಳಲು ಹೇಗೆ ಸಾಧ್ಯ ? ಶುಕ್ತಿಯ ಸ್ವರೂಪವನ್ನು ಯಾರು ತಿಳಿದಿರುತ್ತಾನೋ, ಅವನಿಗೆ ರಜತಜ್ಞಾನವು ಬರಲು ಸಾಧ್ಯವಿಲ್ಲ. ಹೊರತಾಗಿ

ಶುಕ್ತಿತತ್ತ್ವಾಪರಿಜ್ಞಾನಾದ್ಯಥೈವ ರಜತಜ್ಞತಾ ।
ಬ್ರಹ್ಮತತ್ತ್ವಾಪರಿಜ್ಞಾನಾತ್ ತಥಾ ಸರ್ವಜ್ಞತೋಚಿತಾ ॥೧॥

ಶುಕ್ತಿತತ್ತ್ವದ ಬಗ್ಗೆ ಅವನಿಗೆ ತಿಳಿಯದ ಕಾರಣ ರಜತಜ್ಞಾನವು ಬಂದಿರುತ್ತದೆ. ಆದ್ದರಿಂದ ಅಧಿಷ್ಠಾನದ ಅಜ್ಞಾನವು ಆರೋಪಿತದ ಜ್ಞಾನಕ್ಕೆ ಕಾರಣವಾಗಿರುತ್ತದೆ ಹೊರತು, ಅಧಿಷ್ಠಾನದ ಜ್ಞಾನವು ಆರೋಪಿತಜ್ಞಾನಕ್ಕೆ ಸರ್ವಥಾ ಕಾರಣವಲ್ಲ. ಅದರಂತೆ ಬ್ರಹ್ಮತತ್ತ್ವದ ಅಪರಿಜ್ಞಾನದಿಂದಲೇ ಸಮಗ್ರ ಜಗತ್ತಿನ ಜ್ಞಾನವು ಬರುತ್ತದೆಂದು ಹೇಳುವುದು ಉಚಿತ. ಹೊರತು, ಬ್ರಹ್ಮಜ್ಞಾನದಿಂದ ಸಮಸ್ತ ಜಗತ್ತಿನ ಜ್ಞಾನವು ಬರುತ್ತದೆಂದು ಹೇಳುವುದು ಸರ್ವಥಾ ಯುಕ್ತವಾಗುವುದಿಲ್ಲ.

### ಭಾಮತಿಯ ನಿರಾಕರಣೆ

## तात्पर्यचन्द्रिका

**अत्रोक्तं भामत्यां रज्ज्वां ज्ञातायां भुजङ्गतत्वं ज्ञातं भवति । सा हि तस्य तत्वम् । एवञ्च ब्रह्मज्ञानात्सर्वं तत्वतो ज्ञातं भवतीति ।**

ಭಾಮತಿಯಲ್ಲಿ ಹೀಗೆ ಸಮರ್ಥಿಸಲಾಗಿದೆ - ರಜ್ಜು ಜ್ಞಾತವಾದರೆ, ಆರೋಪಿತವಾದ ಸರ್ಪವೂ ಕೂಡ ಜ್ಞಾತವಾಗುತ್ತದೆ. ಏಕೆಂದರೆ ಸರ್ಪದ ತತ್ತ್ವ ರಜ್ಜುವೇ ಆಗಿದೆ. ಆದ್ದರಿಂದ ಬ್ರಹ್ಮನು ಜ್ಞಾತನಾದರೆ, ಸಮಸ್ತ ಜಗತ್ತು ಜ್ಞಾತವಾಗುತ್ತದೆ. ಬ್ರಹ್ಮಜ್ಞಾನದಿಂದ ಆರೋಪಿತವಾದ ಸಮಸ್ತ ಜಗತ್ತು ಜ್ಞಾತವಾಗಲೇಬೇಕು.

**तन्न । एवं हि ब्रह्मज्ञानेन ब्रह्मैव ज्ञातं भवतीत्यर्थः स्यात् ।**

ಇದು ತಪ್ಪು. ಹಾಗಾದರೆ ನೀವು ಜಗತ್ತನ್ನೇ ಬ್ರಹ್ಮನೆಂದು ಹೇಳಿರುವುದರಿಂದ ಬ್ರಹ್ಮಜ್ಞಾನದಿಂದ ಬ್ರಹ್ಮನೇ ಜ್ಞಾತನಾಗುತ್ತಾನೆಂದು ಹೇಳಿದಂತಾಯಿತು. ಬ್ರಹ್ಮಜ್ಞಾನದಿಂದ ಜಗತ್ತಿನ ಜ್ಞಾನ ಬರುತ್ತದೆ ಎಂದು ಹೇಳಿದಂತಾಗಲಿಲ್ಲ.

**तच्चायुक्तम् । स्वस्य स्वहेतुत्वायोगात् । ''येनाश्रुतं श्रुतं भवत्यमतं मतमविज्ञातं विज्ञातम्'' इति श्रुतिगताश्रुतादिपदायोगाच्च ।**

ಆದರೆ ಇದು ಕೂಡುವುದಿಲ್ಲ. ತನಗೆ ತಾನೇ ಕಾರಣವಾಗುವುದು ಎಲ್ಲಿಯೂ ಕಂಡಿಲ್ಲ. ಮತ್ತು 'ಯೇನಾಶ್ರುತಂ ಶ್ರುತಂ ಭವತಿ ಅಮತಂ ಮತಮವಿಜ್ಞಾತಂ ವಿಜ್ಞಾತಮ್' ಎಂಬ ಶ್ರುತಿಯಲ್ಲಿರುವ ಅಶ್ರುತ ಮೊದಲಾದ ಪದಗಳೂ ಕೂಡ ಅಯುಕ್ತವಾಗುತ್ತವೆ.

**किं चासाधारणं स्वरूपमसाधारणधर्मो वा तत्वम् । ननु भ्रमाधिष्ठानम् । तथात्वे चानन्दो ब्रह्मणो रज्जुत्वं च रज्जोस्तत्वं न स्यात् ।**

ಮತ್ತು ಅಸಾಧಾರಣಧರ್ಮವನ್ನು 'ತತ್ವ' ಎಂದು ಕರೆಯುತ್ತಾರೆ. (ಜಗತ್ತಿನ ತತ್ವಜ್ಞಾನವು ಉಂಟಾಗಿದೆ ಎಂದರೆ ಜಗತ್ತಿನ ಅಸಾಧಾರಣಸ್ವರೂಪವು ತಿಳಿದಿದೆ ಎಂದರ್ಥ.) ಹೊರತು, ಭ್ರಮಾಧಿಷ್ಠಾನವನ್ನೇ ತತ್ವವೆಂದು ಕರೆಯಬಾರದು. ಹಾಗೇ ಹೇಳಿದರೆ ಆನಂದವು ಬ್ರಹ್ಮನ ತತ್ವವೆಂದು ರಜ್ಜುತ್ವವು ರಜ್ಜುವಿನ ತತ್ವವೆಂದು ಹೇಳಬೇಕಾದೀತು. ('ಸತ್ಯಂ ಜ್ಞಾನಂ ಅನಂತಂ ಬ್ರಹ್ಮ, ವಿಜ್ಞಾನಂ ಆನಂದಂ ಬ್ರಹ್ಮ' ಇತ್ಯಾದಿ ವಾಕ್ಯಗಳಿಂದ ಬ್ರಹ್ಮತತ್ವವು ಜ್ಞಾತವಾಗುತ್ತದೆಂದು ಅದ್ವೈತಿಗಳು ಹೇಳುತ್ತಾರೆ. ಹಾಗೆ ಹೇಳಿದರೆ ಬ್ರಹ್ಮನ ತತ್ವವೆಂದರೇನು ? ಜ್ಞಾನ, ಆನಂದ ಇವುಗಳನ್ನೆಲ್ಲಾ ಬ್ರಹ್ಮನ ತತ್ವವೆಂದು ವ್ಯವಹಾರ ಮಾಡಿದಂತಾಯಿತು. ಆರೋಪಾಧಿಷ್ಠಾನಗಳನ್ನೇ ತತ್ವವೆಂದು ನೀವು ಕರೆಯುತ್ತಿರುವುದರಿಂದ ಬ್ರಹ್ಮನ ತತ್ವ ಆನಂದ ಬ್ರಹ್ಮನ ಆರೋಪಕ್ಕೆ ಇದು ಅಧಿಷ್ಠಾನವಾಗಿದೆಯೆಂದು ಹೇಳಿದಂತಾಯಿತು. ಹೀಗೆ ಹೇಳಲು ಸಾಧ್ಯವಿಲ್ಲ. ಅಥವಾ ರಜ್ಜುವಿನ ತತ್ವ ರಜ್ಜುತ್ವ ಎಂದು ಕರೆಯುತ್ತಾರೆ. ಒಬ್ಬನಿಗೆ ಸರ್ಪದ ಭ್ರಮೆ ಬಂದಿರುವಾಗ ರಜ್ಜುವಿನ ತತ್ವಜ್ಞಾನ ಬಂದ ಕೂಡಲೇ ಸರ್ಪದಜ್ಞಾನ ಹೋಗುತ್ತದೆ. ಇಲ್ಲಿ ರಜ್ಜುವಿನ ತತ್ವಜ್ಞಾನವೆಂದರೆ ರಜ್ಜುತ್ವಪ್ರಕಾರದ ಜ್ಞಾನವಾಗಿದೆ. ಭ್ರಮಾಧಿಷ್ಠಾನವನ್ನೇ ತತ್ವವೆಂದು ಹೇಳುವುದಾದರೆ, ರಜ್ಜುವಿನ ಆರೋಪಕ್ಕೆ ಅಧಿಷ್ಠಾನವಾಗಿರುವ ರಜ್ಜುತ್ವವೂ ಕೂಡ ತತ್ವವೆಂದಾಗಬೇಕಾದೀತು.)

**नच रज्जू रज्जुज्ञाननिवर्त्यस्य सर्पस्य स्वरूपं धर्मो वा ।**

ಅಸಾಧಾರಣಸ್ವರೂಪವೇ ತತ್ವವೆಂದು, ಅಸಾಧಾರಣಧರ್ಮವೂ ಕೂಡ ತತ್ವವೆಂದು ಇಟ್ಟುಕೊಂಡು ಸರ್ಪದ ತತ್ವ ರಜ್ಜುವೆಂದು ನಿಮ್ಮಿಂದ ಉಪಪಾದನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಸರ್ಪದ ಸ್ವರೂಪವೇ ರಜ್ಜುವೆಂದು ನೀವು ಹೇಳಬೇಕು. ಅಥವಾ ಸರ್ಪದ ಧರ್ಮವೇ ರಜ್ಜುವೆಂದು ನೀವು ಹೇಳಬೇಕು. ಆದರೆ ಇವೆರಡೂ ಕೂಡ ಸಾಧ್ಯವಿಲ್ಲ. ಸರ್ಪವು ರಜ್ಜುಜ್ಞಾನದಿಂದ ನಿವರ್ತ್ಯವಾಗುತ್ತದೆ. ರಜ್ಜುಜ್ಞಾನ ಬಂದ ಕೂಡಲೇ ಸರ್ಪವೇ ಇರುವುದಿಲ್ಲ. ಹಾಗಾದರೆ ರಜ್ಜುಜ್ಞಾನದಿಂದ ನಿವರ್ತ್ಯವಾಗಿರುವ ಸರ್ಪದ ಸ್ವರೂಪ ರಜ್ಜುವಿನ ಸ್ವರೂಪವೆಂದು ಹೇಳಲು ಸಾಧ್ಯವೇ ಇಲ್ಲ. ರಜ್ಜುವಿನ ಧರ್ಮ ಸರ್ಪವಾಗಿದೆ ಎಂದೂ ಕೂಡ ಹೇಳಲು ಸುತರಾಂ ಸಾಧ್ಯವಾಗುವುದಿಲ್ಲ. ಏಕೆಂದರೆ ಸರ್ಪವು ಧರ್ಮಿಯಾಗಿದೆ. ರಜ್ಜುವೂ ಕೂಡ ಧರ್ಮಿಯಾಗಿದೆ. ಹೀಗಿರುವಾಗ ಸರ್ಪದ ಸ್ವರೂಪವಾಗಲೀ, ಸರ್ಪದ ಧರ್ಮವಾಗಲೀ, ರಜ್ಜುವೆಂದು ಹೇಳಲು ಸಾಧ್ಯವಾಗುವುದಿಲ್ಲ.

**नच परस्परभिन्नानेकारोप्यानुगतमधिष्ठानमेकैकस्यारोपितस्यासाधारणम् ।**

ಆದ್ದರಿಂದ ಸರ್ಪಕ್ಕೆ ರಜ್ಜುವು ಸ್ವರೂಪವೂ ಆಗುವುದಿಲ್ಲ. ಧರ್ಮವೂ ಆಗುವುದಿಲ್ಲವೆಂದು ಹೇಳಿದಂತಾಯಿತು. ಇದರಂತೆ ಅಸಾಧಾರಣವೆಂದೂ ಕೂಡ ಹೇಳಲು ಸಾಧ್ಯವಿಲ್ಲ. ಅಸಾಧಾರಣ ಸ್ವರೂಪವನ್ನೇ ಧರ್ಮವೆಂದು ಎಲ್ಲರೂ ಕರೆಯುತ್ತಾರೆ. ರಜ್ಜುವು ಸರ್ಪಕ್ಕೆ ಅಸಾಧಾರಣ ಧರ್ಮವೂ ಅಲ್ಲ. ಅಸಾಧಾರಣಸ್ವರೂಪವೂ ಆಗಿರುವುದಿಲ್ಲ. ಏಕೆಂದರೆ ಒಂದೇ ರಜ್ಜುವಿನಲ್ಲಿ ಎಷ್ಟು

ಪದಾರ್ಥಗಳನ್ನು ಬೇಕಾದರೂ ಆರೋಪ ಮಾಡಬಹುದು. ರಜ್ಜುವನ್ನು ನೋಡಿ, ಇದು ಚಿತ್ರ ಎಂಬ ಭ್ರಮೆ ಬರಬಹುದು. ಅಥವಾ ಹೂವಿನ ಮಾಲೆ ಎಂದು ಭ್ರಮೆ ಬರಬಹುದು. ಅಥವಾ ಗೋಮೂತ್ರ ಎಂಬ ಭ್ರಮೆ ಬರಬಹುದು. ಹೀಗೆ ಒಂದೇ ರಜ್ಜುವಿನಲ್ಲಿ ಅನೇಕ ಪದಾರ್ಥಗಳು ಆರೋಪಿತವಾಗಿವೆ. ಅನೇಕ ಆರೋಪ್ಯದಲ್ಲಿ ಅನುಗತವಾದ ಅಧಿಷ್ಠಾನ ಮಾತ್ರ ಒಂದೇ ಆಗಿದೆ. ಭಿನ್ನಭಿನ್ನವಾದ ಅನೇಕ ಆರೋಪಗಳಲ್ಲಿ ಅನುಗತವಾಗಿ ಇರುವ ಅಧಿಷ್ಠಾನ ಪ್ರತಿಯೊಂದು ಆರೋಪ್ಯಕ್ಕೂ ಅಸಾಧಾರಣವೆಂದು ಹೇಳಲು ಹೇಗೆ ಸಾಧ್ಯವಾಗುತ್ತದೆ ?

**न चानारोपितमित्येतावता ततोऽन्यत्तस्य तत्त्वं भवति ।**

'ಅನಾರೋಪಿತಮ್ ತತ್ವಮ್' ಎಂಬುದಾಗಿ ತತ್ವವಾದಿಗಳಾದ ನಾವು ತತ್ವದ ಲಕ್ಷಣವನ್ನು ಹೇಳುತ್ತೇವೆ. ಈ ಲಕ್ಷಣಗಳನ್ನು ಅದ್ವೈತಿಗಳಾದ ನೀವು ವಿವಕ್ಷಿಸಿದ ಮಾತ್ರಕ್ಕೆ ಇನ್ನೊಂದಕ್ಕೆ ಇದು ತತ್ವ ಎಂದು ಹೇಳಲು ಬರುವುದಿಲ್ಲ. 'ಸರ್ಪಸ್ಯ ತತ್ವಂ ರುಜ್ಜುಃ' ಎಂದು ಹೇಳಲು ಬರುವುದಿಲ್ಲ ಎಂದರ್ಥ. ('ದೇವದತ್ತಸ್ಯ ಪಿತಾ, ಯಜ್ಞದತ್ತಸ್ಯ ಭ್ರಾತಾ' ಇವೆಲ್ಲವೂ ಸಂಬಂಧಿಶಬ್ದಗಳು ತತ್ವವೆಂಬುದು ನಮ್ಮ ಸಿದ್ಧಾಂತದಲ್ಲಿ ಸಂಬಂಧಿಯಾದ ಶಬ್ದವಲ್ಲ. ಅಸಾಧಾರಣಧರ್ಮವನ್ನು, ಮತ್ತು ಅಸಾಧಾರಣ-ಸ್ವರೂಪವನ್ನು ತತ್ವವೆಂದು ಇಟ್ಟುಕೊಂಡರೆ 'ಕಸ್ಯ ತತ್ವಂ' ಎಂಬ ಆಕಾಂಕ್ಷೆಯು ಬರುತ್ತದೆ. ಆದರೆ 'ಅನಾರೋಪಿತಂ ತತ್ವಂ' ಎಂಬರ್ಥವನ್ನು ವಿವಕ್ಷಿಸಿದಾಗ, 'ಕಸ್ಯ' ಎಂಬ ಆಂಕಾಕ್ಷೆಯೇ ಬರುವುದಿಲ್ಲ. ಹೀಗಿರುವಾಗ ಇದು ಅದಕ್ಕಿಂತ ಭಿನ್ನವಾಗಿರುವ ಪದಾರ್ಥಕ್ಕೆ 'ತತ್ವ' ಎಂದು ಹೇಳಲು ಸುತರಾಂ ಸಾಧ್ಯವಿಲ್ಲ.)

**स्वीकृतं च त्वयापि सर्पस्य रज्जुव्यतिरेकेणासत्त्वेन ततोऽन्यत्वाभावेपि रज्जोः सर्पव्यतिरेकेण सत्त्वेन ततोन्यत्वम् ।**

ನೀವೂ ಕೂಡ ಸರ್ಪವು ರಜ್ಜುವಿಗಿಂತ ಭಿನ್ನವಾಗಿ ಇರುತ್ತದೆಂದು ಒಪ್ಪಿರುವುದಿಲ್ಲ. ಏಕೆಂದರೆ ಎಲ್ಲೆಲ್ಲಿ ಅಧಿಷ್ಠಾನ ಅಧ್ಯಸ್ತಭಾವವಿದೆಯೋ, ಎಲ್ಲೆಡೆಯೂ ಅನನ್ಯತ್ವವು ಇರುತ್ತದೆ. ಅನನ್ಯತ್ವವೆಂದರೆ ಹಿಂದೆ ಹೇಳಿದಂತೆ 'ತದ್‌ವ್ಯತಿರೇಕೇಣ ಅಸತ್ವ' ಎಂದರ್ಥ. ಆವಾಗ ಸರ್ಪವೂ ಕೂಡ ರಜ್ಜುವಿಗಿಂತ ಭಿನ್ನವಾಗಿ ಇರುತ್ತದೆಂದು ಹೇಳಿದಂತಾಗುವುದಿಲ್ಲ. ಆದ್ದರಿಂದ ರಜ್ಜುವಿನ ಸ್ವರೂಪವೆಂದೋ, ಸರ್ಪದ ತತ್ವವೇ ರಜ್ಜುವಾಗಿದೆ ಎಂದೋ ಹೇಳಬೇಕು. ಹೀಗೆ ಹೇಳಿದರೆ ಈಗಾಗಲೇ ದೋಷವನ್ನು ನಾವು ಹೇಳಿದ್ದೇವೆ. ರಜ್ಜುಜ್ಞಾನದಿಂದ ಸರ್ಪಜ್ಞಾನವು ನಿವೃತ್ತಿಯಾಗುತ್ತದೆ. ಆದ್ದರಿಂದ ಸರ್ಪದ ಸ್ವರೂಪವನ್ನೇ ರಜ್ಜುವೆಂದು ಹೇಳಲು ಸಾಧ್ಯವಿಲ್ಲ. ಸರ್ಪವು ರಜ್ಜುವಿನ ಸ್ವರೂಪವೆಂದು ಹೇಳಿ, ಅಥವಾ ಸರ್ಪದ ಸ್ವರೂಪವೇ ರಜ್ಜುವೆಂದು ಹೇಳಲು ನಿನ್ನ ಪ್ರಕಾರ ಬರುವುದಿಲ್ಲ. ರಜ್ಜುವಿಗೂ ಸರ್ಪಕ್ಕೂ ಭೇದವನ್ನು ಅದ್ವೈತಿಗಳೇ ಒಪ್ಪಿರುತ್ತಾರೆ. ಹೇಗೆಂದರೆ ಸರ್ಪಕ್ಕೆ ರಜ್ಜುವಿನ ಕಡೆಯಿಂದ ಭೇದವಿರುವುದಿಲ್ಲ. ಆದರೆ ರಜ್ಜುವಿಗೆ ಸರ್ಪದ ದೆಸೆಯಿಂದ ಭೇದವಿರುತ್ತದೆ ಎಂಬುದು ಅವರ ಸಿದ್ಧಾಂತ.

**(किञ्च यदि रज्जुः सर्पस्य तत्वं तर्हि रज्जुज्ञः सर्पतत्वज्ञ इत्युच्येत) किञ्चैवं रज्वामयं सर्प इति धीरानंदे ब्रह्मधीरिव च प्रमा स्यात् । तत्त्वत्वे तद्धीत्वात् । रज्जुज्ञानेन सर्पभ्रमनिवृत्तिस्त्वधिष्ठानतत्वज्ञानस्य तदज्ञाननिमित्तकभ्रमविरोधित्वात् ।**

ರಜ್ಜುವು ಸರ್ಪಕ್ಕಿಂತ ಅತಿರಿಕ್ತವಾಗಿ ಇರುತ್ತದೆಂದು ಹೇಳುತ್ತೀರಿ. ಹೀಗಿರುವಾಗ ಸ್ಪಷ್ಟವಾಗಿ ರಜ್ಜುವಿಗಿಂತ ಅನ್ಯತ್ವವು ಸರ್ಪದಲ್ಲಿ ಇರುವುದರಿಂದ ಅಸಾಧಾರಣಸ್ವರೂಪವೇ ತತ್ವವಾಗುತ್ತದೆಂದು ಹೇಳಲು ಹೇಗೆ ಸಾಧ್ಯ ? ರಜ್ಜುವು ಸರ್ಪದ ತತ್ವವೆಂದು ಹೇಳಿದರೆ, ಆವಾಗ ರಜ್ಜುವನ್ನು ನೋಡಿ, ನೀವು 'ಅಯಂ ಸರ್ಪಃ' ಎಂದು ತಿಳಿದುಕೊಂಡರೆ ಅದು ಭ್ರಮೆ ಏಕಾಗಬೇಕು ? ಉದಾಹರಣೆ-ಬ್ರಹ್ಮನ ತತ್ವ ಆನಂದವೆಂದು ಹೇಳುತ್ತೀರಿ. 'ಇದಂ ಬ್ರಹ್ಮ' ಎಂಬ ಜ್ಞಾನವು ಬಂದರೆ, ಇದು ಭ್ರಮೆ ಆಗಿರುವುದಿಲ್ಲ. ಆನಂದವನ್ನು ನೋಡಿ ತಿಳಿದುಕೊಂಡರೂ ಕೂಡ ಇದು ಭ್ರಮೆಯಾಗುವುದಿಲ್ಲ. ಬ್ರಹ್ಮನನ್ನು ನೋಡಿ ಆನಂದವನ್ನು ತಿಳಿದುಕೊಂಡರೂ ಕೂಡ ಇದು ಭ್ರಮೆಯಾಗುವುದಿಲ್ಲ. ಏಕೆಂದರೆ ಬ್ರಹ್ಮನ ತತ್ವದಲ್ಲಿಯೇ ಜ್ಞಾನ ಬರುತ್ತಿದೆ. ಬ್ರಹ್ಮನ ತತ್ವವೆನಿಸಿದ ಆನಂದದಲ್ಲಿ ಬ್ರಹ್ಮಜ್ಞಾನ ಬಂದರೆ ಅದು ಪ್ರಮಾವೇ ಆಗುತ್ತದೆ ಹೊರತು, ಭ್ರಮೆಯಾಗುವುದಿಲ್ಲ. ಅದರಂತೆ ಸರ್ಪದ ತತ್ವವೆನಿಸಿದ ರಜ್ಜುವನ್ನು ನೋಡಿ, ಸರ್ಪವೆಂದು ತಿಳಿದುಕೊಂಡರೂ ಕೂಡ ಇದು ಭ್ರಮೆ ಆಗುವುದಿಲ್ಲ. ಪ್ರಮಾವೇ ಆಗುತ್ತದೆ. ('ತತ್ತ್ವತ್ವೇ' ಎಂದರೆ ವಿಷಯದಲ್ಲಿ ಎಂದರ್ಥ. 'ತತ್ತ್ವತ್ವೇ' ಎಂಬ ಶಬ್ದಕ್ಕೆ ವಿಷಯ ಎಂಬರ್ಥವನ್ನು ತಿಳಿಯಬೇಕು. ಈ ಪದಾರ್ಥಕ್ಕೆ ಯಾವುದು ತತ್ವವೋ, ಅದರ ವಿಷಯದಲ್ಲೇ ಪದಾರ್ಥ ಎಂಬ ಜ್ಞಾನವು ಬಂದಾಗ ಭ್ರಮೆ ಏಕಾಗಬೇಕು? ಎಂದಭಿಪ್ರಾಯ.)

ಆಕ್ಷೇಪ - ರಜ್ಜುವು ಸರ್ಪದ ತತ್ವವಲ್ಲವೆಂದು ತತ್ವವಾದಿಗಳಾದ ನೀವು ಖಂಡನೆ ಮಾಡುತ್ತಿದ್ದೀರಿ. ಹಾಗಾದರೆ ರಜ್ಜುಜ್ಞಾನದಿಂದ ಸರ್ಪದ ಜ್ಞಾನವು ನಿವೃತ್ತಿ ಏಕಾಗಬೇಕು ? ತತ್ವವಾದರೆ ಮಾತ್ರ ನಿವೃತ್ತಿಯನ್ನು ಹೇಳಬಹುದು. ಆದರೆ ಸರ್ಪದ ತತ್ವ ರಜ್ಜುವಲ್ಲವೆಂದು ನೀವು ಸಮರ್ಥನೆ ಮಾಡುತ್ತಿರುವಾಗ ರಜ್ಜುಜ್ಞಾನದಿಂದ ತತ್ವಭ್ರಮನಿವೃತ್ತಿಯು ಹೇಗೆ ಯುಕ್ತವಾಗುತ್ತದೆ ?

ಸಮಾಧಾನ - ಅಧಿಷ್ಠಾನತತ್ವಜ್ಞಾನದಿಂದ ಅಧಿಷ್ಠಾನದ ಅಯಥಾರ್ಥಜ್ಞಾನವು ನಿವೃತ್ತಿಯಾಗುತ್ತದೆಂದು ನಾವು ಒಪ್ಪಿದ್ದೇವೆ. ಏಕೆಂದರೆ ಭ್ರಮೆ ಬರಲು ಅಜ್ಞಾನವೇ ನಿಮಿತ್ತವಾಗಿರುತ್ತದೆ. ಅಜ್ಞಾನವು ನಿವೃತ್ತಿಯಾದರೆ, ಅಜ್ಞಾನನಿಮಿತ್ತಕವಾದ ಭ್ರಮೆಯೂ ಕೂಡ ನಿವೃತ್ತವಾಗುತ್ತದೆ. ಆದ್ದರಿಂದ ದೋಷವಿಲ್ಲ.

**नच घटादेर्मृदादावारोपितत्वात्तदृष्टान्तो युक्त इति वाच्यम् । मृत्तत्वज्ञानेपि घटाद्यनिवृत्तेः ।**

ಆಕ್ಷೇಪ - ಜಗತ್ತು ಬ್ರಹ್ಮನಲ್ಲಿ ಆರೋಪಿತವಾಗಿರುವುದರಿಂದ ಬ್ರಹ್ಮನ ಜ್ಞಾನದಿಂದ ಜಗತ್ತಿನ ಜ್ಞಾನವಾಗುತ್ತದೆಂದು ಹೇಳುವುದು ಯುಕ್ತವಾಗುವುದಿಲ್ಲ ಎಂಬುದನ್ನು ದೃಷ್ಟಾಂತಪುರಸ್ಸರವಾಗಿ

ಸಮರ್ಥನೆ ಮಾಡುತ್ತಿದ್ದಾರೆ. ಘಟಾದಿಗಳು ಮೃತ್ಪಿಂಡದಲ್ಲಿ ಆರೋಪಿತವಾಗಿವೆ. ಮೃತ್ಪಿಂಡದ ಜ್ಞಾನದಿಂದ ಮೃಣ್ಮಯವೆನಿಸಿದ ಘಟಾದಿಗಳ ಜ್ಞಾನವೆಲ್ಲವೂ ಬರುತ್ತದೆಂಬುದು ಲೋಕದಲ್ಲಿ ಕಂಡಿದೆಯಲ್ಲವೇ?

ಸಮಾಧಾನ - ಹೀಗೆ ಆಕ್ಷೇಪ ಮಾಡಬಾರದು. ಮೃತ್ಪಿಂಡದ ಜ್ಞಾನವು ಬಂದರೂ ಕೂಡ ಘಟಾದಿಗಳು ನಿವೃತ್ತಿಯಾಗುವುದು ಲೋಕದಲ್ಲಿ ಕಂಡಿಲ್ಲ.

**यद्यपि तार्किकमत इव मृदारब्धं द्रव्यान्तरं नास्ति । तथापि कारकव्यापारसाध्यो जलाहरणादिसमर्थो व्यावहारिको मृदादितुल्योऽवस्थाविशेषरूपो घटशब्दार्थस्त्वन्मतेप्यस्ति ।**

ವಾಸ್ತವಿಕವಾಗಿ ತಾರ್ಕಿಕ ಮತದಂತೆ ಮೃತ್ಪಿಂಡದಿಂದ ಆರಬ್ಧವಾದ ಬೇರೆ ದ್ರವ್ಯವೇ ಇರುವುದಿಲ್ಲ. ಆದರೂ ಕೂಡ ಕಾರಕವ್ಯಾಪಾರಸಾಧ್ಯವಾದ ಜಲಾಹರಣಾದಿ ಕ್ರಿಯೆಯಲ್ಲಿ ಸಮರ್ಥವಾದ ವ್ಯಾವಹಾರಿಕವಾದ ಮೃತ್ಪಿಂಡಾದಿಗಳಿಗೆ ಸಮಾನವಾದ ಅವಸ್ಥಾವಿಶೇಷವೇ ಘಟಶಬ್ದದ ಅರ್ಥವಾಗಿದೆ ಎಂದು ನೀವೂ ಕೂಡ ಒಪ್ಪಿರುತ್ತೀರಿ. (ಮೃತ್ಪಿಂಡದ ಅವಸ್ಥಾವಿಶೇಷವೇ ಘಟಶಬ್ದದಿಂದ ಪ್ರತಿಪಾದ್ಯವೆಂದು ನಾವೂ ಒಪ್ಪಿದ್ದೇವೆ. ನೀವೂ ಕೂಡ ಒಪ್ಪಿರುತ್ತೀರಿ. ಕೇವಲ ಮಣ್ಣು, ಜಲಾಹರಣಕ್ಕೆ ಸಮರ್ಥವಾಗುವುದಿಲ್ಲ. ಮೃತ್ತನ್ನೇ ಘಟವೆಂದು ಹೇಳಿದರೆ ಕಾರಕವ್ಯಾಪಾರದಿಂದ ಏನನ್ನೂ ಸಾಧಿಸಲಾಗದು. ಕುಲಾಲ, ದಂಡ, ಚಕ್ರ ಮೊದಲಾದ ಕಾರಕವ್ಯಾಪಾರಗಳಿಂದ ಏನು ಮಾಡಿದಂತಾಗುತ್ತದೆ ? ಮೃತ್ಪಿಂಡವನ್ನೇ ಘಟವೆಂದು ಹೇಳಿದರೆ ಮೃತ್ಪಿಂಡವು ಮೊದಲೇ ಇರುವುದರಿಂದ ಕಾರಕವ್ಯಾಪಾರಗಳು ವ್ಯರ್ಥವಾಗುತ್ತವೆ. ಆದ್ದರಿಂದ ಕಾರಕವ್ಯಾಪಾರದಿಂದ ಸಾಧ್ಯವಾದದ್ದು, ಜಲಾಹರಣಾದಿಕ್ರಿಯೆಗಳು. ಮತ್ತು ಮೃದಾದ್ಯವಸ್ಥಾವಿಶೇಷ, ಇದನ್ನೇ ಘಟಶಬ್ದಾರ್ಥವೆಂದು ಕರೆಯಬೇಕು.

**प्रकाशः –**

**अश्रुतादिपदेति** ।। द्वयोरप्येकमेव तत्वं चेच्छतस्यैव श्रुतत्वं प्राप्तमिति भावः। असाधारणं सर्वतो व्यावृत्तम् । किमतो यद्येवमित्यत आह – **नचेति** ।।

ಗ್ರಂಥದಲ್ಲಿ 'ಅಶ್ರುತಾದಿಪದ ಅಯೋಗಾತ್' ಎಂದು ಹೇಳಿದ್ದಾರೆ. ಒಂದುವೇಳೆ ಅಧಿಷ್ಠಾನ ಮತ್ತು ಅಧ್ಯಸ್ತಗಳೆರಡು ಒಂದೇ ತತ್ವವೆಂದು ಪರಿಗಣಿಸಿ, ಬ್ರಹ್ಮ ಹಾಗೂ ಜಗತ್ತನ್ನು ಒಂದೇ ಎಂದು ಹೇಳುವುದಾದರೆ, ಶ್ರುತವಾದದ್ದೇ ಪುನಃ ಶ್ರುತವಾದಂತಾಗುತ್ತದೆ ಎಂದು ಅಭಿಪ್ರಾಯ. 'ಅಸಾಧಾರಣಂ' ಎಂಬ ಪದಕ್ಕೆ

'ಎಲ್ಲದರಿಂದ ವಿಭಿನ್ನವಾದ' ಎಂದರ್ಥ. ಅಸಾಧಾರಣವನ್ನೇ ತತ್ವವೆಂದು ಹೇಳಿದ್ದರಿಂದ ಏನು ಹೇಳಿದಂತಾಯಿತು ? ಎಂಬ ಪ್ರಶ್ನೆಗೆ 'ನಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**नन्वनारोपितं तत्वमधिष्ठानं चानारोपितमिति तत्वं स्यादित्यत आह – न चानारोपितमिति ।। ततः आरोपिततादित्यर्थः ।**

ಅನಾರೋಪಿತವಾದದ್ದೇ ತತ್ವ ಎನಿಸುತ್ತದೆ. ಅಧಿಷ್ಠಾನವು ಅನಾರೋಪಿತವಾದ್ದರಿಂದ ತತ್ವವೆನ್ನಬಹುದಲ್ಲವೇ? ಈ ಪ್ರಶ್ನೆಗೆ 'ನಚಾನಾರೋಪಿತಮ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ತತಃ' ಎಂಬ ಪದಕ್ಕೆ ಆರೋಪಿತವಾದದ್ದರ ದೆಸೆಯಿಂದ ಎಂದರ್ಥ.

**ननु यद्यधिष्ठानमध्यस्तस्य तत्वं न स्यात्तर्हि तज्ज्ञानात्तद्भ्रमनिवृत्तिर्न स्यात् । तद्भ्रमस्य तत्तत्वज्ञान निवर्त्यत्वादित्यत आह – रज्जुज्ञानेनेति ।।**

ಒಂದು ವೇಳೆ ಅಧಿಷ್ಠಾನವು ಅಧ್ಯಸ್ತದ ತತ್ವ ಆಗದೇ ಇದ್ದರೆ ಆಗ ಅಧಿಷ್ಠಾನದ ಭ್ರಮೆಯ ನಿವೃತ್ತಿಯು ಆಗದೇ ಇರಬೇಕಾದೀತು. ಆದರೆ ಅಧಿಷ್ಠಾನದ ಭ್ರಮೆಯು ಅಧಿಷ್ಠಾನದ ತತ್ವಜ್ಞಾನದಿಂದ ನಿವೃತ್ತವಾಗುವುದು ಕಂಡಿದೆ. ಈ ಪ್ರಶ್ನೆಗೆ 'ರಜ್ಜುಜ್ಞಾನೇನ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**एकज्ञानेन सर्वज्ञानायोगमुपपाद्य मृत्पिण्डादीत्युक्तमुपपादयति ।। न च घटादेरिति ।। तत्वतोऽवस्थाविशेषो नास्तीत्यत आह – तत्वत इति ।। तथाच तद्दृष्टान्तोऽयुक्त इति भावः ।**

ಏಕಜ್ಞಾನದಿಂದ ಸಕಲಜ್ಞಾನವು ಅಯುಕ್ತವಾಗುತ್ತದೆ ಎಂಬುದನ್ನು ಉಪಪಾದನೆ ಮಾಡಿ, ಮೃತ್ಪಿಂಡದ ಬಗ್ಗೆ ಹೇಳಿದ್ದನ್ನು ಉಪಪಾದನೆ ಮಾಡಲು 'ನ ಚ ಘಟಾದೇಃ' ಎಂಬ ವಾಕ್ಯವು ಹೊರಟಿದೆ. ತಾತ್ವಿಕವಾದ ಅವಸ್ಥಾವಿಶೇಷವು ಇಲ್ಲವೆಂಬ ಪ್ರಶ್ನೆಗೆ 'ತತ್ವತ' ಎಂದು ಉತ್ತರಿಸಿದ್ದಾರೆ. ಆದ್ದರಿಂದ ರಜ್ಜು ದೃಷ್ಟಾಂತವು ಅಯುಕ್ತವಾಗಿದೆ ಎಂದು ತಿಳಿಯಬೇಕು.

## 'ಆರಂಭಣಶಬ್ದಾದಿಭ್ಯಃ' ಎಂಬ ಸೂತ್ರಭಾಗದ ವ್ಯಾಖ್ಯಾನ

### तात्पर्यचन्द्रिका

**किञ्च –**

**यदि मृन्मात्रविज्ञानाद्विज्ञातं स्याद्घटादिकम् ।**
**मृत्त्वं निश्चित्य न पुनः संशयीत घटादिके ।।१।।**

ಮತ್ತು

ಯದಿ ಮೃನ್ಮಾತ್ರವಿಜ್ಞಾನಾತ್ ವಿಜ್ಞಾತಂ ಸ್ಯಾದ್-ಘಟಾದಿಕಮ್ ।
ಮೃತ್ತ್ವಂ ನಿಶ್ಚಿತ್ಯ ನ ಪುನಃ ಸಂಶಯೀತ ಘಟಾದೀಕೇ ॥

ಕೇವಲ ಮಣ್ಣನ್ನು ತಿಳಿಯುವುದರಿಂದ ಮಣ್ಣಿನ ವಿಕಾರವೆನಿಸಿದ ಘಟಾದಿಗಳನ್ನು ತಿಳಿದಂತಾಗುತ್ತದೆ ಎಂದು ಹೇಳುವುದಾದರೆ, ಮೃತ್ತ್ವದ ಬಗ್ಗೆ ನಿಶ್ಚಯವನ್ನು ಹೊಂದಿದವನು ಘಟಾದಿಗಳ ವಿಷಯದಲ್ಲಿ ಸಂಶಯವನ್ನು ಹೊಂದದೇ ಇರಬೇಕಾದೀತು.

**एतेन यदुक्तं भामत्यां मृज्ज्ञाने घटादयस्तत्वतो ज्ञाता भवन्ति । मृदेव हि घटादीनां तत्वमिति तन्निरस्तम् । मृत्तत्वज्ञानेपि तत्संस्थानविशेषत्वरूपघटत्वाज्ञानेन घटस्तत्वतो न ज्ञात इति व्यवहारात् ।**

ಹೀಗೆ ಹೇಳಿದ್ದರಿಂದ ಭಾಮತಿಯ ಅಭಿಪ್ರಾಯವನ್ನು ನಿರಾಕರಣೆ ಮಾಡಿದಂತಾಯಿತು - ಭಾಮತಿಕಾರ ಹೀಗೆ ಹೇಳುತ್ತಾನೆ - ಮಣ್ಣನ್ನು ಸರಿಯಾಗಿ ತಿಳಿಯುವುದರಿಂದ ಘಟಾದಿಗಳು ತಾತ್ವಿಕವಾಗಿ ಜ್ಞಾತವಾಗುತ್ತವೆ. ಏಕೆಂದರೆ ಘಟಾದಿಗಳ ತತ್ವವಿದ್ದರೆ ಅದು ಮಣ್ಣೇ ಆಗಿದೆ ಎಂದು.

ಇದು ತಪ್ಪು. ಮೃತ್‌ತತ್ವವನ್ನು ತಿಳಿದವನೂ ಕೂಡ ಅದರ ಸಂಸ್ಥಾನವಿಶೇಷವೆನಿಸಿದ ಘಟವನ್ನು ತಿಳಿದಿರುವುದಿಲ್ಲ. ಆದ್ದರಿಂದ ಮಣ್ಣಿನ ಜ್ಞಾನವಿದ್ದರೂ ತಾತ್ವಿಕವಾಗಿ ಘಟದ ಜ್ಞಾನವಿರುವುದಿಲ್ಲ ಎಂದೇ ವ್ಯವಹಾರವಿದೆ. ಈಗ ಮಣ್ಣನ್ನು ತಿಳಿಯುವುದರಿಂದ ಎಲ್ಲವನ್ನೂ ತಿಳಿದಂತಾಗುತ್ತದೆ ಎಂದು ಹೇಳುವುದಾದರೆ, ಘಟವನ್ನೂ ಕೂಡ ಅವನು ತಿಳಿದಂತಾಗಬೇಕಾಗುತ್ತದೆ.

**घटे शरावत्वाद्यारोपानिवृत्तेश्च । अन्यथा जातिर्व्यक्तेस्तत्वं स्यात्[1] । अत्र स्वमत एकविज्ञानेन सर्वविज्ञानमन्यत्रोक्तमनुसन्धेयम् ।**

ಮತ್ತು ಘಟದಲ್ಲಿ ಶರಾವತ್ವವನ್ನು ಮೊದಲು ಆರೋಪ ಮಾಡುತ್ತಾನೆ. ಅನಂತರ ಅದನ್ನು ನಿವೃತ್ತಿ ಮಾಡಿಕೊಳ್ಳುತ್ತಾನೆ. ಇದೂ ಕೂಡ ತಪ್ಪಾಗಬೇಕಾಗುತ್ತದೆ. ಏಕೆಂದರೆ ಅವನಿಗೆ ಯಥಾರ್ಥಜ್ಞಾನವಿರುವುದರಿಂದ ಅದನ್ನು ಶರಾವ ಎಂದು ಭ್ರಮಿಸುವ ಪ್ರಸಂಗವೇ ಇಲ್ಲ. ಒಂದು ವೇಳೆ ಎಲ್ಲ ಮೃಣ್ಮಯಗಳಲ್ಲಿ ಮೃತ್ ಎಂಬುದು ಅನುಗತವಾಗಿದೆ ಎಂದ ಮಾತ್ರಕ್ಕೆ ಅದು ಎಲ್ಲ ಮೃಣ್ಮಯಗಳ ತತ್ವ ಎನಿಸುವುದಾದರೆ, ಎಲ್ಲ ವ್ಯಕ್ತಿಗಳಲ್ಲಿ ಜಾತಿ ಅನುಗತವಾದ್ದರಿಂದ ಆ ವ್ಯಕ್ತಿಗಳ ತತ್ವವು ಜಾತಿಯೆಂದಾಗಬೇಕಾದೀತು.

---

(೧) 'ಅನ್ಯಥಾ ಜಾತಿರ್ವ್ಯಕ್ತೇಸ್ತತ್ವಂ ನ ಸ್ಯಾತ್' ಎಂಬುದು ಸತ್ಯಾನಂದತೀರ್ಥರು ಸ್ವೀಕರಿಸಿದ್ದಾರೆ. ಮತ್ತು ನಕಾರವಿಲ್ಲದ ಪಾಠವನ್ನೂ ಕೂಡ ವ್ಯಾಖ್ಯಾನ ಮಾಡಿದ್ದಾರೆ. ಆದರೆ ನ ವಿಲ್ಲದ ಪಾಠವನ್ನೇ ರಾಯರು ಸ್ವೀಕರಿಸಿದ್ದಾರೆ.

ನಮ್ಮ ಮತದ ಪ್ರಕಾರ ಏಕವಿಜ್ಞಾನೇನ ಸರ್ವವಿಜ್ಞಾನವನ್ನು ಹೇಗೆ ಉಪಪಾದನೆ ಮಾಡಬೇಕು ಎಂಬುದನ್ನು ವಿಷ್ಣುತತ್ತ್ವನಿರ್ಣಯ, ನ್ಯಾಯಾಮೃತಾದಿ ಗ್ರಂಥಗಳಲ್ಲಿ ಹೇಳಿದ್ದನ್ನು ಅನುಸಂಧಾನ ಮಾಡಿಕೊಳ್ಳಬೇಕು.

**प्रकृत्यधिकरणादृश्यत्वाधिकरणाभ्यामस्य पुनरुक्तिश्च । अद्वैतिमतेऽत्रेवोभयत्रापि ब्रह्मविवर्तताया एवोक्तत्वात् ।**

ಅದ್ವೈತಿಗಳಿಗೆ ಪ್ರಕೃತ್ಯಧಿಕರಣದಿಂದ ಹಾಗೂ ಅದೃಶ್ಯತ್ವಾಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿದೋಷವೂ ಕೂಡ ಬರುತ್ತದೆ. ಏಕೆಂದರೆ ಇಲ್ಲಿ ಬ್ರಹ್ಮನು ಆರೋಪಾಧಿಷ್ಠಾನನಾಗಿದ್ದಾನೆಂದು ಬ್ರಹ್ಮವಿವರ್ತವಾದವನ್ನು ಸಮರ್ಥಿಸಲಾಗಿದೆ. ಪುನಃ ಅಲ್ಲೂ ಅದೇ ವಿಷಯವನ್ನು ಪ್ರತಿಪಾದನೆ ಮಾಡಿದರೆ ಪುನರುಕ್ತಿ ತಪ್ಪಿದ್ದಲ್ಲ.

**किञ्च त्वन्मते पूर्वत्र भेदोक्तेरत्रत्वभेदोक्तेर्विरोधः । नच प्रमाणयोः सूत्रयोर्विरोध एकस्यानृतविषयत्वेन परिहर्तुं युक्तः ।**

ಮತ್ತು ನಿಮ್ಮ ಮತದ ಪ್ರಕಾರ ಹಿಂದಿನ ಅಧಿಕರಣದಲ್ಲಿ ಭೋಕ್ತೃವಿಗೂ, ಭೋಗ್ಯಕ್ಕೂ ಭೇದವನ್ನು ಸಮರ್ಥನೆ ಮಾಡಲಾಗಿದೆ. ಈಗ ಬ್ರಹ್ಮನಿಗೂ ಜಗತ್ತಿಗೂ ಅಭೇದವನ್ನು ಸಮರ್ಥನೆ ಮಾಡಲಾಗುತ್ತಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ವಿರೋಧವು ಬರುತ್ತದೆ. ಪ್ರಮಾಣಭೂತವಾದ ಸೂತ್ರಗಳಿಗೆ ಪರಸ್ಪರ ವಿರೋಧವು ಪ್ರಾಪ್ತವಾದಾಗ ಒಂದು ಸೂತ್ರವು ವ್ಯಾವಹಾರಿಕವಿಷಯವಾಗಿದೆ. ಮತ್ತೊಂದು ಸೂತ್ರವು ಪಾರಮಾರ್ಥಿಕವಿಷಯಕವಾಗಿದೆ ಎಂಬ ಪರಿಹಾರವನ್ನು ಹೇಳುವುದು ಅಯುಕ್ತವಾಗಿದೆ.

ವಿವರಣೆ - ಹಿಂದಿನ ಅಧಿಕರಣದಲ್ಲಿ ಭೋಕ್ತೃ ಹಾಗೂ ಭೋಗ್ಯಗಳಿಗೆ ಭೇದವು ಹೇಗೆ ಬರುತ್ತದೆ? ಎಂದು ಪ್ರಶ್ನೆ ಮಾಡಿದಾಗ, ಸಮುದ್ರಕ್ಕೂ ಫೇನ ಹಾಗೂ ತರಂಗಗಳಿಗೂ ಅಭೇದವಿದ್ದರೂ ಪರಸ್ಪರ ಫೇನ ಹಾಗೂ ತರಂಗಗಳಿಗೆ ಅಭೇದವು ಬರುವುದಿಲ್ಲ. ಭೇದವೇ ಇರುತ್ತದೆ. ಅದರಂತೆ ಭೋಕ್ತೃವಿಗೂ ಹಾಗೂ ಭೋಗ್ಯಕ್ಕೂ ಭೇದವೇ ಇರುತ್ತದೆ ಎಂದು ಅದ್ವೈತಿಗಳು ಸಮರ್ಥನೆ ಮಾಡಿರುತ್ತಾರೆ.

ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಭೇದವು ವ್ಯಾವಹಾರಿಕವಾದದ್ದು, ಈ ಸೂತ್ರದಲ್ಲಿ ಹೇಳಲ್ಪಟ್ಟ ಅಭೇದವು ಪಾರಮಾರ್ಥಿಕವಾದದ್ದು ಎಂದು ಅದ್ವೈತಿಗಳು ಉತ್ತರಿಸಿದರೆ, 'ನಚ' ಎಂಬ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

**किञ्च घटादेर्मृदनन्यत्वप्रतिपादक आरम्भणशब्दो जगतो ब्रह्मानन्यत्वरूपे त्वदीयसाध्ये न साक्षाद्धेतुः । मम तु साक्षात् । किञ्चात्र मम ''सत्त्वाच्चावरस्य'' इत्युत्तरसूत्रानुसारी स्वतन्त्रसाधनस्येत्यध्याहारः । तव तु तदननुसारीजगत इत्यध्याहारः ।**

ಮತ್ತು ಘಟಾದಿಗಳಿಗೆ ಮೃದನನ್ಯತ್ವವನ್ನು ಪ್ರತಿಪಾದನೆ ಮಾಡುವ ಆರಂಭಣ ಶಬ್ದವು ಜಗತ್ತು ಬ್ರಹ್ಮನಿಂದ ಅಭಿನ್ನವಾಗಿದೆ ಎಂದು ಸಾಧಿಸುವ ನಿನ್ನ ಸಾಧ್ಯಕ್ಕೆ ಸಾಕ್ಷಾತ್ತಾಗಿ ಹೇತುವಾಗಲು ಸಾಧ್ಯವೇ ಇಲ್ಲ. ಆದರೆ ನಮ್ಮ ಪ್ರಕಾರ ಇದು ಸಾಕ್ಷಾತ್ತಾಗಿ ಸಾಧಕವಾಗಿದೆ. ಮತ್ತು ನಮ್ಮ ಪ್ರಕಾರ ಮಾಡುವ ವ್ಯಾಖ್ಯಾನವು 'ಸತ್ತ್ವಾಚ್ಚಾವರಸ್ಯ' ಎಂಬ ಮುಂದಿನ ಸೂತ್ರಕ್ಕೆ ಅನುಸಾರಿಯಾಗಿದೆ. ಆದ್ದರಿಂದ ಸ್ವತಂತ್ರಸಾಧನಸ್ಯ ಎಂದು ಅಧ್ಯಾಹಾರ ಮಾಡುವುದು ತಪ್ಪಲ್ಲ. ನಿಮ್ಮ ಪ್ರಕಾರ ಜಗತಃ ಎಂದು ಅಧ್ಯಾಹಾರ ಮಾಡುವುದು ಮುಂದಿನ ಸೂತ್ರಕ್ಕೆ ಅನುಸುರಿಯಾಗಿರುವುದಿಲ್ಲ.

ವಿವರಣೆ - ಇಲ್ಲಿಯ ತನ 'ತದನನ್ಯತ್ವಂ' ಎಂಬ ಪ್ರತಿಜ್ಞಾಭಾಗವನ್ನು ವ್ಯಾಖ್ಯಾನ ಮಾಡಿ, ಈಗ ಆರಂಭಣಶಬ್ದಾದಿಭ್ಯಃ ಎಂಬ ಹೇತುಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಎಂಬ ವಾಕ್ಯವು ಸಂಸ್ಕೃತ ಭಾಷೆಯು ಮಾತ್ರ ನಿತ್ಯವಾಗಿದೆಯೆಂದು ಹೇಳಲು ಹೊರಟಿದೆ. ಈ ಸಂದರ್ಭದಲ್ಲಿ ಘಟವು ಮೃತ್ತಿಗಿಂತ ಭಿನ್ನವಲ್ಲ ಎಂಬುದನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಆರಂಭಣಶಬ್ದವು ಪ್ರಯುಕ್ತವಾಗಿದೆ. ಆದ್ದರಿಂದ ಈ ಆರಂಭಣಶಬ್ದವು ಬ್ರಹ್ಮಾಭೇದಕ್ಕೆ ಸಾಧಕವಾಗುವುದಿಲ್ಲ.

ಯಾವುದು ಸ್ವತಂತ್ರಸಾಧನವೋ, ಅದು ಬ್ರಹ್ಮನಿಗಿಂತ ಅತಿರಿಕ್ತವಲ್ಲ ಎನ್ನುವುದಕ್ಕಾಗಿ ಆರಂಭಣ ಶಬ್ದವು ಸಾಕ್ಷಾತ್ ಹೇತುವಾಗುತ್ತದೆ. ಮತ್ತು 'ನಾವು ಸ್ವತಂತ್ರಸಾಧನಸ್ಯ ಬ್ರಹ್ಮಾನನ್ಯತ್ವಂ' ಎಂಬುದಾಗಿ ಅಧ್ಯಾಹಾರವನ್ನು ಮಾಡುತ್ತೇವೆ. ಆದರೆ ನೀನು 'ಜಗತಃ ಬ್ರಹ್ಮಾನನ್ಯತ್ವಂ' ಎಂದು ಅಧ್ಯಾಹಾರ ಮಾಡುತ್ತಿರುವಿ. ಸತ್ ಎಂಬ ಶಬ್ದಕ್ಕೆ ಬ್ರಹ್ಮ ಎಂಬರ್ಥವನ್ನು ಇಬ್ಬರೂ ಅಂಗೀಕರಿಸಿದ್ದೇವೆ. ಧರ್ಮಿವಾಚಕಪದವನ್ನೂ ಕೂಡ ಇಬ್ಬರೂ ಅಧ್ಯಹಾರ ಮಾಡಿದ್ದೇವೆ. ಆದರೆ ನಾವು ಮಾಡುವ ಅಧ್ಯಾಹಾರವು ಮುಂದಿನ ಸೂತ್ರಕ್ಕೆ ಅನುಗುಣವಾಗಿದೆ. ಮುಂದಿನ ಸೂತ್ರದಲ್ಲಿ ಸ್ವತಂತ್ರವಾದ ಸಾಧನವು ಇರುವುದಿಲ್ಲ ಎಂದು ಹೇಳಲಾಗಿದೆ. ಮುಂದಿನ ಸೂತ್ರದಲ್ಲಿ ತದಧೀನವಾದ ಸಾಧನೆಯಿದೆ ಎಂದು ಹೇಳಬೇಕೆಂದರೆ ಪೂರ್ವಸೂತ್ರದಲ್ಲಿ ಸ್ವತಂತ್ರವಾದ ಸಾಧನೆಯ ಬಗ್ಗೆ ಪ್ರಸ್ತಾಪ ಮಾಡಿರಬೇಕು. ಆದ್ದರಿಂದ ನಮ್ಮ ಅರ್ಥವು ಮುಂದಿನ ಸೂತ್ರಕ್ಕೆ ಅನುಗುಣವಾಗಿದೆ.

**किञ्च वाचारम्भणशब्दस्य समस्तपदत्वात्तदीयसूत्रादिशब्दार्थस्य ''इदं सर्वं यदयमात्मा'' इत्यादेरपि शब्दत्वाच्च सूत्रे वाचारम्भणादिशब्देभ्य इति स्यात् ।**

ಮತ್ತು ವಾಚಾರಂಭಣ ಶಬ್ದವು ಸಮಸ್ತ ಪದವಾಗಿದೆ. ಹೀಗಿರುವಾಗ ಆರಂಭಣಶಬ್ದವನ್ನಷ್ಟೇ ಸೂತ್ರಕಾರರು ಸ್ವೀಕರಿಸುವುದು ಸಮಂಜಸವಾಗುವುದಿಲ್ಲ. ಮತ್ತು ಸೂತ್ರದಲ್ಲಿ ಆದಿಶಬ್ದದಿಂದ 'ಇದಂ ಸರ್ವಂ ಯದಯಮಾತ್ಮಾ' ಎಂಬ ಶ್ರುತಿಯನ್ನು ಪರರು ಸ್ವೀಕರಿಸುತ್ತಾರೆ. ಹೀಗೆ ವಾಚಾರಂಭಣಶಬ್ದವು ಸಮಸ್ತಪದವಾಗುವುದಾದರೆ, ಮತ್ತು ಸೂತ್ರದಲ್ಲಿರುವ ಆದಿಶಬ್ದವು 'ಇದಂ ಸರ್ವಂ ಯದಯಮಾತ್ಮಾ' ಎಂಬುದನ್ನು ಹೇಳುವುದಾದರೆ 'ವಾಚಾರಂಭಣಶಬ್ದೇಭ್ಯಃ' ಎಂದೇ ಸೂತ್ರವು ಇರಬೇಕಿತ್ತು. 'ಆರಂಭಣಶಬ್ದಾದಿಭ್ಯಃ' ಎಂಬ ಸೂತ್ರದ ಉಲ್ಲೇಖವು ತಪ್ಪಾಗುತ್ತದೆ.

ವಿವರಣೆ - ಅದ್ವೈತಿಗಳು 'ಆರಂಭಣಶಬ್ದಾದಿಭ್ಯಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಆರಂಭಣಶಬ್ದದಿಂದ 'ವಾಚಾರಂಭಣಮ್ ವಿಕಾರೋ ನಾಮಧೇಯಮ್' ಎಂಬ ಶ್ರುತಿಯನ್ನು ವಿವಕ್ಷಿಸುತ್ತಾರೆ. ವಾಚಾರಂಭಣಮ್ ಎಂಬ ಶ್ರುತಿಯು ಸಮಸ್ತ ಪದವಾಗಿರುವಾಗ ಇದರಲ್ಲಿರುವ 'ವಾಚಾ' ಎಂಬ ಪದವನ್ನು ಬಿಟ್ಟು, ಅನಂತರವಿರುವ ಆರಂಭಣಶಬ್ದವನ್ನು ಸ್ವೀಕರಿಸುವುದು ಸಮಂಜಸವಾಗುವುದಿಲ್ಲ.

ಮತ್ತು ಆದಿಪದದಿಂದ ಮತ್ತೊಂದು ಶ್ರುತಿಯನ್ನೇ ಉಲ್ಲೇಖ ಮಾಡುವ ಉದ್ದೇಶ ಸೂತ್ರಕಾರರಿಗೆ ಇರುವುದಾಗಿದ್ದಲ್ಲಿ 'ಆರಂಭಣಾದಿಶಬ್ದೇಭ್ಯಃ' ಎಂದು ಹೇಳಬೇಕಿತ್ತು. 'ಶಬ್ದಾದಿಭ್ಯಃ' ಎಂದು ಹೇಳಬಾರದು. ನಾವು ಯುಕ್ತಿಯನ್ನು ಆದಿಪದದಿಂದ ಸ್ವೀಕರಿಸುವುದರಿಂದ ನಮ್ಮ ಪ್ರಕಾರ ಸೂತ್ರವು ಸಾಧುವಾಗುತ್ತದೆ.

**प्रकाशः –**

प्रकारान्तरेण दृष्टान्तानुपपत्तिमाह – **किञ्चेति** ।। **अन्यथेति** ।। अनुगतत्वमात्रेण तत्तत्वरूपत्व इत्यर्थः । कथं तर्ह्येकविज्ञानेन सर्वज्ञानमित्यत आह – **अत्र स्वमत इति** ।। तत्त्वनिर्णयादौ न्यायामृते चोक्तमित्यर्थः ।। **पूर्वत्रेति** ।। ''स्याल्लोकवत्'' इत्यत्रेत्यर्थः ।

ಮತ್ತೊಂದು ಕ್ರಮದಲ್ಲಿ ದೃಷ್ಟಾಂತವು ಅನುಪಪನ್ನವಾಗಿದೆ ಎಂಬುದನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ. 'ಅನ್ಯಥಾ' ಎಂಬ ಪದಕ್ಕೆ ಅನುಗತವಾಗಿದೆ ಎಂಬ ಮಾತ್ರದಿಂದ ಆಯಾ ವಸ್ತುಸ್ವರೂಪವತ್ತ್ವವನ್ನು ಒಪ್ಪುವುದಾದರೆ ಎಂದರ್ಥ. ಹಾಗಾದರೆ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೇಗೆ ಉತ್ಪಾದನೆ ಮಾಡುವಿರಿ ? ಎಂಬ ಪ್ರಶ್ನೆಗೆ 'ಅತ್ರ ಸ್ವಮತೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಉಕ್ತಂ' ಎಂದರೆ ತತ್ವನಿರ್ಣಯ ಹಾಗೂ ನ್ಯಾಯಾಮೃತ ಮೊದಲಾದ ಗ್ರಂಥಗಳಲ್ಲಿ ಇದನ್ನು ಇನ್ನೂ ಹೆಚ್ಚು ವಿಶ್ಲೇಷಣೆ ಮಾಡಿದ್ದೇವೆ ಎಂದರ್ಥ. 'ಪೂರ್ವತ್ರ' ಎಂಬ ಪದಕ್ಕೆ 'ಸ್ಯಾಲ್ಲೋಕವತ್' ಎಂಬಲ್ಲಿ ಎಂದರ್ಥ.

ವಿವರಣೆ - 'ಅನುಗತತ್ವಮಾತ್ರೇಣ ತತ್ವರೂಪತ್ವೇ' ಎಂಬುದಾಗಿ ಅನ್ಯಥಾ ಪದಕ್ಕೆ ರಾಯರು ವ್ಯಾಖ್ಯಾನವನ್ನು ಮಾಡಿದ್ದರಿಂದ, 'ಅನ್ಯಥಾ ಜಾತಿಃ ವ್ಯಕ್ತೇ ತತ್ತ್ವಂ ಸ್ಯಾತ್' ಎಂಬ ಪಾಠವೇ ಸಾಧುವೆಂದು ತೋರುತ್ತದೆ. 'ನ ಸ್ಯಾತ್' ಎಂಬ ಪಾಠದಲ್ಲಿ ರಾಯರು ಹೇಳಿದ ಅರ್ಥವು ಸಮಂಜಸವಾಗುವುದಿಲ್ಲ.

**प्रकाशः –** ननूक्तं व्यवहाराभिप्रायेण ''स्याल्लोकवत्'' इत्युक्तं पूर्वत्र । अत्र तु परमार्थाभिप्रायेण तदनन्यत्वमुच्यत इति । तत्राह – **नचेति** ।। सौत्रप्रतिज्ञाभागं निरस्य हेत्वंशं निराह – **किञ्चेति** ।।

'ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್' ಎಂಬ ಸೂತ್ರದಲ್ಲಿ ವ್ಯಾವಹಾರಿಕವಾದ ಭೇದವನ್ನು ವಿವಕ್ಷೆ ಮಾಡಿ, 'ಲೋಕವತ್' ಎಂಬುದಾಗಿ ಉದಾಹರಣೆಯನ್ನು ನೀಡಿದ್ದೇವೆ. ಈ ಸೂತ್ರದಲ್ಲಿ ಪಾರಮಾರ್ಥಿಕವಾಗಿ ಅಭೇದವಿರುವುದರಿಂದ ಅನನ್ಯತ್ವವನ್ನು ಸೂತ್ರಕಾರರು ಹೇಳಿದ್ದಾರೆ ಎಂಬುದನ್ನು 'ನಚ' ಇತ್ಯಾದಿ ವಾಕ್ಯದಿಂದ ಆಕ್ಷೇಪ ಮಾಡಲಾಗಿದೆ. ಸೂತ್ರದಲ್ಲಿರುವ ಪ್ರತಿಜ್ಞಾಭಾಗವನ್ನು ಇಲ್ಲಿಯತನಕ ನಿರಾಕರಣೆ ಮಾಡಿ, ಪ್ರಕೃತ 'ಆರಂಭಣಶಬ್ದಾದಿಭ್ಯಃ ಎಂಬ ಹೇತ್ವಂಶವನ್ನು ನಿರಾಕರಣೆ ಮಾಡಲು 'ಕಿಂಚ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः –** भामत्यां तदनन्यत्व एव वैदिकमृन्मयदृष्टान्त इत्युक्त्वा मृत्पिण्ड मृन्मययोर्भेदादन्यज्ञानेनान्यज्ञानायोगात् कथं मृदादिदृष्टान्त इत्यवतार्य

''वाचारम्भणमिति श्रुतौ मृदन्यस्य विकारजातस्यानृतत्वोक्तेर्घटशरावोदञ्चनादीनां मृदेव तत्वमिति मृदि ज्ञातायां तेषां तत्वं ज्ञातं भवति'' इत्यादिनाऽऽरम्भणशब्दस्य दृष्टान्तोपपादकतयोक्त्या तद्द्वारा तदनन्यत्वोपपादकत्वावगमादित्यर्थः ।।

ಭಾಮತಿಯಲ್ಲಿ ಸೂತ್ರದಲ್ಲಿರುವ ಹೇತುವು ಸಾಕ್ಷಾತ್ತಾಗಿ ಸಾಧಕವಲ್ಲವೆಂಬುದನ್ನು ಹೀಗೆ ಸಮರ್ಥಿಸಲಾಗಿದೆ - ಜಗತ್ತು ಬ್ರಹ್ಮನಿಗಿಂತ ಅಭಿನ್ನವಾಗಿದೆ ಎಂಬ ವಿಷಯದಲ್ಲಿ ಏನು ಆಧಾರ? ಎಂಬ ಪ್ರಶ್ನೆಗೆ ಶ್ರುತಿಯಲ್ಲಿರುವ ಮೃಣ್ಮಯ ದೃಷ್ಟಾಂತವನ್ನು ನೀಡಲಾಗಿದೆ. ಮೃತ್ಪಿಂಡ ಹಾಗೂ ಮೃಣ್ಮಯಗಳಿಗೆ ಭೇದವೇ ಇರುವುದರಿಂದ ಒಂದರ ಜ್ಞಾನದಿಂದ ಇನ್ನೊಂದರ ಜ್ಞಾನವು ಸರ್ವಥಾ ಬರುವುದಿಲ್ಲ. ಆದ್ದರಿಂದ ಮೃತ್ಪಿಂಡದ ದೃಷ್ಟಾಂತವು ಹೇಗೆ ಯುಕ್ತವಾಗುತ್ತದೆ ಎಂದು ಅವತಾರಿಕೆಯನ್ನು ನೀಡಿ, 'ವಾಚಾರಂಭಣಂ' ಎಂಬ ಶ್ರುತಿಯಲ್ಲಿ ಮೃತ್ತಿಗಿಂತ ಭಿನ್ನವಾದ ಎಲ್ಲಾ ಮಣ್ಣಿನ ವಿಕಾರಗಳು ಅನೃತವಾಗಿವೆ ಎಂದು ಹೇಳಲಾಗಿದೆ. ಆದ್ದರಿಂದ ಘಟ, ಶರಾವ, ಉದಂಚನ ಮೊದಲಾದವುಗಳಿಗೆ ಮೃತ್ ಮಾತ್ರ ತತ್ವವೆನಿಸುತ್ತದೆ. ಮೃತ್ತನ್ನು ತಿಳಿದರೆ ಈ ಎಲ್ಲದರ ತತ್ವವನ್ನು ತಿಳಿದಂತಾಗುತ್ತದೆ.

ಹೀಗೆ ಭಾಮತಿಕಾರನು ಸಮರ್ಥಿಸಿದ್ದಾನೆ. ಇಲ್ಲಿ ಆರಂಭಣಶಬ್ದವನ್ನು ದೃಷ್ಟಾಂತಕ್ಕೆ ಉಪಪಾದಕವನ್ನಾಗಿ ಸಮರ್ಥಿಸಿದ್ದರಿಂದ ದೃಷ್ಟಾಂತದ ಮೂಲಕವಾಗಿ ಅಭೇದವನ್ನು ಸಮರ್ಥನೆ ಮಾಡಲಾಗಿದೆ ಎಂದರ್ಥ.

**प्रकाशः – ममत्विति ।। प्रागेव व्यक्तीकृतमेतदिति भावः ।। समस्तेति ।।** श्रुतावित्यर्थः । मम तु विजातीया युक्तिरादिपदार्थ इति न दोष इति भावः ।

ಆದರೆ ನಮ್ಮ ಪ್ರಕಾರ ಸಾಕ್ಷಾತ್ತಾಗಿಯೇ ಸೂತ್ರದಲ್ಲಿರುವ ಹೇತು ಸಾಧ್ಯಸಾಧಕವಾಗುತ್ತದೆ. 'ಸಮಸ್ತಪದತ್ವಾತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಶ್ರುತಿಯಲ್ಲಿರುವ ವಾಚಾರಂಭಣಶಬ್ದವು ಸಮಸ್ತವಾಗಿರುವುದರಿಂದ ಎಂದು ಇದರ ಅರ್ಥ. ನಮ್ಮ ಪ್ರಕಾರ ವಿಜಾತೀಯವಾದ ಯುಕ್ತಿಯು ಆದಿಪದದಿಂದ ಸ್ವೀಕಾರ್ಯವಾಗಿದೆ. ಆದ್ದರಿಂದ ನಮ್ಮಲ್ಲಿ ದೋಷವಿಲ್ಲ

### ಎರಡನೆಯ ಸೂತ್ರಕ್ಕೆ ಭಾಮತಿಯ ನಿರಾಕರಣೆ

## तात्पर्यचन्द्रिका

**यच्चोक्तं भामत्यां भावशब्देन कारणस्य सत्ता ज्ञानं च विवक्ष्यते । उपलब्धिशब्देनापि कार्यस्योपलब्धिः सत्ता च । एवञ्च कारणसत्त्व एव सत्त्वे सति कारणोपलब्धावेवोपलभ्यमानत्वात्कार्यस्य कारणानन्यत्वमिति द्वितीयसूत्रार्थः । प्रभोपलब्धावेवोपलभ्यमाने रूपादावव्यभिचारायाद्यं विशेषणम् । वह्निसत्त्व एव सति धूमादावव्यभिचाराय द्वितीयमिति ।**

'ಭಾವೇಚೋ ಉಪಲಬ್ಧೇಃ' ಎಂಬ ಎರಡನೆಯ ಸೂತ್ರಕ್ಕೆ ಭಾಮತಿಯಲ್ಲಿ ಹೀಗೆ ವ್ಯಾಖ್ಯಾನ ಮಾಡಲಾಗಿದೆ - ಸೂತ್ರದಲ್ಲಿರುವ ಭಾವಶಬ್ದದಿಂದ ಕಾರಣದ ಸತ್ವವನ್ನು ಹಾಗೂ ಜ್ಞಾನವನ್ನು ವಿವಕ್ಷಿಸಬೇಕು. 'ಉಪಲಬ್ಧೇಃ' ಎಂಬಲ್ಲಿರುವ ಉಪಲಬ್ಧಿ ಶಬ್ದದಿಂದಲೂ ಕೂಡ ಕಾರ್ಯದ ಉಪಲಬ್ಧಿಯನ್ನು ಹಾಗೂ ಸತ್ತಾವನ್ನು ವಿವಕ್ಷಿಸಬೇಕು. ಆಗ ಕಾರಣವು ಇದ್ದರೆ ಮಾತ್ರ ಕಾರ್ಯವು ಇರುತ್ತದೆ. ಕಾರಣವು ಉಪಲಬ್ಧವಾದರೆ ಮಾತ್ರ ಕಾರ್ಯವು ಉಪಲಬ್ಧವಾಗುತ್ತದೆ ಎಂದು ಹೇಳಿದಂತಾಗುತ್ತದೆ. ಇದರಿಂದ ಕಾರ್ಯವು ಕಾರಣದಿಂದ ಅಭಿನ್ನವೆಂದು ಸಿದ್ಧವಾಗುತ್ತದೆ ಎಂಬುದು ಎರಡನೆಯ ಸೂತ್ರದ ಅರ್ಥ. ಈ ಹೇತುವಿನಲ್ಲಿ 'ತತ್ಸತ್ವೇ ಏವ ತತ್ ಸತ್ವಂ' ಎಂಬ ವಿಶೇಷಣವನ್ನು ಹೇಳದಿದ್ದರೆ, ಪ್ರಭೆಯು ಉಪಲಬ್ಧವಾದರೆ ಮಾತ್ರ ಉಪಲಬ್ಧವಾಗುವ ರೂಪಾದಿಗಳಲ್ಲಿ ವ್ಯಭಿಚಾರವು ಬರುತ್ತದೆ. ಅದರ ಪರಿಹಾರಕ್ಕಾಗಿ 'ತತ್ಸತ್ವೇ ಏವ ತತ್ಸತ್ವಂ' ಎಂಬ ವಿಶೇಷಣವನ್ನು ನೀಡಬೇಕು. ವಹ್ನಿ ಇದ್ದರೆ ಮಾತ್ರ ಧೂಮವು ಇರುವುದರಿಂದ ಅಲ್ಲಿ ವ್ಯಭಿಚಾರವನ್ನು ಪರಿಹಾರ ಮಾಡುವುದಕ್ಕಾಗಿ 'ತದುಪಲಬ್ಧಾವೇವ ಉಪಲಭ್ಯಮಾನತ್ವಾತ್' ಎಂಬ ವಿಶೇಷಣವನ್ನು ನೀಡಬೇಕು. ಇಷ್ಟು ಭಾಮತಿಯಲ್ಲಿ ಹೇಳಿದ ವಿಚಾರ

ವಿವರಣೆ - 'ಕಾರ್ಯಂ ಕಾರಣಾಭಿನ್ನಂ ತತ್ಸತ್ವೇ ಏವ ಸತ್ವೇ ಸತಿ ತದುಪಲಬ್ಧಾವೇವ ಉಪಲಬ್ಯಮಾನತ್ವಾತ್' ಕಾರ್ಯವು ಕಾರಣಾಭಿನ್ನವಾಗಿದೆ ಎಂಬ ವಿಷಯದಲ್ಲಿ 'ತತ್ಸತ್ವೇ ಏವ ಸತ್ವಾತ್' ಎಂಬುದು ಒಂದು ಹೇತು. 'ತದುಲಬ್ಧಾವೇವ ಉಪಲಭ್ಯಮಾನತ್ವಾತ್' ಎಂಬುದು ಇನ್ನೊಂದು ಹೇತು. ಸೂತ್ರದಲ್ಲಿ 'ಭಾವೇ ಎಂಬಲ್ಲಿ 'ಭಾವಾತ್' ಎಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಆಗ ಕಾರಣವು ಇದ್ದರೆ ಕಾರ್ಯವು ಇರುತ್ತದೆ ಎಂದು ಹೇಳಿದಂತಾಯಿತು. ಅದೇ ಭಾವ ಎಂಬ ಶಬ್ದಕ್ಕೆ 'ಉಪಲಬ್ಧಿ' ಎಂಬರ್ಥವೂ ಕೂಡ ಇರುತ್ತದೆ. ಏಕೆಂದರೆ 'ಭೂಸತ್ತಾಯಾಂ' ಎಂಬ ಧಾತುವಿನಂತೆ 'ಭೂಚಿಂತಾಯಾಂ' ಎಂಬ ಧಾತುವೂ ಕೂಡ ಇರುತ್ತದೆ. ಆದ್ದರಿಂದ 'ಭಾವೇ' ಎಂಬ ಪದಕ್ಕೆ 'ಜ್ಞಾನೇ' ಎಂದರ್ಥ. ಆಗ ಕಾರಣವು ಉಪಲಬ್ಧವಾದರೆ ಮಾತ್ರ, ಕಾರ್ಯವು ಉಪಲಬ್ಧವಾಗುತ್ತದೆ ಎಂಬರ್ಥವು ತಿಳಿಯುತ್ತದೆ. ಹೀಗೆ ಭಾವಶಬ್ದದಿಂದ ಉಪಲಬ್ಧಿಯನ್ನು ಲಕ್ಷಣಯಾ ವಿವಕ್ಷಿಸಬೇಕು. ಉಪಲಬ್ಧಿಶಬ್ದದಿಂದ ಭಾವವನ್ನು ಲಕ್ಷಣಯಾ ವಿವಕ್ಷಿಸಬೇಕು.

ಮೇಲಿನ ಅನುಮಾನದಲ್ಲಿ ವಿಶಿಷ್ಟವನ್ನು ಏಕೆ ಹೇತುವನ್ನಾಗಿ ಮಾಡಬೇಕು. 'ತದುಲಬ್ಧಾವೇವ ಉಪಲಭ್ಯಮಾನತ್ವಾತ್' ಎಂದಷ್ಟೇ ಸಾಕಲ್ಲವೇ? ಎಂದು ಪ್ರಶ್ನಿಸಬಾರದು. ಇಷ್ಟೇ ಹೇತುವನ್ನು ಹೇಳಿದರೆ ರೂಪಾದಿಗಳಲ್ಲಿ ವ್ಯಭಿಚಾರ ಬರುತ್ತದೆ. ಬೆಳಕು ಕಂಡರೆ ಮಾತ್ರ ರೂಪವು ಕಾಣಿಸುತ್ತದೆ. ಬೆಳಕು ಕಾಣಿಸದಿದ್ದರೆ ರೂಪವೂ ಕೂಡ ಕಾಣಿಸುವುದಿಲ್ಲ. ಆದ್ದರಿಂದ 'ಯದುಪಲಬ್ಧಾವೇವ ಉಪಲಭ್ಯತೇ' ಪ್ರಭೆಯು ಉಪಲಬ್ಧವಾದರೆ ಮಾತ್ರ ಉಪಲಭ್ಯವಾಗುತ್ತದೆ. ಅದು ಅದಕ್ಕಿಂತ ಅಭಿನ್ನ ಎಂದು ಹೇಳಿದರೆ, ರೂಪವು ಪ್ರಭೆಯಿಂದ ಅಭಿನ್ನವಾಗಬೇಕಾಗುತ್ತದೆ. ಅದಕ್ಕೋಸ್ಕರ 'ಕಾರಣ ಸತ್ವೇ ಏವ ಕಾರ್ಯ ಸತ್ವಂ' ಎಂಬ ವಿಶೇಷಣವನ್ನು ನೀಡಬೇಕು. ಪ್ರಭಾ ಇದ್ದರೆ ಮಾತ್ರ ರೂಪ ಇರುತ್ತದೆಂದು ಹೇಳಲು ಬರುವುದಿಲ್ಲ. ಕತ್ತಲಿದ್ದರೂ ಕೂಡ ರೂಪವು ಇದ್ದೇ ಇರುತ್ತದೆ. ಆದ್ದರಿಂದ 'ತತ್ಸತ್ವೇ ಏವ ತತ್ಸಾತ್ವಾತ್' ಎಂಬ ವಿಶೇಷಣಾವು ಬಾರದ ಕಾರಣ ವಿಶಿಷ್ಟರೂಪವಾದ ಹೇತುವೂ ಕೂಡ ಬರುವುದಿಲ್ಲ. ಆದ್ದರಿಂದ ವ್ಯಭಿಚಾರವಿಲ್ಲ.

'ತತ್ಸತ್ವೇ ಏವ ತತ್ ಸತ್ವಾತ್' ಎಂಬ ವಿಶೇಷಣವನ್ನಷ್ಟೇ ಹೇಳಿ, 'ತದುಲಬ್ಧಾವೇವ ಉಪಲಭ್ಯಮಾನತ್ವ' ಎಂಬ ವಿಶೇಷ್ಯವನ್ನು ಹೇಳದಿದ್ದರೆ ವಹ್ನಿ ಇದ್ದರೆ ಮಾತ್ರ, ಧೂಮವು ಇರುತ್ತದೆ. ಆದ್ದರಿಂದ ಧೂಮವೂ

ಕೂಡ ವಹ್ನಿಯಿಂದ ಅಭಿನ್ನ ಎಂದು ಹೇಳಬೇಕಾದೀತು. ಆಗ ಧೂಮದಿಂದ ವಹ್ನಿಯನ್ನು ಸಾಧನೆ ಮಾಡಲು ಬರುವುದೇ ಇಲ್ಲ. ಸಾಧ್ಯಾವೈಶಿಷ್ಟ್ಯದೋಷವು ಬರುತ್ತದೆ. ಆದಕ್ಕೋಸ್ಕರ 'ತದುಲಬ್ಧಾವೇವ ಉಪಲಭ್ಯಮಾನತ್ವ' ಎಂಬ ವಿಶೇಷ್ಯವನ್ನು ನೀಡಬೇಕು. ವಹ್ನಿ ಉಪಲಬ್ಧವಾದರೆ ಮಾತ್ರ ಧೂಮವು ಉಪಲಬ್ಧವಾಗುತ್ತದೆಂಬ ನಿಯಮವಿಲ್ಲ. ಆದ್ದರಿಂದ ಈ ಎರಡು ವಿಶೇಷಣಗಳು ಸಾರ್ಥಕ.

**तन्न । भावशब्दोपलब्धिशब्दयोरावृत्तिः विभक्तिविपरिणामः कारणस्य कार्यस्येति पदद्वयाध्याहारश्चेत्यनेकदोषापातात् ।**

ಎರಡನೆಯ ಸೂತ್ರ ವ್ಯಾಖ್ಯಾನವು ಅಯುಕ್ತವಾಗಿದೆ. ಭಾವಶಬ್ದವನ್ನು ಹಾಗೂ ಉಪಲಬ್ಧಿ ಶಬ್ದವನ್ನು ಆವೃತ್ತಿ ಮಾಡಿರುತ್ತೀರಿ. ಮತ್ತು 'ಭಾವೇ' ಎಂಬಲ್ಲಿ 'ಭಾವಾತ್' ಎಂಬ ವಿಭಕ್ತಿ ಪರಿಣಾಮವನ್ನು 'ಉಪಲಬ್ಧೇಃ' ಎಂಬಲ್ಲಿ ಉಪಲಬ್ಧಿ ಎಂದು ವಿಭಕ್ತಿವಿಪರಿಣಾಮ ಮಾಡಿರುತ್ತೀರಿ. ಮತ್ತು ಕಾರಣಸ್ಯ ಹಾಗೂ ಕಾರ್ಯಸ್ಯ ಎಂಬೆರಡು ಪದಗಳನ್ನು ಅಧ್ಯಾಹಾರ ಮಾಡಿರುತ್ತೀರಿ. ಹೀಗೆ ಆವೃತ್ತಿ, ವಿಭಕ್ತಿವಿಪರಿಣಾಮ ಪದದ್ವಯ ಅಧ್ಯಾಹಾರ ಇತ್ಯಾದಿ ಅನೇಕ ದೋಷಗಳು ಅದ್ವೈತಿಗಳಿಗೆ ಬರುತ್ತವೆ.

**मम तु ''उपलब्धेः'' इत्यस्य प्रसङ्गहेतुत्वमात्रं कल्प्यम् । कारणसत्त्व एव सत्त्वरूपस्य हेतुविशेषणस्य त्वदभिप्रेतानृतत्वरूपानन्यत्वविरोधित्वाच्च ।**

ನಮ್ಮ ಪ್ರಕಾರ ಈ ಯಾವ ದೋಷಗಳು ಇಲ್ಲ. ಏಕೆಂದರೆ ಒಂದು ವೇಳೆ ಬ್ರಹ್ಮನಿಗಿಂತ ಅತಿರಿಕ್ತವಾದ ಸ್ವತಂತ್ರಸಾಧನವು ಇರುವುದಾದರೆ, 'ಉಪಲಬ್ಧೇಃ' ಉಪಲಬ್ಧವಾಗುವ ಪ್ರಸಂಗ ಬರುತ್ತದೆ ಎಂದು ವ್ಯಾಖ್ಯಾನ ಮಾಡುವುದರಿಂದ ಪ್ರಸಂಗಹೇತುತ್ವವನ್ನಷ್ಟೇ ಕಲ್ಪನೆ ಮಾಡಬೇಕು. ಅಂದರೆ ಉಪಲಬ್ಧಶಬ್ದಕ್ಕೆ 'ಉಪಲಬ್ಧಿಪ್ರಸಂಗಾತ್' ಎಂದಷ್ಟೇ ವ್ಯಾಖ್ಯಾನ ಮಾಡಬೇಕು. ಬೇರೆ ಯಾವ ದೋಷವು ನಮ್ಮಲ್ಲಿ ಇರುವುದಿಲ್ಲ. ಮತ್ತು ಕಾರಣವು ಇದ್ದರೆ ಮಾತ್ರ ಕಾರ್ಯವು ಇರುತ್ತದೆ ಎಂಬುದಾಗಿ ಹೇತುವಿನಲ್ಲಿ ನೀವು ನೀಡಿರುವ ವಿಶೇಷಣವು ನಿಮ್ಮ ಅಭಿಪ್ರೇತವಾದ ಅನೃತತ್ವರೂಪವಾದ ಅಭೇದಕ್ಕೆ ಪೂರಕವೇ ಆಗಿರುವುದಿಲ್ಲ. ವಿರೋಧಿಯೇ ಆಗಿರುತ್ತದೆ.

**शब्दैकसमधिगम्यनिर्विशेषचिन्मात्ररूपशुद्धस्य सर्वज्ञत्वादिविशिष्टस्य सगुणस्य च ब्रह्मणोऽनुपलब्धावेव प्रपञ्चोपलम्भेन प्रस्तुतस्य ब्रह्मप्रपञ्चानन्यत्वस्यासिद्धेश्च ।**

ಶಬ್ದೈಕಸಮಧಿಗಮ್ಯನಾದ ನಿರ್ವಿಶೇಷಚಿನ್ಮಾತ್ರರೂಪನಾದ ಶುದ್ಧಬ್ರಹ್ಮನು ಮತ್ತು ಸರ್ವಜ್ಞತ್ವಾದಿ-ವಿಶಿಷ್ಟನಾದ ಸಗುಣಬ್ರಹ್ಮನು ಉಪಲಬ್ಧನಾಗದೇ ಇದ್ದರೂ ಕೂಡ ಪ್ರಪಂಚವು ಉಪಲಬ್ಧವಾಗುತ್ತಿದೆ. ಆದ್ದರಿಂದ ಬ್ರಹ್ಮ ಹಾಗೂ ಪ್ರಪಂಚಗಳಿಗೆ ಅಭೇದವು ಸಿದ್ಧವಾಗುವುದಿಲ್ಲ.

**यच्चास्यैव सूत्रस्य भावाच्चोपलब्धेरिति पाठान्तरमाश्रित्यातानवितानवन्तस्तन्तव एव पट इति प्रत्यक्षोपलब्धेर्भावाच्चेति व्याख्यानं**

'ಭಾವೇಚ್ಚೋಪಲಬ್ಧೇಃ' ಎಂಬ ಸೂತ್ರಕ್ಕೆ ಅದ್ವೈತಿಗಳು 'ಭಾವಾಚ್ಚೋಪಲಬ್ಧೇಃ' ಎಂಬ ಪಾಠಾಂತರವನ್ನು ಅಂಗೀಕರಿಸುತ್ತಾರೆ. ಆಗ ಇದರ ಅರ್ಥ ಹೀಗೆ - ಅಗಲ, ಉದ್ದದಲ್ಲಿ ಸೇರಿರುವ ತಂತುಗಳೇ ಪಟವಾಗುವುದು ಪ್ರತ್ಯಕ್ಷದಿಂದ ಕಾಣಿಸುತ್ತಿದೆ. ಮತ್ತು ಹಾಗೆಯೇ ಇರುತ್ತದೆ. ಹೀಗೆ ಕಾರ್ಯಕಾರಣಗಳಿಗೆ ಅಭೇದವಿರುವುದು ಕಂಡಿದೆ. ಅದರಂತೆ ಬ್ರಹ್ಮ ಹಾಗೂ ಪ್ರಪಂಚಕ್ಕೆ ಅಭೇದವನ್ನು ಒಪ್ಪಬೇಕು ಎಂದು.

**तन्न । उपलब्धेरित्यस्य पञ्चम्यन्तत्वेपि विवक्षितसिद्धेर्भावादित्यस्य वैयर्थ्यात्। कार्यकारणयोरभेदस्यैव सिद्ध्या पराभिमतप्रपञ्चानृतत्वासिद्धेश्च ।**

ಇದು ತಪ್ಪು. 'ಉಪಲಬ್ಧೇಃ' ಎಂಬುದು ಪಂಚಮ್ಯಂತವಾದ ಪದವನ್ನಾಗಿ ವಿವಕ್ಷಿಸಿದರೂ ಕೂಡ ವಿವಕ್ಷಿತವಾದ ಅರ್ಥವು ಸಿದ್ಧವಾಗುತ್ತದೆ. ಆದ್ದರಿಂದ 'ಭಾವಾತ್' ಎಂಬ ಪದವೇ ವ್ಯರ್ಥ. ಮತ್ತು ಹೀಗೆ ವ್ಯಾಖ್ಯಾನ ಮಾಡಿದರೆ, ಕಾರ್ಯಕಾರಣಗಳಿಗೆ ಅಭೇದವಷ್ಟೇ ಸಿದ್ಧವಾಗುತ್ತದೆ. ಹೊರತು, ಅದ್ವೈತಿಗಳಿಗೆ ಅಭಿಪ್ರೇತವಾದ ಪ್ರಪಂಚಮಿಥ್ಯಾರ್ಥವು ಸಿದ್ಧವಾಗುವುದಿಲ್ಲ.

**यच्चोक्तमवरकालीनस्य कार्यस्य वियदादेः सदेव सोम्येत्यादिश्रुत्योत्पत्तेः प्रागेव सत्त्वाच्च कारणादनन्यत्वत्वमिति तृतीयार्थ इति ।**

'ಸತ್ವಾಚ್ಚಾವರಸ್ಯ' ಎಂಬುದು ಮೂರನೆಯ ಸೂತ್ರ. ಈ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ- ಅನಂತರ ಹುಟ್ಟುವ ವಿಯದಾದಿ ಕಾರ್ಯಗಳು ಹುಟ್ಟುವ ಮೊದಲೂ ಕೂಡ ಸತ್ಯವಾಗಿದ್ದವು ಎಂಬುದಾಗಿ 'ಸದೇವ ಸೋಮ್ಯ' ಇತ್ಯಾದಿ ಶ್ರುತಿಯು ಉಪಪಾದನೆ ಮಾಡುತ್ತಿದೆ. ಆದ್ದರಿಂದ ಕಾರ್ಯಕಾರಣಗಳಿಗೆ ಅಭೇದವಿದೆಯೆಂದು ಒಪ್ಪಬೇಕು ಎಂದು.

**तन्नसत्त्वादित्यस्य त्वदभिप्रेतानृतत्वविरोधित्वात् । उत्पत्तेः प्रागेवेत्यस्याध्याहार्यत्वाच्च । द्वितीयसूत्रस्य तन्तुपटादिर्विषयस्तृतीयस्य तु ब्रह्मवियदादीति भिन्नविषयत्वेन चशब्दास्वारस्याच्च ।**

ಇದು ತಪ್ಪು. ಈ ಸೂತ್ರದಲ್ಲಿ 'ಸತ್ವಾತ್' ಎಂಬ ಪದಕ್ಕೆ ಸತ್ಯಭೂತವಾಗಿರುವುದರಿಂದ ಎಂದು ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ. ಇದು ಅವರು ಒಪ್ಪುವ ಅನೃತತ್ವಕ್ಕೆ ವಿರೋಧಿಯಾಗಿದೆ. ಮತ್ತು 'ಉತ್ಪತ್ತೇಃ ಪ್ರಾಗೇವ' ಎಂಬುದಾಗಿ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಮತ್ತೊಂದು ದೋಷ - ಎರಡನೆಯ ಸೂತ್ರವು ತಂತು ಹಾಗೂ ಪಟಗಳಿಗೆ ಅಭೇದವನ್ನು ಹೇಳಲು ಹೊರಟಿದೆ. ಮೂರನೆಯ ಸೂತ್ರವು ಬ್ರಹ್ಮ ಹಾಗೂ ಆಕಾಶಾದಿಗಳಿಗೆ ಅಭೇದವನ್ನು ಹೇಳಲು ಹೊರಟಿದೆ ಎಂದು ವ್ಯಾಖ್ಯಾನ ಮಾಡಿದರೆ ಎರಡು ಸೂತ್ರಗಳು ಭಿನ್ನವಿಷಯಕವಾಯಿತು. ಆಗ 'ಸತ್ವಾಚ್ಚ' ಎಂಬ ಸೂತ್ರದಲ್ಲಿರುವ 'ಚ' ಶಬ್ದವು ಅಸ್ವರವಾಗುತ್ತದೆ.

**(अवरशब्देलक्षणापाताच्च) ''तत्तेजोऽसृजत'' इति वाक्यशेषेण ''सदेव'' इति वाक्यस्य कारणपरत्वात्कार्यकारणाभेदस्य चाप्यसिद्धेस्तेन कार्यसत्त्वासिद्धेश्च ।**

ಅಷ್ಟೇ ಅಲ್ಲದೇ 'ಅವರ' ಶಬ್ದಕ್ಕೆ 'ಕಾರ್ಯ' ಎಂಬರ್ಥದಲ್ಲಿ ಲಕ್ಷಣಾವನ್ನೂ ಕೂಡ ಮಾಡಬೇಕಾಗುತ್ತದೆ. ಮತ್ತೊಂದು ದೋಷ - 'ತತ್ತೇಜೋಽಸೃಜತ'ಎಂಬ ವಾಕ್ಯಶೇಷದಿಂದ 'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬ ವಾಕ್ಯವು ಕೇವಲ ಕಾರಣತ್ವವನ್ನಷ್ಟೇ ಹೇಳುತ್ತಿದೆ ಹೊರತು, ಕಾರ್ಯಕಾರಣಗಳಿಗೆ ಅಭೇದವನ್ನು ಸಾಧನೆ ಮಾಡುತ್ತಿಲ್ಲ. ಈ ಕಾರಣದಿಂದ ಕಾರ್ಯಸತ್ವವೂ ಕೂಡ ಅಸಿದ್ಧವಾಗುತ್ತದೆ.

**यच्चोक्तं ''असदेवेदमग्र आसीत्'' इति व्यपदेशात्कार्यस्य प्रागसत्त्वमिति शङ्का चतुर्थे निरस्यत इति तन्न । अस्यापि वाक्यस्य ''तदसदेव सन्मनोऽकुरुत'' इति वाक्यशेषात्कारणपरत्वेन कार्यासत्त्वाप्रापकत्वात् ।**

'ಅಸದ್ವ್ಯವಪೇಶದೇಶಾತ್ ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್' ಎಂಬುದು ನಾಕನೆಯ ಸೂತ್ರ. ಇದಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ - 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಯು ಕಾರ್ಯಭೂತವಾದ ವಸ್ತುವು ಮೊದಲು ಇರಲಿಲ್ಲವೆಂದು ಹೇಳುತ್ತಿದೆಯಲ್ಲವೇ? ಎಂದು ಆಕ್ಷೇಪ ಮಾಡಿದರೆ ಈ ಸೂತ್ರವು ಉತ್ತರಿಸುತ್ತಿದೆ. ಸರ್ವಥಾ ಇರಲಿಲ್ಲ ಎಂಬುದು ಶ್ರುತಿಯ ಅಭಿಪ್ರಾಯವಲ್ಲ. ಸೃಷ್ಟಿಯ ಅನಂತರದಲ್ಲಿ ನಾಮ, ರೂಪಗಳನ್ನು ಹೊಂದಿದಂತೆ ಮೊದಲು ಇರಲಿಲ್ಲ ಎಂದಷ್ಟೇ ಶ್ರುತಿಯ ಅಭಿಪ್ರಾಯ.

ಈ ವ್ಯಾಖ್ಯಾನವೂ ಕೂಡ ತಪ್ಪು. ಏಕೆಂದರೆ 'ತದಸದೇವ ಸನ್ಮನೋಽಕುರುತ' ಎಂಬ ವಾಕ್ಯಶೇಷದಿಂದ 'ಅಸದೇವೇದಮಗ್ರ ಆಸೀತ್' ಎಂಬ ವಾಕ್ಯವು ಕಾರಣಪರವಾಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ಕಾರ್ಯಾಸತ್ವಕ್ಕೆ ಇದು ಸಾಧಕವಾಗುವುದಿಲ್ಲ.

**नच कार्यकारणयोरनन्यत्वाङ्गीकारेण कार्यासत्त्वशङ्केति युक्तं कार्यसत्त्वस्याप्यनन्यत्वसिद्ध्यर्थत्वेनानन्यत्वाङ्गीकारेणासत्त्वशङ्कायोगात् ।**

ಕಾರ್ಯ ಹಾಗೂ ಕಾರಣಗಳಿಗೆ ಅಭೇದವನ್ನು ಒಪ್ಪಿರುವುದರಿಂದ ಕಾರ್ಯವು ಪ್ರತ್ಯೇಕವಾಗಿ ಇರುವುದಿಲ್ಲವೆಂದು ಆಶಂಕಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಕಾರ್ಯಸತ್ವವೂ ಕೂಡ ಕಾರ್ಯಕಾರಣಗಳ ಅಭೇದಕ್ಕೆ ಪೂರಕವೇ ಆಗಿದೆ. ಆದ್ದರಿಂದ ಅಭೇದವನ್ನು ಒಪ್ಪಿರುವುದರಿಂದ ಅಸತ್ವಕಾರ್ಯವು ಇರಲಿಲ್ಲವೆಂಬ ಆಶಂಕೆಯೇ ಬರುವುದಿಲ್ಲ.

**यच्चोक्तमसदकरणादियुक्तेः ''सदेवेत्यादिशब्दान्तराच्च कार्यस्य प्रागुत्पत्तेः सत्त्वं कारणानन्यत्वं चेति पञ्चमार्थ इति**

'ಯುಕ್ತೇಃ ಶಬ್ದಾಂತರಾಚ್ಚ' ಎಂಬುದು ಐದನೆಯ ಸೂತ್ರ. ಕಾರ್ಯ ಹಾಗೂ ಕಾರಣಗಳಿಗೆ ಭೇದವು ಇರುವುದಿಲ್ಲ. ಈ ವಿಷಯದಲ್ಲಿ ಅನುಮಾನಪ್ರಮಾಣವಿದೆ. ಪಟದ ಉತ್ಪತ್ತಿಗೆ ತಂತುವನ್ನು ಆಶ್ರಯಿಸಬೇಕು. ದಧಿಯ ಉತ್ಪತ್ತಿಗೆ ಹಾಲನ್ನು ಆಶ್ರಯಿಸಬೇಕು. ತಂತುವಿನಿಂದ ಮೊಸರು ಆಗುವುದಿಲ್ಲ. ಹಾಲಿನಿಂದ ಪಟವು ಸೃಷ್ಟಿಯಾಗುವುದಿಲ್ಲ. ಆದ್ದರಿಂದ ಪಟ ಹಾಗೂ ತಂತು ಒಂದೇ ಎಂದು ಹೇಳಬೇಕು. ಹಾಲು ಹಾಗೂ ಮೊಸರು ಎರಡೂ ಕೂಡ ಒಂದೇ ಎಂದು ಹೇಳಬೇಕು. ಇದರಂತೆ 'ಸದೇವಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯೂ ಕೂಡ ಇದಕ್ಕೆ ಆಧಾರವಾಗಿದೆ. ಏಕೆಂದರೆ ಈ ಶ್ರುತಿಯು 'ಇದಂ' ಎಂದು ಪ್ರತ್ಯಕ್ಷನಿರ್ದೇಶವನ್ನು ಮಾಡುತ್ತಿದೆ. ಹೀಗೆ ಪ್ರತ್ಯಕ್ಷ ನಿರ್ದೇಶ ಮಾಡಿ, 'ಅಗ್ರೇ' ಎಂಬುದಾಗಿ ಸೃಷ್ಟಿಯ ಪ್ರಾರಂಭದಲ್ಲಿ ಬ್ರಹ್ಮಸ್ವರೂಪವಾಗಿತ್ತು ಎಂದು ಹೇಳಿದ್ದರಿಂದ, ಕಾರ್ಯ ಹಾಗೂ ಕಾರಣಗಳಿಗೆ ಅಭೇದವು ಸಿದ್ಧವಾಗುತ್ತದೆ ಎಂದು.

**तन्न । शब्दान्तरादित्यस्य सत्त्वाच्चावरस्येत्यनेन गतार्थत्वात् ।**

ಇದೂ ಕೂಡ ತಪ್ಪು. 'ಶಬ್ದಾಂತರಾತ್' ಎಂಬ ಯುಕ್ತಿಯು ಹಿಂದೆ 'ಸತ್ವಾಚ್ಚಾವರಸ್ಯ' ಎಂಬ ಸೂತ್ರದಲ್ಲಿರುವ 'ಸತ್ವಾತ್' ಎಂಬ ಯುಕ್ತಿಯಿಂದಲೇ ಗತಾರ್ಥವಾಗಿದೆ. ಪುನಃ ಅದನ್ನೇ ಹೇಳಿದರೆ ಪುನರುಕ್ತಿ ಬರುತ್ತದೆ.

**षष्ठसप्तमसूत्रोक्तौ तु संवेष्टितपटप्राणदृष्टान्तौ न विवर्तवादिनः परस्यानुगुणौ । जगतो ब्रह्मणीव प्रसारणादेः पटादावनध्यस्तत्वात् । संवेष्टितप्रसारितपटादाविव निरवयवे ब्रह्मणि सङ्कोचविकासयोरसम्भवाच्च ।**

'ಪಟವಚ್ಚ' ಎಂಬುದು ಆರನೆಯ ಸೂತ್ರ. ಪಟವು ಒಟ್ಟಿಗೆ ಮುದ್ದೆಯಾಗಿದ್ದಾಗ ಸ್ಪಷ್ಟವಾಗಿ ತಿಳಿಯುವುದಿಲ್ಲ. ಬಿಡಿಸಿದಾಗ ತಿಳಿಯುತ್ತದೆ. ಅದರಂತೆ ಕೇವಲ ತಂತುಗಳಿದ್ದಾಗ ಬಟ್ಟೆಯ ಅರಿವು ಬರುವುದಿಲ್ಲ. ಆತಾನ ವಿತಾನಗಳಿಂದ ಅದನ್ನೇ ಜೋಡಿಸಿದರೆ ಪಟ ಎಂಬ ಜ್ಞಾನವು ಬರುತ್ತದೆ. ಆದ್ದರಿಂದ ತಂತು ಹಾಗೂ ಪಟಗಳು ಒಂದೇ ಆಗಿದೆ. ಇದರಂತೆ ಬ್ರಹ್ಮ ಹಾಗೂ ಜಗತ್ತು ಒಂದೇ ಆಗಿದೆ ಎಂದು ಆರನೆಯ ಸೂತ್ರಕ್ಕೆ ಅದ್ವೈತಿಗಳು ಮಾಡುವ ವ್ಯಾಖ್ಯಾನ.

'ಯಥಾಪ್ರಾಣಾದಿ' ಎಂಬುದು ಏಳನೆಯ ಸೂತ್ರ. ಉಸಿರು ಹಿಡಿದಾಗ ದೇಹವು ಸ್ತಬ್ಧವಾಗಿರುತ್ತದೆ. ಉಸಿರಾಟವಾಡುವಾಗ ಅದೇ ಪ್ರಾಣವಾಯುವು ದೇಹದ ಎಲ್ಲೆಡೆಯೂ ಸಂಚರಿಸುತ್ತದೆ. ಇದರಂತೆ ಕಾರ್ಯಕಾರಣಗಳು ಒಂದೇ ಆಗಿವೆ ಎಂಬುದು ಈ ಸೂತ್ರದ ವ್ಯಾಖ್ಯಾನ.

ಆದರೆ ಆರನೆಯ ಸೂತ್ರದಲ್ಲಿ ಮುದ್ದೆಯಾದ ವಸ್ತ್ರದ ದೃಷ್ಟಾಂತವನ್ನು ನೀಡಿದ್ದು ವಿವರ್ತವಾದಿಗಳಿಗೆ ಅನುಕೂಲವಾಗಿರುವುದಿಲ್ಲ. ಅದರಂತೆ ಪ್ರಾಣಾಯಾಮದ ದೃಷ್ಟಾಂತವನ್ನು ಏಳನೆಯ ಸೂತ್ರದಲ್ಲಿ ನೀಡಿದ್ದೂ ಕೂಡ ವಿವರ್ತವಾದಿಗಳಿಗೆ ಅನುಗುಣವಾಗಿರುವುದಿಲ್ಲ. ಏಕೆಂದರೆ ಮುದ್ದೆಯಾಗಿರುವಿಕೆಯು ಪಟದಲ್ಲಿ ಅಧ್ಯಸ್ತವಲ್ಲ. ಆದರೆ ಜಗತ್ತು ಬ್ರಹ್ಮಲ್ಲಿ ಅಧ್ಯಸ್ತವಾಗಿದೆಯೆಂದು ಅದ್ವೈತಿಗಳು ಹೇಳುತ್ತಾರೆ. ಮುದ್ದೆಯಾದ ಹಾಗೂ ಬಿಡಿಸಿದ ಬಟ್ಟೆಯಲ್ಲಿ ಸಂಕೋಚವಿಕಾಸವು ಇರುವಂತೆ ನಿರವಯವನಾದ

ಬ್ರಹ್ಮನಲ್ಲಿ ಸಂಕೋಚವಿಕಾಸಗಳು ಇರುವುದಿಲ್ಲ. ಇದರಂತೆ ಬಿಗಿದು ಹಿಡಿದ ಉಸಿರೂ ಕೂಡ ದೃಷ್ಟಾಂತವಾಗಲು ಸಾಧ್ಯವಿಲ್ಲ.

**मम मत इव प्रमेयविशेषाभावेन दृष्टान्तद्वयस्य वैयर्थ्याच्च ।**

ನಮ್ಮ ಮತದಲ್ಲಿ ಎರಡೂ ಸೂತ್ರಗಳಲ್ಲಿ ಪ್ರಮೇಯವಿಶೇಷವನ್ನು ಹೇಳಿರುವುದರಿಂದ ಎರಡೂ ದೃಷ್ಟಾಂತಗಳು ಸಾರ್ಥಕವಾಗಿವೆ. 'ಪಟವಚ್ಚ' ಎಂಬ ಸೂತ್ರಕ್ಕೆ ನಾವು ಹೀಗೆ ವ್ಯಾಖ್ಯಾನ ಮಾಡುತ್ತೇವೆ. ಭಗವಂತನು ತನಗಿಂತ ಭಿನ್ನವಾದ ಸಾಮಗ್ರಿಯನ್ನು ಅಪೇಕ್ಷಿಸಿ, ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಕುಲಾಲನು ತಂತುವನ್ನು ಆಶ್ರಯಿಸಿ ಪಟವನ್ನು ಸೃಷ್ಟಿಸುವಂತೆ ಎಂದು. 'ಯಥಾ ಪ್ರಾಣಾದಿಃ' ಎಂಬ ಸೂತ್ರಕ್ಕೆ ಪ್ರಾಣ, ದೇಹ, ಇಂದ್ರಿಯ ಮೊದಲಾದವುಗಳಲ್ಲಿ ಭಗವಂತನು ಪ್ರವೇಶ ಮಾಡಿರುವುದರಿಂದ ಅವುಗಳು ಹೇಗೆ ಅಸ್ವತಂತ್ರವಾಗಿವೆಯೋ, ಅದರಂತೆ ಜಗತ್ತಿಗೆ ಕಾರಣವಾದ ಪ್ರಕೃತ್ಯಾದಿಗಳಲ್ಲೂ ಅವನು ಪ್ರವೇಶ ಮಾಡಿರುವುದರಿಂದ, ಅವುಗಳೂ ಕೂಡ ಅಸ್ವತಂತ್ರವಾಗಿವೆ ಎಂದು ನಾವು ವ್ಯಾಖ್ಯಾನ ಮಾಡುತ್ತೇವೆ. ಆದ್ದರಿಂದ ನಮ್ಮಲ್ಲಿ ಎರಡೂ ದೃಷ್ಟಾಂತಗಳು ಸಾರ್ಥಕವಾಗಿವೆ.

**प्रकाशः –**

द्वितीयादिसूत्रार्थमपि सुधोक्तं विवृण्वन्ननूद्य निराह – **यच्चेति** ।। परोक्तमेव कृत्यमाह – **प्रभेति** ।। **विभक्तीति** ।। भावशब्दे पञ्चम्यन्तत्वस्योपलब्धिशब्दे सप्तम्यन्तत्वस्य वाच्यत्वादिति भावः ।

ಎರಡನೆಯ ಸೂತ್ರದಿಂದ ಆರಂಭಿಸಿ ಏಳನೆಯ ಸೂತ್ರದ ತನಕ ಮಾಯಾವಾದಿಗಳ ಸೂತ್ರವ್ಯಾಖ್ಯಾನವನ್ನು ಅನುವಾದ ಮಾಡಿ, 'ಯಚ್ಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. ಸುಧೆಯಲ್ಲಿ ಹೇಳಿದ್ದನ್ನೂ ಕೂಡ ಈಗ ವಿವರಿಸುತ್ತಿದ್ದಾರೆ. ಹೇತುವಿನಲ್ಲಿ ಮಾಯಾವಾದಿಗಳು ಹೇಳಿದ ದಲಕೃತ್ಯವಿಚಾರವನ್ನು 'ಪ್ರಭಾ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡಿದ್ದಾರೆ.

ಸೂತ್ರದಲ್ಲಿ 'ಭಾವೇ' ಎಂಬ ಸಪ್ತಮ್ಯಂತದ ಪದದ ಜೊತೆ, 'ಭಾವಾತ್' ಎಂಬ ಪಂಚಮ್ಯಂತ ಪದವನ್ನು ವಿವಕ್ಷಿಸಬೇಕು. 'ಉಪಲಬ್ಧೇಃ' ಎಂಬ ಪಂಚಮ್ಯಂತ ಶಬ್ದದ ಜೊತೆ 'ಉಪಲಬ್ಧೌ' ಎಂಬ ಸಪ್ತಮ್ಯಂತ ಪದವನ್ನು ವಿಭಕ್ತಿ ವಿಪರಿಣಾಮ ಮಾಡಿ ವಿವಕ್ಷಿಸಬೇಕೆಂದು 'ವಿಭಕ್ತಿ' ಎಂಬುದರಿಂದ ತಿಳಿಸಿದ್ದಾರೆ.

**प्रकाशः** – एतेन ''सूत्राक्षराणामार्जवानार्जवादिचिन्ता शिष्यैरेव क्रियताम्'' इति सुधा विवृता । शुद्धस्य विशिष्टस्येति भामतीभाष्ययोर्मतभेदेनोक्तमाह – **यच्चेति**।।

ಇದರಿಂದ 'ಸೂತ್ರಾಕ್ಷರಾಣಾಮಾರ್ಜವಾನಾರ್ಜವಾದಿಚಿಂತಾ ಶಿಷ್ಯೈರೇವ ಕ್ರಿಯತಾಮ್' ಸೂತ್ರದ ಅಕ್ಷರಗಳ ಸಾಮಂಜಸ್ಯ ಹಾಗೂ ಅಸಾಮಂಜಸ್ಯಗಳನ್ನು ಶಿಷ್ಯರೇ ಸ್ವತಃ ಊಹಿಸಬೇಕು ಎಂಬ ನ್ಯಾಯಸುಧೆಯ ವಾಕ್ಯವನ್ನು ವಿವರಿಸಿದಂತಾಯಿತು. ಏಕೆಂದರೆ ಗ್ರಂಥಕಾರರು ಸೂತ್ರಾಕ್ಷರದ ಸ್ವಾರಸ್ಯಾಸ್ವರಸ್ಯಗಳನ್ನು ಪ್ರದರ್ಶನ

ಮಾಡಿರುತ್ತಾರೆ. ಶುದ್ಧ ಬ್ರಹ್ಮ ಹಾಗೂ ವಿಶಿಷ್ಟಬ್ರಹ್ಮ ಎಂಬುದಾಗಿ ಭಾಮತಿ ಹಾಗೂ ಭಾಷ್ಯಗಳಲ್ಲಿ ಮತವೈಲಕ್ಷಣ್ಯವಿದೆ. ಅದನ್ನೇ 'ಯಚ್ಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

**प्रकाशः – भावाच्चेति** ।। कारणस्य कार्यादनन्यत्वमिति योज्यम् । ''सत्त्वाच्चावरस्य'' इत्येतदर्थं प्रत्याह **– यच्चेति** ।। तत्वप्रदीपोक्तदोषमाह **– अनृतत्वेति** ।। नच व्यतिरेकेणानृतत्वमिति वाच्यम् । ''नेहनान'' इत्यादिबोधितस्वरूपानृतत्वानापत्तेरिति भावः । यद्वा प्राक् सत्त्वे त्वदभिप्रेतसदसद्विलक्षणत्वरूपानृतत्वायोगादित्यर्थः ।

'ಭಾವಾಚ್ಚ' ಎಂಬಲ್ಲಿ ಕಾರಣವು ಕಾರ್ಯಕ್ಕಿಂತ ಅಭಿನ್ನವಾಗಿದೆ ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು. 'ಸತ್ತ್ವಾಚ್ಚಾವರಸ್ಯ' ಎಂಬ ಸೂತ್ರದ ವ್ಯಾಖ್ಯಾನವನ್ನು 'ಯಚ್ಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡಿದ್ದಾರೆ. ತತ್ವಪ್ರದೀಪದಲ್ಲಿ ತ್ರಿವಿಕ್ರಮಪಂಡಿತರು ಹೇಳಿರುವ ದೋಷವನ್ನು 'ಅನೃತತ್ವ' ಎಂಬ ವಾಕ್ಯದಿಂದ ತೋರಿಸಿದ್ದಾರೆ. ವ್ಯತಿರೇಕದಿಂದ ಅನೃತತ್ವವನ್ನು ಹೇತುವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ನೇಹನಾನಾ' ಎಂಬ ಶ್ರುತಿಯಿಂದ ತಿಳಿಯಲ್ಪಟ್ಟ ಸ್ವರೂಪಾನೃತತ್ವವೇ ಅಯುಕ್ತವಾಗುತ್ತದೆ. ಅಥವಾ ಸತ್ವವನ್ನು ಒಪ್ಪಿದರೆ ನಿನಗೆ ಅಭಿಪ್ರೇತವಾದ ಸದಸದ್ವಿಲಕ್ಷಣತ್ವರೂಪವಾದ ಅನೃತತ್ವವನ್ನು ಹೇಳಲು ಸಾಧ್ಯವಿಲ್ಲ ಎಂದಭಿಪ್ರಾಯ.

**प्रकाशः – स्वयमाह – चशब्देति** ।। मम तु ''तदधीनस्य साधनस्य सत्त्वादेवाद्ध्य इत्यादिवचनम् । नतु स्वतन्त्रस्य'' इति तत्वप्रदीपोक्तरीत्याऽवधारणार्थत्वमिति भावः । त्वन्मतेऽपि तदर्थत्वे कृत्यं नास्ति ।

ಅದ್ವೈತಿಗಳಲ್ಲಿ 'ಸತ್ತ್ವಾಚ್ಚಾವರಸ್ಯ' ಎಂಬ ಸೂತ್ರದಲ್ಲಿರುವ 'ಚ'ಶಬ್ದಕ್ಕೆ ಅಸ್ವಾರಸ್ಯವಿದೆ. ಆದರೆ ನಮ್ಮ ಮತದ ಪ್ರಕಾರ ಈ ಅಸ್ವಾರಸ್ಯವಿಲ್ಲ. ಏಕೆಂದರೆ 'ತದಧೀನಸ್ಯ ಸಾಧನಸ್ಯ ಸತ್ತ್ವಾದೇವಾಧ್ಯ ಇತ್ಯಾದಿವಚನಮ್। ನತು ಸ್ವತಂತ್ರಸ್ಯ' ಎಂಬುದಾಗಿ ತತ್ವಪ್ರದೀಪದಲ್ಲಿ ಹೇಳಿದಂತೆ 'ಚ'ಶಬ್ದವು ಅವಧಾರಣಾರ್ಥವಾಗಿದೆ. ಅದ್ವೈತಿಗಳಾದ ನೀವೂ ಕೂಡ ಅವಧಾರಣಾರ್ಥದಲ್ಲಿ 'ಚ'ಶಬ್ದವನ್ನು ಹೇಳಲು ಸಾಧ್ಯವೇ ಇಲ್ಲ. ಏಕೆಂದರೆ ಆ ಅರ್ಥದಲ್ಲಿ ಯಾವುದೇ ಕೃತ್ಯವೇ ಇಲ್ಲ.

**प्रकाशः** – ''इतश्च कारणात्कार्यस्यानन्यत्वम्'' इत्यादिना त्वद्भाष्ये समुच्चयत्वेन व्याख्यानाच्चेति भावः ।। **अद्यापीति** ।। अन्यथाऽन्योन्याश्रयादिति भावः। ''असद्व्यपदेशान्नेति चेन्न धर्मान्तरेण वाक्यशेषात्'' इत्येतदर्थमनूद्य निराह **– यच्चेति** ।।

'ಇತಶ್ಚ ಕಾರಣಾತ್ಕಾರ್ಯಸ್ಯಾನನ್ಯತ್ವಮ್' ಇನ್ನೊಂದು ಕಾರಣದಿಂದಲೂ ಕೂಡ ಕಾರ್ಯವು ಕಾರಣಕ್ಕಿಂತ ಅಭಿನ್ನವಾಗಿದೆ ಎಂಬುದಾಗಿ ಹೇಳುವ ನಿನ್ನ ಭಾಷ್ಯದಲ್ಲಿ ಚಶಬ್ದವು ಸಮುಚ್ಚಯಾರ್ಥದಲ್ಲಿದೆ ಎಂದು ವ್ಯಾಖ್ಯಾನ ಮಾಡಲಾಗಿದೆ. ಆದ್ದರಿಂದ ಅವಧಾರಣಾರ್ಥದಲ್ಲಿ 'ಚ'ಶಬ್ದವಿದೆ ಎಂದು ನಿಮಗೆ

ಹೇಳಲು ಸಾಧ್ಯವಿಲ್ಲ. 'ಅದ್ಯಾಪಿ ಅಸಿದ್ಧೇಃ' ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಕಾರ್ಯಕಾರಣಭೇದವು ಇನ್ನೂ ಕೂಡ ಸಿದ್ಧವಾಗಿಲ್ಲ. ಒಂದು ವೇಳೆ ಸಿದ್ಧವಾಗಿದ್ದಲ್ಲಿ ಅನ್ಯೋನ್ಯಾಶ್ರಯದೋಷವು ಬರುತ್ತದೆ ಎಂದಭಿಪ್ರಾಯ. 'ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್' ಎಂಬ ಸೂತ್ರದ ಅರ್ಥವನ್ನು ಅನುವಾದ ಮಾಡಿ 'ಯಚ್ಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः** – व्यक्तत्वरूपधर्मान्तरेणैवासत्त्वम् । न स्वतः । प्रागसत्त्वेन निर्दिष्टस्यैव पुनस्तत्सदासीदिति वाक्यशेषे सत्त्वेन निर्देशादिति निरस्यत इत्यर्थः।। **अस्यापीति** ।। अत्र पूर्वत्र वाक्ये च ''इदम्'' इति षष्ठ्यर्थे द्वितीया । अस्याग्र इत्येवार्थ इति भावः ।।

ಪ್ರಳಯಕಾಲದಲ್ಲಿ ಯಾವುದೇ ವಸ್ತುವು ವ್ಯಕ್ತವಾಗದ ಕಾರಣ ಅಸತ್ತಾಗಿತ್ತು ಎಂಬುದಷ್ಟೇ ಶ್ರುತಿಯ ಅರ್ಥ. ಹೊರತು, ಸ್ವತಃ ಅಸದ್‌ರೂಪವಾಗಿತ್ತು ಎಂದರ್ಥವಲ್ಲ. ಏಕೆಂದರೆ ಮೊದಲು ಯಾವುದನ್ನು ಅಸತ್ ಎಂದು ನಿರ್ದೇಶ ಮಾಡಲಾಗಿದೆಯೋ, ಪುನಃ ಅದನ್ನೇ 'ಸದಾಸೀತ್' ಎಂಬ ವಾಕ್ಯಶೇಷದಿಂದ ಸತ್ತ್ವೇನ ನಿರ್ದೇಶ ಮಾಡಲಾಗಿದೆ. ಹೀಗೆ ನಾಕನೆಯ ಸೂತ್ರದಲ್ಲಿ ನಿರಾಕರಣೆ ಮಾಡಲಾಗುತ್ತದೆ ಎಂಬುದು ಈ ವಾಕ್ಯದ ಅರ್ಥ.

'ಅಸ್ಯಾಪಿ' ಎಂಬ ವಾಕ್ಯದಲ್ಲಿ ಇರುವ 'ಇದಮಗ್ರ ಆಸೀತ್' ಎಂಬಲ್ಲಿರುವ 'ಇದಮ್' ಎಂಬ ಪದವು ಷಷ್ಠ್ಯರ್ಥದಲ್ಲಿರುವ ದ್ವಿತೀಯಾಂತವಾದ ಶಬ್ದವಾಗಿದೆ. ಆಗ 'ಇದಂ ಅಗ್ರೇ' ಎಂದರೆ ಇದರ ಮೊದಲು ಎಂಬರ್ಥವು ತಿಳಿಯುತ್ತದೆ. ಈ ಪ್ರಪಂಚದ ಮೊದಲು ಯಾವುದು ಇರಲಿಲ್ಲ ಎಂದಭಿಪ್ರಾಯ.

**प्रकाशः** – **शङ्कायोगादिति** ।। अन्योन्याश्रयापत्तेरिति भावः । ''युक्तेश्शब्दान्तराच्च'' इत्येतदर्थं निराह – **यच्चेति** ।। **असदकरणादीति** ।। असन्नोत्पद्यते । असतःकरणायोगात् । सदेव घटादिकं मृदादित उत्पद्यते । कारणकार्ययोस्समवायाभावेन तादात्म्यावश्यंभावाच्चेत्यादिरादिपदार्थः । प्रागुक्तासद्व्यपदेशादन्यस्मात् ''सदेव सोम्य'' इत्येवंरूपशब्दान्तराच्चेति भावः ।।

'ಶಂಕಾಯೋಗಾತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅಸತ್ತ್ವದ ಶಂಕೆಯೇ ಬರುವುದಿಲ್ಲ. ಹಾಗೆ ಶಂಕೆ ಬರುವುದಾದಲ್ಲಿ ಅನ್ಯೋನ್ಯಾಶ್ರಯದೋಷವು ಬರುತ್ತದೆ ಎಂದಭಿಪ್ರಾಯ. 'ಯುಕ್ತೇಃ ಶಬ್ದಾಂತರಾಚ್ಚ' ಎಂಬ ಸೂತ್ರದ ಅರ್ಥವನ್ನು 'ಯಚ್ಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. 'ಅಸದಕರಣಾದಿ' ಎಂಬುದರ ಅಭಿಪ್ರಾಯ ಹೀಗಿದೆ - 'ಅಸನ್ನೋತ್ಪದ್ಯತೇ । ಅಸತಃ ಕರಣಾಯೋಗಾತ್' ಅಸತ್ತಿಗೆ ಕರಣತ್ವವು ಇಲ್ಲದ ಕಾರಣ ಉತ್ಪನ್ನವಾಗುವುದಿಲ್ಲ ಎಂಬುದು ಒಂದು ಯುಕ್ತಿ. 'ಸದೇವ ಘಟಾದಿಕಂ ಮೃದಾದಿತಃ ಉತ್ಪದ್ಯತೇ । ಕಾರಣಕಾರ್ಯಯೋಃ ಸಮವಾಯಾಭಾವೇನ ತಾದಾತ್ಮ್ಯಾವಶ್ಯಂಭಾವಾತ್' ಸತ್ಯಭೂತವಾದ ಘಟವು ಮೃತ್‌ನಿಂದಲೇ ಹುಟ್ಟುತ್ತದೆ. ಏಕೆಂದರೆ ಕಾರ್ಯಕಾರಣಗಳಿಗೆ ಸಮವಾಯಸಂಬಂಧಗಳನ್ನು ಹೇಳಲು ಸಾಧ್ಯವಿಲ್ಲದ ಕಾರಣ ತಾದಾತ್ಮ್ಯವನ್ನೇ ಹೇಳಬೇಕು ಎಂಬ ಯುಕ್ತಿಯನ್ನು ಆದಿ ಪದದಿಂದ ವಿವಕ್ಷಿಸಬೇಕು. ಹಿಂದೆ ಹೇಳಿದ 'ಅಸದ್ವ್ಯಪದೇಶಾತ್' ಎಂಬುದಕ್ಕಿಂತ ಭಿನ್ನವಾದ 'ಸದೇವ ಸೋಮ್ಯ' ಎಂಬ ಮತ್ತೊಂದು ಶ್ರುತಿಯಿರುವುದರಿಂದ ಎಂಬುದು ಅಭಿಪ್ರಾಯ.

**प्रकाशः – षष्ठेति ।।** ''संवेष्टितप्रसारित पटन्यायेनेदं कारणात्कार्यस्यानन्यत्वं प्रागुत्पत्तेस्सत्त्वं च बोध्यम् । प्राणायामेन निरुद्धाः प्राणादयो यथा तथावेतित्वया व्याख्यानादिति भावः ।। **ममेति ।।** प्रागेवैतद्व्यक्तीकृतमिति भावः ।

ಆರನೆಯ ಸೂತ್ರಕ್ಕೆ ಅದ್ವೈತಿಗಳು ಹೀಗೆ ವ್ಯಾಖ್ಯಾನ ಮಾಡಿದ್ದಾರೆ. ಮುದ್ದೆ ಮಾಡಲ್ಪಟ್ಟ ಬಟ್ಟೆಯನ್ನು ಬಿಡಿಸಿದಾಗ ಹೇಗೆ ಸ್ಪಷ್ಟವಾಗಿ ಬಟ್ಟೆಯು ತಿಳಿಯುತ್ತದೋ, ಅದರಂತೆ ಕಾರಣವು ಕಾರ್ಯಕ್ಕಿಂತ ಅಭಿನ್ನವಾಗಿದೆ. ಮತ್ತು ಉತ್ಪತ್ತಿಗಿಂತ ಮೊದಲೂ ಕೂಡ ಸತ್ಯವಾಗಿದೆ. ಪ್ರಾಣಾಯಾಮದಿಂದ ಹಿಡಿಯಲ್ಪಟ್ಟ ಪ್ರಾಣ ವಾಯು ಮೊದಲಾದವು ಉಸಿರಾಟವಾಡುವಾಗ ಹೇಗೆ ದೇಹದಲ್ಲೆಲ್ಲಾ ವ್ಯಾಪ್ತವಾಗುತ್ತವೋ, ಅದರಂತೆ ಎಂಬುದಾಗಿ ಅದ್ವೈತಿಗಳು ವ್ಯಾಖ್ಯಾನ ಮಾಡಿದ್ದಾರೆ. ಇದು 'ಷಷ್ಠೇ' ಇತ್ಯಾದಿ ವಾಕ್ಯದ ಅಭಿಪ್ರಾಯ. ನಮ್ಮ ಪ್ರಕಾರ ಈ ದೋಷ ಇಲ್ಲ ಎಂಬುದನ್ನು ಈ ಹಿಂದೆಯೇ ಸ್ಪಷ್ಟಪಡಿಸಿದ್ದಾಗಿದೆ.

### ರಾಮಾನುಜರ ಸೂತ್ರವ್ಯಾಖ್ಯಾನ ಹಾಗೂ ನಿರಾಕರಣೆ

## तात्पर्यचन्द्रिका

**केचित्तु सूक्ष्माव्यक्तादिविशिष्टस्य कारणस्य ब्रह्मणः स्थूलमहदादिविशिष्टेन कार्येण ब्रह्मणाऽनन्यत्वमत्रोच्यत इत्याहुः ।**

ರಾಮಾನುಜರು ಆರಂಭಣಾಧಿಕರಣದ ಸೂತ್ರಗಳಿಗೆ ಹೀಗೆ ವ್ಯಾಖ್ಯಾನ ಮಾಡುತ್ತಾರೆ - ಮೊದಲು 'ತದನನ್ಯತ್ವಂ ಆರಂಭಣತ್ವಂ ಶಬ್ದಾದಿಭ್ಯಃ ಎಂಬ ಮೊದಲನೆಯ ಸೂತ್ರದ ವ್ಯಾಖ್ಯಾನವನ್ನು ಹೀಗೆ ಹೇಳಿದ್ದಾರೆ - ಸೂಕ್ಷ್ಮನಾದ ಅವ್ಯಕ್ತಾದಿ ವಿಶಿಷ್ಟನಾದ ಕಾರಣನಾದ ಬ್ರಹ್ಮನು ಸ್ಥೂಲನಾದ ಮಹದಾದಿ ವಿಶಿಷ್ಟನಾದ ಕಾರ್ಯರೂಪನಾದ ಬ್ರಹ್ಮನಿಂದ ಅಭಿನ್ನನಾಗಿದ್ದಾನೆ. ಇದನ್ನು ಈ ಸೂತ್ರ ಹೇಳುತ್ತಿದೆ ಎಂದು.

**तन्न । शुद्धाचेतनात्मकस्य विशिष्टरूपकार्यगतस्य विशेषणांशस्य महदादेर्विशिष्टचेतनकार्यत्वाभावेन विशिष्टब्रह्माभेदाभावात् ''इदं सर्वं यदयमात्मा सर्वं खल्विदं ब्रह्म'' इत्यादि श्रुत्यनिर्वाहात् । सर्वान्तर्यामित्वादिनैव तन्निर्वाहे च किं विशिष्टाभेदः युत्पादनेन ।**

ವಿಶಿಷ್ಟಾದ್ವೈತಿಗಳ ಈ ವ್ಯಾಖ್ಯಾನವು ತಪ್ಪು. ಅದು ಹೀಗೆ - ಚೇತನದಿಂದ ಮಿಶ್ರಣವಾಗದ ಅಚೇತನಸ್ವರೂಪವಾದ ವಿಶಿಷ್ಟವೆಂಬ ಕಾರ್ಯದಲ್ಲಿರುವ ವಿಶೇಷಣಸ್ವರೂಪವಾದ ಮಹದಾದಿ ತತ್ವಗಳು ವಿಶಿಷ್ಟಚೇತನದ ಕಾರ್ಯವಾಗಲು ಸಾಧ್ಯವಿಲ್ಲ. ಆದ್ದರಿಂದ ವಿಶಿಷ್ಟಬ್ರಹ್ಮನಿಂದ ಅಭೇದವೇ ಸಾಧ್ಯವಿಲ್ಲ. ಹೀಗಿರುವಾಗ 'ಇದಂ ಸರ್ವಂ ಯದಯಮಾತ್ಮಾ ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ಶ್ರುತಿಯನ್ನು ನಿರ್ವಹಣೆ ಮಾಡಿದಂತೆಯೂ ಕೂಡ ಆಗಲಿಲ್ಲ. ವಿಶಿಷ್ಟಾದ್ವೈತಿಗಳು 'ಇದಂ ಸರ್ವಂ

ಯದಯಮಾತ್ಮಾ ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯನ್ನು ನಿರ್ವಹಣೆ ಮಾಡುವುದಕ್ಕಾಗಿ ಸೂಕ್ಷ್ಮಚಿದಚಿದ್‌ವಿಶಿಷ್ಟನಾದ ಬ್ರಹ್ಮನಿಗೆ, ಸ್ಥೂಲ ಚಿದಚಿದ್‌ವಿಶಿಷ್ಟವಾದ ಪ್ರಪಂಚದ ಜೊತೆ ಐಕ್ಯವನ್ನು ಒಪ್ಪುತ್ತಾರೆ. ಆದರೆ ಇದೇ ಸಾಧ್ಯವಿಲ್ಲವೆಂದು ಗ್ರಂಥಕಾರರು ಇಲ್ಲಿ ಸಮರ್ಥಿಸಿದ್ದಾರೆ. ಏಕೆಂದರೆ ಮಹದಾದಿ ವಿಶಿಷ್ಟ ಕಾರ್ಯದಲ್ಲಿ ವಿಶೇಷಣವಾದದ್ದು ಮಹತ್ತತ್ತ್ವ. ಇದು ಕೇವಲ ಜಡವೇ ಆಗಿದೆ. ಮತ್ತು ವಿಶಿಷ್ಟರೂಪವಾದ ಕಾರ್ಯದಲ್ಲಿ ವಿಶೇಷಣವಾಗಿದೆ. ಇದು ಚೇತನವೆಂಬ ಕಾರ್ಯರೂಪವಾಗಲು ಸಾಧ್ಯವಿಲ್ಲ. ಅಚೇತನವು ಚೇತನದ ಕಾರ್ಯವಾಗಲು ಹೇಗೆ ಸಾಧ್ಯ? ಆದ್ದರಿಂದ ವಿಶಿಷ್ಟ ಬ್ರಹ್ಮಾಭೇದವೇ ಸಿದ್ಧವಾಗದಿದ್ದಾಗ 'ಇದಂ ಸರ್ವಂ' ಎಂಬ ಶ್ರುತಿಯ ನಿರ್ವಹಣೆಯು ಹೇಗೆ ಸಾಧ್ಯವಾಗುತ್ತದೆಂಬುದು ಇದರ ಅಭಿಪ್ರಾಯ. ಬ್ರಹ್ಮನು ಸರ್ವಾಂತರ್ಯಾಮಿಯಾಗಿದ್ದಾನೆಂದು 'ಇದಂ ಸರ್ವಂ' ಎಂಬ ಶ್ರುತಿಯನ್ನು ನಿರ್ವಾಹಣೆ ಮಾಡುತ್ತೇವೆ ಎಂದು ರಾಮಾನುಜರು ಉತ್ತರಿಸಿದರೆ, ವಿಶಿಷ್ಟಾಭೇದವನ್ನೇಕೆ ಒಪ್ಪಬೇಕು? ವಿಶಿಷ್ಟಾಭೇದವನ್ನು ಒಪ್ಪದಿದ್ದರೂ ಕೂಡ ಅಂತರ್ಯಾಮಿವಿವಕ್ಷೆಯಿಂದ ಅಭೇದವನ್ನು ಹೇಳಲಾಗಿದೆಯೆಂದೇ ಶ್ರುತಿಯನ್ನು ವ್ಯಾಖ್ಯಾನ ಮಾಡಲು ಬರುತ್ತದೆ.

**किञ्च विशिष्टस्य कार्यत्वे ''तत्सृष्ट्वा तदेवानुप्राविशत्'' इत्याद्ययुक्तम् । स्वविशिष्टे स्वानुप्रवेशायोगात् ।**

ಮತ್ತು ಸ್ಥೂಲ ಮಹದಾದಿವಿಶಿಷ್ಟನಾದ ಬ್ರಹ್ಮನೇ ಕಾರ್ಯರೂಪನೆಂದು ಹೇಳಿದರೆ 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಶ್ರುತ್ಯರ್ಥವನ್ನೂ ಕೂಡ ಸ್ವರಸವಾಗಿ ಹೇಳಿದಂತಾಗುವುದಿಲ್ಲ. ಏಕೆಂದರೆ ಸ್ವವಿಶಿಷ್ಟನಲ್ಲಿ ಸ್ವಪ್ರವೇಶವು ಅನುಚಿತವಾಗುತ್ತದೆ. ಕೇವಲ ಜಡದಲ್ಲಿ ಬ್ರಹ್ಮನು ಅಂತರ್ಯಾಮಿಯಾಗಿ ಪ್ರವೇಶ ಮಾಡಿದ್ದಾನೆಂದು ಹೇಳಬಹುದೇ ಹೊರತು, ಮಹದಾದಿವಿಶಿಷ್ಟನಾದ ತನ್ನಲ್ಲಿ ತಾನು ಪ್ರವೇಶ ಮಾಡಿದನು ಎಂಬ ಅರ್ಥವು ಅಸ್ವರಸವಾಗಿದೆ.

**यच्चोक्तं श्रुतौ ''वाचारम्भणम्'' इत्यत्रारभ्यते आलभ्यते स्पृश्यते इत्यारम्भणं इति व्यस्तं पदम् । तथा च विकारो घटादिनामधेयं च वाचा वाक्पूर्वकजलाहरणादि-व्यवहाराय मृद्द्रव्येण स्पृश्यते । एवं च मृद्द्रव्यमेव व्यवहाराय विकारादिभाग्भवतीति श्रुत्यर्थ इति**

ರಾಮಾನುಜರು ಅದ್ವೈತಿಗಳಂತೆ 'ವಾಚಾರಂಭಣಮ್' ಎಂಬ ಶ್ರುತಿಯನ್ನೇ ವಿಷಯವಾಕ್ಯವನ್ನಾಗಿ ಪರಿಗಣಿಸಿದ್ದಾರೆ. 'ವಾಚಾರಂಭಣಮ್' ಎಂಬಲ್ಲಿ 'ಆರಭ್ಯತೇ ಇತ್ಯಾರಂಭಣಮ್' ಎಂಬ ನಿಷ್ಪತ್ತಿಯನ್ನು ಅಂಗೀಕರಿಸಿ, 'ಆಲಭ್ಯತೇ ಸ್ಪೃಶ್ಯತೇ' ಎಂಬರ್ಥವನ್ನು ಹೇಳಿರುತ್ತಾರೆ. ಆದ್ದರಿಂದ ವಿಕಾರಭೂತವಾದ ಘಟಾದಿನಾಮಧೇಯಗಳೆಲ್ಲವೂ, ವಾಚಾ = ವಾಕ್‌ಪೂರ್ವಕವಾದ ಜಲಹರಣಾದಿವ್ಯವಹಾರಕ್ಕೋಸ್ಕರ, ಆರಭ್ಯತೇ = ಮೃತ್‌ದ್ರವ್ಯದಿಂದ ಸ್ಪರ್ಶಿಸಲು ಯೋಗ್ಯವಾಗಿದೆ. ಆದ್ದರಿಂದ ಮೃತ್ ಎಂಬ ದ್ರವ್ಯವೇ ವ್ಯವಹಾರಕ್ಕೋಸ್ಕರ ವಿಕಾರಾದಿಭಾವವನ್ನು ಹೊಂದಿದೆ ಎಂಬುದನ್ನು ಶ್ರುತ್ಯರ್ಥ ಎನ್ನುತ್ತಾರೆ.

**तत्र । श्रुतौ वाक्प्रातिपदिके लक्षणायाः तृतीयाविभक्तौ चतुर्थ्यर्थतायाः आरम्भणशब्दे रलयोरभेदेनालम्भनार्थतायाः नामधेयमित्यत्र चशब्दाध्याहारस्य मृद्द्रव्येणेत्यस्याध्याहारस्य चायोगात् । मृद्द्रव्येण घटादेः स्पृश्यमानत्वोक्तया तयोर्भेदस्यैवापाताच्च ।**

ಇದು ತಪ್ಪು. ಶ್ರುತಿಯಲ್ಲಿ ವಾಕ್‌ಪ್ರತಿಪಾದಕವಾದ ಶಬ್ದಕ್ಕೆ ಲಕ್ಷಣಾವನ್ನು ಒಪ್ಪಬೇಕು. ತೃತೀಯಾವಿಭಕ್ತಿಗೆ ಚತುರ್ಥ್ಯರ್ಥತ್ವವನ್ನು ಒಪ್ಪಬೇಕು. ಆರಂಭಣ ಶಬ್ದದಲ್ಲಿ ರ ಮತ್ತು ಲಗಳಿಗೆ ಅಭೇದವನ್ನೊಪ್ಪಿ 'ಆಲಂಭಣ' ಎಂಬರ್ಥವನ್ನು ಹೇಳಬೇಕು. 'ನಾಮಧೇಯಂ' ಎಂಬಲ್ಲಿ 'ಚ' ಶಬ್ದವನ್ನು ಅಧ್ಯಾಹಾರ ಮಾಡಬೇಕು. 'ಮೃತ್‌ದ್ರವ್ಯೇಣ' ಎಂಬಲ್ಲಿಯೂ ಕೂಡ ಅಧ್ಯಾಹಾರ ಮಾಡಬೇಕು. ಇವೆಲ್ಲವೂ ಕೂಡ ಅತ್ಯಂತ ಅಯುಕ್ತವಾಗಿದೆ. ಮತ್ತು ಮೃತ್‌ದ್ರವ್ಯದಿಂದ ಘಟವು ಸ್ಪರ್ಶಿಸಲು ಯೋಗ್ಯವಾಗಿದೆ ಎಂದು ಹೇಳಿದಾಗ, ಮೃತ್ತಿಗೂ, ಘಟಕ್ಕೂ ಭೇದವನ್ನೇ ಹೇಳಿದಂತಾಯಿತು.

**यच्चोक्तम् ।। यद्यपि द्वितीये तृतीये च कार्यकारणाभेद इदं कुण्डलं हिरण्यमिति प्रतीतिरेव प्रमाणीक्रियते । नतु तृतीयं ब्रह्मजगद्विषयम् ।**

'ಭಾವೇಚೋಪಲಬ್ಧೇಃ' ಎಂಬ ಎರಡನೆಯ ಸೂತ್ರಕ್ಕೆ ಹಾಗೂ 'ಸತ್ವಾಚ್ಚಾವರಸ್ಯ' ಎಂಬ ಮೂರನೆಯ ಸೂತ್ರಕ್ಕೆ ಕಾರ್ಯಕಾರಣಭೇದದಲ್ಲಿ 'ಇದಂ ಕುಂಡಲಂ ಹಿರಣ್ಮಮ್' ಎಂಬ ಪ್ರತೀತಿಯನ್ನೇ ಪ್ರಮಾಣವನ್ನಾಗಿ ನೀಡಿದ್ದಾರೆ. ಹೊರತು, ಮೂರನೆಯ ಸೂತ್ರವು ಬ್ರಹ್ಮ ಅಥವಾ ಜಗದ್ವಿಷಯಕವೆಂದು ಅಂಗೀಕಾರ ಮಾಡಿರುವುದಿಲ್ಲ.

ವಿವರಣೆ - ಕುಂಡಲದಲ್ಲಿ ಹಿರಣ್ಮದ ಪ್ರತೀತಿ ಬರುತ್ತದೆ. ಆದರೆ ಕುಂಡಲವು ಹಿರಣ್ಮದ ಕಾರ್ಯವಾಗಿದೆ. ಆದರೂ ಕಾರಣಾಭೇದಜ್ಞಾನ ಬರುವುದರಿಂದ ಕಾರ್ಯಕಾರಣಗಳಿಗೆ ಅಭೇದವನ್ನು ಹೇಳಬೇಕು. ಜಗತ್ತೂ ಕೂಡ ಬ್ರಹ್ಮನಿಗಿಂತ ಅಭಿನ್ನವಾಗಿದೆ ಎಂಬುದಾಗಿ ಕಾರ್ಯಕಾರಣವಾಗಿರುವ ಅಭೇದವಿಷಯದಲ್ಲಿ 'ಇದಂ ಕುಂಡಲಂ ಹಿರಣ್ಮಮ್' ಎಂಬ ದೃಷ್ಟಾಂತವನ್ನೇ ಎರಡು ಸೂತ್ರಗಳಿಂದ ಅವರು ನೀಡಿದ್ದಾರೆ.

**तथापि द्वितीये सोयमिति प्रत्यभिज्ञोक्ता । तृतीये त्वयं स इत्यभिज्ञेति वा द्वितीय ऐक्यप्रतीतिरुक्ता । तृतीये त्वैक्यव्यवहार इति वा भेद इति ।**

ಎರಡು ಸೂತ್ರಗಳಲ್ಲಿ ಒಂದೇ ವಿಷಯವನ್ನು ಪ್ರತಿಪಾದನೆ ಮಾಡಿದರೆ ಪುನರುಕ್ತಿ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಎರಡನೆಯ ಸೂತ್ರದಲ್ಲಿ ಕಾರ್ಯಕಾರಣಗಳ ಅಭೇದವಿಷಯದಲ್ಲಿ 'ಸೋಯಂ' ಎಂಬ ಪ್ರತ್ಯಭಿಜ್ಞೆಯನ್ನು ಮುಂದೆ 'ಅಯಂ ಸ' ಎಂಬ ಅಭಿಜ್ಞಾನವನ್ನು ಪ್ರಮಾಣವನ್ನಾಗಿ ವಿವಕ್ಷಿಸಲಾಗಿದೆ. ಅಥವಾ ಎರಡನೆಯ ಸೂತ್ರದಲ್ಲಿ ಕಾರ್ಯಕಾರಣಗಳಿಗೆ ಬರುವ ಐಕ್ಯಪ್ರತೀತಿಯನ್ನು ವಿವಕ್ಷಿಸಿ, ಮೂರನೆಯ ಸೂತ್ರದಲ್ಲಿ ಕುಂಡಲವನ್ನೇ ಹಿರಣ್ಯವೆಂದು ವ್ಯವಹರಿಸುತ್ತಾರೆಂಬ ಐಕ್ಯವ್ಯವಹಾರವನ್ನು ವಿವಕ್ಷಿಸಲಾಗಿದೆ. ಹೀಗೆ ವಿಷಯಭೇದವಿರುವುದರಿಂದ ಸೂತ್ರದಲ್ಲೂ ಕೂಡ ಭೇದವು ಯುಕ್ತವಾಗುತ್ತದೆ. ಇಷ್ಟು ರಾಮಾನುಜರು ಮಾಡುವ ವ್ಯಾಖ್ಯಾನ.

तन्न । उद्देश्यविधेयविनिमयादिमात्रेण सूत्रभेदेऽतिप्रसङ्गात् । सूत्राक्षरास्वारस्याच्च । नहि ''भावे चोपलब्धेः'' इत्यादिशब्दात्प्रत्यभिज्ञादिर्भाति । किञ्च मद्रीत्या सूत्राणां साक्षाद्ब्रह्मविषयत्वे सम्भवत्युभाभ्यामुक्तं लौकिककुण्डलहिरण्यादिमात्रविषयत्वं न युक्तमिति ॥

॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् आरम्भणाधिकरणं सम्पूर्णम् ॥६॥

ಇದು ತಪ್ಪು. ಕೇವಲ ಉದ್ದೇಶ ವಿಧೇಯಗಳ ವಿನಿಯಮಕ್ಕೋಸ್ಕರ ಸೂತ್ರಭೇದವನ್ನು ಒಪ್ಪುವುದಾದರೆ ಅನಂತಸೂತ್ರಗಳನ್ನು ರಚನೆ ಮಾಡಬೇಕಾಗುತ್ತದೆಂಬ ಅತಿಪ್ರಸಂಗವು ಬರುತ್ತದೆ. ಮತ್ತು ನೀವು ಹೇಳಿರುವ ಸೂತ್ರಾಕ್ಷರದ ಅರ್ಥವು ಅಸ್ವರಸವಾಗಿದೆ. ಏಕೆಂದರೆ 'ಭಾವೇ ಚೋಪಲಬ್ಧೇಃ ಎಂಬುದನ್ನು ಕೇಳಿದಾಗ ಕಾರಣವನ್ನು ನೋಡಿ, ಕಾರ್ಯಕಾರಣಗಳಿಗೆ ಪ್ರತ್ಯಭಿಜ್ಞೆಯು ಬರುತ್ತಿದೆ ಎಂದು ಸರ್ವಥಾ ತಿಳಿಯುವುದಿಲ್ಲ. ಆದ್ದರಿಂದ ನಾವು ಹೇಳುವಂತೆ ಸೂತ್ರಗಳೆಲ್ಲವೂ ಸಾಕ್ಷಾತ್ ಬ್ರಹ್ಮವಿಷಯಕವಾಗಿದೆಯೆಂದೇ ಸುಲಭವಾಗಿ ಉಪಪಾದನೆ ಮಾಡಬಹುದು. ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ಹೇಳುವಂತೆ ಲೌಕಿಕವಾದ ಕುಂಡಲ, ಹಿರಣ್ಯ ಇತ್ಯಾದಿ ವಸ್ತುಗಳ ವಿಷಯಕ್ಕಾಗಿ ಸೂತ್ರವು ಹೊರಟಿದೆ ಎಂಬುದು ಅಯುಕ್ತವಾಗಿದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಆರಂಭಣಾಧಿಕರಣವು ಸಂಪೂರ್ಣವಾಯಿತು

**प्रकाशः –**

तस्मात्परमकारणाद्ब्रह्मणोऽनन्यत्वं जगत आरम्भणशब्दादिभ्यस्तदुपपादयद्भ्योऽवगम्यत'' इत्यादि रामानुजभाष्यं हृदि निधायाह – **सूक्ष्माव्यक्तादीति** ॥ **शुद्धेति** ॥ चिदमिश्रेत्यर्थः ॥ **विशिष्टेति** ॥ सूक्ष्माव्यक्तादिविशिष्टेत्यर्थः ॥

'ತಸ್ಮಾತ್ ಪರಮಕಾರಣಾತ್ ಬ್ರಹ್ಮಣೋಽನನ್ಯತ್ವಂ ಜಗತ ಆರಂಭಣಶಬ್ದಾದಿಭ್ಯಃ ತದುಪಪಾದಯದ್ಭ್ಯೋ ಅವಗಮ್ಯತೇ' ಆದ್ದರಿಂದ ಪರಮಕಾರಣನೆನಿಸಿದ ಬ್ರಹ್ಮನ ದೆಸೆಯಿಂದ ಈ ಜಗತ್ತು ಅಭಿನ್ನವಾಗಿದೆ. ಈ ವಿಷಯವು 'ವಾಚಾರಂಭಣಮ್' ಇತ್ಯಾದಿ ಶ್ರುತಿಗಳಿಂದ ಸ್ಪಷ್ಟವಾಗುತ್ತದೆ ಇತ್ಯಾದಿಯಾಗಿ ರಾಮಾನುಜ-ಭಾಷ್ಯದಲ್ಲಿ ಹೇಳಿದ್ದಾರೆ. ಇದನ್ನೇ ಮನಸ್ಸಿನಲ್ಲಿಟ್ಟುಕೊಂಡು 'ಸೂಕ್ಷ್ಮಾವ್ಯಕ್ತಾದಿ' ಇತ್ಯಾದಿ ಗ್ರಂಥವು ಹೊರಟಿದೆ. 'ಶುದ್ಧ' ಎಂಬ ಪದಕ್ಕೆ ಚೇತನದಿಂದ ಮಿಶ್ರಣವಾಗದ್ದು ಎಂದರ್ಥ. 'ವಿಶಿಷ್ಟ' ಎಂಬ ಪದಕ್ಕೆ ಸೂಕ್ಷ್ಮನಾದ ಅವ್ಯಕ್ತಾದಿ ವಿಶಿಷ್ಟನಾದವನು ಎಂದರ್ಥ.

**प्रकाशः** – इत्याद्ययुक्तमिति ।। लक्षणया तत्र विशेषणमात्रपरत्वं तु पूर्वपादान्तेऽभिहितरीत्या निरसनीयमिति भावः ।

'ಸರ್ವಂ ಖಲ್ವಿದಂ' ಎಂಬ ಶ್ರುತಿಯಲ್ಲಿ ಸೂಕ್ಷ್ಮನಾದ ಚಿದಚಿದ್‌ವಿಶಿಷ್ಟನಾದ ಬ್ರಹ್ಮನನ್ನು ವಿವಕ್ಷಿಸಬಹುದು. ಆದರೆ 'ಇದಂ ಸರ್ವಂ' ಎಂಬಲ್ಲಿ ಸ್ಥೂಲ ಚಿದಚಿದ್‌ವಿಶಿಷ್ಟನಾದ ಬ್ರಹ್ಮನನ್ನು ವಿವಕ್ಷಿಸಲು ಬರುವುದಿಲ್ಲ. ಏಕೆಂದರೆ ಪ್ರತ್ಯಕ್ಷವಾಗಿ ಈ ಜಗತ್ತೇ ಬ್ರಹ್ಮವೆಂದು ಶ್ರುತಿ ಹೇಳುತ್ತಿದೆ. ಆದ್ದರಿಂದ ಸ್ಥೂಲಚಿದಚಿದ್‌ವಿಶಿಷ್ಟನಾದ ಬ್ರಹ್ಮನಿಗೆ ಸೂಕ್ಷ್ಮ ಚಿದಚಿದ್‌ವಿಶಿಷ್ಟನಾದ ಬ್ರಹ್ಮನಿಂದ ಅಭೇದ ಹೇಳಿದ್ದು ಅಯುಕ್ತವಾಗುತ್ತದೆ. ಸ್ವವಿಶಿಷ್ಟನಲ್ಲಿ ಸ್ವಪ್ರವೇಶವು ಅನುಚಿತವಾದ್ದರಿಂದ ಕಾರ್ಯವೆನಿಸಿದ ವಿಶಿಷ್ಟದಲ್ಲಿ ವಿಶೇಷಣವೆನಿಸಿದ ಮಹದಾದಿಗಳನ್ನು ಮಾತ್ರ ನಾವು ವಿವಕ್ಷಿಸುತ್ತೇವೆ. ಅಂಥ ಮಹದಾದಿಗಳಲ್ಲಿ ಬ್ರಹ್ಮನು ಪ್ರವೇಶ ಮಾಡಿದನೆಂದು ಹೇಳಿದರೆ ಯಾವುದೇ ಅನುಪಪತ್ತಿಯು ಬರುವುದಿಲ್ಲವೆಂದು ರಾಮಾನುಜರು ಸಮರ್ಥಿಸುತ್ತಾರೆ. ಆದರೆ ಇದು ಅಯುಕ್ತವೆಂದು ಹಿಂದಿನ ಪಾದದ ಕೊನೆಯಲ್ಲಿಯೇ ನಾವು ನಿರಾಕರಣೆ ಮಾಡಿದ್ದೇವೆ. ವಿಶಿಷ್ಟವಾಚಕವಾದದ್ದು ವಿಶೇಷಣದಲ್ಲಿ ಮಾತ್ರ ಪರ್ಯವಸಾನವಾಗುತ್ತದೆಂದು ಹೇಳಿದರೆ ವಿಶೇಷ್ಯದಲ್ಲೂ ಕೂಡ ಪರ್ಯವಸಾನ ಆಗಲಿ ಎಂಬ ಅತಿಪ್ರಸಂಗ ಬರುತ್ತದೆ. ಇತ್ಯಾದಿ ದೋಷಗಳನ್ನು ಈ ಹಿಂದೆ ಹೇಳಿದ್ದೇವೆ ಎಂದಭಿಪ್ರಾಯ.

**प्रकाशः** – प्रतिज्ञाभागं निरस्य हेतुभागं निरसितुं ''आरभ्यते आलभ्यत इत्यारम्भणम्'' इत्यादि तदीयभाष्योक्तमनुवदति ।। **यच्चोक्तमिति** ।।

ಇಲ್ಲಿಯ ತನಕ ಸೂತ್ರದ ಪ್ರತಿಜ್ಞಾಭಾಗವನ್ನು ನಿರಾಕರಣೆ ಮಾಡಿದ್ದಾಯಿತು. ಈಗ ಹೇತುಭಾಗವನ್ನು ನಿರಾಕರಣೆ ಮಾಡುವುದಕ್ಕಾಗಿ 'ಆರಭ್ಯತೇ ಆಲಭ್ಯತೇ ಇತ್ಯಾರಂಭಣಮ್' ಇತ್ಯಾದಿಯಾಗಿ ರಾಮಾನುಜಭಾಷ್ಯದಲ್ಲಿ ಆರಂಭಣವೆಂಬ ಹೇತುವಾಚಕಶಬ್ದದ ಬಗ್ಗೆ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಅದನ್ನೇ 'ಯಚ್ಚೋಕ್ತಂ' ಇತ್ಯಾದಿಯಾಗಿ ಗ್ರಂಥಕಾರರು ಅನುವಾದ ಮಾಡಿದ್ದಾರೆ.

**प्रकाशः** – वाचेत्यस्य चतुर्थ्यंततामाश्रित्यार्थमाह – **वागिति** ।।स्पृश्यत इत्यस्य तात्पर्यमाह – **एवञ्चेति** ।। **प्रातिपदिकेति** ।। वाक्पूर्वकेत्यस्य लक्ष्यत्वादिति भावः।। **चतुर्थ्यर्थताया इति** ।। यद्यपि तद्भाष्ये ''वाचा वाक्पूर्वकेण व्यवहारेण हेतुनेत्यर्थ'' इत्युक्तम् । तथापि ''तस्य व्यवहारस्य सिद्ध्य'' इत्युत्तरतद्भाष्यानुरो-धादेवमाश्रीयत इति भावः ।

'ವಾಚಾ' ಎಂಬ ತೃತೀಯಾಂತವಾದ ಪದಕ್ಕೆ ಚತುರ್ಥಿಯ ಅರ್ಥವನ್ನು ಆಶ್ರಯಿಸಿ 'ವಾಕ್' ಇತ್ಯಾದಿ ಗ್ರಂಥವು ಹೊರಟಿದೆ. 'ಸ್ಪೃಶ್ಯತೇ'ಎಂಬುದರ ಅಭಿಪ್ರಾಯವನ್ನು 'ಏವಂಚ' ಎಂಬ ಗ್ರಂಥದಿಂದ ಪ್ರತಿಪಾದನೆ ಮಾಡಿದ್ದಾರೆ. 'ಮೃತ್' ಎಂಬ ವಸ್ತುವೇ ಜಲಾಹರಣ ಮೊದಲಾದ ಕಾರ್ಯಗಳಿಗೋಸ್ಕರ ಕಾರ್ಯರೂಪವನ್ನು ಹೊಂದಿದೆ ಎಂಬುದು ಇದರ ಅರ್ಥ. ಮೃತ್‌ದ್ರವ್ಯವು ವ್ಯವಹಾರಕ್ಕಾಗಿ ನಾನಾವಿಧವಾದ ವಿಕಾರಗಳನ್ನು ನಾನಾವಿಧವಾದ ಹೆಸರುಗಳನ್ನು ಪಡೆದಿದೆ.

'ವಾಚಾ' ಎಂಬಲ್ಲಿ 'ವಾಕ್' ಎಂಬ ಅರ್ಥದಲ್ಲೂ ಲಕ್ಷಣವನ್ನು ಒಪ್ಪಿ, ವಿಭಕ್ತಿಯನ್ನೂ ಕೂಡ ವ್ಯತ್ಯಾಸ ಮಾಡಬೇಕೆಂದು ಗ್ರಂಥಕಾರರು ಹೇಳಿದರು. ಏಕೆಂದರೆ 'ವಾಕ್' ಎಂಬುದರಿಂದ ಅವರು ವಾಗೇಂದ್ರಿಯವನ್ನು

ವಿವಕ್ಷಿಸಿಲ್ಲ. ವಾಕ್‌ಪೂರ್ವಕವಾದ ವ್ಯವಹಾರ ಎಂಬರ್ಥವನ್ನು ಅವರು ವಿವಕ್ಷಿಸಿದ್ದಾರೆ. ಅಜಹಲ್ಲಕ್ಷಣದಿಂದ ಬೇರೆ ಇಂದ್ರಿಯದಿಂದ ಸಾಧ್ಯವಾದ ವ್ಯವಹಾರವನ್ನೂ ಕೂಡ ವಿವಕ್ಷಿಸಲಾಗಿದೆ.

ವಾಸ್ತವಿಕವಾಗಿ ರಾಮಾನುಜಭಾಷ್ಯದಲ್ಲಿ 'ವಾಚಾ ವಾಕ್‌ಪೂರ್ವಕೇಣ ವ್ಯವಹಾರೇಣ ಹೇತುನಾ' ಎಂದರೆ ವಾಕ್‌ಪೂರ್ವಕವಾದ ವ್ಯವಹಾರದಿಂದ ಎಂಬ ಹೇತುವಿನಿಂದ ಎಂಬರ್ಥವನ್ನು ಹೇಳಿದ್ದಾರೆ. ಆದರೂ ಕೂಡ 'ತಸ್ಯ ವ್ಯವಹಾರಸ್ಯ ಸಿದ್ಧಯೇ' ಭಾಷ್ಯದಲ್ಲಿರುವ ಮುಂದಿನ ಅವರ ವಾಕ್ಯವನ್ನು ನೋಡಿದಾಗ ಚತುರ್ಥ್ಯರ್ಥವನ್ನು ಅವರು ಆಶ್ರಯಿಸುವುದು ಅನಿವಾರ್ಯ ಎಂದು ಗ್ರಂಥಕಾರರು ಇಲ್ಲಿ ವಿವಕ್ಷಿಸಿದ್ದಾರೆ.

**प्रकाशः –** सूत्र आरम्भणादिशब्देभ्य इति स्यादिति प्राचीनदूषणमत्रापि ध्येयम्। ''ऐतदात्म्यमिदं सर्वम्'' इत्यादिशब्दस्यादि पदार्थत्वेन भाषणात् ।

ಸೂತ್ರದಲ್ಲಿ ಅದ್ವೈತಿಗಳಂತೆ ಇವರೂ ಕೂಡ 'ಆರಂಭಣಾದಿಶಬ್ದೇಭ್ಯ' ಎಂದೇ ವಿವಕ್ಷಿಸಬೇಕು. ಏಕೆಂದರೆ ಆರಂಭಣಶಬ್ದದಿಂದ ವಾಚಾರಂಭಣ ಶ್ರುತಿಯನ್ನು ವಿವಕ್ಷಿಸಿ, ಆದಿಶಬ್ದದಿಂದ 'ಯದಯಮಾತ್ಮಾ' ಎಂಬ ಶಬ್ದವನ್ನು ವಿವಕ್ಷಿಸಿದ್ದರಿಂದ ಶಬ್ದ ಪದದ ಅನಂತರ ಆದಿಪದವನ್ನು ಹೇಳಿದ್ದು ಇವರ ಪ್ರಕಾರವೂ ಅಯುಕ್ತವಾಗುತ್ತದೆ. ಆದ್ದರಿಂದ ಅದ್ವೈತಿಗಳಿಗೆ ಹೇಳಿದ ಮೂರು ದೋಷಗಳು ಇವರಿಗೂ ಕೂಡ ತಪ್ಪಿದ್ದಲ್ಲ.

**प्रकाशः –** रामानुजभाष्ये हि कार्यस्य कारणानन्यत्वे कथं कारणापेक्षया कार्ये शब्दान्तरव्यवहार इत्याशङ्क्य तदुत्तरत्वेन ''भावेचोपलब्धेः । सत्त्वाच्चावरस्य'' इति सूत्रद्वयमवतार्य ''कुण्डलादिकार्यभावे च कारणभूतहिरण्यस्योपलब्धेः । इदं कुण्डलं हिरण्यमिति हिरण्यत्वेन प्रत्यभिज्ञानादित्यर्थः । अवरकार्यस्य कारणे सत्त्वाच्च । लोके सर्वमिदं घटशरावादिकं पूर्वाह्णे मृत्तिकैवासीदिति वेदेच ''सदेव सोम्येदम्'' इति व्यपदिश्यते । अतः कारणात्कार्यस्यानन्यत्वम् । कारणमेवावस्थान्तरमापन्नं कार्यमिति गीयत इति तन्निबन्धनः शब्दान्तरव्यवहारो न कारणात्कार्यस्यान्यत्व-निमित्तक'' इति सूत्रद्वयस्यार्थ उक्तः ।

ರಾಮಾನುಜಭಾಷ್ಯದಲ್ಲಿ ಎರಡನೆಯ ಹಾಗೂ ಮೂರನೆಯ ಸೂತ್ರವ್ಯಾಖ್ಯಾನವನ್ನು ಹೀಗೆ ಮಾಡಿದ್ದಾರೆ- ಕಾರ್ಯವು ಕಾರಣಕ್ಕಿಂತ ಅಭಿನ್ನವಾದರೆ ಕಾರಣಕ್ಕಿಂತ ವಿಭಿನ್ನವಾದ ವ್ಯವಹಾರವು ಕಾರ್ಯದಲ್ಲಿ ಹೇಗೆ ಯುಕ್ತವಾಗುತ್ತದೆ ? ಎಂದು ಆಶಂಕಿಸಿ, ಉತ್ತರರೂಪವಾಗಿ 'ಭಾವೇಚೋಪಲಬ್ಧೇಃ' 'ಸತ್ತ್ವಾಚ್ಚಾವರಸ್ಯ' ಎಂಬೆರಡು ಸೂತ್ರಗಳು ಹೊರಟಿವೆ ಎನ್ನುತ್ತಾರೆ. ಕುಂಡಲ ಮೊದಲಾದ ಕಾರ್ಯಪದಾರ್ಥಗಳಲ್ಲಿ ಕಾರಣೀಭೂತವಾದ ಹಿರಣ್ಯವು ಉಪಲಬ್ಧವಾಗುತ್ತಿದೆ. ಏಕೆಂದರೆ 'ಇದಂ ಕುಂಡಲಂ ಹಿರಣ್ಯಂ' ಎಂಬುದಾಗಿ ಕುಂಡಲವು ಹಿರಣ್ಯತ್ವೇನ ಪ್ರತ್ಯಭಿಜ್ಞಾಯಮಾನವಾಗಿದೆ ಎಂಬುದು 'ಭಾವೇಚೋಪಲಬ್ಧೇಃ ಎಂಬ ಸೂತ್ರದ ಅರ್ಥ.

ಮೂರನೆಯ 'ಸತ್ತ್ವಾಚ್ಚಾವರಸ್ಯ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ಅನಂತರ ಕಾಲೀನವಾದ ಕಾರ್ಯವು ಕಾರಣದಲ್ಲಿ ಅಸ್ತಿತ್ವವನ್ನು ಹೊಂದಿದೆ. ಲೋಕದಲ್ಲಿ ಹೀಗೆ ವ್ಯವಹಾರವಿದೆ -

'ಇದಂ ಘಟಶರಾವಾದಿಕಂ ಪೂರ್ವಾಹ್ನೇ ಮೃತ್ತಿಕೈವ ಆಸೀತ್' ಈ ಘಟ, ಶರಾವ ಮೊದಲಾದವು ಪೂರ್ವಾಹ್ನದಲ್ಲಿ ಮೃತ್ತಿಕೆಯೇ ಆಗಿದ್ದವು ಎಂದು. ವೇದದಲ್ಲೂ ಕೂಡ ಇಂಥ ವ್ಯವಹಾರವಿದೆ. 'ಸದೇವ ಸೋಮ್ಯ ಇದಮಗ್ರ ಆಸೀತ್' ಈ ವಸ್ತುಗಳೆಲ್ಲವೂ ಪ್ರಳಯಕಾಲದಲ್ಲಿ ಸತ್ ರೂಪದಲ್ಲಿ ಇದ್ದವು ಎಂದು. ಆದ್ದರಿಂದ ಕಾರಣಕ್ಕಿಂತ ಕಾರ್ಯವು ಅಭಿನ್ನವಾಗಿದೆ. ಹಾಗಾದರೆ ಶಬ್ದಾಂತರ ವ್ಯವಹಾರ ಏಕೆ ? ಎಂದು ಪ್ರಶ್ನಿಸಬಾರದು. ಕಾರಣವೇ ಬೇರೆ ಅವಸ್ಥೆಯನ್ನು ಹೊಂದಿದಾಗ, ಕಾರ್ಯ ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಶಬ್ದಾಂತರವ್ಯವಹಾರಕ್ಕೆ ಕಾರಣಕ್ಕಿಂತ ಕಾರ್ಯವು ಭಿನ್ನವಾಗಿದೆ ಎಂಬುದು ನಿಮಿತ್ತವಲ್ಲ. ಅವಸ್ಥಾಂತರಾಪನ್ನವೇ ನಿಮಿತ್ತ. ಹೀಗೆ ಎರಡನೆಯ ಹಾಗೂ ಮೂರನೆಯ ಸೂತ್ರಕ್ಕೆ ಅರ್ಥವನ್ನು ಹೇಳಿದ್ದಾರೆ.

**प्रकाशः** – तत्र द्वयोरैकार्थ्येनैकस्य वैयर्थ्यमाशङ्क्य सूत्रयोर्भेदस्तद्व्याख्याने साधितः । तत्प्रकारमनूद्य निराह – **यच्चेति** ।। ननु तृतीयमिति ।। परमत इवेत्यर्थः । तथात्वे ह्यर्थभेदेन द्वयमर्थवत्स्यादिति भावः । अनन्यगत्यैवमाश्रीयत इत्यत आह – **किञ्च मद्रीत्येति** ।। सूत्रान्तराणि पूर्ववन्निरसनीयानीति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**

**चन्द्रिकाप्रकाशे आरम्भणाधिकरणं सम्पूर्णम् ।।६।।**

ರಾಮಾನುಜರ ಈ ವ್ಯಾಖ್ಯಾನವೂ ಅಯುಕ್ತವಾಗಿದೆ. ಏಕೆಂದರೆ ಎರಡೂ ಸೂತ್ರಗಳು ಒಂದೇ ಅರ್ಥವನ್ನು ಪ್ರತಿಪಾದನೆ ಮಾಡಿರುವುದರಿಂದ ವೈಯರ್ಥ್ಯದೋಷವು ಬರುತ್ತದೆ. ಹೀಗೆ ಸ್ವತಃ ಅವರೇ ಆಶಂಕೆ ಮಾಡಿಕೊಂಡು, ಸೂತ್ರಗಳಲ್ಲಿ ಭೇದವನ್ನು ಸಮರ್ಥನೆ ಮಾಡಿದ್ದಾರೆ. ರಾಮಾನುಜರ ಈ ವ್ಯಾಖ್ಯಾನದ ಅಂಶವನ್ನು ಅನುವಾದ ಮಾಡಿ, ಗ್ರಂಥಕಾರರು 'ಯಚ್ಚ' ಇತ್ಯಾದಿಯಾಗಿ ನಿರಾಕರಣೆ ಮಾಡಿದ್ದಾರೆ.

ಅದ್ವೈತಿಗಳು 'ಭಾವೇಚೋಪಲಬ್ಧೇಃ ಎಂಬುದು ಕಾರ್ಯಕಾರಣಗಳ ಅಭೇದವಿಷಯಕವಾಗಿದೆ. ಸತ್ವಾಚ್ಚಾವರಸ್ಯ ಎಂಬ ಸೂತ್ರವು ಬ್ರಹ್ಮಜಗದ್ವಿಷಯಕವಾಗಿದೆ ಎನ್ನುತ್ತಾರೆ. ಆದರೆ ಇವರು ಎರಡೂ ಸೂತ್ರಗಳೂ ಕೂಡ ಕಾರ್ಯಕಾರಣಗಳಿಗೆ ಅಭೇದಪರವಾಗಿಯೇ ಇರುತ್ತವೆಂದು ಹೇಳಿದ್ದಾರೆ. ಒಂದು ವೇಳೆ ಅದ್ವೈತಿಗಳಂತೆ ಅರ್ಥವಿರೋಧವನ್ನು ಒಪ್ಪಿದ್ದರೆ ಸೂತ್ರವು ಸಾರ್ಥಕವಾಗುತ್ತಿತ್ತು. ಇದರೆ ಇವರು ಅದ್ವೈತಿಗಳಿಗಿಂತ ಹೇಯವಾಗಿ ವ್ಯಾಖ್ಯಾನ ಮಾಡಿದ್ದಾರೆ.

ಬೇರೆ ಗತಿಯಿಲ್ಲದ್ದರಿಂದ ನಾವು ವ್ಯಾಖ್ಯಾನ ಮಾಡಿದ್ದೇ ಸರಿ ಎಂದು ವಾದಿಸಿದರೆ 'ಕಿಂಚ ಮದ್ರೀತ್ಯಾ' ಎಂಬುದಾಗಿ ಉತ್ತರಿಸಿದ್ದಾರೆ. ರಾಮಾನುಜರ ಉಳಿದ ಸೂತ್ರಾರ್ಥಗಳ ನಿರಾಕರಣೆಯನ್ನು ಈ ಮಾರ್ಗದರ್ಶನದಲ್ಲಿಯೇ ಶಿಷ್ಯಂದಿರು ಸ್ವತಃ ಊಹಿಸಿಕೊಳ್ಳಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಆರಂಭಣಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ಇತರವ್ಯಪದೇಶಾಧಿಕರಣ

(೨-೧-೭)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಇತರವ್ಯಪದೇಶಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — इतरव्यपदेशाद्धिताकरणादिदोषप्रसक्तिः ॥**

'ಜೀವಾದ್ ಭವಂತಿ ಭೂತಾನಿ' ಎಂಬುದಾಗಿ ಜೀವನಿಂದಲೇ ಸಕಲ ಭೌತಿಕಪದಾರ್ಥಗಳ ಸೃಷ್ಟಿಯನ್ನು ಶ್ರುತಿ ಹೇಳುತ್ತಿದೆ. ಆದ್ದರಿಂದ ಜೀವನೇ ಜಗತ್ಕಾರಣನಾಗಬೇಕಲ್ಲವೇ ? ಹೀಗೆ ಆಕ್ಷೇಪ ಮಾಡಬಾರದು. ಜೀವನೇ ಸ್ವತಂತ್ರನಾಗಿ ಜಗತ್ಕಾರಣನಾಗುವುದಾದರೆ ತನ್ನ ಹಿತವನ್ನು ಏಕೆ ತಂದುಕೊಳ್ಳುವುದಿಲ್ಲ? ಅಹಿತವನ್ನು ಏಕೆ ಹೊಂದುತ್ತಿದ್ದಾನೆ? ಈ ಆಕ್ಷೇಪವು ಬರುವುದರಿಂದ ಜೀವನು ಸ್ವತಂತ್ರ ಕಾರಣನಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका — इतरव्यपदेशाद्धिताकरणादिदोषप्रसक्तिः ॥** इति यदि तर्हीति च शेषः । **इतरव्यपदेशात्** 'जीवाद्भवन्ति' इति श्रुतावुक्तत्वात् । स एव कर्ता नेश्वर इति यदि **हिताकरणादिदोषप्रसक्तिः** जीवनिष्ठयोः हितानाचरणाहिताचरणयोर्दोषत्वाप्रसङ्गः । जीवस्यस्वतन्त्रत्वात् ते न स्यातामिति भावः । विद्येते च ते जीवे तस्मान्न जीवः स्वतन्त्रकर्तेत्यर्थः ॥१॥

ಅರ್ಥ -- 'ಇತಿ ಯದಿ ತರ್ಹಿ' ಎಂಬ ಪದಗಳನ್ನು ಶೇಷ ಪೂರಣ ಮಾಡಿಕೊಳ್ಳಬೇಕು. 'ಜೀವಾದ್ ಭವಂತಿ' ಎಂಬ ಶ್ರುತಿಯಲ್ಲಿ ಜೀವಕರ್ತೃತ್ವವನ್ನು ಹೇಳಿರುವುದರಿಂದ ಜೀವನೇ ಸ್ವತಂತ್ರ ಕರ್ತೃವಾಗಿದ್ದಾನೆ

ಹೊರತು ಈಶ್ವರನಲ್ಲ. ಇತಿ ಯದಿ ತರ್ಹಿ = ಹೀಗೆ ಹೇಳುವುದಾದರೆ, ಹಿತಾಕರಣಾದಿ ಪ್ರಸಕ್ತಿಃ = ಹಿತವಾದದ್ದನ್ನು ಏಕೆ ಮಾಡುವುದಿಲ್ಲ. ಅಹಿತವಾದದ್ದನ್ನು ಏಕೆ ಮಾಡುತ್ತಾನೆ ? ಎಂಬ ಆಕ್ಷೇಪವು ಬರುತ್ತದೆ. ಜೀವನು ಸ್ವತಂತ್ರನಾದ್ದರಿಂದ ಈ ಎರಡು ಆಕ್ಷೇಪವು ಬರಬಾರದಿತ್ತು ಎಂದಭಿಪ್ರಾಯ. ಆದರೆ ಈ ಆಕ್ಷೇಪವು ಬರುವ ಕಾರಣ ಜೀವನಿಗೆ ಸ್ವತಂತ್ರ ಕರ್ತೃತ್ವವನ್ನು ಯಾವಾಗಲೂ ಹೇಳಬಾರದು.

### ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – जीवकर्तृत्वपक्षः श्रुतिप्राप्तो विस्तरान्निराक्रियते –**

ಅನುವಾದ - ಈ ಅಧಿಕರಣದಲ್ಲಿ ಶ್ರುತಿಯಿಂದ ತಿಳಿಯುವ ಜೀವನೇ ಕರ್ತೃವಾಗಿದ್ದಾನೆ ಎಂಬ ಆಕ್ಷೇಪವನ್ನು ವಿಸ್ತಾರವಾಗಿ ನಿರಾಕರಣೆ ಮಾಡಲಾಗುತ್ತಿದೆ.

ಪ್ರತಿಪದಾರ್ಥ -- ಈ ಅಧಿಕರಣದ ಪ್ರಮೇಯವನ್ನು ಹೇಳುತ್ತಿದ್ದಾರೆ. ಶ್ರುತಿಪ್ರಾಪ್ತಃ = ವೇದಗಳಿಂದ, ಆಪಾತಃ = ತೋರುವ ಜೀವನೇ ಜಗತ್ತಿಗೆ ಕಾರಣನಾಗಿದ್ದಾನೆ ಎಂಬ ಪಕ್ಷವು, ವಿಸ್ತರಾತ್ = ವಿವರವಾಗಿ, ನಿರಾಕ್ರಿಯತೇ = ದೂಷಿಸಲಾಗುತ್ತಿದೆ.

**भाष्यम् – ।। इतरव्यपदेशाद्धिताकरणादिदोषप्रसक्तिः ।।१।।**

**जीवकर्तृत्वे हिताकरणमहितकरणं च न स्यात् ।।१।।**

ಅನುವಾದ - ಜೀವನೇ ಜಗತ್ತಿಗೆ ಕರ್ತೃವಾಗುವುದಾದರೆ ಹಿತವಾದದ್ದನ್ನು ಪಡೆಯಲು ಅವನಿಂದ ಸಾಧ್ಯವಾಗುತ್ತಿಲ್ಲ. ಅಹಿತವಾದದ್ದನ್ನು ಬೇಡವೆಂದರೂ ಪಡೆದುಕೊಳ್ಳುತ್ತಿದ್ದಾನೆ. ತನ್ನ ಇಚ್ಛೆಗೆ ವಿಪರೀತವಾದ ಫಲವನ್ನು ಅನುಭವಿಸುತ್ತಿರುವುದರಿಂದ ಜೀವನು ಕರ್ತೃವಲ್ಲ.

ಪ್ರತಿಪದಾರ್ಥ -- ಘಟಪಟಾದಿಗಳಿಗೆ ಜೀವನೇ ಕರ್ತೃವಾಗಿದ್ದಾನೆಂದು ಅನುಭವದಿಂದ ಸಿದ್ಧವಾಗಿದೆ. ಇದರಂತೆ ಸಮಸ್ತ ಜಗತ್ತಿಗೂ ಜೀವನನ್ನೇ ಕರ್ತೃವೆಂದು ಹೇಳಬಹುದು 'ಜೀವಾದ್ಭವಂತಿ' ಇತ್ಯಾದಿ ಶ್ರುತಿಗಳು ಇದಕ್ಕೆ ಆಧಾರವಾಗಿವೆ. ಈ ಆಕ್ಷೇಪಕ್ಕೆ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಜೀವಕರ್ತೃತ್ವಪಕ್ಷೇ = ಜೀವನೇ ಜಗತ್ತಿನ ಕರ್ತೃವಾಗಿದ್ದಾನೆ ಎಂಬ ಪಕ್ಷದಲ್ಲಿ, ಹಿತಾಕರಣಮ್ = ಹಿತವಾದದ್ದನ್ನು ಮಾಡದಿರುವಿಕೆ, ಅಹಿತಕರಣಂ = ಅಹಿತವಾದ್ದನ್ನು ಮಾಡುವಿಕೆ ಮೊದಲಾದವುಗಳು, ನ ಸ್ಯಾತ್ = ಉಂಟಾಗಬಾರದು.

# ಇತರವ್ಯಪದೇಶಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – इतरव्यपदेशाद्धिताकरणादिदोषप्रसक्तिः ।।**

'ಜೀವಾದ್ ಭವಂತಿ ಭೂತಾನಿ' ಎಂಬುದಾಗಿ ಜೀವನಿಂದಲೇ ಸಕಲ ಭೌತಿಕಪದಾರ್ಥಗಳ ಸೃಷ್ಟಿಯನ್ನು ಶ್ರುತಿ ಹೇಳುತ್ತಿದೆ. ಆದ್ದರಿಂದ ಜೀವನೇ ಜಗತ್ಕಾರಣನಾಗಬೇಕಲ್ಲವೇ ? ಹೀಗೆ ಆಕ್ಷೇಪ ಮಾಡಬಾರದು. ಜೀವನೇ ಸ್ವತಂತ್ರನಾಗಿ ಜಗತ್ಕಾರಣನಾಗುವುದಾದರೆ ತನ್ನ ಹಿತವನ್ನು ಏಕೆ ತಂದುಕೊಳ್ಳುವುದಿಲ್ಲ? ಅಹಿತವನ್ನು ಏಕೆ ಹೊಂದುತ್ತಿದ್ದಾನೆ? ಈ ಆಕ್ಷೇಪವು ಬರುವುದರಿಂದ ಜೀವನು ಸ್ವತಂತ್ರ ಕಾರಣನಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – इतरव्यपदेशाद्धिताकरणादिदोषप्रसक्तिः ।।** इति यदि तर्हीति च शेषः । **इतरव्यपदेशात्** 'जीवाद्भवन्ति' इति श्रुतावुक्तत्वात् । स एव कर्ता नेश्वर इति यदि **हिताकरणादिदोषप्रसक्तिः** जीवनिष्ठयोः हितानाचरणाहिताचरणयोर्दोषत्वाप्रसङ्गः । जीवस्यस्वतन्त्रत्वात् ते न स्यातामिति भावः । विद्येते च ते जीवे तस्मान्न जीवः स्वतन्त्रकर्तेत्यर्थः ।।१।।

ಅರ್ಥ -- 'ಇತಿ ಯದಿ ತರ್ಹಿ' ಎಂಬ ಪದಗಳನ್ನು ಶೇಷ ಪೂರಣ ಮಾಡಿಕೊಳ್ಳಬೇಕು. 'ಜೀವಾದ್ ಭವಂತಿ' ಎಂಬ ಶ್ರುತಿಯಲ್ಲಿ ಜೀವಕರ್ತೃತ್ವವನ್ನು ಹೇಳಿರುವುದರಿಂದ ಜೀವನೇ ಸ್ವತಂತ್ರ ಕರ್ತೃವಾಗಿದ್ದಾನೆ

ಹೊರತು ಈಶ್ವರನಲ್ಲ. ಇತಿ ಯದಿ ತರ್ಹಿ = ಹೀಗೆ ಹೇಳುವುದಾದರೆ, ಹಿತಾಕರಣಾದಿ ಪ್ರಸಕ್ತಿಃ = ಹಿತವಾದದ್ದನ್ನು ಏಕೆ ಮಾಡುವುದಿಲ್ಲ. ಅಹಿತವಾದದ್ದನ್ನು ಏಕೆ ಮಾಡುತ್ತಾನೆ ? ಎಂಬ ಆಕ್ಷೇಪವು ಬರುತ್ತದೆ. ಜೀವನು ಸ್ವತಂತ್ರನಾದ್ದರಿಂದ ಈ ಎರಡು ಆಕ್ಷೇಪವು ಬರಬಾರದಿತ್ತು ಎಂದಭಿಪ್ರಾಯ. ಆದರೆ ಈ ಆಕ್ಷೇಪವು ಬರುವ ಕಾರಣ ಜೀವನಿಗೆ ಸ್ವತಂತ್ರ ಕರ್ತೃತ್ವವನ್ನು ಯಾವಾಗಲೂ ಹೇಳಬಾರದು.

### ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**ಭಾष्यम् – जीवकर्तृत्वपक्षः श्रुतिप्राप्तो विस्तरान्निराक्रियते –**

ಅನುವಾದ - ಈ ಅಧಿಕರಣದಲ್ಲಿ ಶ್ರುತಿಯಿಂದ ತಿಳಿಯುವ ಜೀವನೇ ಕರ್ತೃವಾಗಿದ್ದಾನೆ ಎಂಬ ಆಕ್ಷೇಪವನ್ನು ವಿಸ್ತಾರವಾಗಿ ನಿರಾಕರಣೆ ಮಾಡಲಾಗುತ್ತಿದೆ.

ಪ್ರತಿಪದಾರ್ಥ -- ಈ ಅಧಿಕರಣದ ಪ್ರಮೇಯವನ್ನು ಹೇಳುತ್ತಿದ್ದಾರೆ. ಶ್ರುತಿಪ್ರಾಪ್ತಃ = ವೇದಗಳಿಂದ, ಆಪಾತಃ = ತೋರುವ ಜೀವನೇ ಜಗತ್ತಿಗೆ ಕಾರಣನಾಗಿದ್ದಾನೆ ಎಂಬ ಪಕ್ಷವು, ವಿಸ್ತರಾತ್ = ವಿವರವಾಗಿ, ನಿರಾಕ್ರಿಯತೇ = ದೂಷಿಸಲಾಗುತ್ತಿದೆ.

**भाष्यम् – ।। इतरव्यपदेशाद्धिताकरणादिदोषप्रसक्तिः ।।१।।**

**जीवकर्तृत्वे हिताकरणमहितकरणं च न स्यात् ।।१।।**

ಅನುವಾದ - ಜೀವನೇ ಜಗತ್ತಿಗೆ ಕರ್ತೃವಾಗುವುದಾದರೆ ಹಿತವಾದದ್ದನ್ನು ಪಡೆಯಲು ಅವನಿಂದ ಸಾಧ್ಯವಾಗುತ್ತಿಲ್ಲ. ಅಹಿತವಾದದ್ದನ್ನು ಬೇಡವೆಂದರೂ ಪಡೆದುಕೊಳ್ಳುತ್ತಿದ್ದಾನೆ. ತನ್ನ ಇಚ್ಛೆಗೆ ವಿಪರೀತವಾದ ಫಲವನ್ನು ಅನುಭವಿಸುತ್ತಿರುವುದರಿಂದ ಜೀವನು ಕರ್ತೃವಲ್ಲ.

ಪ್ರತಿಪದಾರ್ಥ -- ಘಟಪಟಾದಿಗಳಿಗೆ ಜೀವನೇ ಕರ್ತೃವಾಗಿದ್ದಾನೆಂದು ಅನುಭವದಿಂದ ಸಿದ್ಧವಾಗಿದೆ. ಇದರಂತೆ ಸಮಸ್ತ ಜಗತ್ತಿಗೂ ಜೀವನನ್ನೇ ಕರ್ತೃವೆಂದು ಹೇಳಬಹುದು 'ಜೀವಾದ್ಭವಂತಿ' ಇತ್ಯಾದಿ ಶ್ರುತಿಗಳು ಇದಕ್ಕೆ ಆಧಾರವಾಗಿವೆ. ಈ ಆಕ್ಷೇಪಕ್ಕೆ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಜೀವಕರ್ತೃತ್ವಪಕ್ಷೇ = ಜೀವನೇ ಜಗತ್ತಿನ ಕರ್ತೃವಾಗಿದ್ದಾನೆ ಎಂಬ ಪಕ್ಷದಲ್ಲಿ, ಹಿತಾಕರಣಮ್ = ಹಿತವಾದದ್ದನ್ನು ಮಾಡದಿರುವಿಕೆ, ಅಹಿತಕರಣಂ = ಅಹಿತವಾದ್ದನ್ನು ಮಾಡುವಿಕೆ ಮೊದಲಾದವುಗಳು, ನ ಸ್ಯಾತ್ = ಉಂಟಾಗಬಾರದು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**ತत्वप्रकाशिका – अन्यथानुमितौ च ज्ञशक्तिवियोगादिति जीवकर्तृत्वस्य निराकरिष्यमाणत्वादेतेन शिष्टा अपरिग्रहा अपि व्याख्याता इति निराकृतत्वाच नैतदधिकरणारम्भो युक्त इत्याशङ्कापरिहारायाधिकरणार्थमाह – जीवेति ।।**

'ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್' ಎಂಬ ಸೂತ್ರದಲ್ಲಿ ಜೀವಕರ್ತೃತ್ವವನ್ನು ನಿರಾಕರಣೆ ಮಾಡುವವರಿದ್ದಾರೆ. 'ಏತೇನಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬ ಸೂತ್ರದಲ್ಲಿ ಜೀವಕರ್ತೃತ್ವವನ್ನು ಈಗಾಗಲೇ ನಿರಾಕರಣೆ ಮಾಡಿದ್ದಾಗಿದೆ. ಆದ್ದರಿಂದ ಇತರವ್ಯಪದೇಶಾಧಿಕರಣದ ಪ್ರಾರಂಭವೇ ಅನಾವಶ್ಯಕ. ಈ ಆಶಂಕೆಯ ಪರಿಹಾರಕ್ಕೋಸ್ಕರ ಈ ಅಧಿಕರಣದ ಪ್ರಮೇಯವನ್ನು ಭಾಷ್ಯದಲ್ಲಿ 'ಜೀವಕರ್ತೃತ್ವ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ವಿವರಣೆ - ಇತರವ್ಯಪದೇಶಾಧಿಕರಣದಲ್ಲಿ ಜೀವಕರ್ತೃತ್ವವನ್ನು ನಿರಾಕರಣೆ ಮಾಡಲಾಗುತ್ತದೆ. ಪರಮಾತ್ಮನೊಬ್ಬನೇ ಸ್ವತಂತ್ರನಾದ ಕರ್ತೃ. ಅವನನ್ನು ಹೊರತುಪಡಿಸಿ ಉಳಿದದ್ದರಲ್ಲಿ ಸ್ವತಂತ್ರಕರ್ತೃತ್ವ ಇಲ್ಲ ಎಂಬುದು ಈ ಅಧಿಕರಣದ ಪ್ರಮೇಯ. ಆದರೆ ಈಗಾಗಲೇ ಹಿಂದಿನ ಸೂತ್ರದಲ್ಲಿ ಮುಂದೆ ಬರುವ ಸೂತ್ರದಲ್ಲಿ ಈ ವಿಷಯವನ್ನು ಸೂತ್ರಕಾರರು ಪ್ರತಿಪಾದನೆ ಮಾಡುವುದರಿಂದ ಈ ಅಧಿಕರಣವು ಹೊರಡಬೇಕೇ ಎಂಬ ಸಂಶಯವು ಪ್ರಾರಂಭದಲ್ಲಿ ಬರುತ್ತದೆ. ಅದು ಹೀಗೆ - ಮುಂದಿನ ಸಮಯಪಾದದಲ್ಲಿ ಬರುವ ವೈಶೇಷಿಕಾಧಿಕರಣದ ಹಿಂದೆ ಅನ್ಯಥಾನುಮಿತ್ಯಧಿಕರಣವಿದೆ. ಈ ಅಧಿಕರಣದಲ್ಲಿ ಮೊದಲನೆಯ ಸೂತ್ರ 'ಅನ್ಯಾಥಾನುಮಿತೌ ಚ ಜ್ಞಶಕ್ತಿವಿಯೋಗಾತ್' ಎಂಬುದು. ಇದರ ಅರ್ಥ ಹೀಗಿದೆ - ಅನ್ಯಥಾನುಮಿತೌ - ಪುರುಷನು ಅಪ್ರಧಾನನು ಪ್ರಕೃತಿಯು ಪ್ರಧಾನವು ಎಂಬುದಾಗಿ ಹಿಂದೆ ಹೇಳಿದ್ದಕ್ಕೆ ವಿಪರೀತವಾಗಿ ಪ್ರಕೃತಿಯೇ ಅಪ್ರಧಾನವೆಂದು ಪುರುಷನು ಪ್ರಧಾನಕರ್ತೃವೆಂದು ಪುರುಷಾಶ್ಮದೃಷ್ಟಾಂತದಿಂದ ಸಾಧಿಸಲಾಯಿತು. ಆದರೂ ಕೂಡ ಪುರುಷನಿಗೆ ಅಂಗಿತ್ವವು ಕೂಡುವುದಿಲ್ಲ. ಏಕೆಂದರೆ ಜ್ಞಶಕ್ತಿವಿಯೋಗಾತ್ - ಜೀವನಿಗೆ ಶರೀರಸಂಬಂಧವನ್ನು ಹೊಂದಲು ಸ್ವತಃ ಸಾಮರ್ಥ್ಯ ಇರುವುದಿಲ್ಲ. ಆದ್ದರಿಂದ ದೃಷ್ಟಾಂತವೇ ದೊರಕದಿರುವುದರಿಂದ ಜೀವನಲ್ಲಿ ಸ್ವತಂತ್ರಕರ್ತೃತ್ವವಿಲ್ಲ ಎಂದು. ಹೀಗೆ ಈ ಸೂತ್ರದಲ್ಲಿ ಜೀವಕರ್ತೃತ್ವವನ್ನು ನಿರಾಕರಣೆ ಮಾಡುವವರಿದ್ದಾರೆ.

ಅಷ್ಟೇ ಅಲ್ಲದೆ ಇದೇ ಪಾದದ ಅಧಿಕರಣವಾದ ಅಸದಧಿಕರಣದ ಕೊನೆಯ ಸೂತ್ರದಲ್ಲಿ 'ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬ ಸೂತ್ರವಿದೆ. ಈ ಸೂತ್ರದ ಅಭಿಪ್ರಾಯ ಹೀಗಿದೆ - ಏತೇನ - ಭಾವಪದಾರ್ಥಗಳೇ ಜಗತ್ತಿಗೆ ಕಾರಣವಾಗಿದೆ ಎಂಬ ವಿಷಯದಲ್ಲಿ ದೃಷ್ಟಾಂತವುಳ್ಳ ಅನುಮಾನಪ್ರಮಾಣ ಇರುವುದರಿಂದ ಜೀವ ಪ್ರಕೃತಿ ಮೊದಲಾದವುಗಳು ಕಾರಣವೆಂಬ ವಿಷಯದಲ್ಲಿ ದೃಷ್ಟಾಂತವುಳ್ಳ ಅನುಮಾನರೂಪ ಪ್ರಮಾಣ ಇಲ್ಲದ್ದರಿಂದ ಶಿಷ್ಟಾಃ - ಹಿಂದೆ ನಿರಾಕರಿಸಲ್ಪಟ್ಟ ಅಭಾವಕರ್ತೃತ್ವವಾದವನ್ನು ಬಿಟ್ಟು ಉಳಿದ ವಾದಗಳು ಅಪರಿಗ್ರಾಹಾಃ - ವೇದವನ್ನು ಪ್ರಮಾಣವೆಂದು ಒಪ್ಪದ ಹಾಗೂ ವೇದವಿರುದ್ಧಗಳಾದ ಜಗತ್ತಿಗೆ ಕರ್ತೃವೇ ಇರುವುದಿಲ್ಲ. ಇದ್ದರೂ ಕೂಡ ಜೀವ, ಪ್ರಕೃತಿ, ಶೂನ್ಯ, ಕಾಲ, ಸ್ವಭಾವ ಮೊದಲಾದವುಗಳೇ ಕರ್ತೃವಾಗುತ್ತವೆ ಎಂಬುದಾಗಿ ಪ್ರತಿಪಾದಿಸಲ್ಪಟ್ಟ

ವಾದಗಳು ವ್ಯಾಖ್ಯಾತಾಃ - ನಿರಾಕೃತವಾದವು ಎಂದು ಈ ಸೂತ್ರದಲ್ಲಿ ಪ್ರಕೃತ್ಯಾದಿಗಳ ಜೊತೆ ಜೀವನಿಗೂ ಕೂಡ ಕರ್ತೃತ್ವವನ್ನು ಸ್ಪಷ್ಟವಾಗಿ ನಿರಾಕರಿಸಲಾಗಿದೆ. ಹೀಗೆ ಹಿಂದಿನ ಮುಂದಿನ ಸೂತ್ರಗಳಿಂದಲೇ ಜೀವಕರ್ತೃತ್ವವು ನಿರಾಕೃತವಾಗಿರಬೇಕಾದರೆ ಪುನಃ ಈ ಅಧಿಕರಣ ಏಕೆ ಹೊರಡಬೇಕು ?

**तत्वप्रकाशिका – अत्र 'जीवाद्भवन्ति भूतानि' त श्रुतिप्राप्तो जीवकर्तृत्वपक्षो निराक्रियते । उत्तरत्र तु समयप्राप्त इत्यर्थभेदः । श्रुतिप्राप्तस्य सङ्क्षेपतो निरस्तस्य वि स्तरान्निराकरणाच्चावैयर्थ्यमिति भावः । न च वाच्यं तदनन्तरमेव निराक्रियतामिति। अत्र 'यथा प्राणादिः' इत्युक्ते पुनराशङ्कोदयात्।**

ಈ ಅಧಿಕರಣದಲ್ಲಿ 'ಜೀವಾದ್ಭವಂತಿ ಭೂತಾನಿ' ಎಂಬ ಶ್ರುತಿಯಿಂದ ಪ್ರಾಪ್ತವಾದ ಜೀವಕರ್ತೃತ್ವಪಕ್ಷವನ್ನು ನಿರಾಕರಣೆ ಮಾಡಲಾಗುತ್ತದೆ. ಮುಂದಿನ ಪಾದದಲ್ಲಿ ಸಮಯಪ್ರಾಪ್ತವಾದ ಜೀವಕರ್ತೃತ್ವವನ್ನು ನಿರಾಕರಣೆ ಮಾಡಲಾಗುತ್ತದೆ. ಹೀಗೆ ಪ್ರಮೇಯದಲ್ಲಿ ಭೇದವಿರುವುದರಿಂದ ಅಧಿಕರಣವು ವ್ಯರ್ಥವಲ್ಲ. ಹಿಂದೆ ಶ್ರುತಿಪ್ರಾಪ್ತವಾದ ಜೀವಕರ್ತೃತ್ವವನ್ನು ಸಂಕ್ಷೇಪವಾಗಿ ನಿರಾಕರಣೆ ಮಾಡಿದ್ದಾರೆ. ಪ್ರಕೃತ ವಿಸ್ತಾರವಾಗಿ ನಿರಾಕರಣೆ ಮಾಡುತ್ತಿರುವುದರಿಂದಲೂ ಈ ಅಧಿಕರಣಕ್ಕೆ ವೈಯರ್ಥವಿಲ್ಲ. ಇಷ್ಟು ಸೂತ್ರಕಾರರ ಅಭಿಪ್ರಾಯ.

ವಿವರಣೆ - ತೈತ್ತಿರೀಯೋಪನಿಷತ್ತಿನಲ್ಲಿ 'ಜೀವಾದ್ಭವಂತಿ ಭೂತಾನಿ' ಇತ್ಯಾದಿ ವಾಕ್ಯಗಳನ್ನು ನೋಡಿದಾಗ ಜೀವನಿಂದಲೇ ಸಕಲ ಭೂತಗಳು ಹುಟ್ಟುತ್ತವೆ ಎಂದು ತೋರುತ್ತದೆ. ಇದರಿಂದ ಕಣ್ಣಿಗೆ ಗೋಚರವಾದ ಈ ಜಗತ್ತಿಗೆ ಜೀವನೇ ಕರ್ತೃವಾಗಿದ್ದಾನೆ ಎಂಬ ಸಂಶಯವು ಪ್ರಾಪ್ತವಾಗುತ್ತದೆ. ಇದರ ನಿರಾಕರಣೆಗಾಗಿ ಈ ಇತರವ್ಯಪದೇಶಾಧಿ-ಕರಣವು ಹೊರಟಿದೆ. ಮುಂದಿನ ಸಮಯಪಾದದಲ್ಲಿ ಶ್ರುತಿಯಿಂದ ಪ್ರಾಪ್ತವಾದ ಜೀವಕರ್ತೃತ್ವ ಪಕ್ಷದ ನಿರಾಕರಣೆ ಇರುವುದಿಲ್ಲ. ಜೀವನೇ ಕರ್ತೃ ಪ್ರಕೃತಿಯು ಅಪ್ರಧಾನಕರ್ತೃ ಎಂಬ ನಿರೀಶ್ವರಸಾಂಖ್ಯರ ಮತದ ನಿರಾಕರಣೆಗೋಸ್ಕರ 'ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್' ಎಂಬ ಸೂತ್ರವು ಹೊರಟಿರುತ್ತದೆ. ಆದ್ದರಿಂದ ಈ ಅಧಿಕರಣದಿಂದ ನಿರಾಕೃತವಾಗುವ ಆಕ್ಷೇಪವೇ ಬೇರೆ ಸಮಯಪಾದದಲ್ಲಿರುವ ಅನ್ಯಥಾನುಮಿತ್ಯಧಿಕರಣದಿಂದ ಪರಿಹಾರವಾಗುವ ಆಕ್ಷೇಪವೇ ಬೇರೆ. ಪೂರ್ವಪಕ್ಷದಲ್ಲಿ ವೈಲಕ್ಷಣ್ಯ ಇರುವುದರಿಂದ ಸಿದ್ಧಾಂತ ಪ್ರಮೇಯದಲ್ಲೂ ಕೂಡ ವೈಲಕ್ಷಣ್ಯವಿದೆ.

ಹಾಗಾದರೆ ಹಿಂದಿನ ಅಸದಧಿಕರಣದಿಂದ ಈ ಆಕ್ಷೇಪವು ಪರಿಹಾರವಾಗುತ್ತದೆ ಅಲ್ಲವೆ? ಎಂಬುದು ಮುಂದಿನ ಪ್ರಶ್ನೆ. ಆದರೆ ಅಸದಧಿಕರಣದಲ್ಲಿ ಶ್ರುತಿಪ್ರಾಪ್ತವಾದ ಜೀವಕರ್ತೃತ್ವವನ್ನು ಸಂಕ್ಷೇಪವಾಗಿ ನಿರಾಕರಣೆ ಮಾಡಿದ್ದಾರೆ. ಇದರ ಮೇಲೆ ಬರುವ ಅಧಿಕ ಆಕ್ಷೇಪದ ನಿರಾಕರಣೆ ಆ ಅಧಿಕರಣದಲ್ಲಿ ಇರುವುದಿಲ್ಲ. ಅದಕ್ಕಾಗಿ ಈ ಇತರವ್ಯಪದೇಶಾಧಿ- ಕರಣವು ಹೊರಡಲೇ ಬೇಕು. ಹೀಗೆ ಶ್ರುತಿಪ್ರಾಪ್ತವಾದ ಜೀವಕರ್ತೃತ್ವಪಕ್ಷದ ವಿಸ್ತಾರ ನಿರಾಕರಣೆಗಾಗಿ ಈ ಇತರವ್ಯಪದೇಶಾಧಿಕರಣ ಹೊರಟಿರುವುದರಿಂದ ವೈಯರ್ಥ್ಯ- ದೋಷವಿಲ್ಲ.

**तत्वप्रकाशिका – अत एवात्र विष्णोर्जगत्कारणत्वे जीवकर्तृत्वसाधक-युक्तिविरोधस्य परिहियमाणत्वादस्ति शास्त्रादिसङ्गतिः ।**

ಇತರವ್ಯಪದೇಶಾಧಿಕರಣ (೨-೧-೭)

ಹಾಗಾದರೆ ಈ ಅಧಿಕರಣವನ್ನು ಮೂರನೆಯ ಪಾದದಲ್ಲಿ ಸೇರಿಸಬೇಕಲ್ಲವೇ? ಶ್ರುತಿಪ್ರಾಪ್ತವಾದ ಜೀವಕರ್ತೃತ್ವವನ್ನು ಮೂರನೆಯ ಪಾದದಲ್ಲೇ ನಿರಾಕರಣೆ ಮಾಡಿರಿ? ಎಂದು ಪ್ರಶ್ನಿಸಬಾರದು. ಹಿಂದಿನ ಅಧಿಕರಣದಲ್ಲಿ 'ಯಥಾ ಪ್ರಾಣಾದಿಃ' ಎಂದು ಹೇಳಿದಾಗ ಬರುವ ಆಕ್ಷೇಪಕ್ಕೆ ಉತ್ತರಿಸಲು ಈ ಅಧಿಕರಣವು ಸಾರ್ಥಕ.

ಆದ್ದರಿಂದಲೇ ಈ ಅಧಿಕರಣದಲ್ಲಿ ವಿಷ್ಣುವಿಗೆ ಜಗತ್‌ಕಾರಣತ್ವವನ್ನು ಪ್ರತಿಪಾದನೆ ಮಾಡಿದಾಗ ಜೀವಕರ್ತೃತ್ವಸಾಧಕವಾದ ಯುಕ್ತಿವಿರೋಧವು ಪ್ರಾಪ್ತವಾದರೆ ಅದನ್ನು ಪರಿಹಾರ ಮಾಡಲಾಗುತ್ತಿದೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ವಿವರಣೆ - ದ್ವಿತೀಯಾಧ್ಯಾಯದ ಪ್ರಥಮಪಾದವು ಯುಕ್ತಿವಿರೋಧವನ್ನು ಪರಿಹಾರ ಮಾಡುತ್ತದೆ. ದ್ವಿತೀಯಪಾದವು ಸಮಯವಿರೋಧವನ್ನು ಪರಿಹಾರ ಮಾಡುತ್ತದೆ. ಮೂರನೆಯ ಪಾದವು ಶ್ರುತಿವಿರೋಧವನ್ನು ಪರಿಹಾರ ಮಾಡುತ್ತದೆ. ಪ್ರಕೃತ ನೀವು. 'ಜೀವಾದ್ಭವಂತಿ ಭೂತಾನಿ' ಎಂಬ ಶ್ರುತಿಯಿಂದ ಬರುವ ವಿರೋಧದ ಪರಿಹಾರಕ್ಕಾಗಿ ಈ ಅಧಿಕರಣ ಹೊರಟದೆ ಎನ್ನುವುದಾದರೆ ಇದನ್ನು ಮೂರನೇ ಪಾದದಲ್ಲಿ ಸೇರಿಸಬೇಕಲ್ಲವೆ?

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ಹಿಂದಿನ ಆರಂಭಣಾಧಿಕರಣದ ಕೊನೆಯ ಸೂತ್ರ 'ಯಥಾಪ್ರಾಣಾದಿಃ' ಎಂದು. ಈ ಸೂತ್ರದ ಅರ್ಥ ಹೀಗಿದೆ - ಹೇಗೆ ಮುಖ್ಯಪ್ರಾಣ ದೇಹ ಇಂದ್ರಿಯಗಳು ಸ್ವತಂತ್ರವಲ್ಲವೊ ಅದರಂತೆ ಪ್ರಕೃತಿಯೂ ಸ್ವತಂತ್ರವಲ್ಲ ಎಂದು. ಈ ಸೂತ್ರದ ಅರ್ಥವನ್ನು ಗಮನಿಸಿದಾಗ ಭಗವಂತನು ಮಾತ್ರ ಶರೀರದಲ್ಲಿ ಪ್ರವೇಶಿಸಿ ನಿಯಮನ ಮಾಡುತ್ತಾನೆ ಎಂಬುದು ಸೂತ್ರದ ಅಭಿಪ್ರಾಯ. ಹಾಗಾದರೆ ಜೀವನೇ ಶರೀರದಲ್ಲಿ ಪ್ರವೇಶಿಸಿ ನಿಯಮನ ಮಾಡಲಿ, ಪರಮಾತ್ಮನ ಅಗತ್ಯವೇನು? ಎಂಬ ಆಕ್ಷೇಪವು ಪ್ರಾಪ್ತವಾಗುತ್ತದೆ. ಇದಕ್ಕೆ ಉತ್ತರಿಸುವುದಕ್ಕಾಗಿ ಈ ಅಧಿಕರಣವು ಹೊರಟದೆ. ಒಂದು ವೇಳೆ ಈ ಅಧಿಕರಣದಿಂದ ಜೀವಕರ್ತೃತ್ವವನ್ನು ನಿರಾಕರಣೆ ಮಾಡದಿದ್ದರೆ ಹಿಂದಿನ ಅಧಿಕರಣ- ಪ್ರಮೇಯವೇ ಸಿದ್ಧವಾಗುತ್ತಿರಲಿಲ್ಲ. ಆದ್ದರಿಂದ ಇತರವ್ಯಪದೇಶಾಧಿಕರಣದ ಪ್ರಾರಂಭವು ಸಾರ್ಥಕವಾಗಿದೆ.

ಈ ಅಧಿಕರಣಕ್ಕೆ ಈ ಪಾದದಲ್ಲಿ ಅಂತರ್ಭಾವಸಂಗತಿಯು ಇರುತ್ತದೆ. ವಿರೋಧವನ್ನು ಪರಿಹರಿಸುತ್ತಿರುವುದರಿಂದ ಅಧ್ಯಾಯದಲ್ಲಿ ಅಂತರ್ಭಾವವನ್ನು ಹೊಂದಿದೆ. ಹಾಗೂ ಶಾಸ್ತ್ರದಲ್ಲಿಯೂ ಅಂತರ್ಭಾವವನ್ನು ಹೊಂದಿದೆ ಎಂಬುದಾಗಿ ಪಾದಸಂಗತಿ, ಅಧ್ಯಾಯಸಂಗತಿ, ಶಾಸ್ತ್ರಸಂಗತಿಯನ್ನು ತಿಳಿಯಬೇಕು.

**ತत्वप्रकाशिका – विष्णोर्जगत्स्रष्टृत्वादिकमुक्तम् । तस्य च जीवकर्तृत्व साधकयुक्तिविरोधे लक्षणत्वायोगात् स निराकार्य एव । तज्जगत्कर्तृत्वादिविषयः। विष्णोर्युक्तमयुक्तं वेति सन्देहः ।**

ವಿಷ್ಣುವೇ ಸಮಸ್ತ ಜಗತ್ತಿಗೆ ಕಾರಣನಾಗಿದ್ದಾನೆಂದು ಜನ್ಮಾಧಿಕರಣದಲ್ಲಿ ಸಮರ್ಥನೆ ಮಾಡಿದ್ದಾಯಿತು. ಇದಕ್ಕೆ ಜೀವಕರ್ತೃತ್ವ ಸಾಧಕವಾದ ಯುಕ್ತಿಯ ವಿರೋಧವು ಬರುತ್ತದೆ. ಆದ್ದರಿಂದ ಜಗತ್‌ಸ್ರಷ್ಟೃತ್ವವು ವಿಷ್ಣುವಿನ ಲಕ್ಷಣವೆಂದು ಹೇಳುವುದು ಯುಕ್ತವಾಗುವುದಿಲ್ಲ. ಹಾಗಾಗಿ ಜೀವಕರ್ತೃತ್ವಯುಕ್ತಿಯನ್ನು

ನಿರಾಕರಣೆ ಮಾಡಲೇಬೇಕು. ಈ ಅಧಿಕರಣದಲ್ಲಿ ಜಗತ್‌ಕರ್ತೃತ್ವವೇ ವಿಷಯವಾಗಿದೆ. ವಿಷ್ಣುವಿನಲ್ಲಿ ಈ ಲಕ್ಷಣವು ಯುಕ್ತವಾಗುತ್ತದೋ ಇಲ್ಲವೋ? ಎಂಬುದು ಸಂದೇಹವಾಗಿದೆ.

**तत्वप्रकाशिका – श्रुतिविप्रतिपत्तिः श्रुत्यनुभवविप्रतिपत्तिर्वा सन्देहबीजम्। न विष्णोर्जगत्कर्तृत्वं युक्तमिति पूर्वः पक्षः । जीवस्यैव कर्तृत्वानुभवात् । स हि यत्कार्यमारभते तत्समापयतीत्युनुभूयते । न चायमनुभवो भ्रान्तः । बाधकाभावात्।**

ಶ್ರುತಿಗಳಲ್ಲಿರುವ ವಿಪ್ರತಿಪತ್ತಿ ಹಾಗೂ ಶ್ರುತಿ ಮತ್ತು ಅನುಭವಗಳಲ್ಲಿರುವ ವಿಪ್ರತಿಪತ್ತಿಯು ಸಂದೇಹಕ್ಕೆ ಕಾರಣವಾಗಿದೆ. ವಿಷ್ಣುವಿನಲ್ಲಿ ಜಗತ್‌ಕರ್ತೃತ್ವವು ಯುಕ್ತವಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ಏಕೆಂದರೆ ಕರ್ತೃತ್ವವು ಜೀವನಲ್ಲೇ ಅನುಭವಸಿದ್ಧವಾಗಿದೆ. ಜೀವನು ಯಾವ ಕಾರ್ಯವನ್ನು ಪ್ರಾರಂಭ ಮಾಡುತ್ತಾನೋ ಅದನ್ನು ತಾನೇ ಮುಕ್ತಾಯ ಮಾಡುತ್ತಾನೆಂಬ ಅನುಭವವಿದೆ. ಈ ಅನುಭವವನ್ನು ಭ್ರಾಂತಿ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಯಾವುದೇ ಬಾಧಕವಿಲ್ಲ.

ವಿವರಣೆ - 'ಯತೋವಾ ಇಮಾನಿ ಭೂತಾನಿ ಜಾಯಂತೇ' ಎಂಬ ತೈತ್ತಿರೀಯೋಪನಿಷತ್ತಿನ ಒಂದು ವಾಕ್ಯವನ್ನು ಗಮನಿಸಿದಾಗ ವಿಷ್ಣುವೇ ಜಗತ್ತಿಗೆ ಕಾರಣನಾಗಿದ್ದಾನೆಂದು ತಿಳಿಯುತ್ತದೆ. 'ಜೀವಾದ್ ಭವಂತಿ ಭೂತಾನಿ' ಎಂಬ ಮತ್ತೊಂದು ವಾಕ್ಯವನ್ನು ನೋಡಿದಾಗ ಜೀವನೇ ಜಗತ್ತಿಗೆ ಕಾರಣನಾಗಿದ್ದಾನೆ ಎಂದು ತಿಳಿಯುತ್ತದೆ. ಹೀಗೆ ಶ್ರುತಿಗಳಲ್ಲೇ ಪರಸ್ಪರ ವಿಪ್ರತಿಪತ್ತಿ ಇರುವುದರಿಂದ ಜೀವನು ಜಗತ್ತಿಗೆ ಕಾರಣನೋ ಅಥವಾ ವಿಷ್ಣುವೋ ? ಎಂಬ ಸಂದೇಹವು ಪ್ರಾಪ್ತವಾಗುತ್ತದೆ.

ಅಥವಾ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ಶ್ರುತಿಗಳನ್ನು ನೋಡಿದಾಗ ವಿಷ್ಣುವೇ ಜಗತ್ತಿಗೆ ಕಾರಣನಾಗಿದ್ದಾನೆಂದು ತಿಳಿಯುತ್ತದೆ. ಆದರೆ ಇದೇ ಅಧಿಕರಣದ 'ಉಪಸಂಹಾರದರ್ಶನಾನ್ನೇತಿಚೇನ್ನಕ್ಷೀರವದ್ಧಿ' ಎಂಬ ಸೂತ್ರದ ಉಪಸಂಹಾರ- ದರ್ಶನಾತ್ ಎಂಬ ಪೂರ್ವಪಕ್ಷ ಭಾಗವು ಹೇಳುವಂತೆ ಜೀವನೇ ಜಗತ್‌ಕರ್ತೃವಾಗಿದ್ದಾನೆಂದು ತಿಳಿಯುತ್ತದೆ. ಈ ಸೂತ್ರದ ಅಭಿಪ್ರಾಯ ಹೀಗಿದೆ - ಉಪಸಂಹಾರದರ್ಶನಾತ್ - ಪ್ರಾರಂಭಿಸಿದ ಕಾರ್ಯವನ್ನು ತಾನೇ ಮುಗಿಸುವುದರಿಂದ ಜೀವನೇ ಸ್ವತಂತ್ರಕರ್ತೃವಾಗಿದ್ದಾನೆಂಬುದು 'ಉಪಸಂಹಾರದರ್ಶನಾತ್' ಎಂಬ ಸೂತ್ರಭಾಗದ ಅಭಿಪ್ರಾಯ. ಈ ಅನುಭವವನ್ನು ಭ್ರಾಂತಿ ಎನ್ನಲು ಯಾವುದಾದರು ಬಾಧಕವಿರಬೇಕು. ಬಾಧಕವಿಲ್ಲದ್ದರಿಂದ ಈ ಅನುಭವವು ಯಥಾರ್ಥವೇ ಆಗಿದೆ. ಆದ್ದರಿಂದ ಜೀವನಲ್ಲೇ ಕರ್ತೃತ್ವ ಬರುತ್ತದೆಂಬ ಪೂರ್ವಪಕ್ಷವು ದೃಢವಾಯಿತು.

**तत्वप्रकाशिका – न च वाच्यमस्तु जीवस्य कर्तृत्वम् । तच्चेश्वप्रेरितमिति। कल्पनागौरवापत्तेः । तथा हि ईश्वरस्तावदनुपलभ्यमानो नास्त्येव स च कल्पनीयस्तस्य च जीवप्रेरकत्वं कल्पनीयमप्रामाणिकमिति जीवस्यैव स्वतन्त्रकर्तृत्वाङ्गीकारे लाघवम्।**

ಪ್ರಶ್ನೆ - ಜೀವನಲ್ಲೇ ಕರ್ತೃತ್ವವಿರಲಿ. ಈ ಕರ್ತೃತ್ವವು ಈಶ್ವರನಿಂದ ಪ್ರೇರಿತವಾಗಷ್ಟೇ ಇರುತ್ತದೆ ಎಂದು ಹೇಳಬಹುದಲ್ಲವೆ?

ಉತ್ತರ - ಇದು ತಪ್ಪು. ಹಾಗೆ ಹೇಳಿದರೆ ಕಲ್ಪನಾಗೌರವವದೋಷವು ಪ್ರಾಪ್ತವಾಗುತ್ತದೆ. ಈಶ್ವರನು ಕಾಣುತ್ತಿಲ್ಲವಾದ್ದರಿಂದ ಇರುವುದಿಲ್ಲ. ಕಾಣಸದಿರುವ ಪರಮಾತ್ಮನನ್ನು ಕಲ್ಪನೆ ಮಾಡಬೇಕು. ಅಂಥ ಕಲ್ಪಿತನಾದ ಈಶ್ವರನಲ್ಲಿ ಅಪ್ರಾಮಾಣಿಕವಾದ ಜೀವಪ್ರೇರಕತ್ವವನ್ನು ಅಂಗೀಕಾರ ಮಾಡಬೇಕು. ಹೀಗೆ ಕಲ್ಪನೆ ಮಾಡುವುದಕ್ಕಿಂತ ಪ್ರತ್ಯಕ್ಷಸಿದ್ಧನಾದ ಜೀವನಲ್ಲಿ ಸ್ವತಂತ್ರಕರ್ತೃತ್ವವನ್ನು ಅಂಗೀಕಾರ ಮಾಡುವುದರಲ್ಲಿ ಲಾಘವವಿದೆ.

ವಿವರಣೆ - ಇದೇ ಅಧಿಕರಣದ 'ದೇವಾದಿವದಪಿ ಲೋಕೇ' ಎಂಬ ಸೂತ್ರದಿಂದ ಯಾವ ಪೂರ್ವಪಕ್ಷವನ್ನು ನಿರಾಕರಣೆ ಮಾಡುವವರಿದ್ದಾರೋ ಆ ಪೂರ್ವಪಕ್ಷವನ್ನು ಇಲ್ಲಿ ಉಪಸ್ಥಾಪನೆ ಮಾಡುತ್ತಿದ್ದಾರೆ. ಜೀವನಲ್ಲಿ ಕರ್ತೃತ್ವವನ್ನು ಒಪ್ಪುವುದರಿಂದ ಕಲ್ಪನಲಾಘವವಿದೆ ಎಂಬುದಾಗಿ ನ್ಯಾಯವಿವರಣದಲ್ಲೂ ಪೂರ್ವಪಕ್ಷವನ್ನು ತೋರಿಸುತ್ತಾರೆ. ಅದನ್ನು ಕೂಡ ಪ್ರಕೃತ ವ್ಯಾಖ್ಯಾನ ಮಾಡುತ್ತಿದ್ದಾರೆ. ಈಶ್ವರನನ್ನು ಸರ್ವತ್ಮನಾ ಪರಿತ್ಯಾಗ ಮಾಡಿ ಜೀವನೊಬ್ಬನಲ್ಲೇ ಕರ್ತೃತ್ವವನ್ನು ಅಂಗೀಕಾರ ಮಾಡಬೇಕೆಂಬುದು ಪೂರ್ವಪಕ್ಷದ ಅಭಿಪ್ರಾಯ. ಇಲ್ಲದ ಈಶ್ವರನನ್ನು ಕಲ್ಪನೆ ಮಾಡಿ ಅವನಲ್ಲಿ ಅಪ್ರಾಮಾಣಿಕವಾದ ಜೀವಪ್ರೇರಕತ್ವವನ್ನು ಕಲ್ಪನೆ ಮಾಡುವುದಕ್ಕಿಂತ ಪ್ರಾಮಾಣಿಕನಾದ ಜೀವನಲ್ಲಿ ಸ್ವತಂತ್ರಕರ್ತೃತ್ವವನ್ನು ಅಂಗೀಕಾರ ಮಾಡುವುದೇ ಲಾಘವವೆಂಬುದು ಪೂರ್ವಪಕ್ಷದ ಯುಕ್ತಿ. ಸಮಸ್ತ ಜಗತ್‌ಕಾರಣತ್ವವು ಕೂಡ ಜೀವನಲ್ಲೇ ಎಂದು ಪೂರ್ವಪಕ್ಷದ ಉಪಸಂಹಾರ

**तत्वप्रकाशिका – एवं च परिदृश्यमानकार्याणां स्वतन्त्रजीवकर्तृत्वे समस्तजगतोऽपि तथात्वं सिद्ध्यति । तथाच श्रुतिः । 'जीवाद्भवन्ति भूतानि' इत्यादि । न चेश्वरविषयत्वं श्रुतेः । तस्यैवाभावात् । अतः श्रुत्यादिबलाज्जीवस्यैव स्वतन्त्रकर्तृत्वादसम्भवि जन्मादिकारणत्वलक्षणं ब्रह्मण इति प्राप्ते सिद्धान्तयत्सूत्रमुपन्यस्य व्याचष्टे – इतरेति ।।**

ಆದ್ದರಿಂದ ನಮಗೆ ಕಾಣಸುತ್ತಿರುವ ಎಲ್ಲಾ ಕಾರ್ಯಗಳಿಗೆ ಜೀವನೇ ಸ್ವತಂತ್ರಕರ್ತೃವೆಂದು ಅಂಗೀಕಾರ ಮಾಡಬೇಕಾದ್ದರಿಂದ ಕಣ್ಣಿಗೆ ಕಾಣದ ಸಮಸ್ತ ಜಗತ್ತಿಗೂ ಜೀವನೇ ಸ್ವತಂತ್ರಕರ್ತೃವೆಂದು ಅಂಗೀಕರಿಸಬೇಕು. ಈ ವಿಷಯದಲ್ಲಿ 'ಜೀವಾದ್ ಭವಂತಿ ಭೂತಾನಿ' ಇತ್ಯಾದಿ ಶ್ರುತಿಗಳು ಕೂಡ ಆಧಾರವಾಗಿವೆ.

ಈ ಶ್ರುತಿಗಳು ಈಶ್ವರ ಪರವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಈಶ್ವರನೇ ಇರುವುದಿಲ್ಲ. ಆದ್ದರಿಂದ ಶ್ರುತಿ ಅನುಭವ ಮೊದಲಾದ ಪ್ರಮಾಣಗಳ ಆಧಾರದಿಂದ ಜೀವನಲ್ಲೇ ಸ್ವತಂತ್ರಕರ್ತೃತ್ವವು ಬರುತ್ತದೆ. ಜನ್ಮಾದಿಕಾರಣತ್ವಲಕ್ಷಣವನ್ನು ವಿಷ್ಣುವಿನಲ್ಲಿ ಹೇಳಿದ್ದು ಅಸಂಭಾವಿತವಾಗುತ್ತದೆ. ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಸಿದ್ಧಾಂತಸ್ಥಾಪನೆಗಾಗಿ ಸೂತ್ರವನ್ನು ಪಠಿಸಿ 'ಇತರವ್ಯಪದೇಶಾತ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – यदि जीवकर्तृत्वस्य श्रुतौ व्यपदेशादिसिद्धत्वाज्जीवः स्वतन्त्रकर्तेत्युच्यते तर्हि तस्य हिताकरणमहितकरणं च न स्यात् । न हि स्वतन्त्रस्य ते सम्भवतः । विद्येते च ते जीवे अतोऽसौ न स्वतन्त्रकर्ता अपि तु परमेश्वर एवेति भावः ।।**

ಒಂದು ವೇಳೆ ಶ್ರುತಿಯಲ್ಲಿ ಮೇಲ್‌ನೋಟಕ್ಕೆ ಕಾಣುವ ಅರ್ಥವನ್ನು ವಿವಕ್ಷಿಸಿ ಜೀವನೇ ಸ್ವತಂತ್ರಕರ್ತೃ ಆಗಿದ್ದಾನೆಂದು ಹೇಳುವುದಾದರೆ ಆಗ ಹಿತವಾದದ್ದನ್ನು ಹೊಂದಲು ಆಗದಿರುವುದು ಅಹಿತವಾದದ್ದನ್ನು ಹೊಂದುವುದನ್ನು ಕೂಡಿಸಲು ಸಾಧ್ಯವಾಗುವುದಿಲ್ಲ. ಸ್ವತಂತ್ರನಾದ ವ್ಯಕ್ತಿಯಲ್ಲಿ ಇವೆರಡು ಅಸಂಭಾವಿತವಾಗುತ್ತದೆ. ಈ ಎರಡು ಧರ್ಮಗಳು ಜೀವನಲ್ಲಿ ಅನುಭವಸಿದ್ಧವಾಗಿರುವುದರಿಂದ ಜೀವನು ಸ್ವತಂತ್ರಕರ್ತೃವಲ್ಲ. ಪರಮಾತ್ಮನೇ ಸ್ವತಂತ್ರಕರ್ತೃವೆಂಬುದು ಸೂತ್ರದ ಅಭಿಪ್ರಾಯ.

ವಿವರಣೆ - 'ಜೀವಾದ್‌ಭವಂತಿ ಭೂತಾನಿ' ಇತ್ಯಾದಿ ಶ್ರುತಿಯನ್ನು ಮೇಲ್‌ನೋಟಕ್ಕೆ ಸಣ್ಣಪುಟ್ಟ ವಸ್ತುಗಳಿಗೆ ಜೀವನ ಕರ್ತೃತ್ವವ ಕಂಡು ಜೀವನೇ ಸಮಸ್ತ ಜಗತ್ತಿಗೆ ಸ್ವತಂತ್ರಕರ್ತೃ ಆಗಿದ್ದಾನೆಂದು ನಿರ್ಣಯಿಸುವುದಾದರೆ ಹಿತಾಕರಣ ಅಹಿತಕರಣ ಇವೆರಡು ಜೀವನಲ್ಲಿ ಇಲ್ಲದೆ ಇರಬೇಕಾದೀತು. ಪ್ರತಿಯೊಬ್ಬ ಜೀವಿಗೂ ಕೂಡ ತಾನು ಬಯಸಿದ ಸುಖವು ದೊರಕುತ್ತಿಲ್ಲ. ದುಃಖವು ಬೇಡವೆಂದರೂ ಕೂಡ ಬರುತ್ತದೆ. ಒಂದು ವೇಳೆ ಜೀವನು ಸ್ವತಂತ್ರಕರ್ತೃವಾದಲ್ಲಿ ನಿರಂತರ ತಾನು ಪೂರ್ಣಾನಂದವುಳ್ಳವನು ನಿರಂತರ ಹಿತವನ್ನೇ ಹೊಂದುವವನಾಗಬೇಕು. ಮತ್ತು ಜಗತ್ತಿನಲ್ಲಿ ಯಾರೇ ಒಬ್ಬ ಜೀವಿ ಇದ್ದರೂ ದುಃಖವನ್ನೇ ಹೊಂದಬಾರದು, ಅಹಿತವಾದದ್ದು ಯಾರಿಗೂ ಇಲ್ಲ ಎಂದಾಗಬೇಕು. ಆದರೆ ಪ್ರತಿಯೊಬ್ಬ ಜೀವಿಯಲ್ಲೂ ಹಿತಾಕರಣ ಮತ್ತು ಅಹಿತಕರಣಗಳು ಇದ್ದೇ ಇರುತ್ತವೆ. ಆದ್ದರಿಂದ ಸ್ವತಂತ್ರನಾಗಲು ಸಾಧ್ಯವಿಲ್ಲ. 'ಯತ್ರ ಸ್ವತಂತ್ರತ್ವಮ್ ತತ್ರ ಹಿತಾಕರಣ- ಅಹಿತಕರಣೇ ನಸ್ತಃ ಯತ್ರ ಹಿತಾಕರಣ ಅಹಿತಕರಣೇ ಸ್ತಃ, ನ ತತ್ರ ಸ್ವತಂತ್ರತ್ವಮ್' ಎಂಬ ವ್ಯಾಪ್ತಿಯ ಮೂಲಕ ಜೀವನು ಸ್ವತಂತ್ರಕರ್ತೃ ಅಲ್ಲ ಎಂದು ಈ ಸೂತ್ರದಿಂದ ಸಮರ್ಥನೆ ಮಾಡಲಾಗಿದೆ.

## ಬ್ರಹ್ಮಸೂತ್ರ

## सूत्रम् — अधिकं तु भेदनिर्देशात् ।।

ಬೃಹತ್ತಾದ ಪ್ರಪಂಚವನ್ನು ಸೃಷ್ಟಿ ಮಾಡುವ ಪರಮಾತ್ಮನಿಗೆ ಬಹಳಷ್ಟು ಶ್ರಮವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಇತರ ಎಲ್ಲಾ ಜೀವರಿಗಿಂತಲೂ ವಿಶಿಷ್ಟವಾದ ಗುಣಧರ್ಮಗಳನ್ನು ಪರಮಾತ್ಮನು ಪಡೆದಿರುತ್ತಾನೆ. ಅತ್ಯಧಿಕವಾದ ಶಕ್ತಿ ಇರುವುದರಿಂದ ಪ್ರಪಂಚದ ಸೃಷ್ಟಿಯು ಅವನಿಗೆ ಕೇವಲ ಲೀಲೆ.

## ಸೂತ್ರದೀಪಿಕಾ

**सूत्रदीपिका — अधिकन्तु भेदनिर्देशात् ।। तुशब्दः** जीवसाम्यव्यावर्तकः । **ब्रह्म** तु जीवापेक्षया **अधिकम्** । कुतः? 'श्रोता मन्ता' इत्यादौ श्रोतृत्वादिरूप-विशेषस्योक्तत्वादित्यर्थः ।।२।।

ಅರ್ಥ -- 'ತು' ಶಬ್ದವು ದೇವತೆಗಳ ಹಾಗೂ ಜೀವರ ಸಾಮರ್ಥ್ಯವನ್ನು ವ್ಯಾವೃತ್ತಿ ಮಾಡುತ್ತಿದೆ. ಬ್ರಹ್ಮನಾದರೂ ಜೀವನ ಅಪೇಕ್ಷೆಯಿಂದ, ಅಧಿಕಂ = ಬಹಳಷ್ಟು ಸಾಮರ್ಥ್ಯವನ್ನು ಪಡೆದಿರುತ್ತಾನೆ. ಏಕೆಂದರೆ 'ಭೇದನಿರ್ದೇಶಾತ್' = 'ಶ್ರೋತಾ ಮಂತಾ' ಇತ್ಯಾದಿಯಾಗಿ 'ಅಖಿಲಶ್ರೋತೃತ್ವ, ಅಂತರ್ಯಾಮಿತ್ವ'

ಮೊದಲಾದ ವಿಶೇಷಗಳನ್ನು ಹೇಳಲಾಗಿದೆ. ಬ್ರಹ್ಮನು ಅಧಿಕವಾದ ಶಕ್ತಿ ಉಳ್ಳವನೆಂದು ಎಲ್ಲರೂ ವೇದದಿಂದ ತಿಳಿದುಕೊಳ್ಳುತ್ತಿದ್ದಾರೆ. ಮತ್ತು ಅಂತರ್ಯಾಮಿಯಾಗಿರುವುದು ಸಿದ್ಧವಾಗಿರುವುದರಿಂದ ಮೇಲಿನ ದೋಷಗಳಿಗೆ ಅವಕಾಶವಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् –।। अधिकं तु भेदनिर्देशात् ।।२।।**

**न च ब्रह्मणः श्रमचिन्तादिदोषप्राप्तिः, अधिकशक्तित्वात् । 'श्रोता मन्ता द्रष्टाऽऽदेष्टाऽऽघोष्टा विज्ञाता प्रज्ञाता सर्वेषां भूतानामन्तरपुरुषः' (ऐ.आ.३.२.४.) 'एष त आत्मा सर्वान्तरः' (बृ.५.५.१.) 'योऽशनायापिपासे शोकं मोहं जरां मृत्युमत्येति' (बृ.५.५.१.) इत्यादिविशेषनिर्देशात् ।।२।।**

ಅನುವಾದ - ಬ್ರಹ್ಮನು ಜಗತ್ತಿಗೆ ಕರ್ತೃವಾದರೆ ಅವನಿಗೂ ಕೂಡ ಶ್ರಮ ಚಿಂತೆ ಮೊದಲಾದ ದೋಷಗಳು ಪ್ರಾಪ್ತವಾಗುತ್ತವಲ್ಲವೆ ? ಎಂದು ಪ್ರಶ್ನಿಸಬಾರದು. ಏಕೆಂದರೆ ಅವನಿಗೆ ಅಧಿಕವಾದ ಶಕ್ತಿ ಇರುತ್ತದೆ. ಹೀಗೆ ಪ್ರಮಾಣಗಳು ಪ್ರತಿಪಾದನೆ ಮಾಡುತ್ತವೆ. ಬ್ರಹ್ಮನು ಎಲ್ಲವನ್ನು ಕೇಳುವವನು, ಎಲ್ಲವನ್ನು ತಿಳಿಯುವವನು, ಎಲ್ಲವನ್ನು ನೋಡುವವನು, ಆಜ್ಞೆ ಮಾಡುವವನು, ಉಪದೇಶ ಮಾಡುವವನು, ಸರ್ವಜ್ಞನು, ವಿಶೇಷವಾಗಿ ಪ್ರತಿಯೊಂದನ್ನು ತಿಳಿಯುವವನು, ಸಕಲಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವವನು, ಆತ್ಮಶಬ್ದವಾಚ್ಯನು ಆಗಿ ಎಲ್ಲರೊಳಗೆ ನೆಲೆಸಿದ್ದಾನೆ. ಹಸಿವು, ನೀರಡಿಕೆ, ದುಃಖ, ಅಜ್ಞಾನ, ವಾರ್ಧಕ್ಯ, ಮರಣ, ಮೊದಲಾದ ದೋಷಗಳನ್ನು ದಾಟಿದ್ದಾನೆ. ಇವೇ ಮೊದಲಾದ ವಿಶೇಷಪ್ರಮಾಣಗಳ ಆಧಾರದಿಂದ ಪರಮಾತ್ಮನು ಅತ್ಯಧಿಕ ಶಕ್ತಿಯುಳ್ಳವನೆಂದು ನಿರ್ಧಾರವಾಗುತ್ತದೆ.

ಪ್ರತಿಪದಾರ್ಥ -- ಯಾವ ದೋಷಗಳ ಸಂಭಾವನೆಯಿಂದ ಜೀವನಿಗೆ ಕರ್ತೃತ್ವವನ್ನು ನಿರಾಕರಣೆ ಮಾಡಿದಿರೋ ಆ ದೋಷಗಳು ಬ್ರಹ್ಮನಲ್ಲಿಯೂ ಕೂಡ ಬರುತ್ತವೆ. ಅವನಲ್ಲಿಯೂ ಕೂಡ ಶ್ರಮಾದಿದೋಷಗಳು ಇವೆ. ಹೀಗೆ ಎರಡು ಪಕ್ಷಗಳು ಸಮಾನವಾಗಿರುವಾಗ ಜೀವಕರ್ತೃತ್ವವನ್ನೇ ಆಶ್ರಯಿಸಬಹುದಲ್ಲವೆ? ಎಂಬ ಆಶಂಕೆಗೆ ಉತ್ತರಿಸುತ್ತಿದ್ದಾರೆ. ಬ್ರಹ್ಮಣಃ = ಪರಬ್ರಹ್ಮನಿಗೆ, ಶ್ರಮಚಿಂತಾದಿದೋಷಪ್ರಾಪ್ತಿಃ = ದೇಹಶ್ರಮ, ಚಿಂತೆ, ಆಯಾಸ, ಆಲೋಚನೆ ಮೊದಲಾದ ದೋಷಗಳು, ನಚ = ಎಂದಿಗೂ ಇರುವುದಿಲ್ಲ. ಅಧಿಕಶಕ್ತಿತ್ವಾತ್ = ಅತ್ಯಧಿಕ ಶಕ್ತಿಯುಳ್ಳವನಾದ್ದರಿಂದ ಎಂಬುದಾಗಿ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಶ್ರೋತಾ = ಎಲ್ಲವನ್ನು ಕೇಳುವವನು, ಮಂತಾ = ತಿಳಿಯುವವನು, ದ್ರಷ್ಟಾ = ನೋಡುವವನು, ಆದೇಷ್ಟಾ = ಆದೇಶ ಮಾಡುವವನು, ಘೋಷ್ಟಾ = ಉಪದೇಶ ಮಾಡುವವನು, ವಿಜ್ಞಾತಾ = ಸರ್ವಜ್ಞನು, ಪ್ರಜ್ಞಾತಾ =

ಎಲ್ಲವನ್ನು ವಿಶೇಷವಾಗಿ ತಿಳಿಯುವವನು, ಸರ್ವೇಷಾಂ = ಸಕಲವಿಧವಾದ, ಭೂತಾನಾಂ = ಪ್ರಾಣಿಗಳ, ಅಂತರಪುರುಷಃ = ಅಂತರ್ಯಾಮಿಯಾಗಿರುವ ಪುರುಷನು ಆಗಿರುತ್ತಾನೆ.

ಯಃ ಏಷ ತ ಆತ್ಮಾ = ಯಾವ ಈ ಆತ್ಮನೇ, ಸರ್ವಾಂತರಃ = ಎಲ್ಲರಲ್ಲಿ ನೆಲೆಸಿರುವವನು, ಯಃ = ಯಾವ ಪರಮಾತ್ಮನು, ಅಶನಾಯಾ ಪಿಪಾಸೇ = ಹಸಿವು ನೀರಡಿಕೆ ಮೊದಲಾದ, ಶೋಕಂ = ದುಃಖಗಳನ್ನು, ಮೋಹಂ = ಅಜ್ಞಾನವನ್ನು, ಜರಾಂ = ಮುಪ್ಪನ್ನು, ಮೃತ್ಯುಮ್ = ಮರಣವನ್ನು, ಅತ್ಯೇತಿ = ದಾಟಿರುತ್ತಾನೆ, ಇತ್ಯಾದಿ = ಇವೇ ಮೊದಲಾದ, ವಿಶೇಷನಿರ್ದೇಶಾತ್ = ವಿಶೇಷವಾದ ಪ್ರಮಾಣಗಳಿರುವುದರಿಂದ ಪರಮಾತ್ಮನಲ್ಲಿ ಯಾವುದೇ ದೋಷಗಳಿಲ್ಲವೆಂದು ತಿಳಿಯುತ್ತಾರೆ.

## ತತ್ವಪ್ರಕಾಶಿಕಾ

### ಜೀವ-ಬ್ರಹ್ಮ ಇಬ್ಬರಲ್ಲೂ ದೋಷ ಸಮಾನವೆ?

**तत्वप्रकाशिका –**

**यदि यत्किञ्चिद्दोषमात्रेण जीवकर्तृता निराक्रियते तर्हि ब्रह्मणोऽपि कर्तृत्वं न प्राप्नोति । तस्यापि श्रमादिदोषनियमात् । एवं च पक्षयोः साम्येऽनुभवादिसिद्धं जीवकर्तृत्वमेवाश्रयणीयमित्याशङ्कां परिहरत्सूत्रमुपन्यस्य व्याचष्टे – अधिकमिति।।**

ಒಂದು ವೇಳೆ ಯಾವುದೋ ಒಂದು ದೋಷ ಇರುವ ಮಾತ್ರಕ್ಕೆ ಜೀವನಲ್ಲಿ ಕರ್ತೃತ್ವವನ್ನು ನಿರಾಕರಣೆ ಮಾಡುವುದಾರೆ ಬ್ರಹ್ಮನಲ್ಲೂ ಕೂಡ ಕರ್ತೃತ್ವವು ಬರುವುದಿಲ್ಲ. ಅವನಲ್ಲೂ ಶ್ರಮಾದಿದೋಷಗಳು ಪ್ರಾಪ್ತವಾಗುತ್ತವೆ. ಆದ್ದರಿಂದ ಜೀವಪಕ್ಷ ಹಾಗೂ ಬ್ರಹ್ಮಪಕ್ಷಗಳಲ್ಲಿ ದೋಷವು ಸಮಾನವಾದಂತಾಯಿತು. ಹೀಗಿರುವಾಗ ನಮ್ಮ ಅನುಭವಕ್ಕೆ ಅನುಗುಣವಾಗಿ ಜೀವನಲ್ಲೇ ಕರ್ತೃತ್ವವನ್ನು ಆಶ್ರಯಿಸಬೇಕು. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಪಠಿಸಿ 'ಅಧಿಕಂ ತು' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಹಿಂದಿನ ಸೂತ್ರದಲ್ಲಿ ಹಿತಾಕರಣ ಅಹಿತಕರಣ ದೋಷಗಳಿರುವುದರಿಂದ ಜೀವನಲ್ಲಿ ಕರ್ತೃತ್ವವನ್ನು ಒಪ್ಪಬಾರದೆಂದು ಸಮರ್ಥಿಸಲಾಯಿತು. ಹಾಗಾದರೆ ಬ್ರಹ್ಮನಲ್ಲೂ ಕೂಡ ಕರ್ತೃತ್ವವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಯಾರಲ್ಲಿ ಕರ್ತೃತ್ವವಿರುತ್ತದೊ ಅವರಲ್ಲಿ ಶ್ರಮಾದಿದೋಷಗಳು ನಿಯಮೇನ ಇದ್ದೇ ಇರುತ್ತವೆ. ಆದ್ದರಿಂದ ಜೀವನಲ್ಲಿ ಹಿತಾಕರಣ, ಅಹಿತಕರಣ ದೋಷಗಳಿರುವುದರಿಂದ ಕರ್ತೃತ್ವವನ್ನು ಒಪ್ಪಲು ಸಾಧ್ಯವಿಲ್ಲವೆಂಬುದು ಹೇಗೋ ಅದರಂತೆ ಬ್ರಹ್ಮನಲ್ಲೂ ಕೂಡ ಶ್ರಮಾದಿ ದೋಷಗಳಿರುವುದರಿಂದ ಕರ್ತೃತ್ವವನ್ನು ಒಪ್ಪಲು ಆಗುವುದಿಲ್ಲ ಎಂಬುದು ಸಮಾನವಾಗಿದೆ. ಹೀಗಿರುವಾಗ ಅನುಭವಸಿದ್ಧವಾದ ಜೀವಕರ್ತೃತ್ವಪಕ್ಷವನ್ನೇ ಆಶ್ರಯಿಸುವುದು ಸಮಂಜಸವಾಗುತ್ತದೆ. ಈ ಆಶಂಕೆಯ ಪರಿಹಾರಕ್ಕಾಗಿ 'ಅಧಿಕಂತು ಭೇದನಿರ್ದೇಶಾತ್' ಎಂಬ ಸೂತ್ರವು ಹೊರಟಿದೆ. ಸೂತ್ರದಲ್ಲಿರುವ ತು ಶಬ್ದದ ವ್ಯಾಖ್ಯಾನ

**तत्वप्रकाशिका – तुशब्दः साम्यव्यावर्तकः । भवेद् ब्रह्मप्रतिबन्धा जीवस्य कर्तृत्वसमर्थनम् । यदि ब्रह्मणि श्रमचिन्तासाधनस्मरणदुःखादिदोषा भवेयुः । न च ते तत्र सन्ति । श्रुतिषु तस्य सर्वेभ्योऽखिलश्रोतृत्वान्तर्यामि विशनायाद्यतीततत्वा द्यतिशयस्य निर्देशात् । न ह्येवं विधस्य ते दोषाः शङ्कितुमपि शक्यन्त इति भावः ।। २३ ।।**

ಸೂತ್ರದಲ್ಲಿರುವ ತು ಶಬ್ದವು ಜೀವಪಕ್ಷ ಹಾಗೂ ಬ್ರಹ್ಮಪಕ್ಷಗಳಲ್ಲಿ ದೋಷಸಾಮ್ಯವನ್ನು ವ್ಯಾವೃತ್ತಿ ಮಾಡುತ್ತಿದೆ. ಬ್ರಹ್ಮಪ್ರತಿಬಂಧಿಯಿಂದ ಜೀವನಿಗೆ ಕರ್ತೃತ್ವವನ್ನು ಸಮರ್ಥಿಸಬಹುದಿತ್ತು. ಒಂದು ವೇಳೆ ಬ್ರಹ್ಮನಲ್ಲಿ ಶ್ರಮ, ಚಿಂತೆ ಇವುಗಳಿಂದ ಉಂಟಾಗುವ ದುಃಖಾದಿದೋಷಗಳು ಇದ್ದಿದ್ದರೆ ಆಗ ಬ್ರಹ್ಮನ ಪ್ರತಿಬಂಧಿಯಿಂದ ಜೀವನ ಕರ್ತೃತ್ವವನ್ನು ಸಮರ್ಥಿಸಬಹುದಿತ್ತು. ಆದರೆ ಬ್ರಹ್ಮನಲ್ಲಿ ಶ್ರಮಾದಿ ದೋಷಗಳು ಇರಲು ಸಾಧ್ಯವಿಲ್ಲ. ಏಕೆಂದರೆ ಎಲ್ಲಾ ಶ್ರುತಿಗಳಲ್ಲಿ ಬ್ರಹ್ಮನಿಗೆ ಅಖಿಲಶ್ರೋತೃತ್ವ ಅಂತರ್ಯಾಮಿತ್ವ. ಈ ಧರ್ಮಗಳು ಉಳಿದವರೆಲ್ಲರಿಗಿಂತಲೂ ಅತ್ಯತಿಶಯವಾಗಿದೆ ಎಂದು ಹೇಳಲ್ಪಟ್ಟಿದೆ. ಇಂಥ ಗುಣವುಳ್ಳ ಬ್ರಹ್ಮನಲ್ಲಿ ಸ್ಮರಣೆ, ದುಃಖ ಮೊದಲಾದ ದೋಷಗಳನ್ನು ಶಂಕೆ ಮಾಡಲು ಕೂಡ ಸಾಧ್ಯವಿಲ್ಲ.

ವಿವರಣೆ – 'ನ ಚ ಬ್ರಹ್ಮಣಃ ಶ್ರಮಚಿಂತಾದಿದೋಷಪ್ರಾಪ್ತಿಃ' ಎಂಬುದಾಗಿ ಬ್ರಹ್ಮನಲ್ಲಿ ಶ್ರಮ ಚಿಂತೆ ಮೊದಲಾದ ದೊಷಗಳಿಗೆ ಅವಕಾಶ ಇಲ್ಲವೆಂದು ಹೇಳಿರುವರು. ಈ ವಿಷಯವು ಸೂತ್ರಕಾರರಿಗೆ ಹೇಗೆ ಸಮ್ಮತ ? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ತು ಶಬ್ದಃ ಸಾಮ್ಯವ್ಯಾವರ್ತಕಃ' ಎಂಬುದಾಗಿ ಉತ್ತರಿಸುತ್ತಿದ್ದಾರೆ. ಸೂತ್ರದಲ್ಲಿರುವ ತು ಶಬ್ದವು ಜೀವನಲ್ಲಿರುವ ಶ್ರಮ ಚಿಂತಾದಿ ದೋಷಗಳು ಬ್ರಹ್ಮನಲ್ಲಿ ಇರುವುದಿಲ್ಲ ಎಂದು ಸೂಚನೆ ಮಾಡುತ್ತಿದೆ. ಆದ್ದರಿಂದ ಜೀವರಂತೆ ಬ್ರಹ್ಮನಲ್ಲೂ ಕೂಡ ಆಕ್ಷೇಪವು ಸಮಾನವೆಂದು ಹೇಳಬಾರದು.

ಚಿಂತೆಗೆ ಕಾರಣವಾದ ಸ್ಮರಣೆ ಮೊದಲಾದ ದೋಷಗಳು ಸರ್ವಜ್ಞನಲ್ಲಿ ಯುಕ್ತವಾಗುವುದಿಲ್ಲ. ದುಃಖವೆಂಬ ದೋಷವಿದ್ದರೆ ಆನಂದೋದ್ರೇಕದಿಂದ ಸರ್ವನಿಯಾಮಕತ್ವ ಮೊದಲಾದ ಯುಕ್ತಿಗಳು ಕೂಡುವುದಿಲ್ಲ. ಬ್ರಹ್ಮನಲ್ಲಿ ಅಖಿಲಶ್ರೋತೃತ್ವ, ಅಂತರ್ಯಾಮಿತ್ವ, ಮೊದಲಾದ ಗುಣಗಳನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತಿರುವುದರಿಂದ ದೋಷಗಳನ್ನು ಶಂಕೆ ಮಾಡಲೂ ಕೂಡ ಸಾಧ್ಯವಿಲ್ಲ ಎಂಬುದು ಟೀಕೆಯ ಅಭಿಪ್ರಾಯ.

## ಬ್ರಹ್ಮಸೂತ್ರ

**सूत्रम् – अश्मादिवच्च तदनुपपत्तिः ।।**

ಜೀವನು ಚೇತನನಾಗಿದ್ದರೂ ಸ್ವತಂತ್ರಕರ್ತೃವಲ್ಲ. ಏಕೆಂದರೆ ಜಡವಾದ ಕಲ್ಲಿನಂತೆ ಅಸ್ವತಂತ್ರನಾಗಿದ್ದಾನೆ.

## ಸೂತ್ರದೀಪಿಕಾ

**सूत्रदीपिका – अश्मादिवच्च तदनुपपत्तिः** ।। च शब्दोऽपिशब्दार्थः । **अश्मादिवत्**। पाषाणादेरिव । अनि जीवस्य चेतनत्वेऽपि । **तदनुपपत्तिः** अस्वातन्त्र्यात् स्वतः कर्तृत्वानुपपत्तेरित्यर्थः ।।३।।

ಅರ್ಥ -- 'ಚ' ಶಬ್ದವು 'ಅಪಿ' ಶಬ್ದದ ಅರ್ಥದಲ್ಲಿದೆ. 'ಅಶ್ಮಾದಿವತ್' ಜಡವಾದ ಕಲ್ಲಿನಂತೆ ಜೀವನು ಚೇತನನಾಗಿದ್ದರೂ, ತದನುಪಪತ್ತಿಃ = ಅಸ್ವತಂತ್ರನಾದ್ದರಿಂದ ಸ್ವತಂತ್ರಕರ್ತೃತ್ವವು ಇರುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। अश्मादिवच्च तदनुपपत्तिः ।।३।।**

**चेतनत्वेऽप्यश्मादिवदस्वतन्त्रत्वात् स्वतः कर्तृत्वानुपपत्तिर्जीवस्य ।**

ಅನುವಾದ - ಪರಮಾತ್ಮನು ಹೇಗೆ ಚೇತನನಾಗಿದ್ದಾನೋ ಅದರಂತೆ ಜೀವಾತ್ಮನೂ ಕೂಡ ಚೇತನನಾಗಿದ್ದಾನೆ. ಜೀವನಿಗೆ ಕಲ್ಲಿನಂತೆ ಅಸ್ವಾತಂತ್ರ್ಯವಿದೆ. ಸ್ವತಂತ್ರಕರ್ತೃತ್ವವು ಇರುವುದಿಲ್ಲ.

ಪ್ರತಿಪದಾರ್ಥ -- ಚೇತನನಾದ್ದರಿಂದ ಪರಮಾತ್ಮನು ಹೇಗೆ ಮತ್ತೊಂದರ ಅಪೇಕ್ಷೆ ಇಲ್ಲದವನಾಗಿದ್ದಾನೊ, ಅದರಂತೆ ಜೀವನೂ ಕೂಡ ಮತ್ತೊಂದರ ಅಪೇಕ್ಷೆ ಇಲ್ಲದವನಾಗಿದ್ದಾನೆ. ಆದ್ದರಿಂದ ಏಕೆ ಕರ್ತೃವಾಗಬಾರದು ? ಎಂಬ ಆಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರ ಹೊರಟಿದೆ. ಜೀವಸ್ಯ = ಜೀವನಿಗೆ, ಚೇತನತ್ವೇऽಪಿ = ಚೈತನ್ಯವಿದ್ದರೂ, ಅಶ್ಮಾದಿವತ್ = ಕಲ್ಲು ಮೊದಲಾದ ಜಡಪದಾರ್ಥಗಳಂತೆ, ಅಸ್ವತಂತ್ರತ್ವಾತ್ = ಸ್ವತಂತ್ರ್ಯವಿಲ್ಲದ ಕಾರಣ ಸ್ವತಃ ಮತ್ತೊಂದರ ಅಪೇಕ್ಷೆಯಿಲ್ಲದ, ಕರ್ತೃತ್ವಾನುಪಪತ್ತಿಃ = ಕರ್ತೃತ್ವವು ಕೂಡುವುದಿಲ್ಲ.

**भाष्यम् –**

**यथा दारुमयीं योषां नरः स्थिरसमाहितः ।**
**इङ्गयत्यङ्गमङ्गानि तथा राजन्निमाः प्रजाः ।। इति च भारते ।।३।।**

ಅನುವಾದ - ಮಹಾಭಾರತದಲ್ಲಿ ಜೀವನಿಗೆ ಕರ್ತೃತ್ವವಿಲ್ಲವೆಂದು ಸಾಧಿಸಲಾಗಿದೆ-

ಎಲೈ ಜನಮೇಜಯರಾಜನೇ! ಏಕಾಗ್ರತೆಯನ್ನು ಹೊಂದಿ ಒಬ್ಬ ವ್ಯಕ್ತಿಯು ಮರದ ಹೆಣ್ಣುಗೊಂಬೆಯನ್ನು ಹೇಗೆ ಕುಣಿಸುತ್ತಾನೋ ಅಥವಾ ತನ್ನ ಇಚ್ಛೆ ಬಂದಂತೆ ಕೈಕಾಲುಗಳನ್ನು ಅಲ್ಲಾಡಿಸುತ್ತಾನೋ ಅದರಂತೆ ಪರಮಾತ್ಮನು ಎಲ್ಲಾ ಜೀವರನ್ನು ನಿಯಂತ್ರಣ ಮಾಡುತ್ತಾನೆ.

ಪ್ರತಿಪದಾರ್ಥ -- ಅಸ್ವಾತಂತ್ರ್ಯವೆಂಬ ಹೇತುವಿಗೆ ಅಸಿದ್ಧಿಯನ್ನು ಆಶಂಕಿಸುತ್ತಿದ್ದಾರೆ. ರಾಜನ್ = ಜನಮೇಜಯರಾಜನೇ! ಯಥಾ = ಯಾವ ರೀತಿಯಾಗಿ, ಸ್ಥಿರಸಮಾಹಿತಃ = ಚಾಂಚಲ್ಯವನ್ನು ಬಿಟ್ಟು ಮನಸ್ಸಿನ ಏಕಾಗ್ರತೆಯಿಂದ ತಾನು ಮಾಡುವ ಕಾರ್ಯದಲ್ಲಿ ತೀವ್ರ ಮನಸ್ಸುಳ್ಳವನಾದ, ನರಃ = ಮನುಷ್ಯನು, ದಾರುಮಯೀಂ ಯೋಷಾಂ = ಮರದ ಹೆಣ್ಣುಪ್ರತಿಮೆಯನ್ನು, ಇಂಗಯತಿ = ಕುಣಿಸುತ್ತಾನೋ, ಯಥಾ = ಯಾವ ರೀತಿಯಾಗಿ, ನರಂ = ಮನುಷ್ಯನು, ಅಂಗಂ = ತನ್ನ ಕೈಕಾಲುಗಳನ್ನು, ಅಂಗಾನಿ = ಬೆರಳು ಮೊದಲಾದವುಗಳನ್ನು, ಇಂಗಯತಿ = ಅಲುಗಾಡಿಸುತ್ತಾನೋ, ತಥಾ = ಅದೇ ರೀತಿಯಾಗಿ, ಇಮಾಃ = ಈ ಎಲ್ಲ ಜನರನ್ನು, ಭಗವಾನ್ = ಪರಮಾತ್ಮನು, ಇಂಗಯತಿ = ನಿಯಂತ್ರಿಸುತ್ತಾನೆ.

## ತತ್ವಪ್ರಕಾಶಿಕಾ

**तत्वप्रकाशिका –**

**अथापि जीवोऽन्यनिरपेक्षतया कर्ता चेतनत्वादीश्वरवदिति किं न स्यात् । न चेश्वराभ्युपगमानभ्युपगमाभ्यां विरोधः । परसिद्धेनैव न्यायेन परस्य बोधनादित्याशङ्कां परिहरत्सूत्रमुपन्यस्य व्याचष्टे ।। अश्मादिवच्चेति ।।**

**अथापि जीवोऽन्यनिरपेक्षतया कर्ता चेतनत्वादीश्वरवदिति किं न स्यात्। न चेश्वराभ्युपगमानभ्युपगमाभ्यां विरोधः । परसिद्धेनैव न्यायेन परस्य बोधनादित्याशङ्कां परिहरत्सूत्रमुपन्यस्य व्याचष्टे – अश्मादिवच्चेति ।।**

ಆದರೂ ಅಧಿಕ ಆಕ್ಷೇಪಕ್ಕೆ ಅವಕಾಶವಿದೆ - ಮತ್ತೊಬ್ಬರ ಅಪೇಕ್ಷೆಯನ್ನು ಹೊಂದಿದ ಜೀವನು ಕರ್ತೃವಾಗಿದ್ದಾನೆಂದು 'ಜೀವಃ ಅನ್ಯನಿರಪೇಕ್ಷತಯಾ ಕರ್ತಾ, ಚೇತನತ್ವಾತ್ ಈಶ್ವರವತ್' ಈಶ್ವರನು ಚೇತನನಾಗಿದ್ದಾನೆ. ಹಾಗೂ ಮತ್ತೊಬ್ಬರನ್ನು ಅಪೇಕ್ಷೆ ಪಡದೆ ಸ್ವತಂತ್ರವಾಗಿ ಕರ್ತೃ ಆಗಿದ್ದಾನೆ. ಅದರಂತೆ ಜೀವನು ಚೇತನನಾಗಿದ್ದರಿಂದ ಅನ್ಯನಿರಪೇಕ್ಷನಾಗಿ ಕರ್ತೃ ಆಗಲೇಬೇಕು ಎಂದು ಸಾಧಿಸುತ್ತೇವೆ. ಹೀಗೆ ಅನುಮಾನವನ್ನು ಮಾಡಿದಾಗ ದೃಷ್ಟಾಂತಭೂತನಾದ ಈಶ್ವರನನ್ನು ಒಪ್ಪಿದ್ದರೋ ಒಪ್ಪಿಲ್ಲವೋ? ಎಂಬ ಪ್ರಶ್ನೆಗೆ ಉತ್ತರಿಸಬೇಕಾಗುತ್ತದೆ. ಪರಸಿದ್ಧವಾದ ನ್ಯಾಯದಿಂದಲೇ ಪರನಿಗೆ ಶಂಕೆ ಮಾಡಬಹುದು. ಈ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು 'ಅಶ್ಮಾದಿವಚ್ಚ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಜೀವಃ ಅನ್ಯನಿರಪೇಕ್ಷತಯಾ ಕರ್ತಾ ಚೇತನತ್ವಾತ್ ಈಶ್ವರವತ್' ಎಂಬ ಅನುಮಾನದಲ್ಲಿ ದೃಷ್ಟಾಂತನಾದ ಈಶ್ವರನನ್ನು ಒಪ್ಪಲಾಗಿದೆಯೋ ಅಥವಾ ಒಪ್ಪಿಲ್ಲವೋ? ಎಂಬ ಪ್ರಶ್ನೆ ಪ್ರಾಪ್ತವಾಗುತ್ತದೆ. ಈಶ್ವರನನ್ನು ಒಪ್ಪುತ್ತೇವೆಂದು ಉತ್ತರಿಸಿದರೆ ಅಂತಹ ಈಶ್ವರನು ಸಿದ್ಧವಾಗುವಾಗಲೇ ಸ್ವತಂತ್ರಕರ್ತೃ ಎಂದೇ ಸಿದ್ಧನಾಗುತ್ತಾನೆ. ಆಗ ಜೀವನು ಸ್ವತಂತ್ರಕರ್ತೃ ಎಂದು ನಿಮಗೆ ಸಮರ್ಥಿಸಲು ಬರುವುದಿಲ್ಲ. ಒಂದು ವೇಳೆ ಈಶ್ವರನನ್ನು ಒಪ್ಪದೇ ಹೋದರೆ ಆಗ 'ಈಶ್ವರವತ್' ಎಂಬ ದೃಷ್ಟಾಂತವು ಸಿದ್ಧವಾಗದ ಕಾರಣ ಅನುಮಾನದಿಂದ ಸ್ವತಂತ್ರ ಕರ್ತೃತ್ವವನ್ನು ಜೀವನಲ್ಲಿ ಸಾಧಿಸಲು ಆಗುವುದಿಲ್ಲ. ಹೀಗೆ ಈಶ್ವರನನ್ನು ಒಪ್ಪಿದರೂ ಒಪ್ಪದಿದ್ದರೂ ಜೀವನ ಸ್ವತಂತ್ರಕರ್ತೃತ್ವವು ಸಿದ್ಧವಾಗುವುದಿಲ್ಲ ಎಂಬುದು ಆಕ್ಷೇಪದ ಅಭಿಪ್ರಾಯ.

'ಜೀವಃ ಅನ್ಯನಿರಪೇಕ್ಷತಯಾ ಕರ್ತಾ ಚೇತನತ್ವಾತ್' ಎಂಬುದನ್ನು ಸಾಧನಾನುಮಾನ ಎಂದು ತಿಳಿಯಬಾರದು. 'ಪರಸಿದ್ಧನ್ಯಾಯೇನ' ಎಂಬ ಟೀಕೆಯ ಮಾತಿನಿಂದ ಇದು ದೂಷಣಾನುಮಾನ ಎಂದು ತಿಳಿಯುತ್ತದೆ. 'ಯದಿ ಈಶ್ವರಃ ಅನ್ಯಾನಪೇಕ್ಷಯಾ ಜಗತ್ ಕರ್ತಾ ತರ್ಹಿ ಚೇತನತ್ವಾವಿಶೇಷಾತ್ ಜೀವೋಪಿ ತಥೈವ ಜಗತ್‌ಕರ್ತಾ ಸ್ಯಾತ್' 'ಒಂದು ವೇಳೆ ಈಶ್ವರನು ಸ್ವತಂತ್ರವಾಗಿ ಜಗತ್‌ಕರ್ತೃ ಆದರೆ ಚೇತನತ್ವವು ಸಮಾನವಾದ್ದರಿಂದ ಜೀವನೂ ಕೂಡ ಹಾಗೆಯೇ ಜಗತ್‌ಕರ್ತೃ ಆಗಬೇಕಾದೀತು ಎಂಬುದಾಗಿ ಪರಸಿದ್ಧವಾದ ನ್ಯಾಯದಿಂದಲೇ ಪರನನ್ನು ದೂಷಿಸುವ ದೂಷಣಾನುಮಾನವಿದು.

**तत्वप्रकाशिका – न चेतनत्वहेतुना जीवस्यान्यानपेक्षकर्तृत्वं साध्यम्। अस्वातन्त्र्येण हेतुना अश्मादिवत्तदभावस्यापि साधयितुं शक्यत्वात् । स्वतन्त्रो ह्यन्यनिरपेक्षः कार्यं करोति चेतनत्वं त्वप्रयोजकमिति भावः । चोऽपि शब्दार्थः।**

ಚೇತನತ್ವ ಎಂಬ ಹೇತುವಿನಿಂದ ಜೀವನಲ್ಲಿ ಸ್ವತಂತ್ರಕರ್ತೃತ್ವವನ್ನು ಸಾಧಿಸಲು ಆಗುವುದಿಲ್ಲ. ಜೀವನಲ್ಲಿ ಅಸ್ವಾತಂತ್ರ್ಯ ಎಂಬ ಹೇತುವಿನಿಂದ ಕಲ್ಲು ಮೊದಲಾದವುಗಳಂತೆ ಸ್ವತಂತ್ರಕರ್ತೃತ್ವಾಭಾವವನ್ನು ಸಾಧಿಸಬಹುದು. ಸ್ವತಂತ್ರನಾದವನು ಮತ್ತೊಂದರ ಅಪೇಕ್ಷೆ ಇಲ್ಲದೆ ಕಾರ್ಯವನ್ನು ಮಾಡಲು ಸಮರ್ಥನಾಗುತ್ತಾನೆ. ಚೇತನನಾಗಿರುವಿಕೆಯು ಇದಕ್ಕೆ ಅಪ್ರಯೋಜಕವೆಂದು ತಿಳಿಯಬೇಕು. ಸೂತ್ರದಲ್ಲಿರುವ ಚ ಶಬ್ದವು ಅಪಿಶಬ್ದಾರ್ಥದಲ್ಲಿ ಪ್ರಯುಕ್ತವಾಗಿ.

ವಿವರಣೆ - 'ಜೀವಃ ಅನ್ಯನಿರಪೇಕ್ಷತಯಾ ನ ಕರ್ತಾ ಅಸ್ವತಂತ್ರತ್ವಾತ್ ಅಶ್ಮಾದಿವತ್' ಕಲ್ಲು ಮೊದಲಾದವುಗಳು ಅಸ್ವಂತ್ರಗಳಾಗಿವೆ ಕರ್ತೃ ಕೂಡ ಆಗಿರುವುದಿಲ್ಲ. ಅದರಂತೆ ಜೀವನು ಅಸ್ವತಂತ್ರನಾಗಿರುವುದರಿಂದ ಸ್ವತಂತ್ರಕರ್ತೃ ಆಗಲು ಸಾಧ್ಯವಿಲ್ಲ ಎಂಬ ಅನುಮಾನದಲ್ಲಿ 'ಅಸ್ವಾತಂತ್ರ್ಯವಿರಲಿ, ಅನ್ಯನಿರಪೇಕ್ಷತಯಾ ಕರ್ತೃತ್ವವೇ ಇರಲಿ' ಎಂಬುದಾಗಿ ಅಪ್ರಯೋಜಕ ಶಂಕೆಯನ್ನು ಮಾಡುವುದಾದರೆ 'ಯದಿ ಜೀವಃ ಅನ್ಯನಿರಪೇಕ್ಷತಯಾ ಕರ್ತಾ ಸ್ಯಾತ್ ತರ್ಹಿ ಅಸ್ವಾತಂತ್ರ್ಯಂ ನ ಸ್ಯಾತ್' ಒಂದು ವೇಳೆ ಜೀವನು ಅನ್ಯನಿರಪೇಕ್ಷನಾಗಿ ಕರ್ತೃ ಆಗುವುದಾದರೆ ಆಗ ಅಸ್ವಾತಂತ್ರ್ಯವು ಇಲ್ಲದಿರಬೇಕಾದೀತು' ಎಂಬ ಅನುಕೂಲತರ್ಕವನ್ನು ವಿವಕ್ಷಿಸಬೇಕು. ಆದ್ದರಿಂದ ಯಾರು ಮತ್ತೊಂದರ ಅಪೇಕ್ಷೆ ಇಲ್ಲದೆ ಕರ್ತೃ ಆಗಿರುತ್ತಾನೋ ಅವನು ಸ್ವತಂತ್ರನಾಗಿರುತ್ತಾನೆ ಎಂಬ ವ್ಯಾಪ್ತಿಯನ್ನೇ ಹೇಳಬೇಕು. ಇದೇ ವ್ಯಾಪ್ತಿಯನ್ನು ಮತ್ತೊಂದು ಮುಖದಲ್ಲಿ 'ಸ್ವತಂತ್ರೋ ಹಿ' ಎಂಬ ಟೀಕಾವಾಕ್ಯವು ಉಪಪಾದನೆ ಮಾಡುತ್ತಿದೆ. ಸ್ವಾತಂತ್ರ್ಯವನ್ನು ವ್ಯಾಪಕವೆಂದು ಅನ್ಯನಿರಪೇಕ್ಷತಯಾ ಕರ್ತೃತ್ವವನ್ನು ವ್ಯಾಪ್ಯವೆಂದು ತಿಳಿಯಬೇಕು.

ಸೂತ್ರದಲ್ಲಿರುವ 'ಚ' ಎಂಬ ಶಬ್ದವು 'ಅಪಿ' ಎಂಬ ಶಬ್ದಾರ್ಥದಲ್ಲಿ ಪ್ರಯುಕ್ತವಾಗಿದೆ. ಆದ್ದರಿಂದ ಜೀವನು ಚೇತನನಾಗಿದ್ದರೂ ಕೂಡ ಕಲ್ಲು ಮೊದಲಾದ ಪದಾರ್ಥಗಳಂತೆ ಅಸ್ವತಂತ್ರನಾದ್ದರಿಂದ ಸ್ವತಂತ್ರಕರ್ತೃತ್ವವು ಅನುಪಪನ್ನವಾಗುತ್ತದೆ ಎಂಬುದು ಸೂತ್ರದ ಅರ್ಥ.

**तत्वप्रकाशिका – एतेन कर्मसापेक्षतया हिताक्रियादि दोषपरिहारोऽपि परास्तः। तस्याप्यस्वतन्त्रत्वात् । अस्वातन्त्र्यमेव जीवस्य कुत इत्यत आह – यथेति ।। अस्वातन्त्र्यस्य हिताक्रियादिनैव सिद्धौ सूत्रार्थे सम्मतिर्वा ।।**

ಹೀಗೆ ಹೇಳಿದ್ದರಿಂದ ಕರ್ಮಕ್ಕೆ ಅನುಸಾರಿಯಾಗಿ ಹಿತಾಕರಣ ಅಹಿತಕರಣ ಎಂಬ ದೋಷಪರಿಹಾರವನ್ನು ಕೂಡ ಪರಿಹಾರ ಮಾಡಿದಂತಾಯಿತು. ಏಕೆಂದರೆ ಇವುಗಳೂ ಕೂಡ ಅಸ್ವತಂತ್ರವಾಗಿವೆ. ಜೀವನಿಗೆ ಅಸ್ವಾತಂತ್ರವನ್ನು ಏಕೆ ಹೇಳಬೇಕು ? ಎಂಬ ಪ್ರಶ್ನೆಗೆ 'ಯಥಾ ದಾರುಮಯೀ' ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಅಥವಾ ಅಸ್ವಾತಂತ್ರ್ಯವು ಹಿತಾಕರಣ ಅಹಿತಕರಣಗಳಿಂದ ಸಿದ್ಧವಾಗುವುದಾದರೆ ಸೂತ್ರಾರ್ಥಕ್ಕೆ ಮಹಾಭಾರತದ ಸಮ್ಮತಿಯನ್ನು ತೋರಿಸಿದಂತಾಗುತ್ತದೆ.

ಈ ಅಧಿಕರಣದ ಪ್ರಥಮಸೂತ್ರದಲ್ಲಿ ಯಾರು ಸ್ವತಂತ್ರಕರ್ತನೊ ಅವನಿಗೆ ಹಿತಾಕರಣ ಅಹಿತಕರಣಗಳೆಂಬ ದೋಷವು ಇರುವುದಿಲ್ಲ ಎಂದು ಹೇಳಲಾಯಿತು. ಇದಕ್ಕೆ ಉತ್ತರವನ್ನು ಪೂರ್ವಪಕ್ಷಿಗಳು ಹೀಗೆ ಹೇಳುತ್ತಾರೆ - ಜೀವನು ಸ್ವತಂತ್ರಕರ್ತೃ ಆಗಿದ್ದರೂ ಕೂಡ ತನ್ನ ಕರ್ಮಕ್ಕೆ ಅಧೀನವಾಗಿ ಪ್ರವೃತ್ತಿಯನ್ನು ಮಾಡುತ್ತಾನೆ. ಆದ್ದರಿಂದ ಹಿತವಾದದ್ದನ್ನು ಮಾಡಬಾರದೆಂಬ ಅಥವಾ ಅಹಿತವಾದದದ್ದನ್ನು ಮಾಡಬೇಕೆಂಬ ಕರ್ಮವು ಅಂಥ ಜೀವನಿಗೆ ಇರುವುದರಿಂದ ಅದಕ್ಕನುಗುಣವಾಗಿ ಹಿತಾಕರಣ ಅಹಿತಕರಣಗಳೆಂಬ ದೋಷಗಳಿಗೆ ತುತ್ತಾಗುತ್ತಾನೆ. ಆದ್ದರಿಂದ ಈ ಎರಡು ದೋಷಗಳು ಜೀವನ ಸ್ವಾತಂತ್ರ್ಯಕ್ಕೆ ಪ್ರತಿಬಂಧಕವಾಗುವುದಿಲ್ಲ ಎಂದು.

ಪೂರ್ವಪಕ್ಷಿಗಳ ಈ ಸಮಾಧಾನವನ್ನು ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಜೀವನು ಅಸ್ವತಂತ್ರನಾಗಿದ್ದಾನೆಂದು ಈ ಸೂತ್ರದಲ್ಲಿ ಹೇಳಿರುವುದರಿಂದ ಅಸ್ವತಂತ್ರನಾದ್ದರಿಂದಲೇ ಹಿತಾಕರಣ ಅಹಿಕರಣಗಳೆಂಬ ದೋಷಗಳಿಗೆ ಪಾತ್ರನಾಗಿದ್ದಾನೆ. ಕರ್ಮವು ಅಸ್ವತಂತ್ರವಾಗಿದ್ದು ಭಗವದಧೀನವಾಗಿರುವುದರಿಂದ ಭಗವದಧೀನವಾಗಿದೆ. ಜೀವನು ಕರ್ಮದ ಅಧೀನವಾದರೆ ಭಗವಂತನ ಅಧೀನವಾಗಿದ್ದಾನೆ ಎಂದೇ ಹೇಳಿದಂತಾಯಿತು. ಆದ್ದರಿಂದ ಜೀವನಿಗೆ ಸ್ವಾತಂತ್ರ್ಯವು ಯುಕ್ತವಾಗುವುದಿಲ್ಲ ಎಂಬುದು ಈ ಸೂತ್ರದ ಅಭಿಪ್ರಾಯ.

## ಬ್ರಹ್ಮಸೂತ್ರ

**सूत्रम् — उपसंहारदर्शनान्नेति चेत् क्षीरवद्धि ।।**

ಜೀವನು ಯಾವ ಕೆಲಸವನ್ನು ಪ್ರಾರಂಭ ಮಾಡುತ್ತಾನೋ ಅದನ್ನು ಸಮಾಪ್ತಿ ಮಾಡುವುದರಿಂದ ಸ್ವತಂತ್ರಕರ್ತೃ ಎಂದು ಹೇಳಬಹುದಲ್ಲವೇ? ಇದು ತಪ್ಪು. ಹಸುವಿನ ಕೆಚ್ಚಲಿನಲ್ಲಿ ಹಾಲು ಹುಟ್ಟುತ್ತದೆ. ಹಾಲನ್ನು ಮಾಡಿದ್ದು ಹಸುವಲ್ಲ. ಅದರಂತೆ ಅನೇಕ ಕೆಲಸಗಳನ್ನು ಜೀವನು ಮಾಡಿದ್ದರೂ ತನ್ನ ಸ್ವಾತಂತ್ರ್ಯದಿಂದ ಪೂರೈಸಲು ಸಾಧ್ಯವಾಗುವುದಿಲ್ಲ. ಅವನಿಗೆ ನಿಯಾಮಕನಾದ ಪರಮಾತ್ಮನ ಅಧೀನವಾಗಿಯೇ ಎಲ್ಲಾ ಕೆಲಸಗಳನ್ನು ಮುಗಿಸುತ್ತಾನೆ.

## ಸೂತ್ರದೀಪಿಕಾ

**सूत्रदीपिका — उपसंहारदर्शनान्नेति चेन्न क्षीरवद्धि ।। उपसंहारदर्शनात्** जीवेनाऽरब्धकार्यस्य समापनदर्शनात् । स एव कर्तेति उक्तब्रह्मकर्तृत्वं नेति चेन्न । कुतः? हि यस्मात् । क्षीरवत् गोषु दृश्यमानक्षीरस्य यथा मुख्यप्राणकर्तृत्वं तथा जीवकृतोपसंहारोऽपि परात्मकृत एवेत्यर्थः । हिशब्देनात्रार्थे 'अन्नम्' इति प्रमाणप्रसिद्धिश्च सूचिता ।।४।।

ಅರ್ಥ -- ಉಪಸಂಹಾರದರ್ಶನಾತ್ = ಜೀವನು ಪ್ರಾರಂಭ ಮಾಡಿದ ಕಾರ್ಯದ ಸಮಾಪ್ತಿಯನ್ನು ಮಾಡುವುದು ಅನುಭವಸಿದ್ಧವಾದ್ದರಿಂದ ಜೀವನೇ ಸ್ವತಂತ್ರಕರ್ತೃವಾಗಿದ್ದಾನೆ. ಆದ್ದರಿಂದ ಬ್ರಹ್ಮನಿಗೆ ಜಗತ್ ಕರ್ತೃತ್ವವು ಅಯುಕ್ತವಾಗಿದೆಯಲ್ಲವೇ? ಇತಿ ಚೇನ್ನ = ಯಾವ ಕಾರಣದಿಂದ, ಕ್ಷೀರವತ್ = ಹಸುಗಳ ಕೆಚ್ಚಲಿನಲ್ಲಿ ಯಾವ ಕ್ಷೀರವು ಇರುತ್ತದೋ ಅದರಂತೆ ಜೀವನಿಂದ ಮಾಡಲ್ಪಟ್ಟ ಉಪಸಂಹಾರವೂ ಕೂಡ ಪರಮಾತ್ಮನ ಅಧೀನವಾಗಿಯೇ ನಡೆದಿರುತ್ತದೆ. ಹಿ ಶಬ್ದದಿಂದ ಈ ಅರ್ಥದಲ್ಲಿ 'ಅನ್ನಂ' ಎಂಬ ಪ್ರಮಾಣಪ್ರಸಿದ್ಧಿಯನ್ನು ಸೂಚಿಸಿದ್ದಾರೆ.

## ಬ್ರಹ್ಮಸೂತ್ರಭಾಷ್ಯ

**भाष्यम् —।। उपसंहारदर्शनान्नेति चेत् क्षीरवद्धि ।।४।।**

**जीवेन कार्योपसंहारदर्शनात् तस्य कर्तृत्वमिति चेत् - न, यथा गोषु क्षीरं दृश्यमानमपि प्राणादेव जायते ।**

**'अन्नं रसादिरूपेण प्राणः परिणयत्यसौ ।' इति वचनात् । एवं जीवे दृश्यमानोऽपि कार्योपसंहारोऽस्वातन्त्र्यात् परकृत एव । 'य**

**आत्मानमन्तरो यमयति ।' 'नाहं कर्ता नकर्ता त्वं कर्ता यस्तु सदा प्रभुः ।' इत्यादेः ॥४॥**

ಅನುವಾದ - ಮಾಡಲು ಹೊರಟ ಕಾರ್ಯವನ್ನು ಸಮಾಪ್ತಿ ಮಾಡುತ್ತಾನಾದ್ದರಿಂದ ಜೀವನಿಗೆ ಕರ್ತೃತ್ವವನ್ನು ಒಪ್ಪಬೇಕಲ್ಲವೆ? ಎಂಬ ಪ್ರಶ್ನೆ ಸರಿಯಲ್ಲ. ಯಾವ ರೀತಿಯಾಗಿ ಹಸುವಿನ ಕೆಚ್ಚಲಲ್ಲಿ ಹಾಲು ಕಂಡರೂ ಕೂಡ ಅದನ್ನು ಹಸು ತಯಾರಿಸುವುದಿಲ್ಲ. ತಿಂದ ಆಹಾರವನ್ನು ಕ್ಷೀರ ಮೊದಲಾದ ರಸರೂಪವಾಗಿ ಮುಖ್ಯಪ್ರಾಣನು ಪರಿಣಾಮ ಮಾಡುತ್ತಾನೆ. ಹೀಗೆ ಪ್ರಮಾಣ ಇರುವುದರಿಂದ ಯಾವುದಕ್ಕೂ ನಾವು ಕರ್ತೃಗಳಲ್ಲವೆಂದು ತಿಳಿಯುತ್ತಾರೆ. ಅದೇ ರೀತಿಯಾಗಿ ಜೀವನಲ್ಲಿ ಯಾವುದೇ ಕಾರ್ಯದ ಉಪಸಂಹಾರ ಕಂಡರೂ ಅಸ್ವಾತಂತ್ರ್ಯವಿರುವುದರಿಂದ ಅಂತರ್ಯಾಮಿಯಾದ ಪರಮಾತ್ಮನೇ ಅದನ್ನು ಮಾಡಿ ಮುಗಿಸಿದ್ದಾನೆ ಎಂದು ತಿಳಿಯಬೇಕು.

ಪರಮಾತ್ಮನು ಜೀವನ ಒಳಗಡೆ ಇದ್ದು ಅವನನ್ನು ನಿಯಂತ್ರಣ ಮಾಡುತ್ತಾನೆ ಎಂದು ಉಪನಿಷತ್ತು ಹೇಳುತ್ತದೆ. ನಾನು ಕರ್ತೃವಲ್ಲ ನೀನೇ ಕರ್ತೃವಾಗಿರುವಿ. ಸಮಸ್ತ ಜಗತ್ತಿಗೂ ಕೂಡ ನಿರಂತರವಾಗಿ ನೀನೇ ಪ್ರಭುವಾಗಿರುವಿ. ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ ಜೀವನಲ್ಲಿ ಕರ್ತೃತ್ವವು ಸುತರಾಂ ಇರುವುದಿಲ್ಲವೆಂದು ತಿಳಿಯಬೇಕು.

ಪ್ರತಿಪದಾರ್ಥ -- ಜೀವನಿಗೆ ಸ್ವತಃ ಕರ್ತೃತ್ವವಿಲ್ಲವೆಂದು ಆಕ್ಷೇಪಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಜೀವೇನ = ಜೀವನಿಂದ, ಕಾರ್ಯೋಪಸಂಹಾರದರ್ಶನಾತ್ = ಪ್ರಾರಂಭ ಮಾಡಿದ ಕಾರ್ಯದ ಸಮಾಪ್ತಿಯು ಕಾಣಸುತ್ತಿರುವುದರಿಂದ, ತಸ್ಯ = ಅವನಿಗೆ ಕರ್ತೃತ್ವಂ = ಕರ್ತೃತ್ವವನ್ನು ಒಪ್ಪಬೇಕು. ಇತಿ ಚೇತ್ = ಹೀಗೆ ಆಕ್ಷೇಪ ಮಾಡುವುದು, ನ = ಸರಿಯಲ್ಲ, ಯಥಾ = ಯಾವ ರೀತಿಯಾಗಿ, ಗೋಷು = ಹಸುಗಳಲ್ಲಿ, ಕ್ಷೀರಂ = ಹಾಲು, ದೃಶ್ಯಮಾನಮಪಿ = ಕಾಣಸುತ್ತಿದ್ದರೂ, ಪ್ರಾಣಾದೇವ = ಮುಖ್ಯಪ್ರಾಣನಿಂದಲೇ, ಜಾಯತೇ = ಹುಟ್ಟುತ್ತದೆ. ಅನ್ನಂ = ತಿನ್ನಲ್ಪಟ್ಟ ಆಹಾರವು, ರಸಾದಿರೂಪೇಣ = ಹಾಲು ಮೊದಲಾದ ರಸರೂಪವಾಗಿ, ಅಸೌ = ಸರ್ವಶರೀರ ಪ್ರೇರಕನಾಗಿ ಪ್ರಸಿದ್ಧನಾದ, ಪ್ರಾಣಃ = ಪ್ರಾಣನು, ಪರಿಣಯತಿ = ಪರಿಣಾಮವನ್ನು ಮಾಡುತ್ತಾನೆ. ಇತಿ ವಚನಾತ್ = ಹೀಗೆ ಪ್ರಮಾಣವಿರುವುದರಿಂದ, ಏವಂ = ಅದೇರೀತಿಯಾಗಿ, ಜೀವೇ = ಜೀವನಲ್ಲಿ, ದೃಶ್ಯಮಾನೋಪಿ = ಕಾಣಸುತ್ತಿದ್ದರೂ, ಕಾರ್ಯೋಪಸಂಹಾರಃ = ಕಾರ್ಯದ ಉಪಸಂಹಾರವು, ಅಸ್ವಾತಂತ್ರ್ಯಾತ್ = ಜೀವನು ಅಸ್ವತಂತ್ರನಾದ್ದರಿಂದ, ಪರಕೃತ ಏವ = ಪರಮಾತ್ಮನ ಅಧೀನ ಎಂದೇ ಒಪ್ಪಬೇಕು. ಯಃ = ಯಾವ ಪರಮಾತ್ಮನು, ಆತ್ಮಾನಂ = ಜೀವನನ್ನು, ಅಂತರಃ = ಅಂತರ್ಯಾಮಿಯಾಗಿ, ಯಮಯತಿ = ಪ್ರೇರಣೆ ಮಾಡುತ್ತಾನೆ.

ಅಹಂ = ನಾನು, ನಕರ್ತಾ = ಸ್ವತಂತ್ರಕರ್ತೃವಲ್ಲ. ತ್ವಂ = ನೀನು, ನ ಕರ್ತಾ = ಸ್ವತಂತ್ರಕರ್ತೃವಲ್ಲ. ಯಸ್ತು = ಯಾವಾತನು, ಸದಾ = ಯಾವಾಗಲೂ, ಪ್ರಭುಃ = ಸ್ವಾಮಿಯಾಗಿದ್ದಾನೋ ಅಂಥ ಶ್ರೀಹರಿಯೇ ಕರ್ತೃವಾಗಿದ್ದಾನೆ. ಇತ್ಯಾದೇಃ = ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ ಜೀವನಲ್ಲಿ ಕರ್ತೃತ್ವವಿಲ್ಲವೆಂದು ತಿಳಿಯುತ್ತದೆ.

ಪರಿಪೂರ್ಣಚಂದ್ರಿಕಾ

## ತತ್ವಪ್ರಕಾಶಿಕಾ

**तत्वप्रकाशिका – जीवस्य स्वतःकर्तृत्वाभावमाक्षिप्य समादधत्सूत्रं पठित्वाऽऽक्षेपांशं तावद् व्याचष्टे – उपसंहारेति ।। न जीवस्य स्वतः कर्तृत्वाभावो वक्तव्यः । अनुभवविरोधात् । स हि यत्कर्तृमारभते तदवसाययतीत्यनुभूयत इत्यर्थः ।**

ಜೀವನು ಸ್ವತಂತ್ರಕರ್ತೃ ಅಲ್ಲವೆಂಬ ವಿಷಯವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು ಪಠಿಸುತ್ತಾ ಸೂತ್ರದಲ್ಲಿರುವ ಆಕ್ಷೇಪಭಾಗವನ್ನು ಉಪಸಂಹಾರ ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಜೀವನು ಸ್ವತಂತ್ರಕರ್ತೃ ಅಲ್ಲವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಅನುಭವವಿರೋಧವಿದೆ. ಯಾವುದೇ ಕಾರ್ಯವನ್ನು ಮಾಡಲು ಪ್ರಾರಂಭಿಸಿದರೆ ಅದನ್ನು ಜೀವನು ಮುಕ್ತಾಯ ಮಾಡುತ್ತಾನೆಂಬುದು ಅನುಭವಸಿದ್ಧವಾಗಿದೆ ಎಂದರ್ಥ.

ವಿವರಣೆ - 'ಉಪಸಂಹಾರದರ್ಶನಾತ್' ಎಂಬುದು ಸೂತ್ರದಲ್ಲಿರುವ ಆಕ್ಷೇಪಭಾಗ. ಜೀವನು ಯಾವುದೇ ಕಾರ್ಯವನ್ನು ಮಾಡಲು ಪ್ರಾರಂಭಿಸಿದರೆ ಅದರ ಉಪಸಂಹಾರವನ್ನು ಕೂಡ ಮಾಡುತ್ತಾನೆಂಬುದು ಪ್ರತಿಯೊಬ್ಬರ ಅನುಭವದಿಂದ ಸಿದ್ಧವಾಗಿದೆ. ಆದ್ದರಿಂದ ಜೀವನಿಗೆ ಸ್ವತಂತ್ರಕರ್ತೃತ್ವವು ಅನುಪಪನ್ನವಾಗಿದೆ ಎಂಬುದು ಸೂತ್ರದಲ್ಲಿರುವ ಅಭಿಪ್ರಾಯ..

**तत्वप्रकाशिका – परिहारांशं व्याचष्टे – नेति ।। कार्योपसंहारदर्शनेन जीवस्यान्यानपेक्षतया न कर्तृत्वसिद्धिः । तत्कार्योपसंहारस्येश्वरनिमित्तत्वात्। न च जीवे दृश्यमानत्वेन जीवस्यैवासाविति वाच्यम् । गोषु वर्तमानस्यापि क्षीरस्यान्नं रसादिरुपेणेति वचनात् प्राणाधीनत्ववदत्राप्युपपत्तेः।**

ಸೂತ್ರದಲ್ಲಿರುವ ಪರಿಹಾರಭಾಗವನ್ನು 'ನ' ಇತ್ಯಾದಿ ಭಾಷ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಕಾರ್ಯವು ಸಮಾಪ್ತಿಯಾಗುವ ಕಾರಣದಿಂದ ಜೀವನು ಸ್ವತಂತ್ರಕರ್ತೃ ಎಂದು ಸಿದ್ಧವಾಗುವುದಿಲ್ಲ. ಏಕೆಂದರೆ ಈಶ್ವರನಿಮಿತ್ತದಿಂದಲೇ ಜೀವನು ಕಾರ್ಯದ ಉಪಸಂಹಾರವನ್ನು ಮಾಡುತ್ತಾನೆ.

ಜೀವನಲ್ಲಿ ಕಾರ್ಯದ ಉಪಸಂಹಾರವು ಕಾಣಿಸುತ್ತಿರುವುದರಿಂದ ಜೀವನು ಸ್ವತಂತ್ರಕರ್ತೃವೆಂದು ಏಕೆ ಹೇಳಬಾರದು ?

ಈ ಪ್ರಶ್ನೆ ತಪ್ಪು. ಗೋವಿನಲ್ಲಿ ಕ್ಷೀರವು ಇದೆ. ಆದರೆ 'ಅನ್ನಂ ರಸಾದಿರೂಪೇಣ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣದಂತೆ ಆ ಕ್ಷೀರವು ಪ್ರಾಣದೇವರ ಅಧೀನವಾಗಿದೆ ಎಂದು ಹೇಗೆ ಹೇಳುತ್ತೇವೋ ಅದರಂತೆ ಜೀವನಲ್ಲಿಯೂ ಕೂಡ ಕಾರ್ಯಸಮಾಪ್ತಿಯು ಭಗವದಧೀನವೆಂದು ಉಪಪಾದನೆ ಮಾಡಬೇಕು.

ವಿವರಣೆ - 'ಕ್ಷೀರವದ್ಧಿ' ಎಂಬ ಸೂತ್ರಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಅನ್ನಂ ರಸಾದಿರೂಪೇಣ' ಎಂಬ ಪ್ರಮಾಣವಚನದಂತೆ ಹಸುವಿನಲ್ಲಿರುವ ಕ್ಷೀರವು ಮುಖ್ಯಪ್ರಾಣನ

ಅಧೀನವಾದಂತೆ ಜೀವರಲ್ಲಿ ಕಾಣಿಸುತ್ತಿರುವ ಕಾರ್ಯೋಪಸಂಹಾರವು ಭಗವದಧೀನವೆಂದು ಹೇಳಬೇಕು ಜೀವನಲ್ಲಿ ಅಸ್ವಾತಂತ್ರ್ಯವೆಂಬ ಬಾಧಕವು ಇರುವುದರಿಂದ ಕಾರ್ಯೋಪಸಂಹಾರವು ಜೀವಕರ್ತೃಕವಲ್ಲ. 'ಯ ಆತ್ಮಾನಂ ಅಂತರೋ ಯಮಯತಿ' ಎಂಬ ಪ್ರಮಾಣವಚನದಂತೆ ಪರಮಾತ್ಮನ ಅಧೀನವೆಂದು ಸಮರ್ಥಿಸಬೇಕು. ಆದ್ದರಿಂದ ಜೀವನಲ್ಲಿ ಸ್ವತಂತ್ರಕರ್ತೃತ್ವವು ಸಿದ್ಧವಾಗುವುದಿಲ್ಲ ಎಂದು ಕ್ಷೀರವದ್ಧಿ ಎಂಬ ಸಿದ್ಧಾಂತಭಾಗದ ಅಭಿಪ್ರಾಯ.

**तत्वप्रकाशिका – न च बाधकवचनबलात् क्षीरस्याऽन्याधीनत्वेऽपि कार्योपसंहारस्य बाधकाभावाज्जीवकर्तृत्वमिति वक्तव्यम् । जीवस्यास्वातन्त्र्येण कार्योपसंहारकर्तृत्वानुपपत्तेरेव बाधकत्वादिति भावः । ननु जीवस्यास्वातन्त्र्यात् कार्योपसंहारकर्तृत्वाभावेऽपि कुतोऽसावीश्वरकृत इत्यत आह – य इति ।।**

ಜೀವನು ಕಾರ್ಯಸಮಾಪ್ತಿಯನ್ನು ಮಾಡುತ್ತಾನೆ. 'ಅನ್ನಂ ರಸಾದಿ ರೂಪೇಣ' ಇತ್ಯಾದಿ ಬಾಧಕವಿರುವುದರಿಂದ ಹಸುವಿನಲ್ಲಿರುವ ಕ್ಷೀರವು ಪ್ರಾಣನ ಅಧೀನವೆಂದು ಒಪ್ಪಬೇಕು. ಆದರೆ ಜೀವನಲ್ಲಿರುವ ಕಾರ್ಯೋಪಸಂಹಾರವು ಜೀವನಲ್ಲೇ ಇದೆ ಎಂದು ಹೇಳಿದರೆ ಯಾವುದೇ ಬಾಧಕವಿಲ್ಲ. ಆದ್ದರಿಂದ ಜೀವನು ಸ್ವತಂತ್ರಕರ್ತೃ ಎಂದು ಹೇಳಬಹುದಲ್ಲವೆ ?

ಇದು ತಪ್ಪು. ಜೀವನಲ್ಲಿ ಅಸ್ವಾತಂತ್ರ್ಯವು ಸಿದ್ಧವಾಗಿರುವುದರಿಂದ ಕಾರ್ಯೋಪಸಂಹಾರದ ಕರ್ತೃತ್ವವು ಅನುಪಪನ್ನವಾಗಿದೆ. ಇದೇ ಈ ವಿಷಯದಲ್ಲಿರುವ ಬಾಧಕ.

ಜೀವನು ಅಸ್ವತಂತ್ರನಾದ್ದರಿಂದ ಕಾರ್ಯೋಪಸಂಹಾರರೂಪ ಕರ್ತೃತ್ವವಿಲ್ಲವೆಂದು ಒಪ್ಪೋಣ. ಆದರೆ ಈಶ್ವರನ ಅಧೀನವೆಂದೇ ಏಕೆ ಹೇಳಬೇಕು ? ಎಂಬ ಪ್ರಶ್ನೆಗೆ 'ಯ ಆತ್ಮಾನಮ್' ಎಂಬುದಾಗಿ ಉತ್ತರಿಸುತ್ತಿದ್ದಾರೆ.

ವಿವರಣೆ - ಕಾರ್ಯೋಪಸಂಹಾರದ ಅನುಪಪತ್ತಿಯನ್ನು ಭಾಷ್ಯದಲ್ಲಿ ಹೇಳಿದ್ದಾರೆ. ಇದು ಕೇವಲ ಉಪಲಕ್ಷಣ. ವಿಚಾರ ಮಾಡಿದರೆ ಕಾರ್ಯೋಪಸಂಹಾರ ಕರ್ತೃತ್ವವು ಕೂಡ ಜೀವನಲ್ಲಿ ಕಾಣಿಸುತ್ತಿಲ್ಲ. ರೈತರು ಕೆಲವುಬಾರಿ ಕೃಷಿಯನ್ನು ಪ್ರಾರಂಭಿಸಿದರೆ ಅದರ ಮುಕ್ತಾಯದಿಂದ ಫಲವನ್ನು ಅನುಭವಿಸಲು ಆಗುವುದಿಲ್ಲ. ಯೋಧರು ಜಯವನ್ನು ಗಳಿಸಲೇ ಬೇಕೆಂದು ಯುದ್ಧಪ್ರಾರಂಭ ಮಾಡಿದಾಗ ಜಯವನ್ನು ಕಾಣುತ್ತಿಲ್ಲ. ವ್ಯಾಪಾರ ಮಾಡುವವರು ಶ್ರೀಮಂತರಾಗಲು ಹೊರಟರೂ ಶ್ರೀಮಂತರಾಗುತ್ತಿಲ್ಲ. ಹೀಗೆ ಅನೇಕಸ್ಥಳದಲ್ಲಿ ಕಾರ್ಯವಿಚ್ಛೇದವು ಕಾಣಿಸುತ್ತಿರುವುದರಿಂದ ಕಾರ್ಯೋಪಸಂಹಾರವು ಕೂಡ ಇರುವುದಿಲ್ಲ ಎಂದು ತಿಳಿಯಬೇಕು.

## ಬ್ರಹ್ಮಸೂತ್ರ

**सूत्रम् – देवादिवदपि लोके ।।**

ನಿಯಾಮಕನಾದ ಪರಮಾತ್ಮನು ಕಣ್ಣಿಗೆ ಕಾಣಿಸುವುದಿಲ್ಲ. ದೇವತೆಗಳು ಅನೇಕ ಮಂದಿ ಇದ್ದರೂ ಅದೃಶ್ಯತ್ವ ಶಕ್ತಿಯಿಂದ ಹೇಗೆ ಕಾಣಿಸುವುದಿಲ್ಲವೋ ಅದರಂತೆ ಪರಮಾತ್ಮನೂ ಕೂಡ ಕಾಣಿಸಿರುವುದಿಲ್ಲ. ಲೋಕದಲ್ಲಿ ಇಂತಹ ಅದೃಶ್ಯತ್ವ ಶಕ್ತಿಯು ನೀಚವಾದ ಪಿಶಾಚಾದಿಗಳಲ್ಲಿಯೂ ಕಂಡಿದೆ.

## ಸೂತ್ರದೀಪಿಕಾ

**सूत्रदीपिका — देवादिवदपि लोके ।। एवम्भूतेऽश्वरस्यापि देवादिवत् अदर्शनं युज्यते । कथमेतदित्यत उक्तम् — लोक इति । लोके जगति पिशाचादीनामपि अदृश्यत्वादिशक्तिर्दृष्टा। सर्वेश्वरस्य तु किं वाच्यमित्यर्थः ।।५।।**

ಅರ್ಥ -- ಎಲ್ಲೆಡೆ ಸ್ವತಂತ್ರ ಕಾರಣನಾದ ಈಶ್ವರನು, ಅಪಿ = ಇದ್ದರೂ ಕೂಡ, ದೇವಾದಿವತ್= ದೇವತೆ ಮೊದಲಾದವರಂತೆ ಗೋಚರನಾಗುವುದಿಲ್ಲ. ಏಕೆಂದರೆ ಲೋಕೇ = ಜಗತ್ತಿನಲ್ಲಿ ನೀಚವಾದ ಪಿಶಾಚಾದಿಗಳಲ್ಲಿಯೂ ಅದೃಶ್ಯತ್ವ ಶಕ್ತಿಯು ಕಂಡಿರುತ್ತದೆ. ಹೀಗಿರುವಾಗ ಸರ್ವೋತ್ತಮನಾದ ಪರಮಾತ್ಮನಲ್ಲಿ ಇಂತಹ ಶಕ್ತಿಯು ಇರುತ್ತದೆಂದು ಪ್ರತ್ಯೇಕವಾಗಿ ಹೇಳಬೇಕೇನು?

## ಬ್ರಹ್ಮಸೂತ್ರಭಾಷ್ಯ

**भाष्यम् — ।। देवादिवदपि लोके ।।५।।**

**न च कर्तुरीश्वरस्यादृष्टिविरोधः । देवादिवददृश्यत्वशक्तियोगात् । लोकेऽपि पिशाचादीनां तादृशी शक्तिर्दृष्टा किम्वीश्वरस्य ।**

**ಅನುವಾದ - ಈಶ್ವರನು ಜಗತ್ಕರ್ತೃವಾಗುವುದಾದರೆ ನಮಗೇಕೆ ಕಾಣಿಸುತ್ತಿಲ್ಲ? ಕಾಣಿಸುತ್ತಿಲ್ಲವಾದ್ದರಿಂದ ಅವನು ಜಗತ್ತಿಗೆ ಕರ್ತೃವಾಗುವುದಿಲ್ಲ. ಈ ಆಕ್ಷೇಪ ತಪ್ಪು. ಏಕೆಂದರೆ ಕಣ್ಣಿಗೆ ಕಾಣಿಸುವುದಿಲ್ಲವೆಂದ ಮಾತ್ರಕ್ಕೆ ಇಲ್ಲವೆಂದರ್ಥವಲ್ಲ. ದೇವತೆಗಳು ನಮಗೆ ಕಾಣದಿದ್ದರೂ ಕಣ್ಣಿಗೆ ಕಾಣಿಸುವ ಶಕ್ತಿ ಅವರಲ್ಲಿರುತ್ತದೆ. ಲೋಕದಲ್ಲಿಯೂ ಇದಕ್ಕೆ ಉದಾಹರಣೆ ಕಂಡಿದೆ - ಪಿಶಾಚ ಮೊದಲಾದವು ತಮ್ಮ ಅದೃಶ್ಯತ್ವ ಶಕ್ತಿಯಿಂದ ನಮಗೆ ಕಾಣಿಸಿಕೊಳ್ಳದೆ ಕೆಲಸವನ್ನು ಮಾಡುವುದು ಕಂಡಿದೆ. ಇನ್ನು ಭಗವಂತನ ವಿಷಯದಲ್ಲಿ ಇಂಥ ಶಕ್ತಿಯಿರುವುದರಲ್ಲಿ ಏನೂ ಆಶ್ಚರ್ಯವಿಲ್ಲ.**

ಪ್ರತಿಪದಾರ್ಥ -- ಜೀವನಿಗೆ ಈಶ್ವರಾಧೀನಕರ್ತೃತ್ವವನ್ನು ಹೇಳುವ ಅವಶ್ಯಕತೆಯಿಲ್ಲ. ಈಶ್ವರನೇ ಇರುವುದಿಲ್ಲ. ಇರುವುದಾದಲ್ಲಿ ನಮ್ಮ ಕಣ್ಣಿಗೆ ಕಾಣಸಬೇಕಾಗಿತ್ತು. ಈ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ. ಕರ್ತುಃ = ಸರ್ವಕರ್ತೃವಾದ, ಈಶ್ವರಸ್ಯ = ಈಶ್ವರನಿಗೆ, ಅದೃಷ್ಟಿವಿರೋಧಃ = ಕಣ್ಣಿಗೆ ಕಾಣಿಸುವುದಿಲ್ಲವೆಂಬ ಅದರ್ಶನವಿರೋಧವು, ನಚ = ಬರುವುದಿಲ್ಲ. ದೇವಾದಿವತ್ = ದೇವತೆಗಳಂತೆ, ಅದೃಶ್ಯತ್ವಶಕ್ತಿಯೋಗಾತ್ = ಅದೃಶ್ಯಶಕ್ತಿ ಇರುವುದರಿಂದ ಯುಕ್ತವಾಗುತ್ತದೆ. ಲೋಕೇ = ಲೋಕದಲ್ಲಿ, ಪಿಶಾಚಾದೀನಾಂ = ಪಿಶಾಚ ಮೊದಲಾದವುಗಳಿಗೆ, ತಾದೃಶೀಶಕ್ತಿಃ = ಅದೃಶ್ಯಶಕ್ತಿಯು, ದೃಷ್ಟಾ = ಕಂಡಿರುತ್ತದೆ. ಹೀಗಿರುವಾಗ, ಈಶ್ವರಸ್ಯ = ಬ್ರಹ್ಮನ ವಿಷಯದಲ್ಲಿ, ಕಿಮು = ಹೇಳುವುದೇನು?

ಇತರವ್ಯಪದೇಶಾಧಿಕರಣ (೨-೧-೭)

भाष्यम् –

**'न युक्तियोगाद् वाक्यानि निराकार्याण्यपि क्वचित् ।**
**विरोध एव वाक्यानां युक्तयो न तु युक्तयः ॥'**
**इति बृहत्संहितायाम् ॥५॥**

ಅನುವಾದ - ಯುಕ್ತಿಯ ಆಧಾರದಿಂದ ಆಗಮ ಪ್ರಮಾಣಗಳನ್ನು ನಿರಾಕರಣೆ ಮಾಡಬಾರದು. ಪ್ರಮಾಣಗಳಿಗೆ ವಿರುದ್ಧವಾದ ಯುಕ್ತಿಗಳು ಯುಕ್ತಿಗಳೆಂದೇ ಕರೆಸಿಕೊಳ್ಳುವುದಿಲ್ಲ. ಹೀಗೆ ಬೃಹತ್ ಸಂಹಿತೆಯು ಹೇಳುತ್ತಿದೆ.

ಪ್ರತಿಪದಾರ್ಥ -- ಪರಮಾತ್ಮನು ಅನುಪಲಬ್ಧನಾದ ಕಾರಣದಿಂದ ಇಲ್ಲವೆಂದು ಹೇಳಬಾರದೆನ್ನಲು ಶ್ರುತಿಪ್ರಮಾಣವನ್ನು ಹೇಳಿದರು. ಈ ಶ್ರುತಿಯನ್ನು ನಿರಾಕರಣೆ ಮಾಡಬಾರದೆನ್ನಲು ಸ್ಮೃತಿಯನ್ನು ಆಧಾರವನ್ನಾಗಿ ಹೇಳುತ್ತಿದ್ದಾರೆ. ಯುಕ್ತಿಯೋಗಾತ್ = ಯುಕ್ತಿಯ ಆಧಾರದಿಂದ, ವಾಕ್ಯಾನಿ = ಆಗಮವಾಕ್ಯಗಳನ್ನು, ನ ನಿರಾಕಾರ್ಯಾಣಿ = ನಿರಾಕರಣೆ ಮಾಡಬಾರದು, ಕ್ವಚಿತ್ = ಕೆಲವುಸ್ಥಳಗಳಲ್ಲಿ, ವಾಕ್ಯನಾಂ = ವಾಕ್ಯಗಳ, ವಿರೋಧ, ಏವ = ವಿರೋಧವು ಪ್ರಾಪ್ತವಾದರೆ, ಯುಕ್ತಯಃ = ಯುಕ್ತಿಗಳು, ನ ತು ಯುಕ್ತಮ್ = ಯುಕ್ತಿಗಳೆಂದೆ ಕರೆಸಿಕೊಳ್ಳುವುದಿಲ್ಲ. ಇತಿ = ಹೀಗೆ, ಬೃಹತ್ ಸಂಹಿತಾಯಾಮ್ = ಬೃಹತ್‌ಸಂಹಿತೆಯಲ್ಲಿ ಹೇಳಲಾಗಿದೆ.

## ತತ್ವಪ್ರಕಾಶಿಕಾ

तत्वप्रकाशिका –

**न जीवस्येऽश्वराधीनकर्तृत्वं वाच्यम् । तस्यैवाभावात्। न च श्रुत्या तत्सिद्धिः। तस्यानुपलब्धिबाधितत्वात् । अथ च कल्पने गौरवं स्यात् । अतो जीव एव लाघवाज्जगत्कर्तेत्याशङ्कां परिहरत्सूत्रमुपन्यस्य व्याचष्टे – देवेति ॥**

ಜೀವನು ಭಗವದಧೀನವಾದ ಕರ್ತೃತ್ವವುಳ್ಳವನೆಂದು ಹೇಳಬಾರದು. ಏಕೆಂದರೆ ಭಗವಂತನೇ ಇರುವುದಿಲ್ಲ. ಶ್ರುತಿಯಿಂದ ಭಗವಂತನು ಸಿದ್ಧನಾಗುತ್ತಾನೆಂದು ಹೇಳಲಾಗದು. ಎಲ್ಲೂ ಕೂಡ ಅವನು ಕಾಣುಸುತ್ತಿಲ್ಲವಾದ್ದರಿಂದ ಅನುಪಲಬ್ಧವೆಂಬ ಬಾಧಕವಿರುವುದರಿಂದ ಶ್ರುತಿಯು ಬಾಧಿತವಾಗುತ್ತದೆ. ಇಲ್ಲದ ವಸ್ತುವನ್ನು ಕಲ್ಪನೆ ಮಾಡುವುದರಿಂದ ಕಲ್ಪನಾಗೌರವದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ಲಾಘವವಿರುವುದರಿಂದ ಜೀವನೇ ಜಗತ್ತಿಗೆ ಕರ್ತೃ ಆಗಿದ್ದಾನೆಂದು ಒಪ್ಪಬೇಕು.

ಈ ಆಕ್ಷೇಪವನ್ನು ಪರಿಹರಿಸುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡಲು 'ದೇವಾದಿವತ್' ಇತ್ಯಾದಿ ಸೂತ್ರವು ಹೊರಟಿದೆ.

**तत्वप्रकाशिका – नेश्वरस्य कर्तृत्वाङ्गीकारे गौरवम् । स हि कर्तेत्यादि श्रुतिसिद्धत्वात् । नाप्यनुपलब्धिविरोधः । अदृष्टानामपि देवादीनां विद्यमानत्वात् तच्च प्रतिपादितम् ।**

ಈಶ್ವರನಲ್ಲಿ ಕರ್ತೃತ್ವವನ್ನು ಒಪ್ಪುವುದರಿಂದ ಗೌರವದೋಷವು ಬರುವುದಿಲ್ಲ. ಏಕೆಂದರೆ 'ಸ ಹಿ ಸರ್ವಸ್ಯ ಕರ್ತಾ' ಇತ್ಯಾದಿಯಾಗಿ ಶ್ರುತಿಗಳಿಂದ ಈಶ್ವರಲ್ಲಿ ಕರ್ತೃತ್ವವು ಸಿದ್ಧವಾಗಿದೆ.

ಕಣ್ಣಿಗೆ ಈಶ್ವರನು ಕಾಣುಸುತ್ತಿಲ್ಲವೆಂಬ ಅನುಪಲಬ್ಧಿವಿರೋಧವಿದೆಯಲ್ಲವೆ? ಎಂಬ ಪ್ರಶ್ನೆಗೆ ಉತ್ತರವಿಲ್ಲ. ಏಕೆಂದರೆ ದೇವತೆಗಳು ಅನುಪಲಬ್ಧರಾಗಿದ್ದರೂ ಕೂಡ ಇದ್ದಾರೆಂಬುದಾಗಿ ಅಭಿಮಾನ್ಯಧಿಕರಣದಲ್ಲಿ ಪ್ರತಿಪಾದಿಸಲಾಗಿದೆ.

ವಿವರಣೆ - ಈಶ್ವರನು ಅನುಪಲಬ್ಧನಾದ್ದರಿಂದ ಇಲ್ಲವೆಂದು ಪೂರ್ವಪಕ್ಷಿಗಳು ಆಕ್ಷೇಪ ಮಾಡಿದರು. ಅದಕ್ಕೆ ಇಲ್ಲಿ ಪರಿಹಾರವನ್ನು ಹೇಳುತ್ತಿದ್ದಾರೆ. ಅಭಿಮಾನ್ಯಧಿಕರಣದಲ್ಲಿ ಅನುಪಲಬ್ಧರಾಗಿದ್ದರೂ ಕೂಡ ದೇವತೆಗಳನ್ನು ಅಂಗೀಕಾರ ಮಾಡಬೇಕೆಂದು ಸಮರ್ಥನೆ ಮಾಡಲಾಗಿದೆ. ಅದೇ ನ್ಯಾಯವನ್ನು ಇಲ್ಲಿ ವಿವಕ್ಷಿಸಿ ಈಶ್ವರನು ಕೆಲವರಿಂದ ಉಪಲಬ್ಧನಾಗಿದ್ದಾನೆಂಬ ಕಾರಣದಿಂದ ಅವನನ್ನೇ ಅಲ್ಲಗಳೆಯಬಾರದು. 'ಯನ್ನೋಪಲಭ್ಯತೇ ತನ್ನಾಸ್ತಿ' ಎಂಬ ವ್ಯಾಪ್ತಿಗೆ 'ಅದೃಷ್ಟಾನಾಮಪಿ' ಎಂಬ ವಾಕ್ಯದಿಂದ ವ್ಯಭಿಚಾರವನ್ನು ಹೇಳುತ್ತಿದ್ದಾರೆ. (ವಾಕ್ಯಾರ್ಥವಿವರಣೆ)

**तत्वप्रकाशिका – देवादीनामदृश्यत्वशक्तिमत्त्वाद्युक्तानुपलब्धिरिति चेत् सममीश्वरस्यापि । तादृशशक्तित्वात् । कुतः । लोके पिशाचादीनामनीश्वराणां तादृशशक्तिमत्वे सर्वेश्वरस्य सुतरां तत्सिद्धेः । अतो नेश्वरस्य कर्तृत्वाङ्गीकारे गौरवं किं त्वश्रौतजीवकर्तृत्वाङ्गीकार एव तद्भवति । तदभावात् सिद्धान्ते लाघवमेवेति भावः ।**

ದೇವತೆಗಳಿಗೆ ಅದಶ್ಯತ್ವಶಕ್ತಿಯಿರುವುದರಿಂದ ಅವರು ಅನುಪಲಬ್ಧರಾಗುವುದು ಬಾಧಕವಲ್ಲವೆಂದು ಹೇಳಿದರೆ ಈಶ್ವರ ವಿಷಯದಲ್ಲೂ ಕೂಡ ಹೀಗೆಯೇ ಉತ್ತರಿಸುತ್ತೇವೆ. ದೇವತೆಗಳಿಗೆ ಅದೃಶ್ಯತ್ವ ಶಕ್ತಿಯಿರುವಂತೆ ಪರಮಾತ್ಮನಲ್ಲೂ ಕೂಡ ಅಂಥ ಶಕ್ತಿ ಇರುತ್ತದೆ. ಏಕೆಂದರೆ ಲೋಕದಲ್ಲಿ ಯಾವುದೇ ಪ್ರಭುತ್ವವಿಲ್ಲದ ಪಿಶಾಚಾದಿಗಳಲ್ಲೇ ಅದೃಶ್ಯತ್ವಶಕ್ತಿಯು ಕಂಡಿದೆ. ಹೀಗಿರುವಾಗ ಸರ್ವೇಶ್ವರನಾದ ಈಶ್ವರನಲ್ಲಿ ಅಂಥ ಅದೃಶ್ಯತ್ವಶಕ್ತಿಯು ಸುತರಾಂ ಸಿದ್ಧವಾಗುತ್ತದೆ. ಆದ್ದರಿಂದ ಈಶ್ವರನಲ್ಲಿ ಕರ್ತೃತ್ವವನ್ನು ಅಂಗೀಕಾರ ಮಾಡಿದರೆ ಗೌರವದೋಷವು ಬರುವುದಿಲ್ಲ. ಮತ್ತೇನೆಂದರೆ ಯಾವುದೇ ಶ್ರುತಿಯಲ್ಲಿ ಕೇಳಿಸದ ಜೀವಕರ್ತೃತ್ವವನ್ನು ಅಂಗೀಕಾರ ಮಾಡಿದರೆ ಮಾತ್ರ ಗೌರವದೋಷವು ಬರುತ್ತದೆ. ಸಿದ್ಧಾಂತದಲ್ಲಿ ಅಶ್ರುತವಾದ ಜೀವಕಕರ್ತೃತ್ವವನ್ನು ಒಪ್ಪದ ಕಾರಣ ಲಾಘವ ದೋಷವೇ ಇದೆ ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ - ಸೂತ್ರದಲ್ಲಿರುವ ಅಪಿಶಬ್ದದ ಅರ್ಥವನ್ನು ಟೀಕೆಯಲ್ಲಿ 'ಅನೀಶ್ವರಾಣಾಮ್' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ ಪಿಶಾಚಾದಿಗಳಿಗೇನೇ ಅದೃಶ್ಯತ್ವ ಶಕ್ತಿಯಿದ್ದಾಗ ಪರಮಾತ್ಮನ

ವಿಷಯದಲ್ಲಿ ಕಿಮುತ? ಎಂಬುದು ಇದರ ಅಭಿಪ್ರಾಯ. ಭಾಷ್ಯಕ್ಕೆ ಅಭಿಪ್ರೇತವಾದ ಶ್ರುತಿಗಳಲ್ಲಿ ಜೀವಕರ್ತೃತ್ವ ಸಾಧಕವಾದ ಯಾವುದೇ ಆಧಾರಗಳಿರುವುದಿಲ್ಲ. ವಿಪರೀತವಾಗಿ ಬಾಧಕವೇ ಇರುತ್ತದೆ. ಆದ್ದರಿಂದ ಪೂರ್ವಪಕ್ಷದಲ್ಲೇ ಕಲ್ಪನಾಗೌರವ ದೋಷವಿದೆ ಎಂಬುದಾಗಿ ನ್ಯಾಯವಿವರಣದಲ್ಲಿ ಇದೆ. ಅದನ್ನು ಪ್ರಕೃತ ಟೀಕೆಯಲ್ಲಿ ಸಮರ್ಥನೆ ಮಾಡುತ್ತಿದ್ದಾರೆ. (ವಾಕ್ಯಾರ್ಥಮುಕ್ತಾವಳಿ-ಭಾವದೀಪ)

**ತತ್ವಪ್ರಕಾಶಿಕಾ – यदभिप्रेतं श्रुतिसिद्धः परमेश्वरो नानुपलब्धियुक्त्या निराकार्य इति तत्र स्मृतिं चाह – नेति ।। युक्तियोगाद्युक्त्युपायात् । वाक्यानां विरोधे युक्तीनां जाते सति ता एव युक्तयो न युक्तयः किंत्वाभासा इत्यर्थः । वाक्यानां परस्परविरोधे युक्तयोऽर्थसाधिका न तु केवलयुक्तय इति वा ।।**

ಶ್ರುತಿಸಿದ್ಧನಾಗಿರುವುದರಿಂದ ಈಶ್ವರನು ಅನುಪಲಬ್ಧಿಯುಕ್ತಿಯಿಂದ ನಿರಾಕರಣೆಗೆ ಅರ್ಹನಾಗಿರುವುದಿಲ್ಲ ಎಂಬ ವಿಷಯದಲ್ಲಿ ಸ್ಮೃತಿ ಪ್ರಮಾಣವನ್ನು 'ನಯುಕ್ತಿಯೋಗಾತ್' ಇತ್ಯಾದಿಯಾಗಿ ಭಾಷ್ಯದಲ್ಲಿ ಹೇಳಿದ್ದಾರೆ.

'ಯುಕ್ತಿಯೋಗಾತ್' ಎಂಬುದಕ್ಕೆ ಯುಕ್ತಿರೂಪವಾದ ಉಪಾಯ ಇರುವುದರಿಂದ ಎಂದರ್ಥ. ವಾಕ್ಯಗಳ ವಿರೋಧವು ಯುಕ್ತಿಗಳಿಗೆ ಬಂದಾಗ ಅವುಗಳು ಯುಕ್ತಿಯೆಂದೇ ಕರೆಸಿಕೊಳ್ಳಲು ಅರ್ಹವಾಗಲಾರವು. 'ಯುಕ್ತ್ಯಾಭಾಸ' ಎಂದೇ ಕರೆಸಿಕೊಳ್ಳಲು ಅರ್ಹವಾಗುತ್ತವೆ. ಅಥವಾ ವಾಕ್ಯಗಳಿಗೆ ಪರಸ್ಪರ ವಿರೋಧ ಬಂದರೆ ಮಾತ್ರ ಯುಕ್ತಿಗಳು ಅರ್ಥಸಾಧಕವಾಗುತ್ತವೆ. ಕೇವಲ ಯುಕ್ತಿಗಳು ಅರ್ಥಸಾಧಕ ಆಗುವುದಿಲ್ಲ.

ವಿವರಣೆ – ವಾಕ್ಯಗಳ ವಿರೋಧ ಇರುವುದರಿಂದ ಅನುಪಲಬ್ಧಿ ಎಂಬ ಯುಕ್ತಿಗೆ ಆಭಾಸತ್ವವನ್ನು ಹೇಳುವುದಾದರೆ ಬ್ರಹ್ಮಮೀಮಾಂಸಶಾಸ್ತ್ರವೇ ಅನಾರಂಭಣೀಯವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ 'ವಾಕ್ಯನಾಮ್' ಇತ್ಯಾದಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ (ವಾಕ್ಯಾರ್ಥಮುಕ್ತಾವಳಿ)

ಶ್ರುತಿವಿರೋಧ ಬಂದಾಗ ಯುಕ್ತಿಗಳನ್ನು ಕೈಬಿಡಬೇಕು. ಶ್ರುತಿಗಳಲ್ಲೇ ಪರಸ್ಪರ ವಿರೋಧ ಬಂದಾಗ ಯುಕ್ತಿಯಿಂದ ಆ ವಿರೋಧವನ್ನು ಪರಿಹರಿಸಬೇಕು. ಇದಕ್ಕಾಗಿ ಬ್ರಹ್ಮಮೀಮಾಂಸಾಶಾಸ್ತ್ರವು ಹೊರಡಲೇಬೇಕು.

## ಬ್ರಹ್ಮಸೂತ್ರ

**सूत्रम् – कृत्स्नप्रसक्तिर्निरवयवत्वशब्दकोपो वा ।।**

ಜೀವನು ಸ್ವತಂತ್ರಕರ್ತೃವಲ್ಲ. ಏಕೆಂದರೆ ಸಣ್ಣ ಪುಟ್ಟ ಕೆಲಸಗಳಲ್ಲಿ ತಾನು ಸಂಪೂರ್ಣ ಶಕ್ತಿಯನ್ನು ವಿನಿಯೋಗಿಸಲಾರ. ಕೇವಲ ಶಕ್ತಿಯ ಒಂದಂಶವನ್ನಷ್ಟೆ ವಿನಿಯೋಗಿಸುತ್ತಾನೆ. ಆದ್ದರಿಂದ ಜೀವನು ಜಗತ್ಕರ್ತೃವಾಗಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ನಿರವಯವಶ್ರುತಿಗೆ ವಿರೋಧ ಮಾಡಿದಂತಾಗುತ್ತದೆ. ಆದ್ದರಿಂದ ಜೀವನಿಗೆ ಅಂಶವನ್ನು ಒಪ್ಪಬಾರದು.

ಪರಿಪೂರ್ಣಚಂದ್ರಿಕಾ

## ಸೂತ್ರದೀಪಿಕಾ

**सूत्रदीपिका — कृत्स्नप्रसक्तिर्निरवयवत्वशब्दकोपो वा ।। वाशब्दः** पक्षभेदेन दोषापादनसूचकः । जीवस्य स्वतःकर्तृत्वे सर्वकात्स्न्येन प्रवर्तने चाङ्गीकृते **कृत्स्नप्रसक्तिः** तृणादानादिसर्वकार्येष्वपि सर्वसामर्थ्यप्रवृत्तिप्रसङ्गः । तत्परिहाराय एकदेशेन प्रवृत्त्यभ्युपगमे च **निरवयवत्वशब्दकोपः** । 'नित्यो निरवयव' इति श्रुतिविरोधः स्यादित्यर्थः ।।६।।

ಅರ್ಥ -- ವಾ ಎಂಬ ಶಬ್ದವು ಪಕ್ಷಭೇದದಿಂದ ದೋಷಾಪಾದನೆಯನ್ನು ಸೂಚಿಸುತ್ತಿದೆ. ಜೀವನೇ ಸ್ವತಃ ಕರ್ತೃವಾಗುವುದಾದರೆ, ಕೃತ್ಸ್ನಪ್ರಸಕ್ತಿಃ = ಹುಲ್ಲನ್ನು ಎತ್ತುವಾಗ ಪೂರ್ಣ ಸಾಮರ್ಥ್ಯವನ್ನು ಉಪಯೋಗಿಸಬೇಕಾದೀತು. ಈ ಆಕ್ಷೇಪದ ಪರಿಹಾರಕ್ಕಾಗಿ ತನ್ನ ಶಕ್ತಿಯ ಏಕದೇಶವನ್ನಷ್ಟೆ ಉಪಯೋಗಿಸುತ್ತಾನೆಂದು ಹೇಳುವುದಾದರೆ, ನಿರವಯವತ್ವಶಬ್ದಕೋಪಃ = 'ನಿತ್ಯೋ ನಿರವಯವಃ' ಎಂಬ ಶ್ರುತಿ ವಿರೋಧವು ಪ್ರಾಪ್ತವಾಗುತ್ತದೆ.

॥ ಸೂತ್ರದೀಪಿಕೆಯಲ್ಲಿ ಇತರವ್ಯಪದೇಶಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

**भाष्यम् — ।। कृत्स्नप्रसक्तिर्निरवयवत्वशब्दकोपो वा ।।६।।**

**अयं च दोषो जीवकर्तृत्वपक्षे । एकेनाङ्गुलिमात्रेण प्रवर्तमानोऽपि पूर्णप्रवृत्तिः स्यात् । न च तद् युज्यते, सामर्थ्यैकदेशदर्शनात् ।**

ಅನುವಾದ - ಜೀವನು ಕರ್ತೃವಾಗಿದ್ದಾನೆಂಬ ಪಕ್ಷದಲ್ಲಿ ಮತ್ತೊಂದು ದೋಷವಿದೆ. ಜೀವನು ಸ್ವತಂತ್ರಕರ್ತೃವಾದರೆ ಒಂದೇ ಬೆರಳಿನಿಂದ ಯಾವ ಹುಲ್ಲುಕಡ್ಡಿಯನ್ನು ಎತ್ತುತ್ತಾನೋ ಆ ಸಂದರ್ಭದಲ್ಲಿ ಸಂಪೂರ್ಣ ಸಾಮರ್ಥ್ಯ ಉಪಯೋಗಿಸಿ ಹುಲ್ಲನ್ನು ಎತ್ತಬೇಕಾದೀತು.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ಜೀವನಿಗೆ ಸ್ವತಂತ್ರಕರ್ತೃತ್ವವನ್ನು ನಿರಾಕರಣೆ ಮಾಡಲು ಸೂತ್ರ ಹೊರಟಿದೆ. ಜೀವಕರ್ತೃತ್ವಪಕ್ಷೇ = ಜೀವನು ಸ್ವತಂತ್ರನಾಗಿದ್ದಾನೆ ಎಂಬ ಪಕ್ಷದಲ್ಲಿ, ಅಯಂ ದೋಷಃ = ಮುಂದೆ ಹೇಳುವ ಇನ್ನೊಂದು ದೋಷವು ಬರುತ್ತದೆ. ಏಕೇನ = ಒಂದೇ, ಅಂಗುಲೀಮಾತ್ರೇಣ = ಕೇವಲ ಬೆರಳಿನಿಂದ, ಪ್ರವರ್ತಮಾನೋಪಿ = ಹುಲ್ಲುಕಡ್ಡಿಯನ್ನು ಎತ್ತಲು ಪ್ರಯತ್ನಿಸಿದಾಗಲೂ, ಪೂರ್ಣಪ್ರವೃತ್ತಿಃ = ಸಂಪೂರ್ಣವಾದ ಪ್ರಯತ್ನವನ್ನು, ಸ್ಯಾತ್ = ಮಾಡಬೇಕಾದೀತು. ತದ್ = ಅಂಥ ಸಂಪೂರ್ಣಸಾಮರ್ಥ್ಯವು,

ನ ಚ ಯುಜ್ಯತೇ = ಯುಕ್ತವಾಗುವುದಿಲ್ಲ. ಏಕೆಂದರೆ, ಸಾಮರ್ಥ್ಯೈಕದೇಶದರ್ಶನಾತ್ = ಸ್ವಲ್ಪಮಾತ್ರ ಪ್ರಯತ್ನ ಪಡುವುದು ಕಾಣಸುತ್ತಿದೆ.

**भाष्यम् – न चैकदेशेन, निरवयवत्वात् । 'अथ यस्य जीवः स नित्यो निरवयवो ज्ञाताऽज्ञाता सुखी दुःखी शरीरेन्द्रियस्थः' इति भाल्लवेयश्रुतिः।**

ಅನುವಾದ - ಜೀವನು ಸಾಮರ್ಥ್ಯದ ಏಕದೇಶವನ್ನೇ ಉಪಯೋಗಿಸಿ ಹುಲ್ಲುಕಡ್ಡಿಯನ್ನು ಎತ್ತುತ್ತಾನೆಂದು ಹೇಳಬಹುದಲ್ಲವೆ? ಎನ್ನಲು ಸಾಧ್ಯವಿಲ್ಲ. ಏಕೆಂದರೆ ಜೀವನು ನಿರವಯವ-ನಾಗಿದ್ದಾನೆಂದು ಭಾಲ್ಲವೇಯ ಶ್ರುತಿಯು ಹೇಳುತ್ತಿದೆ. ಯಾವ ಜೀವನಿದ್ದಾನೋ ಅವನು ನಿತ್ಯನೂ ಅವಯವ ರಹಿತನೂ, ಜ್ಞಾತೃವೂ, ಸರ್ವಜ್ಞನೂ, ಸುಖಿಯೂ, ದುಃಖಿಯೂ ಶರೀರ ಇಂದ್ರಿಯವುಳ್ಳವನೂ ಆಗಿರುತ್ತಾನೆ.

ಪ್ರತಿಪದಾರ್ಥ -- 'ಏಕದೇಶೇನ' ಸಾಮರ್ಥ್ಯದ ಏಕದೇಶದಿಂದ ಪ್ರಯತ್ನಪಡುತ್ತಾನೆಂಬುದು, ನಚ = ಯುಕ್ತವಾಗುವುದಿಲ್ಲ. ನಿರವಯತ್ವಾತ್= ನಿರವಯವನಾದ್ದರಿಂದ, ಯಃ = ಯಾವ, ಜೀವಃ = ಜೀವನಿದ್ದಾನೋ ಅವನು, ನಿತ್ಯಃ = ನಾಶರಹಿತನು, ನಿರವಯವಃ = ಅಂಶವಿಲ್ಲದನು. ಜ್ಞಾತಾ = ತಿಳುವಳಿಕೆ ಇರುವವನು, ಅಜ್ಞಾತಾ = ಅಸರ್ವಜ್ಞನು, ಸುಖೀ = ಸುಖವುಳ್ಳವನು, ದುಃಖೀ = ದುಃಖವುಳ್ಳವನು, ಶರೀರೇಂದ್ರಿಯಸ್ಥಃ = ಶರೀರ ಇಂದ್ರಿಯಗಳನ್ನು ಹೊಂದಿರುವವನು, ಇತಿ = ಹೀಗೆ, ಭಾಲ್ಲವೇಯಶ್ರುತಿಃ = ಭಾಲ್ಲವೇಯ ಶ್ರುತಿಯು ಹೇಳುತ್ತಿದೆ.

**भाष्यम् – न च उपाधिकृतांशः स एवांश उपहित इति, द्वित्वापेक्षत्वात्।**

ಅನುವಾದ - ಜೀವನಿಗೆ ಸ್ವಾಭಾವಿಕವಾದ ಅಂಶಗಳಿಲ್ಲದಿರಬಹುದು. ಆದರೆ ಔಪಾಧಿಕವಾದ ಅಂಶಗಳನ್ನು ಒಪ್ಪಬಹುದಲ್ಲವೆ? ಇದು ತಪ್ಪು. ಔಪಾಧಿಕವಾದ ಅಂಶಭೇದವನ್ನು ಒಪ್ಪಲು ಸಾಧ್ಯವಿಲ್ಲ. ಜೀವನ ಏಕದೇಶಕ್ಕೆ ಉಪಾಧಿಯ ಸಂಬಂಧವನ್ನು ಹೇಳಬೇಕೆಂದರೆ ಮೊದಲೇ ಅಂಶವಿದೆ ಎಂದು ಒಪ್ಪಬೇಕು. ಸಮಗ್ರ ಜೀವನನ್ನು ಉಪಾಧಿಯು ಸಂಬಂಧಪಡುವುದಾದರೆ ಅಂಶಭೇದವಿರಲು ಸಾಧ್ಯವೇ ಇಲ್ಲ. ಆದ್ದರಿಂದ ಔಪಾಧಿಕಭೇದವನ್ನು ಹೇಳಲಾಗದು.

ಪ್ರತಿಪದಾರ್ಥ -- ಉಪಾಧಿಕೃತಾಂಶಃ = ಔಪಾಧಿಕವಾದ ಅಂಶವನ್ನು, ನ ಚ = ಹೇಳಬಾರದು, ಸ ಏವ ಅಂಶಃ = ಆ ಜೀವನ ಅಂಶವೇ, ಉಪಹಿತಃ = ಉಪಾಧಿಯಿಂದ ಕೂಡಿರುತ್ತದೆ. ಇತಿ = ಹೀಗೆ, ದ್ವಿತ್ವಾಪೇಕ್ಷತ್ವಾತ್ = ಉಪಹಿತಜೀವ ಅನುಪಹಿತಜೀವ ಎಂಬ ಭೇದವನ್ನು ಒಪ್ಪಬೇಕಾಗುತ್ತದೆ.

**भाष्यम् – न चान्यत् कल्प्यम् । 'यद्धि युक्त्या विरुद्ध्येत तदीशकृतमेव हि' इति गत्यन्तरोक्तेः ।।६।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये इतरव्यपदेशाधिकरणम् ।। ७ ।।**

ಅನುವಾದ - ಜೀವನಿಗೆ ಕರ್ತೃತ್ವವು ಯುಕ್ತಿವಿರುದ್ಧವಾಗಿದೆ. ಯುಕ್ತಿಗೆ ವಿರುದ್ಧವಾದ ಅವಿದ್ಯಾಪ್ರಯುಕ್ತವಾದ ಕರ್ತೃತ್ವ ಮೊದಲಾದವನ್ನು ಜೀವನಲ್ಲಿ ಕಲ್ಪಿಸಬಾರದು. ಯಾವುದು ಯುಕ್ತಿಗೆ ವಿರುದ್ಧವಾಗಿರುತ್ತದೊ ಅದು ಭಗವಂತನ ಅಚಿಂತ್ಯಶಕ್ತಿಯಿಂದ ಯುಕ್ತವಾಗುತ್ತದೆ. ಹೀಗೆ ಪ್ರಮಾಣವಿರುವುದರಿಂದ ಜೀವನಲ್ಲಿ ಈಶದತ್ತವಾದ ಕರ್ತೃತ್ವವನ್ನು ಒಪ್ಪಬೇಕು. ಇದರಿಂದ ಯಾವುದೇ ಬಾಧಕಗಳಿರುವುದಿಲ್ಲ.

ಪ್ರತಿಪದಾರ್ಥ -- ಜೀವನಲ್ಲಿ ಕರ್ತೃತ್ವವು ಯುಕ್ತಿವಿರುದ್ಧವಾದ್ದರಿಂದ ಅವಿದ್ಯಕವಾದ ಕರ್ತೃವನ್ನು ಒಪ್ಪಬಹುದಲ್ಲವೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅನ್ಯತ್ = ಅವಿದ್ಯಾಪ್ರಯುಕ್ತವಾದ ಕರ್ತೃತ್ವವನ್ನು, ನಚ ಕಲ್ಪ್ಯಮ್ = ಜೀವನಲ್ಲಿ ಕಲ್ಪನೆ ಮಾಡಬಾರದು. ಯದ್ಧಿ = ಯಾವ ಕರ್ತೃತ್ವವಿದೆಯೋ, ಯುಕ್ತ್ಯಾ = ಯುಕ್ತಿಯಿಂದ, ವಿರುದ್ಧ್ಯೇತ = ವಿರುದ್ಧವಾಗಿರುತ್ತದೋ, ತತ್ = ಅದು, ಈಶಕೃತಮೇವ ಹಿ = ಭಗವಂತನ ಅಚಿಂತ್ಯಶಕ್ತಿಗೆ ಒಳಪಟ್ಟಿರುತ್ತದೆಯಷ್ಟೆ. ಇತಿ = ಹೀಗೆ, ಗತ್ಯಂತರೋಕ್ತೇಃ = ಬೇರೆ ಮಾರ್ಗವನ್ನು ಹೇಳಲಾಗಿದೆ.

ಇಲ್ಲಿಗೆ ಇತರವ್ಯಪದೇಶಾಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका –**

**युक्त्यन्तरेण जीवस्य स्वतःकर्तृत्वं निराकुर्वत् सूत्रमुपन्यस्य व्याचष्टे ।। कृत्स्नेति।। न केवलं हिताक्रियादिदोषो जीवस्य स्वतः कर्तृत्वे किं त्वयं वक्ष्यमाणश्च। तथा हि । किं जीवः सर्वकार्येषु सर्वसामर्थ्येन प्रवर्ततेऽशेन वा । नाद्यः । एकेनाङ्गुलिमात्रेण तृणादानादावपि पूर्णशक्त्या प्रवृत्तिप्रसक्तेः । न च स्यादेवमिति वाच्यम् । अनुभवविरोधात् । न द्वितीयः । अंशाभावात्। न च सांशत्वमङ्गीकर्तुं शक्यम् । अथेति निरवयवत्वश्रुतिव्याकोपात् ।**

ಮತ್ತೊಂದು ಯುಕ್ತಿಯಿಂದ ಜೀವನಲ್ಲಿ ಸ್ವತಂತ್ರಕರ್ತೃತ್ವ ಇಲ್ಲವೆಂದು ನಿರಾಕರಣೆ ಮಾಡುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡಲು 'ಕೃತ್ಸ್ನಪ್ರಸಕ್ತಿಃ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. ಜೀವನು ಸ್ವತಂತ್ರಕರ್ತೃವೆಂದು ಹೇಳಿದಾಗ ಹಿತಾಕರಣ - ಅಹಿತಕರಣ ಎಂಬೆರಡು ದೋಷಗಳು ಮಾತ್ರವಲ್ಲ ಮುಂದೆ ಹೇಳುವ ದೋಷವು ಕೂಡ ಬರುತ್ತದೆ. ಅದು ಹೀಗೆ -

ಜೀವನು ಸಕಲ ಕಾರ್ಯಗಳಲ್ಲಿ ಒಂದೇ ರೀತಿಯಾಗಿ ತನ್ನ ಸಂಪೂರ್ಣ ಸಾಮರ್ಥ್ಯವನ್ನು ಉಪಯೋಗಿಸಿ ಪ್ರವೃತ್ತಿ ಮಾಡುತ್ತಾನೋ ಅಥವಾ ತನ್ನ ಸಾಮರ್ಥ್ಯದ ಏಕದೇಶವನ್ನಷ್ಟೇ ಉಪಯೋಗಿಸಿ ಪ್ರವೃತ್ತಿ ಮಾಡುತ್ತಾನೋ?

ಮೊದಲನೆಯ ಪಕ್ಷ ತಪ್ಪು. ಒಂದೇ ಬೆರಳಿನಿಂದ ಎತ್ತಬಹುದಾದ ಹುಲ್ಲು ಮೊದಲಾದವುಗಳು ಪೂರ್ಣಶಕ್ತಿಯಿಂದ ಪ್ರವೃತ್ತಿ ಮಾಡಬೇಕಾದ ಪ್ರಸಂಗ ಬರುತ್ತದೆ. ಹೌದು ಎಂದು ಹೇಳುವಂತಿಲ್ಲ. ಹುಲ್ಲನ್ನು ಎತ್ತಲು ಸಂಪೂರ್ಣ ಸಾಮರ್ಥ್ಯವನ್ನು ಪ್ರಯೋಗಿಸುವುದಿಲ್ಲವೆಂಬುದು ಅನುಭವಕ್ಕೆ ವಿರುದ್ಧವಾಗಿದೆ.

ಎರಡನೆಯ ಪಕ್ಷವು ತಪ್ಪು. ಜೀವನಿಗೆ ಅಂಶವೇ ಇರುವುದಿಲ್ಲ. ಜೀವನನ್ನು ಸಾಂಶನೆಂದು ಅಂಗೀಕರಿಸಲಾಗದು. 'ಅಥ ಯಃ ಸ ಜೀವಃ' ಎಂಬ ನಿರವಯತ್ವವನ್ನು ಹೇಳುವ ಶ್ರುತಿಯ ವಿರೋಧವು ಬರುತ್ತದೆ.

ವಿವರಣೆ - ಒಂದು ಬಂಡೆಗಲ್ಲನ್ನು ಎತ್ತುವಾಗ ಎಷ್ಟು ಶಕ್ತಿಯನ್ನು ಉಪಯೋಗಿಸುತ್ತೇವೋ ಅಷ್ಟು ಶಕ್ತಿಯನ್ನು ಹುಲ್ಲು ಕಡ್ಡಿ ಎತ್ತುವಾಗ ಉಪಯೋಗಿಸುವುದಿಲ್ಲ. ಆದ್ದರಿಂದ ಯಾವುದೇ ಕಾರ್ಯವನ್ನು ಮಾಡುವ ಜೀವಿಯು ಸಂಪೂರ್ಣ ಸಾಮರ್ಥ್ಯವನ್ನು ಉಪಯೋಗಿಸುತ್ತಾನೆಂಬುದು ತಪ್ಪಾಗುತ್ತದೆ. ಸಾಮರ್ಥ್ಯದ ಏಕದೇಶವನ್ನು ಉಪಯೋಗಿಸುತ್ತಾನೆಂದು ಹೇಳಿದರೆ ಜೀವನಿಗೆ ಅಂಶವೇ ಇಲ್ಲದ್ದರಿಂದ ಇದೂ ಕೂಡ ಅಯುಕ್ತವಾಗುತ್ತದೆ ಎಂದು ಟೀಕೆಯಲ್ಲಿ ಹೇಳಿದ್ದಾರೆ.

ಸಾಮರ್ಥ್ಯವು ಜೀವಸ್ವರೂಪವಾದ್ದರಿಂದ ಸಾಮರ್ಥ್ಯದ ಏಕದೇಶವನ್ನು ಉಪಯೋಗಿಸುತ್ತಾನೆಂದು ಹೇಳಲು ಬರುವುದಿಲ್ಲ ಎಂಬುದು ಇದರ ಅಭಿಪ್ರಾಯ. ನಮ್ಮ ಸಿದ್ಧಾಂತದಲ್ಲಿ ವಿಶೇಷವನ್ನು ಒಪ್ಪುವುದರಿಂದ ಸಾಮರ್ಥ್ಯವು ಜೀವನ ಸ್ವರೂಪವಾಗಿದ್ದರೂ ಏಕದೇಶದ ಉಪಯೋಗವನ್ನು ಮಾಡುತ್ತಾನೆಂದು ಹೇಳಬಹುದು. ದೇವತೆಗಳು ಸಾಂಶರಾಗಿದ್ದರೂ ಕೂಡ ಮನುಷ್ಯರು ನಿರಂಶರಾಗಿರುತ್ತಾರೆ ಎಂದು ಶಾಸ್ತ್ರಗಳು ಹೇಳುತ್ತವೆ. ಅಂಥ ಮನುಷ್ಯರನ್ನು ವಿವಕ್ಷಿಸಿ ಇಲ್ಲಿ ಪ್ರಶ್ನೋತ್ತರಗಳನ್ನು ತಿಳಿಯಬೇಕು. ವಾಸ್ತವಿಕವಾಗಿ ಮನುಷ್ಯರೂ ಕೂಡ ಸಾಂಶರೇ ಆಗಿದ್ದಾರೆ. ಏಕೆಂದರೆ ಹತ್ತು ದಿಕ್ಕುಗಳ ಸಂಬಂಧ ಜೀವನಿಗೆ ಇರುವುದರಿಂದ ಅಂಶಗಳಿವೆಯೆಂದು ಇದ್ದೇ ಇರುತ್ತದೆ. ಆದರೆ ದೇವತೆಗಳ ಅಂಶವು ಪ್ರತ್ಯೇಕವಾಗಿ ಇದ್ದು ಹೇಗೆ ಕಾರ್ಯವನ್ನು ಮಾಡುತ್ತದೋ ಅಂಥ ಕಾರ್ಯವನ್ನು ಮಾಡುವ ಶಕ್ತಿ ಮನುಷ್ಯರಿಗಿರುವುದಿಲ್ಲ ಎಂಬ ಸೂಕ್ಷ್ಮವನ್ನು ತಿಳಿಯಬೇಕು. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – एतेन कार्यानुसारेण प्रवृत्तिरित्यापि निरस्तमिति भावः। न जीवस्य स्वतःकर्तृत्वेऽपि दोषावकाशः । तस्योपाधिकृतांशवत्त्वेन कृत्स्नप्रसक्त्ययोगात्। स्वाभाविकांशाभावेन श्रुतिविरोधाभावादिति चेत् तत्र प्रष्टव्यम् । किं जीवः सर्वोऽप्युपहितस्तदशो वा । आद्यं निराह – न चेति ।।**

ಹೀಗೆ ಹೇಳಿದ್ದರಿಂದ ಕಾರ್ಯಕ್ಕೆ ಅನುಸಾರಿಯಾದ ಪ್ರವೃತ್ತಿಯನ್ನು ಮಾಡಬೇಕೆಂಬ ಪಕ್ಷವನ್ನು ನಿರಾಕರಣೆ ಮಾಡಿದಂತಾಯಿತು. ಜೀವನು ಸ್ವತಂತ್ರಕರ್ತೃ ಎಂದು ಹೇಳಿದರೂ ಕೂಡ ದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ಉಪಾಧಿಯಿಂದ ಅಂಶವನ್ನು ಹೇಳಬಹುದಾದ್ದರಿಂದ ಕೃತ್ಸ್ನಪ್ರಸಕ್ತಿದೋಷಕ್ಕೆ ಅವಕಾಶವಿಲ್ಲ. ಸ್ವಾಭಾವಿಕವಾದ ಅಂಶವಿಲ್ಲವಾದ್ದರಿಂದ 'ಅಥ ಯಃ ಸಃ' ಎಂಬ ಶ್ರುತಿಯ ವಿರೋಧ ಬರುವುದಿಲ್ಲ. ಹೀಗೆ ಆಕ್ಷೇಪ ಮಾಡಿದರೆ ನಾವು ಪ್ರಶ್ನಿಸುತ್ತೇವೆ. ಆ ಪೂರ್ಣಜೀವಿಗೆ ಉಪಾಧಿಯ ಸಂಬಂಧವಿದೆಯೋ ಅಥವಾ ಜೀವನ ಏಕದೇಶಕ್ಕೆ ಉಪಾಧಿಯ ಸಂಬಧವಿದೆಯೋ ? ಎಂದು ಮೊದಲನೆಯ ಪಕ್ಷವನ್ನು 'ನ ಚ' ಇತ್ಯಾದಿ ಭಾಷ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

ವಿವರಣೆ - 'ಅಥಃ ಯಃ ಸಃ ನಿತ್ಯಃ ನಿರವಯವಃ' ಎಂಬ ಶ್ರುತಿಯು ಜೀವನು ನಿತ್ಯನಾಗಿದ್ದಾನೆ ಹಾಗೂ ನಿರಂಶನಾಗಿದ್ದಾನೆ ಎಂದು ಹೇಳುತ್ತಿದೆ. ಒಂದು ವೇಳೆ ಜೀವನಿಗೆ ಅಂಶವನ್ನು ಒಪ್ಪಿದರೆ ಈ ಶ್ರುತಿಯ ವಿರೋಧ ಬರುತ್ತದೆ.

ಹಾಗಾದರೆ ಕಾರ್ಯಕ್ಕೆ ಅನುಸಾರಿಯಾಗಿ ಕೆಲವೊಮ್ಮೆ ಪೂರ್ಣಸಾಮರ್ಥ್ಯವನ್ನು ಉಪಯೋಗಿಸಿ ಕಾರ್ಯಪ್ರವೃತ್ತಿ ಮಾಡುತ್ತಾನೆ. ಕೆಲವೊಮ್ಮೆ ಪೂರ್ಣಸಾಮರ್ಥ್ಯ ಉಪಯೋಗಿಸದೆ ಪ್ರವೃತ್ತಿ ಮಾಡುತ್ತಾನೆಂದು ಹೇಳಬಹುದಲ್ಲವೆ? ಈ ಪೂರ್ವಪಕ್ಷವು ನಿರಾಕೃತವಾಯಿತು. ಏಕೆಂದರೆ 'ಅಥಃ ಯಃ' ಎಂಬ ಶ್ರುತಿಯ ವಿರೋಧವು ಇದ್ದೇ ಇದೆ.

ಜೀವನು ಸ್ವತಂತ್ರಕರ್ತೃ ಹೇಳಿದರೂ ಕೂಡ ಮತ್ತು ಸ್ವಾಭಾವಿಕ ಅಂಶಭೇದವಿದ್ದರೂ ಕೂಡ ಔಪಾಧಿಕ ಅಂಶಭೇದವನ್ನು ಒಪ್ಪಿ ಎಲ್ಲಾ ಸಮಸ್ಯೆಗಳನ್ನು ಪರಿಹರಿಸಬೇಕೆಂದು ಪೂರ್ವಪಕ್ಷಿಗಳು ತಮ್ಮನ್ನು ಪುನಃ ಸಮರ್ಥಿಸಿಕೊಳ್ಳುತ್ತಾರೆ. ಆದರೆ ಇಂಥ ಪೂರ್ವಪಕ್ಷಿಗಳಿಗೆ ಔಪಾಧಿಕಸಂಬಂಧವನ್ನು ಜೀವನಲ್ಲಿ ಪೂರ್ಣವಾಗಿ ಹೇಳಬೇಕೋ? ಅಥವಾ ಏಕದೇಶದಲ್ಲಿ ಹೇಳಬೇಕೋ? ಎಂಬ ಪ್ರಶ್ನೆಗೆ ಉತ್ತರಿಸಲು ಆಗುವುದಿಲ್ಲ.

**तत्वप्रकाशिका – स एव समस्तो जीव उपहितश्चेत् तर्हि उपाधिकृतांशो न भवति । सर्वस्य ग्रस्तत्वादिति भावः । द्वितीयं पराह – अंश इति ।। अंश उपहित इति च न युक्तम् । उपाधिसम्बन्धार्थं स्वाभाविकद्वित्वापेक्षत्वात् । तथा च श्रुतिविरोधः । तस्याप्यौपाधिकत्वेऽनवस्थेति भावः ।**

ಪೂರ್ಣನಾದ ಜೀವನು ಉಪಾಧಿಸಂಬಂಧವನ್ನು ಹೊಂದುತ್ತಾನೆ. ಆದರಿಂದ ಅವನ ಒಂದಂಶವು ಔಪಾಧಿಕವೆಂದು ಹೇಳಿದಂತಾಗುವುದಿಲ್ಲ. ಏಕೆಂದರೆ ಸಮಸ್ತ ಜೀವನೇ ಉಪಾಧಿಯಿಂದ ಘಟಿತನಾಗಿದ್ದಾನೆ ಎಂಬುದು 'ನ ಚ ಉಪಾಧಿಕೃತ' ಎಂಬ ಭಾಷ್ಯವಾಕ್ಯದ ಅಭಿಪ್ರಾಯ. ಜೀವನ ಏಕದೇಶವು ಉಪಾಧಿ ಸಂಬಂಧವನ್ನು ಹೊಂದಿದೆ ಎಂಬ ಎರಡನೆಯ ಪಕ್ಷವನ್ನು 'ಅಂಶಃ ಉಪಹಿತಃ' ಇತ್ಯಾದಿ ಭಾಷ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ. ಜೀವನ ಒಂದು ಅಂಶವು ಉಪಾಧಿಯಿಂದ ಕೂಡಿದೆ ಎಂದು ಹೇಳುವುದು ಯುಕ್ತವಲ್ಲ. ಏಕೆಂದರೆ ಉಪಾಧಿಸಂಬಂಧವು ಬರಬೇಕೆಂದರೆ ಸ್ವಾಭಾವಿಕವಾಗಿ ಎರಡು ಅಂಶಗಳನ್ನು ಒಪ್ಪಬೇಕಾಗುತ್ತದೆ. ಆದರೆ ಶ್ರುತಿಯು ಸ್ಪಷ್ಟವಾಗಿ ಸ್ವಾಭಾವಿಕ ಅಂಶದ್ವಯವನ್ನು ನಿರಾಕರಣೆ ಮಾಡುತ್ತಿರುವುದರಿಂದ ಶ್ರುತಿವಿರೋಧ ಪ್ರಾಪ್ತವಾಗುತ್ತದೆ. ಸ್ವಾಭಾವಿಕ ಅಂಶವನ್ನು ಒಪ್ಪದೆ ಔಪಾಧಿಕ ಸಂಬಂಧವನ್ನು ಒಪ್ಪುತ್ತೇವೆ ಎಂದು ಹೇಳಿದರೆ ಅನವಸ್ಥಾದೋಷವು ಬರುತ್ತದೆ.

ವಿವರಣೆ - ಒಂದು ಔಪಾಧಿಕ ಅಂಶಕ್ಕಾಗಿ ಎರಡು ಸ್ವಾಭಾವಿಕ ಅಂಶಗಳನ್ನು ಒಪ್ಪುವುದು ಅನಿವಾರ್ಯ. ಹೀಗೆ ಒಪ್ಪದೆ ಒಂದು ಔಪಾಧಿಕಸಂಬಂಧಕ್ಕಾಗಿ ಪುನಃ ಎರಡು ಔಪಾಧಿಕ ಸಂಬಂಧಗಳನ್ನೇ ಒಪ್ಪುವುದಾದರೆ ಅನವಸ್ಥಾ ಬರುತ್ತದೆ. ಒಂದು ಅಂಶವು ಔಪಾಧಿಕವಾಗಬೇಕಾದರೆ ಮೊದಲು ಉಪಾಧಿ ಇರಬೇಕು. ಮತ್ತು ಆತ್ಮನಿಗೆ ಅಂಶವನ್ನು ಕೂಡ ಒಪ್ಪಿರಬೇಕು. ಆ ಆತ್ಮನ ಅಂಶವು ಸ್ವಾಭಾವಿಕವೋ ಔಪಾಧಿಕವೋ? ಎಂಬ ಪ್ರಶ್ನೆಯು ಬಂದರೆ ಔಪಾಧಿಕವೆಂದೇ ಉತ್ತರಿಸಬೇಕು. ಇದು ಔಪಾಧಿಕವಾಗಬೇಕಾದರೆ, ಪುನಃ ಉಪಾಧಿ ಮತ್ತು ಆತ್ಮನ ಅಂಶ ಎಂಬುವುದನ್ನು ಮೊದಲೇ ಒಪ್ಪಿರಬೇಕು. ಪುನಃ ಈ ಅಂಶವು ಸ್ವಾಭಾವಿಕವೋ ?

ಔಪಾಧಿಕವೋ? ಎಂಬ ಪ್ರಶ್ನೆ ಬಂದಾಗ ಔಪಾಧಿಕವೆಂದೇ ಉತ್ತರಿಸುತ್ತಾ ಹೋದರೆ ಅನವಸ್ಥಾದೋಷವು ಬರುತ್ತದೆ.

**तत्वप्रकाशिका – तर्ह्येतज्जीवस्य कर्तृत्वं युक्तिविरुद्धत्वादविचारित-रमणीयाविद्यानिमित्तमस्त्वित्यत आह – न चेति ।। यत्प्रतीतमपि युक्तिविरुद्धं तदीश्वरकृतमिति न्यायेन जीवकर्तृत्वमयुक्तं चेत् तस्येश्वराधीनत्वेनोपपत्तेस्तदेव प्रामाणिकं ग्राह्यं न त्वाप्रमाणिकमविद्यानिमित्तं नापि तेनोपपत्तिरिति भावः ।**

ಹಾಗಾದರೆ ಈ ಜೀವನಲ್ಲಿ ಕರ್ತೃತ್ವವನ್ನು ಒಪ್ಪುವುದು ಯುಕ್ತಿವಿರುದ್ಧ ಎಂದಂತಾಯಿತು. ಆದ್ದರಿಂದ ವಿಚಾರ ಮಾಡದಿದ್ದಾಗ ಸುಂದರವಾಗಿ ಕಾಣಿಸುವ ಅಜ್ಞಾನ ಕಲ್ಪಿತತ್ವವನ್ನು ಒಪ್ಪಬಹುದಲ್ಲವೆ? ಎಂಬ ಪ್ರಶ್ನೆಗೆ 'ನ ಚ ಅನ್ಯತ್ ಕಲ್ಪ್ಯಂ' ಇತ್ಯಾದಿ ಭಾಷ್ಯವಾಕ್ಯವು ಉತ್ತರಿಸುತ್ತಿದೆ.

'ಯತ್ ಪ್ರತೀತಮಪಿ ಯುಕ್ತಿವಿರುದ್ಧಂ ತದೀಶ್ವರಕೃತಮ್' 'ಯಾವುದು ಪ್ರತೀತವಾಗಿದ್ದರೂ ಕೂಡ ಯುಕ್ತಿ ವಿರುದ್ಧವಾಗಿರುತ್ತದೋ ಅದು ಈಶ್ವರಕೃತವಾಗಿರುತ್ತದೆ' ಎಂಬ ನ್ಯಾಯದಂತೆ ಜೀವನಿಗೆ ಸ್ವತಂತ್ರಕರ್ತೃತ್ವವು ಯುಕ್ತವಾಗುತ್ತದೆ. ಹಾಗಾಗಿ ಜೀವನಲ್ಲಿ ಈಶ್ವಾರಾಧೀನಕರ್ತೃತ್ವವನ್ನು ಒಪ್ಪಬೇಕು. ಪ್ರಾಮಾಣಿಕವಾದ ಇದನ್ನು ಬಿಟ್ಟು ಅಪ್ರಾಮಾಣಿಕವಾದ ಅವಿದ್ಯಾನಿಮಿತ್ತಕವಾದ ಕರ್ತೃತ್ವವನ್ನು ಒಪ್ಪಬಾರದು. ಹೀಗೆ ಒಪ್ಪುವುದರಿಂದ ಯಾವುದೇ ಸಮಸ್ಯೆಗಳು ಪರಿಹಾರವಾಗುವುದಿಲ್ಲ. ಇಷ್ಟು ಭಾಷ್ಯದ ಅಭಿಪ್ರಾಯವಾಗಿದೆ.

ವಿವರಣೆ - 'ಜೀವನು ಸ್ವತಂತ್ರಕರ್ತೃ' ಎಂಬುದು ಯುಕ್ತಿಗೆ ವಿರುದ್ಧವಾಗಿದೆ. ಇದು ಕೇವಲ ಆಪಾತತಃ ಸುಂದರವಾದ ಸಿದ್ಧಾಂತವಾಗಿದೆ. ಆದ್ದರಿಂದ ಜೀವಕರ್ತೃತ್ವವನ್ನು ಅಜ್ಞಾನ ಕಲ್ಪಿತವೆಂದು ಹೇಳಬೇಕೆಂಬುದು ಇವರ ಅಭಿಪ್ರಾಯ. ಆದ್ದರಿಂದ 'ಅವಿಚಾರಿತರಮಣೀಯಾ' ಎಂಬುದಕ್ಕೆ 'ಅವಿಚಾರಿತೇ ಸತಿ ರಮಣೀಯಾ' ಎಂಬ ಅಭಿಪ್ರಾಯವನ್ನು ವಿವಕ್ಷಿಸಬೇಕು. (ಗುರ್ವರ್ಥದೀಪಿಕಾ)

**तत्वप्रकाशिका – यद्वा महदादिकार्यकारणत्वमीश्वस्याङ्गीकृत्य घटादिविषय एव पूर्वः पक्षः सिद्धान्तश्च प्रवृत्त इति ज्ञातव्यम् । तस्माज्जीवस्य स्वतःकर्तृत्वानुपपत्तेर्युक्तं हरेर्जन्मादिकारणत्वलक्षणमिति सिद्धम् ।।**

ಅಥವಾ ಮಹತ್ತತ್ವ, ಅಹಂಕಾರತತ್ವ ಇವುಗಳಿಗೆಲ್ಲ ವಿಷ್ಣುವೇ ಕಾರಣನಾಗಿದ್ದಾನೆ ಎಂದು ಒಪ್ಪಿ ಕಣ್ಣಿಗೆ ಕಾಣಿಸುವ ಘಟಪಟಾದಿ ಕಾರ್ಯಗಳಿಗೆ ಜೀವನು ಕಾರಣನಾಗಿದ್ದಾನೆಂಬ ಪೂರ್ವಪಕ್ಷವನ್ನು ತಿಳಿಯಬೇಕು. ಘಟಪಟಾದಿಗಳಿಗೂ ಕೂಡ ವಿಷ್ಣುವೇ ಕಾರಣ ಎಂಬ ಸಿದ್ಧಾಂತವನ್ನು ತಿಳಿಯಬೇಕು. ಇಷ್ಟು ಭಾಷ್ಯದ ಅಭಿಪ್ರಾಯ. ಹಾಗಾಗಿ ಜೀವನಲ್ಲಿ ಸ್ವತಂತ್ರಕರ್ತೃತ್ವ ಅನುಪಪನ್ನವಾದ್ದರಿಂದ ಶ್ರೀಹರಿಗೆ ಜನ್ಮಾದಿಕಾರಣತ್ವ-ಲಕ್ಷಣವನ್ನು ಹೇಳಿದ್ದು ಯುಕ್ತವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಇತರವ್ಯಪದೇಶಾಧಿಕರಣ ಮುಗಿಯಿತು

ಇತರವ್ಯಪದೇಶಾಧಿಕರಣ
(೨-೧-೭)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## इतरव्यपदेशाधिकरणम्

### ವಿಷಯ ಹಾಗೂ ಸಂಶಯಗಳು

**इतरव्यपदेशाद्धिताकारणादिदोषप्रसक्तिः ।। अत्र श्रुत्यनुभवसंवादियुक्त्यविरोध उच्यते ।। जीवकर्तृत्वसाधकचेतनत्वादियुक्तिर्हि ''जीवाद्भवन्ति भूतानि'' इत्यादिश्रुत्या जीवकर्तृत्वानुभवेन च संवादिनी ।**

'ಇತರವ್ಯಪದೇಶಾದ್ಧಿತಾಕಾರಣಾದಿದೋಷಪ್ರಸಕ್ತಿಃ' ಎಂಬ ಸೂತ್ರದಿಂದ ಇತರವ್ಯಪದೇಶಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ ಶ್ರುತಿ ಹಾಗೂ ಅನುಭವಗಳ ಸಂವಾದವುಳ್ಳ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಜೀವಕರ್ತೃತ್ವಸಾಧಕವಾದ ಚೇತನತ್ವಾದಿ ಯುಕ್ತಿಯು 'ಜೀವಾದ್ಭವಂತಿ ಭೂತಾನಿ' ಇತ್ಯಾದಿ ಶ್ರುತಿಯಿಂದ ಮತ್ತು ಜೀವಕರ್ತೃತ್ವದ ಅನುಭವದಿಂದ ಸಂವಾದಿಯಾಗಿದೆ.

(ಪ್ರತಿಯೊಬ್ಬರಿಗೂ ನಾನೇ ಕರ್ತೃ ಎಂಬ ಅನುಭವವಿದೆ. ಶ್ರುತಿಯೂ ಕೂಡ ಜೀವನಿಂದಲೇ ಜಗತ್ತು ಹುಟ್ಟುತ್ತದೆ ಎಂದು ಹೇಳುತ್ತಿದೆ. ಆದ್ದರಿಂದ 'ಜೀವಃ ಕರ್ತೃ ಚೇತನತ್ವಾತ್' ಎಂಬ ಯುಕ್ತಿಯಿಂದ ಜೀವಕರ್ತೃತ್ವವು ಸಿದ್ಧವಾಗುತ್ತದೆ. ಇಂಥ ಯುಕ್ತಿಯ ವಿರೋಧವನ್ನು ಪರಿಹರಿಸುವುದೇ ಈ ಅಧಿಕರಣದ ಉದ್ದೇಶ.)

**अत्र जन्मादिसूत्रे विवक्षितं ब्रह्मण एव स्वतन्त्रकर्तृत्वं युक्तिविरुद्धं न वेति चिन्ता ।**

ಈ ಅಧಿಕರಣದಲ್ಲಿ ಜನ್ಮಾದ್ಯಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಬ್ರಹ್ಮನೇ ಸ್ವತಂತ್ರಕರ್ತೃ ಎಂಬ ಪ್ರಮೇಯವು ಯುಕ್ತಿಯಿಂದ ವಿರುದ್ಧವಾಗಿದೆಯೋ, ಇಲ್ಲವೋ? ಎಂಬುದು ಪ್ರಧಾನವಾದ ಸಂಶಯ.

**तदर्थं जीवस्य स्वतन्त्रकर्तृत्वसाधकचेतनत्वादियुक्तिः श्रुतिसंवादिनी नवेति ।**

ಈ ಸಂಶಯದ ಪರಿಹಾರಕ್ಕಾಗಿ ಜೀವನು ಸ್ವತಂತ್ರಕರ್ತೃವಾಗಿದ್ದಾನೆ ಎಂಬುದರ ಸಮರ್ಥನೆಗೆ ಯಾವ ಚೇತನತ್ವಾದಿ ಯುಕ್ತಿಗಳಿವೆಯೋ, ಅವುಗಳು ಶ್ರುತಿಸಂವಾದಿಯಾಗಿವೆಯೋ, ಇಲ್ಲವೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''जीवाद्भवन्ति'' इत्यादिश्रुतिः किं प्रत्यक्षानुसारात् (विग्रहादिमतः कर्तुर्ब्रह्मणोऽनुपलब्धिबाधितत्वाच्च) जीवविषयोत (अप्राकृतविग्रहादिमत्यपि ब्रह्मण्यन्तर्धानशक्तियोगात्पिशाचादेरिवानुपलब्धिबाधाद्यभावात्) प्रत्यक्षाप्राप्तब्रह्मपरेति।**

ಈ ಸಂಶಯ ಪರಿಹಾರಕ್ಕಾಗಿ 'ಜೀವಾದ್ಭವಂತಿ' ಇತ್ಯಾದಿ ಶ್ರುತಿಯು, ಪ್ರತ್ಯಕ್ಷಕ್ಕೆ ಅನುಸಾರಿಯಾಗಿ ಜೀವವಿಷಯಕವೋ, ಅಥವಾ ಪ್ರತ್ಯಕ್ಷದಿಂದ ಅಪ್ರಾಪ್ತವಾದ ಬ್ರಹ್ಮವಿಷಯಕವೋ? ಎಂಬ ಸಂಶಯವು ಪರಿಹಾರವಾಗಬೇಕು.

ಕೊನೆಯ ಸಂಶಯವನ್ನು ಮತ್ತೊಂದು ಪ್ರಕಾರದಲ್ಲಿಯೂ ಹೇಳಬಹುದೆನ್ನಲು ಪಾಠಾಂತರವಿದೆ. 'ಜೀವಾದ್ಭವಂತಿ' ಇತ್ಯಾದಿ ಶ್ರುತಿಯು ಶರೀರಾದಿಗಳನ್ನು ಪಡೆದಿದ್ದರೂ ಕೂಡ ಕರ್ತೃವಾದ ಬ್ರಹ್ಮನು ಅನುಪಲಬ್ಧನಾಗಿರುವುದರಿಂದ ಬಾಧಿತವಾಗಿದೆ. ಆದ್ದರಿಂದ ಜೀವವಿಷಯಕವೋ? ಅಥವಾ ಅಪ್ರಾಕೃತವಾದ ಶರೀರವನ್ನು ಹೊಂದಿರುವುದರಿಂದ ಬ್ರಹ್ಮನಲ್ಲಿ ಪಿಶಾಚಾದಿಗಳಂತೆ ಅಂತರ್ಧಾನ ಶಕ್ತಿಯಿರುತ್ತದೆ. ಆದ್ದರಿಂದ ಅನುಪಲಬ್ಧಿಬಾಧವು ಇರುವುದಿಲ್ಲ ಎಂದು ಹೇಳಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು.

**यद्यपि समयप्राप्तं जीवकर्तृत्वं द्वितीयपादे ''अन्यथानुमितौ च'' इत्यत्र निषेत्स्यते ।**

ಪ್ರಶ್ನೆ - ಈ ಅಧಿಕರಣದಲ್ಲಿ ಜೀವಕರ್ತೃತ್ವವನ್ನು ನಿರಾಕರಣೆ ಮಾಡುತ್ತಿದ್ದೀರಿ. ಆದರೆ ದ್ವಿತೀಯಪಾದದಲ್ಲಿ 'ಅನ್ಯಥಾನುಮಿತೌ ಚ' ಎಂಬ ಸೂತ್ರವು ಸಮಯಪ್ರಾಪ್ತವಾದ ಜೀವಕರ್ತೃತ್ವವನ್ನು ನಿಷೇಧ ಮಾಡುತ್ತಿದೆ ಅಲ್ಲವೇ?

ಉತ್ತರ - ದ್ವಿತೀಯಪಾದದ ಅಧಿಕರಣದಲ್ಲಿ ಬೇರೆ ಸಮಯಪ್ರಾಪ್ತವಾದ ಜೀವಕರ್ತೃತ್ವವನ್ನು ನಿರಾಕರಣೆ ಮಾಡಿದರೂ ಕೂಡ ಈ ಅಧಿಕರಣದಲ್ಲಿ ಶ್ರುತಿಸಂವಾದಿಯಾದ ಯುಕ್ತಿಯಿಂದ ಪ್ರಾಪ್ತವಾದ ಜೀವಕರ್ತೃತ್ವವನ್ನು ನಿರಾಕರಣೆ ಮಾಡಲಾಗಿದೆ. ಆದಕ್ಕಾಗಿ ಈ ಅಧಿಕರಣ ಹೊರಡಬೇಕು.

**यद्यपि च श्रुतिसंवादियुक्तिप्राप्तं जीवादिकर्तृत्वं ''एतेन शिष्टा'' इत्यत्र निषिद्धम् ।**

ಪ್ರಶ್ನೆ - ಶ್ರುತಿಸಂವಾದಿಯಾದ ಯುಕ್ತಿಯಿಂದ ಪ್ರಾಪ್ತವಾದ ಜೀವಕರ್ತೃತ್ವವನ್ನು 'ಏತೇನ ಶಿಷ್ಟಾ' ಎಂಬ ಅಸದಧಿಕರಣದ ಸೂತ್ರದಿಂದಲೇ ಪರಿಹರಿಸಿದ್ದಾಗಿದೆ. ಪುನಃ ಅದಕ್ಕಾಗಿ ಈ ಅಧಿಕರಣವು ಹೊರಡಬೇಕಾಗಿಲ್ಲ?

**तथापीह ''यथा प्राणादिः'' इति पूर्वाधिकरणोक्तं प्राणादिजीवानामस्वतन्त्रत्वम-युक्तम् ।**

ಉತ್ತರ - ಆದರೂ ಕೂಡ ಈ ಅಧಿಕರಣವು ಸಾರ್ಥಕ. ಏಕೆಂದರೆ 'ಯಥಾ ಪ್ರಾಣಾದಿಃ' ಎಂಬುದಾಗಿ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಪ್ರಾಣಾದಿ ಜೀವರ ಅಸ್ವತಂತ್ರತ್ವವು ಅಯುಕ್ತವಾಗಿದೆ.

**जीवकर्तृत्वस्यानुभवादित्यनुभवसंवादेनाधिकहेतुना पुनर्जीवमात्रविषयायां शङ्कायामनुभवस्य गतिं हिताकरणादिदोषान्तरं च वक्तुमिदमिति न पुनरुक्तिः ।**

ಏಕೆಂದರೆ ಜೀವನೇ ಕರ್ತೃವೆಂದು ಅನುಭವವು ಹೇಳುತ್ತಿದೆ. ಅನುಭವದ ಸಂವಾದವೆಂಬ ಅಧಿಕ ಹೇತುವಿರುವುದರಿಂದ, ಜೀವಮಾತ್ರವಿಷಯಕವಾದ ಆಶಂಕೆಯು ಬರುತ್ತದೆ. ಅದಕ್ಕಾಗಿ ಅನುಭವಕ್ಕೆ ನಿಜವಾದ ಗತಿಯನ್ನು ಹೇಳಲು ಮತ್ತು ಹಿತಾಕರಣಾದಿ ಬೇರೆ ದೋಷಗಳನ್ನು ಹೇಳುವುದಕ್ಕಾಗಿಯೂ ಈ ಅಧಿಕರಣವು ಸಾರ್ಥಕವಾಗಿದೆ. ಯಾವುದೇ ಸೂತ್ರಗಳಿಂದಲೂ ಪುನರುಕ್ತಿದೋಷವು ಬರುವುದಿಲ್ಲ.

**अत एव सिद्धान्ते ''इतरव्यपदेशात्'' इति सूत्रे पूर्वपक्ष्यभिप्रेता श्रुतिः, ''उपसंहारदर्शना'' दित्यत्रानुभवः, ''अश्मादिवच्च'' इत्यत्र युक्तिश्च निरस्ता ।**

ಹೀಗೆ ಹೇಳಿದ್ದರಿಂದಲೇ ಸಿದ್ಧಾಂತದಲ್ಲಿ 'ಇತರವ್ಯಪದೇಶಾತ್' ಎಂಬ ಸೂತ್ರದಲ್ಲಿ ಪೂರ್ವಪಕ್ಷಿಗಳಿಗೆ ಅಭಿಪ್ರೇತವಾದ ಶ್ರುತಿಯನ್ನು ನಿರಾಕರಣೆ ಮಾಡಲಾಗಿದೆ. 'ಉಪಸಂಹಾರದರ್ಶನಾತ್' ಎಂಬ ಸೂತ್ರದಲ್ಲಿ ಜೀವಕರ್ತೃತ್ವದ ಅನುಭವವನ್ನು ನಿರಾಕರಣೆ ಮಾಡಲಾಗಿದೆ. 'ಅಶ್ಮಾದಿವಚ್ಚ' ಎಂಬ ಸೂತ್ರದಲ್ಲಿ ಜೀವಕರ್ತೃಕವಾದ ಯುಕ್ತಿಯನ್ನು ನಿರಾಕರಣೆ ಮಾಡಲಾಗಿದೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**इतरव्यपदेशात् ।।** टीकायामस्फुटत्वादेतदुपाधिमाह **– अत्रेति ।।** एतन्मूलं त्वग्रे व्यक्तम् ।

ಶ್ರುತ್ಯನುಭವಸಂವಾದಿಯುಕ್ತಿವಿರೋಧವು ಪೂರ್ವಪಕ್ಷದ ಯುಕ್ತಿ. ಈ ಉಪಾಧಿಯನ್ನು ಟೀಕೆಯಲ್ಲಿ ಸ್ಪಷ್ಟವಾಗಿ ಹೇಳಿರುವುದಿಲ್ಲ. ಅದನ್ನು ಗ್ರಂಥಕಾರರು ಸ್ಪಷ್ಟವಾಗಿ 'ಅತ್ರ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಗ್ರಂಥಕಾರರು ಹೇಳಿದ ಉಪಾಧಿಗೆ ಮೂಲಪ್ರಮಾಣವು ಮುಂದೆ ಸ್ಪಷ್ಟವಾಗುತ್ತದೆ.

**प्रकाशः –** अनन्तरसङ्गतिं त्वग्रे पूर्वपक्षनिष्कर्षकरणाद्व्यक्तीकरिष्याम इति भावेन विषयसंशयटीकां विवृण्वन् चिन्तामाह **– अत्रेति ।।**

ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಅನಂತರ್ಯಸಂಗತಿಯು ಮುಂದೆ ಪೂರ್ವಪಕ್ಷವನ್ನು ಹೇಳುವಾಗ ಸ್ಪಷ್ಟವಾಗುತ್ತದೆ. ಈ ಅಭಿಪ್ರಾಯದಿಂದ ಪ್ರಾರಂಭದಲ್ಲಿ ಅಧಿಕರಣದ ವಿಷಯ ಹಾಗೂ ಸಂಶಯಪರವಾದ ಟೀಕೆಯನ್ನು ವಿವರಿಸುತ್ತಾ ಸಂಶಯಪ್ರಕಾರವನ್ನು 'ಅತ್ರ' ಇತ್ಯಾದಿ ವಾಕ್ಯಗಳಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः –** वक्ष्यमाणपूर्वपक्षद्वयाभिप्रायेणोक्तं विवक्षितमित्यादि ।। घटादिस्वस्वकार्यांशे जीवस्स्वातन्त्र्येण कर्ता । चेतनत्वान्महदादावीश्वरवत् । जीवः कर्ता चेतनत्वात् व्यतिरेकेण घटादिवदित्यादियुक्तिविरुद्धं नवेत्यर्थः ।।

ಈ ಅಧಿಕರಣಗಳಲ್ಲಿ ಮುಂದೆ ಎರಡು ಬಗೆಯ ಪೂರ್ವಪಕ್ಷಗಳನ್ನು ತೋರಿಸುತ್ತಾರೆ. ಆ ಅಭಿಪ್ರಾಯದಿಂದ 'ಜನ್ಮಾದಿಸೂತ್ರೇ ವಿವಕ್ಷಿತಮ್' ಇತ್ಯಾದಿಯಾಗಿ ಸಂಶಯಪ್ರಕಾರಗಳನ್ನು ತೋರಿಸುತ್ತಿದ್ದಾರೆ. 'ಜೀವಃ ಘಟಾದಿಸ್ವಸ್ವಕಾರ್ಯಾಂಶೇ ಸ್ವಾತಂತ್ರ್ಯೇಣ ಕರ್ತಾ ಚೇತನತ್ವಾತ್ ಮಹದಾದಾವೀಶ್ವರವತ್' ಎಂಬ ಅನುಮಾನದಿಂದ ಜೀವನು ಸ್ವತಂತ್ರಕರ್ತೃವೆಂದು ಸಿದ್ಧವಾಗುತ್ತದೆ. ಮತ್ತು 'ಜೀವಃ ಕರ್ತಾಃ ಚೇತನತ್ವಾತ್ ವ್ಯತಿರೇಕೇಣ ಘಟಾದಿವತ್' ಎಂಬ ವ್ಯತಿರೇಕ ಅನುಮಾನದಿಂದಲೂ ಜೀವನು ಸ್ವತಂತ್ರಕರ್ತೃವೆಂದು ಸಿದ್ಧವಾಗುತ್ತದೆ. ಇಂಥ ಯುಕ್ತಿಗಳಿಂದ ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಬ್ರಹ್ಮನ ಕರ್ತೃತ್ವವು ವಿರುದ್ಧವಾಗಿದೆಯೆಂದು ತಿಳಿಯಬೇಕು.

**प्रकाशः – प्रत्यक्षेति ।।** जीवकर्तृत्वानुभवेत्यर्थः । अत्राद्यचिन्ता ''अश्मादिवच्च'' इति सूत्रसूचिता ।

'ಪ್ರತ್ಯಕ್ಷ' ಎಂದರೆ ಜೀವಕರ್ತೃತ್ವದ ಅನುಭವ ಎಂದರ್ಥ. ಗ್ರಂಥದಲ್ಲಿ ತೋರಿಸಿದ ಮೊದಲನೆಯ ಸಂಶಯವು 'ಅಶ್ಮಾದಿವಚ್ಚ' ಎಂಬ ಸೂತ್ರದಿಂದ ಸೂಚಿತವಾಗಿದೆ.

**प्रकाशः –** द्वितीया तु ''इतरव्यपदेशात्'' इत्येतत्सूचिता । तृतीया ''उपसंहारदर्शनात्'' इत्येतत्सूचिता । हेतुहेतुमद्भावोऽत्र व्यक्तः ।

ಎರಡನೆಯ ಸಂಶಯವು 'ಇತರವ್ಯಪದೇಶಾತ್' ಎಂಬ ಸೂತ್ರದಿಂದ ಸೂಚಿತವಾಗಿದೆ. ಮೂರನೆಯ ಸಂಶಯವು 'ಉಪಸಂಹಾರದರ್ಶನಾತ್' ಎಂಬ ಸೂತ್ರದಿಂದ ಸೂಚಿತವಾಗಿದೆ. ಪೂರ್ವಪಕ್ಷದ ಫಲಫಲಿಭಾವವು, ಸಿದ್ಧಾಂತದ ಫಲಫಲಿಭಾವವು ಇಲ್ಲಿ ಸ್ಪಷ್ಟವಾಗಿಯೇ ತಿಳಿಯುತ್ತದೆ. ಒಂದು ವೇಳೆ 'ಜೀವಾದ್ಭವಂತಿ' ಎಂಬ ಶ್ರುತಿಯು ಜೀವವಿಷಯಕವಾದರೆ ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಸಾಧಿಸುವ ಯುಕ್ತಿಯು ಶ್ರುತಿಯಸಂವಾದಿಯಾಗುತ್ತದೆ. ಆವಾಗ ಬ್ರಹ್ಮನ ಜಗತ್‌ಕರ್ತೃತ್ವವು ಶ್ರುತಿಸಂವಾದಿಯಾದ ಯುಕ್ತಿಯಿಂದ ವಿರುದ್ಧವಾಗುತ್ತದೆಂಬುದು ಪೂರ್ವಪಕ್ಷದ ಫಲ.

ಜೀವಾದ್ ಭವಂತಿ ಎಂಬ ಶ್ರುತಿಯು ಪ್ರತ್ಯಕ್ಷ ಅಪ್ರಾಪ್ತವಾದ ಬ್ರಹ್ಮಪರವಾದರೆ, ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಸಾಧನೆ ಮಾಡುವ ಯುಕ್ತಿಗೆ ಶ್ರುತಿಸಂವಾದ ಇರುವುದಿಲ್ಲ. ಆವಾಗ ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಬ್ರಹ್ಮನ ಕರ್ತೃತ್ವಕ್ಕೆ ಯುಕ್ತಿವಿರೋಧವೂ ಕೂಡ ಬರುವುದಿಲ್ಲವೆಂಬುದು ಸಿದ್ಧಾಂತದ ಫಲ.

**प्रकाशः –** ''अन्यथानुमितौ चेत्'' इत्यादिटीकां व्यञ्जयन् गतार्थतामनुवदति **– यद्यपीति ।।**

'ಅನ್ಯಥಾನುಮಿತೌ ಚೇತ್' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಾ, ಪುನರುಕ್ತಿದೋಷವನ್ನು ಪರಿಹರಿಸಲು 'ಯದ್ಯಪಿ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः –** नन्वधिकहेतुना पुनरारम्भे ''एतेन शिष्टा'' इत्येतदानन्तर्यमेव स्यादित्यतः ''अत्र यथाप्राणादिरित्युक्ते पुनराशङ्कोदयात्'' इति टीकोक्तसमाधिं व्यनक्ति ।। **यथा प्राणादिरिति ।।**

ಅಧಿಕವಾದ ಹೇತುವಿನಿಂದ ಪ್ರತ್ಯೇಕ ಅಧಿಕರಣವು ಹೊರಡುವುದಾದರೆ 'ಏತೇನ ಶಿಷ್ಟಾ' ಎಂಬ ಅಸದಧಿಕರಣದ ಸೂತ್ರದ ಆನಂತರ್ಯವೇ ಈ ಸೂತ್ರಕ್ಕೆ ಇರಬೇಕಿತ್ತು ? ಎಂಬ ಪ್ರಶ್ನೆಗೆ 'ಅತ್ರ ಯಥಾಪ್ರಾಣಾದಿರಿತ್ಯುಕ್ತೇ ಪುನರಾಶಂಕೋದಯಾತ್' ಇತ್ಯಾದಿ ಟೀಕಾವಾಕ್ಯದಲ್ಲಿ ಹೇಳಲ್ಪಟ್ಟ ಸಮಾಧಾನವನ್ನು 'ಯಥಾ ಪ್ರಾಣಾದಿಃ' ಇತ್ಯಾದಿ ಗ್ರಂಥದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः – अधिकहेतुनेत्यादिना ग्रन्थेन ''विस्तरान्निराक्रियते'' इति भाष्यटीकयोः प्रयुक्तविस्तरशब्दार्थो विवृतो ज्ञेयः ॥**

'ಅಧಿಕಹೇತುನಾ' ಇತ್ಯಾದಿ ಗ್ರಂಥದಿಂದ 'ವಿಸ್ತರಾನ್ನಿರಾಕ್ರಿಯತೇ' ಎಂಬ ಭಾಷ್ಯ ಹಾಗೂ ಟೀಕೆಗಳಲ್ಲಿ ಯಾವ 'ವಿಸ್ತರ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೋ, ಅದರ ಅರ್ಥವನ್ನು ವಿವರಿಸಿದಂತಾಯಿತು. ಹಿಂದೆ ಹೇಳಿದ್ದನ್ನೇ ಈ ಅಧಿಕರಣದಲ್ಲಿ ವಿವರಿಸುತ್ತಿದ್ದಾರೆ ಎಂದಭಿಪ್ರಾಯ.

**प्रकाशः – अत एवेति ॥ चेतनत्वयुक्तेरनुभवसंवादिश्रुतिमूलकत्वरूपाधिकहेतुना शङ्कोदयादेवेत्यर्थः ।**

ಚೇತನತ್ವಯುಕ್ತಿಯು ಅನುಭವಸಂವಾದಿಯಾದ ಶ್ರುತಿಮೂಲಕವಾಗಿದೆ. ಆದ್ದರಿಂದ ಹೇತುವಿನಲ್ಲಿ ಆಧಿಕ್ಯವು ಬರುತ್ತಿದೆ ಎಂದು ತಿಳಿಯಬೇಕು.




ಹಿಂದಿನ ಅಧಿಕರಣದಲ್ಲಿ ಅನೇಕ ಬಗೆಯ ಯುಕ್ತಿಗಳ ವಿರೋಧವನ್ನು ಪರಿಹರಿಸಲಾಯಿತು. ಈ ಅಧಿಕರಣದಲ್ಲಿ ಶ್ರುತಿ ಹಾಗೂ ಅನುಭವ ಎರಡರ ಸಂವಾದವನ್ನು ಪಡೆದು ಅತ್ಯಂತ ಬಲಿಷ್ಠವಾದ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಿದ್ದಾರೆ. 'ಜೀವಃ ಕರ್ತಾ ಚೇತನತ್ವಾತ್' ಎಂಬ ಅನುಮಾನದಿಂದ ಜೀವಕರ್ತೃತ್ವವು ಸಿದ್ಧವಾಗುತ್ತದೆ. ಇದಕ್ಕೆ 'ಜೀವಾದ್ಭವಂತಿ ಭೂತಾನಿ' ಎಂಬ ಶ್ರುತಿಯ ಸಂವಾದವಿದೆ. 'ಅಹಂ ಕರ್ತಾ' ಇತ್ಯಾದಿ ಅನುಭವದ ಸಂವಾದವೂ ಇದೆ. ಪ್ರತಿಯೊಬ್ಬ ಜೀವರಿಗೂ 'ನಾನೇ ಕರ್ತೃ' ಎಂಬ ಅಭಿಮಾನವಿದೆ. ಶ್ರುತಿಯೂ ಕೂಡ ಅದರಂತೆ ಮಾತನಾಡುತ್ತಿದೆ. ಹಾಗಾಗಿ ಯುಕ್ತಿಯಿಂದ ಜೀವನೇ ಸ್ವತಂತ್ರವಾದ ಕರ್ತೃವೆಂದು ಸುಲಭವಾಗಿ ಸಾಧನೆ ಮಾಡಲು ಬರುತ್ತದೆ. ಇಂಥ ಬಲಿಷ್ಠವಾದ ಯುಕ್ತಿಯ ವಿರೋಧವನ್ನು ಪರಿಹರಿಸುವುದೇ ಇತರವ್ಯಪದೇಶಾಧಿಕರಣದ ಉದ್ದೇಶ.

ಎರಡನೆಯ ಸಂಶಯವು 'ಇತರವ್ಯಪದೇಶಾತ್' ಎಂಬ ಸೂತ್ರದಿಂದ ಸೂಚಿತವಾಗಿದೆ. ಮೂರನೆಯ ಸಂಶಯವು 'ಉಪಸಂಹಾರದರ್ಶನಾತ್' ಎಂಬ ಸೂತ್ರದಿಂದ ಸೂಚಿತವಾಗಿದೆ. ಪೂರ್ವಪಕ್ಷದ ಫಲಫಲಿಭಾವವು, ಸಿದ್ಧಾಂತದ ಫಲಫಲಿಭಾವವು ಇಲ್ಲಿ ಸ್ಪಷ್ಟವಾಗಿಯೇ ತಿಳಿಯುತ್ತದೆ. ಒಂದು ವೇಳೆ 'ಜೀವಾದ್ಭವಂತಿ' ಎಂಬ ಶ್ರುತಿಯು ಜೀವವಿಷಯಕವಾದರೆ ಜೀವನಿಗೆ ಸ್ವತಂತ್ರ ಕರ್ತೃತ್ವವನ್ನು ಸಾಧಿಸುವ ಯುಕ್ತಿಯು ಶ್ರುತಿಯಸಂವಾದಿಯಾಗುತ್ತದೆ. ಆವಾಗ ಬ್ರಹ್ಮನ ಜಗತ್ಕರ್ತೃತ್ವವು ಶ್ರುತಿಸಂವಾದಿಯಾದ ಯುಕ್ತಿಯಿಂದ ವಿರುದ್ಧವಾಗುತ್ತದೆಂಬುದು ಪೂರ್ವಪಕ್ಷದ ಫಲ.

ಜೀವಾದ್ಭವಂತಿ ಎಂಬ ಶ್ರುತಿಯು ಪ್ರತ್ಯಕ್ಷ ಅಪ್ರಾಪ್ತವಾದ ಬ್ರಹ್ಮಪರವಾದರೆ, ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಸಾಧನೆ ಮಾಡುವ ಯುಕ್ತಿಗೆ ಶ್ರುತಿಸಂವಾದ ಇರುವುದಿಲ್ಲ. ಆವಾಗ ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಬ್ರಹ್ಮನ ಕರ್ತೃತ್ವಕ್ಕೆ ಯುಕ್ತಿವಿರೋಧವೂ ಕೂಡ ಬರುವುದಿಲ್ಲವೆಂಬುದು ಸಿದ್ಧಾಂತದ ಫಲ.

ಸಮಯಪಾದದ 'ಅನ್ಯಥಾನುಮಿತೌ ಚ' ಎಂಬ ಸೂತ್ರದಲ್ಲಿ ಸಮಯಪ್ರಾಪ್ತವಾದ ಜೀವಕರ್ತೃತ್ವವನ್ನು ನಿರಾಕರಣೆ ಮಾಡಿದ್ದಾರೆ. ಹೊರತು, ಶ್ರುತಿ ಹಾಗೂ ಅನುಭವಗಳ ಸಂವಾದವಿರುವ ಯುಕ್ತಿಯ ವಿರೋಧವನ್ನು ಪರಿಹಾರ ಮಾಡಿಲ್ಲ. ಇದರಂತೆ ಅಸದಧಿಕರಣದಲ್ಲಿ ಬರುವ 'ಏತೇನ ಶಿಷ್ಟಾ' ಇತ್ಯಾದಿ ಸೂತ್ರದಲ್ಲಿಯೂ ಕೇವಲ ಶ್ರುತಿಸಂವಾದಿಯಾದ ಯುಕ್ತಿಯಿಂದ ಪ್ರಾಪ್ತವಾದ ಜೀವಕರ್ತೃತ್ವವನ್ನು ಪರಿಹಾರ ಮಾಡಿದ್ದಾರೆ ಹೊರತು, ಶ್ರುತಿ ಹಾಗೂ ಅನುಭವಸಂವಾದ ಪಡೆದ ಯುಕ್ತಿಯ ವಿರೋಧವನ್ನು ಪರಿಹಾರ ಮಾಡಿಲ್ಲ. ಹೀಗೆ ಈ ಅಧಿಕರಣದಲ್ಲಿ ವೈಶಿಷ್ಟ್ಯವಿರುವುದರಿಂದ ಇದು ಆರಂಭಣೀಯವೂ ಆಗುತ್ತದೆ. ಪುನರುಕ್ತಿದೋಷವೂ ಕೂಡ ಬರುವುದಿಲ್ಲ. ಮತ್ತು ಪ್ರತಿಯೊಬ್ಬನಿಗೂ ಕೂಡ 'ನಾನೇ ಕರ್ತಾ' ಎಂಬ ಯಾವ ಅನುಭವವಿದೆ, ಅದರ ನಿಜವಾದ ಅಭಿಪ್ರಾಯವನ್ನು ಈ ಅಧಿಕರಣ ಸಮರ್ಥನೆ ಮಾಡುತ್ತದೆ. ಅಷ್ಟೇ ಅಲ್ಲದೇ ಜೀವರಿಗೆ ಹಿತವನ್ನು ಪಡೆಯಬೇಕೆಂಬ ಅಪೇಕ್ಷೆ ಇದ್ದರೂ ಅದನ್ನು ಹೊಂದಲು ಸಾಧ್ಯವಾಗುತ್ತಿಲ್ಲ. ಜೀವನೇ ಕರ್ತೃವಾದರೆ, ಇಂಥ ಹಿತಾಕರಣಾದಿ ದೋಷಗಳು ಏಕೆ ಬರುತ್ತವೆ? ಎಂಬ ಸಂದೇಹವನ್ನೂ ಕೂಡ ಪರಿಹರಿಸುವುದು ಈ ಅಧಿಕರಣದ ಮತ್ತೊಂದು ಉದ್ದೇಶ. ಆದ್ದರಿಂದ ಈ ಅಧಿಕರಣದಲ್ಲಿ ಪ್ರಸಕ್ತವಾಗುವ 'ಇತರವ್ಯಪದೇಶಾತ್' ಇತ್ಯಾದಿ ಪ್ರಾರಂಭದ ಸೂತ್ರದಲ್ಲಿ ಪೂರ್ವಪಕ್ಷಿಗೆ ಅಭಿಪ್ರೇತವಾದ ಶ್ರುತಿಯ ಅರ್ಥವನ್ನು ಯಥಾರ್ಥವಾಗಿ ವ್ಯಾಖ್ಯಾನ ಮಾಡುತ್ತಾರೆ. ಮುಂದಿನ 'ಉಪಸಂಹಾರದರ್ಶನಾತ್' ಸೂತ್ರದಲ್ಲಿ ಅನುಭವದ ಬಗ್ಗೆ ಸ್ಪಷ್ಟವಾಗಿ ವಿಚಾರವನ್ನು ತಿಳಿಸಿದ್ದಾರೆ. 'ಅಶ್ಮಾದಿವಚ್ಚ' ಇತ್ಯಾದಿ ಸೂತ್ರದಲ್ಲಿ ಜೀವಕರ್ತೃತ್ವಸಾಧಕವಾದ ಯುಕ್ತಿಯನ್ನು ನಿರಾಕರಣೆ ಮಾಡಿದ್ದಾರೆ. ಈ ಎಲ್ಲಾ ಕಾರಣಗಳಿಂದ ಅಧಿಕರಣವು ಅತ್ಯಂತ ಅರ್ಥಪೂರ್ಣವಾಗಿದೆ.

### ಎರಡು ಪೂರ್ವಪಕ್ಷ ಎರಡು ಸಂಗತಿ

## तात्पर्यचन्द्रिका

**अत्र घटादेर्जीवैककर्तृकत्वे तद् दृष्टान्तेन महदाद्यपि तथेत्येकः पूर्वः पक्षः ।**

ಈ ಅಧಿಕರಣದಲ್ಲಿ ಒಟ್ಟು ಎರಡು ಬಗೆಯ ಪೂರ್ವಪಕ್ಷಗಳಿವೆ - ೧. ಘಟಪಟಾದಿ ಪದಾರ್ಥಗಳೆಲ್ಲವೂ ಕೇವಲ ಜೀವನಿಂದಲೇ ನಿರ್ಮಾಣವಾಗುತ್ತಿವೆ. ಬ್ರಹ್ಮನು ಬಂದು ನಿರ್ಮಾಣ ಮಾಡುತ್ತಿರುವುದು ಎಲ್ಲಿಯೂ ಕಂಡಿಲ್ಲ. ಈ ದೃಷ್ಟಾಂತದಿಂದ ಮಹತ್ತತ್ವ, ಅಹಂಕಾರತತ್ವ ಮೊದಲಾದವುಗಳೂ ಕೂಡ ಜೀವನಿಂದಲೇ ನಿರ್ಮಾಣವಾಗಿವೆ ಎಂಬುದು ಮೊದಲನೆಯ ಪೂರ್ವಪಕ್ಷ.

**द्वितीयस्तु महदादिरीशकर्तृको घटादिस्तु जीवैककर्तृक इति ।**

೨. ಮಹದಾದಿತತ್ವಗಳು ಈಶನಿಂದ ನಿರ್ಮಾಣವಾಗಿವೆ. ಆದರೆ ಘಟಪಟಾದಿ ಪದಾರ್ಥಗಳು ಕೇವಲ ಜೀವನಿಂದ ನಿರ್ಮಾಣವಾಗಿವೆ. ಬ್ರಹ್ಮನಿಂದ ಈ ಯಾವ ಪದಾರ್ಥಗಳೂ ಕೂಡ ನಿರ್ಮಾಣವಾಗುತ್ತಿಲ್ಲ ಎಂಬುದು ಎರಡನೆಯ ಪೂರ್ವಪಕ್ಷ.

**अत्र च पक्षद्वये ''जीवस्यैव कर्तृत्वाङ्गीकारे कल्पनालाघवम्'' इति पूर्वपक्षहेतुपरं यन्न्यायविवरणं तस्य ''तथाहि'' इत्यादिटीकायामाद्यपक्षमाश्रित्य ईश्वरोऽयोग्यश्चेत् कदापि प्रत्यक्षो न स्यात् । योग्यश्चेत् सदा सर्वत्र सत्त्वादिहेदानीमुपलभ्येत । न चाभिमानिदेवतासाम्यम् । ईश्वरस्याव्यक्तस्वभावाङ्गीकारात् । तस्मादप्रामाणिक ईश्वरस्तस्य घटादौ महदादौ च कर्तृत्वं कल्प्यम् । जीवस्य त्वदृष्टद्वारा महदादावपि कर्तृत्वं क्लृप्तम् । युक्तं चोपादानाद्यपरोक्षज्ञानरहितस्यापि जीवस्य महदादिकर्तृत्वम् । चैत्रः शब्दं करोतीत्यादौ दर्शनादिति तात्पर्यमुक्तम् ।**

ಈ ಎರಡು ಬಗೆಯ ಪೂರ್ವಪಕ್ಷಗಳಲ್ಲಿ 'ಜೀವಸ್ಯೈವ ಕರ್ತೃತ್ವಾಂಗೀಕಾರೇ ಕಲ್ಪನಾಲಾಘವಮ್' ಜೀವನೊಬ್ಬನೇ ಜಗತ್‌ಕರ್ತೃವೆಂದು ಒಪ್ಪಿದಾಗ ಕಲ್ಪನಾಲಾಘವವಿದೆ ಎಂಬುದಾಗಿ ಪೂರ್ವಪಕ್ಷಕ್ಕೆ ಹೇತುಸಮರ್ಪಕವಾದ ನ್ಯಾಯವಿವರಣದ ಮಾತು ಹೊರಟಿದೆ. ಇದರ ತಾತ್ಪರ್ಯ ಹೀಗಿದೆ -

('ತಸ್ಯ' ಎಂಬುದಕ್ಕೆ 'ತಾತ್ಪರ್ಯಮುಕ್ತಮ್' ಎಂಬಲ್ಲಿ ಅನ್ವಯ.)

ನ್ಯಾಯವಿವರಣದ ಈ ಮಾತಿಗೆ ಟೀಕೆಯಲ್ಲಿ ಹೀಗೆ ತಾತ್ಪರ್ಯವನ್ನು ಹೇಳಿದ್ದಾರೆ - 'ತಥಾಹಿ' ಇತ್ಯಾದಿ ಟೀಕಾವಾಕ್ಯದಲ್ಲಿ ಪ್ರಥಮಪಕ್ಷವನ್ನು ಅಂಗೀಕರಿಸಿ ಈಶ್ವರನು ಅಯೋಗ್ಯನಾದರೆ ಯಾವಾಗಲೂ ಕೂಡ ಕಣ್ಣಿಗೆ ಕಾಣಿಸದೇ ಇರಬೇಕಾದೀತು. ಯೋಗ್ಯನಾಗುವುದಾದರೆ ಯಾವಾಗಲೂ ಎಲ್ಲೆಡೆಯು ಇರುತ್ತಾನಾದ್ದರಿಂದ ಈ ಕ್ಷಣದಲ್ಲಿ ಇಲ್ಲಿಯೇ ಕಾಣಿಸಬೇಕಾದೀತು.

ಪ್ರಶ್ನೆ - ಅಭಿಮಾನ್ಯಧಿಕರಣದಲ್ಲಿಯೂ ಇದರಂತೆ ಆಕ್ಷೇಪ ಮಾಡಿ, ಅಭಿಮಾನಿದೇವತೆಗಳಿಗೆ ಭೇದ ಇರುವುದಾದರೆ, ಕಾಣಿಸಬೇಕಾದೀತು ದೇಹಾದಿಗಳು ಇಲ್ಲದಿದ್ದರೆ ವಚನಕ್ರಿಯೆ ಮೊದಲಾದವುಗಳು ಹೇಗೆ ಕೂಡುತ್ತವೆ ? ಇತ್ಯಾದಿಯಾಗಿ ವಿಕಲ್ಪ ಮಾಡಿ, 'ವಿಶೇಷಾನುಗತಿಭ್ಯಾಂ' ಎಂಬ ಸೂತ್ರಭಾಗದಿಂದ ಉತ್ತರಿಸಲಾಗಿತ್ತು. ಅಭಿಮಾನಿದೇವತೆಗಳಿಗೆ ಸಾಮರ್ಥ್ಯವಿಶೇಷವಿರುವುದರಿಂದ ದೇಹಾದಿಗಳಿದ್ದರೂ ಕೂಡ ಕಣ್ಣಿಗೆ ಕಾಣಿಸುವುದಿಲ್ಲ ಎಂಬುದಾಗಿ ಉತ್ತರಿಸಲಾಗಿತ್ತು. ಅದರಂತೆ ಬ್ರಹ್ಮನಿಗೂ ಕೂಡ ಹೇಳಬಹುದಲ್ಲವೇ?

ಉತ್ತರ - ಅಭಿಮಾನಿದೇವತೆಗಳಂತೆ ಈಶ್ವರನಿಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ಈಶ್ವರನು ಕೇವಲ ಅವ್ಯಕ್ತಸ್ವಭಾವವುಳ್ಳವನು. ಯಾವಾಗಲೂ ಎಲ್ಲಿಯೂ ಕೂಡ ಬ್ರಹ್ಮನು ವ್ಯಕ್ತನಾಗಲು ಸಾಧ್ಯವಿಲ್ಲ. ಆದ್ದರಿಂದ ಈಶ್ವರನು ಅಪ್ರಾಮಾಣಿಕನಾಗಿದ್ದಾನೆ. ಇಂಥ ಅಪ್ರಾಮಾಣಿಕನಾದ ಈಶ್ವರನನ್ನು ಕಲ್ಪನೆ ಮಾಡಬೇಕು. ಅವನಲ್ಲಿ ಘಟಾದಿಗಳ ಕರ್ತೃತ್ವವನ್ನು, ಮಹತ್ತತ್ತ್ವಾದಿಗಳ ಕರ್ತೃತ್ವವನ್ನೂ ಕೂಡ ಕಲ್ಪನೆ ಮಾಡಬೇಕು. (ಈಶ್ವರನು ಅಪ್ರಾಮಾಣಿಕ, ಅವನಲ್ಲಿರುವ ಕರ್ತೃತ್ವವೂ ಕೂಡ ಅಪ್ರಾಮಾಣಿಕ)

ಜೀವನು ಮಹದಾದಿತತ್ವಗಳಿಗೂ ಅದೃಷ್ಟದ್ವಾರಾ ಕರ್ತೃವಾಗಿದ್ದಾನೆಂಬುದು ಪ್ರಮಾಣಸಿದ್ಧವಾಗಿದೆ. ಈ ಪಕ್ಷದಲ್ಲಿ ಜೀವನೂ ಕೂಡ ಪ್ರಾಮಾಣಿಕ, ಅವನಲ್ಲಿರುವ ಸರ್ವಕರ್ತೃತ್ವವೂ ಕೂಡ ಪ್ರಾಮಾಣಿಕವಾಗಿದೆ.

ಪ್ರಶ್ನೆ - ಜೀವನು ಕರ್ತೃವಾಗುವುದಾದರೆ, ಉಪಾದಾನಾಕಾರಣ ಮೊದಲಾದವುಗಳ ಅಪರೋಕ್ಷಜ್ಞಾನ ಸಂಪೂರ್ಣವಾಗಿ ಇರಬೇಕು. ಏಕೆಂದರೆ 'ಉಪಾದಾನಗೋಚರ-ಅಪರೋಕ್ಷಜ್ಞಾನ ಚಿಕೀರ್ಷಾ-ಕೃತಿಮಾನ್ ಕರ್ತಾ' ಎಂಬುದು ಕರ್ತೃತ್ವದ ಲಕ್ಷಣ. ಇಂಥ ಕರ್ತೃತ್ವದ ಲಕ್ಷಣ ಜೀವನಲ್ಲಿ ಹೇಗೆ ಬರುತ್ತದೆ ?

ಉತ್ತರ - ಅಪರೋಕ್ಷಜ್ಞಾನಾದಿಗಳು ಇದ್ದರೆ ಮಾತ್ರ ಕರ್ತೃವಾಗಬೇಕಾಗಿಲ್ಲ. 'ಚೈತ್ರಃ ಶಬ್ದಂ ಕರೋತಿ' ಎಂಬಲ್ಲಿ ಚೈತ್ರನು ಶಬ್ದದ ಉಪಾದಾನಕಾರಣವನ್ನು ತಿಳಿಯಬೇಕೆಂದು ಹೇಳಿದಂತಾಗುತ್ತದೆ. ಶಬ್ದಕ್ಕೆ ಉಪಾದಾನಕಾರಣ ಆಕಾಶ. ಆಕಾಶದ ಅಪರೋಕ್ಷಜ್ಞಾನ, ಚಿಕೀರ್ಷಾ ಇವುಗಳೆಲ್ಲವೂ ಕೂಡ ಅಸಂಭಾವಿತವಷ್ಟೇ. ಆದ್ದರಿಂದ ಕರ್ತೃತ್ವಲಕ್ಷಣವೇ ಅಯುಕ್ತವಾಗಿದೆ. ಆದ್ದರಿಂದ ಜೀವನೇ ಜಗತ್ತಿಗೆ ಕರ್ತೃವಾಗುತ್ತಾನೆಂಬುದು ಮೊದಲನೆಯ ಪೂರ್ವಪಕ್ಷ. (ನ್ಯಾಯವಿವರಣದ ಮಾತಿಗೆ ಟೀಕೆಯಲ್ಲಿ ಪ್ರಥಮಪಕ್ಷವನ್ನು ಅವಲಂಬಿಸಿ ಇಷ್ಟು ವ್ಯಾಖ್ಯಾನ ಮಾಡಿರುತ್ತಾರೆ.)

**यत्तु सुधायां ''न ह्यत्राधिकरणे पूर्वपक्षिणा महदादिसकलकार्यकर्तृत्वं जीवस्य शङ्कितम्'' इत्युक्तं तत्राद्ये जीवस्य महदादिकर्तृत्वपक्षेऽनुभवविरोधः । नतु द्वितीये । किन्तु तदानुकूल्यमेवेत्याद्येऽपरितोषमात्रमभिप्रेतम् ।**

ಪ್ರಶ್ನೆ - ನ್ಯಾಯಸುಧೆಯಲ್ಲಿ 'ನ ಹ್ಯತ್ರಾಧಿಕರಣೇ ಪೂರ್ವಪಕ್ಷಿಣಾ ಮಹದಾದಿಸಕಲಕಾಲಕರ್ತೃತ್ವಂ ಜೀವಸ್ಯ ಶಂಕಿತಮ್' ಈ ಅಧಿಕರಣದಲ್ಲಿ ಮಹದಾದಿ ಸಕಲಕಾರ್ಯಪ್ರಪಂಚವನ್ನು ಕುರಿತು ಜೀವನೇ ಕರ್ತೃವಾಗಿದ್ದಾನೆಂದು ಪೂರ್ವಪಕ್ಷದಿಂದ ಆಕ್ಷೇಪವನ್ನು ಮಾಡಿರುವುದಿಲ್ಲ ಎಂಬ ವಾಕ್ಯವಿದೆ. ಈ ವಾಕ್ಯವನ್ನು ನೋಡಿದಾಗ ಟೀಕೆಯಲ್ಲಿ ನ್ಯಾಯವಿವರಣ ವಾಕ್ಯವನ್ನು ವ್ಯಾಖ್ಯಾನ ಮಾಡುತ್ತಾ ಪ್ರಥಮಪಕ್ಷವನ್ನು ಹೇಳಿದ್ದು ತಪ್ಪಲ್ಲವೇ ? ಎಂಬ ಪ್ರಶ್ನೆ ಬರುತ್ತದೆ.

ಉತ್ತರ - ಆಪಾತತಃ ನ್ಯಾಯಸುಧಾ ಮಾತನ್ನು ನೋಡಿದರೆ ಟೀಕೆಯ ಪ್ರಥಮಪಕ್ಷ ತಪ್ಪೆಂದು

ಕಾಣಿಸುತ್ತದೆ. ಆದರೆ ಟೀಕೆಯಲ್ಲಿ ಮಾಡಲ್ಪಟ್ಟ ಮೊದಲನೆಯ ಪೂರ್ವಪಕ್ಷದಲ್ಲಿ ಅಸ್ವಾರಸ್ಯವಿರುವುದರಿಂದ ಮತ್ತೊಂದು ಪೂರ್ವಪಕ್ಷವನ್ನು ತಿಳಿಯಬೇಕೆಂಬುದೇ ನ್ಯಾಯಸುಧೆಯ ಅಭಿಪ್ರಾಯ. ಏಕೆಂದರೆ ಜೀವನು ಘಟಪಟಾದಿಗಳಿಗೆ ಕರ್ತೃವಾಗಿದ್ದಾನೆಂದು ಅನುಭವಸಿದ್ಧವಾಗಿದೆ. ಆದರೆ ಮಹದಾದಿ ತತ್ವಗಳಿಗೆ ಜೀವನು ಕರ್ತೃವಾಗಿದ್ದಾನೆಂಬುದು ಅನುಭವ ವಿರುದ್ಧವಾಗಿದೆ. ಅಷ್ಟೇ ಅಲ್ಲದೇ 'ನಾಹಂ ಸರ್ವಕರ್ತಾ' 'ನಾನು ಸರ್ವಕರ್ತೃನಲ್ಲ' ಎಂಬ ಅನುಭವವೇ ಪ್ರತಿಯೊಬ್ಬರಿಗೂ ಇದೆ. ಆದ್ದರಿಂದ ಮಹದಾದಿ ತತ್ವಗಳಿಗೂ ಕೂಡ ಜೀವನೇ ಕರ್ತೃವಾಗಿದ್ದಾನೆಂಬ ಮೊದಲನೆಯ ಪೂರ್ವಪಕ್ಷದಲ್ಲಿ ಅಸ್ವಾರಸ್ಯವಿದೆ. ಆದರೆ ಎರಡನೆಯ ಪೂರ್ವಪಕ್ಷದಲ್ಲಿ ಅಸ್ವಾರಸ್ಯವಿಲ್ಲ. ಮಹದಾದಿತತ್ವಗಳಿಗೆ ಬ್ರಹ್ಮನು ಕರ್ತೃವಾಗಿದ್ದಾನೆಂದು ಒಪ್ಪಿ, ಘಟಪಟಾದಿ ಪದಾರ್ಥಗಳಿಗೆ ಮಾತ್ರ ಜೀವನೊಬ್ಬನೇ ಕರ್ತೃವಾಗಲಿ ಎಂಬುದು ಆಕ್ಷೇಪ. ಎರಡನೆಯ ಪಕ್ಷದಲ್ಲಿ ಅನುಭವವಿರೋಧ-ವಿರುವುದಿಲ್ಲ ಅಷ್ಟೇ ಅಲ್ಲದೇ ಅನುಕೂಲ್ಯವೇ ಇರುತ್ತದೆ. ಆದ್ದರಿಂದ ಪ್ರಥಮಪಕ್ಷದಲ್ಲಿ ಅಸ್ವಾರಸ್ಯವಿದೆಯೆಂದು ತಿಳಿದು ನ್ಯಾಯಸುಧೆಯಲ್ಲಿ ಮತ್ತೊಂದು ಬಗೆಯ ಪೂರ್ವಪಕ್ಷವನ್ನು ತೋರಿಸಿದ್ದಾರೆ.

**अत एवात्रापि टीकायामाद्येऽपरितोषात् ''यद्वा'' इत्यादिनाऽधिकरणान्ते द्वितीय उक्तम् । नत्वाद्यः सुधायां सर्वथा नाभिप्रेतः । तथात्वे ''देवादि'' इत्युत्तरसूत्र ईश्वरस्यादृश्यत्वोक्त्ययोगात् ।**

ಆದ್ದರಿಂದಲೇ ಟೀಕೆಯಲ್ಲಿಯೂ ಕೂಡ ಅಧಿಕರಣದ ಕೊನೆಯಲ್ಲಿ 'ಯದ್ವಾ' ಇತ್ಯಾದಿಯಾಗಿ ನ್ಯಾಯಸುಧೆಯಲ್ಲಿ ಹೇಳಿದ ಎರಡನೆಯ ಪೂರ್ವಪಕ್ಷವನ್ನು ಹೇಳಿರುತ್ತಾರೆ. ಆದ್ದರಿಂದ ಮೊದಲನೆಯ ಪೂರ್ವಪಕ್ಷದಲ್ಲಿ ಅಪರಿತೋಷವಿದೆಯೆಂಬುದು ಟೀಕೆಗೂ ಕೂಡ ಸಮ್ಮತವೆಂದು ಸ್ಪಷ್ಟವಾಗುತ್ತದೆ.

ಆದ್ದರಿಂದ ಮೊದಲನೆಯ ಪೂರ್ವಪಕ್ಷವು ನ್ಯಾಯಸುಧೆಗೆ ಅಭಿಪ್ರೇತವಲ್ಲವೆಂದು ಸರ್ವಥಾ ತಿಳಿಯಬಾರದು. ಹಾಗಾದಲ್ಲಿ 'ದೇವಾದಿವದಪಿ ಲೋಕೇ' ಎಂಬ ಮುಂದಿನ ಸೂತ್ರದಲ್ಲಿ ಈಶ್ವರನು ಇರುವುದಾದರೆ, ಪ್ರತ್ಯಕ್ಷಕ್ಕೆ ಯೋಗ್ಯನೋ, ಅಯೋಗ್ಯನೋ ? ಯೋಗ್ಯನಾಗುವುದಾದರೆ ಕಾಣಿಸಬೇಕಾದೀತು. ಅಯೋಗ್ಯನಾದರೆ ಯಾವಾಗಲೂ ಕೂಡ ಕಾಣಸದಿರಬೇಕಾದೀತು ಇತ್ಯಾದಿಯಾಗಿ ಆಶಂಕಿಸಿ ಅಂತರ್ಧಾನಶಕ್ತಿಯಿಂದ ಇದ್ದರೂ ಕೂಡ ಈಶ್ವರನು ಕಾಣಿಸುವುದಿಲ್ಲವೆಂದು ಸಮರ್ಥಿಸಲಾಗಿದೆ. ಇದನ್ನು ಹೇಳಿದ್ದೇ ವ್ಯರ್ಥವಾಗಬೇಕಾದೀತು.

**अत्र चाद्ये आरम्भणशब्दादिभ्य ईशस्य स्वतन्त्रकर्तृत्वं चेत् न जीवात् कारणं परम्'' इत्यादिशब्दाज्जीवस्यापि तदस्तु । उक्तरीत्येशस्यैवाभावान्न जीवशब्दस्तत्पर इति पूर्वपक्षोत्थानात् सङ्गतिः ।**

ಎರಡು ಬಗೆಯ ಸಂಗತಿಗಳನ್ನು ತಿಳಿಯಬೇಕು. ಹಿಂದಿನ ಆರಂಭಣಾಧಿಕರಣದಲ್ಲಿ 'ಕಿಂ ಸ್ವಿದಾಸೀತ್' ಇತ್ಯಾದಿ ವಿಷಯವಾಕ್ಯದಿಂದ ಈಶ್ವರನು ಸ್ವಾಧೀನವಾದ ಕಾರಣಗಳಿಂದ ಜಗತ್ತನ್ನು ಸೃಷ್ಟಿಮಾಡುತ್ತಾನೆಂದು ಸಮರ್ಥಿಸಿದ್ದಾಯಿತು. ಅದೇ ಶ್ರುತಿಬಲದಿಂದ ಜೀವನಿಗೆ ಸ್ವಾತಂತ್ರ್ಯೇಣ ಸರ್ವಕರ್ತೃತ್ವವನ್ನು ಹೇಳಬಹುದು. 'ಜೀವಾದ್ಭವಂತಿ ಭೂತಾನಿ ಜೀವೇ ತಿಷ್ಠಂತ್ಯಚಂಚಲಾಃ' ಇತ್ಯಾದಿ ಶ್ರುತಿಯಿಂದ ಜೀವನಿಗಿಂತ ಅತಿರಿಕ್ತವಾದ ಕರ್ತೃವೇ ಇಲ್ಲವೆಂದು ಸಿದ್ಧವಾಗುತ್ತದೆ.

ಜೀವಶಬ್ದವು ಈಶ್ವರಪರವೆಂದು ಹೇಳಬಾರದು. ಪ್ರಥಮ ಪೂರ್ವಪಕ್ಷದಲ್ಲಿ ಹೇಳಿದಂತೆ ಈಶ್ವರನೇ ಇರುವುದಿಲ್ಲ. ಆದ್ದರಿಂದ ಜೀವಶಬ್ದವು ಬ್ರಹ್ಮನನ್ನು ಪ್ರತಿಪಾದನೆ ಮಾಡುವುದಿಲ್ಲ. ಹೀಗೆ ಪ್ರಥಮಪೂರ್ವಪಕ್ಷದ ನ್ಯಾಯದಿಂದಲೇ ಹಿಂದಿನ ಅಧಿಕರಣದಿಂದ ಒಂದು ಬಗೆಯ ಸಂಗತಿಯನ್ನು ತಿಳಿಯಬೇಕು.

**द्वितीये तु पूर्वत्र कर्त्रन्तररहिते महदादावीशस्य स्वतन्त्रकर्तृत्वमुक्तमत्र तु कर्त्रन्तरसहितेऽपि घटादौ तदुच्यत इति सङ्गतिः ।**

ಎರಡನೆಯ ಸಂಗತಿ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಮಹದಾದಿತತ್ವಗಳು ಬ್ರಹ್ಮನೆಂಬ ಕರ್ತೃವನ್ನು ಬಿಟ್ಟು, ಬೇರೆ ಕರ್ತೃವನ್ನು ಹೊಂದಿರುವುದಿಲ್ಲ. ಆದ್ದರಿಂದ ಬೇರೆ ಕರ್ತೃವನ್ನು ಹೊಂದದ ಮಹದಾದಿಗಳಿಗೆ ಈಶ್ವರನು ಸ್ವತಂತ್ರಕರ್ತೃವಾಗಿದ್ದಾನೆಂದು ಹಿಂದಿನ ಆರಂಭಣಾಧಿಕರಣದಲ್ಲಿ ಸಮರ್ಥಿಸಿದ್ದಾಯಿತು. ಈ ಅಧಿಕರಣದಲ್ಲಿ ಮಹದಾದಿತತ್ವಗಳಿಗೆ ಪರಬ್ರಹ್ಮನು ಕರ್ತೃವಾಗಿದ್ದರೂ ಕೂಡ ಘಟಾದಿಗಳಿಗೆ ಜೀವನು ಕರ್ತೃವಾಗಿದ್ದಾನೆ. ಕರ್ತೃಂತರ ಸಹಿತವಾಗಿದ್ದರೂ ಘಟಾದಿಗಳಿಗೆ ಜೀವನು ಕರ್ತೃವಾಗಬಹುದೆಂದು ಇಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಸಂಗತಿಯು ದೊರೆಯುತ್ತದೆ.

**सुधायान्तु द्वितीयपक्षमाश्रित्य कुलालादीनाम् घटादिकर्तृत्वं तावत् अनुभवसिद्धम् । तत्र ईश्वरस्यापि कर्तृत्वे गौरवमिति तात्पर्यमुक्तम् ।**

ನ್ಯಾಯಸುಧೆಯಲ್ಲಾದರೂ ಎರಡನೆಯ ಪೂರ್ವಪಕ್ಷವನ್ನು ಆಶ್ರಯಿಸಿ ಕುಲಾಲಾದಿಗಳ ಘಟಾದಿಗಳ ಕರ್ತೃತ್ವವು ಅನುಭವಸಿದ್ಧವಾಗಿದೆ. ಘಟಾದಿಗಳಿಗೆ ಈಶ್ವರನೂ ಕೂಡ ಕರ್ತೃವಾಗಿದ್ದಾನೆಂದು ಒಪ್ಪಿದರೆ ಗೌರವ ಬರುತ್ತದೆ ಎಂಬುದಾಗಿ ನ್ಯಾಯವಿವರಣದ ವಾಕ್ಯಕ್ಕೆ ತಾತ್ಪರ್ಯವನ್ನು ಹೇಳಿರುತ್ತಾರೆ.

**प्रकाशः –**

पूर्वोत्तरप्रस्थानयोः पक्षभेदेनाविरोधं विवक्षुः पूर्वपक्षं निष्कृष्याह – **अत्रेति** ।।

ಟೀಕೆಯಲ್ಲಿ ಇತರವ್ಯಪದೇಶಾಧಿಕರಣದ ಪೂರ್ವಪಕ್ಷವನ್ನು ಹೇಗೆ ಮಾಡಿರುತ್ತಾರೋ, ಅದಕ್ಕೆ

ವಿರುದ್ಧವಾಗಿ ನ್ಯಾಯಸುಧೆಯಲ್ಲಿ ಪೂರ್ವಪಕ್ಷವನ್ನು ಮಾಡಿರುತ್ತಾರೆಂದು ಆಪಾತತ ಕಾಣುತ್ತದೆ. ಪಕ್ಷಭೇದದಿಂದ ಎರಡರಲ್ಲಿಯೂ ವಿರೋಧವಿಲ್ಲ ಎಂಬುದನ್ನು ಸಮರ್ಥಿಸಲು ಸ್ಪಷ್ಟವಾಗಿ ಎರಡು ಬಗೆಯ ಪೂರ್ವಪಕ್ಷಗಳನ್ನು 'ಅತ್ರ' ಇತ್ಯಾದಿ ಗ್ರಂಥಗಳಿಂದ ತೋರಿಸುತ್ತಿದ್ದಾರೆ.

**प्रकाशः** – टीकायामिति तात्पर्यमुक्तमित्यन्वयः । एतेन ''तथा हि'' इत्यादिटीका न्यायविवरणमूलेत्युक्तं भवति । टीकां तात्पर्यतो व्यनक्ति – **ईश्वर इत्यादिना** ।।

'ಟೀಕಾಯಾಮ್' ಎಂಬುದಕ್ಕೆ 'ತಾತ್ಪರ್ಯಮುಕ್ತಮ್' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ಹೀಗೆ ಹೇಳಿದ್ದರಿಂದ 'ತಥಾ ಹಿ' ಇತ್ಯಾದಿ ಟೀಕೆಯು ನ್ಯಾಯವಿವರಣದ ವ್ಯಾಖ್ಯಾನರೂಪವಾಗಿದೆಯೆಂದು ಹೇಳಿದಂತಾಯಿತು. ಟೀಕೆಯ ತಾತ್ಪರ್ಯವನ್ನು 'ಈಶ್ವರಃ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः** – **अव्यक्तेति** ।। ''तदव्यक्तमाह हि'' इत्यत्र तृतीये तथाऽभिधास्यमानत्वादिति भावः ।। **अदृष्टद्वारेति** ।। कार्यमात्रस्य यथायथं जीवोपभोग्यतया जीवादृष्टजन्यत्वादिति भावः ।।

ಭಕ್ತಿಪಾದದಲ್ಲಿ 'ತದವ್ಯಕ್ತಮಾಹ ಹಿ' ಎಂಬ ಸೂತ್ರದಲ್ಲಿ ಈಶ್ವರನು ಅವ್ಯಕ್ತನೆಂದು ಸಮರ್ಥಿಸುತ್ತೀರಿ ಎಂದಭಿಪ್ರಾಯ. 'ಅದೃಷ್ಟದ್ವಾರಾ' ಎಂದರೆ ಸಕಲ ಕಾರ್ಯಪ್ರಪಂಚವು ಅವರವರಿಗನುಸಾರಿಯಾಗಿ ಜೀವರಿಂದಲೇ ಉಪಭೋಗ್ಯವಾಗಿದೆ. ಆದ್ದರಿಂದ ಪ್ರತಿಯೊಂದು ಪದಾರ್ಥಗಳು ಜೀವನ ಅದೃಷ್ಟದಿಂದಲೇ ಹುಟ್ಟಿರುತ್ತವೆ ಎಂದು ತಿಳಿಯಬೇಕು.

**प्रकाशः** – **शब्दमिति** ।। शब्दस्याकाशगुणतया शब्दोपादानाकाशापरोक्षहीनस्यापि चैत्रस्य शब्दकर्तृत्वदर्शनादित्यर्थः ।

'ಚೈತ್ರಃ ಶಬ್ದಂ ಕರೋತಿ' ಎಂಬಲ್ಲಿ ಶಬ್ದಕ್ಕೆ ಚೈತ್ರವೇ ಕರ್ತೃವಾಗಿದ್ದಾನೆ. ಶಬ್ದವು ಆಕಾಶಗುಣವಾದ್ದರಿಂದ ಅದಕ್ಕೆ ಸಮವಾಯಕಾರಣ ಆಕಾಶವೇ ಆಗಿದೆ. ಆಕಾಶದ ಅಪರೋಕ್ಷಜ್ಞಾನವಾಗಲೀ, ಆಕಾಶದ ಚಿಕೀರ್ಷಾದಿಗಳಾಗಲೀ ಚೈತ್ರನಿಗೆ ಇರುವುದಿಲ್ಲ. ಆದರೂ ಕೂಡ ಶಬ್ದಕ್ಕೆ ಕರ್ತೃವಾಗಿರುವುದು ಕಂಡಿದೆ.

**प्रकाशः** – नच द्रव्यकर्तृत्व एवायं नियमः । अप्रयोजकत्वादिति भावः ।।

ಗುಣಕ್ಕೆ ಚೈತ್ರಾದಿಗಳು ಕರ್ತೃವಾಗದಿದ್ದರೂ, ದ್ರವ್ಯಕ್ಕೆ ಮಾತ್ರ ಕರ್ತೃವಾಗುತ್ತಾರೆಂದು ನಿಯಮ ಮಾಡುತ್ತೇವೆಂದು ಪ್ರಶ್ನಿಸಬಾರದು. ಕಾರ್ಯದಲ್ಲಿ ವ್ಯಭಿಚಾರ ಬರುವುದರಿಂದ ಕರ್ತೃತ್ವವೇ ಚೈತ್ರನಲ್ಲಿ ಇರುವುದಿಲ್ಲವೆಂದು ಸಿದ್ಧವಾಗುತ್ತದೆ. ಆದ್ದರಿಂದ ಗುಣವಿಷಯಕಕರ್ತೃತ್ವವಿರುವುದಿಲ್ಲ. ದ್ರವ್ಯವಿಷಯಕ ಕರ್ತೃತ್ವ ಮಾತ್ರ ಇರುತ್ತದೆಂದು ನಿಯಮ ಮಾಡಲಾಗದು.

**प्रकाशः** – **इतीति** ।। इत्यभिप्रेत्येत्यर्थः ।। इति तात्पर्यमिति ।। तस्य न्यायविवरणस्येति वर्तते ।

'ಇತಿ ತಾತ್ಪರ್ಯಮುಕ್ತಮ್' ಟೀಕೆಯಲ್ಲಿ ಗ್ರಂಥದಲ್ಲಿ ಹೇಳಲ್ಪಟ್ಟ ವಾಕ್ಯವೇ ಕಾಣಿಸುವುದಿಲ್ಲ. ಆದ್ದರಿಂದ 'ಇತಿ' ಎಂಬ ಶಬ್ದವನ್ನು ಪ್ರಯೋಗಿಸಿ ಟೀಕೆಯ ಅಭಿಪ್ರಾಯವನ್ನು ವರ್ಣಿಸಿದ್ದಾರೆ. 'ಇತಿ ತಾತ್ಪರ್ಯಮ್' ಎಂಬಲ್ಲಿ ನ್ಯಾಯವಿವರಣದ ತಾತ್ಪರ್ಯವನ್ನು ಹೇಳಿದ್ದಾರೆಂದು ತಿಳಿಯಬೇಕು.

**प्रकाशः –** नन्वेवमाद्यकल्पः कथं सुधायां दूषित इत्यत आह **– यत्त्विति ।।** तथात्वे देवादिवदपि लोक इति सूत्रव्यावर्त्यस्यानभिमतत्व इत्यर्थः । एवं पक्षभेदेन पूर्वपक्षं व्यवस्थाप्योभयत्रावान्तरसङ्गतिमाह **– अत्र चेति ।।**

ಹಾಗಾದರೆ ಪ್ರಥಮಪೂರ್ವಪಕ್ಷವನ್ನು ನ್ಯಾಯಸುಧೆಯಲ್ಲಿ ಏಕೆ ದೂಷಣೆ ಮಾಡಿದ್ದಾರೆ? ಎಂಬ ಪ್ರಶ್ನೆಗೆ 'ಯತ್ತು' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಪ್ರಥಮಪೂರ್ವಪಕ್ಷವು ಸಮ್ಮತವಾಗದಿದ್ದಲ್ಲಿ 'ದೇವಾದಿವದಪಿ ಲೋಕೇ' ಎಂಬ ಸೂತ್ರದಿಂದ ಸಮರ್ಥನೆ ಮಾಡಿದ ವಿಷಯವೇ ವ್ಯರ್ಥವಾಗಬೇಕಾದೀತು. 'ತಥಾತ್ವೇ' ಎಂಬ ಪದಕ್ಕೆ 'ದೇವಾದಿವದಪಿ ಲೋಕೇ' ಎಂಬ ಸೂತ್ರದಿಂದ ವ್ಯಾವರ್ತ್ಯವಾದದ್ದು ಅನಭಿಮತವಾದಲ್ಲಿ ಎಂದರ್ಥ. ಹೀಗೆ ಪಕ್ಷಭೇದದಿಂದ ಪೂರ್ವಪಕ್ಷದ ವ್ಯವಸ್ಥೆಯನ್ನು ಹೇಳಿ, ಎರಡೂ ಪೂರ್ವಪಕ್ಷಗಳಿಗೆ ಅನುಸಾರಿಯಾಗಿ ಅವಾಂತರಸಂಗತಿಯನ್ನು 'ಅತ್ರ ಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.




ಈ ಅಧಿಕರಣದಲ್ಲಿ ಎರಡು ಬಗೆಯ ಪೂರ್ವಪಕ್ಷಗಳಿವೆ -

೧. ಘಟಾದಿಗಳಿಗೆ ಜೀವನೇ ಕರ್ತೃವೆಂದು ಅನುಭವಸಿದ್ಧವಾಗಿದೆ. ಈ ದೃಷ್ಟಾಂತದಿಂದ ಕಣ್ಣಿಗೆ ಕಾಣಿಸುವ ಮಹತ್ತತ್ತ್ವ ಅಹಂಕಾರತತ್ತ್ವ ಮೊದಲಾದವುಗಳಿಗೂ ಕೂಡ ಜೀವನೇ ಕರ್ತೃವಾಗಿದ್ದಾನೆ. ಏಕೆಂದರೆ ಸಕಲ ಭೋಗ್ಯಪ್ರಪಂಚವು ಜೀವನ ಅದೃಷ್ಟದ್ವಾರಾ ಜನ್ಯವಾಗಿರುತ್ತದೆ. ಜೀವನ ಅದೃಷ್ಟವಿದ್ದರೆ ಮಾತ್ರ ಭೂಮಿ, ನೀರು, ಗಿಡ, ಮರ, ಪರ್ವತ ಇವುಗಳೆಲ್ಲವೂ ಅವನ ಭೋಗ್ಯಕ್ಕೆ ಉಪಯೋಗವಾಗಲು ಸಾಧ್ಯ. ಅವನ ಅದೃಷ್ಟವಿರುವುದರಿಂದ ಈ ಎಲ್ಲಾ ವಸ್ತುಗಳು ಹುಟ್ಟಿರುತ್ತವೆ. ಈಶ್ವರನು ಅತ್ಯಂತ ಅಪ್ರಾಮಾಣಿಕನಾಗಿದ್ದಾನೆ. ಜೀವನು ಪ್ರತ್ಯಕ್ಷದಿಂದ ಸಿದ್ಧವಾಗಿದ್ದಾನೆ. ಒಂದು ವೇಳೆ ಅಪ್ರಾಮಾಣಿಕನಾದ ಈಶ್ವರನಲ್ಲಿ ಜಗತ್‌ಕರ್ತೃತ್ವವನ್ನು ಒಪ್ಪಿದರೆ ಅಪ್ರಾಮಾಣಿಕವಾದ ಈಶ್ವರನನ್ನು ಅವನಲ್ಲಿ ಅಪ್ರಾಮಾಣಿಕವಾದ ಜಗತ್‌ಕರ್ತೃತ್ವವನ್ನು ಎರಡನ್ನು ಕಲ್ಪನೆ ಮಾಡಿದಂತಾಗುತ್ತದೆ. ಈ ಜೀವನು ಜಗತ್ತಿಗೆ ಕರ್ತೃವಾಗಿದ್ದಾನೆಂದು ಒಪ್ಪಿದಾಗ ಇಂಥ ಕಲ್ಪನಾಗೌರವವೂ ಬರುವುದಿಲ್ಲ. ಏಕೆಂದರೆ ಜೀವನು ಅನುಭವಪ್ರಮಾಣದಿಂದ ಸಿದ್ಧವಾಗಿದ್ದಾನೆ. ಮಹತ್ತತ್ತ್ವಾದಿಗಳಿಗೂ ಕೂಡ ಅದೃಷ್ಟದ್ವಾರಾ ಜೀವನೇ ಕರ್ತೃವಾಗಿದ್ದಾನೆಂಬುದು ಎಲ್ಲರೂ ಒಪ್ಪಿರುವ ವಿಚಾರವಾಗಿದೆ. ಆದ್ದರಿಂದ ಯಾವುದನ್ನೂ ಕೂಡ ಕಲ್ಪನೆ ಮಾಡುವ ಅವಶ್ಯಕತೆಯಿರುವುದಿಲ್ಲ.

೨. ಮಹತ್ತತ್ತ್ವಾದಿಗಳಿಗೆ ಈಶ್ವರನು ಕರ್ತೃವಾಗಿದ್ದಾನೆ. ಕಣ್ಣಿಗೆ ಕಾಣಿಸುವ ಘಟಪಟಾದಿ ಪದಾರ್ಥಗಳಿಗೆ ಮಾತ್ರ ಜೀವನ ಕರ್ತೃವಾಗಿದ್ದಾನೆ. ಏಕೆಂದರೆ ಘಟಾದಿಗಳಿಗೆ ಜೀವಾದಿಗಳೇ ಕರ್ತೃವಾಗಿದ್ದಾರೆಂಬುದು ಅನುಭವಸಿದ್ಧವಾಗಿದೆ. ಹೀಗಿರುವಾಗ ಈಶ್ವರನೂ ಕೂಡ ಘಟಪಟಾದಿಗಳಿಗೆ ಕರ್ತೃವಾಗಿದ್ದಾನೆಂದು ಕಲ್ಪನೆ ಮಾಡಿದರೆ, ಗೌರವದೋಷ ಬರುತ್ತದೆ.

ಹಿಂದಿನ ಅಧಿಕರಣದಲ್ಲಿ ಈಶ್ವರನು 'ಕಿಂ ಸ್ವಿದಾಸೀತ್' ಇತ್ಯಾದಿ ಶ್ರುತಿಯ ಬಲದಿಂದ ಸ್ವತಂತ್ರಕರ್ತೃವಾಗಿದ್ದಾನೆಂದು ನಿರ್ಣಯವಾಗುತ್ತದೆಂದು ಸಮರ್ಥಿಸಿದಿರಿ. ಹಾಗಾದರೆ 'ಜೀವಾದ್ಭವಂತಿ ಭೂತಾನಿ' ಎಂಬ ಶ್ರುತಿಯ ಬಲದಿಂದ ಈಶ್ವರನೂ ಕೂಡ ಸಮಸ್ತ ಜಗತ್ತಿಗೆ ಕರ್ತೃವಾಗಿದ್ದಾನೆಂದು ಸಿದ್ಧವಾಗುತ್ತದಲ್ಲವೇ? ಎಂಬ ಆಕ್ಷೇಪಕ್ಕೆ ಉತ್ತರಿಸಲು ಈ ಅಧಿಕರಣ ಹೊರಡುತ್ತಿದೆ. ಅಥವಾ ಮಹತ್ತತ್ತ್ವಾದಿಗಳಿಗೆ ಈಶ್ವರನೊಬ್ಬನನ್ನು ಬಿಟ್ಟು, ಬೇರೆ ಯಾರೂ ಕೂಡ ಕರ್ತೃಗಳು ಇರುವುದಿಲ್ಲ. ಈಶ್ವರನು ಜಗತ್ತನ್ನು ಸೃಷ್ಟಿ ಮಾಡಬೇಕಾದರೆ ಸ್ವಾಧೀನವಾದ ಪ್ರಕೃತ್ಯಾದಿಗಳನ್ನೇ ಉಪಯೋಗಿಸಿಕೊಳ್ಳುತ್ತಾನೆಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಿದ್ದಾಯಿತು. ಹಾಗಾದರೆ ಘಟಪಟಾದಿಗಳಿಗೆ ಜೀವನೇ ಕರ್ತೃವಾಗಿದ್ದಾನೆಂದು ಸಿದ್ಧವಾಗುತ್ತಿರುವುದರಿಂದ ಈಶ್ವರನನ್ನು ಏಕೆ ಒಪ್ಪಬೇಕು ? ಎಂಬ ಆಕ್ಷೇಪಕ್ಕೂ ಉತ್ತರಿಸಲು ಈ ಅಧಿಕರಣ ಹೊರಟಿದೆ. ಆನಂತರ್ಯಸಂಗತಿಯು ಸ್ಪಷ್ಟವಾಗುತ್ತದೆ.

### ಸಿದ್ಧಾಂತ
### ಈಶಾಧೀನವಾದ ಕರ್ತೃತ್ವ ಜೀವನಲ್ಲಿದೆ

## तात्पर्यचन्द्रिका

**सिद्धान्तमाह ।। इति प्राप्त इत्यादिना ।। अयं भावः ।।**

**कर्तृत्वमात्रं जीवस्य ममापीष्टं घटादिषु ।**
**अन्यानधीनकर्तृत्वे स्याद्धिताकरणादिकम् ।।१।।**

ಟೀಕೆಯಲ್ಲಿ ಸಿದ್ಧಾಂತವನ್ನು 'ಇತಿ ಪ್ರಾಪ್ತೇ' ಇತ್ಯಾದಿಯಾಗಿ ಮಾಡುತ್ತಿದ್ದಾರೆ. ಸಿದ್ಧಾಂತದ ಒಟ್ಟು ಸಾರಸಂಗ್ರಹ ಹೀಗಿದೆ -

ಕರ್ತೃತ್ವಮಾತ್ರಂ ಜೀವಸ್ಯ ಮಮಾಪೀಷ್ಟಂ ಘಟಾದಿಷು ।
ಅನ್ಯಾನಧೀನಕರ್ತೃತ್ವೇ ಸ್ಯಾದ್ಧಿತಾಕರಣಾದಿಕಮ್ ।।೧।।

ಜೀವನಲ್ಲಿ ಕರ್ತೃತ್ವಮಾತ್ರವು ಸಿದ್ಧಾಂತಿಯಾದ ನನಗೂ ಕೂಡ ಘಟಾದಿಗಳ ವಿಷಯದಲ್ಲಿ ಇಷ್ಟವೇ ಆಗಿದೆ. ಆದರೆ ಈಶ್ವರಾಧೀನವಾದ ಕರ್ತೃತ್ವವಿರುತ್ತದೆಂದು ಒಪ್ಪಲೇಬೇಕು. ಒಂದು ವೇಳೆ ಈಶ್ವರಾಧೀನವಾಗದ ಕರ್ತೃತ್ವವು ಜೀವನಲ್ಲಿ ಇರುವುದಾದರೆ ಹಿತ-ಅಕರಣಾದಿದೋಷವು ಬರುತ್ತದೆ.

**कथं न कुर्यात् प्रेक्षावान् स्वतन्त्रः स्वहितं सदा ।**
**कथं च स्वाहितं कुर्यात्तथा च सकलो जनः ।।२।।**

ಕಥಂ ನ ಕುರ್ಯಾತ್ಪ್ರೇಕ್ಷವಾನ್ ಸ್ವತಂತ್ರಃ ಸ್ವಹಿತಂ ಸದಾ ।
ಕಥಂ ಚ ಸ್ವಾಹಿತಂ ಕುರ್ಯಾತ್ತಥಾ ಚ ಸಕಲೋ ಜನಃ ॥೨॥

ಜೀವನು ಸ್ವತಂತ್ರಕರ್ತೃವಾದರೆ ಪ್ರೇಕ್ಷಾವಂತನಾದ ಸ್ವತಂತ್ರನಾದ ಜೀವನು ತನಗೆ ಹಿತವಾದದ್ದನ್ನೆಲ್ಲಾ ಏಕೆ ಸಂಪಾದನೆ ಮಾಡುವುದಿಲ್ಲ ? ಅಥವಾ ತನಗೆ ಅಹಿತವಾದದ್ದನ್ನು ಯಾಕೆ ಬಿಡಲು ಸಮರ್ಥನಾಗುವುದಿಲ್ಲ ? ಪ್ರತಿಯೊಬ್ಬರೂ ಕೂಡ ಸುಖಪಡಬೇಕೆಂದರೂ ಆಗುತ್ತಿಲ್ಲ. ಕಷ್ಟಪಡಬಾರದೆಂದರೂ ತಪ್ಪಿಸಿಕೊಳ್ಳಲು ಆಗುತ್ತಿಲ್ಲ. ಇದು ಏಕೆ ?

**पूर्णानन्दश्च निर्दुःखः सर्वदैव प्रसज्यते ।**
**कर्मकालादिकस्यापि जडत्वान्न स्वतन्त्रता ॥३॥**

ಪೂರ್ಣಾನಂದಶ್ಚ ನಿರ್ದುಃಖಃ ಸರ್ವದೈವ ಪ್ರಸಜ್ಯತೇ ।
ಕರ್ಮಕಾಲಾದಿಕಸ್ಯಾಪಿ ಜಡತ್ವಾನ್ನ ಸ್ವತಂತ್ರತಾ ॥೩॥

ಜೀವನು ಸ್ವತಂತ್ರಕರ್ತೃವಾದರೆ ಪರಿಪೂರ್ಣವಾದ ಆನಂದವನ್ನು ಪಡೆಯಬೇಕಾದೀತು. ದುಃಖದ ಲವಲೇಶವನ್ನೂ ಕೂಡ ಹೊಂದಬಾರದಿತ್ತು. ಎಲ್ಲಾ ಕಾಲದಲ್ಲಿಯೂ ಪೂರ್ಣಾನಂದನೂ ನಿರ್ದುಃಖನು ಆಗಬೇಕಾದೀತು. ಕರ್ಮ ಅಥವಾ ಕಾಲಾಧೀನವಾಗಿ ಅವನಿಗೆ ಇಂಥ ಪೂರ್ಣಾನಂದಾಭಿಮುಖನಾಗಿ ಅನುಭವಿಸಲು ಸಾಧ್ಯವಾಗುತ್ತಿಲ್ಲವೆಂದು ಉತ್ತರಿಸಬಾರದು. ಕರ್ಮ, ಕಾಲ ಇವುಗಳೆಲ್ಲವೂ ಕೂಡ ಜಡವಾದ್ದರಿಂದ ಸ್ವಾತಂತ್ರ್ಯ ಇವುಗಳಿಗೂ ಇರುವುದಿಲ್ಲ.

**नैव बघ्नाति पुरुषं स्वयं हि निगडादिकम् ।**
**जीवस्ततो दारुयोषावदन्याधीनचेष्टितः ॥४॥**

ನೈವ ಬಧ್ನಾತಿ ಪುರುಷಂ ಸ್ವಯಂ ಹಿ ನಿಗಡಾದಿಕಮ್ ।
ಜೀವಸ್ತತೋ ದಾರುಯೋಷಾವದನ್ಯಾಧೀನಚೇಷ್ಟಿತಃ ॥೪॥

ಜಡಪದಾರ್ಥಗಳು ದುಃಖವನ್ನು ಪರಿಹಾರ ಮಾಡಲು ಸಮರ್ಥವಾಗುವುದಾದರೆ, ಜೈಲಿನಲ್ಲಿ ಹಾಕಿದ ನಿಗಡ ಬಂಧನವು ಪುರುಷನನ್ನು ಏಕೆ ವಿಮೋಚನೆ ಗೊಳಿಸುವುದಿಲ್ಲ. ಆದ್ದರಿಂದ ಜೀವನು ಕೇವಲ ಬೊಂಬೆಯಂತೆ ಹರಿ ಆಡಿಸಿದಂತೆ ಆಡುತ್ತಿದ್ದಾನೆ ಎಂದು ಒಪ್ಪಲೇಬೇಕು.

**चेतनोऽप्यस्वतन्त्रोऽस्तु सूत्रप्रोतशुकादिवत् ।**
**प्रत्यक्षं चास्वतन्त्रत्वं मृतिसुप्त्युद्भवादिषु ॥५॥**

ಚೇತನೋಽಪ್ಯಸ್ವತಂತ್ರೋಽಸ್ತು ಸೂತ್ರಪ್ರೋತಶುಕಾದಿವತ್ ।
ಪ್ರತ್ಯಕ್ಷಂ ಚಾಸ್ವತಂತ್ರತ್ವಂ ಮೃತಿಸುಪ್ತ್ಯುದ್ಭವಾದಿಷು ॥೫॥

ಪರಿಪೂರ್ಣಚಂದ್ರಿಕಾ

'ಜೀವಃ ಸ್ವತಂತ್ರಃ ಚೇತನತ್ವಾತ್' ಎಂಬ ಅನುಮಾನದಲ್ಲಿ 'ಚೇತನತ್ವಂ ಅಸ್ತು ಸ್ವಾತಂತ್ರ್ಯಂ ಮಾಸ್ತು' ಎಂಬ ಅಪ್ರಯೋಜಕಾಶಂಕೆಯು ಇದೆ. ಜೀವನು ಚೇತನನಾಗಿದ್ದರೂ ಕೂಡ ಅಸ್ವತಂತ್ರನೇ ಆಗಲಿ. ಬಂಧನದಲ್ಲಿ ಸಿಲುಕಿದ ಗಿಳಿಯಂತೆ. ಮತ್ತು ಪ್ರತಿನಿತ್ಯ ಪ್ರತ್ಯಕ್ಷವಾಗಿ ಜೀವನ ಅಸ್ವಾತಂತ್ರ್ಯವನ್ನು ಕಾಣುತ್ತಲೇ ಇದ್ದೇವೆ. ಮರಣ ಬರಬಾರದೆಂದು ಬಯಸಿದವರಿಗೂ ಮರಣ ಬರುತ್ತಿದೆ ಸುಷುಪ್ತಿ ಬರಬೇಕೆಂದು ಬಯಸಿದವರಿಗೂ ಸುಷುಪ್ತಿ ಅವಸ್ಥೆ ಬರುತ್ತಿಲ್ಲ. ಮಗು ಹುಟ್ಟಬೇಕೆಂಬ ಅಪೇಕ್ಷೆಯಿದ್ದರೂ ಹುಟ್ಟುತ್ತಿಲ್ಲ.

**यत्रेशेच्छानुसारेण स्वस्यापीच्छोपजायते ।**
**कार्योपसंहृतिं काकतालीयां तत्र वीक्ष्यतु ॥६॥**

ಯತ್ರೇಶೇಚ್ಛಾನುಸಾರೇಣ ಸ್ವಸ್ಯಾಪೀಚ್ಛೋಪಜಾಯತೇ ।
ಕಾರ್ಯೋಪಸಂಹೃತಿಂ ಕಾಕತಾಲೀಯಾಂ ತತ್ರ ವೀಕ್ಷ್ಯತು ॥೬॥

ಯಾವ ಸಂದರ್ಭದಲ್ಲಿ ಈಶ್ವರನ ಇಚ್ಛೆಗೆ ಅನುಸಾರಿಯಾಗಿ ಜೀವನ ಇಚ್ಛೆಯು ಇರುತ್ತದೋ, ಆವಾಗ ಅವನು ಅಂದುಕೊಂಡಂತೆ ಕಾರ್ಯವು ನಡೆಯುತ್ತದೆ. ಇಂಥ ಪ್ರಸಂಗಗಳಿಂದ ಜೀವನು ತನ್ನಲ್ಲಿ ಸ್ವಾತಂತ್ರ್ಯದ ಭ್ರಮೆಯನ್ನು ಹೊಂದುತ್ತಾನೆ. ಇಂಥ ಕಾಕತಾಳೀಯ ಸ್ಥಳದಲ್ಲಿ ತನಗೆ ಸ್ವಾತಂತ್ರ್ಯವಿರುವುದಿಲ್ಲವೆಂಬ ಅರಿವು ಉಂಟಾಗುವುದಿಲ್ಲ.

**देहादियन्तुश्च हरेरगृहीत्वा स्वतोभिदाम् ।**
**स्वतन्त्रकर्तृतां स्वस्य मन्यते ह्यबुधोजनः ॥७॥**

ದೇಹಾದಿಯಂತುಶ್ಚ ಹರೇರಗಕೃಹೀತ್ವಾ ಸ್ವತೋಭಿದಾಮ್ ।
ಸ್ವತಂತ್ರಕರ್ತೃತಾಂ ಸ್ವಸ್ಯ ಮನ್ಯತೇ ಹ್ಯಬುಧೋಜನಃ ॥೭॥

ಅಥವಾ ದೇಹಕ್ಕೆ ನಿಯಾಮಕನಾದವನು ಶ್ರೀಹರಿ ಎಂಬ ಅರಿವಿಲ್ಲದೇ, ಶ್ರೀಹರಿಗೂ ತನಗೂ ಇರುವ ವೈಲಕ್ಷಣ್ಯವನ್ನು ತಿಳಿದುಕೊಳ್ಳದೇ ನಾನೇ ಸ್ವತಂತ್ರ ಕರ್ತೃವೆಂದು ಪಾಮರ ಜನರು ತಿಳಿದುಬಿಡುತ್ತಾರೆ.

**चार्वाकस्य यथा देहे जडे स्वातन्त्र्यधीस्तथा ।**
**(यथैवात्मपराधीने देहेस्वातन्त्र्यधीस्तथा ।)**
**जीवबिम्बेश्वराधीनेजीवे स्वातन्त्र्यविभ्रमः ॥८॥**

ಚಾರ್ವಾಕಸ್ಯ ಯಥಾ ದೇಹೇ ಜಡೇ ಸ್ವಾತಂತ್ರ್ಯಧೀಸ್ತಥಾ ।
(ಯಥೈವಾತ್ಮಪರಾಧೀನೇ ದೇಹೇ ಸ್ವಾತಂತ್ರ್ಯಧೀಸ್ತಥಾ ।)
ಜೀವಬಿಂಬೇಶ್ವರಾಧೀನೇಜೀವೇ ಸ್ವಾತಂತ್ರ್ಯವಿಭ್ರಮಃ ॥೮॥

ಆತ್ಮನನ್ನೇ ಒಪ್ಪದ ಚಾರ್ವಾಕನಿಗೆ ಜಡವಾದ ತನ್ನ ದೇಹದಲ್ಲಿಯೇ ಸ್ವಾತಂತ್ರ್ಯಜ್ಞಾನವು ಹೇಗೆ ಬರುತ್ತದೋ, ಅದರಂತೆ ಆತ್ಮಾಧೀನವಾದ ದೇಹದಲ್ಲಿ ಅಜ್ಞಾನಿಯು ಸ್ವಾತಂತ್ರಬುದ್ಧಿಯನ್ನು ತಾಳಿ ಭ್ರಮೆಗೆ ಒಳಗಾಗುತ್ತಾನೆ.

ಮತ್ತು 'ಜೀವಃ ಈಶಾಧೀನಃ ಈಶ್ವರಪ್ರತಿಬಿಂಬತ್ವಾತ್' ಎಂಬ ಅನುಮಾನದಿಂದ ಈಶ್ವರನ ಪ್ರತಿಬಿಂಬನಾಗಿರುವ ಜೀವನು ಈಶಾಧೀನನಾಗಿದ್ದಾನೆ ಎಂದು ಸಿದ್ಧವಾಗುತ್ತದೆ. ಸ್ವಾತಂತ್ರ್ಯದ ವಿಭ್ರಮದಿಂದ ಜೀವನು ಶ್ರೀಹರಿಯಲ್ಲಿರುವ ಸ್ವಾತಂತ್ರ್ಯವನ್ನು ತನಲ್ಲಿ ಇರುತ್ತದೆಂದು ಭ್ರಮಿಸುತ್ತಾನೆ.

**आविर्भावतिरोभावौ शक्तियोगात् पिशाचवत् ।**
**ईश्वरस्योपपद्येते सर्वत्रावस्थितस्य च ॥९॥**

ಆವಿರ್ಭಾವತಿರೋಭಾವೌ ಶಕ್ತಿಯೋಗಾತ್ಪಿಶಾಚವತ್ ।
ಈಶ್ವರಸ್ಯೋಪಪದ್ಯೇತೇ ಸರ್ವತ್ರಾವಸ್ಥಿತಸ್ಯ ಚ ॥೯॥

ಈಶ್ವರನು ಎಲ್ಲ ಕಡೆ ನೆಲೆಸಿ, ಎಲ್ಲಾ ಪದಾರ್ಥಗಳಿಗೂ ನಿಯಾಮಕನಾಗಿರುವುದಾದರೆ ಅವನು ಕಾಣಿಸಬೇಕಿತ್ತಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಈಶ್ವರನ ಆವಿರ್ಭಾವಗಳು, ತಿರೋಭಾವಗಳು, ಅವನ ಅದ್ಭುತಶಕ್ತಿಯಿಂದ ಉಪಪನ್ನವಾಗುತ್ತದೆ. ಪಿಶಾಚಿಯು ಇದ್ದರೂ ಕೂಡ ನಮ್ಮ ಕಣ್ಣಿಗೆ ಕಾಣಿಸದೆ ಅಂತರ್ಧಾನಶಕ್ತಿಯನ್ನು ಹೊಂದಿರುವಂತೆ ಈಶ್ವರನೂ ಕೂಡ ಎಲ್ಲೆಡೆ ನೆಲೆಸಿದ್ದರೂ ನಮ್ಮ ಕಣ್ಣಿಗೆ ಕಾಣಿಸದಂತೆ ಅಂತರ್ಧಾನಶಕ್ತಿಯಿಂದ ಇರುತ್ತಾನೆ.

**गौरवं तन्न भाराय यत्प्रमाणस्य सम्मतम् ।**
**नहि भाराय भवति कांक्षितं भूषणादिकम् ॥१०॥**

ಗೌರವಂ ತನ್ನ ಭಾರಾಯ ಯತ್ಪ್ರಮಾಣಸ್ಯ ಸಮ್ಮತಮ್ ।
ನಹಿ ಭಾರಾಯ ಭವತಿ ಕಾಂಕ್ಷಿತಂ ಭೂಷಣಾದಿಕಮ್ ॥೧೦॥

ಪೂರ್ವಪಕ್ಷಿಗಳು ಆಕ್ಷೇಪಿಸಿದಂತೆ ಸಿದ್ಧಾಂತಿಗಳಾದ ನಮಗೆ ಗೌರವ ಭಯವೂ ಇಲ್ಲ. ಯಾವ ಪ್ರಮೇಯವು ಪ್ರಮಾಣಗಳಿಂದ ಪ್ರಮಿತವಾಗಿದೆಯೋ, ಮತ್ತು ನಮಗೆ ಇಷ್ಟವಾಗಿದೆಯೋ, ಅದು ಗೌರವ ಎಂದು ಕರೆಸಿಕೊಳ್ಳುವುದೇ ಇಲ್ಲ. ನಮಗೆ ಇಷ್ಟವಾದ ಆಭರಣಗಳನ್ನು ದೇಹದಲ್ಲಿ ಹಾಕಿಕೊಂಡಾಗ ಯಾರೂ ಕೂಡ ಆಭರಣಗಳನ್ನು ತಮಗೆ ಭಾರವೆಂದು ಹೇಳುವುದಿಲ್ಲವಷ್ಟೇ ?

**प्रत्युत**

**प्रामाणिकेशकर्तृत्वत्यागादप्रमितस्य च ।**
**जीवे तस्य स्वीकृतेश्च गौरवं पूर्वपक्षिणः ॥११॥ इति ।**

ಪ್ರಾಮಾಣಿಕೇಶಕರ್ತೃತ್ವತ್ಯಾಗಾದಪ್ರಮಿತಸ್ಯ ಚ ।
ಜೀವೇ ತಸ್ಯ ಸ್ವೀಕೃತೇಶ್ಚ ಗೌರವಂ ಪೂರ್ವಪಕ್ಷಿಣಃ ॥೧೧॥

ಅನೇಕ ಪ್ರಮಾಣಗಳಿಂದ ಪ್ರಮಿತವಾದ ಈಶ್ವರನ ಕರ್ತೃತ್ವವನ್ನು ತ್ಯಾಗಮಾಡಿ, ಜೀವನಲ್ಲಿ ಅಪ್ರಮಿತವಾದ ಕರ್ತೃತ್ವವನ್ನು ಸ್ವೀಕಾರ ಮಾಡಿದರೆ, ಕಲ್ಪನಾಗೌರವದೋಷ ಪೂರ್ವಪಕ್ಷಿಗಳಿಗೇ ಬರುತ್ತದೆ. ನಮಗೆ ಬರುವುದಿಲ್ಲ.

**यत्त्वनुव्याख्याने कृत्स्नप्रसक्त्यादि शङ्कित्वाऽचिन्त्येशशक्तयोपपत्तेर्न साम्यमित्युक्तं तदुत्तराधिकरणप्रमेयं शिष्यहितार्थमिहोक्तम् । इहैवाचिन्त्यशक्तयुक्तौ पुनरुत्तरत्र पूर्वपक्षानुदयादिति सुधायामेवोक्तम् ।**

ಅನುವ್ಯಾಖ್ಯಾನದಲ್ಲಿ ಕೃತ್ಸ್ನಪ್ರಸಕ್ತಿ ಮೊದಲಾದ ದೋಷಗಳನ್ನು ಈಶ್ವರನಲ್ಲಿಯೂ ಕೂಡ ಆಶಂಕಿಸಿ, ಅಚಿಂತ್ಯಶಕ್ತಿಯಿರುವುದರಿಂದ ಕೃತ್ಸ್ನಪ್ರಸಕ್ತ್ಯಾದಿ ದೋಷಗಳು ಬರುವುದಿಲ್ಲವೆಂದು ಹೇಳಿರುತ್ತಾರೆ. ಜೀವನಲ್ಲಿ ಇಂಥ ಅಚಿಂತ್ಯಶಕ್ತಿಯಿರುವುದಿಲ್ಲ. ಆದ್ದರಿಂದ ಈಶ್ವರನಿಗೂ ಜೀವನಿಗೂ ವ್ಯತ್ಯಾಸವಿದೆ ಎಂದು ಹೇಳಿರುತ್ತಾರೆ. ವಸ್ತುತಃ ಮುಂದಿನ ಶಬ್ದಮೂಲತ್ವಾಧಿಕರಣದ ಪ್ರಮೇಯವಿದು. ಕೇವಲ ಶಿಷ್ಯರ ಹಿತಕ್ಕೋಸ್ಕರ ಈ ಅಧಿಕರಣದಲ್ಲಿ ಹಾಗೇ ಹೇಳಿದ್ದಾರೆ. ಈ ಅಧಿಕರಣದಲ್ಲಿ ಈಶ್ವರನ ಅಚಿಂತ್ಯಶಕ್ತಿಯ ಬಗ್ಗೆ ಹೇಳಿಬಿಟ್ಟರೆ, ಪುನಃ ಶಬ್ದಮೂಲತ್ವಾಧಿಕರಣದಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲವೆಂಬ ಮಾತನ್ನೂ ಕೂಡ ನ್ಯಾಯಸುಧೆಯಲ್ಲಿ ಹೇಳಿರುತ್ತಾರೆ. ಈ ಮಾತಿನ ಆಧಾರದಿಂದ ಇತರವ್ಯಪದೇಶಾಧಿಕರಣದ ಪ್ರಮೇಯವನ್ನಾಗಿ ಈಶ್ವರನಲ್ಲೇ ಕೃತ್ಸ್ನಪ್ರಸಕ್ತ್ಯಾದಿ ದೋಷವನ್ನು ಹೇಳಿರುವುದಿಲ್ಲವೆಂದು ತಿಳಿಯಬೇಕು.

**''इतरव्यपदेशात्'' इति सूत्राक्षराणि योजयति ।। जीवकर्तृत्वस्येत्यादिना ।। अयं भावः । सौत्रस्येतरशब्दस्य प्रस्तुतब्रह्मकर्तृत्वादितरजीवकर्तृत्वमर्थः । ''असद्व्यपदेशान्नेति चेत्'' इति सूत्राचेदित्यनुवर्तते । स च यद्यर्थः । यदितर्थोश्च नित्यसम्बन्धः ।**

'ಇತರವ್ಯಪದೇಶಾತ್' ಎಂಬ ಸೂತ್ರದಲ್ಲಿರುವ ಅಕ್ಷರಾರ್ಥವನ್ನು 'ಜೀವಕರ್ತೃತ್ವಸ್ಯ' ಇತ್ಯಾದಿಯಾಗಿ ಯೋಜನೆ ಮಾಡಿ ಹೇಳಿದ್ದಾರೆ. ಅಭಿಪ್ರಾಯ ಹೀಗಿದೆ - ಸೂತ್ರದಲ್ಲಿರುವ ಇತರ ಶಬ್ದವು ಹಿಂದಿನ ಅಧಿಕರಣದಲ್ಲಿ ಪ್ರಸಕ್ತವಾದ ಬ್ರಹ್ಮಕರ್ತೃತ್ವಕ್ಕಿಂತ ಇತರವಾದ ಜೀವಕರ್ತೃತ್ವವನ್ನು ಹೇಳುತ್ತಿದೆ. ಜೀವನಿಗೆ ಕರ್ತೃತ್ವವನ್ನು ಶ್ರುತಿ ಹೇಳುತ್ತಿರುವುದರಿಂದ 'ಇತರವ್ಯಪದೇಶಾತ್' ಎಂಬ ಹೇತುವಿಗೆ ತಕ್ಕಂತೆ 'ಜೀವಃ ಕರ್ತಾ' ಎಂಬ ಪ್ರತಿಜ್ಞೆಯನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. 'ಯದಿ

ಜೀವಃ ಕರ್ತಾ ಚೇತ್ ತರ್ಹಿ ಹಿತಾಕರಣಾದಿದೋಷಪ್ರಸಕ್ತಿಃ' ಎಂಬುದಾಗಿ 'ಯದಿ' ಮತ್ತು 'ತರ್ಹಿ' ಎಂಬ ಎರಡು ನಿತ್ಯಸಂಬಂಧವುಳ್ಳ ಪದಗಳನ್ನು ಜೋಡಿಸಿಕೊಂಡು ಅನ್ವಯವನ್ನು ತಿಳಿಯಬೇಕು.

**तथा च यदि जीवकर्तृत्वव्यपदेशाज्जीवः स्वतन्त्रः कर्ता तर्हि हिताकरणादिदोषप्रसङ्ग इति सूत्रार्थ इति ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् इतरव्यपदेशाधिकरणं सम्पूर्णम् ।।७।।**

ಒಂದು ವೇಳೆ ಜೀವನಲ್ಲಿ ಕರ್ತೃತ್ವವ್ಯಪದೇಶವು ಸ್ವತಂತ್ರಕರ್ತೃತ್ವದಲ್ಲಿ ಪರ್ಯವಸಾನವಾಗುವುದಾದರೆ, ಆವಾಗ ಹಿತಕರಣಾದಿದೋಷ ಪ್ರಸಕ್ತಿಯು ಬರುತ್ತದೆ ಎಂಬುದಾಗಿ ಸೂತ್ರದ ಅರ್ಥವನ್ನು ಹೇಳಿದಂತಾಯಿತು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಇತರವ್ಯಪದೇಶಾಧಿಕರಣವು ಸಂಪೂರ್ಣವಾಯಿತು

**प्रकाशः —**

भाष्ये ''जीवकर्तृत्वपक्षे हिताकरणमहितकरणं च न स्यात्'' इति कर्तृत्वमात्र-निरसप्रतीतावपि टीकायां स्वतन्त्रकर्तृत्वनिरासपरतया व्याख्यानं निर्बीजमित्यतः कर्तृत्वमात्रस्यानुमतत्वादन्याधीनकर्तृत्वे च हिताकरणादिदोषासंस्पर्शादिति भावेन तदभिप्रायमाह ।। **अयं भाव इत्यादिना ।।**

ಭಾಷ್ಯದಲ್ಲಿ ''ಜೀವಕರ್ತೃತ್ವಪಕ್ಷೇ ಹಿತಾಕರಣಮಹಿತಕರಣಂ ಚ ನ ಸ್ಯಾತ್'' ಜೀವಕರ್ತೃತ್ವಪಕ್ಷದಲ್ಲಿ ಹಿತವನ್ನು ಸಂಪಾದನೆ ಮಾಡದಿರುವುದು, ಅಹಿತವನ್ನು ಬೇಡವೆಂದರೂ ಒಪ್ಪಿಕೊಳ್ಳುವುದು ಇಲ್ಲದಿರಬೇಕಾದೀತು ಎಂಬುದಾಗಿ ಹೇಳಿರುತ್ತಾರೆ. ಈ ವಾಕ್ಯವನ್ನು ಗಮನಿಸಿದಾಗ ಜೀವನಲ್ಲಿ ಯಾವುದೇ ಕರ್ತೃತ್ವವು ಇರುವುದಿಲ್ಲವೆಂಬ ಪ್ರತೀತಿಯು ಬರುತ್ತಿದೆ. ಆದರೆ ಟೀಕೆಯಲ್ಲಿ ಜೀವನಲ್ಲಿ ಕರ್ತೃತ್ವವಿದೆ. ಆದರೆ ಸ್ವತಂತ್ರಕರ್ತೃತ್ವವಿರುವುದಿಲ್ಲವೆಂದು ವ್ಯಾಖ್ಯಾನ ಮಾಡಿದ್ದಾರೆ. ಟೀಕೆಯ ಈ ವ್ಯಾಖ್ಯಾನಕ್ಕೆ ಏನು ಆಧಾರ? ಎಂಬ ಪ್ರಶ್ನೆಗೆ ಮತ್ತು ಜೀವನಲ್ಲಿ ಕರ್ತೃತ್ವಮಾತ್ರವನ್ನು ಒಪ್ಪಿರುವುದರಿಂದ ಅನ್ಯಾಧೀನವಾದ ಕರ್ತೃತ್ವವು ಜೀವನಲ್ಲಿ ಇರುವುದಾದರೆ ಹಿತಾಕರಣಾದಿದೋಷಗಳು ಬರುವುದಿಲ್ಲ ಎಂದು ಸಮರ್ಥಿಸಲು 'ಅಯಂ ಭಾವ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः – इष्टमिति ।।** ''कर्ता शास्त्रार्थवत्त्वात्'' इत्यादौ साधयिष्यमाणत्वादिति भावः । महदादिसर्वकर्तृत्वरूपाद्यपक्षस्य सुधाभिप्रायोक्तिव्याजेन दूषितत्वाद्वितीय एव दूष्य इति भावेनोक्तं घटादिष्विति ।।

'ಕರ್ತಾ ಶಾಸ್ತ್ರಾರ್ಥವತ್ವಾತ್' ಎಂಬ ಸೂತ್ರದಲ್ಲಿ ಅಸ್ವತಂತ್ರಕರ್ತೃತ್ವವನ್ನು ಜೀವನಲ್ಲಿಯೂ ಕೂಡ ನಾವು ಸಮರ್ಥನೆ ಮಾಡುವವರಿದ್ದೇವೆ. ಮಹದಾದಿ ಸಕಲಪದಾರ್ಥಗಳ ಕರ್ತೃತ್ವವು ಜೀವನಲ್ಲಿ ಒಪ್ಪಬೇಕೆಂಬ ಮೊದಲನೆಯ ಪೂರ್ವಪಕ್ಷವನ್ನು ನ್ಯಾಯಸುಧೆಯ ಅಭಿಪ್ರಾಯವನ್ನು ಹೇಳುವ ಮೂಲಕವೇ ಈಗ ಘಟನೆ ಮಾಡಿದ್ದಾಗಿದೆ. ಎರಡನೆಯ ಪೂರ್ವಪಕ್ಷವನ್ನೇ ಈಗ ನಿರಾಕರಣೆ ಮಾಡಬೇಕು. ಆದ್ದರಿಂದ 'ಘಟಾದಿಷು' ಇತ್ಯಾದಿಯಾಗಿ ಹೇಳಿರುತ್ತಾರೆ.

**प्रकाशः – स्यादिति ।।** दोष इति शेषः । हिताकरणादिकं दोषः प्रसज्येतेत्यर्थः। अयुक्तमापद्येतेति यावत् । हिताकरणादिकं न स्यादिति भावः । आदिपदेनाहितकरणम्।

'ದೋಷಃ' ಎಂಬುದನ್ನು 'ಸ್ಯಾತ್' ಎಂಬಲ್ಲಿ ಇಟ್ಟುಕೊಳ್ಳಬೇಕು. ಹಿತಾಕರಣಾದಿದೋಷಗಳು ಬರಬೇಕಾದೀತು ಎಂದರ್ಥ. ಹಿತಾಕರಣಾದಿಗಳು ಜೀವನ ಅನುಭವದಲ್ಲಿದೆ. ಇದು ಇಲ್ಲದಿರಬೇಕಾದೀತು. ಆದಿಪದದಿಂದ ಅಹಿತಕರಣವನ್ನು ವಿವಕ್ಷಿಸಬೇಕು.

**प्रकाशः** – तदेव विपर्यये पर्यवसानेनोपपादयति – **कथमिति** ।। स्वहितं करोत्येव स्वाहितं च न करोत्येव जीव इति वदन्तं प्रति ''यदि नाम न तस्य वशे सकलं कथमेव तु नित्यसुखं नभवेत'' इत्यन्यत्रोक्तं हृदि कृत्वाऽनिष्टमाह – **तथाचेति** ।।

ಇದನ್ನೇ ವಿಪರ್ಯಪರ್ಯವಸಾನ ಮಾಡಿ ಉಪಪಾದನೆ ಮಾಡುತ್ತಿದ್ದಾರೆ 'ಕಥಮ್' ಇತ್ಯಾದಿಯಾಗಿ. ಯಾವ ಪೂರ್ವಪಕ್ಷಿಯು ತನಗೆ ಹಿತವಾದದ್ದನ್ನಷ್ಟೇ ಸಂಪಾದನೆ ಮಾಡುತ್ತಾನೆ. ಅಹಿತವಾದದ್ದನ್ನು ಸಂಪಾದನೆ ಮಾಡುವುದಿಲ್ಲ ಎಂದು ಹೇಳುತ್ತಾನೋ, ಅಂಥ ಪೂರ್ವಪಕ್ಷಿಗೆ ದೋಷವನ್ನು ದ್ವಾದಶಸ್ತೋತ್ರದಲ್ಲಿ ಹೀಗೆ ಹೇಳಿದ್ದಾರೆ -

'ಯದಿ ನಾಮ ನ ತಸ್ಯ ವಶೇ ಸಕಲಂ ಕಥಮೇವ ತು ನಿತ್ಯಸುಖಂ ನಭವೇತ್'

ಒಂದು ವೇಳೆ ಜೀವನು ಸ್ವತಂತ್ರಕರ್ತೃವಾದರೆ ನಿತ್ಯಸುಖವನ್ನು ಏಕೆ ಹೊಂದುತ್ತಿಲ್ಲ.

ಇದನ್ನೇ ಮನಸ್ಸಿನಲ್ಲಿಟ್ಟುಕೊಂಡು ಗ್ರಂಥಕಾರರು 'ತಥಾಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**प्रकाशः** – स्वहितकरणस्वाहिताकरणयोर्भावे सतीत्यर्थः । नन्वेवमन्याधीन-कर्तृत्वेपि जीवस्य कर्माद्यधीनं तदस्तु किमीश्वराधीनत्वोपगमेनेत्यतः ''नच कर्मविमामलकालगुणप्रभृतीशमचित्तनु तद्धियतः'' । इत्येतद्धृदिकृत्वाह – **कर्मेति** ।।

ಸ್ವಹಿತಕರಣ, ಸ್ವಾಹಿತಕರಣ ಇವೆರಡು ಜೀವನಲ್ಲಿರುವುದರಿಂದ ಎಂಬುದಾಗಿ 'ತಥಾಚ' ಎಂಬ ಪದದ ಅರ್ಥ.

ಜೀವನಲ್ಲಿ ಅನ್ಯಾಧೀನ ಕರ್ತೃತ್ವ ಇರುವುದಾದರೆ ಕರ್ಮಾದ್ಯಧೀನ್ಯವನ್ನು ಹೇಳಬಹುದು, ಈಶ್ವರನ ಆಧೀನ್ಯವನ್ನು ಏಕೆ ಹೇಳಬೇಕು ? ಎಂಬ ಪ್ರಶ್ನೆಗೆ ದ್ವಾದಶಸ್ತೋತ್ರದ ಮಾತಿನಿಂದಲೇ ಉತ್ತರ ದೊರೆಯುತ್ತದೆ-

''ನಚ ಕರ್ಮವಿಮಾಮಲಕಾಲಗುಣಪ್ರಭೃತೀಶಮಚಿತ್ತನು ತದ್ಧಿ ಯತಃ''

ಕರ್ಮ, ಅಜ್ಞಾನ, ದೋಷ, ಕಾಲ, ಗುಣ ಮೊದಲಾದವು ನಿಯಾಮಕವಾಗುವುದಿಲ್ಲ. ಏಕೆಂದರೆ ಇವೆಲ್ಲವೂ ಜಡಪದಾರ್ಥಗಳಾಗಿವೆ.

ಇದನ್ನೇ ಗ್ರಂಥಕಾರರು ಮನಸ್ಸಿನಲ್ಲಿಟ್ಟುಕೊಂಡು ಕರ್ಮ ಇತ್ಯಾದಿಯಾಗಿ ಹೇಳಿರುತಾತ್ರೆ.

**प्रकाशः – तद्व्यनक्ति ।। नैवेति ।।** एतेन ''तस्याप्यस्वातन्त्र्यात्'' इति टीका विवृता । ''अश्मादिवच्च तदनुपपत्तिः'' इति सूत्रभाष्यटीकातात्पर्यमाह **– जीवस्तत इति ।।** अहितकर्तृत्वादेरित्यर्थः ।

ಹಿಂದೆ ಹೇಳಿದ್ದನ್ನು 'ನೈವ' ಇತ್ಯಾದಿ ವಾಕ್ಯದಿಂದ ವಿವರಣೆ ಮಾಡುತ್ತಿದ್ದಾರೆ. ಇದರಿಂದ 'ತಸ್ಯಾಪ್ಯಸ್ವಾತಂತ್ರ್ಯಾತ್' ಎಂಬ ಟೀಕೆಯನ್ನು ವಿವರಿಸಿದಂತಾಯಿತು. 'ಅಶ್ಮಾದಿವಚ್ಚ ತದನುಪಪತ್ತಿಃ' ಎಂಬ ಸೂತ್ರದ ಭಾಷ್ಯ ಹಾಗೂ ಟೀಕೆಗಳ ತಾತ್ಪರ್ಯವನ್ನು 'ಜೀವಸ್ತತಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಅಹಿತಕರ್ತೃತ್ವ' ಇರುವುದರಿಂದ ಎಂದು ಇದರರ್ಥ.

**प्रकाशः –** ''अस्वातन्त्र्यस्य हिताक्रियादिनैव सिद्धेः'' इति टीकायां हिताकरणादेरस्वातन्त्र्ये हेतुत्वोक्तेरिति भावः । चेष्टितः चेष्टनः । भावे निष्ठा । अप्यर्थकसौत्रचशब्दार्थमाह **– चेतनोपीति ।।**

ಜೀವನ ಅಸ್ವಾತಂತ್ರ್ಯವು ಹಿತಾಕರಣದಿಂದಲೇ ಸಿದ್ಧವಾಗಿದೆ ಎಂಬುದಾಗಿ ಟೀಕೆಯಲ್ಲಿ 'ಅಸ್ವಾತಂತ್ರ್ಯಸ್ಯ ಹಿತಾಕ್ರಿಯಾದಿನೈವ ಸಿದ್ಧೇಃ' ಎಂದು ಹೇಳಿರುತ್ತಾರೆ. ಇದರ ಹಿತಾಕರಣಕ್ಕೆ ಅಸ್ವಾತಂತ್ರ್ಯವು ಹೇತುವೆಂದು ಹೇಳಿದಂತಾಯಿತು. ಚೇಷ್ಟಿತಃ' ಎಂಬ ಪದಕ್ಕೆ 'ಚೇಷ್ಟನಃ' ಎಂದು ಅರ್ಥ. ಭಾವಾರ್ಥದಲ್ಲಿ 'ನಿಷ್ಠಾ' ಪ್ರತ್ಯಯವು ಬಂದಿದೆ. 'ಅಪಿ' ಎಂಬ ಅರ್ಥದಲ್ಲಿರುವ ಸೂತ್ರದ 'ಚ'ಶಬ್ದದ ಅರ್ಥವನ್ನು 'ಚೇತನೋಪಿ' ಎಂಬ ಪದದಿಂದಲೇ ಹೇಳಿರುತ್ತಾರೆ.

**प्रकाशः –** एतेन जीवोन्यनिरपेक्षतया कर्ता चेतनत्वादीश्वरवदित्यनुमानम-प्रयोजकमित्युक्तं भवति ।

ಹೀಗೆ ವ್ಯಾಖ್ಯಾನ ಮಾಡಿದ್ದರಿಂದ ಜೀವನು ಅನ್ಯನಿರಪೇಕ್ಷಿತವಾಗಿ ಕರ್ತೃವಾಗಿದ್ದಾನೆ ಎಂದು ಸಾಧಿಸುವ ಅನುಮಾನಕ್ಕೆ ಅಪ್ರಯೋಜಕಾಶಂಕೆಯನ್ನು ಹೇಳಿದಂತಾಯಿತು. 'ಜೀವಃ ಅನ್ಯನಿರಪೇಕ್ಷಿತಯಾ ಕರ್ತಾ ಚೇತನತ್ವಾತ್ ಈಶ್ವರವತ್' ಎಂಬ ಅನುಮಾನದಲ್ಲಿ ಚೇತನತ್ವವಿದ್ದರೂ ಅನ್ಯನಿರಪೇಕ್ಷಿತಕರ್ತೃತ್ವವಿರುವುದು ಬೇಡ ಎಂದು ಆಶಂಕಿಸಿದರೆ ಅನುಕೂಲತರ್ಕವಿರುವುದಿಲ್ಲ.

**प्रकाशः –** जीवस्य स्वतन्त्रकर्तृताज्ञानस्य भ्रमत्वव्युत्पादनाय ''आनुभाविकत्वाच्च सर्वस्य'' इति तत्वप्रदीपोक्तं बलवद्विपरीतं प्रत्यक्षमाह **– प्रत्यक्षं चेति ।।**

ಜೀವನು ಸ್ವತಂತ್ರಕರ್ತೃವಾಗಿದ್ದಾನೆ ಎಂಬುದು ಭ್ರಮವೆಂದು ಉಪಪಾದನೆ ಮಾಡಲು 'ಆನುಭಾವಿಕತ್ವಾಚ್ಚ ಸರ್ವಸ್ಯ' ಎಂಬ ತತ್ವಪ್ರದೀಪದಲ್ಲಿರುವ ಬಲಿಷ್ಠವಾದ ವಿಪರೀತಪ್ರತ್ಯಕ್ಷವನ್ನು ಸಮರ್ಥಿಸಲು 'ಪ್ರತ್ಯಕ್ಷಂ ಚ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः –** ''न जीवस्य स्वतः कर्तृत्वाभावो वक्तव्यः । अनुभवविरोधात् । सहि यत्कर्तुमारभते तदवसाययतीत्यनुभूयत'' इति टीकोक्तशङ्कां हृदि कृत्वा ''उपसंहारदर्शनान्नेति चेत्क्षीरवद्धि'' इति सूत्रपरिहारभाष्यटीकातात्पर्यमाह **– यत्रेति।।**

'ನ ಜೀವಸ್ಯ ಸ್ವತಃ ಕರ್ತೃತ್ವಾಭಾವೋ ವಕ್ತವ್ಯಃ । ಅನುಭವವಿರೋಧಾತ್ । ಸಹಿ ಯತ್ಕರ್ತುಮಾರಭತೇ ತದವಸಾಯಯತೀತ್ಯನುಭೂಯತೇ' 'ಜೀವನಿಗೆ ಸ್ವಾಭಾವಿಕವಾಗಿ ಕರ್ತೃತ್ವವೇ ಇರುವುದಿಲ್ಲವೆಂದು ಹೇಳಬಾರದು. ಹಾಗಾದಲ್ಲಿ ಅನುಭವವಿರೋಧ ಬರುತ್ತದೆ. ಯಾವುದನ್ನು ಮಾಡಲು ಹೊರಡುತ್ತಾನೋ, ಆ ಕೆಲಸವನ್ನು ಮಾಡಿ ಮುಗಿಸುತ್ತಾನೆಂಬ ಅನುಭವವು ಜೀವನಿಗಿದೆ'. ಹೀಗೆ ಟೀಕೆಯಲ್ಲಿ ಮಾಡಿದ ಆಶಂಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು, ಉಪಸಂಹಾರದರ್ಶನಾನ್ನೇತಿ ಚೇತ್ ಕ್ಷೀರವದ್ಧಿ' ಎಂಬ ಸೂತ್ರದ ಪರಿಹಾರದ ಭಾಷ್ಯ ಹಾಗೂ ಟೀಕೆಗಳ ತಾತ್ಪರ್ಯವನ್ನು 'ಯತ್ರ' ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡುತ್ತಿದ್ದಾರೆ.

**प्रकाशः – काकेति ।।** ''समासाच्च तद्विषयात्'' इतीवार्थे छप्रत्ययः । काकागमनमिव तालपतनमिव काकतालीयम् । दैवाज्जायमानामित्यर्थः ।

ಗ್ರಂಥದಲ್ಲಿ 'ಕಾಕತಾಳೀಯಂ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. 'ಸಮಾಸಾಚ್ಚ ತದ್ವಿಷಯಾತ್' ಎಂಬ ಸೂತ್ರದಿಂದ ಇವಾರ್ಥದಲ್ಲಿ ಛಪ್ರತ್ಯಯವು ಬಂದು ಕಾಕತಾಳೀಯ ಎಂಬ ಶಬ್ದವು ನಿಷ್ಪನ್ನವಾಗಿದೆ. 'ಕಾಕಾಗಮನಮಿವ ತಾಲಪತನಮಿವ ಕಾಕತಾಲೀಯಮ್' ಎಂದು ಸಮಾಸವನ್ನು ತಿಳಿಯಬೇಕು. ಅದೃಷ್ಟವಶಾತ್ ಉಂಟಾಗುವ ಘಟನೆಗೆ 'ಕಾಕತಾಳೀಯ' ಎಂದು ಕರೆಯುತ್ತಾರೆ.[೧]

(೧) ಕಾಕತಾಳೀಯ ಶಬ್ದದ ಬಗ್ಗೆ ಪರಿಮಳದಲ್ಲಿ ಹೇಳಿದ್ದನ್ನು ಯಾದುಪತ್ಯದಲ್ಲಿ ಖಂಡನೆ ಮಾಡಿರುತ್ತಾರೆಂದು ಆಪಾತತಃ ತೋರುತ್ತದೆ. ಆದರೆ ಪ್ರಕೃತ 'ಕಾಕಾಗಮನಮಿವ ತಾಲಪತನಮಿವ ಕಾಕತಾಲೀಯಮ್' ಎಂಬ ಪ್ರಕಾಶದ ಮಾತನ್ನು ಗಮನಿಸಿದಾಗ ಪರಿಮಳಾಚಾರ್ಯರ ಅಭಿಪ್ರಾಯವನ್ನೇ ಯಾದುಪತ್ಯದಲ್ಲಿ ಸ್ಪಷ್ಟಪಡಿಸುತ್ತಾರೆಂದು ತಿಳಿಯುತ್ತದೆ. ಖಂಡನಕಾರನ ವ್ಯಾಖ್ಯಾನಕಾರರು ಕಾಕತಾಳೀಯ ಶಬ್ದಕ್ಕೆ ಯಾವ ನಿಷ್ಪತ್ತಿಯನ್ನು ಮಾಡಿದ್ದಾರೋ, ಅದನ್ನು ಪರಿಮಳದಲ್ಲಿ ಅನುವಾದ ಮಾಡಿದ್ದಾರೆಂದಷ್ಟೇ ತಿಳಿಯಬೇಕು. ಅದನ್ನು ಯಾದುಪತ್ಯದಲ್ಲಿ ಖಂಡನ ಮಾಡಿ, 'ಕಾಕಾಗಮನಮಿವ ತಾಲಪತನಮಿವ ಕಾಕತಾಲೀಯಮ್' ಎಂಬ ನಿಷ್ಪತ್ತಿಯನ್ನೇ ವಿವಕ್ಷಿಸಬೇಕೆಂದು ಯಾಗಪತ್ಯದಲ್ಲಿ ಸಮರ್ಥಿಸಿದ್ದಾರೆ.

**प्रकाशः –**

प्रेरकः सर्वजीवानां प्राणधीचोदिताच सः ।
विष्णुस्संसारिणोन्यो यस्तमविज्ञाय मूढधीः ।
देहेन्द्रियप्राणबुद्धिनेतृत्वं मन्यते त्मनः ।।

इति तत्वनिर्णयटीकोक्तमाह – **देहादियन्तुरिति** ।।

ಪ್ರೇರಕಃ ಸರ್ವಜೀವಾನಾಂ ಪ್ರಾಣಧೀಚೋದಿತಾಚ ಸಃ।
ವಿಷ್ಣುಃ ಸಂಸಾರಿಣೋನ್ಯೋ ಯಸ್ತಮವಿಜ್ಞಾಯ ಮೂಢಧೀಃ।
ದೇಹೇಂದ್ರಿಯಪ್ರಾಣಬುದ್ಧಿನೇತೃತ್ವಂ ಮನ್ಯತೇ ತ್ಮನಃ॥

ಸಕಲ ಜೀವರಿಗೂ ಪ್ರೇರಕನಾಗಿದ್ದಾನೆ. ಪ್ರಾಣ, ಮನಸ್ಸು ಇವುಗಳಿಗೂ ಕೂಡ ಪ್ರೇರಕನಾಗಿದ್ದಾನೆ. ಇಂಥ ವಿಷ್ಣುವು ಸಂಸಾರಿಗಳಾದ ಜೀವರಿಗಿಂತ ಅತ್ಯಂತ ಭಿನ್ನನಾಗಿದ್ದಾನೆಂದು ಯಾರು ತಿಳಿಯುವುದಿಲ್ಲವೋ, ಮತ್ತು ದೇಹ, ಇಂದ್ರಿಯ, ಪ್ರಾಣ, ಬುದ್ಧಿ ಇವುಗಳಿಗೆಲ್ಲಾ ತಾನೇ ನಿಯಾಮಕನೆಂದು ತಿಳಿಯುತ್ತಾನೋ, ಅವನು ಮೂಢನು ಎಂಬುದಾಗಿ ತತ್ವನಿರ್ಣಯದ ಟೀಕೆಯಲ್ಲಿ ಹೇಳಿರುತ್ತಾರೆ ಅದನ್ನು 'ದೇಹಾದಿಯಂತುಃ' ಎಂಬ ಶ್ಲೋಕದಿಂದ ಸಂಗ್ರಹಿಸಿದ್ದಾರೆ.

**प्रकाशः – अगृहीत्वेति** ।। स्पष्टमिति शेषः ।

दधिस्थधृतवत्काष्ठवह्निवच्च जनार्दनः ।
देहेन्द्रियादिजीवेभ्यो विविच्य ज्ञायते नतु ।।

---

'ಸಮಾಸಾಚ್ಚ ತದ್ವಿಷಯಾತ್' ಎರಡು ಸಮಸ್ತಪದವಿದ್ದಾಗ, ಸಾದೃಶ್ಯವು ಗಮ್ಯಮಾನವಾದರೆ ಮೂರನೆಯ ವಿಷಯದಲ್ಲಿ ಛ ಪ್ರತ್ಯಯವು ಬರುತ್ತದೆ ಎಂದು ಸೂತ್ರವು ನಿರೂಪಣೆ ಮಾಡುತ್ತದೆ. ಕಾಕ ಎಂಬ ಶಬ್ದವು ಕಾಕದ ಆಗಮನವನ್ನು ಹೇಳುತ್ತದೆ. ತಾಳ ಎಂಬ ಶಬ್ದವು ತಾಳಪತವನ್ನು ಹೇಳುತ್ತದೆ. ಕಾಕಾಗಮನ, ಕಾಲಪತನ ಎರಡೂ ಕೂಡ ಸಮಸ್ತ ಪದಗಳಾಗಿವೆ. 'ಕಾಕಾಗಮನಮಿವ ಕಾಲಪತನಮಿವ ತೇನ ಕಾಕಸ್ಥಮರಣಮಿವ' ಎಂದು ಮೂರನ್ನು ವಿವಕ್ಷಿಸಬೇಕು. ಸಮಸ್ತ ಪದವು ಇವಾರ್ಥವಾದ ಸಾದೃಶ್ಯವನ್ನು ಹೇಳುವಾಗ ಛಪ್ರತ್ಯಯವು ಬರುತ್ತದೆ. ಆದ್ದರಿಂದ ಕಾಕತಾಳೀಯ ಎಂಬ ಶಬ್ದವು ಸಾಧುವಾಗಿದೆ. ಇದರಂತೆ ಅಜಾತಪಾಣೀಯ ಮೊದಲಾದ ಪ್ರಯೋಗಗಳನ್ನೂ ಕೂಡ ತಿಳಿಯಬೇಕು.

ಕಾಕವು ಬಂದಿತು ಅದೇ ಕ್ಷಣದಲ್ಲಿ ತಾಳೇಮರದ ಹಣ್ಣು ಕಾಗೆಯ ತಲೆಯ ಮೇಲೆ ಬಿದ್ದಿತು. ಅದರಿಂದ ಕಾಗೆಯು ಮರಣವನ್ನು ಹೊಂದಿತು. ಈ ಘಟನೆಯಲ್ಲಿ ಕಾಕಾಗಮನಕ್ಕೂ, ತಾಳಪತನಕ್ಕೂ ಪರಸ್ಪರ ಕಾರ್ಯಕಾರಣಭಾವವಿರುವುದಿಲ್ಲ. ಆದರೂ ಕೂಡ ಮರಣವೆಂಬ ಕಾರ್ಯವು ನಡೆದಿದೆ. ಇದರಂತೆ ಅಜಾತಪಾಣೀಯ ಪ್ರಯೋಗವನ್ನು ತಿಳಿಯಬೇಕು. ಕಳ್ಳರು ಬಂದಾಗ ಆಡು ತೆರಳುತ್ತದೆ. ಮೇಲಿನಿಂದ ಕತ್ತಿಯು ಕಳ್ಳರ ಮೇಲೆ ಬೀಳುತ್ತದೆ, ಕಳ್ಳರು ಸಾಯುತ್ತಾರೆ. ಇದನ್ನು 'ಅಜಾತಪಾಣೀಯ' ಎನ್ನುತ್ತಾರೆ.

इति सप्तमस्कन्धतात्पर्योक्तेः । स्वतः स्वस्मात् । एतेन ''तस्याप्यस्वातन्त्र्यात्'' इति टीका विवृता । स्वतन्त्रकर्तृतामतेः का गतिरित्यत आह – **जीवबिम्बेति** ।।

ಅಗೃಹೀತ್ವಾ ಎಂಬಲ್ಲಿ ಸ್ಪಷ್ಟಮ್ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು

ದಧಿಸ್ಥಘೃತವತ್ಕಾಷ್ಠವಹ್ನಿವಚ್ಚ ಜನಾರ್ದನಃ।
ದೇಹೇಂದ್ರಿಯಾದಿಜೀವೇಭ್ಯೋ ವಿವಿಚ್ಯ ಜ್ಞಾಯತೇ ನತು॥

ಮೊಸರಿನಲ್ಲಿರುವ ತುಪ್ಪದಂತೆ, ಕಟ್ಟಿಗೆಯಲ್ಲಿರುವ ಬೆಂಕಿಯಂತೆ, ದೇಹೇಂದ್ರಿಯಗಳಲ್ಲಿರುವ ಪರಮಾತ್ಮನನ್ನು ಭಿನ್ನವಾಗಿ ಜೀವರು ತಿಳಿಯಲು ಸಮರ್ಥರಾಗುವುದಿಲ್ಲ ಎಂಬುದಾಗಿ ಭಾಗವತದ ಸಪ್ತಮಸ್ಕಂಧದ ತಾತ್ಪರ್ಯದಲ್ಲಿ ಹೇಳಿದ್ದಾರೆ. 'ಸ್ವತಃ' ಎಂಬ ಪದಕ್ಕೆ ತನ್ನ ದೆಸೆಯಿಂದ ಎಂದರ್ಥ. ಇದರಿಂದ 'ತಸ್ಯಾಪ್ಯಸ್ವಾತಂತ್ರ್ಯಾತ್' ಎಂಬ ಟೀಕೆಯನ್ನು ವಿವರಿಸಿದಂತಾಯಿತು. ಯಾರು ತನ್ನನ್ನು ಸ್ವತಂತ್ರಕರ್ತೃವೆಂದು ತಿಳಿದಿದ್ದಾರೋ, ಅಂಥ ಜ್ಞಾನಕ್ಕೆ ಏನು ಗತಿ? ಎಂಬ ಪ್ರಶ್ನೆಗೆ 'ಜೀವಬಿಂಬ' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

**प्रकाशः** – तत्र दृष्टान्तश्चार्वाकस्येति । एतेन न केवलं प्रागुक्तहिताक्रियाद्यन्यथानुपपत्त्यस्वातन्त्र्य प्रत्यक्षाभ्याम् । किन्तु ''आभास एव च'' इति वक्ष्यमाणदिशा प्रतिबिम्बस्य जीवस्य बिम्बाधीनत्वाच्च स्वातन्त्र्यमतिर्विभ्रम इति सूचितम् ।

ಮೇಲೆ ಹೇಳಿದ ವಿಷಯದಲ್ಲಿ 'ಚಾರ್ವಾಕಸ್ಯ' ಎಂಬುದಾಗಿ ದೃಷ್ಟಾಂತವನ್ನು ನೀಡಿದ್ದಾರೆ. ಹೀಗೆ ಹೇಳಿದ್ದರಿಂದ ಕೇವಲ ಹಿಂದೆ ಹೇಳಿದಂತೆ ಹಿತಾಕ್ರಿಯಾದ್ಯನ್ಯಥಾನುಪಪತ್ತಿಯಿಂದ ಮತ್ತು ಅಸ್ವಾತಂತ್ರ್ಯದ ಪ್ರತ್ಯಕ್ಷದಿಂದಷ್ಟೇ ಸ್ವಾತಂತ್ರ್ಯಜ್ಞಾನವು ಭ್ರಮರೂಪವಾಗಿದೆ ಎಂದಲ್ಲ. ಹೊರತಾಗಿ, 'ಆಭಾಸ ಏವ ಚ' ಎಂದು ಮುಂದೆ ಹೇಳುವ ಸೂತ್ರದ ಆಧಾರದಿಂದಲೂ ಪ್ರತಿಬಿಂಬನಾದ ಜೀವನು ಬಿಂಬರೂಪಿಯಾದ ಭಗವಂತನ ಅಧೀನನಾಗಿದ್ದಾನೆಂಬುದು ಸಿದ್ಧವಾಗುವ ಕಾರಣ ಜೀವನಿಗೆ ಬರುವ ಸ್ವಾತಂತ್ರ್ಯಜ್ಞಾನವು ಭ್ರಮರೂಪವಾಗಿದೆಯೆಂದು ಸೂಚನೆ ಮಾಡಿದಂತಾಯಿತು.

**प्रकाशः** – ननु हरिरेव नास्त्यनुपलम्भादित्युक्तमित्यतः ''देवादिवदपि लोक'' इति सूत्रभाष्यटीकातात्पर्यमाह – **आविर्भावेति** ।।

'ಹರಿಃ ನಾಸ್ತಿ ಅನುಪಲಂಭಾತ್' ಎಂಬ ಅನುಮಾನದಿಂದ ಎಲ್ಲಿಯೂ ಉಪಲಬ್ಧನಾಗದ ಕಾರಣ ಶ್ರೀಹರಿಯೇ ಇರುವುದಿಲ್ಲ ಅಲ್ಲವೇ? ಎಂಬ ಪ್ರಶ್ನೆಗೆ 'ದೇವಾದಿವದಪಿ ಲೋಕೇ' ಎಂಬ ಸೂತ್ರದ ಭಾಷ್ಯ ಹಾಗೂ ಟೀಕೆಗಳ ತಾತ್ಪರ್ಯವನ್ನು 'ಆವಿರ್ಭಾವ' ಇತ್ಯಾದಿಯಾಗಿ ನಿರೂಪಣೆ ಮಾಡಿದ್ದಾರೆ.

**प्रकाशः** – एतेनाव्यक्तैकस्वभावस्यापि ''अतोऽनन्तेन तथाहि लिङ्गम्'' इत्यत्र वक्ष्यमाणदिशा स्वशक्तयाविर्भावसम्भवेन ''अयोग्यश्चेत्कदापि प्रत्यक्षो नस्यात्'' इति प्रागुक्तं प्रत्युक्तम् ।

ಹೀಗೆ ಹೇಳಿದ್ದರಿಂದ ಕೇವಲ ಅವ್ಯಕ್ತಸ್ವಭಾವನಾಗಿದ್ದರೂ 'ಅತೋಽನಂತೇನ ತಥಾಹಿ ಲಿಂಗಮ್' ಎಂಬುದಾಗಿ ಮುಂದೆ ಹೇಳುವಂತೆ ತನ್ನ ಶಕ್ತಿಯ ಆವಿರ್ಭಾವದಿಂದ 'ಅಯೋಗ್ಯಶ್ಚೇತ್ಕದಾಪಿ ಪ್ರತ್ಯಕ್ಷೋ ನಸ್ಯಾತ್' ಶ್ರೀಹರಿಯು ಅಯೋಗ್ಯನಾದರೆ ಯಾವಾಗಲೂ ಕಾಣಸಬಾರದು ಎಂಬ ಹಿಂದಿನ ಮಾತನ್ನು ನಿರಾಕರಣೆ ಮಾಡಿದಂತಾಯಿತು. ಪರಮಾತ್ಮನು ಅವ್ಯಕ್ತಸ್ವರೂಪನಾಗಿದ್ದರೂ ತನ್ನ ಶಕ್ತಿಯಿಂದ ಆವಿರ್ಭೂತನಾಗುತ್ತಾನೆಂದು ತಿಳಿಯಬೇಕು.

**प्रकाशः – एवञ्च प्रागुक्तं गौरवमुद्धरति – गौरवमिति ।।** ''किंत्वश्रौत-जीवकर्तृत्वाङ्गीकार एव तद्भवति'' इति टीकां व्यनक्ति – **प्रत्युतेति ।।**

ಇದರಿಂದ ಹಿಂದೆ ಹೇಳಿದ ಗೌರವದೋಷವನ್ನು ಪರಿಹರಿಸಿದಂತಾಯಿತು. 'ಕಿಂತ್ವಶ್ರೌತ-ಜೀವಕರ್ತೃತ್ವಾಂಗೀಕಾರ ಏವ ತದ್ಭವತಿ' ಎಂಬ ಟೀಕೆಯನ್ನು 'ಪ್ರತ್ಯುತ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ.

**प्रकाशः – यत्त्वनुव्याख्यान** इति ।। ''तस्य त्वशेषशक्तित्वाद्युज्यते सर्वमेव च'' इत्यनुव्याख्यान इत्यर्थः । सुधायामस्फुटत्वात्तत्तात्पर्यमाह – **कृत्स्नेति ।।**

'ಯತ್ತು ಅನುವ್ಯಾಖ್ಯಾನೇ' 'ತಸ್ಯ ತ್ವಶೇಷಶಕ್ತಿತ್ವಾದ್ಯುಜ್ಯತೇ ಸರ್ವಮೇವ ಚ' ಶ್ರೀಹರಿಯಲ್ಲಿ ಅಶೇಷ ಶಕ್ತಿಯಿರುವುದರಿಂದ ಯಾವುದೇ ವಿರೋಧ ಇರುವುದಿಲ್ಲ ಎಂಬ ಅನುವಾಖ್ಯಾನವು ಶ್ರೀಹರಿಯಲ್ಲಿ ವಿರೋಧವನ್ನು ಪರಿಹರಿಸಿದೆ. ನ್ಯಾಯಸುಧೆಯಲ್ಲಿ ಈ ವಿಷಯವು ಸ್ಪಷ್ಟವಾಗಿಲ್ಲದ ಕಾರಣ ಅದರ ತಾತ್ಪರ್ಯವನ್ನು 'ಕೃತ್ಸ್ನ' ಇತ್ಯಾದಿಯಾಗಿ ಹೇಳಿದ್ದಾರೆ.

**प्रकाशः –** इति सुधायामिति ।। तत्तात्पर्यानुवादोयम् । उत्तराधिकरणसुधायां हि ''तस्य तु'' इत्यर्धं पूर्वाधिकरणानुव्याख्यानशेषतया पूर्वत्र योजितमप्युत्तराधिकरणार्थोक्ति-परतयाऽपि योजयित्वा ''ननु दुर्घटमपि जीवकर्तृत्वमीश्वरशक्त्या घटत इत्यतीताधिकरणेऽभिहितम् । तथा च कथमत्र पूर्वपक्षावकाशः । यो हि परत्र प्रमितं घटयितुमीष्टे स स्वस्मिन्नेष्ट इत्यसम्भावितम्। उच्यते । नैषोऽर्थस्सूत्रकृताऽतीताधिकरणेऽभिहितः'' इत्यादिना ग्रन्थेनैतत्प्रमेयमुक्तमित्यर्थः ।

'ಇತಿ ಸುಧಾಯಾಮ್' ಎಂದು ಹೇಳಿದ್ದು ಕೇವಲ ತಾತ್ಪರ್ಯದ ಅನುವಾದವಷ್ಟೇ ಹೊರತು, ವಾಕ್ಯಗಳ ಅನುವಾದವಲ್ಲ. ಮುಂದಿನ ಅಧಿಕರಣದ ಸುಧೆಯಲ್ಲಿ 'ತಸ್ಯ ತು' ಎಂಬ ಅನುವ್ಯಾಖ್ಯಾನದ ಪೂರ್ವಾರ್ಧವನ್ನು ಪೂರ್ವಾಧಿಕರಣದ ಅನುವ್ಯಾಖ್ಯಾನದ ಶೇಷವನ್ನಾಗಿ ಯೋಜನೆ ಮಾಡಿದ್ದರೂ ಕೂಡ ಮುಂದಿನ ಅಧಿಕರಣದ ಅರ್ಥವನ್ನು ಹೇಳುವುದಕ್ಕಾಗಿಯೂ ಕೂಡ ಯೋಜನೆ ಮಾಡಿರುತ್ತಾರೆ. 'ನನು

ದುರ್ಘಟಮಪಿ ಜೀವಕರ್ತೃತ್ವಮೀಶ್ವರಶಕ್ತ್ಯಾ ಘಟತೇ ಇತ್ಯತೀತಾಧಿಕರಣೇऽಭಿಹಿತಮ್ । ತಥಾ ಚ ಕಥಮತ್ರ ಪೂರ್ವಪಕ್ಷಾವಕಾಶಃ । ಯೋ ಹಿ ಪರತ್ರ ಪ್ರಮಿತಂ ಘಟಯಿತುಮೀಷ್ಟೇ ಸ ಸ್ವಸ್ಮಿನ್ನೇಷ್ಟ ಇತ್ಯಸಂಭಾವಿತಮ್ । ಉಚ್ಯತೇ । ನೈಷೋऽರ್ಥಃ ಸೂತ್ರಕೃತಾऽತೀತಾಧಿಕರಣೇऽಭಿಹಿತಃ' ಜೀವಕರ್ತೃತ್ವವು ಅತ್ಯಂತ ದುರ್ಘಟವಾದರೂ ಕೂಡ ಈಶ್ವರಶಕ್ತಿಯಿಂದ ಉಪಪನ್ನವಾಗುತ್ತದೆ ಎಂಬುದಾಗಿ ಹಿಂದಿನ ಅಧಿಕರಣದಲ್ಲಿ ಹೇಳಿದ್ದಾಯಿತು. ಹೀಗಿರುವಾಗ ಪೂರ್ವಪಕ್ಷಕ್ಕೆ ಹೇಗೆ ಅವಕಾಶ ? ಯಾರು ಬೇರೆ ಕಡೆ ಪ್ರಮಿತವಾದದ್ದನ್ನು ಘಟನೆ ಮಾಡಲು ಪ್ರಯತ್ನಿಸುತ್ತಾರೋ, ಅವರು ತನ್ನಲ್ಲಿಯೇ ಘಟನೆ ಮಾಡಲು ಸಮರ್ಥರಾಗುವುದಿಲ್ಲ ಎಂಬುದು ಅಸಂಭಾವಿತ. ಈ ಅರ್ಥವನ್ನು ಸೂತ್ರಕಾರರು ಹಿಂದಿನ ಅಧಿಕರಣದಲ್ಲಿ ಹೇಳಿರುವುದಿಲ್ಲ ಇತ್ಯಾದಿ ಗ್ರಂಥದಿಂದ ಈ ಪ್ರಮೇಯವು ಸ್ಪಷ್ಟವಾಗಿ ಹೇಳಲಾಗಿದೆ.

**प्रकाशः** – उत्सूत्रत्वभ्रमं वारयति ।। **सूत्राक्षराणीति** ।। यद्यादिपदानुपलम्भादाह – **अयं भाव इति** ।। **दोषेति** ।। हिताकरणादेर्दोषत्व-प्रसक्तिरित्यर्थः।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे इतरव्यपदेशाधिकरणम् सम्पूर्णम् ।।७।।**

ಇಲ್ಲಿಯ ತನಕ ಗ್ರಂಥಕಾರರು ಹೇಳಿದ ವಿಷಯವೆಲ್ಲವನ್ನೂ ಸೂತ್ರಾರೂಢ ಮಾಡುತ್ತಿದ್ದಾರೆ 'ಸೂತ್ರಾಕ್ಷರಾಣಿ' ಎಂಬುದಾಗಿ. 'ಯದಿ' ಇತ್ಯಾದಿ ಪದಗಳು ಕಾಣಿಸುತ್ತಿಲ್ಲವೆಂಬ ಪ್ರಶ್ನೆಗೆ 'ಅಯಂ ಭಾವಃ' ಎಂಬುದರಿಂದ ಉತ್ತರಿಸಿದ್ದಾರೆ. 'ದೋಷ' ಎಂದರೆ ಹಿತಾಕರಣಾದಿ ದೋಷಗಳು ಬರಬೇಕಾದೀತು ಎಂದರ್ಥ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಇತರವ್ಯಪದೇಶಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




ಕರ್ತೃತ್ವಮಾತ್ರಂ ಜೀವಸ್ಯ ಮಮಾಪೀಷ್ಟಂ ಘಟಾದಿಷು ।
ಅನ್ಯಾನಧೀನಕರ್ತೃತ್ವೇ ಸ್ಯಾದ್ಧಿತಾಕರಣಾದಿಕಮ್ ॥೧॥

ಜೀವನಲ್ಲಿ ಕರ್ತೃತ್ವಮಾತ್ರವು ಸಿದ್ಧಾಂತಿಯಾದ ನನಗೂ ಕೂಡ ಘಟಾದಿಗಳ ವಿಷಯದಲ್ಲಿ ಇಷ್ಟವೇ ಆಗಿದೆ. ಆದರೆ ಈಶ್ವರಾಧೀನವಾದ ಕರ್ತೃತ್ವವಿರುತ್ತದೆಂದು ಒಪ್ಪಲೇಬೇಕು. ಒಂದು ವೇಳೆ ಈಶ್ವರಾಧೀನವಾಗದ ಕರ್ತೃತ್ವವು ಜೀವನಲ್ಲಿ ಇರುವುದಾದರೆ ಹಿತ-ಅಕರಣಾದಿದೋಷವು ಬರುತ್ತದೆ.

ಕಥಂ ನ ಕುರ್ಯಾತ್‌ಪ್ರೇಕ್ಷಾವಾನ್ ಸ್ವತಂತ್ರಃ ಸ್ವಹಿತಂ ಸದಾ ।
ಕಥಂ ಚ ಸ್ವಾಹಿತಂ ಕುರ್ಯಾತ್ತಥಾ ಚ ಸಕಲೋ ಜನಃ ॥೨॥

ಜೀವನು ಸ್ವತಂತ್ರಕರ್ತೃವಾದರೆ ಪ್ರೇಕ್ಷಾವಂತನಾದ ಸ್ವತಂತ್ರನಾದ ಜೀವನು ತನಗೆ ಹಿತವಾದದ್ದನ್ನೆಲ್ಲಾ ಏಕೆ ಸಂಪಾದನೆ ಮಾಡುವುದಿಲ್ಲ ? ಅಥವಾ ತನಗೆ ಅಹಿತವಾದದ್ದನ್ನು ಯಾಕೆ ಬಿಡಲು ಸಮರ್ಥನಾಗುವುದಿಲ್ಲ ? ಪ್ರತಿಯೊಬ್ಬರೂ ಕೂಡ ಸುಖಪಡಬೇಕೆಂದರೂ ಆಗುತ್ತಿಲ್ಲ. ಕಷ್ಟಪಡಬಾರದೆಂದರೂ ತಪ್ಪಿಸಿಕೊಳ್ಳಲು ಆಗುತ್ತಿಲ್ಲ. ಇದು ಏಕೆ ?

ಪೂರ್ಣಾನಂದಶ್ಚ ನಿರ್ದುಃಖಃ ಸರ್ವದೈವ ಪ್ರಸಜ್ಯತೇ ।
ಕರ್ಮಕಾಲಾದಿಕಸ್ಯಾಪಿ ಜಡತ್ವಾನ್ನ ಸ್ವತಂತ್ರತಾ ॥೩॥

ಜೀವನು ಸ್ವತಂತ್ರಕರ್ತೃವಾದರೆ ಪರಿಪೂರ್ಣವಾದ ಆನಂದವನ್ನು ಪಡೆಯಬೇಕಾದೀತು. ದುಃಖದ ಲವಲೇಶವನ್ನೂ ಕೂಡ ಹೊಂದಬಾರದಿತ್ತು. ಎಲ್ಲಾ ಕಾಲದಲ್ಲಿಯೂ ಪೂರ್ಣಾನಂದನೂ ನಿರ್ದುಃಖನು ಆಗಬೇಕಾದೀತು. ಕರ್ಮ ಅಥವಾ ಕಾಲಾಧೀನವಾಗಿ ಅವನಿಗೆ ಇಂಥ ಪೂರ್ಣಾನಂದಾಭಿಮುಖನಾಗಿ ಅನುಭವಿಸಲು ಸಾಧ್ಯವಾಗುತ್ತಿಲ್ಲವೆಂದು ಉತ್ತರಿಸಬಾರದು. ಕರ್ಮ, ಕಾಲ ಇವುಗಳೆಲ್ಲವೂ ಕೂಡ ಜಡವಾದ್ದರಿಂದ ಸ್ವಾತಂತ್ರ್ಯ ಇವುಗಳಿಗೂ ಇರುವುದಿಲ್ಲ.

ನೈವ ಬಧ್ನಾತಿ ಪುರುಷಂ ಸ್ವಯಂ ಹಿ ನಿಗಡಾದಿಕಮ್ ।
ಜೀವಸ್ತತೋ ದಾರುಯೋಷಾವದನ್ಯಾಧೀನಚೇಷ್ಟಿತಃ॥೪॥

ಜಡಪದಾರ್ಥಗಳು ದುಃಖವನ್ನು ಪರಿಹಾರ ಮಾಡಲು ಸಮರ್ಥವಾಗುವುದಾದರೆ, ಜೈಲಿನಲ್ಲಿ ಹಾಕಿದ ನಿಗಡ ಬಂಧನವು ಪುರುಷನನ್ನು ಏಕೆ ವಿಮೋಚನೆ ಗೊಳಿಸುವುದಿಲ್ಲ. ಆದ್ದರಿಂದ ಜೀವನು ಕೇವಲ ಬೊಂಬೆಯಂತೆ ಹರಿ ಆಡಿಸಿದಂತೆ ಆಡುತ್ತಿದ್ದಾನೆ ಎಂದು ಒಪ್ಪಲೇಬೇಕು.

ಚೇತನೋಽಪ್ಯಸ್ವತಂತ್ರೋಽಸ್ತು ಸೂತ್ರಪ್ರೋತಶುಕಾದಿವತ್ ।
ಪ್ರತ್ಯಕ್ಷಂ ಚಾಸ್ವತಂತ್ರತ್ವಂ ಮೃತಿಸುಪ್ತ್ಯಧ್ವಾದಿಷು ॥೫॥

ಪರಿಪೂರ್ಣಚಂದ್ರಿಕಾ

'ಜೀವಃ ಸ್ವತಂತ್ರಃ ಚೇತನತ್ವಾತ್' ಎಂಬ ಅನುಮಾನದಲ್ಲಿ 'ಚೇತನತ್ವಂ ಅಸ್ತು ಸ್ವಾತಂತ್ರ್ಯಂ ಮಾಸ್ತು' ಎಂಬ ಅಪ್ರಯೋಜಕಾಶಂಕೆಯು ಇದೆ. ಜೀವನು ಚೇತನನಾಗಿದ್ದರೂ ಕೂಡ ಅಸ್ವತಂತ್ರನೇ ಆಗಲಿ. ಬಂಧನದಲ್ಲಿ ಸಿಲುಕಿದ ಗಿಳಿಯಂತೆ. ಮತ್ತು ಪ್ರತಿನಿತ್ಯ ಪ್ರತ್ಯಕ್ಷವಾಗಿ ಜೀವನ ಅಸ್ವಾತಂತ್ರ್ಯವನ್ನು ಕಾಣುತ್ತಲೇ ಇದ್ದೇವೆ. ಮರಣ ಬರಬಾರದೆಂದು ಬಯಸಿದವರಿಗೂ ಮರಣ ಬರುತ್ತಿದೆ ಸುಷುಪ್ತಿ ಬರಬೇಕೆಂದು ಬಯಸಿದವರಿಗೂ ಸುಷುಪ್ತಿ ಅವಸ್ಥೆ ಬರುತ್ತಿಲ್ಲ. ಮಗು ಹುಟ್ಟಬೇಕೆಂಬ ಅಪೇಕ್ಷೆಯಿದ್ದರೂ ಹುಟ್ಟುತ್ತಿಲ್ಲ.

ಯತ್ರೇಶೇಚ್ಛಾನುಸಾರೇಣ ಸ್ವಸ್ಯಾಪೀಚ್ಛೋಪಜಾಯತೇ ।
ಕಾರ್ಯೋಪಸಂಹೃತಿಂ ಕಾಕತಾಲೀಯಾಂ ತತ್ರ ವೀಕ್ಷ್ಯತು ॥೬॥

ಯಾವ ಸಂದರ್ಭದಲ್ಲಿ ಈಶ್ವರನ ಇಚ್ಛೆಗೆ ಅನುಸಾರಿಯಾಗಿ ಜೀವನ ಇಚ್ಛೆಯು ಇರುತ್ತದೋ, ಆವಾಗ ಅವನು ಅಂದುಕೊಂಡಂತೆ ಕಾರ್ಯವು ನಡೆಯುತ್ತದೆ. ಇಂಥ ಪ್ರಸಂಗಗಳಿಂದ ಜೀವನು ತನ್ನಲ್ಲಿ ಸ್ವಾತಂತ್ರ್ಯದ ಭ್ರಮೆಯನ್ನು ಹೊಂದುತ್ತಾನೆ. ಇಂಥ ಕಾಕತಾಳೀಯ ಸ್ಥಳದಲ್ಲಿ ತನಗೆ ಸ್ವಾತಂತ್ರ್ಯವಿರುವುದಿಲ್ಲವೆಂಬ ಅರಿವು ಉಂಟಾಗುವುದಿಲ್ಲ.

ದೇಹಾದಿಯಂತುಶ್ಚ ಹರೇರಗಕೃಹೀತ್ವಾ ಸ್ವತೋಭಿದಾಮ್ ।
ಸ್ವತಂತ್ರಕರ್ತೃತಾಂ ಸ್ವಸ್ಯ ಮನ್ಯತೇ ಹ್ಯಬುಧೋಜನಃ ॥೭॥

ಅಥವಾ ದೇಹಕ್ಕೆ ನಿಯಾಮಕನಾದವನು ಶ್ರೀಹರಿ ಎಂಬ ಅರಿವಿಲ್ಲದೇ, ಶ್ರೀಹರಿಗೂ ತನಗೂ ಇರುವ ವೈಲಕ್ಷಣ್ಯವನ್ನು ತಿಳಿದುಕೊಳ್ಳದೇ ನಾನೇ ಸ್ವತಂತ್ರ ಕರ್ತೃವೆಂದು ಪಾಮರ ಜನರು ತಿಳಿದುಬಿಡುತ್ತಾರೆ.

ಚಾರ್ವಾಕಸ್ಯ ಯಥಾ ದೇಹೇ ಜಡೇ ಸ್ವಾತಂತ್ರ್ಯಧೀಸ್ತಥಾ ।
(ಯಥೈವಾತ್ಮಪರಾಧೀನೇ ದೇಹೇ ಸ್ವಾತಂತ್ರ್ಯಧೀಸ್ತಥಾ ।)
ಜೀವಬಿಂಬೇಶ್ವರಾಧೀನೇಜೀವೇ ಸ್ವಾತಂತ್ರ್ಯವಿಭ್ರಮಃ ॥೮॥

ಆತ್ಮನನ್ನೇ ಒಪ್ಪದ ಚಾರ್ವಾಕನಿಗೆ ಜಡವಾದ ತನ್ನ ದೇಹದಲ್ಲಿಯೇ ಸ್ವಾತಂತ್ರ್ಯಜ್ಞಾನವು ಹೇಗೆ ಬರುತ್ತದೋ, ಅದರಂತೆ ಆತ್ಮಾಧೀನವಾದ ದೇಹದಲ್ಲಿ ಅಜ್ಞಾನಿಯು ಸ್ವಾತಂತ್ರಬುದ್ಧಿಯನ್ನು ತಾಳಿ ಭ್ರಮೆಗೆ ಒಳಗಾಗುತ್ತಾನೆ.

ಮತ್ತು 'ಜೀವಃ ಈಶಾಧೀನಃ ಈಶ್ವರಪ್ರತಿಬಿಂಬತ್ವಾತ್' ಎಂಬ ಅನುಮಾನದಿಂದ ಈಶ್ವರನ ಪ್ರತಿಬಿಂಬನಾಗಿರುವ ಜೀವನು ಈಶಾಧೀನನಾಗಿದ್ದಾನೆ ಎಂದು ಸಿದ್ಧವಾಗುತ್ತದೆ. ಸ್ವಾತಂತ್ರ್ಯದ ವಿಭ್ರಮದಿಂದ ಜೀವನು ಶ್ರೀಹರಿಯಲ್ಲಿರುವ ಸ್ವಾತಂತ್ರ್ಯವನ್ನು ತನಲ್ಲಿ ಇರುತ್ತದೆಂದು ಭ್ರಮಿಸುತ್ತಾನೆ.

ಆವಿರ್ಭಾವತಿರೋಭಾವೌ ಶಕ್ತಿಯೋಗಾತ್ಪಿಶಾಚವತ್ ।
ಈಶ್ವರಸ್ಯೋಪಪದ್ಯೇತೇ ಸರ್ವತ್ರಾವಸ್ಥಿತಸ್ಯ ಚ ॥೯॥

ಈಶ್ವರನು ಎಲ್ಲ ಕಡೆ ನೆಲೆಸಿ, ಎಲ್ಲಾ ಪದಾರ್ಥಗಳಿಗೂ ನಿಯಾಮಕನಾಗಿರುವುದಾದರೆ ಅವನು ಕಾಣಿಸಬೇಕಿತ್ತಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಈಶ್ವರನ ಆವಿರ್ಭಾವ, ತಿರೋಭಾವಗಳು ಅವನ ಅದ್ಭುತಶಕ್ತಿಯಿಂದ ಉಪಪನ್ನವಾಗುತ್ತದೆ. ಪಿಶಾಚಿಯು ಇದ್ದರೂ ಕೂಡ ನಮ್ಮ ಕಣ್ಣಿಗೆ ಕಾಣಿಸದೆ ಅಂತರ್ಧಾನಶಕ್ತಿಯನ್ನು ಹೊಂದಿರುವಂತೆ ಈಶ್ವರನೂ ಕೂಡ ಎಲ್ಲೆಡೆ ನೆಲೆಸಿದ್ದರೂ ನಮ್ಮ ಕಣ್ಣಿಗೆ ಕಾಣಿಸದಂತೆ ಅಂತರ್ಧಾನಶಕ್ತಿಯಿಂದ ಇರುತ್ತಾನೆ.

## ಇತರವ್ಯಪದೇಶಾಧಿಕರಣ (2-1-7)

ಗೌರವಂ ತನ್ನ ಭಾರಾಯ ಯತ್ಪ್ರಮಾಣಸ್ಯ ಸಮ್ಮತಮ್ ।
ನಹಿ ಭಾರಾಯ ಭವತಿ ಕಾಂಕ್ಷಿತಂ ಭೂಷಣಾದಿಕಮ್ ॥೧೦॥

ಪೂರ್ವಪಕ್ಷಿಗಳು ಆಕ್ಷೇಪಿಸಿದಂತೆ ಸಿದ್ಧಾಂತಿಗಳಾದ ನಮಗೆ ಗೌರವ ಭಯವೂ ಇಲ್ಲ. ಯಾವ ಪ್ರಮೇಯವು ಪ್ರಮಾಣಗಳಿಂದ ಪ್ರಮಿತವಾಗಿದೆಯೋ, ಮತ್ತು ನಮಗೆ ಇಷ್ಟವಾಗಿದೆಯೋ, ಅದು ಗೌರವ ಎಂದು ಕರೆಸಿಕೊಳ್ಳುವುದೇ ಇಲ್ಲ. ನಮಗೆ ಇಷ್ಟವಾದ ಆಭರಣಗಳನ್ನು ದೇಹದಲ್ಲಿ ಹಾಕಿಕೊಂಡಾಗ ಯಾರೂ ಕೂಡ ಆಭರಣಗಳನ್ನು ತಮಗೆ ಭಾರವೆಂದು ಹೇಳುವುದಿಲ್ಲವಷ್ಟೇ ?

ಪ್ರಾಮಾಣಿಕೇಶಕರ್ತೃತ್ವತ್ಯಾಗಾದಪ್ರಮಿತಸ್ಯ ಚ ।
ಜೀವೇ ತಸ್ಯ ಸ್ವೀಕೃತೇಶ್ಚ ಗೌರವಂ ಪೂರ್ವಪಕ್ಷಿಣಃ ॥೧೧॥

ಅನೇಕ ಪ್ರಮಾಣಗಳಿಂದ ಪ್ರಮಿತವಾದ ಈಶ್ವರನ ಕರ್ತೃತ್ವವನ್ನು ತ್ಯಾಗಮಾಡಿ, ಜೀವನಲ್ಲಿ ಅಪ್ರಮಿತವಾದ ಕರ್ತೃತ್ವವನ್ನು ಸ್ವೀಕಾರ ಮಾಡಿದರೆ, ಕಲ್ಪನಾಗೌರವದೋಷ ಪೂರ್ವಪಕ್ಷಿಗಳಿಗೇ ಬರುತ್ತದೆ. ನಮಗೆ ಬರುವುದಿಲ್ಲ.

# ಶ್ರುತೇಸ್ತುಶಬ್ದಮೂಲತ್ವಾಧಿಕರಣ
(೨-೧-೮)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಶ್ರುತೇಸ್ತುಶಬ್ದಮೂಲತ್ವಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – श्रुतेस्तु शब्दमूलत्वात् ।।**

ಜೀವ ಕರ್ತೃತ್ವ ಪಕ್ಷದಲ್ಲಿ ಇರುವ ದೋಷಗಳು ಈಶಕರ್ತೃತ್ವಪಕ್ಷದಲ್ಲಿ ಬರುವುದಿಲ್ಲ. ಏಕೆಂದರೆ, ನಿರಂಶನಾಗಿದ್ದರೂ ಶಕ್ತಿಯ ಒಂದಂಶವನ್ನು ಉಪಯೋಗಿಸಿ ಸೃಷ್ಟ್ಯಾದಿಗಳನ್ನು ಈಶ್ವರನು ಮಾಡುತ್ತಾನೆಂದು 'ಯೋಸೌವಿರುದ್ಧಃ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಈ ವಿಷಯದಲ್ಲಿ ಯುಕ್ತಿವಿರೋಧವನ್ನು ಆಕ್ಷೇಪ ಮಾಡಬಾರದು. ಏಕೆಂದರೆ ಈಶ್ವರನ ವಿಷಯದಲ್ಲಿ ವೇದಗಳು ಮಾತ್ರ ಪ್ರಮಾಣವಾಗಿರುತ್ತವೆ. ಆದ್ದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ. ಜೀವನಾದರೋ ಪ್ರಮಾಣಾಂತರಗಳಿಂದ ವೇದ್ಯನಾಗಿದ್ದಾನೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – श्रुतेस्तु शब्दमूलत्वात् ।।** ईश्वरकतृत्वपक्षे तु कृत्स्नप्रसक्तिरित्यादिना जीवकर्तृत्वपक्षोक्तयुक्तिविरोधदोषो नास्ति । कुतः ? श्रुतेस्तु 'योऽसौ विरुद्धः' इति श्रुतेरेव । नन्वेतावता कथं युक्तिविरोधशान्तिरित्यत उक्तम् - शब्दमूलत्वादिति। ईश्वरतद्धर्माणां शब्दैकप्रमाणवत्वे युक्त्यविष्यत्वात् न तत्र युक्तिविरोधः प्रवर्तते। जीवे तु न तथा । तस्य प्रमाणान्तरेणापि गम्यत्वदित्यर्थः ।।१।।

ಅರ್ಥ -- 'ಕೃತ್ಸ್ನಪ್ರಸಕ್ತಿ:' ಇತ್ಯಾದಿಯಾಗಿ ಜೀವಕರ್ತೃತ್ವ ಪಕ್ಷದಲ್ಲಿ ಹೇಳಿದ ಯುಕ್ತಿವಿರೋಧವು ಈಶ್ವರನೇ ಜಗತ್ಕರ್ತೃ ಎಂಬ ಪಕ್ಷದಲ್ಲಿ ಬರುವುದಿಲ್ಲ. ತು = ಏಕೆಂದರೆ, ಶ್ರುತೇಃ = 'ಯೋऽಸೌ ವಿರುದ್ಧಃ' ಎಂಬ ಶ್ರುತಿಯು ನಿರಂಶನಾದ ಈಶ್ವರನು ತನ್ನ ಶಕ್ತಿಯ ಒಂದಂಶದ ಉಪಯೋಗದಿಂದ ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂದು ಹೇಳುತ್ತಿದೆ. ಹೀಗೆ ಹೇಳಿದ ಮಾತ್ರಕ್ಕೆ ಯುಕ್ತಿವಿರೋಧವು ಹೇಗೆ ಪರಿಹಾರವಾಗುತ್ತದೆ ? ಎಂದು ಪ್ರಶ್ನಿಸಬಾರದು. ಶಬ್ದಮೂಲತ್ವಾತ್= ಈಶ್ವರ ಹಾಗೂ ಈಶ್ವರನ ಧರ್ಮಗಳಲ್ಲಿ ಕೇವಲ ಶಬ್ದಗಳಷ್ಟೆ ಪ್ರಮಾಣಗಳಾಗಿರುತ್ತವೆ. ಯುಕ್ತಿಗೆ ವಿಷಯನಾದ ಕಾರಣ ಯುಕ್ತಿವಿರೋಧಕ್ಕೆ ಅವಕಾಶವೇ ಇಲ್ಲ. ಆದರೆ ಜೀವವಿಷಯದಲ್ಲಿ ಹೀಗೆ ಹೇಳಲಾಗದು. ಅವನು ಬೇರೆ ಪ್ರಮಾಣಗಳಿಂದಲೂ ಗಮ್ಯನಾಗಿದ್ದಾನೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – ।। श्रुतेस्तु शब्दमूलत्वात् ।।१।।**

**न चेश्वरपक्षेऽयं विरोधः । 'योऽसौ विरुद्धोऽविरुद्धो मनुरमनुर-वाग्वागिन्द्रोऽनिन्द्रः प्रवृत्तिरप्रवृत्तिः स परः परमात्मा' इति पैङ्ग्यादिश्रुतेरेव।**

ಅನುವಾದ - ಜೀವಕರ್ತೃತ್ವಪಕ್ಷದಲ್ಲಿ ಬರುವ ದೋಷವು ಈಶ್ವರಕರ್ತೃತ್ವಪಕ್ಷದಲ್ಲಿಯೂ ಸಮಾನ. ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ಲೋಕವಿರುದ್ಧವಾಗಿ ಕಾಣುವ ಧರ್ಮಗಳು ಪರಮಾತ್ಮನಲ್ಲಿ ಅವಿರುದ್ಧವಾಗಿ ಯುಕ್ತವಾಗುತ್ತವೆ. ಆದ್ದರಿಂದ ಈಶ್ವರನು ಸೃಷ್ಟಿಕಾರ್ಯದಲ್ಲಿ ಒಂದು ಅಂಶದಿಂದ ತೊಡಗುತ್ತಾನೆ. ಈ ವಿಷಯದಲ್ಲಿ ಪೈಂಗಿಶ್ರುತಿಯು ಆಧಾರವಾಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ವಿಷ್ಣುವಿನ ಸರ್ವಕರ್ತೃತ್ವ- ವಿಷಯದಲ್ಲಿ ಪ್ರಬಲವಾದ ಯುಕ್ತಿವಿರೋಧವನ್ನು ಪರಿಹರಿಸುತ್ತಿದ್ದಾರೆ. ಜೀವಕರ್ತೃತ್ವಪಕ್ಷದಲ್ಲಿ ಕೃತ್ಸ್ನಪ್ರಸಕ್ತ್ಯಾದಿ ಯಾವ ದೋಷಗಳನ್ನು ಹಿಂದೆ ಹೇಳಲಾಯಿತೋ ಅವು ಈಶ್ವರ ಪಕ್ಷದಲ್ಲಿಯೂ ಕೂಡ ಸಮಾನವಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸಲು ಸೂತ್ರ ಹೊರಟಿದೆ - ಈಶ್ವರಪಕ್ಷೇऽಪಿ = ಪರಮಾತ್ಮನು ಜಗತ್ಕಾರಣವಾಗಿದ್ದಾನೆ ಎಂಬ ಪಕ್ಷದಲ್ಲಿ, ಅಯಂ = ಕೃತ್ಸ್ನಪ್ರಸಕ್ತಿಯೆಂಬ, ವಿರೋಧಃ = ವಿರೋಧವು, ನಚ = ಬರುವುದಿಲ್ಲ. ಏಕೆಂದರೆ ಯಃ = ಯಾವ ಶ್ರುತಿಪ್ರಸಿದ್ಧವಾದವನು, ಅಸೌ = ಈ ಪರಮಾತ್ಮನು, ವಿರುದ್ಧಃ = ಲೌಕಿಕವಾದ ಕರ್ತೃತ್ವಕ್ಕಿಂತಲೂ ವಿರುದ್ಧವಾದ ಕರ್ತೃತ್ವವುಳ್ಳವನು, ಅವಿರುದ್ಧಃ = ಪ್ರಮಾಣಗಳಿಂದ ಅವಿರುದ್ಧವಾದ ಕರ್ತೃತ್ವವುಳ್ಳವನು, ಮನುಃ = ಎಲ್ಲವನ್ನು ತಿಳಿದವನು, ಅಮನುಃ = ಮತ್ತೊಬ್ಬ ಸ್ವತಂತ್ರವಾದ ಜ್ಞಾನಿ ಇಲ್ಲದವನು. ಅವಾಕ್ = ಸ್ವತಂತ್ರವಾದ ಮತ್ತೊಬ್ಬ ವಕ್ತೃತ್ವವಿಲ್ಲದವನು, ವಾಕ್ = ವಾಗ್ಮಿಯು, ಇಂದ್ರಃ = ಸಂಪತ್ ಭರಿತನು, ಅನಿಂದ್ರಃ

= ಮತ್ತೊಬ್ಬ ಅಧಿಪತಿಯಿಲ್ಲದವನು, ಪ್ರವೃತಿಃ = ಸಕಲಪ್ರವರ್ತಕನು, ಅಪ್ರವೃತ್ತಿಃ = ಪ್ರವರ್ತಕನಿಲ್ಲದವನು, ಸಪರಃ = ಪರಾ ಎಂಬ ಲಕ್ಷ್ಮಿಯಿಂದ ಸಹಿತನು, ಪರಾತ್ಮಾ = ಇದು ಪರಮಾತ್ಮನ ಲಕ್ಷಣವಾಗಿದೆ.

**भाष्यम् – शब्दमूलत्वाच्च न युक्तिविरोधः ।**

**ಅನುವಾದ - ಪರಮಾತ್ಮನು ಶಬ್ದೈಕಸಮಧಿಗಮ್ಯನಾದ್ದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ.**

ಪ್ರತಿಪದಾರ್ಥ -- ನಿರವಯವನಾದ ಪರಮಾತ್ಮನಿಗೆ ಏಕದೇಶದಿಂದ ಪ್ರವೃತ್ತ್ಯಾದಿಗಳು ಕೂಡುವುದು ಯುಕ್ತಿವಿರುದ್ಧವಾಗಿದೆ. ಇದನ್ನು ಪರಮಾತ್ಮನಲ್ಲಿ ಹೇಗೆ ಒಪ್ಪುತ್ತೀರಿ? ಯುಕ್ತಿ ವಿರುದ್ಧವಾದರೂ ಪರಮಾತ್ಮನಲ್ಲಿ ಒಪ್ಪುವುದಾದರೆ ಜೀವನಲ್ಲಿಯೂ ಕೂಡ ಅದನ್ನು ಒಪ್ಪಬಹುದಲ್ಲವೆ ಎಂದು ಆಕ್ಷೇಪ ಮಾಡಬಾರದು. ಶಬ್ದಮೂಲತ್ವಾಚ್ಚ = ಪರಮಾತ್ಮನು ಶಬ್ದೈಕಸಮಧಿಗಮ್ಯನು, ಆದ್ದರಿಂದ ಯುಕ್ತಿವಿರೋಧಃ = ಯುಕ್ತಿವಿರೋಧವು, ನ = ಇರುವುದಿಲ್ಲ.

**भाष्यम् –**

**'यद्वाक्योक्तं न तद् युक्तिर्विरोद्धुं शक्नुयात् क्वचित् ।**
**विरोधे वाक्ययोः क्वापि किञ्चित्साहाय्यकारणम् ।।'**
**इति पुरुषोत्तमतन्त्रे ।।१।।**

**ಅನುವಾದ - ಯಾವುದು ಶ್ರುತಿಯಿಂದ ಸಿದ್ಧವಾಗಿದೆಯೋ ಆ ವಿಷಯದಲ್ಲಿ ಯುಕ್ತಿಯ ವಿರೋಧವನ್ನು ಹೇಳಲು ಸಾಧ್ಯವಿಲ್ಲ. ಎರಡು ವಾಕ್ಯಗಳಿಗೆ ಪರಸ್ಪರ ವಿರೋಧ ಬಂದಾಗ ವಿರೋಧ ಪರಿಹಾರಕ್ಕಾಗಿ ಒಂದನ್ನು ನಿರ್ಣಯಿಸಲು ಯುಕ್ತಿಯು ಸಹಾಯವನ್ನು ಕೆಲವೊಮ್ಮೆ ಮಾಡುತ್ತದೆ. ಹೀಗೆ ಪುರುಷೋತ್ತಮತಂತ್ರವು ಹೇಳಿದೆ.**

ಪ್ರತಿಪದಾರ್ಥ -- ಕೇವಲ ಪರಮಾತ್ಮನು ಶಬ್ದೈಕಸಮಧಿಗಮ್ಯನಷ್ಟೇ ಅಲ್ಲ. ಯುಕ್ತಿವಿರೋಧಕ್ಕೆ ಪರಮಾತ್ಮನ ವಿಷಯದಲ್ಲಿ ಅವಕಾಶವೇ ಇಲ್ಲ. ಈ ವಿಷಯದಲ್ಲಿ ಸ್ಮೃತಿಪ್ರಮಾಣವನ್ನು ಹೇಳುತ್ತಿದ್ದಾರೆ. ಯದ್ವಾಕ್ಯೋಕ್ತಂ = ಆಗಮದಿಂದ, ಸಿದ್ಧವಾದ ಯಾತ್ = ಯಾವ ಪ್ರಮೇಯವಿದೆಯೋ, ತತ್ = ಅದನ್ನು, ಯುಕ್ತಿಃ = ಯುಕ್ತಿಯು, ವಿರೋಧೇ = ವಿರೋಧ ಮಾಡಲು, ಕ್ವಚಿತ್ = ಯಾವಾಗಲೂ, ನ ಶಕ್ನುಯಾತ್ = ಸಮರ್ಥವಾಗುವುದಿಲ್ಲ. ಕ್ವಾಪಿ = ಕೆಲವೊಮ್ಮೆ, ವಾಕ್ಯಯೋಃ = ವಾಕ್ಯಗಳಲ್ಲಿ, ವಿರೋಧೇ = ವಿರೋಧವು ಪ್ರಾಪ್ತವಾಗುತ್ತಿರಲು, ಕಿಂಚಿತ್ = ಸ್ವಲ್ಪಮಾತ್ರ, ಸಾಹಾಯ್ಯಕಾರಣಮ್ = ಸಹಾಯ ಮಾಡಲು ಅನುಕೂಲವಾಗುತ್ತದೆ. ಇತಿ = ಹೀಗೆ, ಪುರುಷೋತ್ರಮತಂತ್ರೇ = ಪುರುಷೋತ್ತಮತಂತ್ರವೆಂಬ ಗ್ರಂಥದಲ್ಲಿ ಹೇಳಲಾಗಿದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र विष्णो सर्वकर्तृत्वे कृत्स्नप्रसक्त्यादियुक्तिविरोघ-परिहारादस्ति शास्त्रादिसङ्गतिः । सर्वकर्तृत्वं विष्णोरुक्तम् । तस्य च युक्तिविरोघे लक्षणसूत्रानुपपत्तेरवश्यमसौ निराकर्तव्यः । तत्प्रवृत्त्वं विषयः । किं विष्णोर्युक्तमयुक्तं वेति सन्देहः । उक्तन्यायो दोषदर्शनं च सन्देहबीजम्।**

ಈ ಅಧಿಕರಣದಲ್ಲಿ ವಿಷ್ಣುವೇ ಸರ್ವಕರ್ತೃ ಎಂದು ಒಪ್ಪಿದರೆ ಕೃತ್ಸ್ನಪ್ರಸಕ್ತಿ ಮೊದಲಾದ ಯುಕ್ತಿವಿರೋಧಗಳನ್ನು ಪರಿಹರಿಸಲಾಗುತ್ತದೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳಿರುತ್ತವೆ.

ಜನ್ಮಾಧಿಕರಣದಲ್ಲಿ ಸರ್ವಕರ್ತೃತ್ವವನ್ನು ವಿಷ್ಣುವಿನಲ್ಲಿ ಹೇಳಲಾಯಿತು. ಈ ಲಕ್ಷಣಕ್ಕೆ ಯುಕ್ತಿವಿರೋಧವನ್ನು ಹೇಳಿದರೆ ಜನ್ಮಾಧಿಕರಣದಲ್ಲಿ ಹೇಳಿದ ಪ್ರಮೇಯವೇ ಅನುಪಪನ್ನವಾಗುತ್ತದೆ. ಆದ್ದರಿಂದ ಅವಶ್ಯವಾಗಿ ಈ ಯುಕ್ತಿವಿರೋಧವನ್ನು ನಿರಾಕರಣೆ ಮಾಡಲೇಬೇಕು.

ಸರ್ವಕರ್ತೃತ್ವವು ಈ ಅಧಿಕರಣದ ವಿಷಯ. ವಿಷ್ಣುವಿಗೆ ಇದು ಯುಕ್ತವಾಗುತ್ತದೋ ಇಲ್ಲವೋ ? ಎಂಬುದೇ ಈ ಅಧಿಕರಣ ಸಂಶಯ.

ಹಿಂದಿನ ಅಧಿಕರಣಗಳಲ್ಲಿ ಸಮರ್ಥಿಸಲ್ಪಟ್ಟ ಈಶ್ವರಕರ್ತೃತ್ವ ವಿಷಯಕವಾದ ನ್ಯಾಯಗಳು ಹಾಗೂ ಕೃತ್ಸ್ನಪ್ರಸಕ್ತಿ ಮೊದಲಾದ ದೋಷಗಳ ದರ್ಶನಗಳು ಸಂದೇಹಕ್ಕೆ ಬೀಜವಾಗಿವೆ.

ವಿವರಣೆ - ಟೀಕೆಯಲ್ಲಿರುವ 'ಕೃತ್ಸ್ನಪ್ರಸಕ್ತ್ಯಾದಿ' ಎಂದಿದೆ. ಇಲ್ಲಿರುವ ಆದಿಪದದಿಂದ 'ನಿರವಯವಶಬ್ದ ವ್ಯಾಕೋಪ, ಶರೀರೇಂದ್ರಿಯಾದಿರಾಹಿತ್ಯ, ಅಧಿಷ್ಠಾನಾದಿರಾಹಿತ್ಯ, ಮೊದಲಾದ ವಿರೋಧಿ ಅನೇಕ ಯುಕ್ತಿಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ಬಹುಯುಕ್ತಯಃ' ಎಂಬುದನ್ನು ಈ ಅಧಿಕರಣದ ಉಪಾಧಿಯನ್ನಾಗಿ ಹೇಳಿರುತ್ತಾರೆ.

ಪ್ರಶ್ನೆ - ಆರಂಭಣಾಧಿಕರಣದಲ್ಲಿಯೇ ಅನೇಕ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾಗಿದೆ. ಪುನಃ ಈ ಅಧಿಕರಣ ಏಕೆ ?

ಉತ್ತರ - ಈ ಪ್ರಶ್ನೆ ತಪ್ಪು. ಅಖಂಡನಾದ ಬ್ರಹ್ಮನಲ್ಲಿ ಏಕದೇಶಿ-ಏಕದೇಶಭಾವವೇ ವ್ಯಾಹತವಾಗುತ್ತದೆ. ಹೀಗೆ ಅತ್ಯಂತ ಪ್ರಬಲವಾದಯುಕ್ತಿ ವಿರೋಧವನ್ನು ಇಲ್ಲಿ ಆಶಂಕಿಸಿ ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಜೀವಕರ್ತೃತ್ವಪಕ್ಷದಲ್ಲಿ ಹೇಳಿದ ಕೃತ್ಸ್ನಪ್ರಸಕ್ತ್ಯಾದಿ ದೋಷವು ಈಶ್ವರಪಕ್ಷದಲ್ಲಿ ಇಲ್ಲವೆಂದು ಸಮರ್ಥಿಸುತ್ತಿದ್ದಾರೆ. ಇದರಿಂದ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿಯನ್ನು ಕೂಡ ಹೇಳಿದಂತಾಯಿತು. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – न युक्तमिति पूर्वः पक्षः । जीवकर्तृत्वपक्षोक्तदोषस्यात्रापि सम्भवात् । तथा हि । किमीश्वरः कार्येषु सर्वशक्त्या प्रवर्तते तदेकदेशेन वा। नाद्यः । तृणादानादावपि कृत्स्नप्रसक्तेः । न द्वितीयः । नेह नानास्ति किञ्चन' इत्यादि श्रुतिव्याकोपात् । न हि वक्तुं युक्तमयं दोषो जीवपक्ष एव नेश्वरपक्ष इति। ईश्वरे तदस्पर्शानिमित्तस्य जीवादतिशयस्यादर्शनात् । विशेषमन्तरेणापि दोषास्पर्शे किं जीवेनापराद्धम् ।**

ಸರ್ವಕರ್ತೃತ್ವವು ವಿಷ್ಣುವಿನಲ್ಲಿ ಯುಕ್ತವಲ್ಲವೆಂಬುದು ಈ ಅಧಿಕರಣದ ಪೂರ್ವಪಕ್ಷ. ಏಕೆಂದರೆ ಹಿಂದಿನ ಅಧಿಕರಣದಲ್ಲಿ ಜೀವಕರ್ತೃತ್ವಪಕ್ಷದಲ್ಲಿ ಹೇಳಲ್ಪಟ್ಟ ದೋಷಗಳೆಲ್ಲವೂ ವಿಷ್ಣುವಿನ ವಿಷಯದಲ್ಲೂ ಸಮಾನವಾಗಿವೆ. ಅದು ಹೀಗೆ - ಈಶ್ವರನು ಎಲ್ಲಾ ಕಾರ್ಯಗಳಲ್ಲಿ ಸಮಸ್ತ ಶಕ್ತಿಯನ್ನು ಉಪಯೋಗಿಸಿ ಪ್ರವೃತ್ತಿ ಮಾಡುತ್ತಾನೋ ಅಥವಾ ತನ್ನ ಶಕ್ತಿಯ ಏಕದೇಶವನ್ನಷ್ಟೇ ಉಪಯೋಗಿಸಿ ಪ್ರವೃತ್ತಿ ಮಾಡುತ್ತಾನೋ? ಪ್ರಥಮಪಕ್ಷವು ಅಯುಕ್ತವಾಗಿದೆ. ಹುಲ್ಲು ಮೊದಲಾದವುಗಳನ್ನು ಎತ್ತುವಾಗಲೂ ಈಶ್ವರನು ಸಮಸ್ತ ಶಕ್ತಿಯನ್ನು ಉಪಯೋಗಿಸುತ್ತಾನೆಂದು ಹೇಳಬೇಕಾಗುತ್ತದೆ.

ಎರಡನೆಯ ಪಕ್ಷವು ತಪ್ಪು. 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ಶ್ರುತಿಯು ಈಶ್ವರನ ಗುಣ ಅವಯವ ಮೊದಲಾದವುಗಳಲ್ಲಿ ಭೇದವಿಲ್ಲವೆಂದು ಹೇಳುತ್ತಿದೆ. ಇದರ ವಿರೋಧವು ಬರುತ್ತದೆ.

ಜೀವಪಕ್ಷದಲ್ಲಿ ಬರುವ ದೋಷವು ಈಶ್ವರಪಕ್ಷದಲ್ಲಿ ಬರುವುದಿಲ್ಲವೆಂದು ಹೇಳಬೇಕು. ಆದರೆ ಈಶ್ವರನಲ್ಲಿ ಜೀವಪಕ್ಷದಲ್ಲಿ ಬರುವ ದೋಷಗಳ ಸ್ಪರ್ಶ ಇಲ್ಲ ಎಂಬುದಕ್ಕೆ ಯಾವುದೇ ನಿಮಿತ್ತವು ಕಾಣುವುದಿಲ್ಲ. ಮತ್ತು ಜೀವನಲ್ಲಿಲ್ಲದ ಯಾವುದೇ ಅತಿಶಯವೂ ಕೂಡ ಈಶ್ವರನಲ್ಲಿ ಕಾಣಿಸುತ್ತಿಲ್ಲ. ಹೀಗೆ ಯಾವುದೇ ವಿಶೇಷ ಇಲ್ಲದಿದ್ದರೂ ಈಶ್ವರನ ಪಕ್ಷದಲ್ಲಿ ದೋಷಗಳ ಸಂಪರ್ಕ ಆಗುವುದಿಲ್ಲ ಎಂದು ಹೇಳಿದರೆ ಆಗ ಜೀವನೇ ಸ್ವತಂತ್ರಕರ್ತೃ ಎಂದು ಹೇಳಿದಾಗ ಜೀವನೇನು ಅಪರಾಧ ಮಾಡಿದ್ದಾನೆ ?

**ವಿವರಣೆ** - ಪರಮಾತ್ಮನು ಸಮಸ್ತ ಬ್ರಹ್ಮಾಂಡವನ್ನು ನಿರ್ಮಾಣ ಮಾಡುವಾಗ ಎಷ್ಟು ಶಕ್ತಿಯನ್ನು ಉಪಯೋಗಿಸುತ್ತಾನೋ ಅಷ್ಟು ಶಕ್ತಿಯನ್ನು ಒಂದು ಹುಲ್ಲನ್ನು ನಿರ್ಮಾಣ ಮಾಡುವಾಗ ಉಪಯೋಗಿಸುವುದಿಲ್ಲ. ಆದ್ದರಿಂದ ಎಲ್ಲಾ ಕಾರ್ಯಗಳನ್ನು ಈಶ್ವರನು ಒಂದೇ ವಿಧವಾದ ಶಕ್ತಿಯನ್ನು ಉಪಯೋಗಿಸುತ್ತಾನೆಂಬುದು ತಪ್ಪು. ಶಕ್ತಿಯ ಏಕದೇಶವನ್ನು ಉಪಯೋಗಿಸುತ್ತಾನೆಂದು ಹೇಳಿದರೆ ಭಗವಂತನಲ್ಲಿರುವ ಯಾವುದೇ ಗುಣಕ್ರಿಯಾದಿಗಳಿಗೆ ಭೇದವಿಲ್ಲವೆಂಬ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯ ವಿರೋಧ ಬರುತ್ತದೆ.

'ಆತ್ಮನಿ ಚೈವಮ್' ಇತ್ಯಾದಿಯಾದ ಸೂತ್ರದಿಂದ ಪರಿಹಾರವಾಗುವ 'ವಿಶೇಷದರ್ಶನಂ' ಎಂಬ ಹಿಂದಿನ ಪೂರ್ವಪಕ್ಷವನ್ನು 'ನ ಹಿ' ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ.

**तत्वप्रकाशिका – एतेन जीवस्येऽश्वराधीनकर्तृत्वाङ्गीकारेण कृत्स्नप्रसक्त्यादिदोषपरिहारः प्रागुक्तोऽप्ययुक्तः । अतो युक्तिविरोधान्न विष्णोर्जगत्कर्तृत्वलक्षणं युक्तमिति प्राप्ते सिद्धान्तयत्सूत्रमुपन्यस्य व्याचष्टे – श्रुतेरिति ।।**

ಹೀಗೆ ಹೇಳಿದ್ದರಿಂದ ಜೀವನು ಈಶ್ವರಾಧೀನಕರ್ತೃತ್ವವುಳ್ಳವನೆಂದು ಅಂಗೀಕರಿಸಿ ಕೃತ್ಸ್ನಪ್ರಸಕ್ತ್ಯಾದಿ ದೋಷಪರಿಹಾರವನ್ನು ಹಿಂದೆ ಮಾಡಿದ್ದು ಯುಕ್ತವಾಯಿತು. ಹೀಗೆ ಯುಕ್ತಿವಿರೋಧ ಇರುವುದರಿಂದ ವಿಷ್ಣುವಿಗೆ ಜಗತ್‌ಕರ್ತೃತ್ವಲಕ್ಷಣವು ಅಯುಕ್ತವಾಗುತ್ತದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತವನ್ನು ಸ್ಥಾಪನೆ ಮಾಡುವ ಮೂಲಕ ಸೂತ್ರವನ್ನು ಪಠಿಸಿ 'ಶ್ರುತೇಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಟೀಕೆಯಲ್ಲಿರುವ 'ಏತೇನ' ಎಂಬ ಪದಕ್ಕೆ ಜೀವನಲ್ಲಿ ಇಲ್ಲದೇ ಇರುವ ಯಾವುದೇ ವಿಶೇಷ ಈಶ್ವರನಲ್ಲೂ ಇಲ್ಲದೇ ಇರುವುದರಿಂದಲೇ ಎಂದರ್ಥ. ಇದರಿಂದ ಹಿಂದಿನ ಅಧಿಕರಣದ ಪ್ರಮೇಯವನ್ನು ನಿರಾಕರಣೆ ಮಾಡಿದಂತಾಯಿತು. ಜೀವ ಹಾಗೂ ಈಶ್ವರರಿಬ್ಬರೂ ಸಮಾನರಾಗಿರುವುದರಿಂದ ಈಶ್ವಾರಾಧೀನ್ಯವನ್ನು ಜೀವನಲ್ಲಿ ಅಂಗೀಕರಿಸಿ ಕೃತ್ಸ್ನಪ್ರಸಕ್ತ್ಯಾದಿ ದೋಷಗಳ ಪರಿಹಾರವನ್ನು ಮಾಡಲು ಸಾಧ್ಯವಿಲ್ಲವೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.

**तत्वप्रकाशिका – नेश्वरकर्तृत्वे युक्तिविरोधः । 'योऽसौ विरुद्धः' इत्यादि श्रुतो लोकविरुद्धधर्माणामीश्वरेऽविरुद्धतयाऽवस्थानोक्तेः ।**

ಈಶ್ವರನಿಗೆ ಕರ್ತೃತ್ವವನ್ನು ಒಪ್ಪದಿದ್ದರೆ ಕೃತ್ಸ್ನಪ್ರಸಕ್ತಿಗಳ ವಿರೋಧವು ಪ್ರಾಪ್ತವಾಗುತ್ತದೆಂದು ಹೇಳಿದ್ದು ಅಯುಕ್ತವಾಗಿದೆ. ಏಕೆಂದರೆ 'ಯೋಽಸೌ ವಿರುದ್ಧಃ' ಇತ್ಯಾದಿ ಶ್ರುತಿಯಲ್ಲಿ ಲೋಕವಿರುದ್ಧವಾದ ಧರ್ಮಗಳು ಈಶ್ವರನಲ್ಲಿ ಅವಿರುದ್ಧವಾಗಿರುತ್ತವೆಂದು ಹೇಳಲಾಗಿದೆ.

ವಿವರಣೆ - 'ಯೋಽಸೌ ವಿರುದ್ಧಃ' ಎಂಬ ಶ್ರುತಿಯು ಲೋಕದೃಷ್ಟಿಯಿಂದ ವಿರುದ್ಧವಾದದ್ದು ಪರಮಾತ್ಮನಲ್ಲಿ ಅವಿರುದ್ಧವಾಗಿರುತ್ತದೆಂದು ಹೇಳುತ್ತಿದೆ. ಆದ್ದರಿಂದ ಶ್ರುತಿಸಿದ್ಧವಾದ ವಿಷಯದಲ್ಲಿ ಯುಕ್ತಿವಿರೋಧವು ಅಪ್ರಯೋಜಕ ಎಂಬುದು ಸಿದ್ಧಾಂತದ ಅಭಿಪ್ರಾಯ.

**तत्वप्रकाशिका – ननु श्रुत्युक्तत्वेऽपि युक्तिविरुद्धं कथमुपैतुं शक्यम् । अन्यथा जीवेऽपि प्रत्यक्षबलादभ्युपगन्तव्यमविशेषादिति चेत् । मैवम् ।**

**भवेज्जीवप्रतिबन्धेश्वरे युक्तिविरोधा यदि विशेषाभावो भवेत् । न चैवं शब्दैकसमधिगम्यत्वस्य युक्तिविरोधपरिहारोपयोगिनः परमेश्वरे श्रुत्यादिसिद्धत्वाज्जीवे तदभावात् ।**

ಶ್ರುತಿಯಲ್ಲಿ ಹೇಳಿದ್ದರೂ ಕೂಡ ಯುಕ್ತಿವಿರುದ್ಧವಾದದ್ದನ್ನು ಸ್ವೀಕರಿಸಲು ಹೇಗೆ ಸಾಧ್ಯವಾಗುತ್ತದೆ? ಒಂದುವೇಳೆ ಯುಕ್ತಿವಿರುದ್ಧವಾದದ್ದನ್ನು ಸ್ವೀಕರಿಸುವುದಾದರೆ ಜೀವನಲ್ಲೂ ಕೂಡ ಪ್ರತ್ಯಕ್ಷ ಪ್ರಮಾಣದಿಂದ ಸ್ವತಂತ್ರಕರ್ತೃತ್ವವು ಸಿದ್ಧವಾಗಿದೆ. ಯಾವುದೇ ವೈಲಕ್ಷಣ್ಯ ಇಲ್ಲದ್ದರಿಂದ ಇದನ್ನು ಕೂಡ ಅಂಗೀಕರಿಸಬೇಕಾದೀತು.

ಈ ಆಕ್ಷೇಪ ತಪ್ಪು. ಜೀವಪ್ರತಿಬಂಧಿಯಿಂದ ಈಶ್ವರನಲ್ಲಿ ಯುಕ್ತಿವಿರೋಧವನ್ನು ಹೇಳಬಹುದಿತ್ತು. ಯಾವಾಗ ಎಂದರೆ ಈಶ್ವರನಲ್ಲಿ ಯಾವುದೇ ವಿಶೇಷ ಇಲ್ಲ ಎಂದಾಗಿದ್ದಲ್ಲಿ. ಆದರೆ 'ಶಬ್ದೈಕಸಮಧಿಗಮ್ಯತ್ವ' ಎಂಬ ಅಸಾಧಾರಣಧರ್ಮ ಇರುವುದರಿಂದ ಯುಕ್ತಿವಿರೋಧದ ಪರಿಹಾರಕ್ಕೆ ಉಪಯೋಗಿಯಾದ ಧರ್ಮವು ಪರಮಾತ್ಮನಲ್ಲಿ ಶ್ರುತ್ಯಾದಿಗಳಿಂದಲೇ ಸಿದ್ಧವಾಗಿದೆ. ಇಂಥ 'ಶಬ್ದೈಕಸಮಧಿಗಮ್ಯತ್ವ' ಎಂಬ ಅಸಾಧಾರಣಧರ್ಮವು ಜೀವನಲ್ಲಿ ಸರ್ವಥಾ ಇರುವುದಿಲ್ಲ.

ವಿವರಣೆ – ಸೂತ್ರದಲ್ಲಿರುವ 'ತು' ಎಂಬ ಶಬ್ದವು ಜೀವನಲ್ಲಿಲ್ಲದ ಶಬ್ದೈಕಸಮಧಿಗಮ್ಯತ್ವ ಎಂಬ ಧರ್ಮ ಪರಮಾತ್ಮನಲ್ಲಿದೆ ಎಂಬ ವೈಶಿಷ್ಟ್ಯವನ್ನು ಹೇಳುತ್ತಿದೆ.

ಸೂತ್ರದಲ್ಲಿರುವ 'ಶ್ರುತೇಃ' ಎಂಬ ಪದವನ್ನು ಆವೃತ್ತಿ ಮಾಡಬೇಕು. ಮೊದಲ ಶಬ್ದಕ್ಕೆ 'ಶ್ರುತೇಃ' ಎಂಬುದಕ್ಕೆ ಲೋಕವಿರುದ್ಧವಾದ ಧರ್ಮಗಳು ಈಶ್ವರನಲ್ಲಿ ಅವಿರುದ್ಧವಾಗಿವೆ ಎಂಬುದು ಶ್ರುತಿಸಿದ್ಧವಾಗಿದೆ ಎಂದರ್ಥ. ಎರಡನೆಯ 'ಶ್ರುತೇಃ' ಎಂಬುದಕ್ಕೆ ಶಬ್ದೈಕಸಮಧಿಗಮ್ಯತ್ವವು ಶ್ರುತಿಸಿದ್ಧವಾಗಿದೆ ಎಂದರ್ಥ. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – न हि शब्दैकसमधिगम्यवस्तुनि युक्तिविरेधः । यथा प्रत्यक्षाविषये न प्रत्यक्षविरोध इति भावः । विरुद्धौ लोकदृष्ट्या । अविरुद्धः प्रमाणैः । न मन्ता वदता स्वामी प्रवर्तको यस्यासौ तथोक्तः । शब्दैकसमधिगम्ये न युक्तिविरोध इत्यत्र स्मृतिं चाह – यदिति ।।**

ಶಬ್ದದಿಂದ ಮಾತ್ರ ತಿಳಿಯಲು ಯೋಗ್ಯವಾದ ವಸ್ತುವಿನಲ್ಲಿ ಯುಕ್ತಿವಿರೋಧವನ್ನು ಆಕ್ಷೇಪ ಮಾಡಬಾರದು. ಹೇಗೆ ಪ್ರತ್ಯಕ್ಷಕ್ಕೆ ವಿಷಯವಾಗದೆ ಇರುವ ವಸ್ತುವಿನಲ್ಲಿ ಪ್ರತ್ಯಕ್ಷದ ವಿರೋಧವನ್ನು ಆಕ್ಷೇಪ ಮಾಡಬಾರದೋ, ಅದರಂತೆ - 'ಯೋಽಸೌ ವಿರುದ್ಧಃ' ಎಂದು ಭಾಷ್ಯದಲ್ಲಿ

ಉದಾಹರಿಸಿದ ಪೈಂಗಿಶ್ರುತಿಯ ಅಭಿಪ್ರಾಯ ಹೀಗಿದೆ - ಲೋಕದೃಷ್ಟಿಯಿಂದ ವಿರುದ್ಧವಾದ ಧರ್ಮಗಳು ಪ್ರಮಾಣಗಳಿಂದ ಪರಮಾತ್ಮನಲ್ಲಿ ಅವಿರುದ್ಧವಾಗಿರುತ್ತದೆ ಎಂದು. ಈ ಶ್ರುತಿಯಲ್ಲಿ 'ಅಮನುಃ' ಎಂಬ ಪದಕ್ಕೆ ಪೂರ್ಣವಾಗಿ ಮನನ ಮಾಡಲು ಸಾಧ್ಯವಿಲ್ಲ ಎಂದರ್ಥ. 'ಅವಾಕ್' ಎಂಬ ಪದಕ್ಕೆ ಪೂರ್ಣವಾಗಿ ಹೇಳಲು ಸಾಧ್ಯವಿಲ್ಲದವನು ಎಂದರ್ಥ 'ಅನಿಂದ್ರಃ' ಎಂಬ ಪದಕ್ಕೆ ಮತ್ತೊಬ್ಬ ಸ್ವಾಮಿ ಇಲ್ಲದವನು ಎಂದರ್ಥ. 'ಅಪ್ರವೃತ್ತಿಃ' ಎಂಬ ಪದಕ್ಕೆ ಇವನಿಗೆ ಮತ್ತೊಬ್ಬ ಪ್ರವರ್ತಕ ಇಲ್ಲ ಎಂದರ್ಥ. ಶಬ್ದೈಕಸಮಧಿಗಮ್ಯನಾದವನಲ್ಲಿ ಯುಕ್ತಿವಿರೋಧವಿಲ್ಲ ಎಂಬ ವಿಷಯಕ್ಕೆ ಸ್ಮೃತಿಸಮ್ಮತಿಯನ್ನು 'ಯತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿವರಣೆ - 'ಯೋऽಸೌ' ಎಂಬ ಶ್ರುತಿಯಲ್ಲಿ 'ಅಮನುಃ' ಎಂಬುದಕ್ಕೆ 'ನ ವಿದ್ಯತೇ ಮಂತಾ ಯಸ್ಯ ಸಃ' ಎಂಬ ವ್ಯುತ್ಪತ್ತಿಯಿಂದ ಪೂರ್ಣವಾಗಿ ಮನನ ಮಾಡಲು ಸಾಧ್ಯವಿಲ್ಲದವನು ಎಂದರ್ಥ. 'ಅವಾಕ್' ಎಂಬ ಪದಕ್ಕೆ 'ನ ವಿದ್ಯತೇ ವಕ್ತಾ ಯಸ್ಯ ಸಃ ಅವಾಕ್' ಎಂಬ ವಿಗ್ರಹವನ್ನು 'ಅನಿಂದ್ರಃ' ಎಂಬ ಪದಕ್ಕೆ 'ನ ವಿಂದ್ಯತೇ ಇಂದ್ರಃ ಯಸ್ಯ ಸಃ' ಎಂಬ ವಿಗ್ರಹವನ್ನು, 'ಅಪ್ರವೃತ್ತಿಃ' ಎಂಬುದಕ್ಕೆ 'ನ ವಿದ್ಯತೇ ಪ್ರವೃತ್ತಿಃ, ಯಸ್ಯ ಸಃ' ಎಂಬ ವಿಗ್ರಹವನ್ನು ವಿವಕ್ಷಿಸಿ ಯಾರಿಂದಲೂ ಪೂರ್ಣವಾಗಿ ಹೇಳಿಸಿಕೊಳ್ಳಲು ಅನರ್ಹನಾದವನು, ಮತ್ತೊಬ್ಬ ಸ್ವಾಮಿ ಇಲ್ಲದವನು, ಮತ್ತೊಬ್ಬ ಪ್ರವರ್ತಕನಿಲ್ಲದವನು ಎಂಬರ್ಥವನ್ನು ವಿವಕ್ಷಿಸಬೇಕು. (ವಾಕ್ಯಾರ್ಥಮುಕ್ತಾವಳಿ)

ಅಣುತ್ವ ಮಹತ್ವಗಳು ಒಂದೇ ವಸ್ತುವಿನಲ್ಲಿ ಲೋಕದೃಷ್ಟಿಯಿಂದ ಸಿದ್ಧವಾಗಿವೆ. ಆದರೆ 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ವೇದವಾಕ್ಯವು ಹೇಳುವಂತೆ ಪರಮಾತ್ಮನಲ್ಲಿ ಅಣುತ್ವ ಮಹತ್ವಗಳೆರಡು ವಿರುದ್ಧವಾಗಿವೆ. ಹೀಗೆ ಉಳಿದದ್ದನ್ನು ಕೂಡ ತಿಳಿಯಬೇಕು. (ಗುರ್ವರ್ಥದೀಪಿಕಾ)

## ಬ್ರಹ್ಮಸೂತ್ರ

### सूत्रम् – आत्मनि चैवं विचित्राश्च हि ।।

ಈಶ್ವರನಲ್ಲಿ 'ಅಘಟಿತಘಟನಾ' ಎಂಬ ಶಕ್ತಿ ಇರುವುದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ. 'ವಿಚಿತ್ರಶಕ್ತಿಃ ಪುರುಷಃ ಪುರಾಣೋ' ಇತ್ಯಾದಿ ಶ್ರುತಿಗಳು ವಿಚಿತ್ರವಾದ ಶಕ್ತಿಯನ್ನು ಈಶ್ವರನಲ್ಲಿ ಹೇಳುತ್ತಿವೆ.

## ಸೂತ್ರದೀಪಿಕಾ

**सूत्रदीपिका – आत्मनि चैवं विचित्राश्च हि ।।** आद्यश्चशब्दोऽवधारणे । द्वितीयः समुच्चये । हिशब्दः प्रसिद्धौः । तथा च हिशब्दात् । आत्मनि ईश्वर एव । एवं सकलयुक्तिविरोधनिरासकाः विचित्राः अचिन्त्याः 'विचित्रशक्तिः' इति

श्रुतिप्रसिद्धाः शक्तयः सन्ति न जीवे । तस्माच्च जीवपक्ष एव युक्तिविरोधः नेश्वरपक्ष इत्यर्थः ।।२।।

ಅರ್ಥ -- ಮೊದಲನೆಯ 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಎರಡನೆಯ 'ಚ' ಶಬ್ದವು ಸಮುಚ್ಚಯಾರ್ಥದಲ್ಲಿದೆ. 'ಹಿ' ಶಬ್ದಕ್ಕೆ ಪ್ರಸಿದ್ಧಿ ಎಂದರ್ಥ. ಆತ್ಮನಿ ಚ = ಈಶ್ವರನಲ್ಲೇ, ಏವಂ = ಸಕಲ ಯುಕ್ತಿಗಳ ವಿರೋಧಕ್ಕೆ ಪರಿಹಾರಕವಾದ ವಿಚಿತ್ರಾಶ್ಚ ಹಿ = ಅಚಿಂತ್ಯವಾದ ಅಘಟಿತಘಟನಾ ಶಕ್ತಿಯನ್ನು ಹೇಳುವ 'ವಿಚಿತ್ರ ಶಕ್ತಿಃ ಪುರುಷಃ ಪುರಾಣೋ' ಎಂಬ ಶ್ರುತಿಪ್ರಸಿದ್ಧಿ ಇರುತ್ತದೆ. ಜೀವನಲ್ಲಿ ಇಂತಹ ಪುರುಷ ಪ್ರಸಿದ್ಧಿಯನ್ನು ಹೇಳಲಾಗದು. ಆದ್ದರಿಂದ ಜೀವ ಕರ್ತೃತ್ವಪಕ್ಷದಲ್ಲೇ ಯುಕ್ತಿವಿರೋಧ ಬರುತ್ತದೆ ಹೊರತು ಈಶ್ವರಕರ್ತೃತ್ವ ಪಕ್ಷದಲ್ಲಿ ಯುಕ್ತಿವಿರೋಧ ಬರುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

भाष्यम् –।। आत्मनि चैवं विचित्राश्च हि ।।२।।

**परमात्मनो विचित्राश्च शक्तयस्सन्ति नान्येषाम् ।**

ಅನುವಾದ - ಪರಮಾತ್ಮನಲ್ಲಿ ವಿಚಿತ್ರವಾದ ಶಕ್ತಿಯಿದೆ ಬೇರೆಯವರಲ್ಲಿ ಇಂಥ ಶಕ್ತಿ ಇರುವುದಿಲ್ಲ.

ಪ್ರತಿಪದಾರ್ಥ -- ಜೀವಪಕ್ಷದಲ್ಲಿ ಮಾತ್ರ ಯುಕ್ತಿವಿರೋಧಕ್ಕೆ ಅವಕಾಶ. ಪರಮಾತ್ಮನ ಕರ್ತೃತ್ವಪಕ್ಷದಲ್ಲಿ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ ಎಂಬುದನ್ನು ಪ್ರತಿಪಾದನೆ ಮಾಡಲು ಮತ್ತೊಂದು ಯುಕ್ತಿಯನ್ನು ಹೇಳಲು ಮುಂದಿನ ಸೂತ್ರ ಹೊರಟಿದೆ. ಪರಮಾತ್ಮನಃ ಶಕ್ತಯಃ = ಪರಮಾತ್ಮನ ಕರ್ತೃತ್ವಾದಿ ಶಕ್ತಿಗಳು, ವಿಚಿತ್ರಾಶ್ಚ = ಆಶ್ಚರ್ಯಕರವಾಗಿ ಸಂತಿ = ಇರುತ್ತವೆ. ಅನ್ಯೇಷಾಮ್ = ಬೇರೆಯವರಲ್ಲಿ, ನ = ಇರುವುದಿಲ್ಲ.

भाष्यम् –

**'विचित्रशक्तिः पुरुषः पुराणो न चान्येषां शक्तयस्तादृशाः स्युः ।**
**एको वशी सर्वभूतान्तरात्मा सर्वान् देवानेक एवानुविष्टः ।।'**
**इति श्वेताश्वतरश्रुतिः ।।२।।**

ಅನುವಾದ - ಅನಾದಿನಿತ್ಯನಾದ ಪರಮಾತ್ಮನಲ್ಲಿ ಅತ್ಯಾಶ್ಚರ್ಯಕರವಾದ ಶಕ್ತಿಯಿದೆ. ಬೇರೆ ಯಾರಲ್ಲಿಯೂ ಸಹ ಇಂಥ ಶಕ್ತಿ ಇರುವುದಿಲ್ಲ. ಪ್ರತಿಯೊಬ್ಬರನ್ನು ತನ್ನ ವಶದಲ್ಲಿ ಇಟ್ಟು ಕೊಂಡಿರುತ್ತಾನೆ. ಎಲ್ಲ ಚೇತನರ ಅಂತರ್ಯಾಮಿಯಾಗಿದ್ದಾನೆ. ಸಕಲದೇವತೆಗಳಲ್ಲಿಯೂ ತಾನೊಬ್ಬನೇ ಪ್ರವೇಶ ಮಾಡಿದ್ದಾನೆ. ಹೀಗೆ ಶ್ವೇತಾಶ್ವತರ ಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಈಶ್ವರನಲ್ಲಿ ಮಾತ್ರ ವಿಚಿತ್ರಶಕ್ತಿಯಿರುತ್ತದೆ ಬೇರೆಯವರಲ್ಲಿ ಇರುವುದಿಲ್ಲ. ಈ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಹೇಳುತ್ತಿದ್ದಾರೆ - ಪುರಾಣಃ = ಅನಾದಿನಿತ್ಯನಾದ, ಪುರುಷಃ = ಪುರುಷನಾಮಕನಾದ ಪರಮಾತ್ಮನು, ವಿಚಿತ್ರಶಕ್ತಿಃ = ಆಶ್ಚರ್ಯ- ಶಕ್ತಿಯುಳ್ಳವನ್ನು, ಅನ್ಯೇಷಾಂ = ಬೇರೆಯವರಲ್ಲಿ, ತಾದೃಶಾಃ = ಅಂಥ, ಶಕ್ತಯಃ = ಶಕ್ತಿಗಳು, ನಸ್ಯುಃ = ಇರುವುದಿಲ್ಲ. ಸರ್ವಭೂತಾಂತರಾತ್ಮಾ = ಸಕಲ ಜೀವ ಜಡಪದಾರ್ಥಗಳಲ್ಲಿ ಅಂತರ್ಯಾಮಿಯಾಗಿ ಇರುವ, ಏಕಃ = ತಾನೊಬ್ಬನೇ, ವಶೀ = ಎಲ್ಲವನ್ನು ವಶದಲ್ಲಿ ಇಟ್ಟುಕೊಂಡಿದ್ದಾನೆ. ಸರ್ವಾನ್ ದೇವಾನ್ = ಎಲ್ಲಾ ದೇವತೆಗಳಲ್ಲಿ, ಏಕಏವ = ತಾನೊಬ್ಬನೇ, ಅನುವಿಷ್ಟಃ = ಪ್ರವೇಶವನ್ನು ಮಾಡಿರುತ್ತಾನೆ. ಇತಿ = ಹೀಗೆ, ಶ್ವೇತಾಶ್ವತರಶ್ರುತಿಃ = ಶ್ವೇತಾಶ್ವತರಶ್ರುತಿಯು ಹೇಳುತ್ತಿದೆ.

## ತತ್ವಪ್ರಕಾಶಿಕಾ

**तत्वप्रकाशिका –**

**जीव एव युक्तिविरोघो नेश्वर इत्येतमर्थं युक्त्यन्तरेण प्रतिपादयत्सूत्रमुपन्यस्य व्याचष्टे – आत्मनीति । युक्तिविराघनिरासक-विचित्रशक्तिसद्भावादीश्वरे न युक्तिविरेघः । तदभावज्जीव एव चासावित्यर्थः।**

ಜೀವನಲ್ಲಿ ಮಾತ್ರ ಯುಕ್ತಿವಿರೋಧವು ಬರುತ್ತದೆ. ಈಶ್ವರನಲ್ಲಿ ಯುಕ್ತಿವಿರೋಧವು ಬರುವುದಿಲ್ಲ ಎಂಬುದನ್ನು ಮತ್ತೊಂದು ಯುಕ್ತಿಯಿಂದ ಪ್ರತಿಪಾದನೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡಲು 'ಆತ್ಮನಿ' ಇತ್ಯಾದಿ ಭಾಷ್ಯ ವಾಕ್ಯವು ಹೊರಟಿದೆ.

ಯುಕ್ತಿವಿರೋಧ ಪರಿಹಾರಕವಾದ ವಿಚಿತ್ರಶಕ್ತಿಯು ಇರುವುದರಿಂದ ಕೃತ್ಸ್ನಪ್ರಸಕ್ತಿ ಇತ್ಯಾದಿ ಯುಕ್ತಿವಿರೋಧವನ್ನು ಹೇಳಬಾರದು. ಜೀವನಲ್ಲಿ ಇಂಥ ವಿಚಿತ್ರಶಕ್ತಿ ಇಲ್ಲದ ಕಾರಣ ಕೃತ್ಸ್ನಪ್ರಸಕ್ತ್ಯಾದಿ ವಿರೋಧಗಳು ಪ್ರಾಪ್ತವಾಗುತ್ತವೆ ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ - ಹಿಂದಿನ ಸೂತ್ರದಲ್ಲಿ ಪ್ರಮಾಣದ ಮೂಲಕ ವಿರೋಧ ಬರುವುದಿಲ್ಲ ಎಂದು ಸಮರ್ಥನೆ ಮಾಡಿದರು. ಇದು ಕೇವಲ ಜ್ಞಾಪಕವಾಗುತ್ತದೆ ಹೊರತು ಅವಿರೋಧಕ್ಕೆ ಕಾರಕವಲ್ಲ. ಆದ್ದರಿಂದ ಈ ಸೂತ್ರದಲ್ಲಿ ವಿರೋಧಪರಿಹಾರಕವಾದ ಅಘಟಿತಘಟನಾ- ಶಕ್ತಿಯನ್ನು ಸಮರ್ಥನೆ ಮಾಡುತ್ತಿದ್ದಾರೆ. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – आद्यश्चशब्द एवार्थः । तेन नान्येषामिति सिद्ध्यति । तदुक्तम् । 'अचिन्त्याः खलु ये भावा न तांस्तर्केण योजयेत्' । इति ईवरस्यैव**

**विचित्रशक्तित्वं नान्येषामित्येतत्कुत इत्यतो हीति सूचितां श्रुतिं दर्शयति – विचित्रेति ।। २९ ।।**

ಸೂತ್ರದಲ್ಲಿರುವ ಮೊದಲನೆಯ 'ಚ' ಶಬ್ದಕ್ಕೆ ಏವ ಎಂದರ್ಥ. ಇದರಿಂದ ಪರಮಾತ್ಮನನ್ನು ಬಿಟ್ಟು ಬೇರೆಯವರಲ್ಲಿ ಇಂಥ ವಿಚಿತ್ರಶಕ್ತಿಯು ಇರುವುದಿಲ್ಲ ಎಂದು ತಿಳಿಯುತ್ತದೆ. ಇದನ್ನು 'ಅಚಿಂತ್ಯಾ ಖಲು ಯೇ ಭಾವಾಃ ನ ತಾಂ ತರ್ಕೇಣ ಯೋಜಯೇತ್' 'ಚಿಂತನೆಗೆ ಅನರ್ಹವಾದ ಪದಾರ್ಥಗಳನ್ನು ಶುಷ್ಕತರ್ಕದಿಂದ ಯೋಜನೆ ಮಾಡಬಾರದು' ಎಂದು ಪುರಾಣದ ವಚನವು ತಿಳಿಸುತ್ತಿದೆ. ಹೀಗೆ ಈಶ್ವರನಲ್ಲಿಯೇ ವಿಚಿತ್ರಶಕ್ತಿಯು ಸಿದ್ಧವಾಗುತ್ತದೆ. ಉಳಿದವರಲ್ಲಿ ಸಿದ್ಧವಾಗುವುದಿಲ್ಲ ಎಂಬುದನ್ನು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ಉತ್ತರಿಸಲು ಸೂತ್ರದಲ್ಲಿ 'ಹಿ' ಎಂಬ ಶಬ್ದವನ್ನು ಹೇಳಿದ್ದಾರೆ. ಶ್ವೇತಾಶ್ವತರೋಪನಿಷತ್ತನ್ನು 'ಹಿ' ಶಬ್ದವು ಉಲ್ಲೇಖ ಮಾಡುತ್ತಿದೆ. ಇದನ್ನು ಭಾಷ್ಯದಲ್ಲಿ 'ವಿಚಿತ್ರ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿವರಣೆ - 'ವಿಚಿತ್ರಾಶ್ಚ ಹಿ' ಎಂಬಲ್ಲಿರುವ 'ಚ' ಶಬ್ದದ ಅರ್ಥವನ್ನು 'ಯುಕ್ತ್ಯಂತರೇಣ' ಎಂಬುದರಿಂದ ಹೇಳಿದ್ದಾರೆ. 'ಚೈವಂ' ಎಂಬಲ್ಲಿರುವ 'ಏವಂ' ಎಂಬ ಶಬ್ದದ ಅರ್ಥವನ್ನು 'ಯುಕ್ತಿವಿರೋಧನಿರಾಸಕ' ಇತ್ಯಾದಿಯಾಗಿ ಹೇಳಿದ್ದಾರೆ. 'ಆತ್ಮನಿ ಚ' ಎಂಬಲ್ಲಿರುವ ಚ ಶಬ್ದದ ಅರ್ಥವನ್ನು 'ಆದ್ಯಶ್ಚ ಶಬ್ದಃ' ಎಂಬುದರಿಂದ ಹೇಳಿದ್ದಾರೆ. ಎರಡನೆಯ 'ಚ' ಶಬ್ದವು ಸಮುಚ್ಚಯಾರ್ಥದಲ್ಲಿದೆ. ಮೊದಲನೆಯ ಚ ಶಬ್ದವು ಪರಮಾತ್ಮನಲ್ಲಿ ಮಾತ್ರ ವಿಚಿತ್ರಶಕ್ತಿಯಿದೆ ಎಂಬ ಏವಕಾರಾರ್ಥದಲ್ಲಿದೆ. ಹೀಗೆ ಸೂತ್ರದ ಅರ್ಥವನ್ನು ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದನ್ನು ಗಮನಿಸಬೇಕು.

## ಬ್ರಹ್ಮಸೂತ್ರ

**सूत्रम् – स्वपक्षदोषाच ।।**

ಜೀವಕರ್ತೃತ್ವಪಕ್ಷದಲ್ಲಿ ಕೃತ್ಸ್ನಪ್ರಸಕ್ತ್ಯಾದಿ ದೋಷಗಳು ಬಂದೇ ಬರುತ್ತವೆ. ಏಕೆಂದರೆ ಅವನಲ್ಲಿ ಯಾವುದೇ ಅಚಿಂತ್ಯವಾದ ಶಕ್ತಿಗಳು ಇರುವುದಿಲ್ಲ.

## ಸೂತ್ರದೀಪಿಕಾ

**सूत्रदीपिका – स्वपक्षादोषाच ।।** चेऽवधारणे । तथाच 'ये दोषाः' इति श्रुतौ जीवपक्षे युक्तिविरोधस्य दोषस्यैवोक्तेः नासावदोषतां नेतव्यः । किन्तु ईश्वरपक्ष एव अदोषतां नेतव्य इत्यर्थः ।।३।।

ಅರ್ಥ -- 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಆದ್ದರಿಂದ 'ಯೇ ದೋಷಾಃ ಇತರತ್ರಾಪಿ ತೇ ಗುಣಾಃ ಪರಮೇ ಮತಃ। ನ ದೋಷಃ ಪರಮೇ ಕಶ್ಚಿದ್ಗುಣಾ ಏವ ನಿರಂತರಾಃ ।।' ಎಂಬ ಶ್ರುತಿಯಲ್ಲಿ ಸ್ವಪಕ್ಷದೋಷಾತ್

= ಯುಕ್ತಿವಿರೋಧ ದೋಷವನ್ನು ಜೀವಕರ್ತೃತ್ವ ಪಕ್ಷದಲ್ಲಿ ಹೇಳಲಾಗಿದೆ. ಆದ್ದರಿಂದ ಈಶ್ವರಕರ್ತೃತ್ವ ಪಕ್ಷದಂತೆ ದೋಷವಿಲ್ಲವೆಂದು ಹೇಳಬಾರದು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। स्वपक्षदोषाच्च ।।३।।**

**ये दोषा इतरत्रापि ते गुणाः परमे मताः ।**
**न दोषः परमे कश्चिद् गुणा एव निरन्तराः ।।**
**इति वचनाज्जीवपक्ष एव दोषो न परपक्षे ।**

ಅನುವಾದ - ಜೀವರ ವಿಷಯದಲ್ಲಿ ಯಾವುದು ದೋಷವಾಗುತ್ತದೋ ಅದು ಪರಮಾತ್ಮನ ವಿಷಯದಲ್ಲಿ ಗುಣವೇ ಆಗುತ್ತದೆ. ಪರಮಾತ್ಮನಲ್ಲಿ ಯಾವುದು ಕೂಡ ದೋಷವೇ ಇಲ್ಲ. ಗುಣಗಳು ಮಾತ್ರ ಇವೆ. ಮತ್ತು ಆ ಗುಣಗಳೆಲ್ಲವೂ ಅವನಿಂದ ಅಭಿನ್ನವಾಗಿವೆ. ಹೀಗೆ ಶ್ರುತಿಯು ಹೇಳುತ್ತಿರುವುದರಿಂದ ಜೀವಪಕ್ಷದಲ್ಲಿ ಮಾತ್ರ ದೋಷವನ್ನು ತಿಳಿಯಬೇಕು. ಪರಮಾತ್ಮನ ಪಕ್ಷದಲ್ಲಿ ಯಾವುದೇ ದೋಷವನ್ನು ತಿಳಿಯಬಾರದು.

ಪ್ರತಿಪದಾರ್ಥ -- ಪರಮಾತ್ಮನಲ್ಲಿ ಶಬ್ದೈಕಸಮಧಿಗಮ್ಯತ್ವವು ಇರುವುದರಿಂದ ಅತ್ಯಾಶ್ಚರ್ಯಕರಶಕ್ತಿಗೆ ಯುಕ್ತಿವಿರೋಧವನ್ನು ಹೇಳಬಾರದೆಂದು ಸಮರ್ಥನೆ ಮಾಡಿದಿರಿ. ಇದರಂತೆ ಜೀವನಲ್ಲಿಯೂ ಏಕೆ ಹೇಳಬಾರದು? ಚೇತನತ್ವಲಿಂಗವು ಸಮಾನವಾಗಿರುವುದರಿಂದ ಯುಕ್ತಿವಿರೋಧಕ್ಕೆ ಅಲ್ಲಿಯೂ ಅವಕಾಶವಿಲ್ಲವಷ್ಟೆ ? ಈ ಆಶಂಕೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟದೆ. ಇತರತ್ರ = ಜೀವರಲ್ಲಿ, ಯೇ ದೋಷಾः = ಯಾವ ದೋಷಗಳು ಇವೆಯೋ, ಪರಮೇ = ಪರಮಾತ್ಮನಲ್ಲಿ, ತೇ = ಅದೇ ದೋಷಗಳು ಗುಣಾः = ಗುಣಗಳೆಂದು, ಮತಾः = ಶ್ರುತಿಸಮ್ಮತವಾಗಿವೆ. ಕಶ್ಚಿತ್ = ಯಾವುದೇ ದೋಷವು, ನ = ಇರುವುದಿಲ್ಲ. ನಿರಂತರಾः = ಅವಿಚ್ಛಿನ್ನವಾಗಿ, ಗುಣಾ ಏವ = ಗುಣಗಳೇ ಇರುತ್ತವೆ. ಇತಿ ವಚನಾತ್ = ಹೀಗೆ ಶ್ರುತಿಪ್ರಮಾಣವಿರುವುದರಿಂದ, ಜೀವಪಕ್ಷೇ ಏವ = ಜೀವನ ಕರ್ತೃತ್ವಪಕ್ಷದಲ್ಲಿ ಮಾತ್ರ, ದೋಷः = ದೋಷವು ಪ್ರಾಪ್ತವಾಗುತ್ತದೆ. ಪರಪಕ್ಷೇ = ಪರಮಾತ್ಮನು ಕರ್ತೃವಾಗಿದ್ದಾನೆಂಬ ಪಕ್ಷದಲ್ಲಿ, ನ = ಯಾವುದೇ ದೋಷಗಳು ಇರುವುದಿಲ್ಲ.

**ब्रह्मसूत्रभाष्यम् – 'अथ यस्सदोषः साञ्जनः सजनिः स जीवो यः स निर्दोषो निष्फलः सगुणः परः परमात्मा' इति काषायणश्रुतिः ।।३।।**

ಅನುವಾದ - ಯಾವ ವ್ಯಕ್ತಿಯಲ್ಲಿ ದೋಷಗಳಿವೆಯೋ ಮತ್ತು ಪುಣ್ಯಪಾಪಗಳ ಅನುಭವ ವಿದೆಯೋ ಅವನೇ ಜೀವನೆಂದು ಕರೆಸಿಕೊಳ್ಳುತ್ತಾನೆ. ಯಾರು ನಿರ್ದೋಷನೋ ಭಿನ್ನವಾದ ಅಂಶಗಳಿಲ್ಲದವನೋ ಗುಣಪರಿಪೂರ್ಣನೋ ಅವನೇ ಸರ್ವೋತ್ತಮನಾದ ಪರಮಾತ್ಮನೆಂದು ಕರೆಸಿಕೊಳ್ಳುತ್ತಾನೆ.

ಶ್ರುತೇಸ್ತುಶಬ್ದಮೂಲತ್ವಾಧಿಕರಣ (೨-೧-೮)

ಪ್ರತಿಪದಾರ್ಥ -- ಈಶ್ವರನಂತೆ ಜೀವನಲ್ಲಿಯೂ ನಿರ್ದೋಷತ್ವ ಇರುವುದರಿಂದ ಜೀವನಲ್ಲಿ ಕಾಣಸುತ್ತಿರವ ದೋಷವನ್ನು ಗುಣರೂಪದಲ್ಲಿಯೇ ಏಕೆ ವ್ಯಾಖ್ಯಾನ ಮಾಡಬಾರದು ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅಥ = ಪ್ರಕರಣದ ಅನಂತರ, ಯಃ = ಯಾವನು, ಸದೋಷಃ = ದೋಷವಿಶಿಷ್ಟನೋ, ಸಾಂಜನಃ = ಪುಣ್ಯಪಾಪಗಳ ಲೇಪವುಳ್ಳವನೋ ಅಜ್ಞಾನವುಳ್ಳವನೋ, ಸಜನಿಃ = ಹುಟ್ಟುವಿಕೆ- ಯುಳ್ಳವನೋ, ಸಃ = ಅವನು, ಜೀವಃ = ಜೀವಪದವಾಚ್ಯನು, ಯಃ = ಯಾವನು, ನಿರ್ದೋಷಃ = ದೋಷದೂರನು, ನಿಷ್ಕಲಃ = ಭಿನ್ನವಾದ ಅಂಶದಿಂದ ರಹಿತನೂ, ಸಗುಣಃ = ಜ್ಞಾನಾನಂದಾದಿಗುಣಗಳಿಂದ ಪರಿಪೂರ್ಣನೂ ಆಗಿರುವನೋ, ಸಃ = ಅವನೇ ಪರಮಾತ್ಮನೆಂದು ಕರೆಸಿಕೊಳ್ಳುವನು, ಇತಿ = ಹೀಗೆ, ಕಾಷಾಯಣಶ್ರುತಿಃ = ಕಾಷಾಯಣಶ್ರುತಿಯು ಹೇಳುತ್ತಿದೆ.

## ತತ್ವಪ್ರಕಾಶಿಕಾ

**तत्वप्रकाशिका – ननु यथा शब्दैकसमधिगम्यत्वादिना विष्णोर्युक्तिविरोधोऽप्यविरोधतां नीयते तथा चेतनत्वादिना जीवेऽपि किं न नीयते । अन्यथेश्वरेऽपि न नेतव्य इत्याशङ्कां परिहरत्सूत्रं पठित्वा व्याचष्टे – स्वपक्षेति।।**

ಯಾವ ರೀತಿಯಾಗಿ ಶಬ್ದೈಕಸಮಧಿಗಮ್ಯತ್ವವಿರುವುದರಿಂದ ವಿಷ್ಣುವಿನಲ್ಲಿ ವಿರುದ್ಧವಾದ ಯುಕ್ತಿಯು ಅವಿರುದ್ಧವಾಗುತ್ತದೋ, ಅದರಂತೆ ಜೀವನಲ್ಲೂ ಕೂಡ ಚೇತನತ್ವ ಇರುವುದರಿಂದ ವಿರುದ್ಧವಾದದ್ದು ಅವಿರುದ್ಧ ಏಕಾಗಬಾರದು? ಜೀವನಲ್ಲಿ ಹಾಗೆ ಒಪ್ಪದಿದ್ದರೆ ಈಶ್ವರನಲ್ಲಿಯೂ ಕೂಡ ವಿರುದ್ಧವಾದದ್ದನ್ನು ಅವಿರುದ್ಧವೆಂದು ಹೇಳುವುದು ಬೇಡ. ಈ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸಿ 'ಸ್ವಪಕ್ಷದೋಷಾಚ್ಚ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಶಬ್ದೈಕಸಮಧಿಗಮ್ಯತ್ವಾದಿನಾ' ಎಂಬಲ್ಲಿರುವ ಆದಿಪದದಿಂದ ವಿಚಿತ್ರಶಕ್ತಿಮತ್ವವನ್ನು ವಿವಕ್ಷಿಸಬೇಕು. 'ಚೇತನತ್ವಾದಿನಾ' ಎಂಬಲ್ಲಿರುವ ಆದಿಪದದಿಂದ ಕರ್ತೃತ್ವ ಮೊದಲಾದ ಧರ್ಮಗಳನ್ನು ವಿವಕ್ಷಿಸಬೇಕು.

**तत्वप्रकाशिका – जीवपक्षे युक्तिविरोधो दोष एव न त्वदोषतां नेतव्यः किं तु परमेश्वरपक्ष एव । कुतः ? 'ये दोषाः' इति वचने सयुक्तिकमुक्तत्वादिति भावः ।**

ಜೀವಪಕ್ಷದಲ್ಲಿ ಯುಕ್ತಿವಿರೋಧವು ದೋಷವೇ ಆಗುತ್ತದೆ. ಅದೋಷವೆಂದು ಕೂಡಿಸಲು ಸಾಧ್ಯವಾಗುವುದಿಲ್ಲ. ಪರಮಾತ್ಮನ ಪಕ್ಷದಲ್ಲಿ ಮಾತ್ರ ಯುಕ್ತಿವಿರೋಧವು ಅದೋಷ ಎನಿಸುತ್ತದೆ. ಏಕೆಂದರೆ 'ಯೇ ದೋಷಾಃ' ಎಂಬ ಮಾತಿನಿಂದ ಯುಕ್ತಿಸಹಿತವಾಗಿ ಇದನ್ನು ಸಮರ್ಥನೆ ಮಾಡಲಾಗಿದೆಯೆಂಬುದು ಸೂತ್ರದ ಅಭಿಪ್ರಾಯ.

ವಿವರಣೆ - 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರದಲ್ಲಿ ಸ್ವ ಶಬ್ದಕ್ಕೆ ಜೀವ ಎಂದರ್ಥ. 'ಚ' ಶಬ್ದಕ್ಕೆ ಸ್ವಪಕ್ಷ ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ಆಗ ಜೀವಪಕ್ಷದಲ್ಲಿ ಮಾತ್ರ ಯುಕ್ತಿವಿರೋಧವು ದೋಷವಾಗುತ್ತದೆ ಎಂಬರ್ಥವು ದೊರೆಯುತ್ತದೆ. 'ಚ' ಶಬ್ದಕ್ಕೆ ಅವಧಾರಣಾರ್ಥವನ್ನು ವಿವಕ್ಷಿಸಬೇಕು. ಇದನ್ನು 'ಜೀವಪಕ್ಷೇ' ಇತ್ಯಾದಿ ಟೀಕಾವಾಕ್ಯದಿಂದ ತಿಳಿಸಿದ್ದಾರೆ.

**तत्वप्रकाशिका – दोषा भगवदितरत्र प्रतीताश्चेत्तर्हि ते दोषा एव, न तु कयाचन विधया अदोषतां नेतव्याः । तत्र दोषाणां सम्भवेन कल्पकाभावात् । त एव चेद्विष्णौ प्रतीयन्ते तर्हि तेऽचिन्त्यशक्त्यादिना गुणा एव कल्पनीया न दोषाः।**

ದೋಷಗಳು ಭಗವಂತನನ್ನು ಬಿಟ್ಟು ಬೇರೆ ವಸ್ತುಗಳಲ್ಲಿ ಪ್ರತೀತವಾದರೆ ಅದು ದೋಷವೆಂದೇ ಪರಿಗಣಿಸಬೇಕು. ಯಾವುದೇ ವಿಧದಿಂದಲೂ ಅವುಗಳನ್ನು ದೋಷವಲ್ಲವೆಂದು ಕೂಡಿಸಬಾರದು. ಏಕೆಂದರೆ ಭಗವಂತನನ್ನು ಬಿಟ್ಟು ಬೇರೆ ಕಡೆ ದೋಷಗಳು ಇರುವುದರಿಂದ ಅದೋಷವೆಂದು ಹೇಳಲು ಯಾವುದೇ ಕಲ್ಪಕಗಳು ಇರುವುದಿಲ್ಲ. ಆದರೆ ಅದೇ ದೋಷಗಳು ವಿಷ್ಣುವಿನಲ್ಲಿ ಪ್ರತೀತವಾದರೆ ಅವುಗಳನ್ನು ಅಚಿಂತ್ಯಶಕ್ತಿ ಮೊದಲಾದ ಯುಕ್ತಿಗಳಿಂದ ಗುಣಗಳೆಂದೇ ಕಲ್ಪನೆ ಮಾಡಬೇಕು. ದೋಷವಲ್ಲವೆಂದು ಕಲ್ಪನೆ ಮಾಡಬಾರದು.

**तत्वप्रकाशिका – भगवतो निर्दोषनिर्भेदगुणतया श्रुतिसिद्धत्वेन कल्पकसद्भावादिति वचनार्थः । ईश्वरवज्जीवस्यापि निर्दोषत्वात्तत्र प्रतीतदोषोऽन्यथैव नेतव्य इत्यत आह – अथेति ।। साञ्जनः पुण्यपापादिलेपयुक्तः । चशब्द एवार्थोऽतो न परपक्ष इत्याह ।।**

ಭಗವಂತನು ನಿರ್ದುಷ್ಟನಾಗಿದ್ದಾನೆ. ಭೇದವಿಲ್ಲದ ಗುಣಗಳುಳ್ಳವನಾಗಿದ್ದಾನೆಂಬುದಾಗಿ ಶ್ರುತಿಗಳು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ನಿರ್ದೋಷ ಹಾಗೂ ನಿರ್ಭೇದಗುಣವತ್ವವು ದೋಷಗಳಿಲ್ಲವೆನ್ನಲು ಕಲ್ಪಕವಾಗಿವೆ. ಇದು ಭಾಷ್ಯದಲ್ಲಿ ಉದಾಹರಿಸಿದ ವಚನದ ಅಭಿಪ್ರಾಯ.

ಈಶ್ವರನಂತೆ ಜೀವನಲ್ಲೂ ಕೂಡ ನಿರ್ದೋಷತ್ವವಿದೆ. ಆದ್ದರಿಂದ ಜೀವನಲ್ಲಿ ಪ್ರತೀತವಾದ ದೋಷವನ್ನು ಈಶ್ವರನಂತೆ ಬೇರೆ ರೀತಿಯಲ್ಲೇ ಕೂಡಿಸಬೇಕಲ್ಲವೆ? ಎಂಬ ಪ್ರಶ್ನೆಗೆ 'ಅಥ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಶ್ರುತಿಯಲ್ಲಿರುವ ಸಾಂಜನಃ ಎಂಬ ಪದಕ್ಕೆ ಪುಣ್ಯಪಾಪಾದಿಲೇಪಗಳು ಇಲ್ಲದವನೆಂದು ಅರ್ಥ. ಸೂತ್ರದಲ್ಲಿರುವ 'ಚ' ಶಬ್ದವು ಏವಕಾರಾರ್ಥದಲ್ಲಿದೆ. ಆದ್ದರಿಂದ ಪರಮಾತ್ಮನ ಪಕ್ಷದಲ್ಲಿ ಪುಣ್ಯಪಾಪಾದಿದೋಷಗಳು ಇಲ್ಲವೆಂದು ತಿಳಿಯಬೇಕು.

## ಬ್ರಹ್ಮಸೂತ್ರ

**सूत्रम् – सर्वोपेता च तद्दर्शनात् ।।**

ಪರಮಾತ್ಮನಿಗೆ ಸಾಮಾನ್ಯವಾಗಿ ವಿಚಿತ್ರಶಕ್ತಿಯಿದೆ ಎಂದಷ್ಟೆ ತಿಳಿಯಬಾರದು. ಸರ್ವವಿಷಯಕವಾದ, ಸಾರ್ವಕಾಲಿಕವಾದ ವಿಚಿತ್ರಶಕ್ತಿಯಿರುತ್ತದೆಂದು ತಿಳಿಯಬೇಕು.

## ಸೂತ್ರದೀಪಿಕಾ

**सूत्रदीपिका – सर्वोपेता च तद्दर्शनात् ।।** यतः परमात्माख्यदेवता न केवलं सामान्यतो विचित्रशक्तिमती । किन्तु **सर्वोपेता** सर्वविषयसार्वकालिकशक्तिमती च । कुतः? **तद्दर्शनात्** 'सर्वैर्युक्ता' इति तथा श्रुतेः । अतो नेश्वरे युक्तिविरोधः शङ्कनीयः इत्यर्थः ।।४।।

ಅರ್ಥ -- ಪರಮಾತ್ಮನೆಂಬ ದೇವತೆಗೆ ಸಾಮಾನ್ಯವಾಗಿ ವಿಚಿತ್ರಶಕ್ತಿಯಿರುತ್ತದೆ ಎಂದಷ್ಟೇ ತಿಳಿಯಬಾರದು. ಸರ್ವೋಪೇತಾ = ಸರ್ವವಿಷಯಕವಾದ, ಸಾರ್ವಕಾಲಿಕವಾದ ವಿಚಿತ್ರಶಕ್ತಿಯಿರುತ್ತದೆಂದು ಚ = ಕೂಡ ತಿಳಿಯಬೇಕು. ಏಕೆಂದರೆ 'ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ ಪರೇತಿ ಯಾಂ ಪ್ರಾಹುರಜಸ್ರಶಕ್ತಿಂ। ನಿತ್ಯಾನಂದಾ ನಿತ್ಯರೂಪಾಜರಾ ಚ ಯಾ ಶಾಶ್ವತಾತ್ಮೇತಿ ಚ ಯಾಂ ವದಂತಿ॥' ಎಂಬ ಶ್ರುತಿಯು ಪರಮಾತ್ಮನಲ್ಲಿರುವ ಶಕ್ತಿಗಳನ್ನು ಶಾಶ್ವತವಾದವೆಂದು ಪ್ರತಿಪಾದನೆ ಮಾಡುತ್ತಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। सर्वोपेता च तद्दर्शनात् ।।४।।**

**'सर्वैर्युक्ता शक्तिभिर्देवता सा परेति यां प्राहुरजस्रशक्तिम् ।**
**नित्यानन्दा नित्यरूपाऽजरा च या शाश्वतात्मेति च यां वदन्ति ।।'**

**इति चतुर्वेदशिखायाम् । अतो न केवलं विचित्रशक्तिः, किन्तु सर्वशक्तिरेव ।।४।।**

ಅನುವಾದ - ಸಕಲವಿಧವಾದ ಶಕ್ತಿಗಳಿಂದ ಯುಕ್ತನಾದ ಶ್ರೇಷ್ಠದೇವತೆಯಾದ ವ್ಯಕ್ತಿಯನ್ನು ಜ್ಞಾನಿಗಳು ನಿತ್ಯ ಶಕ್ತಿಯುಳ್ಳವನೆಂದು, ನಿತ್ಯವಾದ ಆನಂದಪೂರ್ಣನೆಂದು, ನಿತ್ಯವಾದ ಸ್ವರೂಪವುಳ್ಳವನೆಂದು,ವಾರ್ಧಕ್ಯದಿಂದರಹಿತನಾದವನು, ಶಾಶ್ವತವಾಗಿನಿಯಾಮಕನಾಗಿರುವನು ಎಂದು ಕರೆಯುತ್ತಾರೆ. ಹೀಗೆ ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ ಹೇಳಲಾಗಿದೆ. ಆದ್ದರಿಂದ

ಪರಮಾತ್ಮನಲ್ಲಿ ಕೇವಲ ವಿಚಿತ್ರಶಕ್ತಿಯಿರುವುದಷ್ಟೇ ಅಲ್ಲ, ಸಕಲವಿಧವಾದ ಶಕ್ತಿಗಳು ಇರುತ್ತವೆ. ಎಂದೂ ಯಾವ ಕ್ಷಣದಲ್ಲೂ ಅಂಥ ಆಶ್ಚರ್ಯಕರವಾದ ಶಕ್ತಿಯ ಲವಲೇಶವೂ ಕುಂದುವುದಿಲ್ಲ. ಆದ್ದರಿಂದ ಅವನು ಮಾತ್ರ ಜಗಜ್ಜನ್ಮಾದಿಕಾರಣನಾಗಲು ಸಾಧ್ಯ?

ಪ್ರತಿಪದಾರ್ಥ -- ಸಾದೇವತಾ = ಆ ಭಗವಂತನು, ಸರ್ವೈಃ ಶಕ್ತಿಭಿಃ = ಎಲ್ಲಾ ಬಗೆಯ ಶಕ್ತಿಗಳಿಂದ, ಯುಕ್ತಾ = ಕೂಡಿರುವನು. ಯಾಂ = ಯಾವ ಪರಮಾತ್ಮನನ್ನು, ಪರಾ = ಉತ್ತಮವನ್ನಾಗಿ, ಅಜಸ್ರಮ್ = ಅಚ್ಛಿನ್ನನಾಗಿ, ನಿತ್ಯಾನಂದಾ = ನಿರಂತರ ಆನಂದಮಯನನ್ನಾಗಿ, ನಿತ್ಯರೂಪಾ = ನಿತ್ಯವಾದ ಸ್ವರೂಪವುಳ್ಳವನನ್ನಾಗಿ, ಅಜರಾ = ವಾರ್ಧಕ್ಯರಹಿತನನ್ನಾಗಿ, ಶಾಶ್ವತಾ = ಶಶ್ವದೇಕಸ್ವಭಾವವನ್ನಾಗಿ, ಆತ್ಮಾ = ಸ್ವಾಮಿಯನ್ನಾಗಿ, ವದಂತಿ = ಹೇಳುತ್ತಾರೋ, ಪರಮಾತ್ಮನು. ಇತಿ = ಹೀಗೆ, ಚತುರ್ವೇದಶಿಖಾಯಾಮ್ = ಚತುರ್ವೇದಶಿಖಾವೆಂಬ ಗ್ರಂಥದಲ್ಲಿ ಹೇಳಲಾಗಿದೆ. ಅಥ = ಆದ್ದರಿಂದ ಪರಮಾತ್ಮನಲ್ಲಿ, ವಿಚಿತ್ರಶಕ್ತಿಃ ಕೇವಲಂ = ವಿಚಿತ್ರಶಕ್ತಿ ಇರುವುದಲ್ಲ, ಕಿಂತು = ಹೊರತಾಗಿ, ಸರ್ವಶಕ್ತಿರೇವ = ಸಕಲವಿಷಯಕವಾದ ಶಕ್ತಿಯು ಇರುತ್ತದೆ.

## ತತ್ವಪ್ರಕಾಶಿಕಾ

**तत्वप्रकाशिका – यदुक्तं विचित्रशक्तित्वान्नेश्वरे विरोध इति तदसत् । सा विचित्रशक्तिर्यदाल्पविषया भवति यदा च नश्यति तदा तत्र विरोधनियमादित्याशङ्कां परिहरत्सूत्रमुपन्यस्य व्याचष्टे । सर्वेति ।।**

ವಿಚಿತ್ರಶಕ್ತಿ ಇರುವುದರಿಂದ ಈಶ್ವರನಲ್ಲಿ ಸ್ವತಂತ್ರಕರ್ತೃತ್ವವನ್ನು ಒಪ್ಪಿದರೆ ಯಾವುದೇ ಕೃತ್ಸ್ನಪ್ರಸಕ್ತ್ಯಾದಿ ವಿರೋಧಗಳು ಬರುವುದಿಲ್ಲವೆಂದು ಈ ಹಿಂದೆ ಏನು ಸಮರ್ಥನೆ ಮಾಡಿದರೋ ಇದು ತಪ್ಪು. ಏಕೆಂದರೆ ಈ ವಿಚಿತ್ರಶಕ್ತಿಯು ಒಂದು ವೇಳೆ ಅಲ್ಪವಸ್ತುವನ್ನು ವಿಷಯೀಕರಿಸುವುದಾದಲ್ಲಿ ಅಥವಾ ಸ್ವಲ್ಪ ಸಮಯದ ನಂತರ ನಾಶವಾಗುವುದಾದಲ್ಲಿ ಆಗ ಪುನಃ ಅದೇ ಯುಕ್ತಿಗಳ ವಿರೋಧವು ನಿಯಮೇನ ಬರುತ್ತದಲ್ಲವೆ? ಈ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು 'ಸರ್ವೋಪೇತಾ ಚ ತದ್ದರ್ಶನಾತ್' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ನರ್ತನ, ಗಾನ ಮೊದಲಾದ ಕಲೆಗಳಲ್ಲಿ ವಿಚಿತ್ರಶಕ್ತಿ ಇರುವುದನ್ನು ನಟ ಮೊದಲಾದವರಲ್ಲಿ ನಾವು ಕಾಣುತ್ತೇವೆ. ಅದೇ ನಟರಿಗೆ ಶಾಸ್ತ್ರಾಭ್ಯಾಸದಲ್ಲಿ ಅಂತಹ ವಿಚಿತ್ರಶಕ್ತಿ ಇರುವುದಿಲ್ಲ. ಅಥವಾ ಶಾಸ್ತ್ರಾಭ್ಯಾಸದಲ್ಲಿ ವಿಚಿತ್ರಶಕ್ತಿ ಇರುವವನಿಗೆ ನರ್ತನ ಗಾನ ಮೊದಲಾದವುಗಳಲ್ಲಿ ವಿಚಿತ್ರಶಕ್ತಿ ಇರುವುದಿಲ್ಲ. ಈ ವಿಚಿತ್ರಶಕ್ತಿಯೂ ಕೂಡ ಸ್ವಲ್ಪ ಸಮಯದ ಅನಂತರ ವಾರ್ಧಕ್ಯವು

ಪ್ರಾಪ್ತವಾದಾಗ ನಶಿಸುತ್ತದೆ. ಅದರಂತೆ ಪರಮಾತ್ಮನಲ್ಲಿಯೂ ಕೂಡ ಕೆಲವು ವಿಚಿತ್ರಶಕ್ತಿಗಳಷ್ಟೇ ಇರುತ್ತವೆ. ಅಥವಾ ಅವನ ವಾರ್ಧಕ್ಯದಲ್ಲಿ ನಾಶವನ್ನು ಹೊಂದುತ್ತವೆ ಎಂಬುದು ಪೂರ್ವಪಕ್ಷಿಗಳ ಅಭಿಪ್ರಾಯ. (ಗುರ್ವರ್ಥದೀಪಿಕಾ)

**तत्वप्रकाशिका – न केवलं सामान्यतो विचित्रशक्तिरीश्वरः किन्तु सर्वविषये सर्वदा विद्यमानविचित्रशक्तिः । यतः 'सर्वैर्युक्ता' इति श्रुतौ तयोक्तमिति भावः । सर्वैः सर्वविषयाभिः । अजस्रशक्तिं नित्यशक्तिम् । श्रुत्यनुसारेण स्त्रीलिङ्गप्रयोगः ।।**

ಪರಮಾತ್ಮನಲ್ಲಿ ಸಾಮಾನ್ಯವಾದ ವಿಚಿತ್ರಶಕ್ತಿ ಇದೆ ಎಂದಷ್ಟೇ ಅಲ್ಲ, ಮತ್ತೇನೆಂದರೆ ಆ ವಿಚಿತ್ರಶಕ್ತಿಯು ಸರ್ವವಿಷಯಕವಾಗಿದೆ. ಹಾಗೂ ಸರ್ವದಾ ವಿದ್ಯಮಾನವಾಗಿದೆ ಎಂದೇ ಹೇಳುತ್ತೇವೆ. ಏಕೆಂದರೆ 'ಸರ್ವೈರ್ಯುಕ್ತಾ' ಇತ್ಯಾದಿ ಶ್ರುತಿಯು ಈಶ್ವರನ ವಿಚಿತ್ರ ಶಕ್ತಿಯನ್ನು ಸಕಲವಿಷಯಕವೆಂದು ಎಂದೂ ನಾಶವಿಲ್ಲವೆಂದು ಸಮರ್ಥನೆ ಮಾಡುತ್ತಿದೆ. ಈ ಶ್ರುತಿಯಲ್ಲಿರುವ 'ಸರ್ವೈಃ' ಎಂಬ ಪದಕ್ಕೆ ಸಕಲವಸ್ತುವಿಷಯಕವಾಗಿದೆ ಎಂದರ್ಥ. 'ಅಜಸ್ರಶಕ್ತಿಂ' ಎಂಬ ಶಬ್ದಕ್ಕೆ ನಿತ್ಯವಾದ ಶಕ್ತಿಯುಳ್ಳವನು ಎಂದರ್ಥ. ಶ್ರುತಿಗೆ ಅನುಸಾರಿಯಾಗಿ 'ಸರ್ವೋಪೇತಾ' ಎಂಬ ಸ್ತ್ರೀಲಿಂಗಪ್ರಯೋಗವನ್ನು ಸೂತ್ರಕಾರರು ಮಾಡಿದ್ದಾರೆ.

ವಿವರಣೆ - ಶ್ರುತಿಯಲ್ಲಿ 'ಸರ್ವೈಃ' ಎಂದು ಸ್ತ್ರೀಲಿಂಗಪ್ರಯೋಗವನ್ನು ಮಾಡಿರುವುದರಿಂದ ಟೀಕೆಯಲ್ಲಿ 'ಸರ್ವೈಃ ವಿಷಯಾಭಿಃ' ಎಂದು ಸ್ತ್ರೀಲಿಂಗವನ್ನು ಪ್ರಯೋಗಿಸುವ ಮೂಲಕ ವ್ಯಾಖ್ಯಾನ ಮಾಡಿದ್ದಾರೆ. ಹಿಂದಿನ ಸೂತ್ರದಲ್ಲಿ 'ಆತ್ಮನಿ' ಎಂಬ ಪದವನ್ನು ಪ್ರಯೋಗಿಸಿರುವುದರಿಂದ ಆತ್ಮಶಬ್ದವು ಪುಲ್ಲಿಂಗವಾದ್ದರಿಂದ ಇಲ್ಲಿಯೂ ಕೂಡ 'ಸರ್ವೋಪೇತಶ್ಚ' ಎಂಬುದಾಗಿ ಪುಲ್ಲಿಂಗವನ್ನೇ ಪ್ರಯೋಗ ಮಾಡಬೇಕಿತ್ತು. ಆದರೆ 'ಸರ್ವೈಯುಕ್ತಾ ಶಕ್ತಿಭಿರ್ದೇವತಾಸಾ' ಎಂಬ ಶ್ರುತಿಯಲ್ಲಿರುವ ಶಕ್ತಿಶಬ್ದವು ಸ್ತ್ರೀಲಿಂಗದಲ್ಲಿರುವುದರಿಂದ ಶ್ರುತಿಗೆ ಅನುಸಾರಿಯಾಗಿ 'ಸರ್ವೋಪೇತಾ' ಎಂಬುದಾಗಿ ಸ್ತ್ರೀಲಿಂಗವನ್ನು ಪ್ರಯೋಗಿಸಿದ್ದಾರೆ. (ಗುರ್ವರ್ಥದೀಪಿಕಾ)

## ಬ್ರಹ್ಮಸೂತ್ರ

**सूत्रम् – विकरणत्वान्नेति चेत् तदुक्तम् ॥**

**विकरणत्वान्नेति चेत् तदुक्तम् ॥**

ಈಶ್ವರನು ಜೀವನಂತೆ ಜಗತ್‌ಕರ್ತೃ ಆಗಲಾರ. ಏಕೆಂದರೆ ಶ್ರುತಿಯಲ್ಲಿ ಈಶ್ವರನಿಗೆ 'ಅಪಾಣಿಪಾದಃ' ಎಂಬುದಾಗಿ ಹಸ್ತಪಾದಾದಿ ಇಂದ್ರಿಯಗಳೇ ಇಲ್ಲವೆಂದು ಹೇಳಲಾಗಿದೆಯಲ್ಲವೇ? ಎಂದು ಆಕ್ಷೇಪ ಮಾಡಬಾರದು ಏಕೆಂದರೆ ನಮ್ಮಂತೆ ಜಡವಾದ ಇಂದ್ರಿಯಗಳು ಈಶ್ವರನಿಗೆ ಇಲ್ಲವೆಂದಷ್ಟೆ ಶ್ರುತಿಯ ಅಭಿಪ್ರಾಯ.

## ಸೂತ್ರದೀಪಿಕಾ

**सूत्रदीपिका – विकरणत्वान्नेति चेत्तदुक्तम् ॥** नेत्यावर्तते । **विकरणत्वात्** 'अपाणिपादः' इति श्रुत्या ईश्वरस्य हस्तादिन्द्रयशून्यत्वावगमात् । **नेति** चेत् ईश्वरस्य कर्तृत्वं न युक्तमिति चेन्न । कुतः? यस्मात् तदुक्तं तस्मिन्न तस्येत्याद्यागमेन तत्करणराहित्यस्य प्राकृतेन्द्रियविषयत्वमुक्तं तस्मादित्यर्थः ॥९॥

ಅರ್ಥ -- 'ನ' ಎಂಬ ಪದವನ್ನು ಆವೃತ್ತಿ ಮಾಡಿಕೊಳ್ಳಬೇಕು. ವಿಕರಣತ್ವಾತ್ = 'ಅಪಾಣಿಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಸ್ಸ ಶೃಣೋತ್ಯಕರ್ಣಃ । ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾಂತಂ ॥' ಎಂಬ ಶ್ರುತಿಯಿಂದ ಈಶ್ವರನಿಗೆ ಹಸ್ತ, ಪಾದ ಮೊದಲಾದ ಇಂದ್ರಿಯಗಳು ಇರುವುದಿಲ್ಲವೆಂದು ಹೇಳಲಾಗಿದೆ. ಆದ್ದರಿಂದ ನ ಇತಿ ಚೇತ್= ಈಶ್ವರನಿಗೆ ಜಗತ್‌ಕರ್ತೃತ್ವವು ಯುಕ್ತವಾಗುವುದಿಲ್ಲ ಎಂದು ಆಕ್ಷೇಪ ಮಾಡಬಾರದು ಏಕೆಂದರೆ ತದುಕ್ತಮ್ = 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಎಂಬ ಶ್ರುತಿಯಲ್ಲಿ ಭಗವಂತನಿಗೆ ಇಂದ್ರಿಯಗಳಿರುವುದಿಲ್ಲ ಎಂಬುದಕ್ಕೆ ಪ್ರಾಕೃತವಾದ ಇಂದ್ರಿಯಗಳಿರುವುದಿಲ್ಲ ಎಂಬರ್ಥವನ್ನೇ ತಿಳಿಯಬೇಕು ಎಂದು ವ್ಯಾಖ್ಯಾನ ಮಾಡಲಾಗಿದೆ.

॥ ಸೂತ್ರದೀಪಿಕೆಯಲ್ಲಿ ಶ್ರುತೇಸ್ತು ಶಬ್ದಮೂಲತ್ವಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

**भाष्यम् – ।। विकरणत्वान्नेति चेत् तदुक्तम् ।।९।।**

**न च करणाभावादनुपपत्तिरिति युक्तम् ।**

ಅನುವಾದ - ಪರಮಾತ್ಮನಿಗೆ ಕಣ್ಣು, ಕೈ, ಕಾಲು ಮೊದಲಾದ ಇಂದ್ರಿಯಗಳು ಇರುವುದಿಲ್ಲ. ಆದ್ದರಿಂದ ಅವನು ಜಗತ್ತನ್ನು ಸೃಷ್ಟಿಮಾಡಲಾರ ಎಂದು ಆಕ್ಷೇಪ ಮಾಡಬಾರದು.

ಪ್ರತಿಪದಾರ್ಥ -- ವಿಷ್ಣುವಿನ ಜಗತ್ಕಾರಣತ್ವವನ್ನು ಆಕ್ಷೇಪ ಮಾಡಿ ಸಮಾಧಾನ ಹೇಳುವ ಸೂತ್ರವನ್ನು ಪಠಿಸುತ್ತಿದ್ದಾರೆ. ಕರಣಾಭಾವಾತ್ = ಕೈ, ಕಾಲು, ಕಣ್ಣು, ಮೂಗು ಮೊದಲಾದ ಇಂದ್ರಿಯಗಳು ಇಲ್ಲದ ಕಾರಣ, ಅನುಪಪತ್ತಿಃ = ಜಗತ್ತನ್ನು ಸೃಷ್ಟಿಮಾಡುವುದು ಅನುಪಪನ್ನ- ವಾಗುತ್ತದೆ. ಇತಿ = ಹೀಗೆ, ನ ಚ ಯುಕ್ತಮ್ = ಆಕ್ಷೇಪ ಮಾಡಬಾರದು.

**भाष्यम् –**

**'आपाणिपादो जवनो गृहीता पश्यत्यचक्षुस्स शृणोत्यकर्णः ।**
**स वेत्ति वेद्यं न च तस्यास्ति वेत्ता तमाहुरग्र्यं पुरुषं महान्तम् ।।'**
**(श्वे.३.१९)**

**'न तस्य कार्यं करणं च विद्यते न तत्समश्चाभ्यधिकश्च दृश्यते ।**
**पराऽस्य शक्तिर्विविधैव श्रूयते स्वाभाविकी ज्ञानबलक्रिया च ।।'**
**(श्वे. ६.८.) इत्यादिश्रुतिभ्यः ।**

ಅನುವಾದ - ಪರಮಾತ್ಮನು ಕೈ ಇಲ್ಲದೆ ಹಿಡಿಯುತ್ತಾನೆ. ಕಾಲಿಲ್ಲದೆ ನಡೆಯುತ್ತಾನೆ. ಕಣ್ಣಿಲ್ಲದೆ ನೋಡುತ್ತಾನೆ, ಕಿವಿಯಿಲ್ಲದೆ ಕೇಳುತ್ತಾನೆ. ಯಾವ ಇಂದ್ರಿಯವಿಲ್ಲದಿದ್ದರೂ ಎಲ್ಲವನ್ನೂ ತಿಳಿದಿದ್ದಾನೆ. ಅವನನ್ನು ಸಂಪೂರ್ಣವಾಗಿ ತಿಳಿದವರು ಯಾರೂ ಇಲ್ಲ. ಆದ್ದರಿಂದ ಅವನನ್ನು ಅತ್ಯಂತ ಶ್ರೇಷ್ಠನೆಂದು ಜ್ಞಾನಿಜನರು ಕರೆಯುತ್ತಾರೆ.

ಪರಮಾತ್ಮನಿಗೆ ಪ್ರಾಕೃತವಾದ ಕಾರ್ಯಗಳು ಇಂದ್ರಿಯಗಳು ಇರುವುದಿಲ್ಲ. ಆದ್ದರಿಂದ ಶ್ರುತಿಗಳಲ್ಲಿ ಇಂದ್ರಿಯಗಳಿಲ್ಲ ಎಂದು ಕರೆಯಲಾಗಿದೆ. ಮತ್ತು ಅವನಿಗೆ ಸಮರು ಅಧಿಕರು ಯಾರೂ ಇರುವುದಿಲ್ಲ. ಅವನ ಶಕ್ತಿಯು ಅತ್ಯಂತ ಉತ್ಕೃಷ್ಟವಾಗಿದೆ. ಅವನಲ್ಲಿರುವ ಜ್ಞಾನ ಬಲ ಕ್ರಿಯೆಗಳೆಲ್ಲವೂ ಸ್ವಾಭಾವಿಕವಾಗಿರುತ್ತವೆ. ಹೀಗೆ ಶ್ರುತಿಗಳಲ್ಲಿ ಪ್ರತಿಪಾದನೆ ಮಾಡಲಾಗಿದೆ.

ಪ್ರತಿಪದಾರ್ಥ -- ಅಪಾಣಿಪಾದಃ = ಕೈಗಳು ಕಾಲುಗಳು ಇಲ್ಲದಿದ್ದರೂ ಜವನೋ, ಗೃಹೀತಾ = ವೇಗವಾಗಿ ಓಡುತ್ತಾನೆ. ಮತ್ತು ಹಿಡಿಯುತ್ತಾನೆ. ಅಚಕ್ಷುಃ = ಕಣ್ಣುಗಳು ಇಲ್ಲದವನಾದರೂ, ಪಶ್ಯತಿ = ನೋಡುತ್ತಾನೆ. ಅಕರ್ಣಃ = ಕಿವಿಗಳಿಲ್ಲದಿದ್ದರೂ, ಸಃ =

ಅವನು, ಶೃಣೋತಿ = ಕೇಳುತ್ತಾನೆ. ವೇದ್ಯಂ = ತಿಳಿಯಲು ಯೋಗ್ಯವಾದವುಗಳೆಲ್ಲವನ್ನು, ಸಃ = ಪರಮಾತ್ಮನು, ವೇತ್ತಿ = ತಿಳಿದಿರುತ್ತಾನೆ. ತಸ್ಯ = ಅವನನ್ನು, ವೇತ್ತಾ = ತಿಳಿದವನು, ನಚ ಅಸ್ತಿ = ಯಾರೂ ಇರುವುದಿಲ್ಲ. ತಂ = ಅವನನ್ನು, ಮಹಾಂತಂ = ಶ್ರೇಷ್ಠನಾದ, ಪುರುಷಂ = ಪುರುಷ ಶಬ್ದವಾಚ್ಯನಾದ, ಅಗ್ರ್ಯಂ ಪುರುಷಂ = ಶ್ರೇಷ್ಠಪುರುಷನೆಂದು, ಆಹುಃ = ಜ್ಞಾನಿ ಜನರು ಕರೆಯುತ್ತಾರೆ.

ತಸ್ಯ = ಅವನಿಗೆ, ಕಾರ್ಯಂ = ಪ್ರಾಕೃತವಾದ ಕ್ರಿಯೆಯು, ಕರಣಂ = ಇಂದ್ರಿಯಗಳು, ನಚ ವಿದ್ಯತೇ = ಇರುವುದಿಲ್ಲ. ತತ್ = ಅವನಿಗೆ, ಸಮಃ = ಸಮನಾದವರು, ಚ = ಮತ್ತು, ಅಭ್ಯಧಿಕಃ = ಅಧಿಕರಾದವರು, ನ ದೃಶ್ಯತೇ = ಕಾಣಸುವುದಿಲ್ಲ. ಅಸ್ಯ = ಇವನ, ಶಕ್ತಿಃ = ಶಕ್ತಿಯು, ವಿವಿಧಾ ಏವ = ಅನೇಕ ವಿಧವಾಗಿ, ಪರಾ = ಶ್ರೇಷ್ಠವಾಗಿ, ಶ್ರೂಯತೇ = ವೇದಗಳಲ್ಲಿ ಕೇಳಿಬರುತ್ತದೆ. ಜ್ಞಾನಬಲಕ್ರಿಯಾ ಚ = ಇವನ ಜ್ಞಾನ, ಬಲ, ಕ್ರಿಯೇ ಇವುಗಳೆಲ್ಲವೂ, ಸ್ವಾಭಾವಿಕೀ = ಸ್ವರೂಪಾತ್ಮಕವಾಗಿವೆ. ಇತ್ಯಾದಿಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳಿಂದ ಪರಮಾತ್ಮನಲ್ಲಿ ವಿರೋಧವು ಪರಿಹಾರವಾಗುತ್ತದೆ. .

**भाष्यम् – 'सर्वोपेता च' इति सामान्यपरिहारेऽपि विशेयुक्त्यर्थं पुनराशङ्का ।।९।।**

## ।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये श्रुतेस्तु शब्दमूलत्वाधिकरणम् ।। ८ ।।

ಅನುವಾದ - 'ಸರ್ವೋಪೇತಾ' ಎಂಬುದಾಗಿ ಹಿಂದಿನ ಸೂತ್ರದಲ್ಲಿ ಪರಮಾತ್ಮನಿಗೆ ವಿಚಿತ್ರವಾದ ಶಕ್ತಿಯು ಇದೆ ಎಂದು ಸಮರ್ಥಿಸಲಾಗಿದೆ. ಪುನಃ ಅದೇ ವಿಷಯವನ್ನು ಇಲ್ಲಿ ಏಕೆ ಸಮರ್ಥಿಸುತ್ತಿದ್ದಾರೆ ? ಎಂಬ ಪ್ರಶ್ನೆ ಬರುತ್ತದೆ. ಆದರೆ ಅವಯವಗಳು ಇಲ್ಲದಿದ್ದರೂ ಪರಮಾತ್ಮನಲ್ಲಿ ಕರ್ತೃತ್ವವು ಹೇಗೆ ಬರುತ್ತದೆ ಎಂಬ ವಿಶೇಷವಾದ ಪ್ರಶ್ನೆಯು ಪ್ರಾಪ್ತವಾದರೆ ಅದಕ್ಕೆ ವಿವರವಾಗಿ ಉತ್ತರಿಸಲು ಈ ಸೂತ್ರವು ಹೊರಟಿದೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

ಪ್ರತಿಪದಾರ್ಥ -- 'ಸರ್ವೋಪೇತಾ' ಎಂಬ ಸೂತ್ರದಲ್ಲೇ ವಿಚಿತ್ರವಾದ ಅಶೇಷಶಕ್ತಿಯು ಇದೆ ಎಂದು ತಿಳಿಯುತ್ತದೆ. ಪುನಃ 'ವಿಕರಣತ್ವಾತ್' ಇತ್ಯಾದಿ ಸೂತ್ರವು ವ್ಯರ್ಥವಲ್ಲವೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ಸರ್ವೋಪೇತಾ ಚ = ಸರ್ವೋಪೇತಾಚ ತದ್ ದರ್ಶನಾತ್ ಎಂಬ ಹಿಂದಿನ ಸೂತ್ರದಲ್ಲಿ, ಸಾಮಾನ್ಯಪರಿಹಾರೇಪಿ = ಸಾಮಾನ್ಯವಾಗಿ ವಿರೋಧವನ್ನು ಪರಿಹಾರ ಮಾಡಿದ್ದರೂ, ವಿಶೇಷಯುಕ್ತ್ಯರ್ಥಮ್ = ವಿಶೇಷವಾದ ಯುಕ್ತಿಯನ್ನು ತೋರಿಸಲು, ಪುನಃ = ಮತ್ತೆ, ಆಶಂಕಾ = ಆಶಂಕೆಯನ್ನು ಇಲ್ಲಿ ಮಾಡಿರುತ್ತಾರೆ.

ಇಲ್ಲಿಗೆ ಶ್ರುತೇಸ್ತುಶಬ್ದಮೂಲಾಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका –**

**विष्णोर्जगत्कर्तृत्वमाक्षिप्य समादधत्सूत्रमुपन्यस्य व्याचष्टे –विकरणत्वादिति।। नेश्वरस्य कर्तृत्वं युक्तम् । 'अचक्षुः श्रोत्रं तदपाणिपादम्' इति श्रुतेस्तस्य हस्तादिकरणशून्यत्वात् । न हि हस्तादिविरहिणो मृतस्य कर्तृत्वमिति न मन्तव्यम्।**

ವಿಷ್ಣುವಿನಲ್ಲಿರುವ ಜಗತ್‌ಕರ್ತೃತ್ವಲಕ್ಷಣವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು 'ವಿಕರಣತ್ವಾತ್ ಇತಿ ಚೇತ್' ಇತ್ಯಾದಿಯಾಗಿ ಪಠಿಸಿ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

ಈಶ್ವರನಿಗೆ ಕರ್ತೃತ್ವವೇ ಯುಕ್ತವಾಗುವುದಿಲ್ಲ. 'ಅಚಕ್ಷುಃ ಶ್ರೋತ್ರಂ ತದಪಾಣಿಪಾದಮ್' ಎಂಬ ಶ್ರುತಿಯು ಈಶ್ವರನಿಗೆ ಚಕ್ಷುಸ್ಸು, ಶ್ರೋತ್ರ, ಹಸ್ತ ಮೊದಲಾದ ಇಂದ್ರಿಯಗಳೇ ಇರುವುದಿಲ್ಲ ಎಂದು ಹೇಳುತ್ತಿದೆ. ಕೈ ಮೊದಲಾದ ಇಂದ್ರಿಯಗಳೇ ಇಲ್ಲದ ಮೃತನಾದ ವ್ಯಕ್ತಿಯಲ್ಲಿ ಕರ್ತೃತ್ವ ಇರುವುದಿಲ್ಲವೆಂಬುದನ್ನು ನಾವು ಕಂಡಿದ್ದೇವೆ. ಇಷ್ಟು ಆಕ್ಷೇಪ.

ವಿವರಣೆ - 'ವಿಕರಣತ್ವಾತ್' ಇತ್ಯಾದಿ ಸೂತ್ರದ ಆಕ್ಷೇಪಭಾಗವನ್ನು 'ನ ಈಶ್ವರಸ್ಯ' ಎಂಬ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಕೈ, ಕಾಲು ಮೊದಲಾದ ಇಂದ್ರಿಯಗಳು ಇಲ್ಲದಿದ್ದರೂ ಕರ್ತೃತ್ವವು ಬರಬಹುದಲ್ಲವೆ? ಎಂಬ ಪ್ರಶ್ನೆಗೆ 'ನಹಿ' ಇತ್ಯಾದಿ ಟೀಕಾವಾಕ್ಯದಿಂದ ಉತ್ತರಿಸುತ್ತಿದ್ದಾರೆ. (ತತ್ವಸುಬೋಧಿನೀ)

**तत्वप्रकाशिका – 'अपाणिपादम्' इति श्रुतौ पाण्यादिविरहिणोऽपि हरेर्ग्रहणादिकमुक्त्वा 'न तस्य कार्यम्' इति पाण्यादिरहितत्वस्य प्राकृतविषयत्वेन सर्वोत्तमत्वेन परमशक्तित्वेन चोपापादितत्वादिति भावः ।**

'ಅಪಾಣಿಪಾದಂ' ಎಂಬ ಶ್ರುತಿಯು ಭಗವಂತನಿಗೆ ಕೈ ಮೊದಲಾದ ಅವಯವಗಳು ಇಲ್ಲದಿದ್ದರೂ ಕೂಡ ಎಲ್ಲವನ್ನು ಸ್ವೀಕರಿಸುತ್ತಾನೆ ಎಂದು ಹೇಳುತ್ತಿದೆ. 'ನ ತಸ್ಯ ಕಾರ್ಯಂ' ಎಂಬ ಶ್ರುತಿಯು ಕೈ ಮೊದಲಾದ ಅವಯವಗಳಿಲ್ಲ ಎಂಬುದಕ್ಕೆ ಪ್ರಾಕೃತವಾದ ಅವಯವಗಳಿಲ್ಲ ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದೆ. ಪರಮಾತ್ಮನು ಸರ್ವೋತ್ತಮನಾಗಿರುವುದರಿಂದ ಪರಮಶಕ್ತಿಶಾಲಿಯಾಗಿರುವುದರಿಂದ ಪ್ರಾಕೃತವಾದ ಅವಯಗಳಿಲ್ಲದವನೆಂದೇ ಅರ್ಥೈಸಬೇಕೆಂದು ಉಪಪಾದನೆ ಮಾಡಲಾಗಿದೆ.

ವಿವರಣೆ - 'ಅಪಾಣಿಪಾದೋ ಜವನೋ ಗೃಹೀತಾ' ಎಂಬ ಶ್ವೇತಾಶ್ವತರ ಉಪನಿಷತ್ತು ವಿಷ್ಣುವಿಗೆ ಪಾಣಿ, ಪಾದ ಮೊದಲಾದ ಇಂದ್ರಿಯಗಳಿಲ್ಲವೆಂದು ಹೇಳಿದೆ. ಆದರೆ ಅದೇ ಉಪನಿಷತ್ತಿನಲ್ಲಿ ಮತ್ತೊಂದು ಕಡೆ ಪ್ರಾಕೃತವಾದ ಇಂದ್ರಿಯಗಳಿಲ್ಲವೆಂದು ಹೇಳಲಾಗಿದೆ. ಮತ್ತು ಪ್ರಾಕೃತವಾದ ಇಂದ್ರಿಯಗಳಿಲ್ಲ ಎನ್ನಲು ಸರ್ವೋತ್ತಮತ್ವ ಪರಮಶಕ್ತಿಮತ್ವವನ್ನು ಅಸಾಧಾರಣಧರ್ಮವನ್ನಾಗಿ ಆ ಶ್ರುತಿಯು ಸಮರ್ಥನೆ ಮಾಡುತ್ತಿದೆ.

**तत्वप्रकाशिका – ननु पूर्वसूत्र एव विचित्राशेषशक्तिबलेन निखिलविरोधानां परिहृतत्वात् कथमेतच्छङ्कावकाश इत्यत आह – सर्वेति ।।**

ಹಿಂದಿನ ಸೂತ್ರದಲ್ಲಿಯೇ ವಿಚಿತ್ರವಾದ ಅನಂತಶಕ್ತಿಯು ಪರಮಾತ್ಮನಿಗಿದೆ. ಇದರ ಬಲದಿಂದ ಸಕಲ ವಿರೋಧಗಳನ್ನು ಪರಿಹಾರ ಮಾಡಿದ್ದಾಯಿತಲ್ಲವೆ? ಎಂಬ ಪ್ರಶ್ನೆಗೆ 'ಸರ್ವೋಪೇತಾ ಚ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ವಿವರಣೆ - ವಿಚಿತ್ರವಾದ ಅನಂತಶಕ್ತಿಯು ಪರಮಾತ್ಮನಿಗೆ ಇರುವುದರಿಂದ ಹಸ್ತಪಾದಾದಿ ಅವಯವಗಳು ಇಲ್ಲವೆಂಬ ವಿರೋಧವನ್ನು ಕೂಡ ಹಿಂದಿನ ಸೂತ್ರದಿಂದಲೇ ಪರಿಹರಿಸಿದ್ದಾಯಿತು. ಪುನಃ ಈ ಸೂತ್ರದಲ್ಲೂ ಅದೇ ಆಕ್ಷೇಪವನ್ನು ಏಕೆ ಮಾಡುತ್ತಿದ್ದೀರಿ? ಎಂಬುದು ಪೂರ್ವಪಕ್ಷಕಾರರ ಅಭಿಪ್ರಾಯ.

**तत्वप्रकाशिका – सामान्यतः सर्वविरोधानां परिहृतत्वेऽपि विशेषतोऽस्यैव चोद्यस्य परिहाराय युक्तिबुभुत्सया पुनः शङ्केत्याशयः । विशेषयुक्तिस्तु प्राकृतशरीराभावेऽपि चिदानन्दाद्यात्मकविग्रहत्वादिः प्रमाणविशेष एव वा । अतो विष्णोर्जगत्कारणत्वे विरोधाभावाद्युक्तं लक्षणसूत्रमिति सिद्धम् ।। ३२ ।।**

ಹಿಂದಿನ ಸೂತ್ರದಲ್ಲಿ ಸಾಮಾನ್ಯವಾಗಿ ಸಕಲ ವಿರೋಧವನ್ನು ಪರಿಹರಿಸಿದ್ದಾಯಿತು. ಆದರೆ ವಿಶೇಷವಿರೋಧವನ್ನು ಆಕ್ಷೇಪ ಮಾಡಿ ಮತ್ತೊಂದು ಯುಕ್ತಿಯನ್ನು ತಿಳಿಸುವ ಅಪೇಕ್ಷೆಯಿಂದ ಪುನಃ ಈ ಸೂತ್ರದಲ್ಲಿ ಆಶಂಕೆ ಮಾಡುತ್ತಿದ್ದಾರೆಂಬುದು ಅಭಿಪ್ರಾಯ. ಆ ವಿಶೇಷಯುಕ್ತಿಯು 'ಪ್ರಾಕೃತ ಶರೀರ ಇಲ್ಲದಿದ್ದರೂ ಚಿದಾನಂದಾತ್ಮಕವಾದ ಶರೀರ ಇರುವಿಕೆಯು' ಅಥವಾ 'ಪ್ರಮಾಣವಿಶೇಷ ಇರುವುದು' ಆಗಿದೆ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಒಪ್ಪಿದರೆ ಯಾವುದೇ ವಿರೋಧವು ಬರುವುದಿಲ್ಲ. ಹಾಗಾಗಿ ಲಕ್ಷಣಸೂತ್ರದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣತ್ವವು ವಿಷ್ಣುವಿನ ಅಸಾಧಾರಣ ಲಕ್ಷಣವೆಂದು ಸಿದ್ಧವಾಗುತ್ತದೆ.

ವಿವರಣೆ - ಹಿಂದಿನ ಸೂತ್ರದಲ್ಲಿ ಸಾಮಾನ್ಯವಿಷಯಕವಾದ ಪ್ರಮಾಣಗಳನ್ನು ಆಶ್ರಯಿಸಿ ಸಾಮಾನ್ಯವಾಗಿಯೇ ಸಕಲ ಅನುಪಪತ್ತಿಪರಿಹಾರವನ್ನು ಹೇಳಲಾಯಿತು. ಈ ಸೂತ್ರದಲ್ಲಿ ವಿಶೇಷವಿಷಯಕವಾದ ಅನುಪಪತ್ತಿಯನ್ನು ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಪುನರುಕ್ತಿದೋಷವು ಬರುವುದಿಲ್ಲ. (ವಾಕ್ಯಾರ್ಥಮುಕ್ತಾವಳಿ)

ಶ್ರುತೇಸ್ತುಶಬ್ದಮೂಲತ್ವಾಧಿಕರಣ (೨-೧-೮)

ಪ್ರಥಮಸೂತ್ರವು ಕೃತ್ಸ್ನಪ್ರಸಕ್ತ್ಯಾದಿದೋಷಗಳನ್ನು ಪರಿಹರಿಸಲು ಲೋಕವಿರುದ್ಧವಾದ ಧರ್ಮಗಳು ವಿಷ್ಣುವಿನಲ್ಲಿ ಅವಿರುದ್ಧವಾಗಿವೆ ಎಂಬ ವಿಷಯದಲ್ಲಿ ಶ್ರುತಿ ಹಾಗೂ ಯುಕ್ತಿಗಳನ್ನು ಹೇಳಿತು. ದ್ವಿತೀಯಸೂತ್ರವು ಯುಕ್ತಿವಿರೋಧದ ಪರಿಹಾರಕ್ಕಾಗಿ ವಿಚಿತ್ರಶಕ್ತಿ ಎಂಬ ಮತ್ತೊಂದು ಯುಕ್ತಿಯನ್ನು ತಿಳಿಸಿತು. ತೃತೀಯಸೂತ್ರವು ವಿಚಿತ್ರಶಕ್ತಿಯಿಂದ ಯುಕ್ತಿವಿರೋಧವನ್ನು ಪರಿಹರಿಸಿದರೆ ಜೀವರಲ್ಲೂ ಕೂಡ ಯುಕ್ತಿವಿರೋಧವು ಪರಿಹಾರವಾಗಲಿ ? ಎಂಬ ಆಕ್ಷೇಪವನ್ನು ಪರಿಹರಿಸಿತು. ಚತುರ್ಥಸೂತ್ರವು ಶಕ್ತಿಗೆ ಸರ್ವವಿಷಯಕತ್ವವನ್ನು ಹಾಗೂ ನಿತ್ಯತ್ವವನ್ನು ಪ್ರಮಾಣಬದ್ಧವಾಗಿ ಸಮರ್ಥಿಸಿತು. ಐದನೆಯ ಸೂತ್ರವು ಅವಯವಗಳೇ ಇಲ್ಲದ ಪರಮಾತ್ಮನು ಹೇಗೆ ಜಗತ್ಕರ್ತೃತ್ವವಾಗುತ್ತಾನೆ? ಎಂಬ ಆಕ್ಷೇಪವನ್ನು ಪರಿಹರಿಸಿತು. ಹೀಗೆ ಐದು ಸೂತ್ರಗಳು ಕ್ರಮಬದ್ಧವಾಗಿ ಈಶ್ವರನಿಗೆ ಜಗತ್ಕರ್ತೃತ್ವವನ್ನು ಸಮರ್ಥನೆ ಮಾಡಿವೆ. (ಭಾವಬೋಧ, ವಾಕ್ಯಾರ್ಥಮುಕ್ತಾವಳಿ, ತತ್ವಸುಬೋಧಿನೀ)

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಶ್ರುತೇಸ್ತುಶಬ್ದಮೂಲತ್ವಾಧಿಕರಣ ಮುಗಿಯಿತು

## ಶ್ರುತೇಸ್ತುಶಬ್ದಮೂಲತ್ವಾಧಿಕರಣ
## (೨-೧-೮)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
### ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ
### ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## श्रुतेस्तु शब्दमूलत्वाधिकरणम्

### ಈಶ್ವರನಿಗೆ ಸ್ವತಂತ್ರಕರ್ತೃತ್ವದ ಸಮರ್ಥನೆ

**श्रुतेस्तु शब्दमूलत्वात् ।। अत्रानंशस्यापीशस्यैकदेशेन व्यापारेऽणीयस्त्वादियुक्तस्य च महीयस्त्वादौ व्याघात इति व्याघातपर्यवसायिप्रबलयुक्त्यविरोध उच्यते ।**

'ಶ್ರುತೇಸ್ತು ಶಬ್ದಮೂಲತ್ವಾತ್'

ಈ ಅಧಿಕರಣದಲ್ಲಿ ಈಶ್ವರನಿಗೆ ಸ್ವತಂತ್ರಕರ್ತೃತ್ವವನ್ನು ಸಮರ್ಥನೆ ಮಾಡಲಾಗಿದೆ. ಈಶ್ವರನಿಗೆ ಅಂಶಗಳಿರುವುದಿಲ್ಲ. ಆದರೂ ಏಕದೇಶದಿಂದ ವ್ಯಾಪಾರಗಳನ್ನು ಮಾಡುತ್ತಾನೆಂದು ನೀವು ಹೇಳಬೇಕು. ಹಾಗಾದಲ್ಲಿ ಈಶ್ವರನು ಅಣುಸ್ವರೂಪನೆಂದು ಒಪ್ಪಿಕೊಂಡಂತಾಗುತ್ತದೆ. ಹಾಗೊಪ್ಪಿದರೆ 'ಮಹೀಯಸ್ತ್ವ' ಎಂಬ ಗುಣವನ್ನು ಹೇಳಲು ಸಾಧ್ಯವಾಗುವುದಿಲ್ಲ. 'ಮಹೀಯಸ್ತ್ವ' ಎಂಬ ಗುಣವನ್ನು ಒಪ್ಪಿಕೊಂಡು ಏಕದೇಶದಲ್ಲಿ ವ್ಯಾಪಾರವನ್ನು ಹೇಳಿದರೆ ವ್ಯಾಘಾತದೋಷವು ಬರುತ್ತದೆ.

ಹೀಗೆ 'ವ್ಯಾಘಾತ' ಎಂಬ ದೋಷದಲ್ಲಿ ಪರ್ಯವಸಾನವಾಗುವ ಅತ್ಯಂತ ಪ್ರಬಲವಾದ ಯುಕ್ತಿಯ ವಿರೋಧಪರಿಹಾರವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ.

**पूर्वोक्तस्य जीवकर्तृत्वे कृत्स्नप्रसक्त्यादिदोषस्य ब्रह्मण्युद्धारात् सङ्गतिः ।**

ಅಧಿಕರಣ ಸಂಗತಿ - ಹಿಂದಿನ ಅಧಿಕರಣದಲ್ಲಿ ಜೀವನು ಕರ್ತೃವಾದರೆ ಕೃತ್ಸ್ನಪ್ರಸಕ್ತಿ ಮೊದಲಾದ ದೋಷಗಳನ್ನು ಹೇಳಲಾಗಿತ್ತು. ಅದೇ ದೋಷಗಳು ಬ್ರಹ್ಮನಲ್ಲಿಯೂ ಬರುತ್ತವೆಂಬ ಆಕ್ಷೇಪವನ್ನು ಪರಿಹಾರ ಮಾಡುತ್ತಿರುವುದರಿಂದ ಇತರವ್ಯಪದೇಶಾಧಿಕರಣದಿಂದ ಈ ಅಧಿಕರಣಕ್ಕೆ ಆಪವಾದಿಕೀಸಂಗತಿ ಇರುತ್ತದೆ.

**अत्र पूर्वोक्तं विष्णोः सर्वकर्तृत्वं न युक्तमुत युक्तमिति चिन्ता ।**

ಅಧಿಕರಣದ ಸಂಶಯ ಕೋಟಿಗಳು - ಇಲ್ಲಿಯ ತನಕ ಸಮರ್ಥನೆ ಮಾಡಲ್ಪಟ್ಟ ವಿಷ್ಣುವಿನ ಸರ್ವಕರ್ತೃತ್ವವು ಅಯುಕ್ತವೋ, ಅಥವಾ ಯುಕ್ತವೋ ? ಎಂಬುದು ಪ್ರಧಾನ ಸಂಶಯ.

**तदर्थं तस्य कर्तृत्वे कृत्स्नप्रसक्त्यादिदोषोऽस्त्युत नेति ।**

ಇದಕ್ಕಾಗಿ ವಿಷ್ಣುವಿನಲ್ಲಿ ಸರ್ವಕರ್ತೃತ್ವವನ್ನು ಒಪ್ಪಿದರೆ ಕೃತ್ಸ್ನಪ್ರಸಕ್ತಿ ಇತ್ಯಾದಿ ದೋಷಗಳು ಬರುತ್ತವೋ, ಇಲ್ಲವೋ ? ಎಂಬುದು ಎರಡನೆಯ ಸಂಶಯ.

**तदर्थमन्यत्र युक्तिविरुद्धं ब्रह्मण्यपि तद्विरुद्धं न वेति ।**

ಅದಕ್ಕಾಗಿ ಬೇರೆಡೆ ಯುಕ್ತಿವಿರುದ್ಧವಾದದ್ದು ಬ್ರಹ್ಮನಲ್ಲಿಯೂ ಕೂಡ ಯುಕ್ತಿವಿರುದ್ಧವಾಗುತ್ತದೋ, ಅಥವಾ ಇಲ್ಲವೋ? ಎಂಬುದು ಮೂರನೆಯ ಸಂಶಯ.

**तदर्थं ब्रह्मणि तद्विरोधः किं तस्य तर्कागोचरत्वाघटितघटनाशक्तिभ्यां सुपरिहर उत नेति ।**

ಅದಕ್ಕಾಗಿ ಬ್ರಹ್ಮನಲ್ಲಿ ಯುಕ್ತಿವಿರೋಧವು ತರ್ಕಾಗೋಚರತ್ವ ಮತ್ತು ಅಘಟಿತಘಟನಾಶಕ್ತಿ ಇವೆರಡರಿಂದ ಪರಿಹಾರವಾಗುತ್ತದೋ, ಅಥವಾ ಇಲ್ಲವೋ? ಎಂಬುದು ನಾಲ್ಕನೆಯ ಸಂಶಯ.

**तदर्थं ताभ्यां तत्परिहारे किमतिप्रसङ्ग उत नेति ।**

ಅದಕ್ಕಾಗಿ ಹಾಗೇ ತರ್ಕಾಗೋಚರತ್ವ ಮತ್ತು ಅಘಟಿತಘಟನಾಶಕ್ತಿಯಿಂದ ಪರಿಹಾರ ಮಾಡಿದಾಗ ಅತಿಪ್ರಸಂಗವು ಬರುತ್ತದೋ, ಅಥವಾ ಇಲ್ಲವೋ? ಎಂಬುದು ಐದನೆಯ ಸಂಶಯ.

**तदर्थं सोपि किमप्रमितेपि किं वा प्रमित एवेति**

ಅದಕ್ಕಾಗಿ ಅಪ್ರಮಿತವಾದದ್ದರಲ್ಲಿ ಮಾತ್ರ ಹಾಗೇ ಹೇಳಬೇಕೋ? ಅಥವಾ ಪ್ರಮಿತವಾದದ್ದರಲ್ಲಿ ಮಾತ್ರ ಹಾಗೆ ಹೇಳಬೇಕೋ ? ಎಂಬುದು ಕೊನೆಯ ಸಂಶಯ.

**पूर्वपक्षमाह ।। न युक्तमिति ।। अयं भावः ।। ईश्वरस्याल्पकार्येपि सर्वशक्त्या प्रवृत्तौ प्रेक्षावत्त्वं न स्यात् । एकदेशेन प्रवृत्तिस्तु विरुद्धा । भिन्नांशाभावात् ।**

ಪೂರ್ವಪಕ್ಷವನ್ನು 'ನ ಯುಕ್ತಮ್' ಇತ್ಯಾದಿ ಟೀಕೆಯಿಂದ ಹೇಳಿದ್ದಾರೆ - ಪೂರ್ವಪಕ್ಷದ ಅಭಿಪ್ರಾಯ ಹೀಗಿದೆ - ಈಶ್ವರನು ಅಲ್ಪಕಾರ್ಯದಲ್ಲಿಯೂ ಸಂಪೂರ್ಣ ಶಕ್ತಿಯಿಂದ ಪ್ರವೃತ್ತಿ

ಮಾಡುವುದಾದರೆ, ಪ್ರೇಕ್ಷಾವಂತನೇ ಆಗದಿರಬೇಕಾದೀತು. ಅಲ್ಪಕಾರ್ಯದಲ್ಲಿ ಸರ್ವಶಕ್ತಿಯಿಂದ ಪ್ರವೃತ್ತಿ ಮಾಡದೇ ಏಕದೇಶದಿಂದ ಪ್ರವೃತ್ತಿ ಮಾಡುತ್ತಾನೆನ್ನುವುದಾದರೆ ಪರಸ್ಪರ ವಿರೋಧ ಬರುತ್ತದೆ. ಏಕೆಂದರೆ ಈಶ್ವರನಿಗೆ ಭಿನ್ನವಾದ ಅಂಶವೇ ಇರುವುದಿಲ್ಲ.

**नापि विशेषबलादविरोधः । जीवेऽपीश्वरमनपेक्ष्य विशेषबलादेवाविरोधापातात् ।**

'ವಿಶೇಷ' ಎಂಬ ಪದಾರ್ಥದ ಶಕ್ತಿಯಿಂದ ಈಶ್ವರನಲ್ಲಿ ಏಕದೇಶದಿಂದ ಪ್ರವೃತ್ತಿಯನ್ನು ಕೂಡಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ಇದೇ ರೀತಿಯಾದ ವಿರೋಧವನ್ನು ಜೀವನಲ್ಲಿಯೂ ಕೂಡ ಪರಿಹರಿಸಲು ಬರುತ್ತದೆ. ಈಶ್ವರನನ್ನು ಅಪೇಕ್ಷಿಸದೇ ವಿಶೇಷಬಲದಿಂದಲೇ ವಿರೋಧವು ಪರಿಹಾರವಾಗುತ್ತಿರುವಾಗ ಜೀವನಲ್ಲಿಯೂ ಕೂಡ ಸ್ವತಂತ್ರ ಕರ್ತೃತ್ವವನ್ನು ಉಪಪಾದನೆ ಮಾಡಬಹುದು.

**ईश्वर ईश इति पर्यायशब्दवाच्ये निर्विशेषाभिन्ने विशेषाभावेन तत्राणुत्व-महत्त्वादेर्विरोधापाताच्च ।**

ಯಾವುದು ಪರ್ಯಾಯಶಬ್ದದಿಂದ ಪ್ರತಿಪಾದ್ಯವಾಗುತ್ತದೋ, ಅದರಲ್ಲಿ ವಿಶೇಷ ಇರುವುದಿಲ್ಲ. (ಘಟ ಹಾಗೂ ಕಲಶ ಎಂಬೆರಡು ಶಬ್ದಗಳಿಂದ ಪ್ರತಿಪಾದ್ಯವಾದ ಒಂದೇ ಘಟದಲ್ಲಿ ವಿಶೇಷವನ್ನು ಒಪ್ಪಬೇಕಾಗಿಲ್ಲ.) 'ಈಶ್ವರ' 'ಈಶ' ಈ ಎರಡು ಪರ್ಯಾಯಶಬ್ದಗಳಿಂದ ಪ್ರತಿಪಾದ್ಯನಾಗಿರುವುದರಿಂದ ನಿರ್ವಿಶೇಷಾಭಿನ್ನನಾಗಿದ್ದಾನೆ. ವಿಶೇಷವಿಲ್ಲದ ಕಾರಣ ಅಣುತ್ವ ಹಾಗೂ ಮಹತ್ವಗಳಿಗೆ ವಿರೋಧವನ್ನು ಪರಿಹರಿಸಲೂ ಕೂಡ ಸಾಧ್ಯವಿಲ್ಲ.

**प्रमितत्वादविरोध इति तु जीवेपि समम् । प्रमाणस्य ज्ञापकत्वेनाविरोधाकार कत्वाच्च ।**

ಪ್ರಮಿತವಾದ್ದರಿಂದ ವಿರೋಧವಿಲ್ಲವೆನ್ನುವುದಾದರೆ ಜೀವನಲ್ಲಿಯೂ ಕೂಡ ಇದು ಸಮಾನ. ಪ್ರಮಾಣವು ಜ್ಞಾಪಕವಾಗಿರುವುದರಿಂದ ವಿರೋಧವನ್ನು ಪರಿಹರಿಸಬಹುದೆಂದೂ ಕೂಡ ಹೇಳಲಾಗದು.

**न चाल्पकार्ये नांशस्य प्रवृत्तिः । नापि गुरुकार्ये कृत्स्नस्य । किन्तु प्रयत्नतारतम्यमात्रमिति वाच्यम् । जीवेपि साम्यात् ।**

ಈಶ್ವರನಿಗೆ ಅಲ್ಪಕಾರ್ಯದಲ್ಲಿ 'ಅಂಶತಃ ಪ್ರವೃತ್ತಿ' ಇರುತ್ತದೆ. ಮಹತ್ತಾದ ಕಾರ್ಯದಲ್ಲಿ ಸಂಪೂರ್ಣವಾದ ಪ್ರವೃತ್ತಿಯಿರುತ್ತದೆ ಎಂದೂ ಕೂಡ ಹೇಳುವುದಿಲ್ಲ. ಹೊರತಾಗಿ, ಅಲ್ಪಕಾರ್ಯ

ಹಾಗೂ ಮಹತ್ಕಾರ್ಯಗಳಲ್ಲಿ ಮಾಡುವ ಪ್ರಯತ್ನದಲ್ಲಿ ತಾರತಮ್ಯವಿದೆಯೆಂದಷ್ಟೇ ಹೇಳುತ್ತೇವೆ ಎಂದು ಸಮರ್ಥಿಸಲಾಗದು. ಏಕೆಂದರೆ ಜೀವನಲ್ಲಿಯೂ ಇದೇ ರೀತಿಯಲ್ಲಿ ನಾವೂ ಕೂಡ ಹೇಳುತ್ತೇವೆ.

**यदि चास्माकं तृणादान एकदेशस्य गुरुतरभारादाने च कृत्स्नस्य प्रवृत्तिरनुभवसिद्धा तर्हीशेपि सा जीवान्तर इवानुमानसिद्धा ।**

ಒಂದುವೇಳೆ ಹುಲ್ಲನ್ನು ಎತ್ತುವಾಗ ಸ್ವಲ್ಪ ಮಾತ್ರ ಪ್ರಯತ್ನವನ್ನು ನಾವು ಮಾಡುತ್ತೇವೆ. ಬಹಳವಾದ ಭಾರವನ್ನು ಎತ್ತುವಾಗ ಸಂಪೂರ್ಣವಾದ ಪ್ರಯತ್ನವನ್ನು ಮಾಡುತ್ತೇವೆ. ಇದು ನಮಗೆ ಅನುಭವ-ಸಿದ್ಧವಾದ ವಿಚಾರ. ಇದರಂತೆ ಈಶ್ವರನಲ್ಲಿಯೂ ಕೂಡ ಹೇಳಬಹುದಲ್ಲವೇ?

ಹಾಗಾದಲ್ಲಿ ಈಶ್ವರನಲ್ಲಿಯೂ ಕೂಡ ಪ್ರವೃತ್ತಿಯು ಬೇರೆ ಜೀವರಲ್ಲಿರುವಂತೆ ಪ್ರವೃತ್ತಿ ಇರುತ್ತದೆಂದು ಅನುಮಾನದಿಂದ ಸಾಧಿಸುತ್ತೇವೆ.

**ईश्वरस्यातर्क्यत्वान्न तत्र तर्कप्रसर इति चेन्न । शास्त्रयोनौ ब्रह्मण्यसाधकस्यापि तर्कस्य बाधकत्वात् । अन्यथा मीमांसावैयर्थ्यम् ।**

ಈಶ್ವರನು ಯಾವುದೇ ತರ್ಕಗಳಿಗೆ ಗೋಚರನಾಗದ ಕಾರಣ, ಅನುಮಾನದಿಂದ ಅವನಲ್ಲಿ ಪ್ರವೃತ್ತಿಯನ್ನು ಸಾಧಿಸಲಾಗದು ಅಲ್ಲವೇ?

ಯಾವುದೇ ರೀತಿಯಲ್ಲಿಯೂ ಅನುಮಾನವು ಈಶ್ವರನಲ್ಲಿ ಪ್ರವೃತ್ತಿ ಮಾಡುವುದಿಲ್ಲವೆಂದು ಹೇಳಬಾರದು. ಏಕೆಂದರೆ ಶಾಸ್ತ್ರೈಕಸಮಧಿಗಮ್ಯನಾದ ಈಶ್ವರನಲ್ಲಿ ತರ್ಕವು ಸಾಧಕವಾಗದಿರಬಹುದು. ಆದರೆ ಬಾಧಕವಾಗುತ್ತದೆಂದು ಹೇಳಲು ಯಾವುದೇ ಅಡ್ಡಿಯಿಲ್ಲ. ಹೀಗೊಪ್ಪದಿದ್ದರೆ ಮೀಮಾಂಸಾಶಾಸ್ತ್ರವೇ ವ್ಯರ್ಥವಾಗಬೇಕಾಗುತ್ತದೆ.

**यदि चेश्वरस्याचिन्त्यशक्तित्वादविरोधस्तर्हीश्वर उपादानं (अप्राकृतविग्रहं) ज्ञानेच्छादिकं च विनैव सृजेत् ।**

ಈಶ್ವರನಲ್ಲಿ ಅಚಿಂತ್ಯಶಕ್ತಿಯಿರುವುದರಿಂದ ವಿರೋಧವಿಲ್ಲ ಎನ್ನುವುದಾದರೆ ಉಪಾದಾನ-ಕಾರಣವಿಲ್ಲದೇ ಜಗತ್ತನ್ನು ಸೃಷ್ಟಿ ಮಾಡಬೇಕಾದೀತು. ಅಥವಾ ಜ್ಞಾನ ಇಚ್ಛೆಗಳನ್ನು ಬಿಟ್ಟು ಜಗತ್ತನ್ನು ಸೃಷ್ಟಿ ಮಾಡಬೇಕಾದೀತು.

**स्वयमेव वोपादानं स्यात् । शून्यं च सत्कुर्यात् । मुक्तांश्च बध्नीयादिति बहुविप्लवः स्यादिति ।**

ಅಥವಾ ಸ್ವತಃ ತಾನೇ ಉಪಾದಾನಕಾರಣನಾಗಬೇಕಾದೀತು. ಶೂನ್ಯದಿಂದ ಸತ್ಯಪದಾರ್ಥವನ್ನು ಸೃಷ್ಟಿ ಮಾಡಬೇಕಾದೀತು. ಮುಕ್ತರನ್ನು ಸಂಸಾರಿಗಳನ್ನಾಗಿ ಮಾಡಬೇಕಾದೀತು. ಅಚಿಂತ್ಯಶಕ್ತಿಯಿಂದ ಬರುವಂತಹ ವಿರೋಧವೆಲ್ಲವನ್ನೂ ಕೂಡ ಪರಿಹರಿಸಬಹುದಾದ್ದರಿಂದ ಇಂತಹ ಅನೇಕ ತೊಂದರೆಗಳನ್ನು ಸಿದ್ಧಾಂತಿಗಳು ಎದುರಿಸಬೇಕಾಗುತ್ತದೆ. ಆದ್ದರಿಂದ ಅಚಿಂತ್ಯಶಕ್ತಿಯಿಂದ ವಿರೋಧವನ್ನು ಪರಿಹಾರ ಮಾಡುವುದು ತಪ್ಪು. ಇಷ್ಟು ಪೂರ್ವಪಕ್ಷ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**श्रुतेस्तु** ।। ''जीवकर्तृत्वपक्षोक्तदोषस्यात्रापि सम्भवात्'' इत्यादि-टीकासूचितमेतदुपाधिं पूर्वोत्तरापौनरुक्तयायाह – **अनंशस्यापीति** ।।

'ಶ್ರುತೇಸ್ತು ಶಬ್ದಮೂಲತ್ವಾತ್' 'ಜೀವಕರ್ತೃತ್ವಪಕ್ಷೋಕ್ತದೋಷಸ್ಯ ಅತ್ರಾಪಿ ಸಂಭವಾತ್' ಜೀವಕರ್ತೃತ್ವ ಪಕ್ಷದಲ್ಲಿ ಹೇಳಲ್ಪಟ್ಟ ದೋಷಗಳು ಈಶ್ವರ ಕರ್ತೃತ್ವಪಕ್ಷದಲ್ಲಿಯೂ ಕೂಡ ಸಮಾನವಾಗಿ ಬರುತ್ತದೆ ಇತ್ಯಾದಿಯಾಗಿ ಟೀಕೆಯಲ್ಲಿ ಅಧಿಕರಣದ ಉಪಾಧಿಯನ್ನು ಸೂಚನೆ ಮಾಡಿದ್ದಾರೆ. ಇದರಿಂದ ಹಿಂದಿನ ಅಧಿ ಕರಣದಿಂದ ಪುನರುಕ್ತಿ ದೋಷವೂ ಕೂಡ ಬರುವುದಿಲ್ಲವೆಂದು ಹೇಳಿದಂತಾಗುತ್ತದೆ. 'ಅನಂಶಸ್ಯಾಪಿ' ಇತ್ಯಾದಿ ವಾಕ್ಯದಿಂದ ಗ್ರಂಥಕಾರರು ಇದನ್ನೇ ವಿವರಣೆ ಮಾಡುತ್ತಿದ್ದಾರೆ.

**प्रकाशः – एकदेशस्यैव महीयस्त्वात्तद्व्याहन्येत । साकल्येन प्रवृत्तौ च ब्रह्माण्डपिपीलिकाण्डप्रवृत्तावेकप्रकारेण प्रवृत्तौ प्रेक्षावत्त्वं व्याहन्येतेति भावः ।**

ಈಶ್ವರನು ನಿರಂಶನಾಗಿದ್ದಾನೆ. ಆದರೂ ಏಕದೇಶದಿಂದ ವ್ಯಾಪಾರವನ್ನು ಮಾಡುವುದಾದರೆ ಏಕದೇಶಕ್ಕೆ ಮಹೀಯಸ್ತ್ವವು ಬಂದಂತಾಗುತ್ತದೆ. ಏಕದೇಶಕ್ಕೆ ಮಹೀಯಸ್ತ್ವವನ್ನು ಹೇಳುವುದು ವ್ಯಾಹತವೆಂದು ತಿಳಿಯಬೇಕು.

ಏಕದೇಶದಿಂದ ಪ್ರವೃತ್ತಿ ಮಾಡದೇ ಸಂಪೂರ್ಣವಾದ ಪ್ರಯತ್ನದಿಂದ ಈಶ್ವರನು ಪ್ರಯತ್ನ ಪಟ್ಟರೆ ಬ್ರಹ್ಮಾಂಡವೆಂಬ ಮೊಟ್ಟೆಯಲ್ಲಿ ಪ್ರವೃತ್ತಿಯಲ್ಲಿ ಮಾಡುವಂತೆ, ಇರುವೆಯ ಮೊಟ್ಟೆಯಲ್ಲಿಯೂ ಕೂಡ ಒಂದೇ ಪ್ರಕಾರದಲ್ಲಿ ಪ್ರವೃತ್ತಿಯನ್ನು ಮಾಡಬೇಕಾದೀತು. ಆವಾಗ ಇವನನ್ನು ಪ್ರೇಕ್ಷಾವಂತನೆಂದು ಕರೆಯುವುದು ವ್ಯಾಹತವಾಗುತ್ತದೆ.

**प्रकाशः – सङ्गतिः** आपवादिकी । विषयसंशयटीकां व्यनक्ति ।। **अत्रेति** ।।

ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆಪವಾದಿಕೀ ಸಂಗತಿಯಿರುತ್ತದೆಂದು ತಿಳಿಯಬೇಕು. ಅಧಿಕರಣದ ವಿಷಯ ಹಾಗೂ ಸಂಶಯಗಳನ್ನು ತಿಳಿಯಸುವ ಟೀಕೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡಿದ್ದಾರೆ.

**प्रकाशः –** ''श्रुतेस्तु'' इति सूत्रांशसूचितां चिन्तामाह – **तदर्थमन्यत्रेति** ।। ''शब्दमूलत्वात् । आत्मनि चैवं विचित्राश्च हि'' इत्येतत्सूचितामाह – **तदर्थं ब्रह्मणीति** ।। अतिप्रसङ्ग इति ।। उपादानादिना विना सृजेदित्यादिरित्यर्थः ।

'ಶ್ರುತೇಸ್ತು' ಎಂಬ ಸೂತ್ರದ ಅಂಶದಿಂದ ಸೂಚಿತವಾದ ಸಂಶಯವನ್ನು 'ತದರ್ಥಮನ್ಯತ್ರ' ಇತ್ಯಾದಿ ಗ್ರಂಥದಿಂದ ಹೇಳಿರುತ್ತಾರೆ. 'ಶಬ್ದಮೂಲತ್ವಾತ್' ಎಂಬ ಸೂತ್ರದಿಂದ ಮತ್ತು 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಸೂತ್ರದಿಂದ ಸೂಚಿತವಾದ ಸಂಶಯವನ್ನು 'ತದರ್ಥಂ ಬ್ರಹ್ಮಣಿ' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ. ಅತಿಪ್ರಸಂಗವೆಂದರೆ ಉಪಾದಾನಕಾರಣವಿಲ್ಲದೇ ಜಗತ್ತನ್ನು ಸೃಷ್ಟಿ ಮಾಡಬೇಕಾದೀತು ಎಂಬ ಅತಿಪ್ರಸಂಗವನ್ನು ವಿವಕ್ಷಿಸಬೇಕು.

**प्रकाशः –** व्यक्तः फलफलिभावः । ननु जीव इव कृत्स्नप्रसक्तावनुभव-विरोधाभावाद्विशेषबलादिना परिहारसम्भवाच्छास्त्रयोनिसूत्रे तर्कागोचरत्वस्य स्थितत्वाच्च कथं जीवपक्षोक्तदोषप्राप्त्या पूर्वपक्षोदय इत्यत आह – **अयं भाव इति**।।

ಪೂರ್ವಪಕ್ಷದ ಹಾಗೂ ಸಿದ್ಧಾಂತದ ಫಲಫಲಿಭಾವವು ಸ್ಪಷ್ಟವಾಗಿದೆ.

ಜೀವನಲ್ಲಿ ಕೃತ್ಸ್ನಪ್ರಸಕ್ತಿಯನ್ನು ಹೇಳಿದಾಗ ಅನುಭವವಿರೋಧವನ್ನು ಹೇಳಿದಂತೆ ಈಶ್ವರನಲ್ಲಿ ಹೇಳಲಾಗದು. ವಿಶೇಷಬಲದಿಂದ ಪರಿಹಾರವನ್ನು ಮಾಡಬಹುದಾದ್ದರಿಂದ ಶಾಸ್ತ್ರಯೋನಿತ್ವಾಧಿಕರಣದಲ್ಲಿ ಹೇಳಿದಂತೆ ತರ್ಕ ಅಗೋಚರನಾಗಿರುವುದರಿಂದ ಜೀವಪಕ್ಷದಲ್ಲಿ ಹೇಳಲ್ಪಟ್ಟ ದೋಷಗಳು ಈಶ್ವರಪಕ್ಷದಲ್ಲಿ ಬರುವುದಿಲ್ಲ. ಆದ್ದರಿಂದ ಪೂರ್ವಪಕ್ಷದ ಉದಯ ಹೇಗೆ ಆಗುತ್ತದೆ ? ಎಂಬ ಪ್ರಶ್ನೆಗೆ 'ಅಯಂ ಭಾವಃ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ.

**प्रकाशः – ईश्वर इति** ।। ईशशब्दापेक्षयेश्वरशब्दस्य ''स्थेशभासपि सकसोवरच्'' इति वरच्प्रत्ययान्तत्वेन वा ''ईशेभ्यो वरः'' इति चतुर्थगीताभाष्योक्तदिशा वाऽतिशयार्थत्वात्तादृशोऽपि चेदीशशब्दपर्यायो हरौ तदा निर्विशेषाभिन्नत्वमेव प्राप्नोति ।।

'ಈಶ' ಶಬ್ದದ ಅರ್ಥವನ್ನೇ 'ಈಶ್ವರ' ಶಬ್ದವೂ ಕೂಡ ಹೇಳುತ್ತಿದೆ. ಈಶ ಶಬ್ದದ ಮೇಲೆ 'ಸ್ಥೇಶಭಾಸಪಿ ಸಕಸೋ ವರಚ್' ಎಂಬ ಸೂತ್ರದಿಂದ 'ವರಚ್' ಪ್ರತ್ಯಯವು ಬರುತ್ತದೆ. 'ಸ್ಥಾಗತೌ ನಿವೃತ್ತೌ' ಈಶಪ್ರೇರಣೆ,

ಭಾಸ, ಪಿತ್ತ, ಕಫ ಇಷ್ಟು ಶಬ್ದಗಳ ಮೇಲೆ ವರಚ್ ಪ್ರತ್ಯಯವು ಬಂದು, ಈಶ್ವರ, ಭಾಸ್ವರ, ಪಿಸ್ವರ, ಕಸ್ವರ ಇತ್ಯಾದಿ ಶಬ್ದಗಳು ನಿಷ್ಪನ್ನವಾಗುತ್ತವೆ. ಅಥವಾ 'ಈಶೇಭ್ಯೋ ವರಃ' ಎಂಬುದಾಗಿ ಸಕಲ ಈಶರಿಗೂ ಉತ್ತಮನಾದ್ದರಿಂದ ಈಶನನ್ನೇ ಈಶ್ವರನೆಂದು ಕರೆಯುತ್ತಾರೆ. ಹೀಗೆ ನಾಕನೆಯ ಅಧ್ಯಾಯದ ಗೀತಾಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ. ಅತಿಶಯಾರ್ಥದಲ್ಲಿ ವರಚ್ ಪ್ರತ್ಯಯವನ್ನು ವಿವಕ್ಷಿಸಿದಾಗ ಈಶ ಶಬ್ದವು ಈಶ್ವರ ಶಬ್ದದ ಪರ್ಯಾಯವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಈಶ್ವರನು ನಿರ್ವಿಶೇಷಾಭಿನ್ನನೆಂದು ಅನಿವಾರ್ಯವಾಗಿ ಹೇಳಬೇಕು.

**प्रकाशः** – विशेषसत्त्वे त्वपर्यायत्वस्यैव प्राप्त्या पर्यायता न स्यादिति भावः ।। बाधकत्वादिति ।। प्राक् साधकत्वमेव निरस्तमिति भावः ।

ಈಶ್ವರನಲ್ಲಿ ವಿಶೇಷವನ್ನು ಒಪ್ಪಿದರೆ ಪರ್ಯಾಯಶಬ್ದ ಪ್ರತಿಪಾದ್ಯತ್ವವನ್ನು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈಶ್ವರ ಹಾಗೂ ಈಶ ಎಂಬೆರಡು ಶಬ್ದಗಳು ಪರ್ಯಾಯಶಬ್ದಗಳಾಗದಿರಬೇಕಾದೀತು. 'ಬಾಧಕತ್ವಾತ್' ಅಂದರೆ ಹಿಂದೆ ತರ್ಕವು ಈಶ್ವರನ ವಿಷಯದಲ್ಲಿ ಸಾಧಕವಾಗುವುದಿಲ್ಲ ಎಂದಷ್ಟೇ ಹೇಳಿದ್ದಾರೆ. ಆದ್ದರಿಂದ ಇಲ್ಲಿ ಬಾಧಕವಾಗುತ್ತದೆ ಎಂದು ವಿವಕ್ಷಿಸಬೇಕು.

**प्रकाशः** –''शब्दमूलत्वात्'' इत्येतद्व्यावर्त्यं प्रपंच्य ''आत्मनिचैवम्'' इत्येतद्व्यावर्त्यमाह – **यदि चेश्वरस्येति**।। एतेन चिन्तास्थपूर्वपक्षकोटीनां हेतुहेतुमद्भावोपि व्यक्तीकृतोऽतिप्रसङ्गश्च विवृतः।

'ಶಬ್ದಮೂಲತ್ವಾತ್' ಎಂಬ ಸೂತ್ರದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ವಿವರಿಸಿದ್ದಾಯಿತು. 'ಆತ್ಮನಿ ಚೈವಮ್' ಎಂಬ ಸೂತ್ರದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು 'ಯದಿ ಚ ಈಶ್ವರಸ್ಯ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಹೀಗೆ ಪೂರ್ವಪಕ್ಷವನ್ನು ತೋರಿಸಿರುವುದರಿಂದ ಸಂಶಯದಲ್ಲಿರುವ ಪೂರ್ವಪಕ್ಷಕೋಟಿಗಳಲ್ಲಿ ಪರಸ್ಪರ ಕಾರ್ಯಕಾರಣಭಾವವಿದೆಯೆಂಬುದನ್ನು ಸ್ಪಷ್ಟಪಡಿಸಿದಂತಾಯಿತು. ಅತಿಪ್ರಸಂಗವನ್ನು ಕೂಡ ವಿವರಿಸಿದಂತಾಯಿತು.




ಜೀವನು ಸ್ವತಂತ್ರ ಕರ್ತೃವೆಂದು ಹೇಳಿದಾಗ ಯಾವ ದೋಷವನ್ನು ಹಿಂದಿನ ಅಧಿಕರಣದಲ್ಲಿ ಹೇಳಲಾಯಿತೋ, ಆ ದೋಷವು ಈಶ್ವರನಿಗೂ ಕೂಡ ಸಮಾನವಾಗಿ ಬರುತ್ತದೆ. ಆಂಶಿಕವಾಗಿ ಈಶ್ವರನು ಪ್ರವೃತ್ತಿ ಮಾಡುತ್ತಾನೋ, ಸಂಪೂರ್ಣವಾಗಿ ಪ್ರವೃತ್ತಿ ಮಾಡುತ್ತಾನೋ ? ಎಂಬ ಪ್ರಶ್ನೆ ಈ ಪಕ್ಷದಲ್ಲಿಯೂ ಸಮಾನ. ಹೀಗೆ ಈಶಕರ್ತೃತ್ವ ಪಕ್ಷದಲ್ಲಿಯೂ ಯುಕ್ತಿವಿರೋಧವು ಬರುತ್ತದಲ್ಲವೇ ?

ಸುಲಭವಾದ ಕೆಲಸದಲ್ಲಿಯೂ ಈಶ್ವರನು ಸಂಪೂರ್ಣವಾಗಿ ಪ್ರವೃತ್ತಿ ಮಾಡುವುದಾದರೆ ಅವನು ಬುದ್ಧಿವಂತನೇ ಆಗುವುದಿಲ್ಲ. ಏಕದೇಶದಿಂದಷ್ಟೇ ಪ್ರವೃತ್ತಿ ಮಾಡುತ್ತಾನೆಂಬುದು ವಿರುದ್ಧ. ಈಶ್ವರನಲ್ಲಿ ಭಿನ್ನವಾದ ಅಂಶಗಳು ಇರುವುದಿಲ್ಲ. ವಿಶೇಷಬಲದಿಂದ ವಿರೋಧವನ್ನು ಪರಿಹರಿಸುತ್ತೇವೆಂದು ಹೇಳಬಾರದು. ಹಾಗಾದಲ್ಲಿ ಜೀವನಲ್ಲಿಯೂ ಕೂಡ ವಿಶೇಷಬಲದಿಂದಲೇ ವಿರೋಧವನ್ನು ಪರಿಹರಿಸಬಹುದಾದ್ದರಿಂದ ಜೀವನೂ ಕೂಡ ಸ್ವತಂತ್ರಕರ್ತೃ ಆಗುತ್ತಾನೆ. ಎಲ್ಲಿ ಪರ್ಯಾಯಶಬ್ದಪ್ರತಿಪಾದ್ಯತ್ವವಿರುತ್ತದೋ, ಅಲ್ಲಿ ವಿಶೇಷವನ್ನು ಒಪ್ಪಬೇಕಾಗಿಲ್ಲ. ಉದಾ: 'ಘಟ' ಮತ್ತು 'ಕಲಶ' ಎಂಬೆರಡು ಪದಗಳು ಪರ್ಯಾಯಶಬ್ದವಾಗಿವೆ. ಇವೆರಡೂ ಪದಗಳು ಮಡಿಕೆಯೆಂಬ ಒಂದೇ ಪದಾರ್ಥವನ್ನು ಪ್ರತಿಪಾದನೆ ಮಾಡುತ್ತಿವೆ. ಇಂತಹ ಸ್ಥಳದಲ್ಲಿ ವಿಶೇಷವನ್ನು ಒಪ್ಪಬೇಕಾಗಿಲ್ಲ. ಅದರಂತೆ ಬ್ರಹ್ಮನೂ ಕೂಡ ಈಶ್ವರ ಮತ್ತು 'ಈಶ' ಎಂಬೆರಡು ಪರ್ಯಾಯಪದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಇವನಲ್ಲಿಯೂ ವಿಶೇಷವನ್ನು ಒಪ್ಪಬೇಕಾಗಿಲ್ಲ. ನಿರ್ವಿಶೇಷಾಭಿನ್ನನಾದ ಇವನಲ್ಲಿ ಅಣುತ್ವ ಹಾಗೂ ಮಹತ್ವಗಳಿಗೆ ವಿರೋಧವು ಬಂದೇ ಬರುತ್ತದೆ. ಪ್ರಮಿತವಾದ್ದರಿಂದ ವಿರೋಧವಿಲ್ಲ ಎನ್ನುವುದಾದರೆ ಜೀವನಲ್ಲಿಯೂ ಕೂಡ ಇದು ಸಮಾನ.

ಈಶ್ವರನಲ್ಲಿ ಅಚಿಂತ್ಯವಾದ ಶಕ್ತಿಯಿಂದ ಎಲ್ಲಾ ಬಗೆಯ ವಿರೋಧಗಳನ್ನು ಪರಿಹಾರ ಮಾಡುವುದಾದರೆ ಉಪಾದಾನವಿಲ್ಲದೇ ಜಗತ್ತನ್ನು ಸೃಷ್ಟಿ ಮಾಡಬೇಕಾದೀತು. ತನ್ನಲ್ಲಿರುವ ಜ್ಞಾನ ಹಾಗೂ ಇಚ್ಛೆಗಳನ್ನೂ ಕೂಡ ಉಪಯೋಗಿಸಿಕೊಳ್ಳದೇ ಜಗತ್ತನ್ನು ಸೃಷ್ಟಿ ಮಾಡಬೇಕಾದೀತು. ಅಥವಾ ತಾನೇ ಉಪಾದಾನಕಾರಣನಾಗಬೇಕಾದೀತು. ಶೂನ್ಯದಿಂದಲೇ ಜಗತ್ತನ್ನು ಸೃಷ್ಟಿ ಮಾಡಬೇಕಾದೀತು. ಮುಕ್ತರನ್ನೂ ಕೂಡ ಸಂಸಾರಿಗಳನ್ನಾಗಿ ಮಾಡಬೇಕಾದೀತು ಈ ಎಲ್ಲಾ ಸಮಸ್ಯೆಗಳಿರುವುದರಿಂದ ಈಶ್ವರನಲ್ಲಿ ಅಚಿಂತ್ಯಾದ್ಭುತಶಕ್ತಿಯಿಂದ ವಿರೋಧವನ್ನು ಪರಿಹರಿಸಲಾಗದು. ಇಷ್ಟು ಅಧಿಕರಣದ ಪೂರ್ವಪಕ್ಷ.

### ಸಿದ್ಧಾಂತ

### ಅಘಟಿತಘಟನಾಶಕ್ತಿಯುಳ್ಳ ಈಶ್ವರನಲ್ಲಿ ಮಾತ್ರ ಸ್ವತಂತ್ರಕರ್ತೃತ್ವ

## तात्पर्यचन्द्रिका

**सिद्धान्तमाह ।। सिद्धान्तयदिति ।। अयं भावः ।।**

**श्रोत्रादिगम्यशब्दादौ चक्षुरादि न साधकम् ।**
**न चापि बाधकं यद्वच्छुष्कतर्कस्तथेश्वरे ।।१।।**

ಟೀಕೆಯಲ್ಲಿ 'ಸಿದ್ಧಾಂತಯತ್' ಇತ್ಯಾದಿಯಾಗಿ ಅಧಿಕರಣದ ಸಿದ್ಧಾಂತವನ್ನು ರಚನೆ ಮಾಡಿದ್ದಾರೆ. ಅಧಿಕರಣದ ಸಿದ್ಧಾಂತದ ಸಾರಸಂಗ್ರಹ ಹೀಗಿದೆ -

ಶ್ರೋತ್ರಾದಿಗಮ್ಯಶಬ್ದಾದೌ ಚಕ್ಷುರಾದಿ ನ ಸಾಧಕಮ್ ।
ನ ಚಾಪಿ ಬಾಧಕಂ ಯದ್ವತ್ ಶುಷ್ಕತರ್ಕಸ್ತಥೇಶ್ವರೇ ॥
ಶ್ರುತೇಸ್ತುಶಬ್ದಮೂಲತ್ವಾಧಿಕರಣ (2-1-8)

ಶ್ರೋತ್ರೇಂದ್ರಿಯಕ್ಕೆ ವಿಷಯವಾದ ಶಬ್ದಾದಿಗಳ ಬಗ್ಗೆ ಚಕ್ಷುರಾದಿ ಇತರ ಇಂದ್ರಿಯಗಳು ಸಾಧಕವೂ ಆಗವುದಿಲ್ಲ. ಬಾಧಕವೂ ಆಗುವುದಿಲ್ಲ. ಇದರಂತೆ ಈಶ್ವರನ ವಿಷಯದಲ್ಲಿ ಶುಷ್ಕವಾದ ತರ್ಕವು ಸಾಧಕವೂ ಆಗುವುದಿಲ್ಲ. ಬಾಧಕವೂ ಆಗುವುದಿಲ್ಲ.

**शुष्कतर्क इति विशेषणान्नातिप्रसङ्गः । अत एव भाष्ये –**
**यद्वाक्योक्तं न तद्युक्तिर्विरोद्धुं शक्नुयात्क्वचित् ।**
**विरोधे वाक्ययोः क्वापि किंचित्साहाय्यकारणम् ।।**
**इति स्मृतिरुदाहृता ।**

'ಶುಷ್ಕತರ್ಕ' ಎಂದು ವಿಶೇಷಣವನ್ನು ಹೇಳಿದ್ದರಿಂದ ಅತಿಪ್ರಸಂಗವು ಬರುವುದಿಲ್ಲ. ಆದ್ದರಿಂದಲೇ ಭಾಷ್ಯದಲ್ಲಿ ಹೀಗೆ ಹೇಳಿರುತ್ತಾರೆ -

ಯದ್ವಾಕ್ಯೋಕ್ತಂ ನ ತದ್ಯುಕ್ತಿರ್ವಿರೋದ್ಧುಂ ಶಕ್ನುಯಾತ್ಕ್ವಚಿತ್ ।
ವಿರೋಧೇ ವಾಕ್ಯಯೋಃ ಕ್ವಾಪಿ ಕಿಂಚಿತ್ ಸಾಹಾಯ್ಯಕಾರಣಮ್ ॥
ಇತಿ ಸ್ಮೃತಿರುದಾಹೃತಾ ।

ವಾಕ್ಯದಿಂದ ಪ್ರತಿಪಾದಿತವಾದ ವಿಷಯದಲ್ಲಿ ಯುಕ್ತಿಯು ಯಾವಾಗಲೂ ವಿರೋಧ ಮಾಡಲು ಸಮರ್ಥವಾಗುವುದಿಲ್ಲ. ಒಂದು ವೇಳೆ ವಾಕ್ಯಗಳಲ್ಲಿ ಪರಸ್ಪರ ವಿರೋಧವು ಬಂದರೆ ಆವಾಗ ಮಾತ್ರ ತರ್ಕವು ವಿರೋಧ ಪರಿಹಾರಕ್ಕಾಗಿ ಸಹಾಯ ಮಾಡುತ್ತದೆ. ಹೀಗೆ ಭಾಷ್ಯದಲ್ಲಿ ಸ್ಮೃತಿಯನ್ನು ಉದಾಹರಿಸಿದ್ದಾರೆ.

**किञ्च –**

**बह्वावासत्वसूक्ष्मत्वे अप्यन्यत्र विरोधिनी ।**
**विश्वकर्मादिसामर्थ्याद्दृश्यते पुष्पकादिषु ।।१।।**

ಬಹ್ವಾವಾಸತ್ವಸೂಕ್ಷ್ಮತ್ವೇ ಅಪ್ಯನ್ಯತ್ರ ವಿರೋಧಿನೀ ।
ವಿಶ್ವಕರ್ಮಾದಿಸಮಾರ್ಥ್ಯಾತ್ ದೃಶ್ಯತೇ ಪುಷ್ಪಕಾದಿಷು ॥೧॥

ದೇವಶಿಲ್ಪಿ ಎನಿಸಿದ ವಿಶ್ವಕರ್ಮನು ತನ್ನ ಸಾಮರ್ಥ್ಯದಿಂದ ಪುಷ್ಪಕವಿಮಾನವನ್ನು ನಿರ್ಮಾಣ ಮಾಡಿದನು. ಸಣ್ಣದಾದ ಪುಷ್ಪಕವಿಮಾನದಲ್ಲಿ ಐದುಮಂದಿ ಕುಳಿತುಕೊಳ್ಳಬಹುದು, ಲಕ್ಷಾಂತರ-ಮಂದಿಯೂ ಸಹ ಕುಳಿತುಕೊಳ್ಳಬಹುದು. ಅನೇಕರು ಕುಳಿತುಕೊಳ್ಳುವ ಸ್ಥಳದಲ್ಲಿ ಸೂಕ್ಷ್ಮತ್ವವು ಇರುವುದಿಲ್ಲ. ಸೂಕ್ಷ್ಮತ್ವವಿರುವೆಡೆ ಅನೇಕ ಜನರ ಆವಾಸಯೋಗ್ಯತ್ವವು ಇರುವುದಿಲ್ಲ. ಇದೆರಡೂ ಪರಸ್ಪರ ವಿರುದ್ಧವೆಂದು ಲೋಕದಲ್ಲಿ ಕಂಡಿದೆ. ಆದರೆ ವಿಶ್ವಕರ್ಮನಿರ್ಮಾಣ ಮಾಡಿದ ಪುಷ್ಪಕವಿಮಾನದಲ್ಲಿ ಇವೆರಡೂ ವಿರುದ್ಧಧರ್ಮಗಳು ಒಟ್ಟಿಗೆ ಇರುವುದನ್ನು ನಾವು ಕಂಡಿರುತ್ತೇವೆ.

**मनुष्यादावदृष्टं च दृश्यते देवतादिषु ।**
**अस्मदादावदृष्टं च दृश्यते मनुजान्तरे ॥२॥**

ಮನುಷ್ಯಾದಾವದೃಷ್ಟಂ ಚ ದೃಶ್ಯತೇ ದೇವತಾದಿಷು ।
ಅಸ್ಮದಾದಾವದೃಷ್ಟಂ ಚ ದೃಶ್ಯತೇ ಮನುಜಾಂತರೇ ॥೨॥

ಮನುಷ್ಯರಲ್ಲಿ ಕಾಣಿಸದ ವಿಚಿತ್ರಶಕ್ತಿಯನ್ನು ದೇವತೆಗಳಲ್ಲಿ ಕಾಣುತ್ತೇವೆ. ಅಷ್ಟೇ ಏಕೆ ನಮ್ಮಲ್ಲಿ ಕಾಣಿಸದ ಶಕ್ತಿಯನ್ನು ಮತ್ತೊಬ್ಬ ಮನುಷ್ಯನಲ್ಲಿಯೇ ನೋಡುತ್ತಿದ್ದೇವೆ.

**ज्ञातुं न पार्यते यस्य पारमप्यस्मदादिभिः ।**
**स एवांभोनिधिः कुम्भजन्मना चुलकीकृतः ॥३॥**

ಜ್ಞಾತುಂ ನ ಪಾರ್ಯತೇ ಯಸ್ಯ ಪಾರಮಪ್ಯಸ್ಮಾದಾದಿಭಿಃ ।
ಸ ಏವಾಂಭೋನಿಧಿಃ ಕುಂಭಜನ್ಮನಾ ಚುಲಕೀಕೃತಃ ॥೩॥

ಸಮುದ್ರದ ದಡವನ್ನೇ ನೋಡಲು ನಮ್ಮಿಂದ ಸಾಧ್ಯವಿಲ್ಲ. ಹೀಗಿರಬೇಕಾದರೆ ಅಗಸ್ತ್ಯರು ಸಮಗ್ರ ಸಮುದ್ರವನ್ನೇ ಆಚಮನವನ್ನಾಗಿ ಕುಡಿದು ಬಿಟ್ಟರಲ್ಲವೇ ?

**विरुद्धमेवमन्यत्रापीश्वरे न विरुध्यते ।**
**स विचित्राचिन्त्यशक्त्या दुर्घटं घटयेद्यतः ॥४॥**

ವಿರುದ್ಧಮೇವಮನ್ಯತ್ರಾಪೀಶ್ವರೇ ನ ವಿರುಧ್ಯತೇ ।
ಸ ವಿಚಿತ್ರಾಚಿಂತ್ಯಶಕ್ತ್ಯಾ ದುರ್ಘಟಂ ಘಟಯೇದ್ಯತಃ ॥೪॥

ಹೀಗೆ ಅನೇಕ ಕಡೆ ವಿರುದ್ಧವಾದ ಧರ್ಮಗಳನ್ನು ಒಟ್ಟಿಗೆ ಇರುವುದು ಕಂಡಿದ್ದೇವೆ. ಇದರಂತೆ ಈಶ್ವರನಲ್ಲಿ ವಿರುದ್ಧಧರ್ಮಗಳು ಇರಬಹುದು. ಅಚಿಂತ್ಯವಾದ ಶಕ್ತಿಯಿಂದ ಇಂತಹ ವಿರುದ್ಧ ಧರ್ಮಗಳು ಈಶ್ವರನಲ್ಲಿ ಹೊಂದುತ್ತದೆ.

**यत्प्रमितं विरुद्धं च तस्यैवाचिन्त्यशक्त्या निर्वाह इति नातिप्रसङ्गः । जीवस्य त्वचिन्त्याद्भुतशक्तौ न मानमस्ति । प्रत्युत तदभाव एव प्रत्यक्षादिसिद्ध इति वैषम्यमिति ।**

ಯಾವುದು ಪ್ರಮಿತವಾಗಿದ್ದು ವಿರುದ್ಧವಾಗಿರುತ್ತವೋ, ಅಲ್ಲಿ ಮಾತ್ರ ಅಚಿಂತ್ಯಶಕ್ತಿಯಿಂದ ವಿರೋಧವನ್ನು ಪರಿಹಾರ ಮಾಡಬೇಕು. ಈಶ್ವರನಲ್ಲಿ ವಿರುದ್ಧಧರ್ಮಗಳೆರಡು ಪ್ರಮಿತವಾಗಿವೆ. ಆದ್ದರಿಂದ ಅಚಿಂತ್ಯಶಕ್ತಿಯಿಂದ ನಿರ್ವಾಹ ಮಾಡುವುದು ತಪ್ಪಾಗುವುದಿಲ್ಲ. ಜೀವನಲ್ಲಿ ಅಚಿಂತ್ಯಾದ್ಭುತ-ಶಕ್ತಿಗಳಿವೆ ಎನ್ನಲು ಯಾವುದೇ ಪ್ರಮಾಣವಿರುವುದಿಲ್ಲ. ಹೊರತಾಗಿ ಅಂತಹ ವಿಚಿತ್ರಶಕ್ತಿ

ಜೀವನಲ್ಲಿರುವುದಿಲ್ಲವೆಂದು ಪ್ರತ್ಯಕ್ಷದಿಂದಲೇ ಸಿದ್ಧವಾಗಿದೆ. ಈ ವೈಷಮ್ಯವಿರುವ ಕಾರಣ ಈಶ್ವರನಲ್ಲಿ ಹೇಳಿದಂತೆ ಜೀವನಲ್ಲಿಯೂ ಕೂಡ ವಿರೋಧವನ್ನು ಪರಿಹಾರ ಮಾಡಬಹುದಲ್ಲವೇ? ಎಂಬ ಪೂರ್ವಪಕ್ಷವು ನಿರಸ್ತವಾಯಿತು.

**अत्र पूर्वपक्षयुक्तीनां प्रबलत्वादेव सिद्धान्ते तदुद्धारार्थं ''श्रुतेस्त्वि'' इति सूत्रे श्रुतेरित्यनेनेश्वरस्य विरुद्धगुणवत्त्वे श्रुतिमेवात्त्वा ''शब्दमूलत्वात्'' इत्यनेनेश्वरस्य तर्कागोचरतां ''आत्मनि'' इति ''सर्वोपेत'' इति च सूत्राभ्यामघटितघटनाशक्तिं चोक्त्वा ''स्वपक्षदोषाच्च'' इति सूत्रेण जीवे तदभाव उक्तः ।**

ಸೂತ್ರಕ್ರಮವಿನ್ಯಾಸ - ಪೂರ್ವಪಕ್ಷಯುಕ್ತಿಗಳು ಈ ಅಧಿಕರಣದಲ್ಲಿ ಬಲಿಷ್ಠವಾಗಿರುತ್ತವೆ. ಆದ್ದರಿಂದ ಸಿದ್ಧಾಂತದಲ್ಲಿ ಅವುಗಳ ಪರಿಹಾರಕ್ಕಾಗಿ ಶ್ರುತಿಪ್ರಮಾಣವನ್ನೇ ಉಲ್ಲೇಖ ಮಾಡಬೇಕು. ಶ್ರುತಿಯನ್ನು ಉಲ್ಲೇಖಿಸುವ 'ಶ್ರುತೇಸ್ತು' ಎಂಬ ಸೂತ್ರವು ಮೊದಲು ಹೊರಟಿದೆ. ಶ್ರುತಿಪ್ರಮಾಣದಿಂದ ಈಶ್ವರನಲ್ಲಿ ವಿರುದ್ಧವಾದ ಗುಣಗಳಿರುತ್ತವೆಂದು ತಿಳಿದ ಮೇಲೆ ತರ್ಕದಿಂದ ಅನ್ಯಥಾಕಲ್ಪನೆಯನ್ನು ಮಾಡಬಾರದೆಂದು ತಿಳಿಸಲು ಮುಂದಿನ 'ಶಬ್ದಮೂಲತ್ವಾತ್' ಎಂಬ ಸೂತ್ರವು ಹೊರಟಿದೆ. ಈ ಸೂತ್ರದಿಂದ ಈಶ್ವರನು ತರ್ಕಕ್ಕೆ ವಿಷಯನಾಗುವುದಿಲ್ಲವೆಂದು ತಿಳಿದ ಮೇಲೆ 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಸೂತ್ರದಿಂದ 'ಸರ್ವೋಪೇತಾ ಚ ತದ್ದರ್ಶನಾಚ್ಚ' ಎಂಬೆರಡು ಸೂತ್ರಗಳಿಂದ ಅಘಟಿತ-ಘಟನಾಶಕ್ತಿಯನ್ನು ಈಶ್ವರನಲ್ಲಿ ಪ್ರತಿಪಾದನೆ ಮಾಡಲಾಗಿದೆ. ಕೊನೆಯಲ್ಲಿ 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರದಿಂದ ಅಚಿಂತ್ಯಾದ್ಭುತಶಕ್ತಿಗಳು ಜೀವನಲ್ಲಿರಲು ಸಾಧ್ಯವಿಲ್ಲವೆಂದು ಸಮರ್ಥಿಸಲಾಗಿದೆ. ಹೀಗೆ ಸೂತ್ರಗಳ ವಿನ್ಯಾಸಕ್ರಮವು ಅರ್ಥಪೂರ್ಣವಾಗಿದೆ.

**प्रकाशः –**

उक्तशङ्कोपमर्दस्य टीकायामस्फुटत्वादाह – **अयं भाव इति** ।। शब्दमूलत्वादित्येतदंशभाष्यटीकार्थं सङ्गृह्णाह – **श्रोत्रेति** ।।

ಪೂರ್ವಪಕ್ಷದಲ್ಲಿ ಮಾಡಲ್ಪಟ್ಟ ಎಲ್ಲಾ ಆಶಂಕೆಗಳ ಪರಿಹಾರವು ನೇರವಾಗಿ ತಿಳಿಯುವುದಿಲ್ಲ. ಆದಕ್ಕಾಗಿ ಗ್ರಂಥಕಾರರು ಶ್ಲೋಕದ ಮೂಲಕ ಪೂರ್ವಪಕ್ಷದ ನಿರಾಕರಣೆಯ ಜೊತೆ ಸಿದ್ಧಾಂತವನ್ನು ಸಂಗ್ರಹಿಸುತ್ತಿದ್ದಾರೆ - 'ಅಯಂ ಭಾವಃ' ಇತ್ಯಾದಿಯಾಗಿ. 'ಶಬ್ದಮೂಲತ್ವಾತ್' ಎಂಬ ಸೂತ್ರದ ಭಾಗಕ್ಕೆ ಭಾಷ್ಯ ಹಾಗೂ ಟೀಕೆಯಲ್ಲಿ ಏನು ಹೇಳಿದ್ದಾರೋ ಅದನ್ನೇ 'ಶ್ರೋತ್ರಾದಿಗಮ್ಯ' ಎಂಬ ಶ್ಲೋಕದಿಂದ ಸಂಗ್ರಹಿಸಿದ್ದಾರೆ.

**प्रकाशः** – ननूक्तं मीमांसावैयर्थ्यमिति । तत्राह – **शुष्केति** ।। अत एव शुष्क तर्कस्याबाधकत्वादेवेत्यर्थः ।

ಶುಷ್ಕತರ್ಕವು ಬಾಧಕವಾಗದಿದ್ದರೆ ಮೀಮಾಂಸಗ್ರಂಥವೇ ವ್ಯರ್ಥವಾಗುತ್ತದೆ ಎಂದು ಪೂರ್ವಪಕ್ಷದಲ್ಲಿ ಹೇಳಿದ್ದೇವಲ್ಲವೇ? ಎಂಬ ಪ್ರಶ್ನೆಗೆ 'ಶುಷ್ಕ ತರ್ಕ ಇತಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಅತ ಏವ' ಎಂಬ ಪದಕ್ಕೆ ಶುಷ್ಕತರ್ಕವು ಬಾಧಕವೂ ಕೂಡ ಆಗುವುದಿಲ್ಲವೆಂದು ಹೇಳಿದ್ದರಿಂದಲೇ ಎಂದರ್ಥ.

**प्रकाशः** –''आत्मनि चैवं विचित्राश्चहि'' इत्येत्सूत्रभाष्यटीकातात्पर्यं व्यनक्ति।। **किञ्चेति** ।। मनुजान्तर इत्युक्तं व्यनक्ति – **ज्ञातुमिति** ।।

'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಸೂತ್ರಕ್ಕೆ ಸಂಬಂಧಪಟ್ಟ ಭಾಷ್ಯ ಹಾಗೂ ಟೀಕೆಗಳಲ್ಲಿ ಇರುವ ತಾತ್ಪರ್ಯವನ್ನು 'ಕಿಂಚ' ಇತ್ಯಾದಿಯಾಗಿ ಸ್ಪಷ್ಟಪಡಿಸಿದ್ದಾರೆ. 'ಮನುಜಾಂತರೇ' ಎಂಬುದನ್ನೇ 'ಜ್ಞಾತುಂ' ಎಂಬ ಶ್ಲೋಕದಿಂದ ವಿವರಿಸಿದ್ದಾರೆ.

**प्रकाशः** – एतेनासम्भावना व्युदस्ता । प्रागुक्तमतिप्रसङ्गमुद्धरति – **यत्प्रमितमिति**।। ''आत्मनिच'' इत्यवधारणार्थकचशब्दाभिप्रायोक्तया प्रागुक्तजीवसाम्यं निराह – **जीवस्य त्विति** ।।

ಹೀಗೆ ಹೇಳಿದ್ದರಿಂದ ಅಸಂಭಾವನಾಶಂಕೆಯನ್ನು ನಿರಾಸ ಮಾಡಿದಂತಾಯಿತು. ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಅತಿಪ್ರಸಂಗವನ್ನು 'ಯತ್ಪ್ರಮಿತಮ್' ಎಂಬುದರಿಂದ ಪರಿಹರಿಸಿದ್ದಾರೆ. 'ಆತ್ಮನಿಚ' ಎಂಬ ಸೂತ್ರದಲ್ಲಿರುವ ಚಶಬ್ದವು ಅವಧಾರಣಾರ್ಥದಲ್ಲಿದೆ ಎಂಬ ಅಭಿಪ್ರಾಯದಿಂದ ಈಶ್ವರನ ಸಾಮ್ಯವು ಜೀವನಿಗೂ ಬರುತ್ತದೆಂಬುದನ್ನು 'ಜೀವಸ್ಯ ತು' ಎಂಬ ವಾಕ್ಯದಿಂದ ಪರಿಹರಿಸಿದ್ದಾರೆ.

**प्रकाशः** – एतेन ''स्वपक्षदोषाच्च'' इत्येतद्भाष्यटीकातात्पर्यमुक्तं बोध्यम् । अस्फुटत्वात्सूत्राणां भाष्याद्युक्तं तात्पर्यं व्यनक्ति ।। **अत्रेति** ।।

ಜೀವನಲ್ಲಿ 'ಅಚಿಂತ್ಯಾದ್ಭುತಶಕ್ತಿ' ಇರುತ್ತದೆಂಬ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲ ಎಂದು ಹೇಳಿದ್ದರಿಂದ 'ಸ್ವಪಕ್ಷದೋಷಾಚ್ಚ' ಎಂಬ ಭಾಷ್ಯ ಹಾಗೂ ಟೀಕೆಗಳ ತಾತ್ಪರ್ಯವನ್ನು ಹೇಳಿದಂತಾಯಿತು. ಸೂತ್ರಗಳ ಅರ್ಥವು ಅಸ್ಪಷ್ಟವಾಗಿರುವುದರಿಂದ ಭಾಷ್ಯ ಹಾಗೂ ಟೀಕೆಗಳಲ್ಲಿ ಹೇಳಿದ ತಾತ್ಪರ್ಯವನ್ನು 'ಅತ್ರ' ಇತ್ಯಾದಿ ವಾಕ್ಯದಿಂದ ವಿಶದ ಪಡಿಸಿದ್ದಾರೆ.

**प्रकाशः** – **श्रुतिमिति** ।। ''योऽसौ विरुद्ध'' इत्यादिश्रुतिमित्यर्थः । एतेन ''शब्दमूलत्वात्'' इत्यनेनैव पूर्वपक्षनिरासात् ''श्रुतेः'' इति व्यर्थमिति निरस्तं ध्येयम् ।।

'ಯೋಽಸೌ ವಿರುದ್ಧಃ' ಎಂಬ ಶ್ರುತಿಯು ವಿರುದ್ಧವಾದ ಗುಣವು ಈಶ್ವರನಲ್ಲಿದೆ ಎಂಬ ವಿಷಯದಲ್ಲಿ ಪ್ರಮಾಣವಾಗಿದೆ. ಇದರಿಂದ 'ಶಬ್ದಮೂಲತ್ವಾತ್' ಎಂಬ ಸೂತ್ರದಿಂದಲೇ ಪೂರ್ವಪಕ್ಷವು ನಿರಾಕೃತವಾದ ಮೇಲೆ 'ಶ್ರುತೇಃ' ಎಂದು ಹೇಳಿದ್ದು ವ್ಯರ್ಥವಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸಿದಂತಾಯಿತು.

ಶ್ರುತೇಸ್ತುಶಬ್ದಮೂಲತ್ವಾಧಿಕರಣ (2-1-8)

**प्रकाशः – सर्वेति ।।** तत्र शक्तीनां कतिपयविषयत्वं किञ्चित्कालीनत्वमाशङ्क्य सर्वविषयकत्वसर्वकालीनत्वोक्तेरिति भावः ।

'ಸರ್ವೋಪೇತಾಚ' ಎಂಬ ಸೂತ್ರದಲ್ಲಿ ಈಶ್ವರನಿಗೆ ಸಕಲವಿಷಯದಲ್ಲಿಯೂ ಸಾರ್ವಕಾಲೀನವಾದ ಅಚಿಂತ್ಯಾದ್ಭುತಶಕ್ತಿಯಿರುತ್ತದೆಂದು ಸಮರ್ಥಿಸಿದ್ದಾರೆ. ಲೋಕದಲ್ಲಿ ಕಾಣಿಸುತ್ತಿರುವ ವಿಚಿತ್ರಶಕ್ತಿಗಳೆಲ್ಲವೂ ಕೆಲವೇ ವಿಷಯದಲ್ಲಿ ಇರುತ್ತವೆ. ಮತ್ತು ಸ್ವಲ್ಪ ಕಾಲದಲ್ಲಿ ಮಾತ್ರ ಇರುತ್ತವೆ. ಆದರೆ ಈಶ್ವರನಲ್ಲಿರುವ ಶಕ್ತಿಯು ಸರ್ವವಿಷಯಕವಾಗಿದೆ ಮತ್ತು ಸರ್ವಕಾಲೀನವಾಗಿದೆ ಎಂದು ತಿಳಿಯಬೇಕು.

**प्रकाशः –** यद्येवं तर्हि ''स्वपक्ष'' इत्यस्य ''सर्व'' इत्येतदानन्तर्यं स्यादिति न वाच्यम् । विचित्रशक्त्यादिनेश्वरेऽदोषत्वे जीवेपि तथा स्यादिति शङ्क्या अत्रैव सङ्गतत्वात् । शक्त्यभावेऽभिहिते सर्वेत्यत्रोक्तार्थाभावस्य कैमुत्यसिद्धत्वादिति भावः।

ಪ್ರಶ್ನೆ -೧. ಶ್ರುತೇಸ್ತು ಶಬ್ದಮೂಲತ್ವಾತ್' ೨. 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ೩. ಸ್ವಪಕ್ಷದೋಷಾಚ್ಚ, ೪. ಸರ್ವೋಪೇತಾಚ ತದ್ದರ್ಶನಾತ್ ಈ ಕ್ರಮದಲ್ಲಿ ಸೂತ್ರಗಳ ವಿನ್ಯಾಸವಿದೆ. ನೀವು ಹೇಳುವ ಪ್ರಕಾರ 'ಸರ್ವೋಪೇತಾಚ' ಎಂಬ ಸೂತ್ರವು ಮೊದಲಿರಬೇಕಿತ್ತು. ಅನಂತರ 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರವಿರಬೇಕಿತ್ತು. ಏಕೆಂದರೆ ಪರಮಾತ್ಮನಿಗೆ ವಿಚಿತ್ರಶಕ್ತಿಯು ಇರುತ್ತದೆಂದು 'ಆತ್ಮನಿ ಚೈವಂ' ಎಂಬ ಸೂತ್ರವು ಹೇಳುತ್ತದೆ. ಅನಂತರ ಪರಮಾತ್ಮನಲ್ಲಿರುವ ವಿಚಿತ್ರಶಕ್ತಿಯು ಕತಿಪಯವಿಷಯವೇ ? ಎಂಬ ಪ್ರಶ್ನೆ ಬರುತ್ತದೆ. ಇದರ ಪರಿಹಾರಕ್ಕಾಗಿ ಸರ್ವೋಪೇತಾಚ ಎಂಬ ಸೂತ್ರವೇ ಹೊರಡಬೇಕು. ಮಧ್ಯದಲ್ಲಿ 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರವು ಅಸಂಗತವಲ್ಲವೇ ?

ಉತ್ತರ - ಪರಮಾತ್ಮನಲ್ಲಿ ವಿಚಿತ್ರಶಕ್ತಿಯನ್ನು 'ಆತ್ಮನಿ ಚೈವಂ' ಎಂಬ ಸೂತ್ರವು ಹೇಳಿದ ಕೂಡಲೇ ಜೀವನಲ್ಲಿಯೂ ಕೂಡ ವಿಚಿತ್ರಶಕ್ತಿಯಿರಬಹುದಲ್ಲವೇ? ಎಂಬ ಸಂದೇಹ ಬರುತ್ತದೆ. ಅದರ ಪರಿಹಾರಕ್ಕಾಗಿ 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರವು ಹೊರಟಿದೆ. ಆದ್ದರಿಂದ 'ಆತ್ಮನಿ ಚೈವಂ' ಎಂಬ ಸೂತ್ರದ ಅನಂತರ 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರ ಹೊರಟಿದ್ದು ಅಸಂಗತವಲ್ಲ.

ಪ್ರಶ್ನೆ - ಹಾಗಾದರೆ ಜೀವನಲ್ಲಿರುವ ಶಕ್ತಿಯೂ ಕೂಡ ಸರ್ವವಿಷಯಕವಲ್ಲ. ಮತ್ತು ಸರ್ವಕಾಲೀನವಲ್ಲ ಎಂದು ಸಮರ್ಥಿಸಲು ಮತ್ತೊಂದು ಸೂತ್ರ ಬೇಕಿತ್ತಲ್ಲವೇ ?

ಉತ್ತರ - 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರದಿಂದ ಜೀವನಲ್ಲಿ ವಿಚಿತ್ರಶಕ್ತಿಯಿರುವುದಿಲ್ಲವೆಂದು ಹೇಳಿದ ಮೇಲೆ ಜೀವಶಕ್ತಿಯು ಸಾರ್ವವಿಷಯಕವಲ್ಲ, ಸರ್ವಕಾಲೀನವಲ್ಲ ಎಂಬುದು ಕೈಮುತ್ಯನ್ಯಾಯದಿಂದಲೇ ಸಿದ್ಧವಾಗುತ್ತದೆ. ಆದ್ದರಿಂದ ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸ್ವರಸವಾಗಿದೆಯೆಂದು ತಿಳಿಯಬೇಕು.




ಶ್ರೋತ್ರಾದಿಗಮ್ಯಶಬ್ದಾದೌ ಚಕ್ಷುರಾದಿ ನ ಸಾಧಕಮ್ ।
ನ ಚಾಪಿ ಬಾಧಕಂ ಯದ್ವತ್ ಶುಷ್ಕತರ್ಕಸ್ತಥೇಶ್ವರೇ ॥

ಶ್ರೋತ್ರೇಂದ್ರಿಯಕ್ಕೆ ವಿಷಯವಾದ ಶಬ್ದಾದಿಗಳ ಬಗ್ಗೆ ಚಕ್ಷುರಾದಿ ಇತರ ಇಂದ್ರಿಯಗಳು ಸಾಧಕವೂ ಆಗವುದಿಲ್ಲ. ಬಾಧಕವೂ ಆಗುವುದಿಲ್ಲ. ಇದರಂತೆ ಈಶ್ವರನ ವಿಷಯದಲ್ಲಿ ಶುಷ್ಕವಾದ ತರ್ಕವು ಸಾಧಕವೂ ಆಗುವುದಿಲ್ಲ. ಬಾಧಕವೂ ಆಗುವುದಿಲ್ಲ.

ಯದ್ವಾಕ್ಯೋಕ್ತಂ ನ ತದ್ಯುಕ್ತಿರ್ವಿರೋದ್ಧುಂ ಶುಕ್ನುಯಾತ್ಕ್ವಚಿತ್ ।
ವಿರೋಧೇ ವಾಕ್ಯಯೋಃ ಕ್ವಾಪಿ ಕಿಂಚಿತ್ ಸಾಹಾಯ್ಯಕಾರಣಮ್ ॥

ಇತಿ ಸ್ಮೃತಿರುದಾಹೃತಾ ।

ವಾಕ್ಯದಿಂದ ಪ್ರತಿಪಾದಿತವಾದ ವಿಷಯದಲ್ಲಿ ಯುಕ್ತಿಯು ಯಾವಾಗಲೂ ವಿರೋಧ ಮಾಡಲು ಸಮರ್ಥವಾಗುವುದಿಲ್ಲ. ಒಂದು ವೇಳೆ ವಾಕ್ಯಗಳಲ್ಲಿ ಪರಸ್ಪರ ವಿರೋಧವು ಬಂದರೆ ಆವಾಗ ಮಾತ್ರ ತರ್ಕವು ವಿರೋಧ ಪರಿಹಾರಕ್ಕಾಗಿ ಸಹಾಯ ಮಾಡುತ್ತದೆ. ಹೀಗೆ ಭಾಷ್ಯದಲ್ಲಿ ಸ್ಮೃತಿಯನ್ನು ಉದಾಹರಿಸಿದ್ದಾರೆ.

ಬಹ್ವಾವಾಸತ್ವಸೂಕ್ಷ್ಮತ್ವೇ ಅಪ್ಯನ್ಯತ್ರ ವಿರೋಧಿನೀ ।
ವಿಶ್ವಕರ್ಮಾದಿಸಮಾರ್ಥ್ಯಾತ್‌ದೃಶ್ಯತೇ ಪುಷ್ಪಕಾದಿಷು ॥೧॥

ದೇವಶಿಲ್ಪಿ ಎನಿಸಿದ ವಿಶ್ವಕರ್ಮನು ತನ್ನ ಸಾಮರ್ಥ್ಯದಿಂದ ಪುಷ್ಪಕವಿಮಾನವನ್ನು ನಿರ್ಮಾಣ ಮಾಡಿದನು. ಸಣ್ಣದಾದ ಪುಷ್ಪಕವಿಮಾನದಲ್ಲಿ ಐದುಮಂದಿ ಕುಳಿತುಕೊಳ್ಳಬಹುದು. ಅಷ್ಟೇ ಅಲ್ಲ ಲಕ್ಷಾಂತರಮಂದಿಯೂ ಸಹ ಕುಳಿತುಕೊಳ್ಳಬಹುದು. ಅನೇಕರು ಕುಳಿತುಕೊಳ್ಳುವ ಸ್ಥಳದಲ್ಲಿ ಸೂಕ್ಷ್ಮತ್ವವು ಇರುವುದಿಲ್ಲ. ಸೂಕ್ಷ್ಮತ್ವವಿರುವೆಡೆ ಅನೇಕ ಜನರ ಆವಾಸಯೋಗ್ಯತ್ವವು ಇರುವುದಿಲ್ಲ. ಇದೆರಡೂ ಪರಸ್ಪರ ವಿರುದ್ಧವೆಂದು ಲೋಕದಲ್ಲಿ ಕಂಡಿದೆ. ಆದರೆ ವಿಶ್ವಕರ್ಮನಿರ್ಮಾಣ ಮಾಡಿದ ಪುಷ್ಪಕವಿಮಾನದಲ್ಲಿ ಇವೆರಡೂ ವಿರುದ್ಧಧರ್ಮಗಳು ಒಟ್ಟಿಗೆ ಇರುವುದನ್ನು ನಾವು ಕಂಡಿರುತ್ತೇವೆ.

ಮನುಷ್ಯಾದಾವದೃಷ್ಟಂ ಚ ದೃಶ್ಯತೇ ದೇವತಾದಿಷು ।
ಅಸ್ಮದಾದಾವದೃಷ್ಟಂ ಚ ದೃಶ್ಯತೇ ಮನುಜಾಂತರೇ ॥೨॥

ಮನುಷ್ಯರಲ್ಲಿ ಕಾಣಸದ ವಿಚಿತ್ರಶಕ್ತಿಯನ್ನು ದೇವತೆಗಳಲ್ಲಿ ಕಾಣುತ್ತೇವೆ. ಅಷ್ಟೇ ಏಕೆ ನಮ್ಮಲ್ಲಿ ಕಾಣಸದ ಶಕ್ತಿಯನ್ನು ಮತ್ತೊಬ್ಬ ಮನುಷ್ಯನಲ್ಲಿಯೇ ನೋಡುತ್ತಿದ್ದೇವೆ.

ಶ್ರುತೇಸ್ತುಶಬ್ದಮೂಲತ್ವಾಧಿಕರಣ (2-1-8)

ಜ್ಞಾತುಂ ನ ಪಾರ್ಯತೇ ಯಸ್ಯ ಪಾರಮಪ್ಯಸ್ಮಾದಾದಿಭಿಃ ।
ಸ ಏವಾಂಭೋನಿಧಿಃ ಕುಂಭಜನ್ಮನಾ ಚುಲಕೀಕೃತಃ ॥೩॥

ಸಮುದ್ರದ ದಡವನ್ನೇ ನೋಡಲು ನಮ್ಮಿಂದ ಸಾಧ್ಯವಿಲ್ಲ. ಹೀಗಿರಬೇಕಾದರೆ ಅಗಸ್ತ್ಯರು ಸಮಗ್ರ ಸಮುದ್ರವನ್ನೇ ಆಚಮನವನ್ನಾಗಿ ಕುಡಿದು ಬಿಟ್ಟರಲ್ಲವೇ ?

ವಿರುದ್ಧಮೇವಮನ್ಯತ್ರಾಪೀಶ್ವರೇ ನ ವಿರುಧ್ಯತೇ ।
ಸ ವಿಚಿತ್ರಾಚಿಂತ್ಯಶಕ್ತ್ಯಾ ದುರ್ಘಟಂ ಘಟಯೇದ್ಯತಃ ॥೪॥

ಹೀಗೆ ಅನೇಕ ಕಡೆ ವಿರುದ್ಧವಾದ ಧರ್ಮಗಳನ್ನು ಒಟ್ಟಿಗೆ ಇರುವುದು ಕಂಡಿದ್ದೇವೆ. ಇದರಂತೆ ಈಶ್ವರನಲ್ಲಿ ವಿರುದ್ಧ ಧರ್ಮಗಳು ಇರಬಹುದು. ಅಚಿಂತ್ಯವಾದ ಶಕ್ತಿಯಿಂದ ಇಂತಹ ವಿರುದ್ಧ ಧರ್ಮಗಳು ಈಶ್ವರನಲ್ಲಿ ಹೊಂದುತ್ತದೆ.

## ಅದ್ವೈತ ಹಾಗೂ ವಿಶಿಷ್ಟಾದ್ವೈತದ ನಿರಾಕರಣೆ

## तात्पर्यचन्द्रिका

**यदुक्तमुभाभ्यां ''इतर'' इत्यादिसूत्रत्रयमेकमधिकरणम् । तत्र इतरस्य जीवस्य ब्रह्मत्वव्यपदेशात् चेत्, ब्रह्म जीवान् सृष्ट्यादिना दुःखयत्, स्वात्मानमेव दुःखयेदिति ''हिताकरणादिदोषप्रसक्तिः'' इत्याद्येन पूर्वपक्षयित्वा श्रुतिषु भेदस्यापि व्यपदेशान्न दोष इति द्वितीयादिना सिद्धान्तितम् । तत्राभेदः सत्यो भेदस्त्वसत्य इत्यन्येषां मतम् ।**

ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ಹೀಗೆ ಹೇಳುತ್ತಾರೆ - 'ಇತರವ್ಯಪದೇಶಾತ್ ಹಿತಾಕರಣಾದಿದೋಷಪ್ರಸಕ್ತಿಃ' 'ಅಧಿಕಂತು ಭೇದನಿರ್ದೇಶಾತ್', 'ಅಶ್ಮಾದಿವಚ್ಚ ತದನುಪಪತ್ತಿಃ' ಈ ಮೂರು ಸೂತ್ರಗಳು ಸೇರಿ ಒಂದೇ ಅಧಿಕರಣ ಆಗಿವೆ. ಈ ಮೂರರಲ್ಲಿ ಮೊದಲನೆಯದ್ದು ಪೂರ್ವಪಕ್ಷ ಸೂತ್ರ. ಅದರ ಅರ್ಥ ಹೀಗಿದೆ - ಇತರಸ್ಯ = ಬೇರೆಯವನಾದ ಜೀವನಿಗೆ, ವ್ಯಪದೇಶಾತ್ = ಬ್ರಹ್ಮತ್ವವನ್ನು ವ್ಯಪದೇಶ ಮಾಡಿರುವುದರಿಂದ, ಹಿತಾಕರಣಾದಿದೋಷಪ್ರಸಕ್ತಿಃ = ಜೀವರನ್ನು ಬ್ರಹ್ಮನು ಸೃಷ್ಟಿ ಮಾಡಿ, ದುಃಖಪಡಿಸುತ್ತಾನೆ. ಅಂಥ ಜೀವರಿಂದ ಐಕ್ಯವಿರುವ ಕಾರಣ ತನ್ನನ್ನೂ ಕೂಡ ದುಃಖಕ್ಕೆ ವಿಷಯನನ್ನಾಗಿ ಮಾಡಿಕೊಳ್ಳುತ್ತಾನೆ. ಆದ್ದರಿಂದ ಹಿತಾಕರಣ, ಅಹಿತಕರಣ ಎಂಬ ದೋಷಗಳು ಬ್ರಹ್ಮನಲ್ಲಿ ಬರುತ್ತವೆ. ಇಷ್ಟು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ 'ಅಧಿಕಂ ತು ಭೇದನಿರ್ದೇಶಾತ್' ಎಂಬ ಸೂತ್ರವು ಉತ್ತರವನ್ನು ನೀಡುತ್ತಿದೆ. ಅಧಿಕಂ = ಜೀವನಿಗಿಂತ ಭಿನ್ನನಾದ ಬ್ರಹ್ಮನಿಗೆ, ಭೇದನಿರ್ದೇಶಾತ್ = ಶ್ರುತಿಗಳಲ್ಲಿ ಭೇದವನ್ನೂ ಕೂಡ ಹೇಳಿರುವುದರಿಂದ ಹಿತಾಕರಣಾದಿದೋಷಗಳ ಪ್ರಸಕ್ತಿಗೆ ಅವಕಾಶವಿಲ್ಲ ಎಂದು.

ವಿಶೇಷವಿಚಾರ - ಯಾವ ಸೂತ್ರದಲ್ಲಿ 'ತು' ಶಬ್ದವಿರುತ್ತದೋ, ಅದರ ಹಿಂದಿನದ್ದು ಪೂರ್ವಪಕ್ಷ ಸೂತ್ರವೆಂದು ಅದ್ವೈತಿಗಳು ಭಾವಿಸುತ್ತಾರೆ. ಪ್ರಕೃತ 'ಅಧಿಕಂತು ಭೇದನಿರ್ದೇಶಾತ್' ಎಂಬಲ್ಲಿ 'ತು'ಶಬ್ದ ಇರುವುದರಿಂದ ಇದರ ಹಿಂದಿನ 'ಇತರವ್ಯಪದೇಶಾತ್ ಹಿತಕರಣಾದಿದೋಷಪ್ರಸಕ್ತಿಃ' ಎಂಬುದು ಪೂರ್ವಪಕ್ಷ ಸೂತ್ರವಾಗುತ್ತದೆ ಎಂಬುದು ಅದ್ವೈತಿಗಳ ಅಭಿಪ್ರಾಯ.

**केषाञ्चित्तु भेदः सत्योऽभेदव्यपदेशस्तु शरीरशरीरिभावनिमित्तकः । जीवो हि ब्रह्मणः शरीरमिति भेद इति ।**

ವಿಶಿಷ್ಟಾದ್ವೈತಿಗಳು ಭೇದವು ಸತ್ಯವಾಗಿದೆ ಶ್ರುತಿಗಳಲ್ಲಿರುವ ಅಭೇದವ್ಯಪದೇಶವು ಶರೀರಶರೀರಿ-ಭಾವನಿಮಿತ್ತಕವಾಗಿದೆ. ಜೀವನು ಬ್ರಹ್ಮನಿಗೆ ಶರೀರನಾಗಿರುವುದರಿಂದ ಜೀವಬ್ರಹ್ಮನಿಗೆ ಭೇದವಿದೆ ಎಂಬುದಾಗಿ 'ಅಧಿಕಂತು ಭೇದನಿರ್ದೇಶಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನವನ್ನು ಮಾಡುತ್ತಾರೆ.

ವಿಶೇಷವಿಚಾರ - 'ಇತರವ್ಯಪದೇಶಾತ್ ಹಿತಾಕರಣಾದಿದೋಷಪ್ರಸಕ್ತಿಃ' ಎಂಬ ಸೂತ್ರಕ್ಕೆ ವಿಶಿಷ್ಟಾದ್ವೈತಿಗಳು ಅದ್ವೈತಿಗಳಂತೆಯೇ ವ್ಯಾಖ್ಯಾನ ಮಾಡುತ್ತಾರೆ. ಆದರೆ 'ಅಧಿಕಂತು ಭೇದನಿರ್ದೇಶನಾತ್' ಎಂಬ ಸೂತ್ರಕ್ಕೆ ಬೇರೆ ವ್ಯಾಖ್ಯಾನ ಮಾಡಿದ್ದಾರೆ. ಏಕೆಂದರೆ ಅದ್ವೈತಿಗಳಂತೆ ಜೀವಬ್ರಹ್ಮನಿಗೆ ಅಭೇದವನ್ನು ಒಪ್ಪುವುದಿಲ್ಲ. ಶ್ರುತಿಗಳಲ್ಲಿರುವ ಅಭೇದವ್ಯಪದೇಶವು ಶರೀರಶರೀರಿಭಾವನಿಮಿತ್ತಕವೆಂದು ಇವರು ಅಭಿಪ್ರಾಯ ಪಡುತ್ತಾರೆ.

**तत्राद्ये सूत्रे ''इतरव्यपदेशात्'' इत्यस्यैक्यव्यपदेशादित्यर्थो विरुद्धः । द्वितीयेऽपि भेदमात्रस्य वक्तव्यत्वेन सूत्रेऽधिक शब्दास्वारस्यम् ।**

ಅದ್ವೈತಿಗಳ ಹಾಗೂ ವಿಶಿಷ್ಟಾದ್ವೈತಿಗಳ ಈ ವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ ಪ್ರಥಮಸೂತ್ರದಲ್ಲಿ 'ಇತರವ್ಯಪದೇಶಾತ್' ಎಂಬುದಕ್ಕೆ 'ಐಕ್ಯವ್ಯಪದೇಶಾತ್' ಎಂದು ವ್ಯಾಖ್ಯಾನ ಮಾಡಿದ್ದೇ ವಿರುದ್ಧವಾಗಿದೆ. ಎರಡನೆಯ ಸೂತ್ರದಲ್ಲೂ ಕೂಡ 'ಭೇದನಿರ್ದೇಶಾತ್' ಎಂದಷ್ಟೇ ಸಾಕು. ಪುನಃ 'ಅಧಿಕ' ಎಂಬ ಶಬ್ದವು ಅಸ್ವರಸವಾಗಿದೆ.

ವಿಶೇಷವಿಚಾರ - ಅದ್ವೈತಿಗಳ ವ್ಯಾಖ್ಯಾನ ತಪ್ಪು. ಏಕೆಂದರೆ ಇತರವ್ಯಪದೇಶಾತ್' ಎಂಬಲ್ಲಿರುವ 'ಇತರ' ಎಂಬ ಪದದಿಂದಲೇ ಬ್ರಹ್ಮನಿಗಿಂತ ಜೀವನು ಭಿನ್ನನಾಗಿದ್ದಾನೆಂದೇ ತಿಳಿಯುತ್ತದೆ. ಹೀಗಿದ್ದರೂ ಕೂಡ ಅದ್ವೈತಿಗಳು 'ಐಕ್ಯವ್ಯಪದೇಶಾತ್' ಎಂದು ವ್ಯಾಖ್ಯಾನ ಮಾಡುವುದು ಅತ್ಯಂತ ವಿರುದ್ಧವಾಗಿದೆ. 'ಪೂರ್ವ' ಎಂಬ ಪದಕ್ಕೆ 'ಪಶ್ಚಿಮ' ಎಂಬರ್ಥವನ್ನು ಒಪ್ಪಿದಂತಾಗುತ್ತದೆ. ಹಾಗೆಯೇ ಎರಡನೆಯ ಸೂತ್ರದಲ್ಲಿ 'ಅಧಿಕಂ' ಎಂಬ ಪದವು ವ್ಯರ್ಥ. ಇದಕ್ಕೆ ಯಾವುದೇ ರೀತಿಯಲ್ಲಿ ಅವರು ಅರ್ಥವನ್ನು ಹೇಳಿರುವುದಿಲ್ಲ. ಜೀವನಿಗಿಂತ ಭಿನ್ನನಾದ ಎಂಬರ್ಥವನ್ನು ಹೇಳಿದರೂ ಕೂಡ ಅದು ಭೇದನಿರ್ದೇಶ ಪದದಿಂದಲೇ ತಿಳಿಯುತ್ತದೆ.

**केषाञ्चित्पक्षे ''अवस्थितेरिति काशकृत्स्नः'' इत्यनेन पुनरुक्तिः । तत्राप्यभेदश्रुतिः शरीरशरीरिभावविषयेत्युक्तत्वात् ।**

ರಾಮಾನುಜರ ಪಕ್ಷದಲ್ಲಿ 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಎಂಬ ಸೂತ್ರದಿಂದ 'ಅಧಿಕಂ ತು ಭೇದನಿರ್ದೇಶಾತ್' ಎಂಬ ಸೂತ್ರಕ್ಕೆ ಪುನರುಕ್ತಿ ಬರುತ್ತದೆ. ಏಕೆಂದರೆ ಪ್ರಕೃತ್ಯಧಿಕರಣದಲ್ಲಿ

ಪ್ರಸಕ್ತವಾಗುವ 'ಅವಸ್ಥಿತೇರಿತಿ' ಇತ್ಯಾದಿ ಸೂತ್ರದಲ್ಲಿ ಅಭೇದಶ್ರುತಿಗಳು ಶರೀರಶರೀರಿ-ಭಾವವಿಷಯಕವಾಗಿವೆ ಎಂದು ಸಮರ್ಥನೆ ಮಾಡಿದ್ದಾಗಿದೆ.

**अन्येषां पक्षे च कथं ब्रह्मणो दुःखाद्यनर्थाभावः । किं विशिष्टस्य मिथ्याभूतस्य जीवस्यैव दुःखाद्यनर्थयोगात् तस्य च ब्रह्माभेदाभावात्, किं वा सत्यस्य विशेष्यस्यैवानर्थयोगात् ब्रह्मणस्तदभेदाभावात् यद्वा सत्यपि तात्त्विकाभेदे भेदाध्यासात् अथवा ब्रह्मणस्तत्वज्ञानित्वेन जीववदभिमानाभावात् आहोस्वित् दुःखादेः कल्पितत्वेन परमार्थतोऽनर्थाभावात् ।**

ಅದ್ವೈತಿಗಳು ಬ್ರಹ್ಮನಿಗೆ ದುಃಖಾದ್ಯನರ್ಥಗಳಾಗುವುದಿಲ್ಲವೆನ್ನುತ್ತಾರೆ. ಇದು ಹೇಗೆ ? ಎಂಬ ನಮ್ಮ ಪ್ರಶ್ನೆಗೆ ಅವರು ಉತ್ತರಿಸಬೇಕು -

೧. ವಿಶಿಷ್ಟನಾದ ಮಿಥ್ಯಾಸ್ವರೂಪನಾದ ಜೀವನಿಗೆ ಮಾತ್ರ ದುಃಖಾದ್ಯನರ್ಥಗಳು ಉಂಟಾಗುತ್ತವೆ. ಇಂಥ ಜೀವನಿಗೆ ಶುದ್ಧಬ್ರಹ್ಮನಿಂದ ಭೇದವು ಇಲ್ಲದ ಕಾರಣ ಬ್ರಹ್ಮನಿಗೆ ದುಃಖಾದ್ಯನರ್ಥಗಳು ಉಂಟಾಗುವುದಿಲ್ಲ ಎಂದು ಹೇಳುತ್ತಿರೋ?

೨. ಅಥವಾ ಸತ್ಯಸ್ವರೂಪನಾದ ವಿಶೇಷ್ಯನಿಗೆ ಅನರ್ಥಗಳು ಉಂಟಾಗುತ್ತವೆ. ಬ್ರಹ್ಮನಿಗೆ ಅಂಥ ಸತ್ಯಭೂತನಾದ ಜೀವನಿಂದ ಅಭೇದವು ಇಲ್ಲದ ಕಾರಣ ಜೀವನಿಗುಂಟಾಗುವ ದುಃಖಾದ್ಯನರ್ಥಗಳು ಬ್ರಹ್ಮನಿಗೆ ಉಂಟಾಗುವುದಿಲ್ಲ ಎಂದು ಹೇಳುವಿರೋ?

೩. ಅಥವಾ ಪಾರಮಾರ್ಥಿಕವಾಗಿ ಜೀವಬ್ರಹ್ಮರಿಗೆ ಅಭೇದವಿದ್ದರೂ ಕೂಡ ಭೇದದ ಅಧ್ಯಾಸವಿರುವುದರಿಂದ ಬ್ರಹ್ಮನಿಗೆ ದುಃಖಾದ್ಯನರ್ಥಗಳು ಉಂಟಾಗುವುದಿಲ್ಲವೆನ್ನುವಿರೋ ?

೪. ಅಥವಾ ಬ್ರಹ್ಮನು ತತ್ವಜ್ಞಾನಿಯಾಗಿರುವುದರಿಂದ ಜೀವನಂತೆ ಅಭಿಮಾನಾದಿಗಳು ಇಲ್ಲದ ಕಾರಣ ದುಃಖ್ಯಾದ್ಯನರ್ಥಗಳು ಉಂಟಾಗುವುದಿಲ್ಲವೆಂದು ಹೇಳುವಿರೋ?

೫. ಅಥವಾ ದುಃಖಾದಿಗಳೆಲ್ಲವೂ ಕಲ್ಪಿತವಾದ್ದರಿಂದ, ಪಾರಮಾರ್ಥಿಕವಾಗಿಯೂ ಅನರ್ಥಭೂತಗಳೇ ಅಲ್ಲ. ಆದ್ದರಿಂದ ಬ್ರಹ್ಮನಿಗೆ ದುಃಖಾದ್ಯನರ್ಥಗಳು ಇಲ್ಲವೆಂದು ಹೇಳುವಿರೋ?

**नाद्यः । बन्धमोक्षयोः सामानाधिकरण्यनियमेन मोक्षान्वयिनः सत्यस्य विशेष्यस्यैवानर्थयोगात् । नहि बन्धाश्रयनाशो मोक्षः । किन्तु सति तस्मिन् बन्धमात्रस्य । अन्यथाऽऽत्मनाशो मोक्षः स्यात् ।**

ಈ ಐದು ಪಕ್ಷಗಳಲ್ಲಿ ಮೊದಲನೆಯದ್ದು ತಪ್ಪು. ಏಕೆಂದರೆ ಬಂಧ ಹಾಗೂ ಮೋಕ್ಷಗಳಿಗೆ

ಸಮಾನಾಧಿಕರಣ್ಯವಿರಬೇಕೆಂಬ ನಿಯಮವು ಇರುತ್ತದೆ. ಮೋಕ್ಷವನ್ನು ಹೊಂದುವ ಸತ್ಯಸ್ವರೂಪನಾದ ಶುದ್ಧಬ್ರಹ್ಮನಿಗೆ ಸಂಸಾರಬಂಧನವನ್ನು ಹೇಳಬೇಕು. ಮತ್ತು ಬಂಧಾಶ್ರಯನಾಶವನ್ನೇ ಮೋಕ್ಷವೆಂದು ಹೇಳಲಾಗದು. ಬಂಧಕ್ಕೆ ಆಶ್ರಯನಾದವನು ಇದ್ದರೆ ಅವನಲ್ಲಿ ಬಂಧವಷ್ಟೇ ನಾಶವಾಗಬೇಕು. ಅದನ್ನೇ ಮೋಕ್ಷವೆಂದು ಪರಿಗಣಿಸಬೇಕು. ಹೀಗೊಪ್ಪದಿದ್ದರೆ ಆತ್ಮನಾಶವನ್ನೇ ಮೋಕ್ಷವೆಂದು ಹೇಳಿದಂತಾಗುತ್ತದೆ.

ವಿಶೇಷವಿಚಾರ - ವಿಶಿಷ್ಟನಾದವನಿಗೆ ದುಃಖಾದ್ಯನರ್ಥಗಳು ಇರುತ್ತವೆ. ಬ್ರಹ್ಮನು ಇಂಥ ವಿಶಿಷ್ಟನಾದವನಿಗಿಂತ ಅಭಿನ್ನನಾಗದ ಕಾರಣ ದುಃಖಾದ್ಯನರ್ಥಗಳು ಇರುವುದಿಲ್ಲ ಎಂಬುದು ಪ್ರಥಮಪಕ್ಷ. ಇದು ಸರಿಯಲ್ಲ. ಏಕೆಂದರೆ ದುಃಖಾದ್ಯನರ್ಥಗಳನ್ನು ಪಡೆಯುವುದೇ 'ಬಂಧ' ಎಂದು ಕರೆಸಿಕೊಳ್ಳುತ್ತದೆ. ಈ ದುಃಖಾದ್ಯನರ್ಥಗಳನ್ನು ಸತ್ಯಭೂತವಾದ ವಿಶೇಷ್ಯಕ್ಕೆ ಹೇಳಬೇಕು ಹೊರತು, ವಿಶಿಷ್ಟಕ್ಕೆ ಹೇಳಲು ಸಾಧ್ಯವಿಲ್ಲ. ಯಾರಿಗೆ ಮೋಕ್ಷವನ್ನು ಹೇಳುತ್ತೇವೋ, ಅವನಿಗೆ ಬಂಧವನ್ನು ಹೇಳಬೇಕು. ವಿಶಿಷ್ಟಕ್ಕೆ ಮೋಕ್ಷವಾಗಲು ಸಾಧ್ಯವೇ ಇಲ್ಲ. ಏಕೆಂದರೆ ಮೋಕ್ಷದಲ್ಲಿ ವಿಶೇಷಣಾದಿಗಳೆಲ್ಲವೂ ನಾಶವಾಗುವುದರಿಂದ ವಿಶಿಷ್ಟವೇ ಇರುವುದಿಲ್ಲ. ಆದ್ದರಿಂದ ವಿಶೇಷ್ಯಕ್ಕೆ ಮೋಕ್ಷವನ್ನು ಹೇಳಬೇಕು. ಇಂಥ ವಿಶೇಷ್ಯನು ಬ್ರಹ್ಮನಿಂದ ಅಭಿನ್ನನಾಗಿರುವುದರಿಂದ ಬ್ರಹ್ಮನಿಗೆ ದುಃಖಾದ್ಯನರ್ಥಗಳು ಬಂದೇ ಬರುತ್ತವೆ.

**न चाविद्यासम्बन्धरूपो बन्धश्चिन्मात्रस्य, दुःखाद्यनर्थस्तु प्रतिबिम्बस्य जीवस्य, उपाधेः प्रतिबिम्बपक्षपातित्वादिति युक्तम् ।**

ಅವಿದ್ಯಾಸಂಬಂಧರೂಪವಾದ ಬಂಧವನ್ನು ಚಿನ್ಮಾತ್ರನಿಗೆ ಹೇಳುತ್ತೇವೆ. ಆದರೆ ದುಃಖಾದ್ಯನರ್ಥಗಳು ಪ್ರತಿಬಿಂಬನಾದ ಜೀವನಿಗೆ ಮಾತ್ರ ಬರುತ್ತವೆ. ಏಕೆಂದರೆ ಉಪಾಧಿಯು ಪ್ರತಿಬಿಂಬಪಕ್ಷಪಾತಿಯಾದ್ದರಿಂದ ತನ್ನಲ್ಲಿರುವ ದೋಷವನ್ನು ಪ್ರತಿಬಿಂಬದಲ್ಲಷ್ಟೇ ತೋರಿಸುತ್ತದೆ.

**बहुजीववादे मुक्ता यद्भावमापन्नास्तस्य चिन्मात्रस्य बन्धापातात् । एकजीववादेपि बन्धतत्कार्यदुःखाद्यनर्थयोर्वैयधिकरण्यायोगात् । दुःखानुभवरूपानर्थस्य मुक्तिरूपपुमर्थसामानाधिकरण्यनियमाच्च ।**

ಬಹುಜೀವವಾದದಲ್ಲಿ ಮುಕ್ತರು ಯಾವ ಸ್ವರೂಪವನ್ನು ಹೊಂದುತ್ತಾರೋ, ಅಂಥ ಚಿನ್ಮಾತ್ರನಿಗೂ ಬಂಧವು ಬರಬೇಕಾಗುತ್ತದೆ. ಏಕಜೀವವಾದದಲ್ಲೂ ಕೂಡ ಬಂಧ ಹಾಗೂ ಮೋಕ್ಷಗಳಿಗೆ ಸಾಮಾನಾಧಿಕರಣ್ಯವು ಬರುವುದಾದರೂ ಕೂಡ ಬಂಧ ಹಾಗೂ ಅವಿದ್ಯಾಕಾರ್ಯವಾದ ದುಃಖಾದ್ಯನರ್ಥಗಳಿಗೆ ಸಾಮಾನಾಧಿಕರಣ್ಯವು ಬರುವುದಿಲ್ಲ. ವೈಯಧಿಕರಣ್ಯವೇ ಬರುತ್ತದೆ. ಇದೂ ಸಹ ಯುಕ್ತವಾಗುವುದಿಲ್ಲ. ಮತ್ತು ಏಕಜೀವವಾದಿಗಳು ಬಂಧ ಹಾಗೂ ಮೋಕ್ಷಗಳಿಗೆ ಸಾಮಾನಾಧಿ-ಕರಣ್ಯವನ್ನು ಮೇಲ್ನೋಟಕ್ಕೆ ಇದೆಯೆಂದು ಸಮರ್ಥನೆ ಮಾಡುವುದಾದರೂ ಕೂಡ ಅನರ್ಥಕ್ಕೂ ಪುಮರ್ಥಕ್ಕೂ ಸಾಮಾನಾಧಿಕರಣ್ಯವನ್ನು ಸಮರ್ಥಿಸಲು ಅವರಿಂದ ಸಾಧ್ಯವಿಲ್ಲ. ಏಕೆಂದರೆ ದುಃಖಾನುಭವವೆಂಬ ಅನರ್ಥವು ಶುದ್ಧಬ್ರಹ್ಮನಿಗೆ ಇರುವುದಿಲ್ಲ. ಮುಕ್ತಿಯೆಂಬ ಪುಮರ್ಥವು

ಶುದ್ಧಬ್ರಹ್ಮನಿಗೆ ಇರುತ್ತದೆ. ಆದ್ದರಿಂದ ಅನರ್ಥ ಹಾಗೂ ಪುಮರ್ಥಗಳಿಗೆ ಸಾಮಾನಾಧಿಕರಣ್ಯವನ್ನು ಹೇಳಿದಂತಾಗಲಿಲ್ಲ.

**दुःखमेव च स्वतोऽनर्थः । अन्यत्तु तद्द्वारा । यथा च त्वत्पक्षे अनादिभावरूपं न निवर्तत इति सामान्यव्याप्तेरज्ञानं ज्ञाननिवर्त्यमिति विशेषव्याप्त्या बाधः । तथोपाधिः प्रतिबिम्बपक्षपातीति सामान्यव्याप्तेर्बन्धोऽज्ञानं वा स्वसमानाश्रयानर्थहेतुरिति विशेषव्याप्त्या बाधोस्तु ।**

ಮತ್ತು ದುಃಖವೇ ಸ್ವತಃ ಅನರ್ಥರೂಪವಾಗಿದೆ. ಆದ್ದರಿಂದ ದುಃಖವನ್ನೇ ಬಂಧವೆಂದು ನೀವು ಹೇಳಬೇಕು. ಈ ದುಃಖವನ್ನು ಬಿಟ್ಟು, ಉಳಿದದ್ದೆಲ್ಲವೂ ದುಃಖಕ್ಕೆ ಕಾರಣವೆಂದೇ ಪರಿಗಣಿಸಬೇಕು. ಆದ್ದರಿಂದ ಅವಿದ್ಯಾಸಂಬಂಧವನ್ನು ನೀವು ಬಂಧವೆಂದು ಹೇಳಿದ್ದೇ ತಪ್ಪು. ಅದನ್ನು ಬಂಧಕವೆಂದು ಹೇಳಬೇಕು. ಹೊರತು, ಬಂಧವೆಂದು ಹೇಳಬಾರದು.

ಹಿಂದೆ ಉಪಾಧಿಯು ಪ್ರತಿಬಿಂಬಪಕ್ಷಪಾತಿಯೆಂದು ಹೇಳಲಾಯಿತು. ಇದೂ ಕೂಡ ತಪ್ಪು. ಯಾವರೀತಿಯಾಗಿ ನಿಮ್ಮ ಮತದಲ್ಲಿ ಅನಾದಿಭಾವರೂಪವಾದದ್ದು ನಿವೃತ್ತಿಯನ್ನು ಹೊಂದುವುದಿಲ್ಲ ಎಂಬ ಸಾಮಾನ್ಯವ್ಯಾಪ್ತಿಗೆ 'ಅಜ್ಞಾನವು ಜ್ಞಾನದಿಂದ ನಿವೃತ್ತವಾಗಿದೆ' ಎಂಬ ವಿಶೇಷವ್ಯಾಪ್ತಿಯಿಂದ ಬಾಧವನ್ನು ಹೇಳುವಿರೋ, ಅದೇ ರೀತಿಯಾಗಿ ಉಪಾಧಿಯು ಪ್ರತಿಬಿಂಬಪಕ್ಷಪಾತಿಯಾಗಿದೆ ಎಂಬ ಸಾಮಾನ್ಯವ್ಯಾಪ್ತಿಗೆ ಬಂಧ ಅಥವಾ ಅಜ್ಞಾನವು ಸ್ವಸಮಾನಾಶ್ರಯನರ್ಥಹೇತುವಾಗಿದೆ ಎಂಬ ಬಾಧವನ್ನು ಏಕೆ ಹೇಳಬಾರದು ?

ವಿಶೇಷವಿಚಾರ - ಅದ್ವೈತಿಗಳು ಅವಿದ್ಯಾಸಂಬಂಧವನ್ನೇ ಬಂಧವೆಂದು ಹೇಳುತ್ತಿದ್ದಾರೆ. ವಾಸ್ತವಿಕವಾಗಿ ದುಃಖವನ್ನೇ ಬಂಧವೆಂದು ಹೇಳಬೇಕು. ಅವಿದ್ಯಾಸಂಬಂಧವನ್ನು ದುಃಖಕ್ಕೆ ಕಾರಣವೆಂದು ಹೇಳಬೇಕು.

ಮತ್ತು ಉಪಾಧಿಯು ಪ್ರತಿಬಿಂಬಪಕ್ಷಪಾತಿಯಾಗಿದೆ ಎಂಬ ಸಾಮಾನ್ಯವ್ಯಾಪ್ತಿಯನ್ನು ಒಪ್ಪಿ, ದುಃಖಾದ್ಯನರ್ಥಗಳೆಲ್ಲವೂ ಜೀವನಲ್ಲಿಯೇ ಗೋಚರವಾಗುತ್ತಿವೆಯೆಂದು ಉಪಪಾದನೆ ಮಾಡುತ್ತಾರೆ. ಈ ಸಾಮಾನ್ಯವ್ಯಾಪ್ತಿಯೇ ಅಯುಕ್ತವಾಗಿದೆ. ಏಕೆಂದರೆ 'ಯ ಯ ಉಪಾಧಿಃ ಸ ಸ ಪ್ರತಿಬಿಂಬೇ ಕಾರ್ಯಂ ಕರೋತಿ' ಎಂಬ ಸಾಮಾನ್ಯವ್ಯಾಪ್ತಿಯನ್ನು ನೀವು ಹೇಳಬೇಕು. ಆದರೆ 'ಯಃ ಬಂಧಃ ಸ ಸಮಾನಾಶ್ರಯಾನರ್ಥಹೇತುಃ' ಎಂಬ ವಿಶೇಷವ್ಯಾಪ್ತಿಯು ಈ ಸಾಮಾನ್ಯವ್ಯಾಪ್ತಿಯನ್ನು ಬಾಧಿಸುತ್ತದೆ. ಸಾಮಾನ್ಯವ್ಯಾಪ್ತಿಯಿಂದ ವಿಶೇಷವ್ಯಾಪ್ತಿಯನ್ನು ಬಾಧಿಸಲು ಹೇಗೆ ಸಾಧ್ಯ ? ಎಂದು ನೀವು ಪ್ರಶ್ನಿಸಬಹುದು. ಆದರೆ ಸ್ವತಃ ನೀವೇ ವಿಶೇಷವ್ಯಾಪ್ತಿಯಿಂದ ಸಾಮಾನ್ಯವ್ಯಾಪ್ತಿಗೆ ಬಾಧವನ್ನು ಹೇಳುವಿರಿ. ಉದಾಹರಣೆಗೆ- 'ಯಾವುದು ಅನಾದಿಯಾದ ಭಾವರೂಪವೋ ಅದಕ್ಕೆ ನಿವೃತ್ತಿಯಿಲ್ಲ' ಎಂಬ ಸಾಮಾನ್ಯವ್ಯಾಪ್ತಿಯನ್ನು ಒಪ್ಪಿದ್ದೀರಿ. ಈ ಸಾಮಾನ್ಯವ್ಯಾಪ್ತಿಯು 'ಯತ್ ಅಜ್ಞಾನಂ ತತ್ ಜ್ಞಾನನಿರ್ವತ್ಯಂ' ಯಾವುದು ಅಜ್ಞಾನವೋ, ಅದು ಜ್ಞಾನದಿಂದ ನಿವೃತ್ತವಾಗುತ್ತದೆ ಎಂಬ ವಿಶೇಷವ್ಯಾಪ್ತಿಯಿಂದ ಬಾಧಿತವಾಗುತ್ತದೆ ಎಂದು ಹೇಳುವಿರಿ. ಅದರಂತೆ ಇಲ್ಲೂ ಕೂಡ ಹೇಳಬಹುದಲ್ಲವೇ ?

**कथं चोपाधेः प्रतिबिम्बपक्षपातित्वम् । औपाधिकस्य भेदस्योभयत्र सार्वज्ञादेर्बिम्बे ब्रह्मण्येव लौहित्यस्य च स्फटिके दर्शनात् ।**

ಮತ್ತು ಉಪಾಧಿಯು ಪ್ರತಿಬಿಂಬಪಕ್ಷಪಾತಿಯಾಗಿದೆ ಎಂದು ನೀನು ಹೇಳಿದ್ದು ಹೇಗೆ ಸರಿಯಾಗುತ್ತದೆ ? ಏಕೆಂದರೆ ಔಪಾಧಿಕವಾದ ಭೇದವು ಜೀವಬ್ರಹ್ಮರಿಬ್ಬರಲ್ಲಿಯೂ ಇದೆ. ಸಾರ್ವಜ್ಞ್ಯವು ಬಿಂಬನಾದ ಬ್ರಹ್ಮನಲ್ಲಿಯೇ ಇದೆ. ಲೌಹಿತ್ಯವು ಸ್ಫಟಿಕದಲ್ಲಿ ಕಾಣಿಸುತ್ತಿದೆ. ಹೀಗೆ ಮೂರು ಸ್ಥಳದಲ್ಲಿ ನಿನ್ನ ವ್ಯಾಪ್ತಿಗೆ ವ್ಯಭಿಚಾರ ಬರುತ್ತದೆ.

ವಿಶೇಷವಿಚಾರ - ಯಾವುದು ಉಪಾಧಿಯೋ, ಅದು ಪ್ರತಿಬಿಂಬಪಕ್ಷಪಾತಿಯಾಗಿದೆ ಎಂಬ ಸಾಮಾನ್ಯವ್ಯಾಪ್ತಿಗೆ ಮೂರು ಸ್ಥಳದಲ್ಲಿ ವ್ಯಭಿಚಾರವನ್ನು ಹೇಳುತ್ತಿದ್ದಾರೆ. ಜೀವಬ್ರಹ್ಮರ ಭೇದವು ಔಪಾಧಿಕವಾಗಿದೆ. ಉಪಾಧಿಯು ಪ್ರತಿಬಿಂಬಪಕ್ಷಪಾತಿಯಾದ ಮೇಲೆ ಈ ಔಪಾಧಿಕವಾದ ಭೇದ ಕೇವಲ ಜೀವನಲ್ಲಿ ಇರಬೇಕು. ಆದರೆ ನೀನು ಬ್ರಹ್ಮನಲ್ಲೂ ಕೂಡ ಒಪ್ಪುವಿ. ಆದ್ದರಿಂದ ಬಿಂಬಪ್ರತಿಬಿಂಬ-ಗಳೆರಡರಲ್ಲಿಯೂ ಉಪಾಧಿಯಲ್ಲಿರುವ ಧರ್ಮವು ಗೋಚರಿಸುತ್ತಿದೆ.

ಸಾರ್ವಜ್ಞ್ಯವೂ ಕೂಡ ಉಪಾಧಿಕೃತವಾಗಿದೆ. ಇದು ನಿನ್ನ ಪ್ರಕಾರ ಪ್ರತಿಬಿಂಬದಲ್ಲಿ ಮಾತ್ರ ಬರಬೇಕು. ಆದರೆ ಈ ಔಪಾಧಿಕವಾದ ಸಾರ್ವಜ್ಞ್ಯವನ್ನು ನೀನು ಬ್ರಹ್ಮನಲ್ಲಿ ಒಪ್ಪಿರುವಿ. ಪ್ರತಿಬಿಂಬನಾದ ಜೀವನಲ್ಲಿ ಒಪ್ಪಿರುವುದಿಲ್ಲ. ಆದ್ದರಿಂದ ಉಪಾಧಿಯಲ್ಲಿರುವ ಧರ್ಮ ಪ್ರತಿಬಿಂಬದಲ್ಲಿ ಬಾರದೇ ಬಿಂಬದಲ್ಲಿಯೇ ಬಂದಿರುವುದು ಕಂಡಿದೆ.

ಜಪಾಕುಸುಮದಲ್ಲಿರುವ ಲೌಹಿತ್ಯವು ಸ್ಫಟಿಕದಲ್ಲಿ ಕಾಣಿಸುತ್ತಿದೆ. ಇಲ್ಲಿ ಸ್ಫಟಿಕ ಉಪಾಧಿಯಾಗಿದೆ. ಆದ್ದರಿಂದ ಈ ಸ್ಥಳದಲ್ಲಿ ಉಪಾಧಿಯಲ್ಲಿಯೇ ಲೌಹಿತ್ಯವು ಕಾಣಿಸುತ್ತಿದೆ. ಹೀಗೆ ಮೂರು ಸ್ಥಳದಲ್ಲಿಯೂ ವ್ಯಭಿಚಾರ ಬರುತ್ತದೆ.

**मम तु प्रतिबिम्बं छायादिवद्वस्त्वन्तरम् । तत्रैव च मालिन्यादि । तव त्वनर्थस्सत्ये चिन्मात्र इति वैषम्यम् ।**

ನಮ್ಮ ಸಿದ್ಧಾಂತದಲ್ಲಿ ಪ್ರತಿಬಿಂಬವು ಛಾಯಾದಿಗಳಂತೆ ಬೇರೆ ವಸ್ತುವೇ ಆಗಿದೆ. ಆದ್ದರಿಂದ ಪ್ರತಿಬಿಂಬದಲ್ಲಿಯೇ ಮಾಲಿನ್ಯಾದಿಗಳು ಉಂಟಾಗುತ್ತವೆ. ಆದರೆ ನಿನ್ನ ಸಿದ್ಧಾಂತದಲ್ಲಿ ಬಿಂಬ ಪ್ರತಿಬಿಂಬಗಳಿಗೆ ಐಕ್ಯವನ್ನು ಒಪ್ಪಿರುವುದರಿಂದ ಸತ್ಯಸ್ವರೂಪನಾದ ಚಿನ್ಮಾತ್ರದಲ್ಲಿಯೂ ಬರಬೇಕಾಗುತ್ತದೆ. ಹೀಗೆ ಇಬ್ಬರಲ್ಲಿಯೂ ವೈಷಮ್ಯವಿದೆ.

ವಿಶೇಷವಿಚಾರ – ನಾವು ಪ್ರತಿಬಿಂಬವನ್ನು ಸತ್ಯವೆಂದು, ಉಪಾಧಿ ಹಾಗೂ ಬಿಂಬಗಳಿಗಿಂತ ಭಿನ್ನವೆಂದು ಅಂಗೀಕರಿಸುತ್ತೇವೆ. ಆದ್ದರಿಂದ ಉಪಾಧಿಯಲ್ಲಿರುವ ದೋಷವು ಪ್ರತಿಬಿಂಬದಲ್ಲಿ ಕಾಣಿಸುತ್ತದೆ. ಇದು ನಮ್ಮ ಪ್ರಕಾರ ತಪ್ಪಾಗುವುದಿಲ್ಲ. ಆದರೆ ನೀನು ಪ್ರತಿಬಿಂಬವನ್ನು ಬಿಂಬಕ್ಕಿಂತ ಅತಿರಿಕ್ತವಾಗಿ ಸತ್ಯವೆಂದು ಒಪ್ಪಿರುವುದೇ ಇಲ್ಲ. ಆದ್ದರಿಂದ ಉಪಾಧಿಯಲ್ಲಿರುವ ದೋಷವು ಪ್ರತಿಬಿಂಬದಲ್ಲಿ ಬಂತು ಎಂದರೆ ಬಿಂಬದಲ್ಲಿಯೂ ಕೂಡ ಬಂತು ಎಂದು ಅರ್ಥವಾಯಿತು. ಆದ್ದರಿಂದ ಸತ್ಯಸ್ವರೂಪನಾದ ಚಿನ್ಮಾತ್ರನಲ್ಲಿಯೂ ಕೂಡ ದುಃಖಾದ್ಯನರ್ಥಗಳು ಪ್ರಾಪ್ತವಾಗಬೇಕಾಗುತ್ತವೆ. ಹೀಗೆ ಇಬ್ಬರಲ್ಲಿ ಇರುವ ವೈಷಮ್ಯವನ್ನು ಗಮನಿಸಬೇಕು.

ಶ್ರುತೇಸ್ತುಶಬ್ದಮೂಲತ್ವಾಧಿಕರಣ (2-1-8)

**न द्वितीयः । तत्पदलक्ष्यस्य विशेष्यस्य शुद्धस्य ब्रह्मणः त्वंपदलक्ष्येणानार्थाश्रयेण सदाप्यभिन्नत्वेन शुद्धेप्यनर्थापातात् ।**

ಎರಡನೆಯ ಪಕ್ಷವು ತಪ್ಪು. ತತ್‌ಪದಲಕ್ಷ್ಯವಾದ ವಿಶೇಷ್ಯಸ್ವರೂಪವಾದ ಶುದ್ಧಬ್ರಹ್ಮನಿಗೆ ತ್ವಂ ಪದಲಕ್ಷ್ಯವಾದ ಅನರ್ಥಕ್ಕೆ ಆಶ್ರಯವಾದ ವಿಶೇಷಚೇತನ್ಯದ ಜೊತೆ ಯಾವಾಗಲೂ ಅಭೇದವಿರುವುದರಿಂದ ಶುದ್ಧನಲ್ಲಿಯೂ ಕೂಡ ಅನರ್ಥವು ಬಂದೇ ಬರಬೇಕಾಗುತ್ತದೆ.

ವಿಶೇಷವಿಚಾರ - 'ತತ್ತ್ವಮಸಿ' ಎಂಬ ಶ್ರುತಿಯಲ್ಲಿ 'ತ್ವಂ' ಪದಕ್ಕೆ ವಾಚ್ಯಾರ್ಥವಾದದ್ದೇ ಬೇರೆಯಿದೆ. ಲಕ್ಷ್ಯವಾದ ಅರ್ಥವೇ ಬೇರೆ ಇದೆ. ವಿಶಿಷ್ಟನಾದ ಜೀವನು ವಾಚ್ಯಾರ್ಥನಾಗಿದ್ದಾನೆ. ಕೇವಲ ವಿಶೇಷ್ಯಸ್ವರೂಪನಾದ ಚೇತನನು ಲಕ್ಷ್ಯನಾಗಿದ್ದಾನೆ. ವಿಶಿಷ್ಟನಾದ ಚೇತನನು ಅನರ್ಥಕ್ಕೆ ಆಶ್ರಯನೇ ಅಲ್ಲ. ಲಕ್ಷ್ಯನಾದ ಚೇತನನೇ ಅನರ್ಥಕ್ಕೆ ಆಶ್ರಯನಾಗಿದ್ದಾನೆ. ಬ್ರಹ್ಮನಿಗೆ ಇವನ ಜೊತೆ ಐಕ್ಯವು ಇರುವುದಿಲ್ಲ. ಆದ್ದರಿಂದ ಬ್ರಹ್ಮನಿಗೆ ಅನರ್ಥವು ಬರುವುದಿಲ್ಲ. ಇದು ಎರಡನೆಯ ವಿಕಲ್ಪ.

ಇದು ತಪ್ಪು. ಏಕೆಂದರೆ ಶುದ್ಧನಾದ ಬ್ರಹ್ಮನು ತತ್‌ಪದದಿಂದ ಲಕ್ಷ್ಯನಾಗಿದ್ದಾನೆ. 'ತ್ವಂ' ಪದದಿಂದ ಲಕ್ಷ್ಯವಾದ ವಿಶಿಷ್ಟಸ್ವರೂಪವಾದ ಚೇತನನು ಅನರ್ಥಕ್ಕೆ ಆಶ್ರಯನಾಗಿದ್ದಾನೆಂದು ನೀವು ಹೇಳುತ್ತಿದ್ದೀರಿ. ಆಗ ತ್ವಂಪದಕ್ಕೆ ಲಕ್ಷ್ಯವಾದ, ಅನರ್ಥಕ್ಕೆ ಆಶ್ರಯವಾದ ಯಾವ ವಿಶೇಷ್ಯವಾದ ಶುದ್ಧ ಚೈತನ್ಯವಿದೆಯೋ, ಅದರ ಜೊತೆ ತತ್‌ಪದಲಕ್ಷ್ಯನಾದ ಶುದ್ಧನಾದ ಬ್ರಹ್ಮನು ಅಭಿನ್ನನೇ ಆಗಿದ್ದಾನೆ. ಆದ್ದರಿಂದ ತತ್‌ಪದದ ಲಕ್ಷ್ಯನಾದ ಶುದ್ಧಬ್ರಹ್ಮನಿಗೆ ಅನರ್ಥವು ಬಂದೇ ಬರುತ್ತದೆ. ಏಕೆಂದರೆ ಎರಡೂ ಕಡೆ ಇರುವ ವಿಶೇಷ್ಯಕ್ಕೆ ಐಕ್ಯವನ್ನು ಹೇಳಲು ಈ ಶ್ರುತಿಯು ಹೊರಟಿದೆ.

**तत्पदवाच्यस्य विशिष्टस्य ब्रह्मणस्त्वनर्थाश्रयात् विशेष्यात् भिन्नत्वेपि त्वंपदवाच्यो जीवोपि विशेष्यात् भिन्न इति जीवेप्यनर्थाभावापातात् । यथा च तत्पदवाच्यं विशिष्टमनर्थाश्रयात् विशेष्याद्भिन्नमेवं त्वंपदवाच्यमपि ।**

'ತತ್' ಪದವಾಚ್ಯನಾದ ವಿಶಿಷ್ಟಬ್ರಹ್ಮನು ಅನರ್ಥಕ್ಕೆ ಆಶ್ರಯನಾಗಿರುವುದರಿಂದ ವಿಶೇಷ್ಯಕ್ಕಿಂತ ಭಿನ್ನನಾಗಿದ್ದರೂ ಕೂಡ 'ತ್ವಂ' ಪದವಾಚ್ಯನಾದ ಜೀವನೂ ಕೂಡ ವಿಶೇಷ್ಯಕ್ಕಿಂತ ಭಿನ್ನನಾದ ಕಾರಣ ಜೀವನಲ್ಲಿಯೂ ಕೂಡ ಅನರ್ಥವು ಇಲ್ಲವೆಂದಾಗಬೇಕಾಗುತ್ತದೆ. ಏಕೆಂದರೆ ತತ್‌ಪದವಾಚ್ಯನಾದ ವಿಶಿಷ್ಟಬ್ರಹ್ಮನು ಅನರ್ಥಕ್ಕೆ ಆಶ್ರಯವಾದ ವಿಶೇಷ್ಯಕ್ಕಿಂತ ಹೇಗೆ ಭಿನ್ನನಾಗಿದ್ದಾನೋ, ಅದರಂತೆ ತ್ವಂ ಪದವಾಚ್ಯನೂ ಕೂಡ ಭಿನ್ನನೇ ಆಗಿದ್ದಾನೆ.

ವಿಶೇಷವಿಚಾರ - ಪೂರ್ವಪಕ್ಷ - 'ತತ್' ಪದವಾಚ್ಯನಾದ ಶುದ್ಧಬ್ರಹ್ಮನಿಗೆ 'ತ್ವಂ' ಪದಲಕ್ಷ್ಯನಾದ ವಿಶೇಷ್ಯದ ಜೊತೆ ಐಕ್ಯವನ್ನು ಹೇಳಬಹುದು. ಆದರೆ 'ತತ್' ಪದವಾಚ್ಯನಾದ ವಿಶಿಷ್ಟಬ್ರಹ್ಮನಿಗೆ 'ತ್ವಂ' ಪದಲಕ್ಷ್ಯನಾದ ವಿಶೇಷ್ಯದ ಜೊತೆ ಐಕ್ಯವು ಇರುವುದಿಲ್ಲ. ಆದ್ದರಿಂದ ವಿಶೇಷ್ಯನಿಗೆ ಅನರ್ಥವು ಉಂಟಾಗುವುದಿಲ್ಲ.

ಸಿದ್ಧಾಂತ - ಒಂದು ವೇಳೆ ವಿಶಿಷ್ಟಬ್ರಹ್ಮನಿಗೆ ಅನರ್ಥವಿಲ್ಲವೆಂದು ನೀನು ಸಿದ್ಧಾಂತವನ್ನು ಮಾಡುವುದಾದರೆ, ಆಗ ವಿಶಿಷ್ಟನಾದ ಜೀವನಿಗೂ ಕೂಡ ಅನರ್ಥವಿಲ್ಲವೆಂದು ಹೇಳಿದಂತಾಯಿತು. ಶುದ್ಧನಾದ ಬ್ರಹ್ಮನಿಗೆ ಅನರ್ಥವಾಗುವುದರಿಂದ ತತ್‌ಪದವಾಚ್ಯನಾದ ವಿಶಿಷ್ಟನು ಹೇಗೆ ಅನರ್ಥಕ್ಕೆ

ಆಶ್ರಯನಾಗಿಲ್ಲವೋ, ಅದರಂತೆ 'ತ್ವಂ'ಪದವಾಚ್ಯನಾದ ವಿಶಿಷ್ಟನಾದ ಜೀವನಿಗೂ ಕೂಡ ಅನರ್ಥವಿಲ್ಲವೆಂದು ಹೇಳಿದಂತಾಯಿತು. ಆದ್ದರಿಂದ ತತ್‌ಪದವಾಚ್ಯನಾದ ಸಾರ್ವಜ್ಞ್ಯಾದಿವಿಶಿಷ್ಟನಾದ ಬ್ರಹ್ಮನಿಗೂ ಅನರ್ಥವಿಲ್ಲ. ತ್ವಂ ಪದವಾಚ್ಯನಾದ ಅಲ್ಪಜ್ಞತ್ವಾದಿ ವಿಶಿಷ್ಟನಾದ ಜೀವನಿಗೂ ಕೂಡ ಅನರ್ಥವೂ ಇಲ್ಲ. ಎರಡೂ ಕಡೆಯಿರುವ ವಿಶೇಷ್ಯಕ್ಕೆ ಅನರ್ಥವೂ ಬರುತ್ತದೆ ಎಂದು ಹೇಳಿದಂತಾಯಿತು.

**न तृतीयः । जीवस्य भ्रान्तत्वेन स्वस्मिन् ब्रह्मतो भेदाध्यासेपि ब्रह्मणस्त्वन्मतेप्यभ्रान्तत्वेन स्वस्मिन् संसाराश्रयाज्जीवात् भेदाध्यासायोगात् ।**

ಮೂರನೆಯ ಪಕ್ಷವು ತಪ್ಪು. ಜೀವನು ಭ್ರಾಂತನಾಗಿರುವುದರಿಂದ ತನ್ನಲ್ಲಿ ಬ್ರಹ್ಮನಿಂದ ಭೇದಾಧ್ಯಾಸವು ಇಲ್ಲದಿದ್ದರೂ ಬ್ರಹ್ಮನು ಅದ್ವೈತಮತದಲ್ಲಿ ಅಭ್ರಾಂತನಾಗಿದ್ದಾನೆ. ಆದ್ದರಿಂದ ಬ್ರಹ್ಮನಲ್ಲಿ ಸಂಸಾರಾಶ್ರಯನಾದ ಜೀವನ ದೆಸೆಯಿಂದ ಭೇದಾಧ್ಯಾಸವು ಯುಕ್ತವಾಗುವುದಿಲ್ಲ.

ವಿಶೇಷವಿಚಾರ - ಪಾರಮಾರ್ಥಿಕವಾಗಿ ಜೀವಬ್ರಹ್ಮರಿಗೆ ಅಭೇದವಿದ್ದರೂ ಕೂಡ ಭೇದಾಧ್ಯಾಸ ಪ್ರಯುಕ್ತವಾಗಿ ದುಃಖಾದಿಗಳು ಉಂಟಾಗುತ್ತಿವೆ ಎಂಬುದು ಮೂರನೆಯ ಪಕ್ಷ. ಇದನ್ನು ಇಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಯಾರಿಗೆ ಭ್ರಾಂತಿ ಇರುತ್ತದೋ, ಅವನು ಭೇದಾಧ್ಯಾಸವನ್ನು ಮಾಡಿಕೊಳ್ಳುತ್ತಾನೆ. ಜೀವನಿಗೆ ಭ್ರಾಂತಿ ಇರುವುದರಿಂದ ಬ್ರಹ್ಮನಿಂದ ತಾನು ಭಿನ್ನನಾಗಿದ್ದೇನೆಂದು ತಿಳಿಯುತ್ತಾನೆ. ಆದರೆ ಅದ್ವೈತಿಗಳ ಪ್ರಕಾರ ಬ್ರಹ್ಮನು ಭ್ರಾಂತನಲ್ಲ. ಹಾಗಾಗಿ ತನ್ನಲ್ಲಿ ಜೀವನಿಂದ ಭೇದದ ಅಧ್ಯಾಸವನ್ನು ಬ್ರಹ್ಮ ತಿಳಿಯುವುದಿಲ್ಲ. ಹಾಗಾಗಿ ದುಃಖಗಳಿಗೆ ಭಾಗಿಯಾದ ಜೀವನೇ ತಾನು ಎಂದು ತಿಳಿಯುತ್ತಾನೆ. ಆದ್ದರಿಂದ ಜೀವನಿಗೆ ಯಾವುದೇ ರೀತಿಯಲ್ಲಿ ದುಃಖಾದ್ಯನರ್ಥಗಳ ಅನುಭವ ಬರುವುದಿಲ್ಲ. ಬ್ರಹ್ಮನಿಗೆ ಬರುತ್ತದೆ ಎಂದು ಆಗಬೇಕಾಗುತ್ತದೆ.

**यदि च ब्रह्मणोपि भ्रान्तिस्तर्हि भ्रान्तत्वादेव हिताकरणादिसम्भवात् तत्परिहारक्लेशोऽनर्थकः स्यात् । नहि स्वाप्नं स्वशिरश्छेदादिकं पर्यनुयोगार्हम् ।**

ಒಂದು ವೇಳೆ ಬ್ರಹ್ಮನಿಗೂ ಕೂಡ ಭ್ರಾಂತಿಯನ್ನು ಒಪ್ಪಿದರೆ ಆಗ ಭ್ರಾಂತಿ ಇರುವ ಕಾರಣದಿಂದಲೇ ಹಿತಾಕರಣ, ಅಹಿತಕರಣ ದೋಷಗಳು ಬ್ರಹ್ಮನಿಗೆ ಸಂಭವಿಸುತ್ತವೆ. ಈ ದೋಷದ ಪರಿಹಾರವನ್ನು ಸೂತ್ರಕಾರರು ಮಾಡಿಕೊಳ್ಳುವುದು ವ್ಯರ್ಥವಾಗುತ್ತದೆ. ಏಕೆಂದರೆ ನಿಜವಾಗಿಯೂ ಯಾರಾದರೂ ಸ್ವಶಿರಶ್ಛೇದವನ್ನು ಮಾಡಿಕೊಳ್ಳಲು ಉದ್ಯುಕ್ತರಾದರೆ, ಅವರನ್ನು ಏಕೆ ಮಾಡಿಕೊಳ್ಳುತ್ತಿ? ಎಂದು ಪ್ರಶ್ನಿಸಬಹುದು. ಆದರೆ ಸ್ವಾಪ್ನವ್ಯಕ್ತಿಯು ಸ್ವಶಿರಶ್ಛೇದವನ್ನು ಮಾಡಿಕೊಳ್ಳುತ್ತಾನೆಂದರೆ ಅವನನ್ನು ಪ್ರಶ್ನಿಸುವುದು ಹೇಗೆ ಸಾಧ್ಯವಾಗುತ್ತದೆ ? ಅದರಂತೆ ಭ್ರಾಂತನಾದ ಬ್ರಹ್ಮನನ್ನು ಕುರಿತು, ಹಿತಾಕರಣಾದಿಗಳನ್ನು ಏಕೆ ಮಾಡಿಕೊಳ್ಳುತ್ತಿ ? ಎಂದು ಪ್ರಶ್ನಿಸಲು ಹೇಗೆ ಸಾಧ್ಯವಾಗುತ್ತದೆ ?

**किञ्च भेदारोपेपि तात्विकाभेदादनर्थः स्यात् । नहि वह्निर्गुञ्जापुञ्जत्वेनारोपितो न दहति । नापि संसारिण्यात्मन्यनात्मत्वारोपे संसारो नात्मगतः ।**

ಭೇದವು ಆರೋಪಿತವಾದಾಗಲೂ ಕೂಡ ತಾತ್ವಿಕವಾದ ಅಭೇದವು ಇರುವುದರಿಂದ ಅನರ್ಥವು ಬರಲೇಬೇಕಾಗುತ್ತದೆ. ಏಕೆಂದರೆ ವಹ್ನಿಯಲ್ಲಿ ಗುಂಜಾಪುಂಜವು ಆರೋಪಿತವಾದ ಮಾತ್ರಕ್ಕೆ

ಸುಡುವಿಕೆಯೇ ಇರುವುದಿಲ್ಲವೆಂದು ಯಾರೂ ಹೇಳುವುದಿಲ್ಲ. ಅದರಂತೆ ಸಂಸಾರಿಯಾದ ಆತ್ಮನಲ್ಲಿ ಅನಾತ್ಮತ್ವವನ್ನು ಆರೋಪ ಮಾಡಿದ ಮಾತ್ರಕ್ಕೆ ಸಂಸಾರವು ಆತ್ಮಗತ ಅಲ್ಲ ಎಂದು ಯಾರೂ ಹೇಳುವುದಿಲ್ಲ. ಆದ್ದರಿಂದ ಭೇದವು ಆರೋಪಿತವಾದರೂ ಕೂಡ ತಾತ್ತ್ವಿಕವಾದ ಅಭೇದವು ಇರುವುದರಿಂದ ಬ್ರಹ್ಮನಿಗೆ ಅನರ್ಥವು ಉಂಟಾಗಲಿ ಎಂಬ ಆಪತ್ತಿ ಇದ್ದೇ ಇದೆ.

**अपि च बिम्बस्थानीयस्येश्वरस्य भ्रान्तत्वेपि यद्भावो मोक्षस्तस्य चिन्मात्रस्य भेदभ्रमाभावादनर्थो दुष्परिहरः ।**

ಮತ್ತೊಂದು ದೋಷ - ಬಿಂಬಸ್ಥಾನದಲ್ಲಿರುವ ಈಶ್ವರನು ಭ್ರಾಂತನಾದರೂ ಕೂಡ ಯಾವ ಚೈತನ್ಯಸ್ವರೂಪವೇ ಮೋಕ್ಷವೆಂದು ಕರೆಸಿಕೊಳ್ಳುತ್ತದೋ, ಅಂಥ ಚಿನ್ಮಾತ್ರನಿಗೆ ಭೇದಭ್ರಮವೇ ಇರುವುದಿಲ್ಲ. ಆದ್ದರಿಂದ ಸಂಸಾರಿಯಾದ ಜೀವನೊಂದಿಗೆ ಅಭೇದವೇ ಇರುವ ಕಾರಣ ಅನರ್ಥವು ಚಿನ್ಮಾತ್ರನಿಗೆ ಉಂಟಾಗಲಿ ಎಂಬ ಆಪತ್ತಿಯನ್ನು ಪರಿಹಾರ ಮಾಡಲು ಸಾಧ್ಯವಾಗದು.

**न चतुर्थः । तत्वज्ञानित्वेनानभिमानित्वेपि जीवन्मुक्तवत् दुःखित्वापरिहारात्। किञ्चाभिमानी त्वंपदवाच्यश्चेत्स एव संसरेत् । नच तद्युक्तमित्युक्तम् । त्वंपदलक्ष्यश्चेत् तद्भावो मुक्तिस्तस्य चिन्मात्रस्याप्यभिमानः स्यादित्युक्तम् ।**

ನಾಕನೆಯ ಪಕ್ಷವೂ ಕೂಡ ತಪ್ಪು. ಬ್ರಹ್ಮನು ತತ್ವಜ್ಞಾನಿಯಾಗಿರುವುದರಿಂದ ಜೀವನಂತೆ ಅಭಿಮಾನವಿಲ್ಲದ ಕಾರಣ ದುಃಖವು ಉಂಟಾಗುವುದಿಲ್ಲವೆಂಬುದು ನಾಕನೆಯ ಪಕ್ಷ. ತತ್ವಜ್ಞಾನಿಗೆ ದುಃಖವು ಉಂಟಾಗುವುದಿಲ್ಲವೆಂದು ಹೇಳಿದರೆ ವ್ಯಭಿಚಾರ ಬರುತ್ತದೆ. ಜೀವನ್ಮುಕ್ತನು ತತ್ವಜ್ಞಾನಿಯಾಗಿದ್ದಾನೆ. ಅವನಿಗೆ ಸಂಸಾರದಲ್ಲಿ ಅಭಿಮಾನವೂ ಕೂಡ ಇರುವುದಿಲ್ಲ. ಆದರೂ ಕೂಡ ದುಃಖಿತ್ವವೆಂಬುದು ಅವನಿಗೆ ಇದ್ದೇ ಇರುತ್ತದೆ. ಅದರಂತೆ ಬ್ರಹ್ಮನು ತತ್ವಜ್ಞಾನಿಯಾದರೂ ಕೂಡ ಅಭಿಮಾನ ಇಲ್ಲದವನಾದರೂ ದುಃಖಿಯು ಆಗಲಿ ಎಂದು ಆಪತ್ತಿ ಮಾಡಿದರೆ ನಿಮ್ಮಲ್ಲಿ ಉತ್ತರವಿಲ್ಲ.

ಮತ್ತು ಅಭಿಮಾನಿಯಾದ ವ್ಯಕ್ತಿಯು 'ತ್ವಂ' ಪದದಿಂದ ವಾಚ್ಯನಾಗಿದ್ದಾನೋ, ಅಥವಾ ಲಕ್ಷ್ಯನಾಗಿದ್ದಾನೋ ? ವಾಚ್ಯನಾಗಿದ್ದಾನೆಂದು ಹೇಳಿದರೆ ಅವನೇ ಸಂಸಾರಿಯಾಗಲಿ. ಯಾರಿಗೆ ಅಭಿಮಾನವಿದೆಯೋ, ಅವನಿಗೆ ದುಃಖವನ್ನು ಹೇಳಬೇಕಾದ್ದರಿಂದ ವಿಶಿಷ್ಟನಿಗೆ ಹೇಳಿದಂತಾಯಿತು. ಮತ್ತು ಈಗಾಗಲೇ ಹಿಂದೆ ಹೇಳಿದಂತೆ ಅನರ್ಥಪುಮರ್ಥಗಳಿಗೆ ಸಾಮಾನ್ಯಧಿಕರಣವಿರಬೇಕಾದ್ದರಿಂದ ಶುದ್ಧನಿಗೆ ಮೋಕ್ಷವು ಆಗುವುದರಿಂದ ಸಂಸಾರವನ್ನೂ ಕೂಡ ಅವನಿಗೇ ಹೇಳಬೇಕು. ವಿಶಿಷ್ಟಕ್ಕೆ ಸಂಸಾರವನ್ನು ಹೇಳುವುದು ತಪ್ಪಾಗುತ್ತದೆ. ಇನ್ನು ಅಭಿಮಾನಿಯು ತ್ವಂ ಪದದಿಂದ ವಾಚ್ಯನಲ್ಲ. ಲಕ್ಷ್ಯನಾಗಿದ್ದಾನೆಂದು ಹೇಳಿದರೆ ಅದರ ಭಾವವೇ ಮೋಕ್ಷ ಎಂದು ಹೇಳಿದಂತಾಗುತ್ತದೆ. ಆಗ ಚಿನ್ಮಾತ್ರನಿಗೂ ಕೂಡ ಅಭಿಮಾನವು ಇದೆ ಎಂದು ಹೇಳಿದಂತಾಗುತ್ತದೆ. ಆಗ ಅವನಿಗೆ ದುಃಖವು ಬರಲಿ ಎಂಬ ಆಪತ್ತಿ ತಪ್ಪಿದ್ದಲ್ಲ.

**न पञ्चमः । मिथ्यात्वेपि जीवं प्रतीव ब्रह्म प्रत्यप्यनर्थत्वात् । अन्यथा तन्निवृत्त्यर्थं वेदान्तश्रवणादिवैयर्थ्यम् । नहि जीवस्यापि तत्वतोऽनर्थोऽस्ति ।**

ದುಃಖಾದಿಗಳೆಲ್ಲವೂ ಕಲ್ಪಿತವಾದ್ದರಿಂದ ಪಾರಮಾರ್ಥಿಕವಾಗಿ ಬ್ರಹ್ಮನಲ್ಲಿ ಇವು ಇರುವುದಿಲ್ಲವೆಂಬುದು ಐದನೆಯ ಪಕ್ಷ. ಇದೂ ಕೂಡ ಅಯುಕ್ತವಾಗಿದೆ. ಕಲ್ಪಿತವಾದ ಮಾತ್ರಕ್ಕೆ ದುಃಖಾದಿಗಳು ಅನರ್ಥವಾಗುವುದಿಲ್ಲ ಎನ್ನುವುದಾದರೆ ಜೀವನಿಗೂ ಕೂಡ ಇವು ಅನರ್ಥಕಾರಿ ಆಗದೇ ಇರಬೇಕಾದೀತು. ಆದರೆ ಮಿಥ್ಯಾಭೂತವಾದರೂ ಕೂಡ ಜೀವನಿಗೆ ಹೇಗೆ ಅನರ್ಥಕರವಾಗಿದೆಯೋ, ಅದರಂತೆ ಬ್ರಹ್ಮನಿಗೂ ಕೂಡ ಇದೇ ದುಃಖಾದಿಗಳು ಅನರ್ಥಕರ ಆಗಲಿ. ಹೀಗೊಪ್ಪದಿದ್ದರೆ ದುಃಖದ ನಿವೃತ್ತಿಗೋಸ್ಕರ ವೇದಾಂತ ಶ್ರವಣಾದಿಗಳ ಪ್ರವೃತ್ತಿಯನ್ನು ಮಾಡುವುದು ವ್ಯರ್ಥವಾಗುತ್ತದೆ. ಏಕೆಂದರೆ ಜೀವನಿಗೂ ಕೂಡ ತಾತ್ವಿಕವಾಗಿ ಅನರ್ಥಗಳು ಇರುವುದಿಲ್ಲ.

**प्रकाशः –**

**विरुद्ध इति** ।। इतरेत्यनेन भिन्नेति प्रतीतेरिति भावः ।। **द्वितीयेपीति** ।। अधिकमित्यस्य जीवादर्थान्तरभूतमिति व्याख्यानादन्येनैवोक्तशङ्कानिरासादिदं व्यर्थमित्यर्थः ।।

ಗ್ರಂಥದಲ್ಲಿ 'ತತ್ರಾದ್ಯೇಸೂತ್ರೇ ಇತರವ್ಯಪದೇಶಾತ್ ಇತ್ಯಸ್ಯೈಕ್ಯವ್ಯಪದೇಶಾದಿತ್ಯರ್ಥೋ ವಿರುದ್ಧಃ' 'ಮೊದಲನೆಯ ಸೂತ್ರದಲ್ಲಿ 'ಇತರವ್ಯಪದೇಶಾತ್' ಎಂಬುದಕ್ಕೆ 'ಐಕ್ಯವ್ಯಪದೇಶಾತ್' ಎಂಬರ್ಥವು ವಿರುದ್ಧವಾಗಿದೆ' ಎಂದು ಹೇಳಲಾಗಿದೆ. ಏಕೆಂದರೆ ಇತರ ಎಂಬುದರಿಂದಲೇ ಭೇದವು ತಿಳಿಯುತ್ತಿದೆ. ಆದ್ದರಿಂದ ಐಕ್ಯವ್ಯಪದೇಶವು ವಿರುದ್ಧವಾಯಿತು ಎಂಬುದು ಇದರ ಅಭಿಪ್ರಾಯ.

'ದ್ವಿತೀಯೇಽಪಿ' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ - 'ಅಧಿಕಂತು ಭೇದನಿರ್ದೇಶಾತ್' ಎಂಬ ಸೂತ್ರದಲ್ಲಿರುವ 'ಅಧಿಕಂ' ಎಂಬ ಪದಕ್ಕೆ ಜೀವನಿಗಿಂತ ಭಿನ್ನನಾದ ಎಂಬುದಾಗಿ ವ್ಯಾಖ್ಯಾನವನ್ನು ಮಾಡಿರುವುದರಿಂದ 'ಭೇದನಿರ್ದೇಶಾತ್' ಎಂಬುದರಿಂದಲೇ ಹಿಂದಿನ ಆಶಂಕೆಯನ್ನು ಪರಿಹರಿಸಿದಂತಾಯಿತು. ಪುನಃ ಈ 'ಅಧಿಕಂ' ಎಂಬ ಪದವು ವ್ಯರ್ಥವಾಗಿದೆ ಎಂದಭಿಪ್ರಾಯ.

**प्रकाशः – तत्रापीति** ।। ''य आत्मनि तिष्ठन्'' इत्यादिना जीवात्मनि परमात्मनोऽवस्थितेरिति व्याख्यायाभेदश्रुतेरेवं गतेरुक्तत्वादित्यर्थः ।

'ತತ್ರಾಪಿ' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ - 'ಯ ಆತ್ಮನಿ ತಿಷ್ಠನ್' ಇತ್ಯಾದಿ ಶ್ರುತಿಗಳಲ್ಲಿ ಜೀವಾತ್ಮನಲ್ಲಿ ಪರಮಾತ್ಮನು ನೆಲೆಸಿದ್ದಾನೆ ಎಂಬುದಾಗಿ ವ್ಯಾಖ್ಯಾನವನ್ನು ಮಾಡಿ ಅಭೇದಶ್ರುತಿಗೆ ಗತಿಕಲ್ಪನೆಯನ್ನು ಮಾಡಿರುತ್ತಾರೆ. ಆದ್ದರಿಂದ ಪ್ರಕೃತ್ಯಧಿಕರಣದಲ್ಲಿಯೇ ಅಭೇದಶ್ರುತಿಯು ಶರೀರಶರೀರಿಭಾವ ವಿಷಯಕ ಎಂದು ಹೇಳಿದ ಮೇಲೆ ಪುನಃ ಇಲ್ಲಿ ಅದನ್ನೇ ಹೇಳುವುದು ಪುನರುಕ್ತ ಎಂದಭಿಪ್ರಾಯ.

ಶ್ರುತೇಸ್ತುಶಬ್ದಮೂಲತ್ವಾಧಿಕರಣ (2-1-8)

**प्रकाशः** – यद्भामत्यामुक्तं ''अधिकन्तु'' इत्यत्र ''परमात्मा सर्वज्ञत्वाद्यथा जीवान् वस्तुत आत्मनः, अभिन्नान् पश्यति पश्यत्येवं न भावत एषां सुखदुःखादि वेदनासंयोगोस्ति अविद्यावशात्तेषां तद्वदभिमान इति । तथा च तेषां सुखदुःखादिवेदनायामहमुदासीन इति न तेषां बाधनागारे विनिवेशोप्यस्ति क्षतिः काचिन्ममेति न हिताकरणादिदोषापत्तिः'' इति ।

ಭಾಮತಿಯಲ್ಲಿ ಹೀಗೆ ಹೇಳಲಾಗಿದೆ - 'ಅಧಿಕಂತು' ಎಂಬ ಪದವು ವ್ಯರ್ಥವಲ್ಲ. ಏಕೆಂದರೆ ಪರಮಾತ್ಮನು ಸರ್ವಜ್ಞನಾಗಿರುವುದರಿಂದ ಹೇಗೆ ಜೀವರನ್ನು ಸಹಜವಾಗಿ ತನಗಿಂತ ಅಭಿನ್ನರೆಂದು ತಿಳಿಯುತ್ತಾನೋ, ಹಾಗೇ ಸಹಜವಾಗಿ ಜೀವರಿಗೆ ಉಂಟಾಗುವ ಸುಖದುಃಖಾದಿಗಳ ಸಂವೇದನೆಯನ್ನು ತಿಳಿಯುವುದಿಲ್ಲ. ಏಕೆಂದರೆ ಜೀವರಿಗೆ ಅವಿದ್ಯೆಯ ಅಭಿಮಾನಪ್ರಯುಕ್ತವಾಗಿ ಸುಖ-ದುಃಖಾದಿಗಳ ಅನುಭವವು ಬರುತ್ತಿದೆ. ಆ ಜೀವರ ಸುಖ-ದುಃಖಾದಿಗಳ ತಿಳುವಳಿಕೆಯಲ್ಲಿ ನಾನು ಉದಾಸೀನನಾಗಿದ್ದೇನೆ ಎಂಬುದಾಗಿ ತಿಳಿಯುತ್ತಾನೆ. ಆದ್ದರಿಂದ ಸುಖ-ದುಃಖಾದಿಗಳ ಅನುಭವಕ್ಕೆ ಆಶ್ರಯವಾದ ಸಂಸಾರದಲ್ಲಿ ಬ್ರಹ್ಮನಿಗೆ ವಿನಿವೇಶವು ಇರುವುದಿಲ್ಲ. ಆದ್ದರಿಂದಲೇ ಹಿತಾಕರಣಗಳ ದೋಷಪ್ರಸಕ್ತಿಯು ಬರಲಿ ಎಂಬುದಾಗಿ ಯಾವುದೇ ಆಕ್ಷೇಪ ಮಾಡಲು ಸಾಧ್ಯವಿಲ್ಲ.

**प्रकाशः** – तत्पञ्चधा विकल्प्य प्रत्याचष्टे – **किं विशिष्टस्येति** ।। विशेष्यस्यैवानर्थयोगादिति ।। तस्य चाभिन्नत्वादनर्थस्स्यादेवेति भावः । बन्धमोक्षयोस्सामानाधिकरण्यं व्यनक्ति – **नहीति** ।। तथात्वे हि बन्धमोक्षयोः सामानाधिकरण्यं न स्यात् । तथात्वं चापुमर्थत्वप्रसङ्गादनिष्टमिति भावः ।। **जीवस्येति** ।। तथाच तेनाभेदाभावादनर्थाभाव इति भावः ।।

ಮೇಲೆ ಹೇಳಿದ ಭಾಮತಿಕಾರನ ಅಭಿಪ್ರಾಯವನ್ನು 'ಕಿಂ ವಿಶಿಷ್ಟಸ್ಯ' ಎಂಬುದಾಗಿ ಐದು ಬಗೆಯಲ್ಲಿ ವಿಕಲ್ಪ ಮಾಡಿ ಖಂಡನೆಯನ್ನು ಮಾಡುತ್ತಿದ್ದಾರೆ. 'ಕಿಂ ವಿಶಿಷ್ಟಸ್ಯ' ಇತ್ಯಾದಿಯಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಇಲ್ಲಿ 'ವಿಶೇಷ್ಯಸ್ಯೈವಾನರ್ಥಯೋಗಾತ್' ಎಂಬಲ್ಲಿ ವಿಶೇಷ್ಯನಾದವನು ಅಭಿನ್ನನಾಗಿರುವುದರಿಂದ ಅನರ್ಥವನ್ನು ಹೊಂದಬೇಕಾಗುತ್ತದೆಂಬ ಅಭಿಪ್ರಾಯವನ್ನು ತಿಳಿಯಬೇಕು. ಬಂಧ ಹಾಗೂ ಮೋಕ್ಷಗಳಿಗೆ ಸಾಮಾನಾಧಿಕರಣ್ಯವನ್ನು 'ನಹಿ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ. ಒಂದು ವೇಳೆ ವಿಶೇಷ್ಯನಿಗೆ ಬಂಧವನ್ನು ಹೇಳದಿದ್ದರೆ ಬಂಧ ಹಾಗೂ ಮೋಕ್ಷಗಳಿಗೆ ಸಾಮಾನಾಧಿಕರಣ್ಯವನ್ನೇ ಒಪ್ಪದೇ ಇರಬೇಕಾಗುತ್ತದೆ. ಇಷ್ಟಾಪತ್ತಿಯೆಂದು ಹೇಳಲು ಸಾಧ್ಯವಿಲ್ಲ. ಹಾಗೇ ಹೇಳಿದರೆ ಮೋಕ್ಷವೆಂಬ ಪುರುಷಾರ್ಥವೇ ಇಲ್ಲದಂತಾಗುತ್ತದೆ. ಆದ್ದರಿಂದ ಇದನ್ನು ಅನಿಷ್ಟವೆಂದು ಹೇಳಬೇಕು. 'ಜೀವಸ್ಯ' ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಆದ್ದರಿಂದ ಬ್ರಹ್ಮನಿಗೂ ಜೀವನಿಂದ ಅಭೇದವಿಲ್ಲದ ಕಾರಣ ಅನರ್ಥವು ಇರುವುದಿಲ್ಲ ಎಂಬಭಿಪ್ರಾಯವನ್ನು ಇಲ್ಲಿ ತಿಳಿಯಬೇಕು.

**प्रकाशः – बहुजीवेति ।।** एकजीववादे शुको मुक्तो वामदेवो मुक्त इत्यादेरर्थवादत्वेन जीवस्य मुक्तत्वे सर्वथा निवृत्तेरेवमापादनायोगेपि बहुजीववादे स्यादेव दोष इति भावः ।।

ಬಹುಜೀವವಾದದಲ್ಲಿ ದೋಷಬರುತ್ತದೆಂದು ಗ್ರಂಥದಲ್ಲಿ ಹೇಳಿದ್ದಾರೆ. ಏಕೆಂದರೆ ಏಕಜೀವವಾದದಲ್ಲಿ ಶುಕ, ವಾಮದೇವ ಮೊದಲಾದವರು ಮುಕ್ತರಾಗಿದ್ದಾರೆ ಎಂಬುದನ್ನು ಅರ್ಥವಾದ ಎಂದು ಪರಿಗಣಿಸಲಾಗಿದೆ. ಜೀವರು ಮುಕ್ತನಾಗಿದ್ದಾನೆ ಎಂದು ಹೇಳಿದರೆ ಸರ್ವಥಾ ನಿವೃತ್ತಿಯನ್ನೇ ಹೇಳಿದಂತಾಗುವುದರಿಂದ ಹೀಗೆ ಆಪಾದನೆ ಮಾಡಲು ಸಾಧ್ಯವಾಗುವುದಿಲ್ಲ. ಆದರೆ ಬಹುಜೀವವಾದದಲ್ಲಿ ಈ ದೋಷ ಬರುತ್ತದೆ ಎಂದು ತಿಳಿಯಬೇಕು.

**प्रकाशः – एकजीवेति ।।** अयं च दोषः प्रागपि समः । वादद्वयेपि दोषमाह – **दुःखेति ।।** ननु बन्धरूपानर्थसामानाधिकरण्यमस्तीत्यत आह – **दुःखमेवेति ।।** तथा च तेनैव तथात्वं वक्तव्यमिति भावः । ननूक्तमुपाधेरित्यादि तत्राह – **यथाचेति।।**

'ಏಕಜೀವ' ಇತ್ಯಾದಿಯಾದ ವಾಕ್ಯದಲ್ಲಿ ಹೇಳಿದ ದೋಷವು ಹಿಂದೆಯೂ ಕೂಡ ಸಮಾನವಾಗಿದೆ. ಏಕಜೀವವಾದ ಹಾಗೂ ಬಹುಜೀವವಾದ ಎರಡರಲ್ಲೂ ಸಮನವಾದ ದೋಷವನ್ನು 'ದುಃಖ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

ಮೋಕ್ಷಕ್ಕೆ ಬಂಧರೂಪಾನರ್ಥಸಾಮಾನಾಧಿಕರಣ್ಯವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ದುಃಖಮೇವ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ದುಃಖವೇ ಸ್ವತಃ ಅನರ್ಥರೂಪವಾಗುವುದರಿಂದ ದುಃಖವನ್ನೇ ಅನರ್ಥವನ್ನಾಗಿ ಹೇಳಬೇಕು ಎಂದು ಹೇಳಿದಂತಾಗುತ್ತದೆ.

ನಾವು ಉಪಾಧಿಯನ್ನು ಹೇಳಿದ್ದೇವಲ್ಲವೇ? ಎಂಬ ಪ್ರಶ್ನೆಗೆ 'ಯಥಾಚ' ಎಂಬುದರಿಂದ ಆ ಉಪಾಧಿಯನ್ನು ನಿರಾಕರಣೆ ಮಾಡುತ್ತಿದ್ದಾರೆ.

**प्रकाशः –** चिन्मात्र एव दुःखाद्यनर्थस्वीकारे तेनाभेदात् ब्रह्मणोऽनर्थो दुर्वार इति भावः । य उपाधिः स प्रतिबिम्बपक्षपातीति व्याप्तिमुपेत्योक्तम् । वस्तुतस्तु सैव नास्ति । व्यभिचारादित्याह – **कथञ्चेति ।। सार्वज्ञादेरिति ।।** औपाधिकस्येति वर्तते । एवमग्रेपि । छायादीत्यादिपदेन प्रतिमुद्रादि गृह्यते ।

ಚಿನ್ಮಾತ್ರನಲ್ಲಷ್ಟೇ ದುಃಖ್ಯಾದ್ಯನರ್ಥವನ್ನು ಅಂಗೀಕಾರ ಮಾಡಿದರೆ ಆ ಚಿನ್ಮಾತ್ರನಿಂದ ಅಭೇದವಿರುವ ಪ್ರಯುಕ್ತ ಬ್ರಹ್ಮನಿಗೆ ಅನರ್ಥವು ಬಂದೇ ಬರುತ್ತದೆ ಎಂಬ ದೋಷ ನಿಮಗೆ ತಪ್ಪಿದ್ದಲ್ಲ. ಯಾವ ಉಪಾಧಿಯಿದೆಯೋ, ಅದು ಪ್ರತಿಬಿಂಬಪಕ್ಷಪಾತಿಯಾಗಿದೆ ಎಂಬ ವ್ಯಾಪ್ತಿಯನ್ನು ಅಂಗೀಕರಿಸಿ, ಇಲ್ಲಿಯತನಕ

ದೋಷವನ್ನು ಹೇಳಲಾಯಿತು. ವಾಸ್ತವಿಕವಾಗಿ ಈ ವ್ಯಾಪ್ತಿಯೇ ಇರುವುದಿಲ್ಲ. ಏಕೆಂದರೆ ವ್ಯಭಿಚಾರ ಬರುತ್ತದೆ ಎಂಬುದನ್ನು 'ಕಥಂಚ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

'ಸಾರ್ವಜ್ಞಾದೇಃ' ಎಂಬಲ್ಲಿ ಔಪಾಧಿಕಸ್ಯ ಎಂಬುದನ್ನು ವಿವಕ್ಷಿಸಬೇಕು. ಔಪಾಧಿಕವಾದ ಸಾರ್ವಜ್ಞಾದಿಗಳು ಬಿಂಬನಲ್ಲೇ ಕಾಣಿಸುತ್ತಿವೆ ಎಂದಭಿಪ್ರಾಯ. ಇದರಂತೆ ಮುಂದೂ ಕೂಡ ತಿಳಿಯಬೇಕು. 'ಛಾಯಾದಿವತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಮುಂದಿರುವ ಆದಿಪದದಿಂದ ಪ್ರತಿಮುದ್ರೆಯನ್ನು ವಿವಕ್ಷಿಸಬೇಕು.

**प्रकाशः – द्वितीये ब्रह्मण इत्यनेन शुद्धमुच्यतेऽथ विशिष्टमिति कल्पौ हृदि निधायाह – तत्पदेति ।।**

ಎರಡನೆಯ ಪಕ್ಷದಲ್ಲಿ 'ಬ್ರಹ್ಮಣಃ' ಎಂಬುದರಿಂದ ಶುದ್ಧಬ್ರಹ್ಮನನ್ನು ವಿವಕ್ಷಿಸುವರೋ, ಅಥವಾ ವಿಶಿಷ್ಟನನ್ನೋ, ಈ ಎರಡು ವಿಕಲ್ಪವನ್ನು ಹೃದಯದಲ್ಲಿಟ್ಟುಕೊಂಡು 'ತತ್ಪದ' ಇತ್ಯಾದಿ ವಾಕ್ಯವನ್ನು ವಿವರಿಸುತ್ತಿದ್ದಾರೆ.

ವಿವರಣೆ - ಸತ್ಯವಾದ ವಿಶೇಷ್ಯಕ್ಕೆ ಅನರ್ಥವು ಉಂಟಾಗುತ್ತದೆ. ಬ್ರಹ್ಮನಿಗೆ ವಿಶೇಷ್ಯದ ಜೊತೆ ಐಕ್ಯವು ಇರುವುದಿಲ್ಲ. ಆದ್ದರಿಂದ ಅನರ್ಥವು ಬ್ರಹ್ಮನಿಂದ ಬರುವುದಿಲ್ಲ ಎಂಬುದು ಎರಡನೆಯ ವಿಕಲ್ಪ. ಇಲ್ಲಿ ಬ್ರಹ್ಮ ಎಂಬ ಪದದಿಂದ ಶುದ್ಧನನ್ನು ಹೇಳುವಿಯೋ, ಅಥವಾ ವಿಶಿಷ್ಟನನ್ನು ಹೇಳುವಿಯೋ? ಎಂದು ಪ್ರಶ್ನಿಸಬೇಕು. ಶುದ್ಧನನ್ನು ವಿವಕ್ಷಿಸಿದರೆ, ಶುದ್ಧನಿಗೆ ಶುದ್ಧನಿಂದ ಅಭೇದವು ಇದ್ದೇ ಇರುವುದರಿಂದ, ಬ್ರಹ್ಮನಿಗೆ ಅನರ್ಥವು ಬಂದೇ ಬರುತ್ತದೆ. ವಿಶಿಷ್ಟನಿಗೆ ಶುದ್ಧನಿಂದ ಅಭೇದವು ಇಲ್ಲದೇ ಭೇದವೇ ಇರುವುದರಿಂದ ಅನರ್ಥವು ಬರದೇ ಇರಬಹುದು. ಆದರೆ ವಿಶಿಷ್ಟನಾದ ಜೀವನಿಗೂ ಕೂಡ ಅನರ್ಥವು ಬರದೇ ಇರಬೇಕಾದೀತು. ಅಂತಿಮವಾಗಿ ಎಲ್ಲ ಅನರ್ಥಗಳು ಶುದ್ಧನಿಗೆ ಮಾತ್ರ ಬರುತ್ತದೆಂದಾಗಬೇಕಾದೀತು.

**प्रकाशः – भेदाध्यासायोगादिति ।। तथाचानर्थस्स्यादेवेति भावः ।**

'ಭೇದಾಧ್ಯಾಸಾಯೋಗಾತ್' ಎಂಬುದರ ಅಭಿಪ್ರಾಯ ಹೀಗಿದೆ - ಜೀವನಿಗೆ ಭೇದಾಧ್ಯಾಸವಿದ್ದರೂ ಕೂಡ ಬ್ರಹ್ಮನಿಗೆ ಇರುವುದಿಲ್ಲ. ಆದ್ದರಿಂದ ಬ್ರಹ್ಮನಿಗೆ ಅನರ್ಥವು ಬರಬೇಕಾದೀತು ಎಂದು.

**प्रकाशः – ननु स्वाप्नं प्रातीतिकम् । इदं तु व्यावहारिकमिति तत्परिहाराभावे श्रुत्यादिविरोधस्स्यादित्युच्यते । नच भ्रान्तत्वाङ्गीकारेपि तद्विरोधस्स्यादेवेति वाच्यम् । शुद्धविषयत्वेनोपपत्तेरित्यतोऽयुक्तश्चायं निर्वाह इत्याह – किञ्चेति ।।**

ಸ್ವಾಪ್ನವಾದದ್ದೆಲ್ಲವೂ ಪ್ರಾತೀತಿಕವಾಗಿದೆ. ಹಿತಾಕರಣಾದಿಗಳೆಲ್ಲವೂ ವ್ಯಾವಹಾರಿಕವಾಗಿದೆ. ಈ ದೋಷವನ್ನು ಪರಿಹಾರ ಮಾಡಿಕೊಳ್ಳದಿದ್ದರೂ ಶ್ರುತ್ಯಾದಿವಿರೋಧಗಳು ಬರುತ್ತವೆ. ಇನ್ನು ಬ್ರಹ್ಮನು ಭ್ರಾಂತನೆಂದು ಅಂಗೀಕಾರ ಮಾಡಿದರೂ ಕೂಡ ಶ್ರುತಿವಿರೋಧವು ಬಂದೇ ಬರುತ್ತದೆ ಅಲ್ಲವೇ ? ಎಂದು ಪ್ರಶ್ನಿಸಬಾರದು. 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳನ್ನು ಶುದ್ಧವಿಷಯಕವಾಗಿ ವ್ಯಾಖ್ಯಾನ ಮಾಡುತ್ತೇವೆ. ಈ ವಿಷಯವನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

ವಿವರಣೆ - ಒಂದು ವೇಳೆ ಬ್ರಹ್ಮನಿಗೂ ಭ್ರಾಂತಿಯನ್ನು ಹೇಳುವುದಾದರೆ ಭ್ರಾಂತಿಪ್ರಯುಕ್ತವಾಗಿ ಹಿತಾಕರಣಾದಿದೋಷಗಳು ಬ್ರಹ್ಮನಿಗೆ ಬಂದೇ ಬರುತ್ತವೆ. ಇದನ್ನು ನೀನು ಪರಿಹಾರ ಮಾಡುವುದೇ ಬೇಡ. ಏಕೆಂದರೆ ಭ್ರಾಂತಿಯಿಂದ ತಂದು ಕೊಳ್ಳುವ ಹಿತಾಕರಣಾದಿದೋಷವು ಸ್ವಾಪ್ನದಂತೆ ಪರ್ಯನುಯೋಗಾರ್ಹವೇ ಆಗಿರುವುದಿಲ್ಲ ಎಂದು ಗ್ರಂಥದಲ್ಲಿ ಹೇಳಲಾಯಿತು. ಇದರ ಮೇಲೆ ಪೂರ್ವಪಕ್ಷಿಯು ಹೀಗೆ ಆಕ್ಷೇಪಿಸುತ್ತಾನೆ-

ಆಕ್ಷೇಪ - ಸ್ವಾಪ್ನಪದಾರ್ಥವೆಲ್ಲವೂ ಪ್ರಾತೀತಿಕವಾಗಿ ಸತ್ಯವಾಗಿದೆ. ಸಂಸಾರದಲ್ಲಿ ದುಃಖಾದ್ಯನರ್ಥವು ವ್ಯಾವಹಾರಿಕವಾಗಿದೆ. ಅಂದರೆ ಹಿತಾಕರಣ ಅಹಿತಕರಣಗಳು ವ್ಯಾವಹಾರಿಕವಾಗಿವೆ. ಇದನ್ನು ಪರಿಹಾರ ಮಾಡಿಕೊಳ್ಳಲೇ ಬೇಕು. ಪರಿಹಾರ ಮಾಡಿಕೊಳ್ಳದಿದ್ದರೆ 'ನಿರನಿಷ್ಟಃ ನಿರವದ್ಯಃ' ಇತ್ಯಾದಿ ಶ್ರುತಿಗಳ ವಿರೋಧ ಬರುತ್ತದೆ. ಇದರ ಪರಿಹಾರಕ್ಕಾಗಿ ಬ್ರಹ್ಮನಿಗೆ ಹಿತಾಕರಣಾದಿ ದೋಷಗಳು ಇರುವುದಿಲ್ಲ ಎಂದು ಪರಿಹಾರ ಮಾಡುತ್ತೇವೆ.

ಬ್ರಹ್ಮನನ್ನು ಭ್ರಾಂತನೆಂದು ಒಪ್ಪಿದರೂ ಕೂಡ 'ಯ ಸರ್ವಜ್ಞಃ ಸರ್ವವಿತ್' ಇತ್ಯಾದಿ ಶ್ರುತಿಗಳ ವಿರೋಧವು ಬಂದೇ ಬರುತ್ತದೆ ಅಲ್ಲವೇ? ಇದು ತಪ್ಪು. 'ಬ್ರಹ್ಮನು ಭ್ರಾಂತನಲ್ಲ' ಇತ್ಯಾದಿಗಳೆಲ್ಲವೂ ಶುದ್ಧಬ್ರಹ್ಮನಿಗೆ ಸಂಬಂಧಪಟ್ಟ ವಿಷಯವಾಗಿದೆ. ವಿಶಿಷ್ಟಬ್ರಹ್ಮನಿಗೆ ಭ್ರಾಂತಿ ಮೊದಲಾದವುಗಳು ಇರುತ್ತವೆ ಎಂದು ಹೇಳಿದರೆ ಏನೂ ಬಾಧಕವಿಲ್ಲ.

ವಾಸ್ತವಿಕವಾಗಿ ತಾತ್ತ್ವಿಕ ಅಭೇದವಿದ್ದರೂ ಕೂಡ ಅನರ್ಥವು ಬರುವುದಿಲ್ಲ ಎಂಬ ಮೂಲ ಪ್ರಮೇಯವೇ ತಪ್ಪು. ಏಕೆಂದರೆ ಅಧ್ಯಸ್ತವಾದ ಭೇದವಿದ್ದರೂ ಕೂಡ ತಾತ್ತ್ವಿಕವಾದ ಅಭೇದವಿರುವುದರಿಂದ ಅನರ್ಥವು ಬಂದೇ ಬರಬೇಕು. ಗುಂಜಾಪುಂಜವನ್ನು ವಹ್ನಿಯಲ್ಲಿ ಆರೋಪ ಮಾಡಿದರೂ ಕೂಡ ಸುಡುವಿಕೆ ಎಂಬ ಧರ್ಮವನ್ನು ವಹ್ನಿಯು ಹೇಗೆ ಬಿಡುವುದಿಲ್ಲವೋ, ಅದರಂತೆ ಆತ್ಮನಲ್ಲಿ ಅನಾತ್ಮತ್ವವು ಆರೋಪಿತವಾದರು ಆತ್ಮತ್ವವು ಇದ್ದೇ ಇರುತ್ತದೆ. ಅದರಂತೆ ಇಲ್ಲೂ ಕೂಡ ಆತ್ಮನಲ್ಲಿ ತಾತ್ತ್ವಿಕವಾದ ಅಭೇದವಿರುವುದರಿಂದ ಅನರ್ಥವು ಬಂದೇ ಬರುತ್ತದೆ.

**प्रकाशः** – ननु तात्विकाभेदेपि संसाराश्रयोनात्मेत्यारोपादनात्मन्येव स सेत्स्यतीत्यत आह – **नापीति** ।।

ಅಭೇದವು ತಾತ್ತ್ವಿಕವಾಗಿದ್ದರೂ ಕೂಡ ಆತ್ಮನಲ್ಲಿ ಸಂಸಾರವು ಇರುವುದಿಲ್ಲ. ಆತ್ಮನಲ್ಲಿ ಅನಾತ್ಮತ್ವವನ್ನು ಆರೋಪ ಮಾಡಿರುವುದರಿಂದ ಆತ್ಮನಿಗೆ ಸಂಸಾರವೇ ಇರುವುದಿಲ್ಲ ಎಂಬುದಾಗಿ ಅದ್ವೈತಿಗಳು ಆಕ್ಷೇಪ ಮಾಡಿದರೆ ಸಂಸಾರವು ಅನಾತ್ಮಗತ ಎಂದು ಯಾರೂ ಹೇಳುವುದಿಲ್ಲ ಇತ್ಯಾದಿ ವಿಷಯವನ್ನು 'ನಾಪಿ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – यदपि श्रुतेः शुद्धविषयत्वमुक्तं तच्च नेत्याह – **अपि चेति** ।। ब्रह्मणोऽनभिमाने किं तत्पदवाच्योऽभिमानी तल्लक्ष्यो वेति विकल्प्याह – **किञ्चेति**।।

ಶ್ರುತಿಯು ಶುದ್ಧವಿಷಯಕವಾಗಿದೆ ಶುದ್ಧನು ತತ್ತ್ವಜ್ಞಾನಿಯಾಗಿರುವುದರಿಂದ ಭೇದಾಧ್ಯಾಸವು ಅವನಲ್ಲಿ ಇರುವುದಿಲ್ಲವೆಂದು ಅದ್ವೈತಿಯು ಹೇಳಿದ್ದನು. ಇದೂ ಕೂಡ ತಪ್ಪು ಎಂಬುದನ್ನು 'ಅಪಿ ಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

ಶ್ರುತೇಃಶ್ರುತಬ್ದಮೂಲತ್ವಾಧಿಕರಣ (2-1-8)

ಬ್ರಹ್ಮನಿಗೆ ಅಭಿಮಾನವಿಲ್ಲ ಎಂದು ಹೇಳುತ್ತಿದ್ದೀರಿ. ಹಾಗಾದರೆ ತತ್ಪದವಾಚ್ಯನಾದವನು ಅಭಿಮಾನವುಳ್ಳವನೋ, ಅಥವಾ ಲಕ್ಷ್ಯನಾದವನು ಅಭಿಮಾನವುಳ್ಳವನೋ? ವಾಚ್ಯನಾದವನು ವಿಶಿಷ್ಟನಾದ್ದರಿಂದ ಅಭಿಮಾನವೂ ಕೂಡ ಅವನಿಗೇ ಇದೆ ಎಂದಾಯಿತು. ಆಗ ಸಂಸಾರ ಹಾಗೂ ಮೋಕ್ಷಗಳೆರಡು ವಿಶಿಷ್ಟನಿಗೆಂದು ಹೇಳಿದಂತಾಗುತ್ತದೆ. ತತ್ಪದಲಕ್ಷ್ಯನಿಗೆ ಅಭಿಮಾನವನ್ನು ಹೇಳಿದರೆ ಆ ಪಕ್ಷದಲ್ಲಿ ಚಿನ್ಮಾತ್ರನಿಗೂ ಕೂಡ ಅಭಿಮಾನವು ಬರಬೇಕಾದೀತು ಎಂಬುದಾಗಿ ದೋಷವನ್ನು ಹೇಳಲಾಗಿದೆ. ಈ ಎಲ್ಲ ವಿಷಯವನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡಿದ್ದಾರೆ.

**प्रकाशः** – **इत्युक्तमिति** ।। तत्पदवाच्यस्येत्यादिनेति भावः ।। **इत्युक्तमिति** ।। तत्पदलक्ष्यस्येत्यादिनेति भावः ।। **अन्यथेति** ।। अनर्थत्वाभावे ।।

'ಇತ್ಯುಕ್ತಮ್' ಎಂದರೆ 'ತತ್ಪದವಾಚ್ಯಸ್ಯ' ಇತ್ಯಾದಿ ಗ್ರಂಥದಿಂದ ಹೇಳಲಾಗಿದೆ ಎಂದಭಿಪ್ರಾಯ. ಎರಡನೆಯ ಬಾರಿ ಪ್ರಯೋಗಿಸಲ್ಪಟ್ಟ 'ಇತ್ಯುಕ್ತಮ್' ಎಂಬುದಕ್ಕೆ ತತ್ಪದಲಕ್ಷ್ಯನಿಗೆ ಇತ್ಯಾದಿಯಾಗಿ ಹೇಳಲ್ಪಟ್ಟಿದೆ ಎಂದರ್ಥ. 'ಅನ್ಯಥಾ' ಎಂದರೆ ಅನರ್ಥ ಇಲ್ಲವೆಂದು ಹೇಳಿದರೆ ಎಂದರ್ಥ.

### ಅದ್ವೈತಿಗಳ ಉಪಸಂಹಾರಾಧಿಕರಣದ ನಿರಾಕರಣೆ

## तात्पर्यचन्द्रिका

**तृतीयसूत्रे ''भोक्त्रापत्तेः'' इत्यनेन पौनरुक्त्यम् । त्वन्मते ''ब्रह्मविवर्तत्वेऽपि जीवजडयोर्वैजात्यं पृथिवीविकारत्वेपि वज्राश्मादीनामिव'' इति तृतीयसूत्र उक्तेः । ''भोक्त्रापत्तेः'' इत्यत्रापि फेनतरङ्गादिदृष्टान्तेन तद्वैजात्यस्यैवोक्तेः ।**

ಅದ್ವೈತಿಗಳ ಪ್ರಕಾರ ಮೂರನೆಯ 'ಅಶ್ಮಾದಿವಚ್ಚ ತದನುಪಪತ್ತಿಃ' ಎಂಬ ಸೂತ್ರವು 'ಭೋಕ್ತ್ರಾಪತ್ತೇಃ' ಎಂಬ ಸೂತ್ರದಿಂದ ಪುನರುಕ್ತವಾಗುತ್ತದೆ. ಏಕೆಂದರೆ 'ಅಶ್ಮಾದಿವಚ್ಚ ತದನುಪಪತ್ತಿಃ' ಎಂಬ ಸೂತ್ರಕ್ಕೆ ಅವರು ಹೀಗೆ ವ್ಯಾಖ್ಯಾನ ಮಾಡುತ್ತಾರೆ - 'ವಜ್ರವು ಕಲ್ಲಾಗಿದೆ, ಸೂರ್ಯಕಾಂತಮಣಿಯು ಕಲ್ಲಾಗಿದೆ, ಬಂಡೆಯು ಕಲ್ಲಾಗಿದೆ. ಇವೆಲ್ಲವೂ ವಿಲಕ್ಷಣವಾಗಿದ್ದರೂ ಕೂಡ ಒಂದೇ ಪೃಥಿವೀತತ್ವದಿಂದ ಜನಿಸಿವೆ. ಅದರಂತೆ ಸೃಷ್ಟಿಕರ್ತನಾದ ಒಬ್ಬನೇ ಬ್ರಹ್ಮನಿಂದ ಈ ಜಗತ್ತು ನಿರ್ಮಾಣವಾಗಿದೆ. ಕೆಲವು ಜಡ ಎನಿಸುತ್ತವೆ. ಕೆಲವು ಚೇತನ ಎನಿಸುತ್ತವೆ. ಈ ವೈಚಿತ್ರ್ಯವು ಆಶ್ಚರ್ಯವಲ್ಲ ಎಂದು ವ್ಯಾಖ್ಯಾನ ಮಾಡುತ್ತಾರೆ.

ಇದು ತಪ್ಪು. ಏಕೆಂದರೆ ಇದೇ ವಿಷಯವನ್ನು ಅದ್ವೈತಿಗಳು ಭೋಕ್ತ್ರಾಪತ್ತ್ಯಧಿಕರಣದಲ್ಲಿ ಫೇನತರಂಗದ ದೃಷ್ಟಾಂತದಿಂದ ಸಮರ್ಥನೆ ಮಾಡಿದ್ದಾರೆ. ನೊರೆ, ಅಲೆ ಎರಡೂ ಕೂಡ ಹೇಗೆ ಸಮುದ್ರದ ವಿಕಾರವೇ ಆಗಿವೆಯೋ, ಅದರಂತೆ ಒಂದೇ ಬ್ರಹ್ಮನ ವಿಕಾರವಾಗಿ ಜಡಚೇತನಗಳು ಉಂಟಾಗಿವೆ ಎಂದು ಹೇಳಿರುತ್ತಾರೆ. ಕೇವಲ ದೃಷ್ಟಾಂತದ ವ್ಯತ್ಯಾಸಕ್ಕೋಸ್ಕರ ಸೂತ್ರವನ್ನು ಪ್ರತ್ಯೇಕವಾಗಿ ರಚನೆ ಮಾಡುವುದು ವ್ಯರ್ಥವಾಗಿದೆ.

**यदुक्तं परैः ''उपसंहार'' इत्यादिसूत्रद्वयमेकमधिकरणम् । तत्राद्येनासहायस्योपादानत्वे क्षीरं दृष्टान्तयित्वा द्वितीयेनासहायस्याप्यधिष्ठातृत्वे देवादयो दृष्टान्तिताः ''देवादयो ह्यनपेक्ष्य बाह्यं साधनमिच्छामात्रेण प्रासादादीन्निर्मिमत इति वेदादिसिद्धम्'' इति ।**

ಇನ್ನು ಅದ್ವೈತಿಗಳು 'ಉಪಸಂಹಾರದರ್ಶನಾನ್ನೇತಿಚೇನ್ನ ಕ್ಷೀರವದ್ಧಿ' ಹಾಗೂ 'ದೇವಾದಿವದಪಿ ಲೋಕೇ' ಎಂಬ ಸೂತ್ರಗಳು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸುತ್ತಾರೆ. ಇದಕ್ಕೆ ಅವರು ಉಪಸಂಹಾರಾಧಿಕರಣ ಎಂದು ಹೆಸರಿಟ್ಟಿದ್ದಾರೆ. ಈ ಅಧಿಕರಣದಲ್ಲಿರುವ ಮೊದಲನೆಯ ಸೂತ್ರವು ಹೀಗೆ ಹೇಳುತ್ತದೆ - ಯಾವುದೇ ವಸ್ತುವು ಉಪಾದಾನಕಾರಣವಾಗಬೇಕಾದರೆ ಅದಕ್ಕೆ ಮತ್ತೊಂದರ ಸಹಾಯವು ಅತ್ಯಗತ್ಯ. ಸೃಷ್ಟಿಯ ಆರಂಭದಲ್ಲಿ ಇರುವ ಬ್ರಹ್ಮನೊಬ್ಬನೇ ಜಗತ್ತಿಗೆ ಉಪಾದಾನಕಾರಣನಾಗಬೇಕಾದರೆ, ಅವನಿಗೆ ಯಾವುದಾದರೂ ಸಾಧನ ಸಲಕರಣೆಗಳು ಇರಲೇಬೇಕು. ಆದರೆ ಅನೇಕ ಸಲಕರಣೆಗಳ ಸಂಗ್ರಹವೇ ಉಪಸಂಹಾರ ಎನಿಸುತ್ತವೆ. ಇಂಥ ಸಲಕರಣೆಗಳು ಸೃಷ್ಟಿಯ ಆರಂಭದಲ್ಲಿ ಇಲ್ಲದ ಕಾರಣ ಹೇಗೆ ಉಪಾದಾನಕಾರಣನಾಗುತ್ತಾನೆ ?

ಹೀಗೆ ಪ್ರಶ್ನಿಸಬಾರದು. ಸೂತ್ರಕಾರನು 'ಕ್ಷೀರವದ್ಧಿ' ಎಂಬ ದೃಷ್ಟಾಂತದಿಂದ ಇದಕ್ಕೆ ಉದಾಹರಣೆಯನ್ನು ನೀಡಿದ್ದಾರೆ. ಹಾಲು ಮತ್ತೊಂದರ ಸಹಾಯವಿಲ್ಲದೇ ಹೇಗೆ ಪರಿಣಾಮವನ್ನು ಹೊಂದುತ್ತದೋ, ಅದರಂತೆ ಬ್ರಹ್ಮನೂ ಕೂಡ ಮತ್ತೊಂದರ ಸಹಾಯವಿಲ್ಲದೇ ಜಗತ್ತಾಗಿ ಪರಿಣಾಮವನ್ನು ಹೊಂದುತ್ತಾನೆ.

ಜಡವಾದ ಹಾಲು ಪರಿಣಾಮವನ್ನು ಹೊಂದಬಹುದು. ಆದರೆ ಚೇತನರಲ್ಲಿ ಹೀಗೆ ಮತ್ತೊಂದರ ಸಹಾಯವಿಲ್ಲದೇ ನಿರ್ಮಿಸುವುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಯಾವುದೇ ಸಾಧನೆಗಳಿಲ್ಲದೇ ಬ್ರಹ್ಮನು ಹೇಗೆ ಜಗತ್ತಿಗೆ ಕಾರಣನಾಗುತ್ತಾನೆ ? ಎಂಬ ಪ್ರಶ್ನೆಗೆ 'ದೇವಾದಿವದಪಿ ಲೋಕೇ' ಎಂಬ ಮುಂದಿನ ಸೂತ್ರ ಉತ್ತರವನ್ನು ನೀಡುತ್ತಿದೆ. ದೇವತೆಗಳು ಮತ್ತೊಂದರ ಅಪೇಕ್ಷೆಯನ್ನು ಪಡದೇ, ತಮ್ಮ ಇಚ್ಛೆಯಿಂದಲೇ ಮಹಡಿಯ ಮನೆಗಳನ್ನು ಭೋಗವಸ್ತುಗಳನ್ನು ನಿರ್ಮಾಣ ಮಾಡುತ್ತಾರೆ. ಈ ವಿಷಯವು ವೇದಾದಿಗಳಿಂದ ಸಿದ್ಧವಾಗಿದೆ.

ಹೀಗೆ ಎರಡು ಸೂತ್ರಗಳಿಗೆ ಅದ್ವೈತಿಗಳು ವ್ಯಾಖ್ಯಾನವನ್ನು ಮಾಡುತ್ತಾರೆ.

**तन्न । क्षीरादेरपि दधिभावे काथातञ्चनादिसापेक्षत्वात् । ''पयोम्बुवत्'' इत्यत्र क्षीरेऽपीशः कर्तेति वक्ष्यमाणत्वेन तद्विरोधाच्च ।**

ಅದ್ವೈತಿಗಳ ಈ ಅಭಿಪ್ರಾಯವು ತಪ್ಪು. ಏಕೆಂದರೆ ಪ್ರಥಮಸೂತ್ರದಲ್ಲಿ ಹಾಲು ಸ್ವತಃ ಪರಿಣಾಮವನ್ನು ಹೊಂದುತ್ತದೆ ಎಂದು ಸಮರ್ಥಿಸಿದ್ದೇ ಸರಿಯಲ್ಲ. ಏಕೆಂದರೆ ಅಲ್ಲಿ ಹಾಲು

ಮೊಸರಾಗಬೇಕಾದರೆ ಕಾಯಿಸಬೇಕು, ಅದು ಆರಬೇಕು., ಅನಂತರ ಹೆಪ್ಪು ಹಾಕಬೇಕು, ಇವೆಲ್ಲದರ ಸಹಾಯವಿಲ್ಲದೇ ಅದು ಮೊಸರಾಗುವುದಿಲ್ಲ. ಮತ್ತು 'ಪಯೋಂಬುವತ್' ಎಂಬುದಾಗಿ ಮುಂದೆ ಬರುವ ಸೂತ್ರದಲ್ಲಿ ಹಾಲು ಮೊಸರಾಗಲು ಬ್ರಹ್ಮನೇ ಕಾರಣನಾಗಿದ್ದಾನೆ ಎಂಬುದನ್ನು ನೀವೂ ಕೂಡ ಅಂಗೀಕರಿಸಿದ್ದೀರಿ. ಮುಂದೆ ವ್ಯಾಖ್ಯಾನ ಮಾಡುವ ನಿಮ್ಮ ಮಾತಿಗೆ ಈಗ ವಿರೋಧವು ಪ್ರಾಪ್ತವಾಗುತ್ತದೆ.

**क्षीरादिदृष्टान्तस्य विवर्तानानुगुणत्वाच्च । शुद्धविवर्तत्वेऽप्यज्ञानविशिष्टब्रह्मपरिणामो जगदिति चेत्तथापि देवादिदृष्टान्तो न युक्तः । नह्यज्ञातायाः शुक्ते रूप्यात्मना परिणामोऽधिष्ठातृसापेक्षः ।**

ಅದ್ವೈತಿಗಳ ಸಿದ್ಧಾಂತದಲ್ಲಿ ಈ ಕ್ಷೀರದ ದೃಷ್ಟಾಂತವೇ ಅಯುಕ್ತ. ಏಕೆಂದರೆ ಶುಕ್ತಿಯು ರಜತದ ಆಕಾರದಲ್ಲಿ ತೋರುವಂತೆ ಬ್ರಹ್ಮನು ಜಗತ್ತಾಗಿ ತೋರುತ್ತಾನೆ ಎಂಬುದು ಅವರ ಪ್ರಕ್ರಿಯೆ. ಇದರಂತೆ ಇಂಥ ದೃಷ್ಟಾಂತವನ್ನೇ ಅವರು ಹೇಳಬೇಕು ಹೊರತು, ಹಾಲು ಮೊಸರಾಗಿ ಪರಿಣಾಮ ಹೊಂದುತ್ತದೆಂಬ ಉದಾಹರಣೆಯು ಅನನುಗುಣವಾಗುತ್ತದೆ.

ಶುದ್ಧಬ್ರಹ್ಮನು ಜಗತ್ತಿಗೆ ವಿವರ್ತಕಾರಣನಾಗಿದ್ದಾನೆ. ಆದರೆ ಅಜ್ಞಾನವಿಶಿಷ್ಟನಾದ ಬ್ರಹ್ಮನು ಪರಿಣಾಮಕಾರಣನಾಗಿದ್ದಾನೆ. ಆದ್ದರಿಂದ ಅಜ್ಞಾನವಿಶಿಷ್ಟಬ್ರಹ್ಮನ ವಿವಕ್ಷೆಯಲ್ಲಿ ಹಾಲಿನ ದೃಷ್ಟಾಂತವನ್ನು ಸೂತ್ರಕಾರರು ಹೇಳಿರುತ್ತಾರೆ. ಏನು ತಪ್ಪು ?

ಈ ಆಕ್ಷೇಪವೂ ಕೂಡ ತಪ್ಪು. ಆಗ ದೇವತೆಗಳ ದೃಷ್ಟಾಂತವು ಅನನುಗುಣವಾಗುತ್ತದೆ. ಏಕೆಂದರೆ ದೇವತೆಗಳು ತಮ್ಮ ಐಶ್ವರ್ಯಶಕ್ತಿಯಿಂದಲೇ ಪ್ರಾಸಾದಾದಿಗಳನ್ನು ನಿರ್ಮಾಣ ಮಾಡುತ್ತಾರೆ. ಆದರೆ ಅಜ್ಞಾನವಿಶಿಷ್ಟವಾದ ಶುಕ್ತಿಯು ರಜತಾಕಾರವಾಗಿ ಪರಿಣಾಮವನ್ನು ಹೊಂದಬೇಕಾದರೆ, ಕರ್ತೃವಿನ ಪ್ರಯತ್ನವು ಅನಾವಶ್ಯಕ. ಆದ್ದರಿಂದ ಪರಿಣಾಮವಾದದಲ್ಲಿ ದೇವತೆಗಳ ದೃಷ್ಟಾಂತವು ಅಸಾಧುವಾಗಿವೆ.

**इन्द्रजालतौल्यविवक्षायां तु क्षीरदेवादिदृष्टान्तौ न युक्तौ । यदि च प्रासादादिर्देवादिभिरिव जगदीश्वरेण कृतं तर्हि मिथ्या न स्यात् ।**

ಇಂದ್ರಜಾಲವನ್ನು ತೋರಿಸುವ ವ್ಯಕ್ತಿಯು ಹೇಗೆ ವಸ್ತುಗಳನ್ನು ಸೃಷ್ಟಿ ಮಾಡುತ್ತಾನೋ, ಅದರಂತೆ ಬ್ರಹ್ಮನು ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಎಂಬುದು ಅದ್ವೈತಿಗಳ ಅಭಿಪ್ರಾಯ. ಈ ವಿಷಯದಲ್ಲೂ ಕೂಡ ಕ್ಷೀರದ ದೃಷ್ಟಾಂತ ಹಾಗೂ ದೇವತೆಗಳ ದೃಷ್ಟಾಂತವು ಅಸಂಗತವಾಗುತ್ತದೆ.

**एवञ्च क्षीरदृष्टान्तोऽचेतनं प्रधानं स्वयमेव परिणमत इति वदतो निरीश्वरसांख्यस्यानुगुणः ।**

ಒಂದುವೇಳೆ ದೇವತೆಗಳು ಪ್ರಾಸಾದಾದಿಗಳನ್ನು ನಿರ್ಮಾಣ ಮಾಡುವಂತೆ ಈಶ್ವರನು ಜಗತ್ತನ್ನು ನಿರ್ಮಾಣ ಮಾಡಿದ್ದಾನೆಂದು ಅದ್ವೈತಿಗಳು ಒಪ್ಪುವುದಾದರೆ, ಆಗ ಪ್ರಾಸಾದಾದಿಗಳಂತೆ ಈ ಜಗತ್ತೂ ಕೂಡ ಮಿಥ್ಯಾಭೂತವೇ ಆಗದೇ ಇರಬೇಕಾದೀತು. ಆದ್ದರಿಂದ ಅಚೇತನವಾದ ಪ್ರಧಾನವೇ ಜಗತ್ತಾಗಿ ಸ್ವತಃ ಪರಿಣಾಮವನ್ನು ಹೊಂದುತ್ತದೆ ಎಂದು ಹೇಳುವ ನಿರೀಶ್ವರಸಾಂಖ್ಯರ ಅಭಿಪ್ರಾಯಕ್ಕೆ ಅದ್ವೈತಿಗಳು ಹೇಳುವ ಕ್ಷೀರದೃಷ್ಟಾಂತದ ವ್ಯಾಖ್ಯಾನವು ಅನುಗುಣವಾಗುತ್ತದೆ. ಹೊರತು, ತಮ್ಮ ಮತಕ್ಕೆ ಸರ್ವಥಾ ಅನುಗುಣವಾಗುವುದಿಲ್ಲ.

**देवादिदृष्टान्तस्तु भिन्नेनोपादानेनेच्छामात्रेणेश्वरः सत्यजगत्स्रष्टेति वदतो ममानुगुणः । तव तु द्वयमपि प्रतिकूलम् ।**

'ಭಿನ್ನವಾದ ಉಪಾದಾನಕಾರಣವನ್ನು ಅಪೇಕ್ಷೆ ಪಟ್ಟು, ಈಶ್ವರನು ತನ್ನ ಇಚ್ಛಾಮಾತ್ರದಿಂದಲೇ ಸತ್ಯಭೂತವಾದ ಜಗತ್ತನ್ನು ಸೃಷ್ಟಿ ಮಾಡುತ್ತಾನೆ' ಎಂದು ನಾವು ಹೇಳುತ್ತೇವೆ. ಅದ್ವೈತಿಗಳು ವ್ಯಾಖ್ಯಾನ ಮಾಡುವ 'ದೇವಾದಿವತ್' ಎಂಬ ಸೂತ್ರವು ಆದ್ದರಿಂದ ನಮಗೆ ಅನುಗುಣವಾಗುತ್ತದೆ. ಅದ್ವೈತಿಗಳಿಗೆ ಈ ಎರಡೂ ಸೂತ್ರಗಳು ಅನುಕೂಲವಾಗಲಿಲ್ಲ. ಅಷ್ಟೇ ಅಲ್ಲದೇ ಪ್ರತೀಕೂಲವೇ ಆಯಿತು.

**किं चाद्यसूत्र उपसंहारशब्दस्य मदुक्तं समाप्त्यर्थत्वं स्वरसम् । त्वदुक्तं सहकार्यंतरापेक्षार्थत्वं तु क्लिष्टम् ।**

ಮತ್ತು ಪ್ರಥಮಸೂತ್ರದಲ್ಲಿ ನಾವು ಹೇಳುವಂತೆ ಉಪಸಂಹಾರ ಶಬ್ದಕ್ಕೆ ಸಮಾಪ್ತಿ ಎಂಬರ್ಥವೇ ಸ್ವರಸವಾಗುತ್ತದೆ. ಮತ್ತೊಂದು ಸಹಕಾರಿಯ ಅಪೇಕ್ಷೆಯನ್ನು ಪಡುವುದು ಎಂಬರ್ಥವು ಸ್ವರಸವಲ್ಲ. ಕ್ಲಿಷ್ಟಕಲ್ಪನೆ ಆಗಿದೆ.

**द्वितीयेपि मम लौकिकपिशाचादिदृष्टान्तोक्तेर्लोकशब्दः स्वरसः । तव तु लोक्यतेऽनेनेति लोक इति भामत्युक्तरीत्या वेदपर इति न स्वरसः ।**

'ದೇವಾದಿವದಪಿ ಲೋಕೇ' ಎಂಬ ಸೂತ್ರದಲ್ಲಿ ಅದ್ವೈತಿಗಳಿಗೆ ಇನ್ನೂ ಕೆಲವು ದೋಷಗಳು ಬರುತ್ತವೆ. 'ಲೋಕೇ' ಎಂಬ ಪದಕ್ಕೆ ನಾವು ಹೀಗೆ ವ್ಯಾಖ್ಯಾನ ಮಾಡುತ್ತೇವೆ - ಪಿಶಾಚಾದಿಗಳಲ್ಲಿ ಅದೃಶ್ಯತ್ವಶಕ್ತಿಯಿರುವುದು ಲೋಕದಲ್ಲಿ ಕಂಡಿದೆ. ಆದ್ದರಿಂದ ಪರಮಾತ್ಮನಿಗೂ ಕೂಡ ಅದೃಶ್ಯತ್ವಶಕ್ತಿಯು ಇರುತ್ತದೆ ಎಂದು. ಆದ್ದರಿಂದ ನಮ್ಮ ಪ್ರಕಾರ ಲೋಕ ಶಬ್ದವು ಸ್ವರಸವಾದ ಅರ್ಥವುಳ್ಳದ್ದಾಗಿದೆ. ಆದರೆ ಅದ್ವೈತಿಗಳು 'ಲೋಕ್ಯತೇಽನೇನೇತಿ ಲೋಕಃ' ಎಂಬ ವ್ಯುತ್ಪತ್ತಿಯನ್ನು ಅಂಗೀಕಾರ ಮಾಡಿ, ವೇದ ಎಂಬರ್ಥವನ್ನು ಹೇಳುತ್ತಾರೆ. ಇದು ಸ್ವರಸವೇ ಆಗುವುದಿಲ್ಲ.

ಶ್ರುತೇಸ್ತುಶಬ್ದಮೂಲತ್ವಾಧಿಕರಣ (2-1-8)

**[1]एतेन असहायस्य हेतुत्वे लौकिकक्षीरदृष्टान्त उक्तः । द्वितीयेन तु वैदिकदेवादिदृष्टान्त इति केषाञ्चिन्मतमपास्तम् । सूत्रास्वारस्यस्य दृष्टान्तप्रातिकूल्यस्य चोक्तत्वात् ।**

ಹೀಗೆ ಹೇಳಿದ್ದರಿಂದ ರಾಮಾನುಜಮತವನ್ನು ನಿರಾಕರಣೆ ಮಾಡಿದಂತಾಯಿತು. ಯಾರ ಸಹಾಯವೂ ಇಲ್ಲದೇ ಬ್ರಹ್ಮನಿಂದ ಈ ಜಗತ್ತು ಸೃಷ್ಟವಾಗಿದೆ. ಹಾಲಿಗೆ ಹೆಪ್ಪು ಹಾಕುವುದು ಮೊಸರಾಗಲಿ ಎಂಬ ಉದ್ದೇಶದಿಂದಲ್ಲ. ರುಚಿಯು ಹೆಚ್ಚಾಗಲಿ ಎಂಬ ಅಭಿಪ್ರಾಯದಿಂದ ಹೀಗೆ ಲೌಕಿಕಕ್ಷೀರದೃಷ್ಟಾಂತವನ್ನು ನೀಡಿರುತ್ತಾರೆ. ಎರಡನೆಯ ಸೂತ್ರದಲ್ಲಿ ವೇದಸಿದ್ಧರಾದ ದೇವತೆಗಳು ತಮಗೆ ಅಪೇಕ್ಷಿತವಾದ ಪ್ರಾಸಾದಾದಿಗಳನ್ನು ಹೇಗೆ ಸೃಷ್ಟಿ ಮಾಡುತ್ತಾರೋ, ಅದರಂತೆ ಪರಮಾತ್ಮನೂ ಕೂಡ ಮತ್ತೊಂದರ ಸಹಾಯವಿಲ್ಲದೇ ತಮಗೆ ಇಚ್ಛಿಕವಾದ ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಎಂದು ಹೇಳುತ್ತಾರೆ. ಇವರ ಈ ವಾಕ್ಯವೂ ಕೂಡ ನಿರಾಕೃತವಾಯಿತು. ಏಕೆಂದರೆ ಸೂತ್ರಕ್ಕೆ ಸ್ವರಸವಾದ ಅರ್ಥವನ್ನು ಹೇಳಿದಂತೆ ಆಗಲಿಲ್ಲ. ಸೂಕ್ಷ್ಮಚಿದಚಿದ್ವಿಶಿಷ್ಟನಾದ ಬ್ರಹ್ಮನು, ಸ್ಥೂಲ ಚಿದಚಿದ್ವಿಶಿಷ್ಟವಾದ ಜಗತ್ತಾಗಿ ಪರಿಣಾಮವನ್ನು ಹೊಂದುತ್ತಾನೆ ಎಂಬುದು ರಾಮಾನುಜರ ಸಿದ್ಧಾಂತ. ಈ ಸಿದ್ಧಾಂತಕ್ಕೆ ಈ ಸೂತ್ರವು ಪೂರಕವೇ ಆಗುವುದಿಲ್ಲ. ಮತ್ತು ದೃಷ್ಟಾಂತವೂ ಕೂಡ ಅವರಿಗೆ ಅನುಕೂಲವಾಗದೇ ಪ್ರತಿಕೂಲವೇ ಆಗಿದೆ.

**किञ्च त्वपक्षे (पक्षद्वये)पि प्रकृतिकालकर्मादेः सहकारिणः सत्त्वात्तदनपेक्षत्वव्युत्पादनमनर्थकम् ।**

ಮತ್ತು ಅದ್ವೈತಿಗಳಾದ ನಿಮ್ಮ ಪಕ್ಷದಲ್ಲಿ ಪ್ರಕೃತಿ, ಕಾಲ, ಕರ್ಮ ಮೊದಲಾದ ಸಹಕಾರಿಗಳನ್ನು ಒಪ್ಪಿರುವುದರಿಂದ ಅದನ್ನು ಅಪೇಕ್ಷೆ ಪಡದೇ ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಎನ್ನುವುದು ತಪ್ಪಾಗುತ್ತದೆ.

**प्रकाशः –**

**तृतीयेति** ।। ''अश्मादिवच्च तदनुपपत्तिः'' इत्यत्र ''यथाच लोके पृथिवीत्वसामान्यान्वितानामप्यश्मनां केचिन्महार्हमणयो वज्रवैडूर्यादयः, अन्ये मध्यमवीर्यास्सूर्यकान्तादय एवमेकस्यापि ब्रह्मणो जीवप्राज्ञपृथक् त्वं कार्यवैचित्र्यं

(೧) ಮುದ್ರಿತಪುಸ್ತಕಗಳಲ್ಲಿ ಬ್ರಾಕೆಟ್ ಮಧ್ಯದಲ್ಲಿ ಈ ವಾಕ್ಯವನ್ನು ನೀಡಲಾಗಿದೆ. ಆದರೆ ಈ ವಾಕ್ಯವು ರಾಮಾನುಜರನ್ನು ಅಸಾಧಾರಣವಾಗಿ ಖಂಡನ ಮಾಡುತ್ತಿರುವುದರಿಂದ ಅತ್ಯಂತ ಸ್ವರಸವಾಗಿದೆ.

चोपपद्यत इत्यतः तदनुपपत्तिः परिकल्पितदोषानुपपत्तिः'' इति व्याख्यातम् । तद्दर्शयन्नेव पौनरुक्त्यं व्यनक्ति – त्वन्मत इति ।।

ಗ್ರಂಥದಲ್ಲಿ 'ತೃತೀಯಸೂತ್ರೇ' ಇತ್ಯಾದಿಯಾಗಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - 'ಅಶ್ಮಾದಿವಚ್ಚ ತದನುಪಪತ್ತಿಃ' ಎಂಬ ಸೂತ್ರದಲ್ಲಿ ಹೀಗೆ ವ್ಯಾಖ್ಯಾನವನ್ನು ಮಾಡಿದ್ದಾರೆ - 'ಯಥಾಚ ಲೋಕೇ ಪೃಥಿವೀತ್ವ ಸಾಮಾನ್ಯನ್ವಿತಾನಾಮಪ್ಯಶ್ಮನಾಂ ಕೇಚಿನ್ಮಹಾರ್ಹಮಣಯೋ ವಜ್ರವೈಡೂರ್ಯಾದಯೋಽನ್ಯೇ ಮಧ್ಯಮವೀರ್ಯಾಃ ಸೂರ್ಯಕಾಂತಾದಯ ಏವಮೇಕಸ್ಯಾಪಿ ಬ್ರಹ್ಮಣೋ ಜೀವಪ್ರಾಜ್ಞಪೃಥಕ್ತ್ವಂ ಕಾರ್ಯವೈಚಿತ್ರ್ಯಂ ಚೋಪಪದ್ಯತ ಇತ್ಯತಃ ತದನುಪಪತ್ತಿಃ ಪರಿಕಲಿತದೋಷಾನುಪಪತ್ತಿಃ' ಲೋಕದಲ್ಲಿ ಪೃಥಿವೀತತ್ವದಿಂದ ಕೂಡಿರುವ ಅನೇಕ ಬಗೆಯ ಕಲ್ಲುಗಳು ಒಂದೊಂದು ಅರ್ಹತೆಯನ್ನು ಪಡೆಯುತ್ತವೆ. ಉತ್ತಮ ಗುಣವುಳ್ಳ ಕಲ್ಲು ಮಣ್ಣುಗಳು ವಜ್ರ-ವೈಡೂರ್ಯ ಎಂದು ಕರೆಸಿಕೊಳ್ಳುತ್ತವೆ. ಸೂರ್ಯಕಾಂತಮಣಿ ಮಧ್ಯಮಯೋಗ್ಯತೆಯುಳ್ಳದ್ದಾಗಿದೆ. ಹೀಗೆ ಒಂದೇ ಕಲ್ಲು ಅನೇಕ ರೀತಿಯಲ್ಲಿ ಪರಿಣಾಮವನ್ನು ಹೊಂದುತ್ತದೆ. ಅದರಂತೆ ಒಬ್ಬನೇ ಬ್ರಹ್ಮನು ಈ ಜಗತ್ತಾಗಿ ಪರಿಣಾಮವನ್ನು ಹೊಂದಿದ್ದಾನೆ. ಇದರಲ್ಲಿ ಕೆಲವು ಪ್ರಾಜ್ಞರಾದ ಜೀವ ಎಂದು, ಇನ್ನು ಕೆಲವು ಜಡವಾದ ಕಲ್ಲು, ಮಣ್ಣು ಎಂದು ಕರೆಯಲಾಗುತ್ತದೆ. ಹೀಗೆ ಬ್ರಹ್ಮನ ಕಾರ್ಯವೈಚಿತ್ರ್ಯವು ಉಪಪನ್ನವಾಗುತ್ತದೆ. ಆದ್ದರಿಂದ ಒಬ್ಬನೇ ಬ್ರಹ್ಮನ ವಿಕಾರವಾದ ಪ್ರಪಂಚದಲ್ಲಿ ವೈಚಿತ್ರ್ಯವಿರಲು ಸಾಧ್ಯವಿಲ್ಲವೆಂಬ ದೋಷವು ಅನುಪಪನ್ನವಾಗಿದೆ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಇವರ ಈ ವಾದವನ್ನು ಸ್ಪಷ್ಟಪಡಿಸುತ್ತಾ, 'ಅಶ್ಮಾದಿವಚ್ಚ ತದನುಪಪತ್ತಿಃ' ಎಂಬ ಸೂತ್ರಕ್ಕೆ ಪುನರುಕ್ತಿಯನ್ನು 'ತ್ವನ್ಮತೇ' ಎಂಬ ವಾಕ್ಯದಿಂದ ಸಮರ್ಥಿಸಿದ್ದಾರೆ.

**प्रकाशः – यदुक्तमिति ।।** लोके कुलालादेर्मृद्दण्डचक्रसूत्रसलिलाद्यनेककारकोपसंहारेण घटादि-कार्यकरणदर्शनादद्वितीयं ब्रह्मासहायत्वान्नोपादानमिति चेत्क्षीरवद्धि, यथा क्षीरमन्य-दनपेक्ष्य दधिभावेन परिणमते, तथेह ब्रह्मापि स्वभावादेव भविष्यति । ''न तस्य कार्यं करणं च, नतत्समश्चाभ्यधिकश्च, परास्य शक्तिः'' इत्यादेः ।

'ಯದುಕ್ತಮ್' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ - ಲೋಕದಲ್ಲಿ ಕುಲಾಲಾದಿಗಳು ಮಣ್ಣು, ದಂಡ, ಚಕ್ರ, ಹಗ್ಗ, ನೀರು ಮೊದಲಾದ ಅನೇಕ ಸಲಕರಣೆಗಳನ್ನು ಸಂಪಾದನೆ ಮಾಡಿ, ಘಟಾದಿಕಾರ್ಯವನ್ನು ಮಾಡುವುದು ಕಂಡಿದೆ. ಅದರಂತೆ ಅದ್ವಿತೀಯನಾದ ಬ್ರಹ್ಮನಿಗೆ ಯಾವ ಸಹಾಯವೂ ಇಲ್ಲ. ಆದ್ದರಿಂದ ಅವನು ಜಗತ್ತಿಗೆ ಹೇಗೆ ಉಪಾದಾನಕಾರಣನಾಗುತ್ತಾನೆ ? ಎಂಬ ಆಕ್ಷೇಪಕ್ಕೆ 'ಕ್ಷೀರವದ್ಧಿ' ಎಂಬುದಾಗಿ ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಹೇಗೆ ಹಾಲು ಮತ್ತೊಂದರ ಅಪೇಕ್ಷೆ ಪಡದೇ ಮೊಸರಾಗಿ ಪರಿಣಾಮವನ್ನು ಹೊಂದುತ್ತದೋ, ಅದರಂತೆ ಬ್ರಹ್ಮನೂ ಕೂಡ ಜಗತ್ತಾಗಿ ಪರಿಣಾಮವನ್ನು ಹೊಂದಿದ್ದಾನೆ. ಈ ವಿಷಯದಲ್ಲಿ 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ', ಅವನಿಗೆ ಕಾರ್ಯಕಾರಣಗಳ ಅಪೇಕ್ಷೆಯೂ ಅನಾವಶ್ಯಕ. 'ನ ತತ್ ಸಮಶ್ಚಾಭ್ಯಧಿಕಶ್ಚ' ಅವನಿಗೆ ಸರಿಸಮಾನವಾದ ಅಥವಾ ಅಧಿಕವಾದ ಮತ್ತೊಂದು ವ್ಯಕ್ತಿ ಇರುವುದಿಲ್ಲ. 'ಪರಾಸ್ಯ ಶಕ್ತಿಃ' ಅವನ ಶಕ್ತಿಯು ಅಪಾರವಾಗಿದೆ ಇತ್ಯಾದಿ ಶ್ರುತಿ-ಸ್ಮೃತಿಗಳು ಆಧಾರವಾಗಿವೆ.

ಶ್ರುತೇಸ್ತುಶಬ್ದಮೂಲತ್ವಾಧಿಕರಣ (2-1-8)

**प्रकाशः –** नन्वचेतनस्य क्षीरादेः स्वतः परिणामेपि न चेतनस्य ब्रह्मण इत्यतो 'देवादिवदपि लोके' इत्युक्तम् । यथा देवपितृऋष्यादयोऽन्यत्साधनमनपेक्ष्यैश्वर्ययोगादेव प्रासादरथादीनि निर्मिमते । लोके 'लोक्यते' इति व्युत्पत्त्या मन्त्रार्थवादेतिहासादिशब्दे तथोपलम्भादेवं ब्रह्मापीत्युक्तमित्यर्थः ।

ಅಚೇತನವಾದ ಕ್ಷೀರಾದಿಗಳು ಸ್ವತಃ ಪರಿಣಾಮವನ್ನು ಹೊಂದಬಹುದು. ಆದರೆ ಚೇತನನಾದ ಬ್ರಹ್ಮನು ಸ್ವತಃ ಪರಿಣಾಮ ಹೊಂದಲಾರ? ಎಂಬ ಪ್ರಶ್ನೆಗೆ 'ದೇವಾದಿವದಪಿ ಲೋಕೇ' ಎಂಬ ಸೂತ್ರದಿಂದ ಉತ್ತರಿಸುತ್ತಿದ್ದಾರೆ. ಹೇಗೆ ದೇವತೆಗಳು, ಪಿತೃಗಳು, ಋಷಿಗಳು ಮತ್ತೊಂದು ಸಲಕರಣೆಯನ್ನು ಅಪೇಕ್ಷೆ ಪಡದೇ, ತಮ್ಮ ಐಶ್ವರ್ಯಶಕ್ತಿಯಿಂದಲೇ, ಪ್ರಾಸಾದ, ರಥ ಮೊದಲಾದ ಭೋಗವಸ್ತುಗಳನ್ನು ನಿರ್ಮಾಣ ಮಾಡುತ್ತಾರೋ, ಅದರಂತೆ ಬ್ರಹ್ಮನೂ ಕೂಡ ಈ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಈ ಸೂತ್ರದಲ್ಲಿರುವ 'ಲೋಕೇ' ಎಂಬುದಕ್ಕೆ 'ಲೋಕ್ಯತ ಇತಿ ಲೋಕಃ' ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿ ವ್ಯಾಖ್ಯಾನ ಮಾಡಬೇಕು. ಆಗ ಶ್ರುತಿ, ಅರ್ಥವಾದ, ಇತಿಹಾಸ ಮೊದಲಾದವುಗಳಲ್ಲಿ ಹಾಗೇ ಕಂಡಿದೆ ಆದ್ದರಿಂದ ಬ್ರಹ್ಮನು ಪರಿಣಾಮಕಾರಣನಾಗಿದ್ದಾನೆ ಎಂಬರ್ಥವು ಲಭಿಸುತ್ತದೆ. ಹೀಗೆ ಅದ್ವೈತಿಗಳು ವ್ಯಾಖ್ಯಾನ ಮಾಡಿದ್ದಾರೆ.

**प्रकाशः –** कल्पतरूक्तं विवेकमाह – **तत्राद्येनेति ।। सापेक्षत्वादिति ।।** नन्वेतदेवाशङ्क्योक्तं परभाष्ये ''आतञ्चनाद्यनपेक्षणेन किञ्चित्परिणमत एव । आतञ्चनादिकं तु समग्रपरिणाम एवोपयुज्यते'' इति । अत आह – **पय इति ।।** त्वयापि तथाभाषणादिति भावः ।

ಕಲ್ಪತರುವಿನಲ್ಲಿ ಹೇಳಿದ್ದನ್ನು 'ತತ್ರಾದ್ಯೇನ' ಎಂಬುದಾಗಿ ಉಲ್ಲೇಖಿಸಿದ್ದಾರೆ. ಸಾಪೇಕ್ಷತ್ವಾತ್' ಎಂಬಲ್ಲಿ ಇದನ್ನು ವಿವಕ್ಷಿಸಬೇಕು. ಅದ್ವೈತಿಗಳು ಈ ಆಕ್ಷೇಪವನ್ನು ಮಾಡಿಕೊಂಡು 'ಆತಂಚನಾದ್ಯನಪೇಕ್ಷಣೇನ ಕಿಂಚಿತ್‌ಪರಿಣಮತ ಏವ । ಆತಂಚನಾದಿಕಂ ತು ಸಮಗ್ರ ಪರಿಣಾಮ ಏವೋಪಯುಜ್ಯತೇ' ಹೆಪ್ಪು ಮೊದಲಾದವುಗಳು ಮೊಸರಾಗಲು ಕಾರಣವಲ್ಲ. ಹೆಪ್ಪು ಹಾಕುವುದರಿಂದ ಸಮಗ್ರವಾಗಿ ಪರಿಣಾಮವನ್ನು ಹೊಂದುತ್ತವೆ. ರುಚಿ ಮೊದಲಾದವುಗಳು ಹೆಚ್ಚಾಗುತ್ತವೆ ಎಂದಷ್ಟೇ ಅಭಿಪ್ರಾಯ. ಹೀಗೆ ಸ್ಪಷ್ಟಪಡಿಸಿದ್ದಾರೆ. ಈ ಪ್ರಶ್ನೆಗೆ 'ಪಯಃ' ಎಂಬುದರಿಂದ ಉತ್ತರಿಸಿದ್ದಾರೆ. 'ಪಯೋಂಬುವತ್' ಎಂಬ ಸೂತ್ರದಲ್ಲಿ ಸ್ವತಃ ನೀನೇ ಹಾಲು ಮೊಸರಾಗಲು ಬ್ರಹ್ಮನು ಕಾರಣನಾಗಿದ್ದಾನೆಂದು ಒಪ್ಪಿರುವಿ ಎಂದಭಿಪ್ರಾಯ.

**प्रकाशः –** ननु ''देवादावपि ब्रह्माधिष्ठिताऽविद्येव देवादिचेतनाधिष्ठितं शरीरमेव प्रासादादिरूपेण परिणमते'' इति भाषितमित्यतो दुर्भाषणं तदित्याह – **नहीति ।।** अज्ञातायाः अज्ञानसहितायाः । चिन्ताफलं च नेत्याह – **किञ्च त्वत्पक्ष इति ।।**

ದೇವತೆಗಳೂ ಕೂಡ ಬ್ರಹ್ಮಾದ್ಯಿಷ್ಠಿತವಾದ ಅವಿದ್ಯೆಯಂತೆ ದೇವತೆಗಳೆಂಬ ಚೇತನದಲ್ಲಿ ಅಧಿಷ್ಠಿತವಾದ ಶರೀರವನ್ನೇ ಪ್ರಾಸಾದಾದಿರೂಪದಿಂದ ಪರಿಣಾಮವನ್ನು ಮಾಡುತ್ತಾರೆ ಎಂದು ಅದ್ವೈತಿಗಳು ವ್ಯಾಖ್ಯಾನ

ಮಾಡುತ್ತಾರೆ. ಇದು ಅವರ ದುರ್ಭಾಷಣ ಹೊರತು ಸದ್ಭಾಷಣ ವಲ್ಲ. ಈ ವಿಷಯವನ್ನು 'ನಹಿ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡಿದ್ದಾರೆ. 'ಅಜ್ಞಾತಾಯಾಃ' ಎಂಬ ಪದಕ್ಕೆ ಅಜ್ಞಾನಸಹಿತವಾದ ಎಂದರ್ಥ. ಚಿಂತೆಯ ಪ್ರಯೋಜನವೂ ಕೂಡ ಅದ್ವೈತ ಸಿದ್ಧಾಂತದಲ್ಲಿ ಇಲ್ಲವೆಂದು 'ಕಿಂಚ ತ್ವತ್ಪಕ್ಷೇ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡಿದ್ದಾರೆ.

**प्रकाशः –**

**त्रिभिरिति** ।। ''एकदेशेन परिणामावस्थानयोः श्रवणात् । न चोक्तदोषः । शब्दैकगम्यत्वात् । शब्दैकगम्यस्य च यथाशब्दमङ्गीकार्यत्वात् ।

ಬ್ರಹ್ಮನು ಏಕದೇಶದಿಂದ ಪರಿಣಾಮವನ್ನು ಹೊಂದುವುದಾದರೆ ನಿರಯವತ್ವಶ್ರುತಿಯ ವಿರೋಧವು ಬರುತ್ತದೆ. ಸಮಗ್ರವಾಗಿ ಪರಿಣಾಮವನ್ನು ಹೊಂದುವುದಾದರೆ ಬ್ರಹ್ಮನೇ ಇಲ್ಲದಂಥ ಪರಿಸ್ಥಿತಿ ಬರುತ್ತದೆ ಎಂದು ತರ್ಕ ಮಾಡಿದ್ದು ತಪ್ಪು. ಏಕೆಂದರೆ ಬ್ರಹ್ಮನು ಶಬ್ದೈಕಗಮ್ಯನಾಗಿದ್ದಾನೆ. ಶಬ್ದೈಕಗಮ್ಯನಲ್ಲಿ ಶ್ರುತಿಯು ಹೇಳಿದಂತೆ ಒಪ್ಪಬೇಕು. ಆದ್ದರಿಂದ ಬ್ರಹ್ಮನು ಏಕದೇಶದಿಂದ ಪರಿಣಾಮವನ್ನು ಹೊಂದಿ ಮತ್ತೊಂದು ಏಕದೇಶದಿಂದ ಹಾಗೆಯೇ ಇರುತ್ತಾನೆಂದು ನಾವು ಒಪ್ಪುತ್ತೇವೆ.

अचिन्त्याः खलु ये भावा न तांस्तर्केण योजयेत् ।
प्रकृतिभ्यः परं यच्च तदचिन्त्यस्य लक्षणम् ।।

इति वचनादित्याद्येनोक्त्वा ''किं चात्मनि स्वप्नदृशि स्वरूपानुपमर्देनैवानेकाकारा रथादिसृष्टिः अथ रथान् रथयोगानित्यादौ श्रुतौ पठ्यत इति नात्र विवदितव्यम्'' इति द्वितीयेनोक्त्वा ''स्वपक्षेऽभिहितो दोषः परस्यापि समः । तेनापि निरवयवं शब्दादिहीनं प्रधानमतादृशकार्यकारणं स्वीकृतम्'' इति तृतीयार्थमुक्त्वा सिद्धान्तितमित्यर्थः ।

ಅಚಿಂತ್ಯಾ ಖಲು ಯೇ ಭಾವಾ ನ ತಾಂಸ್ತರ್ಕೇಣ ಯೋಜಯೇತ್ ।
ಪ್ರಕೃತಿಭ್ಯಃ ಪರಂ ಯಚ್ಚ ತದಚಿಂತ್ಯಸ್ಯ ಲಕ್ಷಣಮ್ ॥

ಯಾವ ಭಾವಪದಾರ್ಥಗಳು ತರ್ಕದಿಂದ ಯೋಜನೆ ಮಾಡಲು ಸಾಧ್ಯವಿಲ್ಲವೋ, ಲೋಕದಲ್ಲಿ ಕಾಣುವ ನಿಯಮವನ್ನು ಮೀರಿದೆಯೋ, ಅದೇ 'ಅಚಿಂತ್ಯ' ಎಂದು ಕರೆಸಿಕೊಳ್ಳುತ್ತದೆ. ಬ್ರಹ್ಮನು ಅಚಿಂತ್ಯನಾದ್ದರಿಂದ ಅವನಲ್ಲಿ ತರ್ಕವನ್ನು ಮಾಡಬಾರದು. ಈ ಮಾತಿನ ಅಭಿಪ್ರಾಯದಂತೆ ಬ್ರಹ್ಮನು ಪರಿಣಾಮಕಾರಣನಾಗಲಾರ ಎಂದು ಹೇಳಬಾರದೆಂದು ಸಿದ್ಧವಾಗುತ್ತದೆ.

ಮತ್ತು ಸ್ವಪ್ನದ್ರಷ್ಟ್ರವಾದ ಆತ್ಮನ ಸ್ವರೂಪವು ಉಪಮರ್ದ ಆಗದೇ ಇದ್ದರೂ ಕೂಡ ರಥ ಮೊದಲಾದ ಅನೇಕಾಕಾರದಲ್ಲಿ ಸ್ಪಷ್ಟನಾಗುವುದು ಕಂಡಿದೆ. 'ಅಥ ರಥಾನ್ ರಥಯೋಗಾನ್' ಎಂಬ ಶ್ರುತಿಯು ಇದನ್ನೇ

**प्रकाशः –** नन्वचेतनस्य क्षीरादेः स्वतः परिणामेपि न चेतनस्य ब्रह्मण इत्यतो 'देवादिवदपि लोके' इत्युक्तम् । यथा देवपितृऋष्यादयोऽन्यत्साधनमनपेक्ष्यैश्वर्ययोगादेव प्रासादरथादीनि निर्मिमते । लोके 'लोक्यते' इति व्युत्पत्त्या मन्त्रार्थवादेतिहासादिशब्दे तथोपलम्भादेवं ब्रह्मापीत्युक्तमित्यर्थः ।

ಅಚೇತನವಾದ ಕ್ಷೀರಾದಿಗಳು ಸ್ವತಃ ಪರಿಣಾಮವನ್ನು ಹೊಂದಬಹುದು. ಆದರೆ ಚೇತನನಾದ ಬ್ರಹ್ಮನು ಸ್ವತಃ ಪರಿಣಾಮ ಹೊಂದಲಾರ? ಎಂಬ ಪ್ರಶ್ನೆಗೆ 'ದೇವಾದಿವದಪಿ ಲೋಕೇ' ಎಂಬ ಸೂತ್ರದಿಂದ ಉತ್ತರಿಸುತ್ತಿದ್ದಾರೆ. ಹೇಗೆ ದೇವತೆಗಳು, ಪಿತೃಗಳು, ಋಷಿಗಳು ಮತ್ತೊಂದು ಸಲಕರಣೆಯನ್ನು ಅಪೇಕ್ಷೆ ಪಡದೇ, ತಮ್ಮ ಐಶ್ವರ್ಯಶಕ್ತಿಯಿಂದಲೇ, ಪ್ರಾಸಾದ, ರಥ ಮೊದಲಾದ ಭೋಗವಸ್ತುಗಳನ್ನು ನಿರ್ಮಾಣ ಮಾಡುತ್ತಾರೋ, ಅದರಂತೆ ಬ್ರಹ್ಮನೂ ಕೂಡ ಈ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಈ ಸೂತ್ರದಲ್ಲಿರುವ 'ಲೋಕೇ' ಎಂಬುದಕ್ಕೆ 'ಲೋಕ್ಯತ ಇತಿ ಲೋಕಃ' ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿ ವ್ಯಾಖ್ಯಾನ ಮಾಡಬೇಕು. ಆಗ ಶ್ರುತಿ, ಅರ್ಥವಾದ, ಇತಿಹಾಸ ಮೊದಲಾದವುಗಳಲ್ಲಿ ಹಾಗೇ ಕಂಡಿದೆ ಆದ್ದರಿಂದ ಬ್ರಹ್ಮನು ಪರಿಣಾಮಕಾರಣನಾಗಿದ್ದಾನೆ ಎಂಬರ್ಥವು ಲಭಿಸುತ್ತದೆ. ಹೀಗೆ ಅದ್ವೈತಿಗಳು ವ್ಯಾಖ್ಯಾನ ಮಾಡಿದ್ದಾರೆ.

**प्रकाशः –** कल्पतरूक्तं विवेकमाह – **तत्राद्येनेति ।। सापेक्षत्वादिति ।।** नन्वेतदेवाशङ्क्योक्तं परभाष्ये ''आतञ्चनाद्यनपेक्षणेन किञ्चित्परिणमत एव । आतञ्चनादिकं तु समग्रपरिणाम एवोपयुज्यते'' इति । अत आह – **पय इति ।।** त्वयापि तथाभाषणादिति भावः ।

ಕಲ್ಪತರುವಿನಲ್ಲಿ ಹೇಳಿದ್ದನ್ನು 'ತತ್ರಾದ್ಯೇನ' ಎಂಬುದಾಗಿ ಉಲ್ಲೇಖಿಸಿದ್ದಾರೆ. ಸಾಪೇಕ್ಷತ್ವಾತ್' ಎಂಬಲ್ಲಿ ಇದನ್ನು ವಿವಕ್ಷಿಸಬೇಕು. ಅದ್ವೈತಿಗಳು ಈ ಆಕ್ಷೇಪವನ್ನು ಮಾಡಿಕೊಂಡು 'ಆತಂಚನಾದ್ಯನಪೇಕ್ಷಣೇನ ಕಿಂಚಿತ್‌ಪರಿಣಮತ ಏವ । ಆತಂಚನಾದಿಕಂ ತು ಸಮಗ್ರ ಪರಿಣಾಮ ಏವೋಪಯುಜ್ಯತೇ' ಹೆಪ್ಪು ಮೊದಲಾದವುಗಳು ಮೊಸರಾಗಲು ಕಾರಣವಲ್ಲ. ಹೆಪ್ಪು ಹಾಕುವುದರಿಂದ ಸಮಗ್ರವಾಗಿ ಪರಿಣಾಮವನ್ನು ಹೊಂದುತ್ತವೆ. ರುಚಿ ಮೊದಲಾದವುಗಳು ಹೆಚ್ಚಾಗುತ್ತವೆ ಎಂದಷ್ಟೇ ಅಭಿಪ್ರಾಯ. ಹೀಗೆ ಸ್ಪಷ್ಟಪಡಿಸಿದ್ದಾರೆ. ಈ ಪ್ರಶ್ನೆಗೆ 'ಪಯಃ' ಎಂಬುದರಿಂದ ಉತ್ತರಿಸಿದ್ದಾರೆ. 'ಪಯೋಂಬುವತ್' ಎಂಬ ಸೂತ್ರದಲ್ಲಿ ಸ್ವತಃ ನೀನೇ ಹಾಲು ಮೊಸರಾಗಲು ಬ್ರಹ್ಮನು ಕಾರಣನಾಗಿದ್ದಾನೆಂದು ಒಪ್ಪಿರುವಿ ಎಂದಭಿಪ್ರಾಯ.

**प्रकाशः –** ननु ''देवादावपि ब्रह्माधिष्ठिताऽविद्येव देवादिचेतनाधिष्ठितं शरीरमेव प्रासादादिरूपेण परिणमते'' इति भाषितमित्यतो दुर्भाषणं तदित्याह – **नहीति ।।** अज्ञातायाः अज्ञानसहितायाः । चिन्ताफलं च नेत्याह – **किञ्च त्वत्पक्ष इति ।।**

ದೇವತೆಗಳೂ ಕೂಡ ಬ್ರಹ್ಮಾದಿಷ್ಠಿತವಾದ ಅವಿದ್ಯೆಯಂತೆ ದೇವತೆಗಳೆಂಬ ಚೇತನದಲ್ಲಿ ಅಧಿಷ್ಠಿತವಾದ ಶರೀರವನ್ನೇ ಪ್ರಾಸಾದಾದಿರೂಪದಿಂದ ಪರಿಣಾಮವನ್ನು ಮಾಡುತ್ತಾರೆ ಎಂದು ಅದ್ವೈತಿಗಳು ವ್ಯಾಖ್ಯಾನ

ಮಾಡುತ್ತಾರೆ. ಇದು ಅವರ ದುರ್ಭಾಷಣ ಹೊರತು ಸದ್ಭಾಷಣ ವಲ್ಲ. ಈ ವಿಷಯವನ್ನು 'ನಹಿ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡಿದ್ದಾರೆ. 'ಅಜ್ಞಾತಾಯಾಃ' ಎಂಬ ಪದಕ್ಕೆ ಅಜ್ಞಾನಸಹಿತವಾದ ಎಂದರ್ಥ. ಚಿಂತೆಯ ಪ್ರಯೋಜನವೂ ಕೂಡ ಅದ್ವೈತ ಸಿದ್ಧಾಂತದಲ್ಲಿ ಇಲ್ಲವೆಂದು 'ಕಿಂಚ ತ್ವತ್ಪಕ್ಷೇ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡಿದ್ದಾರೆ.

**प्रकाशः —**

**त्रिभिरिति ।।** ''एकदेशेन परिणामावस्थानयोः श्रवणात् । न चोक्तदोषः । शब्दैकगम्यत्वात् । शब्दैकगम्यस्य च यथाशब्दमङ्गीकार्यत्वात् ।

ಬ್ರಹ್ಮನು ಏಕದೇಶದಿಂದ ಪರಿಣಾಮವನ್ನು ಹೊಂದುವುದಾದರೆ ನಿರಯವತ್ವಶ್ರುತಿಯ ವಿರೋಧವು ಬರುತ್ತದೆ. ಸಮಗ್ರವಾಗಿ ಪರಿಣಾಮವನ್ನು ಹೊಂದುವುದಾದರೆ ಬ್ರಹ್ಮನೇ ಇಲ್ಲದಂಥ ಪರಿಸ್ಥಿತಿ ಬರುತ್ತದೆ ಎಂದು ತರ್ಕ ಮಾಡಿದ್ದು ತಪ್ಪು. ಏಕೆಂದರೆ ಬ್ರಹ್ಮನು ಶಬ್ದೈಕಗಮ್ಯನಾಗಿದ್ದಾನೆ. ಶಬ್ದೈಕಗಮ್ಯನಲ್ಲಿ ಶ್ರುತಿಯು ಹೇಳಿದಂತೆ ಒಪ್ಪಬೇಕು. ಆದ್ದರಿಂದ ಬ್ರಹ್ಮನು ಏಕದೇಶದಿಂದ ಪರಿಣಾಮವನ್ನು ಹೊಂದಿ ಮತ್ತೊಂದು ಏಕದೇಶದಿಂದ ಹಾಗೆಯೇ ಇರುತ್ತಾನೆಂದು ನಾವು ಒಪ್ಪುತ್ತೇವೆ.

अचिन्त्याः खलु ये भावा न तांस्तर्केण योजयेत् ।
प्रकृतिभ्यः परं यच्च तदचिन्त्यस्य लक्षणम् ।।

इति वचनादित्याद्येनोक्त्वा ''किं चात्मनि स्वप्नदृशि स्वरूपानुपमर्देनैवानेकाकारा रथादिसृष्टिः अथ रथान् रथयोगानित्यादौ श्रुतौ पठ्यत इति नात्र विवदितव्यम्'' इति द्वितीयेनोक्त्वा ''स्वपक्षेऽभिहितो दोषः परस्यापि समः । तेनापि निरवयवं शब्दादिहीनं प्रधानमतादृशकार्यकारणं स्वीकृतम्'' इति तृतीयार्थमुक्त्वा सिद्धान्तितमित्यर्थः ।

ಅಚಿಂತ್ಯಾ ಖಲು ಯೇ ಭಾವಾ ನ ತಾಂಸ್ತರ್ಕೇಣ ಯೋಜಯೇತ್ ।
ಪ್ರಕೃತಿಭ್ಯಃ ಪರಂ ಯಚ್ಚ ತದಚಿಂತ್ಯಸ್ಯ ಲಕ್ಷಣಮ್ ॥

ಯಾವ ಭಾವಪದಾರ್ಥಗಳು ತರ್ಕದಿಂದ ಯೋಜನೆ ಮಾಡಲು ಸಾಧ್ಯವಿಲ್ಲವೋ, ಲೋಕದಲ್ಲಿ ಕಾಣುವ ನಿಯಮವನ್ನು ಮೀರಿದೆಯೋ, ಅದೇ 'ಅಚಿಂತ್ಯ' ಎಂದು ಕರೆಸಿಕೊಳ್ಳುತ್ತದೆ. ಬ್ರಹ್ಮನು ಅಚಿಂತ್ಯನಾದ್ದರಿಂದ ಅವನಲ್ಲಿ ತರ್ಕವನ್ನು ಮಾಡಬಾರದು. ಈ ಮಾತಿನ ಅಭಿಪ್ರಾಯದಂತೆ ಬ್ರಹ್ಮನು ಪರಿಣಾಮಕಾರಣನಾಗಲಾರ ಎಂದು ಹೇಳಬಾರದೆಂದು ಸಿದ್ಧವಾಗುತ್ತದೆ.

ಮತ್ತು ಸ್ವಪ್ನದ್ರಷ್ಟ್ರುವಾದ ಆತ್ಮನ ಸ್ವರೂಪವು ಉಪಮರ್ದ ಆಗದೇ ಇದ್ದರೂ ಕೂಡ ರಥ ಮೊದಲಾದ ಅನೇಕಾಕಾರದಲ್ಲಿ ಸೃಷ್ಟನಾಗುವುದು ಕಂಡಿದೆ. 'ಅಥ ರಥಾನ್ ರಥಯೋಗಾನ್' ಎಂಬ ಶ್ರುತಿಯು ಇದನ್ನೇ

ಹೇಳುತ್ತಿದೆ. ಆದ್ದರಿಂದ ಈ ವಿಷಯದಲ್ಲಿ ವಿವಾದ ಮಾಡಬಾರದು ಎಂಬುದಾಗಿ 'ಶ್ರುತೇಶ್ಚ ಶಬ್ದಮೂಲತ್ವಾತ್' ಎಂಬ ಎರಡನೆಯ ಸೂತ್ರದಿಂದ ಸಮರ್ಥನೆ ಮಾಡಿದ್ದಾರೆ.

ಸ್ವಪಕ್ಷದಲ್ಲಿ ಹೇಳಲ್ಪಟ್ಟ ದೋಷಗಳೆಲ್ಲವೂ ಪರಪಕ್ಷದಲ್ಲೂ ಕೂಡ ಸಮಾನವಾಗಿದೆ. ಅವರೂ ಕೂಡ ನಿರವಯವಾದ ಶಬ್ದಪ್ರತಿಪಾದ್ಯವಲ್ಲದ ಪ್ರಕೃತಿಯನ್ನು ಕಾರಣವೆಂದು ಒಪ್ಪಿದ್ದಾರೆ. ಹೀಗೆ ಮೂರನೆಯ ಸೂತ್ರದ ಅರ್ಥವನ್ನು ಹೇಳಿ, ಸಿದ್ಧಾಂತ ಮಾಡಿದ್ದಾರೆ. ಮೂರನೆಯ ಸೂತ್ರದ ಅಭಿಪ್ರಾಯ ಹೀಗಿದೆ - ಜಡಪದಾರ್ಥಗಳಲ್ಲೇ ಅನೇಕ ವಿಚಿತ್ರಶಕ್ತಿಯಿರುವುದು ಕಂಡಿದೆ. ಬ್ರಹ್ಮನು ಈ ಜಡಚೇತನಗಳಿಗಿಂತ ವಿಲಕ್ಷಣನಾಗಿದ್ದಾನೆ. ಜಗತ್ತಿನಲ್ಲಿ ಕಾಣದ ಅನೇಕ ವಿಚಿತ್ರಶಕ್ತಿಗಳು ಅವನಿಗಿವೆ. ಆದ್ದರಿಂದ ಜಗತ್ತಿನ ಆಧಾರದಿಂದ ಬ್ರಹ್ಮನ ವ್ಯಕ್ತಿತ್ವವನ್ನು ಆಕ್ಷೇಪ ಮಾಡುವುದು ಸರಿಯಲ್ಲ ಎಂದು.

'ಕೃತ್ಸ್ನಪ್ರಸಕ್ತಿಃ' ಇತ್ಯಾದಿ ನಾಕುಸೂತ್ರಗಳನ್ನು ಒಂದು ಅಧಿಕರಣದಲ್ಲಿ ಸೇರಿಸಬಾರದು

## तात्पर्यचन्द्रिका

**यच्चोक्तं परैः कृत्स्नेत्यादिसूत्रचतुष्टयमेकमधिकरणम् । तत्र ब्रह्मण; कार्त्स्न्येन परिणामे मूलोच्छेदः स्यात् । एकदेशेन परिणामे निरवयवत्वशब्दव्याकोप इत्याद्येन पूर्वपक्षयित्वा शब्दमूलत्वेन ब्रह्मणो न तर्केणापह्नव इत्याद्यभिप्रायेण त्रिभिःसिद्धान्तितम् ।**

ಅದ್ವೈತಿಗಳು ಹೀಗೆ ಹೇಳುತ್ತಾರೆ - 'ಕೃತ್ಸ್ನಪ್ರಸಕ್ತಿಃ' ಇತ್ಯಾದಿ ಸೂತ್ರದಿಂದ ಪ್ರಾರಂಭಮಾಡಿ, ನಾಕು ಸೂತ್ರಗಳು ಒಂದೇ ಅಧಿಕರಣ ಎಂದು. ಇದರಲ್ಲಿ ಮೊದಲನೆಯ ಸೂತ್ರವು ಪೂರ್ವಪಕ್ಷ-ಪರವಾಗಿದೆ. ಬ್ರಹ್ಮನು ಸಮಗ್ರವಾಗಿ ಜಗತ್ತಿನ ರೂಪದಲ್ಲಿ ಪರಿಣಾಮವನ್ನು ಹೊಂದುವುದಾದರೆ, ಬ್ರಹ್ಮನೇ ಇಲ್ಲದಂತಹ ಪರಿಸ್ಥಿತಿ ಬರುತ್ತದೆ. ಏಕದೇಶದಿಂದ ಪರಿಣಾಮವನ್ನು ಹೊಂದುತ್ತಾನೆ ಎಂದು ಹೇಳಿದರೆ ನಿರಯವತ್ವಶ್ರುತಿಯ ವಿರೋಧ ಬರುತ್ತದೆ. ಹೀಗೆ ಪೂರ್ವಪಕ್ಷವು ಬಂದರೆ 'ಶ್ರುತೇಸ್ತು ಶಬ್ದಮೂಲತ್ವಾತ್' ಎಂಬ ಮುಂದಿನ ಸೂತ್ರದಲ್ಲಿ ಉತ್ತರಿಸಲಾಗಿದೆ. ಬ್ರಹ್ಮನು ಶ್ರುತಿಮಾತ್ರ ಪ್ರತಿಪಾದ್ಯನಾದ್ದರಿಂದ ತರ್ಕಕ್ಕೆ ಅವನಲ್ಲಿ ಅವಕಾಶವಿಲ್ಲ ಇತ್ಯಾದಿಯಾಗಿ ಮುಂದಿನ ಮೂರು ಸೂತ್ರಗಳಲ್ಲಿ ಸಿದ್ಧಾಂತವನ್ನು ಸ್ಥಾಪನೆ ಮಾಡಲಾಗುತ್ತದೆ ಎಂದು.

**प्रकाशः —**

भामत्युक्तचोद्यपरिहारावाह – यद्यपीति ।। स्वप्नदृष्टान्त एवेति ।। विपरीत-भ्रान्तिजनकानभिप्रेतजीवदृष्टान्तोक्तौ फलाभावादिति भावः ।

ಭಾಮತಿಯಲ್ಲಿ ಮಾಡಲ್ಪಟ್ಟ ಆಕ್ಷೇಪ ಹಾಗೂ ಪರಿಹಾರಗಳನ್ನು 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. 'ಸ್ವಪ್ನದೃಷ್ಟಾಂತ ಏವ' ಎಂಬುದರ ಅಭಿಪ್ರಾಯ ಹೀಗಿದೆ - ವಿಪರೀತಭ್ರಾಂತಿಜನಕವಾದ ಅನಭಿಪ್ರೇತವಾದ ಜೀವದೃಷ್ಟಾಂತವನ್ನು ಹೇಳಲು ಯಾವುದೇ ಫಲವು ಇರುವುದಿಲ್ಲ ಎಂದು. (ಸೂತ್ರಕಾರರಿಗೆ ವಿವರ್ತಕಾರಣವೇ ವಿವಕ್ಷಿತವಾಗಿದ್ದಲ್ಲಿ ಸ್ವಪ್ನದೃಷ್ಟಾಂತವನ್ನೇ ಹೇಳುತ್ತಿದ್ದರು. ಇದನ್ನು ಹೊರತಾಗಿ ವಿಪರೀತಭ್ರಾಂತಿಜನಕವಾದ ಪರಿಣಾಮಕಾರಣ ಸಮರ್ಥಕವಾದ ವಿಷಯವನ್ನು ಹೇಳುತ್ತಿರಲಿಲ್ಲ ಎಂದು ಅಭಿಪ್ರಾಯ.)

**प्रकाशः – स्वप्नदृगात्माहीति** भामतीवाक्यत्वाद्विकल्प्य प्रत्याचष्टे – **तृतीयेऽपीति** ।। ''संज्ञापूर्वको विधिरनित्यः'' इति ''मितां ह्रस्वः'' इत्येतदनाश्रित्य भ्रामयितृत्व इत्युक्तम् ।।

'ಸ್ವಪ್ನದೃಗಾತ್ಮಾಹಿ' ಎಂಬುದು ಭಾಮತಿವಾಕ್ಯವಾಗಿದೆ. ಆದ್ದರಿಂದ ಅದನ್ನು ವಿಕಲ್ಪ ಮಾಡಿ 'ತೃತೀಯೇऽಪಿ' ಇತ್ಯಾದಿಯಾಗಿ ನಿರಾಕರಣೆ ಮಾಡುತ್ತಿದ್ದಾರೆ.

'ಸಂಜ್ಞಾಪೂರ್ವಕೋ ವಿಧಿರನಿತ್ಯಃ' ಎಂಬ ಸೂತ್ರವಿರುವುದರಿಂದ 'ಮಿತಾಂ ಹ್ರಸ್ವಃ' ಎಂಬುದನ್ನು ಆಶ್ರಯಿಸಿರುವುದಿಲ್ಲ. ಆದ್ದರಿಂದ 'ಭ್ರಾಮಯಿತೃತ್ವೇ' ಎಂಬ ಪ್ರಯೋಗವು ಸಾಧುವಾಗಿದೆ.

ವಿವರಣೆ - ಪ್ರಶ್ನೆ - ಗ್ರಂಥದಲ್ಲಿ 'ಭ್ರಾಮಯಿತೃತ್ವೇ' ಎಂದು ಹೇಳಿದ್ದಾರೆ. ವಾಸ್ತವಿಕವಾಗಿ 'ಭ್ರಮಯಿತೃತ್ವೇ' ಎಂದು ಆಗಬೇಕಿತ್ತು ? ಏಕೆಂದರೆ 'ಭ್ರಮ ಸಂಚಲನೇ' ಎಂಬುದು ಧಾತು. ಮಕಾರ ಇತ್ತಾದ ಧಾತುಗಳಿಗೆ ಹ್ರಸ್ವವೇ ಬರುತ್ತದೆ. ಆದ್ದರಿಂದ ಇಲ್ಲಿ 'ಭ್ರಮಯಿತೃತ್ವೇ' ಎಂದೇ ಆಗಬೇಕಾಗಿತ್ತು. ಗ್ರಂಥಕಾರರು 'ಭ್ರಾಮಯಿತೃತ್ವೇ' ಎಂದು ಹೇಗೆ ಪ್ರಯೋಗಿಸಿದರು ?

ಉತ್ತರ - 'ಸಂಜ್ಞಾಪೂರ್ವಕೋ ವಿಧಿರನಿತ್ಯಃ' ಎಂಬ ಸೂತ್ರವು ಯಾವುದು ಸಂಜ್ಞಾಪೂರ್ವಕವಾದ ವಿಧಿಯಾಗಿದೆಯೋ, ಅದು ಅನಿತ್ಯವಾಗಿದೆಯೆಂದು ಹೇಳುತ್ತಿದೆ. ಪ್ರಕೃತ 'ಮಿತಾಂ ಹ್ರಸ್ವಃ' ಎಂಬ ಸೂತ್ರದಲ್ಲಿ 'ಧಾತವಃ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆಗ 'ಧಾತವಃ' ಎಂಬುದು ಸಂಜ್ಞಾಪೂರ್ವಕ ವಿಧಿಯಾಗುತ್ತದೆ. ತನ್ಮೂಲಕವಾಗಿ ವಿಧಾನವನ್ನು ಮಾಡಿರುವುದರಿಂದ ಹ್ರಸ್ವದ ವಿಧಿಯು ಅನಿತ್ಯವೆಂದು ಹೇಳಿದಂತಾಯಿತು. ಆದ್ದರಿಂದ 'ಭ್ರಮಯಿತೃತ್ವೇ' ಎಂದು ಪ್ರಯೋಗಿಸಬಹುದು. 'ಭ್ರಾಮಯಿತೃತ್ವೇ' ಎಂದೂ ಕೂಡ ಪ್ರಯೋಗಿಸಬಹುದು. ಗ್ರಂಥಕಾರರು 'ಭ್ರಾಮಯಿತೃತ್ವೇ' ಎಂದು ಪ್ರಯೋಗಿಸಿದ್ದು ತಪ್ಪಾಗುವುದಿಲ್ಲ.

**प्रकाशः – उक्तं हीति** ।। ''न प्रयोजनवत्त्वात्'' इत्युत्तरनये ''न तावदुन्मत्तवदस्य मतिविभ्रमाज्जगत्प्रक्रिया । भ्रान्तस्य सर्वज्ञत्वानुपपत्तेः'' इत्युक्तम्।

'ಉಕ್ತಂ ಹಿ' ಎಂದರೆ 'ನ ಪ್ರಯೋಜನವತ್ತ್ವಾತ್' ಎಂಬ ಮುಂದಿನ ಅಧಿಕರಣದಲ್ಲಿ 'ನ ತಾವದುನ್ಮತ್ತವದಸ್ಯ ಮತಿವಿಭ್ರಮಾಜ್ಜಗತ್ ಪ್ರಕ್ರಿಯಾ। ಭ್ರಾಂತಸ್ಯ ಸರ್ವಜ್ಞತ್ವಾನುಪಪತ್ತೇಃ' ಉನ್ಮತ್ತವಾಕ್ಯದಂತೆ

ಮತಿವಿಭ್ರಮದಿಂದ ಈ ಜಗತ್ತಿನ ಪ್ರಕ್ರಿಯೆಯು ನಡೆಯುತ್ತಿರುವುದಲ್ಲ. ಏಕೆಂದರೆ ಭ್ರಾಂತನಿಗೆ ಸರ್ವಜ್ಞತ್ವ ಅನುಪಪನ್ನವಾಗುತ್ತದೆ ಎಂದು ಹೇಳಲಾಗಿದೆ.

**प्रकाशः – श्रुतेरीशविषयत्वमभिप्रेत्य प्रागुक्तायुक्ततां व्यनक्ति – श्रुत्युक्त इति ।। ईशश्चेदिति ।। स्वाप्नस्रष्टेति वर्तते । नहि सर्वज्ञो भ्रान्त इति** प्रागुदाहृतत्वद्वाक्यविरोधादिति भावः ।।

ಶ್ರುತಿಯು ಈಶ್ವರವಿಷಯಕವಾಗಿದೆ ಎಂಬ ಅಭಿಪ್ರಾಯದಿಂದ ಹಿಂದೆ ಹೇಳಿದ ಅಯುಕ್ತತೆಯನ್ನೇ 'ಶ್ರುತ್ಯುಕ್ತ' ಎಂಬುದರಿಂದ ಸ್ಪಷ್ಟಪಡಿಸುತ್ತಿದ್ದಾರೆ

'ಈಶಶ್ಚೇತ್' ಎಂಬಲ್ಲಿ 'ಸ್ವಾಪ್ನಸ್ರಷ್ಟಾ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಸರ್ವಜ್ಞನಾದವನು ಭ್ರಾಂತನಾಗಿದ್ದಾನೆಂದು ಹೇಳಿದರೆ ಹಿಂದೆ ಉದಾಹರಿಸಿದ ಅದ್ವೈತಿವಾಕ್ಯದಿಂದಲೇ ವಿರೋಧ ಬರುತ್ತಿದೆಂದು ಅಭಿಪ್ರಾಯ.

ವಿವರ್ತವಾದದ ನಿರಾಕರಣೆ

## तात्पर्यचन्द्रिका

**''यद्यपि विवर्तस्यैव सिद्धान्तितत्वात् कृत्स्नप्रसक्तिशङ्कानवकाशः । तथापि पूर्वोक्तक्षीरादिदृष्टान्तेन परिणामभ्रान्त्या शङ्किते 'आत्मनि च' इति सूत्रेण स्वप्नदृगात्माहि मनसैव स्वरूपानुपमर्देन रथादीन् सृजतीति मायावादः स्पष्टीकृतः'' इति ।**

ವಾಸ್ತವಿಕವಾಗಿ ವಿವರ್ತವಾದವೇ ನಮ್ಮ ಮತದ ಸಿದ್ಧಾಂತ. ಆದ್ದರಿಂದ ಈ ಅಧಿಕರಣದಲ್ಲಿ ಕೃತ್ಸ್ನಪ್ರಸಕ್ತಿಯ ಶಂಕೆಗೆ ಅವಕಾಶವೇ ಇಲ್ಲ. ಆದರೂ ಕೂಡ ಹಿಂದೆ ಕ್ಷೀರದ ದೃಷ್ಟಾಂತವನ್ನು ಸೂತ್ರಕಾರರು ಹೇಳಿದ್ದರಿಂದ ಬ್ರಹ್ಮನು ಪರಿಣಾಮಕಾರಣನಾಗುತ್ತಾನೆಯೋ? ಎಂಬ ಭ್ರಾಂತಿ ಬರಲು ಅವಕಾಶವಿದೆ. ಅದಕ್ಕಾಗಿ 'ಆತ್ಮನಿ ಚ' ಎಂಬ ಸೂತ್ರದಿಂದ ಸ್ವಪ್ನದ್ರಷ್ಟುವಾದ ಆತ್ಮನು ಮನಸ್ಸಿನಿಂದಲೇ ರಥ ಮೊದಲಾದವುಗಳನ್ನು ಸೃಷ್ಟಿ ಮಾಡುತ್ತಾನೆ. ಇದರಿಂದ ಅವನ ಸ್ವರೂಪಕ್ಕೆ ಉಪಮರ್ದವು ಉಂಟಾಗುವುದಿಲ್ಲ. ಹೀಗೆ ಮಾಯಾವಾದವನ್ನು ಈ ಸೂತ್ರದಿಂದ ಸ್ಪಷ್ಟಪಡಿಸಲಾಗಿದೆ ಎಂದು ಅದ್ವೈತಿಗಳು ಹೇಳುತ್ತಾರೆ.

ವಿಶೇಷವಿಚಾರ – ಅದ್ವೈತಿಗಳು ಹೀಗೆ ಹೇಳುತ್ತಾರೆ - ಬ್ರಹ್ಮನು ವಿವರ್ತಕಾರಣನಾಗಿದ್ದಾನೆ ಹೊರತು, ಪರಿಣಾಮಕಾರಣವಾಗಿರುವುದಿಲ್ಲವೆಂಬುದೇ ನಮ್ಮ ಸಿದ್ಧಾಂತ. ವಿವರ್ತಕಾರಣನೆಂದು ಹೇಳಿದಾಗ ಬ್ರಹ್ಮನು ಪೂರ್ಣವಾಗಿ ಪರಿಣಾಮವನ್ನು ಹೊಂದುತ್ತಾನೋ, ಏಕದೇಶದಿಂದ ಪರಿಣಾಮವನ್ನು ಹೊಂದುತ್ತಾನೋ, ಎಂಬ ಶಂಕೆಗೆ ಅವಕಾಶವೇ ಇರುವುದಿಲ್ಲ. ಆದ್ದರಿಂದ ಈ ಅಧಿಕರಣವು ಏಕೆ ಹೊರಟಿತು? ಎಂಬುದಾಗಿ ಆಶಂಕೆ ಮಾಡಿಕೊಂಡು ಹೀಗೆ ಉತ್ತರಿಸಿದ್ದಾರೆ - 'ಕ್ಷೀರವದ್ಧಿ' ಎಂಬುದಾಗಿ ಸೂತ್ರಕಾರರು ಕ್ಷೀರದ

ದೃಷ್ಟಾಂತವನ್ನು ನೀಡಿದ್ದರಿಂದ ಬ್ರಹ್ಮನು ಜಗತ್ತಿಗೆ ಪರಿಣಾಮಕಾರಣನಾಗಿರಬಹುದೆಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಇದರ ಪರಿಹಾರಕ್ಕಾಗಿ 'ಆತ್ಮನಿ ಚ' ಎಂಬ ಸೂತ್ರವು ಹೊರಟಿದೆ. ಹೇಗೆ ಸ್ವಪ್ನದ್ರಷ್ಟಾರನಾದ ಆತ್ಮನು ತನ್ನ ಮನಸ್ಸಿನಿಂದಲೇ ರಥಾದಿಗಳನ್ನು ಸೃಷ್ಟಿ ಮಾಡುತ್ತಾನೋ, ಅದರಂತೆ ಬ್ರಹ್ಮನೂ ಕೂಡ ಜಗತ್ತನ್ನು ಸೃಷ್ಟಿ ಮಾಡಿದ್ದಾನೆ. ಇದರಿಂದ ಅವನ ಸ್ವರೂಪವು ಉಪಮರ್ದವಾಗುವುದಿಲ್ಲ ಎಂಬುದಾಗಿ ಮಾಯಾವಾದವನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಈ ಅಧಿಕರಣ ಹೊರಟಿದೆ ಎನ್ನುತ್ತಾರೆ.

**तन्न । विवर्तस्यादृश्यत्वाधिकरणप्रकृत्यधिकरणारम्भणाधिकरणेषूक्तत्वेन परिणाम-भ्रान्त्ययोगात् । योगेवाऽऽदावेव विवर्तप्रतिकूलं कुचोद्योत्पादकं क्षीरादिदृष्टान्तमनुक्त्वा तदनुगुणस्वप्नदृष्टान्त एव वाच्यः ।**

ಅದ್ವೈತಿಗಳ ಈ ಅಭಿಪ್ರಾಯವು ಅಸಾಧುವಾಗಿದೆ. ಏಕೆಂದರೆ ವಿವರ್ತವಾದವನ್ನು ಈಗಾಗಲೇ ಅದೃಶ್ಯತ್ವಾಧಿಕರಣ, ಪ್ರಕೃತ್ಯಧಿಕರಣ, ಆರಂಭಣಾಧಿಕರಣ ಇವೇ ಮೊದಲಾದ ಹಲವು ಅಧಿಕರಣಗಳಲ್ಲಿ ಸಮರ್ಥಿಸಿದ್ದಾಗಿದೆ. ಪುನಃ ಬ್ರಹ್ಮನು ಪರಿಣಾಮಕಾರಣನಾಗಿರಬಹುದೆಂಬ ಭ್ರಾಂತಿ ಬರಲು ಅವಕಾಶವೇ ಇಲ್ಲ. ಹಾಗೇನಾದರು ಬ್ರಹ್ಮನು ಪರಿಣಾಮಕಾರಣನಾಗಿರಬಹುದೆಂಬ ಭ್ರಾಂತಿಯು ಬಂದರೂ ಕೂಡ ಸೂತ್ರಕಾರರು ಮೊದಲೇ ವಿವರ್ತಕಾರಣಕ್ಕೆ ವಿರುದ್ಧವಾದ ಕುಚೋದ್ಯ ಮಾಡುವಂತಹ ಕ್ಷೀರಾದಿದೃಷ್ಟಾಂತವನ್ನು ಹೇಳುತ್ತಿರಲಿಲ್ಲ. ವಿವರ್ತವಾದಕ್ಕೆ ಅನುಗುಣವಾದ ಸ್ವಪ್ನದೃಷ್ಟಾಂತವನ್ನೇ ಹೇಳುತ್ತಿದ್ದರು.

ವಿಶೇಷವಿಚಾರ - ಒಂದು ವೇಳೆ ಸೂತ್ರಕಾರರಿಗೆ ವಿವರ್ತಕಾರಣವೇ ವಿವಕ್ಷಿತವಾಗಿದ್ದಲ್ಲಿ, ಕ್ಷೀರಾದಿದೃಷ್ಟಾಂತವನ್ನೇ ಅವರು ಹೇಳುತ್ತಿರಲಿಲ್ಲ. ಕುಚೋದ್ಯ ಮಾಡುವ ಕೆಲಸವನ್ನು ಸೂತ್ರಕಾರರು ಏಕೆ ಮಾಡುತ್ತಾರೆ ? ವಿವರ್ತಕಾರಣಕ್ಕೆ ಅನುಕೂಲವಾದ ಸ್ವಪ್ನದೃಷ್ಟಾಂತವನ್ನೇ ಹೇಳುತ್ತಿದ್ದರು.

**सिद्धान्ते विवर्तविवक्षाप्ययुक्ता । तथात्वे हि द्वितीयसूत्रे शब्दगम्यत्वतर्कागम्यत्वे न वाच्ये । नहि ते भ्रान्त्यधिष्ठानत्वोपयुक्ते ।**

ಮತ್ತು ಅದ್ವೈತಿಗಳ ವಿವರ್ತಕಾರಣವೂ ಕೂಡ ಅಯುಕ್ತವಾಗಿದೆ. ವಿವರ್ತಕಾರಣವು ವಿವಕ್ಷಿತವಾಗಿದ್ದಲ್ಲಿ ಎರಡನೆಯ ಸೂತ್ರದಲ್ಲಿ ಶಬ್ದಗಮ್ಯತ್ವ ಹಾಗೂ ತರ್ಕ ಅಗಮ್ಯತ್ವಗಳನ್ನು ಹೇಳಬಾರದಿತ್ತು. ಇವೆರಡು ಭ್ರಾಂತ್ಯಧಿಷ್ಠಾನಕ್ಕೆ ಉಪಯುಕ್ತವಾಗಿರುವುದಿಲ್ಲವಷ್ಟೇ.

ವಿಶೇಷವಿಚಾರ - ವಿವರ್ತಕಾರಣ ಎಂದರೆ ಜಗದ್‌ಭ್ರಮಕ್ಕೆ ಅಧಿಷ್ಠಾನನಾಗಿದ್ದಾನೆಂದರ್ಥ. ಈ ವಿವಕ್ಷೆಯುಸೂತ್ರಕಾರರಿಗೆಇರುವುದಾಗಿದ್ದಲ್ಲಿ, ಬ್ರಹ್ಮನುಶಬ್ದಗಮ್ಯನಾಗಿದ್ದಾನೆಎಂದೇಕೆ ಹೇಳುತ್ತಿದ್ದರು? ಮತ್ತು ತರ್ಕದಿಂದ ಗಮ್ಯನಾಗಿಲ್ಲ ಎಂದಾದರೂ ಕೂಡ ಏಕೆ ಹೇಳುತ್ತಿದ್ದರು ? ಹೀಗೆ ಹೇಳಿದ್ದರಿಂದ ಜಗದ್‌ಭ್ರಮಕ್ಕೆ ಅಧಿಷ್ಠಾನನಾಗಿದ್ದಾನೆಂಬುದನ್ನು ಸಮರ್ಥನೆ ಮಾಡಿದಂತಾಗುವುದಿಲ್ಲ.

**तृतीयेऽपि स्वप्नदृष्टान्तः किं ब्रह्मणो जगद्विषयकभ्रान्तिमत्त्वे जीवस्य स्वाप्नभ्रान्तिमत्त्वं, किं वा ब्रह्मणो जगद्भ्रमाधिष्ठानत्वे जीवस्य स्वाप्नभ्रमाधिष्ठानत्वं, यद्वा ब्रह्मणो मायाविवत् भ್ರಾमयितृत्वे जीवस्य भ्रामयितृत्वम् ?**

ಮೂರನೆಯ ಸೂತ್ರದಲ್ಲೂ ಕೂಡ ಸ್ವಪ್ನದೃಷ್ಟಾಂತವನ್ನು ಸೂತ್ರಕಾರರು ಏಕೆ ನೀಡಿದ್ದಾರೆ ? ಅವರ ಉದ್ದೇಶವೇನು ? ಎಂಬ ನಮ್ಮ ಪ್ರಶ್ನೆಗೆ ನೀವು ಉತ್ತರಿಸಬೇಕು -

೧. ಬ್ರಹ್ಮನಿಗೆ ಜಗದ್ವಿಷಯಕಭ್ರಾಂತಿಯಿದೆ ಎಂಬ ವಿಷಯದಲ್ಲಿ ಜೀವನಿಗಿರುವ ಸ್ವಪ್ನಭ್ರಮೆಯು ದೃಷ್ಟಾಂತವೆಂದು ಹೇಳಿರುವರೋ?

೨. ಅಥವಾ ಬ್ರಹ್ಮನು ಜಗದ್‌ಭ್ರಮಕ್ಕೆ ಅಧಿಷ್ಠಾನನಾಗಿದ್ದಾನೆ ಎಂಬ ವಿಷಯದಲ್ಲಿ ಜೀವನು ಸ್ವಾಪ್ನಭ್ರಮೆಗೆ ಅಧಿಷ್ಠಾನನಾಗಿದ್ದಾನೆ ಎಂದು ಉದಾಹರಣೆಯನ್ನು ನೀಡಿದ್ದೀರೋ ?

೩. ಅಥವಾ ಬ್ರಹ್ಮನು ಮಾಯಾವಿಯಂತೆ ಮತ್ತೊಬ್ಬರಿಗೆ ಭ್ರಮೆಯನ್ನು ಬರಿಸುತ್ತಾನೆಂಬ ವಿಷಯದಲ್ಲಿ ಜೀವನ ಭ್ರಮೆಯನ್ನು ಉದಾಹರಿಸಿದ್ದೀರೋ ?

**नाद्यः । दार्ष्टान्तिकानानुगुण्यात् । नहि ब्रह्म भ्रान्तम् । उक्तं हि भामत्यामपि ''भ्रान्तस्य सर्वज्ञत्वानुपपत्तेः'' इति । कल्पतरौ च ''अज्ञातं नटवद्ब्रह्मकारणं शङ्करोऽब्रवीत्'' इति ।**

ಮೊದಲನೆಯ ಪಕ್ಷ ತಪ್ಪು. ದಾರ್ಷ್ಟಾಂತಿಕವೇ ಅನುಗುಣವಾಗಿರುವುದಿಲ್ಲ. ಜೀವನು ಸ್ವಪ್ನಭ್ರಾಂತಿಗೆ ಅಧಿಷ್ಠಾನನಾಗಿರುವಂತೆ, ಬ್ರಹ್ಮನು ಜಗದ್ವಿಷಯಕಭ್ರಾಂತಿಗೆ ಅಧಿಷ್ಠಾನನಾಗಿದ್ದಾನೆಂಬುದು ಮೊದಲನೆಯ ಪಕ್ಷ. ಆದರೆ ಬ್ರಹ್ಮನಿಗೆ ಭ್ರಮೆ ಇರಲು ಸಾಧ್ಯವೇ ಇಲ್ಲ. ಇದನ್ನೇ ಭಾಮತಿಯಲ್ಲೂ ಕೂಡ ಹೇಳಿದ್ದಾರೆ - 'ಭ್ರಾಂತಸ್ಯ ಸರ್ವಜ್ಞತ್ವಾನುಪಪತ್ತೇಃ' ಭ್ರಾಂತಿಯಿರುವವನಲ್ಲಿ ಸರ್ವಜ್ಞತ್ವವು ಅನುಪಪನ್ನವಾಗುತ್ತದೆ ಎಂದು. ಕಲ್ಪತರುವಿನಲ್ಲೂ ಕೂಡ 'ಅಜ್ಞಾತಂ ನಟವದ್ ಬ್ರಹ್ಮಕಾರಣಂ ಶಂಕರೋಽಬ್ರವೀತ್' ಅಜ್ಞಾತನಾದ ನಟನಂತೆ ಬ್ರಹ್ಮನು ಜಗತ್ತಿಗೆ ಕಾರಣನಾಗಿದ್ದಾನೆ ಎಂದು ಶಂಕರನು ಹೇಳಿದನು ಎಂದು.

ವಿಶೇಷವಿಚಾರ - ಜೀವನಿಗೆ ಸ್ವಪ್ನಭ್ರಾಂತಿಯಿದೆ. ಅದರಂತೆ ಜಗದ್ವಿಷಯಕಭ್ರಾಂತಿ ಬ್ರಹ್ಮನಿಗೆ ಇದೆ ಎಂಬುದು ಮೊದಲನೆಯ ಪಕ್ಷ. ಇದರಲ್ಲಿ ದೃಷ್ಟಾಂತ ಸಾಧುವಾಗಿದೆ. ಆದರೆ ದಾರ್ಷ್ಟಾಂತಿಕವು ಅಸಾಧುವಾಗಿದೆ. ಆದ್ದರಿಂದ ದೃಷ್ಟಾಂತಕ್ಕೆ ದಾರ್ಷ್ಟಾಂತಿಕವು ಅನುಗುಣವೇ ಆಗಿರುವುದಿಲ್ಲ. ಏಕೆಂದರೆ ಭ್ರಾಂತಿಯನ್ನು ಬ್ರಹ್ಮನಿಗೆ ಹೇಳಬಾರದೆಂದು ಭಾಮತಿಕಾರ ಹಾಗೂ ಕಲ್ಪತರುಕಾರರು ಹೇಳಿದ್ದಾರೆ.

**न द्वितीयः । दृष्टान्तानानुगुण्यात् । जीवस्य स्वाप्नभ्रमाधिष्ठानत्वे हि अहंकर्तातिवत् 'अहं गजः' इति धीः स्यात् । पक्षद्वयेपि सूत्रे विचित्रशक्त्ययोगाच्च । नहि भ्रान्तत्वं भ्रान्त्यधिष्ठानत्वं वा विचित्रशक्तिसापेक्षम् ।**

ಎರಡನೆಯ ಪಕ್ಷವು ತಪ್ಪು. ಬ್ರಹ್ಮನು ಜಗದ್‌ಭ್ರಮಕ್ಕೆ ಅಧಿಷ್ಠಾನನಾಗಿದ್ದಾನೆ ಎಂಬುದು ಎರಡನೆಯ ಪಕ್ಷ. ಜೀವನು ಸ್ವಾಪ್ನಭ್ರಮೆಗೆ ಅಧಿಷ್ಠಾನನಾಗಿದ್ದಾನೆಂಬುದು ಉದಾಹರಣೆ. ಆದರೆ ಈ

ಉದಾಹರಣೆಯೇ ಅಯುಕ್ತವಾಗಿದೆ. ಒಂದು ವೇಳೆ ಜೀವನು ಸ್ವಾಪ್ನಭ್ರಮಕ್ಕೆ ಅಧಿಷ್ಠಾನನಾಗುವುದಾದರೆ, 'ಅಹಂ ಕರ್ತಾ' ಎಂಬ ಪ್ರತೀತಿ ಹೇಗೆ ಜೀವನಿಗಿದೆಯೋ? ಅದರಂತೆ 'ಅಹಂ ಗಜಃ' ಎಂಬ ಪ್ರತೀತಿಯೂ ಕೂಡ ಜೀವನಿಗೆ ಇರಬೇಕಾದೀತು. ಮತ್ತು ಎರಡು ಪಕ್ಷಗಳಲ್ಲಿಯೂ ಸೂತ್ರದಲ್ಲಿ ವಿಚಿತ್ರಶಕ್ತಿಯನ್ನು ಹೇಳಿದ್ದು ಅಯುಕ್ತವಾಗುತ್ತದೆ. ಏಕೆಂದರೆ ಭ್ರಾಂತಿಯ ಇರುವಿಕೆಗೆ, ಅಥವಾ ಭ್ರಾಂತಿಗೆ ಅಧಿಷ್ಠಾನನಾಗುವುದಕ್ಕೆ ವಿಚಿತ್ರಶಕ್ತಿಯ ಅವಶ್ಯಕತೆ ಸರ್ವಥಾ ಇರುವುದಿಲ್ಲ.

**अत एव नान्त्यः । नहि स्वप्नद्रष्टाऽन्यान्भ्रामयति । स्वाप्नसृष्टौ ''न तत्र रथाः'' इत्यादि श्रुत्युदाहरणमपि परकृतमयुक्तम् । श्रुत्युक्तः स्वाप्नस्रष्टा जीवश्चेत् ''सहि कर्ता तस्मिन् लोकाः श्रिताः'' इति वाक्यशेषविरोधात् । ईशश्चेत् गगनादिवत् स्वाप्नस्य व्यावहारिकत्वापातात् ।**

ದೃಷ್ಟಾಂತದ ಅನಾನುಗುಣ್ಯದೋಷದಿಂದಲೇ ಮೂರನೆಯ ಪಕ್ಷವೂ ಕೂಡ ಅಯುಕ್ತವಾಗಿದೆ. ಸ್ವಪ್ನದ್ರಷ್ಟೃವಾದ ಜೀವನು ಮತ್ತೊಬ್ಬರಿಗೆ ಭ್ರಮೆಯನ್ನು ಹುಟ್ಟಿಸಲು ಸಾಧ್ಯವಿರುವುದಿಲ್ಲ. ಸ್ವಾಪ್ನಸೃಷ್ಟಿಯಲ್ಲಿ 'ನ ತತ್ರ ರಥಾಃ' ಇತ್ಯಾದಿಯಾಗಿ ಶ್ರುತ್ಯುದಾಹರಣೆಯನ್ನು ಪರರು ನೀಡಿರುವುದು ಅಯುಕ್ತವಾಗಿದೆ. ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಾಪ್ನಪದಾರ್ಥಗಳನ್ನು ಸೃಷ್ಟಿ ಮಾಡುವವನು ಜೀವ ಎಂದು ಹೇಳುವುದಾದರೆ, 'ಸಹಿ ಕರ್ತಾ ತಸ್ಮಿನ್‌ಲೋಕಾಃ ಶ್ರಿತಾಃ' ಎಂಬ ವಾಕ್ಯಶೇಷದ ವಿರೋಧ ಬರುತ್ತದೆ. ಈಶನು ಸ್ವಾಪ್ನಪದಾರ್ಥಗಳನ್ನು ಸೃಷ್ಟಿ ಮಾಡುತ್ತಾನೆಂದು ಹೇಳುವುದಾದರೆ ಗಗನಾದಿಗಳಂತೆ ಸ್ವಾಪ್ನಪದಾರ್ಥವೂ ಕೂಡ ವ್ಯಾವಹಾರಿಕವಾಗುತ್ತದೆ.

ವಿಶೇಷವಿಚಾರ - ಈಶನಿರ್ಮಿತವಾದ ಪದಾರ್ಥಗಳೆಲ್ಲವೂ ವ್ಯಾವಹಾರಿಕವೆಂದು ಅದ್ವೈತಿಗಳು ಒಪ್ಪುವುದರಿಂದ ಸ್ವಪ್ನಪದಾರ್ಥವನ್ನು ಈಶ್ವರನು ಸೃಷ್ಟಿ ಮಾಡುತ್ತಾನೆಂದರೆ ಅದೂ ಕೂಡ ವ್ಯಾವಹಾರಿಕ ಆಗಬೇಕಾಗುತ್ತದೆ.

**तस्मादात्मनीति सूत्रं द्युभ्वाद्यधिकरणन्यायेनात्मशब्दमुख्यार्थस्य ब्रह्मणः प्रस्तुतजगत्कर्तृत्वोपयोगि विचित्रशक्त्युक्तिपरम् । नतु स्वप्नदृष्टान्तेन जगन्मिथ्यात्वोक्तिपरमिति ।**

ಆದ್ದರಿಂದ 'ಆತ್ಮನಿ' ಎಂಬ ಸೂತ್ರವು ದ್ಯುಭ್ವಾದ್ಯಧಿಕರಣದ ನ್ಯಾಯದಂತೆ ಆತ್ಮಶಬ್ದದ ಮುಖ್ಯಾರ್ಥನಾದ ಬ್ರಹ್ಮನಿಗೆ ಪ್ರಸ್ತುತವಾದ ಜಗತ್‌ಕರ್ತೃತ್ವಕ್ಕೆ ಉಪಯೋಗಿಯಾದ ವಿಚಿತ್ರಶಕ್ತಿಯನ್ನು ಹೇಳಲು ಹೊರಟಿದೆ ಎಂದೇ ಹೇಳಬೇಕು. ಇದನ್ನು ಬಿಟ್ಟು, ಸ್ವಪ್ನದೃಷ್ಟಾಂತದಿಂದ ಜಗನ್ಮಿಥ್ಯಾತ್ವವನ್ನು ಹೇಳಲು ಹೊರಟಿದೆ ಎಂದು ಸರ್ವಥಾ ವ್ಯಾಖ್ಯಾನ ಮಾಡಬಾರದು.

ಶ್ರುತೇಸ್ತುಶಬ್ದಮೂಲತ್ವಾಧಿಕರಣ (2-1-8)

**यच्चोक्तं परैः ''सर्वोपेत'' इत्यादि सूत्रद्वयमेकमधिकरणम् । तत्राद्येन ''आत्मनि चैवं विचित्राश्च हि'' इति पूर्वसूत्रोक्तविचित्रशक्तित्वे ''यः सर्वज्ञः सर्ववित् सत्यकामः सत्यसङ्कल्पः'' इत्यादिश्रुतिरुक्ता ।**

ಅದ್ವೈತಿಗಳು 'ಸರ್ವೋಪೇತಾ ಚ' ಇತ್ಯಾದಿ ಎರಡು ಸೂತ್ರಗಳನ್ನು ಒಂದೇ ಅಧಿಕರಣವೆಂದು ಪರಿಗಣಿಸಿದ್ದಾರೆ. ಮೊದಲನೆಯ ಸೂತ್ರದಲ್ಲಿ 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಮುಂದಿನ ಸೂತ್ರದಲ್ಲಿ ಬ್ರಹ್ಮನಿಗೆ ಯಾವ ವಿಚಿತ್ರಸೃಷ್ಟಿಯನ್ನು ಹೇಳಲಾಯಿತೋ, ಆ ವಿಷಯದಲ್ಲಿ 'ಯಃ ಸರ್ವಜ್ಞಃ ಸರ್ವವಿತ್ ಸತ್ಯಕಾಮಃ ಸತ್ಯಸಂಕಲ್ಪಃ' ಇತ್ಯಾದಿ ಶ್ರುತಿಗಳನ್ನು ಆಧಾರವನ್ನಾಗಿ ಹೇಳಿದ್ದಾರೆ.

**द्वितीयेन विचित्रशक्तियुक्ता अपि देवादय आध्यात्मिककरणसम्पन्ना एव कार्यकराः । ब्रह्मतु ''अचक्षुष्कमश्रोत्रम्'' इत्यादिश्रुत्या करणरहितमिति शङ्किते ''अपाणिपादम्'' इत्यादिश्रुतेरकरणस्यापि ब्रह्मणो देवादिभ्योऽतिशयितशक्तियोगात्कर्तृत्वमिति सिद्धान्तितमिति ।**

ಎರಡನೆಯ ಸೂತ್ರದಲ್ಲಿ ದೇವತೆಗಳು ವಿಚಿತ್ರಶಕ್ತಿಯುಳ್ಳವರಾದರೂ ಕೂಡ ಆಧ್ಯಾತ್ಮಿಕಕರಣಸಂಪನ್ನರಾದ್ದರಿಂದಲೇ ಕಾರ್ಯಕ್ಕೆ ಕಾರಣರಾಗುತ್ತಾರೆ. ಬ್ರಹ್ಮನಾದರು 'ಅಚಕ್ಷುಷ್ಕಮಶ್ರೋತ್ರಮ್' ಇತ್ಯಾದಿ ಶ್ರುತಿಗಳು ಹೇಳುವಂತೆ ಕರ್ಣರಹಿತನಾಗಿದ್ದಾನಲ್ಲವೇ? ಎಂದು ಆಶಂಕಿಸಿ, 'ಅಪಾಣಿಪಾದಂ' ಇತ್ಯಾದಿ ಶ್ರುತಿಗಳು ಇರುವುದರಿಂದ ಕರಣಗಳು ಇಲ್ಲದಿದ್ದರೂ ಬ್ರಹ್ಮನು ಜಗತ್ಕರ್ತೃವಾಗುತ್ತಾನೆ. ಹೀಗೆ ಸಿದ್ಧಾಂತ ಮಾಡಿದ್ದಾರೆ.

ವಿಶೇಷವಿಚಾರ - 'ಸರ್ವೋಪೇತಾ ಚ ತದ್ದರ್ಶನಾತ್' ಮತ್ತು 'ಅಕರಣತ್ವಾತ್' ಇತ್ಯಾದಿ ಎರಡು ಸೂತ್ರಗಳು ಒಂದೇ ಅಧಿಕರಣವೆಂದು ಅದ್ವೈತಿಗಳು ಉಪಪಾದನೆ ಮಾಡಿದ್ದಾರೆ. ಮೊದಲನೆಯ ಸೂತ್ರವು ಬ್ರಹ್ಮನಲ್ಲಿ ಸಾರ್ವಜ್ಞ್ಯಾದಿಗಳನ್ನು ಪ್ರತಿಪಾದನೆ ಮಾಡುತ್ತಿದೆ. ಎರಡನೆಯ ಸೂತ್ರವು ಯಾವುದೇ ಇಂದ್ರಿಯಗಳಿದಿದ್ದರೂ ಬ್ರಹ್ಮನು ಜಗತ್ಕಾರಣನಾಗಲು ಸಮರ್ಥನಾಗಿದ್ದಾನೆ ಎನ್ನುತ್ತಿದೆ.

ಕುಲಾಲನೇ ಮೊದಲಾದವರು ಕರ್ತೃಗಳಾಗಬೇಕೆಂದರೆ ಲೌಕಿಕವಾದ ಕರಣಾದಿಗಳಿಂದ ಕೂಡಿರಬೇಕು. ಮತ್ತು ಆಧ್ಯಾತ್ಮಿಕವಾದ ಕರಣಗಳೂ ಕೂಡ ಇರಬೇಕು. ಆದರೆ ದೇವತೆಗಳಿಗೆ ವಿಚಿತ್ರಶಕ್ತಿಯಿರುವುದರಿಂದ ಲೌಕಿಕವಾದ ಕರಣಗಳಿದ್ದರೂ, ಆಧ್ಯಾತ್ಮಿಕಕರಣಸಂಪನ್ನರಾಗಿರಲೇಬೇಕು. ಆದರೆ ಬ್ರಹ್ಮನಿಗೆ 'ಅಚಕ್ಷುಷ್ಕಮಶ್ರೋತ್ರಮ್' ಎಂಬ ಶ್ರುತಿ ಹೇಳುವಂತೆ ಯಾವುದೇ ಕರಣಗಳೇ ಇಲ್ಲ. ಹೀಗಿರುವಾಗ ಹೇಗೆ ಜಗತ್ಕರ್ತೃವಾಗುತ್ತಾನೆ ?

ಈ ಆಕ್ಷೇಪಕ್ಕೆ ಅದ್ವೈತಿಗಳು ಎರಡನೆಯ ಸೂತ್ರದಲ್ಲಿ ಉತ್ತರಿಸಿದ್ದಾರೆ. 'ಅಪಾಣಿಪಾದಂ' ಇತ್ಯಾದಿ ಶ್ರುತಿ ಹೇಳುವಂತೆ ಯಾವುದೇ ಕರಣಗಳಿಲ್ಲದ ಬ್ರಹ್ಮನಲ್ಲಿ ದೇವತೆಗಳಿಗಿಂತ ಅತಿಶಯವಾದ ಶಕ್ತಿಯು ಇರುತ್ತದೆ. ಕುಲಾಲನಂತೆ ಎರಡು ಬಗೆಯ ಶಕ್ತಿಯೂ ಬೇಡ, ದೇವತೆಗಳಂತೆ ಆಧ್ಯಾತ್ಮಿಕಕರಣವೂ ಕೂಡ ಇವನಿಗೆ ಬೇಡ ಎಂಬುದು ಅಧಿಕರಣದ ಸಿದ್ಧಾಂತ.

**तन्न । ''आत्मनि'' इति सूत्रे त्वद्रीत्या भ्रान्तत्वस्य वा भ्रमाधिष्ठानत्वस्य वा मायावित्वस्य वोक्तत्वेनेह तद्विरुद्धे सर्वज्ञत्वसर्वशक्तित्वादौ श्रुत्युक्तययोगात् ।**

ಅದ್ವೈತಿಗಳ ಈ ಅಧಿಕರಣ ರಚನೆ ಅಯುಕ್ತವಾಗಿದೆ. 'ಆತ್ಮನಿ ಚೈವಂ' ಎಂಬ ಸೂತ್ರದಲ್ಲಿ ಅದ್ವೈತಿಗಳ ಪ್ರಕಾರ ಭ್ರಾಂತತ್ವವನ್ನು ಅಥವಾ ಭ್ರಮಾಧಿಷ್ಠಾನತ್ವವನ್ನು ಅಥವಾ ಮಾಯಾವಿತ್ವವನ್ನು ಹೇಳಿದ್ದರಿಂದ ಅದಕ್ಕೆ ವಿರುದ್ಧವಾಗಿ ಮುಂದಿನ ಸೂತ್ರದಲ್ಲಿ ಸರ್ವಜ್ಞತ್ವ, ಸರ್ವಶಕ್ತಿತ್ವಗಳು ಶುತ್ಯುಕ್ತವಾಗಿದೆ ಎಂದು ಸಮರ್ಥಿಸುವುದು ಪೂರ್ವೋತ್ತರವಿರುದ್ಧವಾಗಿದೆ.

**नहि सर्वज्ञो भ्रान्तः । न वा सर्वभ्रमाधिष्ठानम् । न वा मायावी मायिकद्रष्टा। नच तात्विकसृष्टौ शक्तो मायिकं सृजति ।**

ಸರ್ವಜ್ಞನಾದವನು ಭ್ರಾಂತನಾಗಲು ಸಾಧ್ಯವೇ ಇಲ್ಲ. ಮತ್ತು ಸಕಲ ಭ್ರಮೆಗಳಿಗೆ ಅಧಿಷ್ಠಾನವಾಗಲು ಸಾರ್ವಜ್ಞ್ಯವು ಉಪಯೋಗಿಯೂ ಅಲ್ಲ. ಹಾಗೇಯೇ ಹಿಂದಿನ ಸೂತ್ರದಲ್ಲಿ ಹೇಳಿದಂತೆ ಬ್ರಹ್ಮನು ಮಾಯಾವಿಯಾಗಿದ್ದಾನೆ. ಇವನು ಮಾಯಿಕವಾದ ಜಗತ್ತನ್ನು ನೋಡಲು ಹೇಗೆ ಸಮರ್ಥನಾಗುತ್ತಾನೆ ? ತಾತ್ವಿಕವಾದ ಜಗತ್ತನ್ನೇ ಸೃಷ್ಟಿ ಮಾಡಲು ಸಮರ್ಥನಾಗಿದ್ದಾನೆನ್ನುವುದಾದರೆ, ಮಾಯಿಕವಾದ ಜಗತ್ತನ್ನೇಕೆ ಸೃಷ್ಟಿ ಮಾಡುತ್ತಾನೆ.

ವಿಶೇಷವಿಚಾರ - ಐಂದ್ರಜಾಲಿಕವನ್ನು ಮಾಡುವವನಿಗೆ ತಾನು ಸೃಷ್ಟಿ ಮಾಡುವ ವಸ್ತುಗಳು ಕಾಣುವುದಿಲ್ಲ. ಒಂದು ವೇಳೆ ಬ್ರಹ್ಮನು ಮಾಯಾವೀ ಎನ್ನುವುದಾದರೆ, ತಾನು ಸೃಷ್ಟಿ ಮಾಡಿದ ಜಗತ್ತನ್ನೇ ನೋಡದೇ ಇರಬೇಕಾದೀತು. ನೋಡುತ್ತಾನಾದ್ದರಿಂದ ಸೃಷ್ಟಿ ಮಾಡಿದ ವಸ್ತುಗಳು ತಾತ್ವಿಕವೆಂದರೆ ಮಾಯಿಕವಾದ ವಸ್ತುಗಳನ್ನೇಕೆ ಸೃಷ್ಟಿ ಮಾಡಿದನು ? ಎಂಬ ಪ್ರಶ್ನೆ ಬರುತ್ತದೆ.

**किञ्च भ्रमाधिष्ठानत्वस्य विकरणत्वेनाक्षेपः शक्तिविशेषेण समाधानं चायुक्तम्। मायावित्वे च ब्रह्मणो मायिकप्रपञ्चद्रष्टृत्वं विरोधि । भ्रान्तत्वं तु ब्रह्मणः परमतेपि नास्ति । प्रपञ्चं प्रति ब्रह्मणः कर्तृत्वे तु स सत्यः स्यादित्युक्तम् ।**

ಮತ್ತು ಇಂದ್ರಿಯಗಳಿಲ್ಲದ್ದರಿಂದ ಭ್ರಮೆಗೆ ಅಧಿಷ್ಠಾನನಾಗಲಾರನು ಎಂಬ ಆಕ್ಷೇಪವೇ ತಪ್ಪು. ಮತ್ತು ಶಕ್ತಿವಿಶೇಷವಿರುವುದರಿಂದ ಭ್ರಮೆಗೆ ಅಧಿಷ್ಠಾನನಾಗುತ್ತಾನೆ ಎಂಬ ಸಮಾಧಾನವೂ ಕೂಡ ತಪ್ಪು. ಭ್ರಮೆಗೆ ಅಧಿಷ್ಠಾನನಾಗಬೇಕೆಂದರೆ ಶಕ್ತಿವಿಶೇಷವು ಕಾರಣವಾಗುವುದಿಲ್ಲ. ಮತ್ತು ಬ್ರಹ್ಮನು ಮಾಯಾವಿಯಾಗುವುದಾದರೆ ಮಾಯಿಕವಾದ ಪ್ರಪಂಚದ್ರಷ್ಟೃತ್ವವು ವಿರುದ್ಧವಾಗುತ್ತವೆ.

ವಿಚಾರ ಮಾಡಿದರೆ ಬ್ರಹ್ಮನು ಭ್ರಾಂತನಾಗಿದ್ದಾನೆಂಬುದು ಅದ್ವೈತವಾದದಲ್ಲೂ ಕೂಡ ಕೂಡುವುದಿಲ್ಲ. ಅವರು ಬ್ರಹ್ಮನನ್ನು ಭ್ರಾಂತನೆಂದು ಒಪ್ಪಿಯೇ ಇಲ್ಲ. ಪ್ರಪಂಚಕ್ಕೆ ಬ್ರಹ್ಮನು ಕಾರಣನಾಗಿದ್ದಾನೆನ್ನುವುದಾದರೆ, ಆ ಪ್ರಪಂಚವು ಸತ್ಯ ಎಂದು ಹೇಳಿದಂತಾಯಿತು.

ಶ್ರುತೇಸ್ತುಶಬ್ದಮೂಲತ್ವಾಧಿಕರಣ (2-1-8)

**केचित्तु ''कृत्स्न'' इत्यादिसूत्रषट्कमेकमधिकरणम् । निरवयवत्वाद्ब्रह्मानुपादानमिति प्राप्ते शब्दगम्यत्वात्सर्वशक्तित्वाच्च तर्केणापह्नव इति सिद्धान्त इत्याहुः ।**

ರಾಮಾನುಜರು 'ಕೃತ್ಸ್ನಪ್ರಸಕ್ತಿಃ' ಇತ್ಯಾದಿ ಸೂತ್ರಗಳಿಂದ ಆರು ಸೂತ್ರಗಳನ್ನು ಒಂದೇ ಅಧಿಕರಣವೆಂದು ಪರಿಗಣಿಸಿದ್ದಾರೆ. ಬ್ರಹ್ಮನಿಗೆ ಅವಯವವೇ ಇಲ್ಲವಾದ್ದರಿಂದ ಜಗತ್ತಿಗೆ ಉಪಾದಾನಕಾರಣನಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ಶಬ್ದಗಮ್ಯನಾದ್ದರಿಂದ ಮತ್ತು ಸರ್ವಶಕ್ತನಾದ್ದರಿಂದ ತರ್ಕದಿಂದ ಅವನ ಜಗತ್ಕಾರಣತ್ವವನ್ನು ಅಲ್ಲಗಳೆಯಬಾರದು ಎಂಬುದು ಅಧಿಕರಣದ ಸಿದ್ಧಾಂತ.

**तन्न । त्वन्मते हि विशिष्टोपादानतायाः प्रकृत्यधिकरणादावुक्तत्वात्, ''नतु दृष्टान्तभावात्'' इत्यत्र बालयुवदृष्टान्तेनोपपादितत्वाच्चैतत्पूर्वपक्षानुदयात् ।**

ಇವರ ಈ ಅಧಿಕರಣರಚನೆಯು ಅಯುಕ್ತವಾಗಿದೆ. ಏಕೆಂದರೆ ಸ್ಥೂಲಚಿದಚಿತ್ ವಸ್ತುವಿನ ಸೃಷ್ಟಿಗೆ ಸೂಕ್ಷ್ಮಚಿದಚಿತ್ ವಸ್ತುವು ಉಪಾದಾನಕಾರಣವಾಗಿದೆಯೆಂದು ಪ್ರಕೃತ್ಯಾದ್ಯಧಿಕರಣದಲ್ಲಿ ಹೇಳಿದ್ದಾರೆ. ಮತ್ತು 'ದೃಷ್ಟಾಂತಭಾವಾತ್' ಎಂಬಲ್ಲಿ ಬಾಲಕನೇ ಹೇಗೆ ಯುವಕನಾಗುತ್ತಾನೋ, ಅದರಂತೆ ಬ್ರಹ್ಮನೇ ಜಗತ್ತಾಗಿ ಪರಿಣಾಮವನ್ನು ಹೊಂದುತ್ತಾನೆ ಎಂದು ಉಪಪಾದನೆ ಮಾಡಿದ್ದಾರೆ. ಹೀಗೆ ಪ್ರಕೃತ್ಯಧಿಕರಣದಲ್ಲಿ ಹಾಗೂ 'ನತು ದೃಷ್ಟಾಂತಭಾವಾತ್' ಎಂಬಲ್ಲಿ ಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ಸಮರ್ಥನೆ ಮಾಡಿದ್ದರಿಂದ ಪುನಃ ಇಲ್ಲಿ ಪೂರ್ವಪಕ್ಷವೇ ಹುಟ್ಟುವುದಿಲ್ಲ.

**सिद्धान्तेऽपि सर्वशक्तित्वं न तावद्विशेष्यस्य । तस्यानुपादानत्वेन वैयधिकरण्यात् । नापि विशिष्टस्य । स्वस्य नानाविधहेयात्मना परिणामनिवारणाशक्तस्य तस्य सर्वशक्तित्वानुपपत्तेः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् श्रुतेस्तुशब्दमूलत्वाधिकरणं सम्पूर्णम् ।।८।।**

ಸಿದ್ಧಾಂತವೂ ಕೂಡ ತಪ್ಪು. ಸರ್ವಶಕ್ತಿತ್ವವು ವಿಶೇಷಭೂತನಾದ ಬ್ರಹ್ಮನಿಗೆ ಇರುತ್ತದೆಂದು ಹೇಳಲಾಗದು. ಅವನು ಉಪಾದಾನಕಾರಣನೇ ಆಗಿರುವುದಿಲ್ಲವಾದ್ದರಿಂದ ಕಾರಣನಾದವನೇ ಬೇರೆ, ಸರ್ವಶಕ್ತನಾದವನೇ ಬೇರೆ ಎಂದು ವೈಯಧಿಕರಣ್ಯ ಬರುತ್ತದೆ. ವಿಶಿಷ್ಟನಲ್ಲಿ ಸರ್ವಶಕ್ತಿತ್ವವನ್ನು ಹೇಳುತ್ತೇವೆಂದರೆ ತಾನು ನಾನಾವಿಧವಾದ ಹೇಯರೂಪವಾದ ಜಗತ್ತಾಗಿ ಪರಿಣಾಮ ಹೊಂದುವಿಕೆಯನ್ನು ಪರಿಹರಿಸಿಕೊಳ್ಳಲು ಅಶಕ್ತನಾಗಿದ್ದಾನೆ ಎಂದಾಯಿತು. ಆಗ ಅವನಿಗೆ

ಸರ್ವಶಕ್ತಿತ್ವವೇ ಉಪಪನ್ನಾಗುವುದಿಲ್ಲ. ಆದ್ದರಿಂದ ರಾಮಾನುಜರ ಅಧಿಕರಣರಚನೆಯೂ ಅಯುಕ್ತವೆಂದು ಸಿದ್ಧವಾಯಿತು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಶ್ರುತೇಸ್ತುಶಬ್ದಮೂಲತ್ವಾಧಿಕರಣವು ಸಂಪೂರ್ಣವಾಯಿತು

**प्रकाशः —**

**स इति ।। प्रपञ्च इत्यर्थः ।।**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते
चन्द्रिकाप्रकाशे श्रुतेसस्तु शबब्दमूलत्वाधिकरणं सम्पूर्णम् ।।८।।**

'ಸ ಸತ್ಯ ಸ್ಯಾತ್' ಎಂದು ಹೇಳಿದ್ದಾರೆ. 'ಸಃ' ಎಂಬುದಕ್ಕೆ 'ಪ್ರಪಂಚ' ಎಂದರ್ಥ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ಶ್ರುತೇಸ್ತುಶಬ್ದಮೂಲತ್ವಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಸೂತ್ರದ ಸಾರ್ಥಕ್ಯವನ್ನು ಅದ್ವೈತಿಗಳು ಹೀಗೆ ಸಮರ್ಥಿಸುತ್ತಾರೆ- ವಿವರ್ತಕಾರಣವೇ ನಮಗೆ ಅಭಿಪ್ರೇತವಾಗಿದೆ. ಆದರೆ ಕ್ಷೀರದ ದೃಷ್ಟಾಂತವನ್ನು ಸೂತ್ರಕಾರರು ನೀಡಿದ್ದರಿಂದ ಪರಿಣಾಮಕಾರಣನಾಗುವನೆಂಬ ಭ್ರಾಂತಿಯು ಪ್ರಸಕ್ತವಾಗುತ್ತದೆ. ಅದರ ಪರಿಹಾರಕ್ಕಾಗಿ ಸೂತ್ರಕಾರರು 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂದು ಹೇಳಿದ್ದಾರೆ. ಈ ಸೂತ್ರದಲ್ಲಿ ಜೀವದೃಷ್ಟಾಂತದಿಂದ ಪರಮಾತ್ಮನು ವಿವರ್ತಕಾರಣನಾಗಿದ್ದಾನೆಂಬುದನ್ನು ಸಮರ್ಥಿಸಿದ್ದಾರೆ. ಜೀವನು ಹೇಗೆ ಸ್ವಾಪ್ನಪದಾರ್ಥಗಳನ್ನು ಕಾಣುವನೋ, ಅದರಂತೆ ಈ ಜಗತ್ತನ್ನೂ ಕೂಡ ಪರಮಾತ್ಮನು ಸೃಷ್ಟಿ ಮಾಡುತ್ತಾನೆ ಎಂಬುದು ಅದ್ವೈತಿಗಳ ಅಭಿಪ್ರಾಯ.

ಇದು ತಪ್ಪು. ಸೂತ್ರಕಾರರಿಗೆ ವಿವರ್ತಕಾರಣವೇ ವಿವಕ್ಷಿತವಾಗಿದ್ದಲ್ಲಿ ಕ್ಷೀರದ ದೃಷ್ಟಾಂತವನ್ನು ಮಧ್ಯದಲ್ಲೇಕೆ ಹೇಳುತ್ತಿದ್ದರು. ಈಗಾಗಲೇ ಅದೃಶ್ಯತ್ವಾಧಿಕರಣವೇ ಮೊದಲಾದ ಅನೇಕ ಅಧಿಕರಣಗಳಲ್ಲಿ ವಿವರ್ತವಾದವನ್ನು

ಸಮರ್ಥಿಸಿದ ಮೇಲೆ ಪುನಃ ಜಿಜ್ಞಾಸುವಿನ ದಿಕ್ಕು ತಪ್ಪಿಸಲು ಪರಿಣಾಮಕಾರಣ ದೃಷ್ಟಾಂತವನ್ನು ನೀಡುವುದು ಸೂತ್ರಕಾರರ ಕುಚೋದ್ಯವಲ್ಲವೇ? ವಿವರ್ತಕಾರಣವೇ ವಿವಕ್ಷಿತವಾಗಿದ್ದಲ್ಲಿ ನೇರವಾಗಿ ಸ್ವಪ್ನಾದಿದೃಷ್ಟಾಂತವನ್ನೇ ಅವರು ಹೇಳುತ್ತಿದ್ದರು.

ಮತ್ತು ವಿವರ್ತಕಾರಣವೇ ಅಯುಕ್ತ. ವಿವರ್ತಕಾರಣಕ್ಕೆ ಶಬ್ದಗಮ್ಯತ್ವವಾಗಲೀ, ತರ್ಕಾಗಮ್ಯತ್ವವಾಗಲೀ ಉಪಯುಕ್ತವೇ ಅಲ್ಲ. ವಿವರ್ತಕಾರಣ ಎಂದರೆ ಜಗತ್‌ಭ್ರಾಂತಿಗೆ ಅಧಿಷ್ಠಾನನಾಗಿದ್ದಾನೆಂದಷ್ಟೇ ಅರ್ಥ. ಇದಕ್ಕೇ ಶಬ್ದಗಮ್ಯತ್ವ, ಅಗಮ್ಯತ್ವಗಳು ಏಕೆ ಬೇಕಾಗುತ್ತವೆ.

ಮತ್ತು ಜೀವನು ಹೇಗೆ ಸ್ವಾಪ್ನಪದಾರ್ಥಗಳ ಭ್ರಾಂತಿಯುಳ್ಳವನೋ, ಅದರಂತೆ ಜಗದ್ವಿಷಯಕ ಭ್ರಾಂತಿಯುಳ್ಳವನು ಬ್ರಹ್ಮನಾಗಿದ್ದಾನೆ ಎಂಬುದು ತಪ್ಪು. ಜೀವನಂತೆ ಬ್ರಹ್ಮನಿಗೆ ಭ್ರಾಂತಿಯನ್ನು ಒಪ್ಪಿದರೆ ಜೀವನು ಹೇಗೆ ಸರ್ವಜ್ಞನಲ್ಲವೋ, ಅದರಂತೆ ಬ್ರಹ್ಮನೂ ಕೂಡ ಸರ್ವಜ್ಞನಾಗಲಾರ. ಇನ್ನು ಬ್ರಹ್ಮನು ಭ್ರಾಂತಿಯುಳ್ಳವನಲ್ಲ. ಭ್ರಾಂತಿಗೆ ಕೇವಲ ಅದಿಷ್ಠಾನನಾಗಿದ್ದಾನೆಂದು ಉತ್ತರಿಸಬೇಕು. ಹಾಗೇ ಹೇಳಿದರೆ ದೃಷ್ಟಾಂತವೇ ತಪ್ಪಾಗುತ್ತದೆ. ದೃಷ್ಟಾಂತದಲ್ಲಿ ಜೀವನು ಸ್ವಾಪ್ನಭ್ರಮೆಗೆ ಅಧಿಷ್ಠಾನನಾಗುವುದಾದರೆ ಸ್ವಪ್ನದಲ್ಲಿ ತೋರುವ ಎಲ್ಲ ಪದಾರ್ಥಗಳಲ್ಲೂ ಕೂಡ 'ಅಹಂ' ಎಂಬ ಬುದ್ಧಿಯು ಜೀವನಿಗೆ ಬರಬೇಕಾಗುತ್ತದೆ. ಮತ್ತು 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಸೂತ್ರದಲ್ಲಿ ವಿಚಿತ್ರಶಕ್ತಿಯನ್ನು ಹೇಳಿದ್ದೂ ಕೂಡ ತಪ್ಪಾಗುತ್ತದೆ.

ಬ್ರಹ್ಮನು ಭ್ರಾಂತಿಯುಳ್ಳವನೂ ಅಲ್ಲ, ಭ್ರಾಂತಿಗೆ ಅಧಿಷ್ಠಾನನೂ ಅಲ್ಲ. ಮತ್ತೊಬ್ಬರಿಗೆ ಭ್ರಾಂತಿಯನ್ನು ತಂದೊಡುತ್ತಾನೆಎಂದುಅದ್ವೈತಿಗಳುಸಮರ್ಥನೆಮಾಡುವುದೂಕೂಡತಪ್ಪು.ಸ್ವಪ್ನವನ್ನುಕಾಣುವವನುಮತ್ತೊಬ್ಬನಿಗೆ ಭ್ರಾಂತಿ ಬರಿಸಲು ಸಾಧ್ಯವೇ ಇಲ್ಲ. ಮತ್ತು ಸ್ವಾಪ್ನಸೃಷ್ಟಿಯಲ್ಲಿ 'ನ ತತ್ರ ರಥಃ' ಎಂಬ ಶ್ರುತ್ಯುದಾಹರಣೆಯನ್ನೂ ಕೂಡ ನೀಡಿದ್ದು ತಪ್ಪಾಗುತ್ತದೆ. ಏಕೆಂದರೆ ಸ್ವಪ್ನಪದಾರ್ಥಗಳನ್ನು ಸೃಷ್ಟಿ ಮಾಡುವವನು ಜೀವನೋ, ಈಶನೋ? ಜೀವನೆಂದರೆ 'ಸಹಿ ಕರ್ತಾ' ಇತ್ಯಾದಿ ಶ್ರುತಿ ವಿರೋಧ ಬರುತ್ತದೆ. ಈಶನೆಂದರೆ ಗಗನಾದಿಗಳಂತೆ ಸ್ವಾಪ್ನಪದಾರ್ಥವೂ ಕೂಡ ವ್ಯಾವಹಾರಿಕವಾಗುತ್ತದೆ. ಏಕೆಂದರೆ ಈಶ್ವರನಿರ್ಮಿತವಾದ ಪದಾರ್ಥಗಳೆಲ್ಲವೂ ವ್ಯಾವಹಾರಿಕವಾಗುತ್ತದೆಂದು ಅದ್ವೈತಿಗಳಾದ ನೀವೇ ಒಪ್ಪಿರುತ್ತೀರಿ. ಆದ್ದರಿಂದ ಅದ್ವೈತಿಗಳ ಅಭಿಪ್ರಾಯ ಅಸಾಧುವಾಗಿದೆ.

# ನ ಪ್ರಯೋಜನಾಧಿಕರಣ

(೨-೧-೯)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

# ನ ಪ್ರಯೋಜನಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – न प्रयोजनवत्त्वात् ।। ।।**

ಈಶ್ವರನು ಜಗತ್ತನ್ನು ಕೇವಲ ಲೀಲೆಯಿಂದಷ್ಟೇ ಸೃಷ್ಟಿ ಮಾಡುತ್ತಿದ್ದಾನೆ. ಹೊರತು ಯಾವುದೇ ಪ್ರಯೋಜನಗಳು ಇರುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** ईश्वरस्य सृष्ट्यादौ प्रवृत्तिर्न स्वप्रयोजनोद्देशेन । कुतः? प्रयोजनवत्त्वात् । पूर्णानन्दत्वेन प्राप्त-प्राप्तव्यत्वादित्यर्थः ।।१।।

ಅರ್ಥ -- ಈಶ್ವರನಿಗೆ ಸೃಷ್ಟ್ಯಾದಿಗಳ ಪ್ರವೃತ್ತಿಯಿಂದ ಯಾವುದೇ ವೈಯಕ್ತಿಕವಾದ ಪ್ರಯೋಜನಗಳು ಇರುವುದಿಲ್ಲ. ಏಕೆಂದರೆ ನ ಪ್ರಯೋಜನವತ್ವಾತ್ = ಪೂರ್ಣಾನಂದ ಸ್ವರೂಪನಾದ ಪರಮಾತ್ಮನು ಹೊಂದಬೇಕಾದ್ದನ್ನೆಲ್ಲವನ್ನು ಹೊಂದಿದ್ದಾನೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – यत्प्रयोजनार्थं सृष्ट्यादिः तदूनत्वादपूर्णता इति ।**

ಅನುವಾದ - ಯಾವ ಪ್ರಯೋಜನಕ್ಕೋಸ್ಕರ ಭಗವಂತನು ಸೃಷ್ಟ್ಯಾದಿವ್ಯಾಪಾರಗಳಲ್ಲಿ ತೊಡಗುತ್ತಾನೋ, ಅಂಥ ಸೃಷ್ಟ್ಯಾದಿಗಳಿಂದ ಯಾವ ಪ್ರಯೋಜನವೂ ದೊರೆಯುತ್ತಿಲ್ಲ. ಆದ್ದರಿಂದ ಅಪೂರ್ಣನಾಗಿದ್ದಾನೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಈಶ್ವರನ ಜಗತ್ಕರ್ತೃತ್ವವಿಷಯದಲ್ಲಿ ನಿಷ್ಫಲತ್ವ ಮೊದಲಾದ ಯುಕ್ತಿವಿರೋಧವನ್ನು ಪರಿಹರಿಸುತ್ತಿದ್ದಾರೆ. ಮೊದಲು ಯುಕ್ತಿಬದ್ಧವಾಗಿ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ. ಯತ್ = ಯಾವ, ಪ್ರಯೋಜನಾರ್ಥಂ = ಪ್ರಯೋಜನಕ್ಕಾಗಿ, ಸೃಷ್ಟ್ಯಾದಿಃ = ಸೃಷ್ಟ್ಯಾದಿಗಳನ್ನು ಮಾಡುತ್ತಾನೊ, ತದೂನತ್ವಾತ್ = ಅದರಿಂದ ಯಾವುದೇ ಪ್ರಯೋಜನವಿಲ್ಲದ ಕಾರಣ, ಅಪೂರ್ಣತಾ = ಪರಮಾತ್ಮನಿಗೆ ಅಪೂರ್ಣತ್ವ ಬರುವುದಿಲ್ಲ.

**ब्रह्मसूत्रभाष्यम् – अत आह – ।। न प्रयोजनवत्त्वात् ।।१।।**

**'अथैष एव परम आनन्दः' (बृ.६.३.३३.) इत्यादिना कृतकृत्यत्वान्न प्रयोजनाय सृष्टिः ।।१।।**

ಅನುವಾದ - ಮೇಲಿನ ಆಕ್ಷೇಪಕ್ಕೆ ಸೂತ್ರವು ಉತ್ತರ ನೀಡುತ್ತಿದೆ 'ಅಥೈಷ ಏವ ಪರಮಾನಂದಃ' ಇತ್ಯಾದಿಯಾಗಿ ಬೃಹದಾರಣ್ಯಕೋಪನಿಷತ್ತು ಪರಮಾತ್ಮನಿಗೆ ಪರಮಾನಂದ-ಪೂರ್ಣತ್ವವನ್ನು ಹೇಳುತ್ತಿದೆ. ಕೃತಕೃತ್ಯನಾದ ಪರಮಾತ್ಮನಿಗೆ ಸೃಷ್ಟಿಯ ವ್ಯಾಪಾರದಿಂದ ಯಾವ ಪ್ರಯೋಜನವೂ ಆಗಬೇಕಾಗಿಲ್ಲ.

ಪ್ರತಿಪದಾರ್ಥ -- ಮೇಲಿನ ಆಕ್ಷೇಪಕ್ಕೆ ಉತ್ತರವನ್ನು ಮುಂದಿನ ಸೂತ್ರವು ನೀಡುತ್ತಿದೆ. ಅತಃ ಆಹ = ಆಶಂಕೆಗೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಅಥೈಷ ಏವ = ಇವನೇ, ಪರಮಾನಂದಃ = ಪರಮಾನಂದಪೂರ್ಣನು, ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ, ಕೃತಕೃತ್ಯತ್ವಾತ್ = ಎಲ್ಲಾ ಪ್ರಯೋಜನಗಳನ್ನು ಪಡೆದಿರುವುದರಿಂದ, ಪ್ರಯೋಜನಾಯ = ಮತ್ತೊಂದು ಪ್ರಯೋಜನಕ್ಕೋಸ್ಕರ, ನ ಸೃಷ್ಟಿಃ = ಭಗವಂತನ ಸೃಷ್ಟಿಯು ಇರುವುದಿಲ್ಲ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**अत्रेश्वरस्य जगत्कर्तृत्वे निष्फलत्वादियुक्तिविरोधपरिहारादस्ति शास्त्रादिसङ्गतिः। जगत्कर्तेश्वर इत्यभिहितम् । तस्य च युक्तिविरुद्धत्वे लक्षणासम्भवप्रसङ्गादसौ निराकरणीयः । जन्मादिकर्तृत्वं विषयः । ईश्वरस्य युक्तमयुक्तं वेति संशयः । उक्तरीतिरफलत्वं च सन्देहबीजम् ।**

ಈ ಅಧಿಕರಣದಲ್ಲಿ ಈಶ್ವರನ ಜಗತ್‌ಕರ್ತೃತ್ವ ವಿಷಯದಲ್ಲಿ ನಿಷ್ಫಲತ್ವ ಮೊದಲಾದ ಯುಕ್ತಿ ವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳನ್ನು ತಿಳಿಯಬೇಕು. ಈಶ್ವರನೇ ಜಗತ್‌ಕರ್ತೃ ಎಂದು ಹೇಳಲಾಗಿದೆ. ಇದು ಯುಕ್ತಿವಿರುದ್ಧವಾದರೆ ಜಗತ್‌ಕರ್ತೃತ್ವವು ಈಶ್ವರನ ಲಕ್ಷಣವೇ ಅಸಂಭಾವಿತವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಯುಕ್ತಿವಿರೋಧವನ್ನು ಪರಿಹಾರ ಮಾಡಲೇಬೇಕು. ಆದ್ದರಿಂದ ಜನ್ಮಾದಿಕರ್ತೃತ್ವವು ಅಧಿಕರಣದ ವಿಷಯ. ಈಶ್ವರನಿಗೆ ಇದು ಯುಕ್ತವೋ ಅಯುಕ್ತವೋ ? ಎಂಬುದು ಸಂಶಯ. ಉಕ್ತರೀತಿ ಹಾಗೂ ಅಫಲತ್ವಗಳು ಸಂದೇಹಕ್ಕೆ ಕಾರಣ.

ವಿವರಣೆ - ಜನ್ಮಾಧಿಕರಣದಲ್ಲಿ ಈಶ್ವರನೇ ಜಗತ್‌ಕರ್ತೃ ಎಂದು ಸಮರ್ಥಿಸಲಾಗಿದೆ. ಈ ಸೃಷ್ಟಿಕರ್ತೃತ್ವಲಕ್ಷಣವು ಈಶ್ವರನಲ್ಲಿ ಕೂಡಬೇಕೆಂದರೆ ಇದರ ಮೇಲೆ ಬರುವ ಯುಕ್ತಿ ವಿರೋಧವನ್ನು ಪರಿಹಾರ ಮಾಡಬೇಕು. ಭಗವಂತನು ಸಮಸ್ತ ಜಗತ್ತನ್ನು ಸೃಷ್ಟಿ ಮಾಡುವುದರಿಂದ ಅವನಿಗೆ ಯಾವುದೇ ಪ್ರಯೋಜನವಿಲ್ಲ. ಆದ್ದರಿಂದ ಪ್ರಯೋಜನವಿಲ್ಲದಿದ್ದರೂ ಸೃಷ್ಟಿ ಕ್ರಿಯೆಯನ್ನು ಮಾಡುವವನಾದರೆ ಕ್ರಿಯೆಯು ನಿಷ್ಫಲವಾಗುತ್ತದೆ ಎಂಬ ಯುಕ್ತಿಯ ವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸುತ್ತಿದ್ದಾರೆ. ಒಂದು ವೇಳೆ ವಿಷ್ಣುವಿಗೆ ಪ್ರಯೋಜನವಿದೆ ಎಂದಾದಲ್ಲಿ ಅಪೂರ್ಣನಾಗುವ ಪರಿಸ್ಥಿತಿ ಬರುತ್ತದೆ. ಈ ಯುಕ್ತಿಯನ್ನು ಪರಿಹಾರ ಮಾಡುವುದಕ್ಕಾಗಿ ನ ಪ್ರಯೋಜನತ್ವಾಧಿಕರಣವು ಹೊರಟಿದೆ. ಹಿಂದಿನ ಅಧಿಕರಣದಲ್ಲಿ ಜಗತ್‌ಕರ್ತೃತ್ವವನ್ನು ಪ್ರಸ್ತಾಪ ಮಾಡಲಾಯಿತು. ಅದರ ಮೇಲೆ ಅಧಿಕ ಶಂಕೆಯನ್ನು ಮಾಡುತ್ತಿರುವುದರಿಂದ ಇದಕ್ಕೆ ಅನಂತರ್ಯಸಂಗತಿಯ ಇರುತ್ತದೆ ಎಂದು ತಿಳಿಯಬೇಕು.

**तत्वप्रकाशिका – सयुक्तिकं पूर्वपक्षयति – यदिति ।। न विष्णोः स्रष्टृत्वादि युक्तम् । तथा हि । किमसौ प्रयोजनमपेक्ष्य सृष्ट्यादिकं करोति प्रयोजनमनपेक्ष्यैव वा । नोभयथापि सर्वकर्तृत्वम् ।**

ಯುಕ್ತಿಬದ್ಧವಾದ ಪೂರ್ವಪಕ್ಷವನ್ನು 'ಯತ್' ಇತ್ಯಾದಿ ಭಾಷ್ಯದಿಂದ ಸಮರ್ಥಿಸುತ್ತಿದ್ದಾರೆ. ವಿಷ್ಣುವಿಗೆ ಜಗತ್‌ಸೃಷ್ಟ್ಯಾದಿಗಳು ಯುಕ್ತವಾಗುವುದಿಲ್ಲ. ಅದು ಹೀಗೆ - ಮಹಾವಿಷ್ಣುವು ಸೃಷ್ಟಿಯನ್ನು ಮಾಡುವಾಗ ಏನಾದರೂ ಪ್ರಯೋಜನವನ್ನು ಅಪೇಕ್ಷಿಸಿ ಮಾಡುತ್ತಾನೋ ಅಥವಾ ಪ್ರಯೋಜನವನ್ನು ಅಪೇಕ್ಷೇ ಪಡೆದೆ ಮಾಡುತ್ತಾನೋ ? ಎರಡು ಪಕ್ಷಗಳನ್ನು ಒಪ್ಪಿದರೂ ಕೂಡ ಸರ್ವಕರ್ತೃತ್ವವು ಯುಕ್ತವಾಗುವುದಿಲ್ಲ. ಪ್ರಯೋಜನವನ್ನು ಅಪೇಕ್ಷಿಸುವುದಾದರೆ ಸೃಷ್ಟ್ಯಾದಿಗಳ ಮೊದಲು ಅಪೂರ್ಣನಾಗುತ್ತಾನೆ. ಅಪೂರ್ಣನಾದ ವ್ಯಕ್ತಿಯಲ್ಲಿ ಸರ್ವಕರ್ತೃತ್ವವು ಯಜ್ಞದತ್ತಾದಿಗಳಂತೆ ಯುಕ್ತವಾಗುವುದಿಲ್ಲ. ಪ್ರಯೋಜವನ್ನು ಅಪೇಕ್ಷೆ ಪಡದೆ ಪ್ರವೃತ್ತಿ ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಎರಡು ಪ್ರಕಾರಗಳಿಂದಲೂ ಕೂಡ ವಿಷ್ಣುವಿಗೆ ಸರ್ವಕರ್ತೃತ್ವಾದಿಗಳು ಅನುಪಪನ್ನವಾಗುತ್ತವೆ. ಬೇರೆ ಪ್ರಕಾರವಂತು ಇರುವುದೇ ಇಲ್ಲ. ಆದ್ದರಿಂದ ಜನ್ಮಾದಿಕಾರಣತ್ವವು ವಿಷ್ಣುವಿಗೆ ಅಯುಕ್ತವಾಗುತ್ತದೆ.

**तत्वप्रकाशिका – प्रयोजनापेक्षितत्वे सृष्ट्यादेः पूर्वमपूर्णत्वप्रसङ्गात् । अपूर्णस्य च न सर्वकर्तृत्वं यज्ञदत्तवत् । प्रयोजनानुद्देशेन प्रवृत्तिरेव न दृष्टा कुतः सर्वकर्तृत्वम्। अतः प्रकाशद्वयेनापि विष्णोः सर्वकर्तृत्वाद्यनुपपत्तेः विधान्तरस्य चाभावादयुक्तं जन्मादिकारणत्वलक्षणमिति भावः । सिद्धान्तयत्सूत्रमवतार्य व्याचष्टे – अत इति।। युक्तमेव विष्णोः सर्वकर्तृत्वादि । न चोक्तदोषः । तस्य पूर्णानन्दत्वेन प्राप्तप्राप्तव्यत्वात् फलानुद्देशेन प्रवृत्त्यभ्युपगमादित्यर्थः।।**

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ 'ಅಥ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ವಿಷ್ಣುವಿಗೆ ಸರ್ವಕರ್ತೃತ್ವಾದಿಗಳನ್ನು ಹೇಳಿದ್ದು ಯುಕ್ತವೇ ಆಗಿದೆ. ಹಿಂದೆ ಹೇಳಿದ ಯಾವುದೇ ದೋಷಕ್ಕೆ ಆಸ್ಪದವಿಲ್ಲ. ಏಕೆಂದರೆ ಮಹಾವಿಷ್ಣುವು ಪೂರ್ಣಾನಂದಭರಿತನಾದ್ದರಿಂದ ಪಡೆಯಬೇಕಾದ ಎಲ್ಲಾ ಪ್ರಯೋಜನಗಳನ್ನು ಈಗಾಗಲೇ ಹೊಂದಿದ್ದಾನೆ. ಆದ್ದರಿಂದ ಫಲವನ್ನು ಉದ್ದೇಶಿಸದೆ ಪ್ರವೃತ್ತಿಯನ್ನು ಮಾಡುತ್ತಾನೆಂದು ಅಂಗೀಕರಿಸುತ್ತೇವೆ ಎಂಬುದು ಸೂತ್ರದ ಅಭಿಪ್ರಾಯ.

## ಬ್ರಹ್ಮಸೂತ್ರ

**सूत्रम् – लोकवत्तु लीलाकैवल्यम् ।।**

ಮತ್ತನಾದ ವ್ಯಕ್ತಿಯು ಏನೂ ಪ್ರಯೋಜನವಿಲ್ಲದೆ ನರ್ತನ ಮಾಡುತ್ತಾನೆ. ಅದರಂತೆ ಈಶ್ವರನೂ ಕೂಡ ಕೇವಲ ಕ್ರೀಡೆಯಿಂದ ಸೃಷ್ಟ್ಯಾದಿ ಕ್ರೀಡೆಗಳಲ್ಲಿ ತೊಡಗಿದ್ದಾನೆ.

## ಸೂತ್ರದೀಪಿಕಾ

**सूत्रदीपिका –** तुशब्द एवार्थे । लोकवत् लोके मत्तादिप्रवृत्तेरिवेश्वर प्रवृत्तेः । लीलाकैवल्यं केवललीलारूपत्वमेव न स्वप्रयाजनोद्देश्यत्वमित्यर्थः ।।२।।

ಅರ್ಥ -- ತು ಶಬ್ದವು ಅವಧಾರಣಾರ್ಥದಲ್ಲಿದೆ. ಲೋಕವತ್ = ಲೋಕದಲ್ಲಿ ಉನ್ಮತ್ತನಾದ ವ್ಯಕ್ತಿಯ ಪ್ರವೃತ್ತಿಯು ಯಾವುದೇ ಪ್ರಯೋಜನವಿಲ್ಲದಿರುವಂತೆ ಈಶ್ವರನ ಪ್ರವೃತ್ತಿಯೂ ಕೂಡ ಲೀಲಾಕೈವಲ್ಯಂ = ಕೇವಲ ಲೀಲೆಗೋಸ್ಕರವಷ್ಟೇ ಇರುತ್ತದೆ. ಇದರಿಂದ ಯಾವುದೇ ಪ್ರಯೋಜನಗಳಿರುವುದಿಲ್ಲ.

॥ ಸೂತ್ರದೀಪಿಕೆಯಲ್ಲಿ ನ ಪ್ರಯೋಜನಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

**भाष्यम् – किन्तु –**

**।। लोकवत्तु लीलाकैवल्यम् ।।२।।**

**यथा लोके मत्तस्य सुखोद्रेकादेव नृत्तगानादिलीला, न तु प्रयोजनापेक्षया, एवमेवेश्वरस्य ।**

ಅನುವಾದ - ಲೋಕದಲ್ಲಿ ಉನ್ಮತ್ತನು ಸುಖೋದ್ರೇಕದಿಂದ ನರ್ತನ ಮಾಡುತ್ತಾನೆ. ಗಾನ ಮಾಡುತ್ತಾನೆ. ಇದರಿಂದ ಅವನಿಗೆ ಯಾವ ಪ್ರಯೋಜನವು ಇರುವುದಿಲ್ಲ. ಅದರಂತೆ ಪರಮಾತ್ಮನೂ ಕೂಡ ಸುಖದ ಅತಿಶಯದಿಂದ ಸೃಷ್ಟ್ಯಾದಿವ್ಯಾಪಾರಗಳಲ್ಲಿ ತೊಡಗುತ್ತಾನೆ.

ಪ್ರತಿಪದಾರ್ಥ -- ಪ್ರಯೋಜನವಿಲ್ಲದೆ ಯಾರೂ ಕೂಡ ಮಹತ್ಕಾರ್ಯಗಳಲ್ಲಿ ತೊಡಗುವುದಿಲ್ಲ. ಈಶ್ವರನಲ್ಲಿಯೂ ಕೂಡ ಪ್ರಯೋಜನವಿಲ್ಲದೆ ಪ್ರವೃತ್ತಿಯು ಕೂಡುವುದಿಲ್ಲ. ಈ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ. ಯಥಾ = ಯಾವರೀತಿಯಾಗಿ, ಲೋಕೇ = ಪ್ರಪಂಚದಲ್ಲಿ, ಮತ್ತಸ್ಯ = ಉನ್ಮತ್ತನಾದವನಿಗೆ, ನೃತ್ತಗಾನಾದಿಲೀಲಾ = ನರ್ತನ ಮಾಡುವಿಕೆ, ಗಾನಮಾಡುವಿಕೆ ಮೊದಲಾದ ಚೇಷ್ಟೆಗಳು, ಸುಖೋದ್ರೇಕಾದೇವ = ಸುಖದ ಉದ್ರೇಕದಿಂದ ಕಂಡಿದೆಯೊ, ಏವಮೇವ = ಅದರಂತೆ, ಈಶ್ವರಸ್ಯ = ಈಶ್ವರನಲ್ಲಿಯೂ ಸುಖೋದ್ರೇಕದಿಂದಲೇ ಪ್ರವೃತ್ತಿ ಇರುತ್ತದೆ. ಪ್ರಯೋಜನಾಪೇಕ್ಷಯಾ = ಮತ್ತೊಂದು ಪ್ರಯೋಜನದ ಅಪೇಕ್ಷೆಯಿಂದ, ನತು = ಇರುವುದೇ ಇಲ್ಲ.

**भाष्यम् – नारायणसंहितायां च –**

**'सृष्ट्यादिकं हरिर्नैव प्रयोजनमपेक्ष्य तु ।**
**कुरुते केवलानन्दाद् यथा मत्तस्य नर्तनम् ।।**
**पूर्णानन्दस्य तस्येह प्रयोजनमतिः कुतः ।**
**मुक्ता अप्याप्तकामाः स्युः किमु तस्याखिलात्मनः ।।' इति ।**

ಅನುವಾದ - ಶ್ರೀಹರಿಯು ಪ್ರಯೋಜನವನ್ನು ವಿವಕ್ಷಿಸಿ ಸೃಷ್ಟ್ಯಾದಿಕ್ರಿಯೆಗಳನ್ನು ಮಾಡುತ್ತಿಲ್ಲ. ಯಾವರೀತಿಯಾಗಿ ಉನ್ಮತ್ತನು ಆನಂದಾತಿಶಯದಿಂದಲೇ ನರ್ತನಾದಿಗಳನ್ನು ಮಾಡುತ್ತಾನೊ ಅದೇ ರೀತಿಯಾಗಿ ಶ್ರೀಹರಿಯು ಕೂಡ ಕೇವಲ ಆನಂದಾತಿಶಯದಿಂದ ಸೃಷ್ಟ್ಯಾದಿವಿಷಯದಲ್ಲಿ ತೊಡಗಿದ್ದಾನೆ. ಆನಂದಪೂರ್ಣನಾದ ಪರಮಾತ್ಮನಿಗೆ ಮತ್ತೊಂದು ಪ್ರಯೋಜನವು ಏಕೆ ಬೇಕು. ಅವನ ಅನುಗ್ರಹದಿಂದ ಮುಕ್ತರೂ ಕೂಡ ಆಪ್ತಕಾಮರಾಗುತ್ತಾರೆ. ಹೀಗಿರುವಾಗ ಪರಮಾತ್ಮನು ಆಪ್ತಕಾಮನೆಂದು ಪ್ರತ್ಯೇಕವಾಗಿ ಹೇಳಬೇಕೇನು?

ಪ್ರತಿಪದಾರ್ಥ -- ಈ ವಿಷಯದಲ್ಲಿ ಸ್ಮೃತಿಪ್ರಮಾಣವಿದೆ. ಹರಿಃ = ಶ್ರೀಹರಿಯು ಸೃಷ್ಟ್ಯಾದಿಕಂ = ಜಗತ್‌ಸೃಷ್ಟಿ ಮೊದಲಾದ ವ್ಯಾಪಾರಗಳನ್ನು, ಪ್ರಯೋಜನಮ್ ಅಪೇಕ್ಷ್ಯ = ಮತ್ತೊಂದು ಪ್ರಯೋಜನದ ಅಪೇಕ್ಷೆಯಿಂದ, ನ ತು = ಸರ್ವಥಾ ಮಾಡಲಾರ. ಯಥಾ = ಯಾವರೀತಿಯಾಗಿ, ಮತ್ತಸ್ಯ = ಉನ್ಮತ್ತನ, ನರ್ತನಮ್ = ನರ್ತನವು, ಕೇವಲಾನಂದಾತ್ = ಆನಂದ ಮಾತ್ರದಿಂದಲೇ ಕುರುತೇ = ಮಾಡಲ್ಪಡುತ್ತದೋ, ಅದೇ ರೀತಿಯಾಗಿ ಶ್ರೀಹರಿಯಲ್ಲಿ ತಿಳಿಯಬೇಕು.

ಪೂರ್ಣಾನಂದಸ್ಯ = ಪೂರ್ಣಾನಂದ ಸ್ವರೂಪನಾದ, ತಸ್ಯ = ಪರಮಾತ್ಮನಿಗೆ, ಪ್ರಯೋಜನಮತಿಃ = ಪ್ರಯೋಜನದಲ್ಲಿ ಇಚ್ಛೆ ಇರುವಿಕೆಯು, ಕುತಃ = ಹೇಗೆ ಸಾಧ್ಯ ? ಮುಕ್ತಾ ಅಪಿ = ಮುಕ್ತಜೀವರು ಕೂಡ, ಆಪ್ತಕಾಮಾಃ = ಯಾವ ಪರಮಾತ್ಮನಿಂದ ತಮ್ಮ ಇಚ್ಛೆಗಳನ್ನು ಪೂರೈಸಿಕೊಳ್ಳುತ್ತಾರೆ, ತಸ್ಯ = ಅಂಥ, ಅಖಿಲಾತ್ಮನಃ = ಎಲ್ಲರಿಗೂ

ನಿಯಾಮಕನಾದ ಪರಮಾತ್ಮನಿಗೆ, ಕಿಮು = ಆಪ್ತಕಾಮತ್ವವನ್ನು ಪ್ರತ್ಯೇಕವಾಗಿ ಹೇಳಬೇಕೇನು?

**भाष्यम् – 'देवस्यैष स्वभावोऽयमाप्तकामस्य का स्पृहा' (मां २.१)**

**इति च श्रुतिः ।।२।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये न प्रयोजनाधिकरणम् ।। ९ ।।**

ಅನುವಾದ - ಭಗವಂತನ ಸೃಷ್ಟಿ ಪ್ರಕ್ರಿಯೆಯು ಸ್ವಾಭಾವಿಕವಾಗಿದೆ. ಅವನು ಆಪ್ತಕಾಮನು ಪರಮಾತ್ಮನಿಗೆ ಜಗತ್ತಿನ ಸೃಷ್ಟಿವ್ಯಾಪಾರದಿಂದ ಯಾವ ಅಪೇಕ್ಷೆ ಇರಲು ಸಾಧ್ಯ?

ಪ್ರತಿಪದಾರ್ಥ -- ಸೂತ್ರದಲ್ಲಿರುವ ಲೀಲಾಶಬ್ದದ ಅರ್ಥವನ್ನು ಸ್ಪಷ್ಟಪಡಿಸಲು ಮಾಂಡೂಕಶ್ರುತಿಯನ್ನು ಉದಾಹರಿಸುತ್ತಿದ್ದಾರೆ - ದೇವಸ್ಯ = ಕ್ರೀಡಾದಿಗುಣವಿಶಿಷ್ಟನಾದ ಪರಮಾತ್ಮನಿಗೆ, ಏಷಃ = ಪ್ರಯೋಜನವಿಲ್ಲದೆ ಸೃಷ್ಟಿಮಾಡುವ ವ್ಯಾಪಾರವು, ಸ್ವಭಾವಃ = ಸ್ವರೂಪಭೂತವಾಗಿದೆ. ಆಪ್ತಕಾಮಸ್ಯ = ಎಲ್ಲಾ ಬಗೆಯ ಇಚ್ಛೆಗಳನ್ನು ಹೊಂದಿದವನಿಗೆ, ಕಾ ಸ್ಪೃಹಾ = ಯಾವ ಇಚ್ಛೆ ಹುಟ್ಟಲು ಸಾಧ್ಯ? ಇತಿಚ = ಹೀಗೂ, ಶ್ರುತಿಃ = ಮಾಂಡೂಕಶ್ರುತಿಯು ಹೇಳುತ್ತಿದೆ.

ಇಲ್ಲಿಗೆ ನ ಪ್ರಯೋಜನಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – फलानुद्देशे प्रवृत्त्यनुपपत्तिरिति भावेन पृच्छति – किं त्विति।। तत्परिहाराय सूत्रमुपन्यस्य व्याचष्टे – लोकवदिति ।।**

ಈಶ್ವರನು ಯಾವುದೇ ಫಲವನ್ನು ಅಪೇಕ್ಷಿಸದೆ ಸೃಷ್ಟಿಕ್ರಿಯೆಯಲ್ಲಿ ಪ್ರವೃತ್ತಿ ಮಾಡುತ್ತಾನೆಂದು ಹಿಂದಿನ ಸೂತ್ರದಲ್ಲಿ ಹೇಳಲಾಯಿತು. ಇದು ಅನುಪಪನ್ನವಾಗಿದೆ ಎಂಬ ಅಭಿಪ್ರಾಯದಿಂದ ಕಿಂತು ಇತ್ಯಾದಿಯಾಗಿ ಪ್ರಶ್ನಿಸುತ್ತಿದ್ದಾರೆ. ಈ ಪ್ರಶ್ನೆಯ ಪರಿಹಾರಕ್ಕೋಸ್ಕರ ಸೂತ್ರವನ್ನು 'ಲೋಕವತ್ತು' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – प्रयोजनानुद्देशे कीदृशी प्रवृत्तिरिति चेत्पृच्छसि तर्हि तस्याः केवललीलात्वं ब्रूमः । न हि लीला प्रयोजनान्तराय भवति । मत्तादिलीलायाः फलानुद्देशेन सुखोद्रेकादेव दर्शनात् । अतः पूर्णानन्दोऽपि भगवान् लोकानुग्रहाय सृष्ट्यादिक्रीडां करोतीति न किञ्चिदयुक्तमिति भावः ।**

ಪ್ರಯೋಜನದ ಉದ್ದೇಶ ಇಲ್ಲದಿದ್ದರೆ ಪರಮಾತ್ಮನ ಪ್ರವೃತ್ತಿಯು ಎಂಥದ್ದು ? ಎಂಬುದಾಗಿ ಪ್ರಶ್ನೆ ಮಾಡಿದರೆ ಆಗ ಕೇವಲ ಲೀಲಾರೂಪವಾಗಿದೆ ಎಂದು ನಾವು ಉತ್ತರಿಸುತ್ತೇವೆ. ಲೀಲೆಯು ಮತ್ತೊಂದು ಪ್ರಯೋಜನಕ್ಕೋಸ್ಕರ ಸರ್ವಥಾ ಇರುವುದಿಲ್ಲ. ಮತ್ತನಾದ ವ್ಯಕ್ತಿಯು ಮಾಡುವ ಪ್ರವೃತ್ತಿಗೆ ಯಾವುದೇ ಫಲದ ಉದ್ದೇಶ ಇರುವುದಿಲ್ಲ. ಕೇವಲ ಸುಖೋದ್ರೇಕದಿಂದ ಪ್ರವೃತ್ತಿಯನ್ನು ಮಾಡುವುದು ಲೋಕದಲ್ಲಿ ಕಂಡಿದೆ. ಆದ್ದರಿಂದ ಪರಮಾತ್ಮನು ಪೂರ್ಣಾನಂದ-ಭರಿತನಾದರೂ ಲೋಕದ ಅನುಗ್ರಹಕ್ಕೊಸ್ಕರ ಸೃಷ್ಟ್ಯಾದಿಕ್ರೀಡೆಯಲ್ಲಿ ತೊಡಗುತ್ತಾನೆ. ಇದರಿಂದ ಅವನಿಗೆ ಯಾವುದೇ ಪ್ರಯೋಜನವಿಲ್ಲ. ಆದ್ದರಿಂದ ನಮ್ಮ ಸಿದ್ಧಾಂತದಲ್ಲಿ ಅಯುಕ್ತವಾದದ್ದು ಸ್ವಲ್ಪವೂ ಇಲ್ಲ ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ - ಪ್ರಯೋಜನವನ್ನು ಉದ್ದೇಶವಾಗಿ ಇಟ್ಟುಕೊಳ್ಳದಿದ್ದರೂ ಬೆಂಕಿಯು ಜ್ವಲಿಸುವಂತೆ ಸ್ವಾಭಾವಿಕವಾದ ಪ್ರವೃತ್ತಿ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಪ್ರಯೋಜನವಿಲ್ಲದ ಪ್ರವೃತ್ತಿ ಜಡಪದಾರ್ಥದಲ್ಲಿ ಹೊರತು ಚೇತನನಲ್ಲಿ ಹೇಳಲು ಸಾಧ್ಯವಿಲ್ಲ. ಸುರಾಪಾನಮಾಡಿ ಮದಭರಿತನಾದ ವ್ಯಕ್ತಿಯು ನೃತ್ಯಗಾನಾದಿಗಳನ್ನು ನಿಷ್ಫವಾಗಿ ಮಾಡುವಂತೆ ಪರಮಾತ್ಮನ ಪ್ರವೃತ್ತಿಯು ನಿಷ್ಫಲವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಪರಮಾತ್ಮನು ಪ್ರೇಕ್ಷಾವಂತನಾಗಿದ್ದಾನೆ. ಪ್ರೇಕ್ಷಾವಂತನಾದವನು ಪ್ರಯೋಜನವಿಲ್ಲದೆ ಯಾವುದೇ ಪ್ರವೃತ್ತಿಯನ್ನು ಮಾಡುವುದು ಲೋಕದಲ್ಲಿ ಕಂಡಿಲ್ಲ. ಇನ್ನು ಪ್ರೇಕ್ಷಾವಂತನಾಗಿದ್ದರೂ ಕೂಡ ಕಾರುಣ್ಯದಿಂದ ನಿಷ್ಫಲವಾಗಿ ಪ್ರವೃತ್ತಿ ಮಾಡುತ್ತಾನೆಂದು ಉತ್ತರಿಸಬೇಕು. ಆದರೆ ಆ ಕಾರುಣ್ಯದಿಂದ ಸಾಧ್ಯವಾದ ಫಲವೇ ಇರುವುದಿಲ್ಲ. ದಯೆಯಿಂದಲೂ ಕೂಡ ಪ್ರವೃತ್ತಿಯು ಕೂಡುವುದಿಲ್ಲ ಎಂದು ಹೇಳಬಾರದು. ಏಕೆಂದರೆ ಅದು ಭಗವಂತನ ಸ್ವಭಾವವಾಗಿರುವುದರಿಂದ ಪ್ರಯೋಜನವಿಲ್ಲದೆ ಪ್ರವೃತ್ತಿಯು ಕೂಡುತ್ತದೆ. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – अत्रैव स्मृतिश्रुती दर्शयति – नारायणेति ।। अखिलस्वामिनस्तस्याप्तकामता किमु वक्तव्येत्यर्थः । तस्माद्विरोधाभावाद्युक्तं लक्षणमिति सिद्धम् ।। ३४ ।।**

ಪ್ರಯೋಜನಾಪೇಕ್ಷೆಯಿಲ್ಲದೆ ಸೃಷ್ಟಿಯು ಕೂಡುತ್ತದೆಂಬ ವಿಷಯದಲ್ಲಿ ಸ್ಮೃತಿ ಹಾಗೂ ಶ್ರುತಿಗಳನ್ನು ಭಾಷ್ಯದಲ್ಲಿ 'ನಾರಾಯಣ' ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ.

ನ ಪ್ರಯೋಜನಾಧಿಕರಣ (೨-೧-೯)

ಸಕಲಕ್ಕೂ ಸ್ವಾಮಿಯಾದ ಭಗವಂತನು ಆಪ್ತಕಾಮನಾಗಿದ್ದಾನೆಂದು ಪ್ರತ್ಯೇಕವಾಗಿ ಹೇಳಬೇಕೇನು ? ಆದ್ದರಿಂದ ಯುಕ್ತಿವಿರೋಧವು ಇರುವುದಿಲ್ಲ. ಭಗವಂತನ ಜಗಜ್ಜನ್ಮಾದಿ-ಕಾರಣತ್ವಲಕ್ಷಣವು ಸಿದ್ಧವಾಗುತ್ತದೆ.

ವಿವರಣೆ - ಲೋಕದಲ್ಲಿ ಯಾರು ಕೃಪಾಳುಗಳೋ ಅವರು ಮತ್ತೊಬ್ಬರ ಪ್ರಯೋಜನ ಉದ್ದೇಶದಿಂದಲೇ ಪ್ರವೃತ್ತಿಯನ್ನು ಮಾಡುತ್ತಾರೆಂದು ಕಂಡಿದೆ. ಪರಮಕೃಪಾಳುವಾದ ಈಶ್ವರನು ಆಪ್ತಕಾಮನಾಗಿದ್ದಾನೆ ಇಂಥವನು ತನಗೇನು ಪ್ರಯೋಜನವಿಲ್ಲದೆ ಕೇವಲ ಪರಪ್ರಯೋಜನದ ಉದ್ದೇಶದಿಂದ ಪ್ರವೃತ್ತಿ ಮಾಡುತ್ತಾನೆಂದು ಪ್ರತ್ಯೇಕ ಹೇಳಬೇಕೆಂಬುದು ಸಿದ್ಧಾಂತದ ಅಭಿಪ್ರಾಯ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ನ ಪ್ರಯೋಜನಾಧಿಕರಣ ಮುಗಿಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## न प्रयोजनाधिकरणम्

ಫಲಮುಖ ವಿರೋಧ ಪರಿಹಾರಕ್ಕಾಗಿ 'ನ ಪ್ರಯೋಜನತ್ವಾಧಿಕರಣ'

**न प्रयोजनवत्त्वात् ।। पूर्वत्र हेतुमुखयुक्तिविरोधोऽपास्तोऽत्रतु फलमुखदृष्टयुक्तिविरोधोऽपास्यत इति सङ्गतिरधिकरणोपाधिरगतार्थताच ।**

ಹಿಂದಿನ ಅಧಿಕರಣದಲ್ಲಿ ಹೇತುಮುಖವಾದ ಯುಕ್ತಿವಿರೋಧವನ್ನು ಪರಿಹರಿಸಿದ್ದಾಯಿತು. ಫಲಮುಖವಾದ ದೃಷ್ಟಯುಕ್ತಿವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಸಂಗತಿ, ಅಧಿಕರಣದ ಉಪಾಧಿ ಮತ್ತು ಅಗತಾರ್ಥತ್ವಗಳನ್ನು ಸಮರ್ಥಿಸಿದಂತಾಯಿತು.

**अत्र पूर्वोक्तं विष्णोः स्रष्टृत्वादिकं न युक्तमुत युक्तमिति चिन्ता । तदर्थं स्रष्टृत्वे सृष्ट्यादिसाध्यस्य फलस्य पूर्वमभावादपूर्णत्वमापतत्युत नेति । तदर्थं किं सृष्ट्यादिकं फलार्थमुत लीलारूपमिति । तदर्थं प्रेक्षावत्प्रवृत्तिः प्रयोजनोद्देशेनैवोत तदनुद्देशेनापीति। तदर्थमुद्रिक्तानन्दस्य पुंसो हासगाननृत्तादौ प्रवृत्तिर्दयालोश्च परार्था प्रवृत्तिः किं स्वप्रयोजनोद्देशेनैवोत तदनुद्देशेनापि सुखोद्रेकादिसामग्रीत इति ।**

ಈ ಅಧಿಕರಣದ ಸಂಶಯ ಪರಂಪರೆ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ವಿಷ್ಣುವಿನ ಜಗತ್‌ಕರ್ತೃತ್ವವು ಅಯುಕ್ತವಾಗುತ್ತದೋ, ಯುಕ್ತವಾಗುತ್ತವೋ ? ಎಂಬುದು ಪ್ರಧಾನ ಸಂಶಯ.

ಇದರ ಪರಿಹಾರಕ್ಕಾಗಿ ಪರಮಾತ್ಮನು ಜಗತ್‌ಸ್ರಷ್ಟ ಎಂದಾದರೆ ಸೃಷ್ಟ್ಯಾದಿಗಳಿಂದ ದೊರೆಯುವ ಫಲವನ್ನು ತಾನು ಮೊದಲು ಹೊಂದಿರುವುದಿಲ್ಲ. ಆದ್ದರಿಂದ ಅಪೂರ್ಣನಾಗುತ್ತಾನೆ ಎಂದೋ, ಅಥವಾ ಫಲವನ್ನು ಮೊದಲೇ ಹೊಂದಿರುವುದರಿಂದ ಪೂರ್ಣನಾಗಿದ್ದಾನೆ ಎಂದೋ ? ಎಂಬ ಸಂಶಯ ಪರಿಹಾರವಾಗಬೇಕು.

ಇದರ ಪರಿಹಾರಕ್ಕಾಗಿ ಸೃಷ್ಟ್ಯಾದಿಗಳ ವ್ಯಾಪಾರವು ಫಲಕ್ಕೋಸ್ಕರವೋ, ಅಥವಾ ಕೇವಲ ಲೀಲಾರೂಪವೋ ? ಎಂಬ ಸಂಶಯವು ಪರಿಹಾರವಾಗಬೇಕು.

ಇದರ ಪರಿಹಾರಕ್ಕಾಗಿ ಪ್ರೇಕ್ಷಾವಂತರ ಪ್ರವೃತ್ತಿಯು ಕೇವಲ ಪ್ರಯೋಜನೋದ್ದೇಶದಿಂದ ಇರುತ್ತದೋ? ಅಥವಾ ಪ್ರಯೋಜನೋದ್ದೇಶ ಇಲ್ಲದಿದ್ದರೂ ಉಂಟಾಗುತ್ತದೋ ? ಎಂಬ ಸಂಶಯವು ಪರಿಹಾರವಾಗಬೇಕು.

ಇದರ ಪರಿಹಾರಕ್ಕಾಗಿ ಆನಂದೋದ್ರೇಕದಲ್ಲಿರುವ ಪುರುಷನು ಹಾಸ, ಗಾನ, ನರ್ತನ ಮೊದಲಾದ ಯಾವ ಪ್ರವೃತ್ತಿಯನ್ನು ಮಾಡುತ್ತಾನೋ, ದಯಾಳುವಾದವನು ಮತ್ತೊಬ್ಬರ ಉಪಕಾರಕ್ಕೋಸ್ಕರ ಯಾವ ಪ್ರವೃತ್ತಿಯನ್ನು ಮಾಡುತ್ತಾನೋ, ಈ ಪ್ರವೃತ್ತಿಗಳು ಕೇವಲ ಸ್ವಪ್ರಯೋಜನೋದ್ದೇಶದಿಂದ ಆಗುತ್ತವೋ, ಅಥವಾ ಸ್ವಪ್ರಯೋಜನೋದ್ದೇಶವಿಲ್ಲದಿದ್ದರೂ ಸುಖೋದ್ರೇಕಾದಿ ಸಾಮಗ್ರಿಯಿಂದಲೇ ಉಂಟಾಗುತ್ತವೋ? ಎಂಬ ಕೊನೆಯ ಸಂಶಯವು ಪರಿಹಾರವಾಗಬೇಕು.

ಮುಂದಿನ ಸಂಶಯಗಳು ಪರಿಹಾರವಾಗದೇ, ಹಿಂದಿನ ಸಂಶಯಗಳು ಪರಿಹಾರವಾಗುವುದಿಲ್ಲ.

**पूर्वपक्षमाह – सयुक्तिकमित्यादिना ।। अयं भावः । न तावदीश्वरस्य प्रयोजनमुद्दिश्य प्रवृत्तिः । अपूर्णत्वापातात् । नच प्रयोजनानुद्देशेऽप्यग्नेरूर्ध्वज्वलनादाविव स्वभावादेव प्रवृत्तिः । चेतनत्वात् ।**

ಅಧಿಕರಣದ ಪೂರ್ವಪಕ್ಷವನ್ನು 'ಸಯುಕ್ತಿಕಮ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಈಶ್ವರನು ಪ್ರಯೋಜನೋದ್ದೇಶದಿಂದ ಪ್ರವೃತ್ತಿಯನ್ನು ಮಾಡಲಾರನು. ಹಾಗಾದಲ್ಲಿ ಅವನು ಅಪೂರ್ಣನಾಗಬೇಕಾಗುತ್ತದೆ. ಪ್ರಯೋಜನೋದ್ದೇಶ ಇಲ್ಲದಿದ್ದರೂ ಕೇವಲ ಸ್ವಭಾವದಿಂದಲೇ ಪ್ರವೃತ್ತಿ ಮಾಡುತ್ತಾನೆ ಎಂದೂ ಕೂಡ ಕೂಡುವುದಿಲ್ಲ. ಊರ್ಧ್ವಜ್ವಲನವು ಅಗ್ನಿಯ ಸ್ವಭಾವವೆಂದು ಹೇಗೆ ಹೇಳುತ್ತೇವೋ, ಅದರಂತೆ ಪರಮಾತ್ಮನ ಪ್ರವೃತ್ತಿಯೂ ಅವನ ಸ್ವಭಾವವಾಗಿದೆ ಎನ್ನುವುದು ತಪ್ಪು. ಏಕೆಂದರೆ ಅಗ್ನಿಯು ಜಡವಾಗಿದೆ. ಪರಮಾತ್ಮನು ಚೇತನನಾಗಿದ್ದಾನೆ.

**नच चेतनत्वे पि मत्तस्य नृत्तगानादाविव निष्फलैव प्रवृत्तिः । प्रेक्षावत्वात् ।**

ಚೇತನನಾಗಿದ್ದರೂ ಕೂಡ ಮತ್ತನಾದ ವ್ಯಕ್ತಿಯು ನರ್ತನ, ಗಾನ ಮೊದಲಾದವುಗಳಲ್ಲಿ ನಿಷ್ಫಲ ಪ್ರವೃತ್ತಿಯನ್ನು ಹೇಗೆ ಮಾಡುತ್ತಾನೊ, ಅದರಂತೆ ಪರಮಾತ್ಮನೂ ಕೂಡ ಯಾವುದೇ ಪ್ರಯೋಜನವಿಲ್ಲದೇ ಉನ್ಮತ್ತನಂತೆ ಪ್ರವೃತ್ತಿ ಮಾಡುತ್ತಾನೆ ಎಂದು ಹೇಳುವುದೂ ಕೂಡ ತಪ್ಪು. ಏಕೆಂದರೆ ಇವನು ಪ್ರೇಕ್ಷಾವಂತನಾಗಿದ್ದಾನೆ.

**नापि प्रेक्षावत्त्वेऽपि दयया प्रवृत्तिः । दयासाध्यफलाभावात् । आप्तकामत्वात्। तदनुद्देशे च प्रेक्षावत्त्वं न स्यादित्युभयथापि न निर्दोषं ब्रह्मेति ।**

ಪ್ರೇಕ್ಷಾವಂತನಾಗಿದ್ದರೂ ಕೂಡ ದಯೆಯಿಂದ ಪ್ರವೃತ್ತಿ ಮಾಡುತ್ತಾನೆ ಎಂದು ಹೇಳಬಾರದು. ದಯೆಯಿಂದ ಸಾಧ್ಯವಾದ ಯಾವುದೇ ಪ್ರಯೋಜನವೂ ಕೂಡ ಇವನಿಗೆ ಇರುವುದಿಲ್ಲ. ಏಕೆಂದರೆ ಆಪ್ತಕಾಮನಾಗಿದ್ದಾನೆ. ಅಂಥ ಪ್ರಯೋಜನದ ಉದ್ದೇಶವಿಲ್ಲದಿದ್ದರೆ ಪ್ರೇಕ್ಷಾವತ್ತ್ವವೂ ಕೂಡ ಇವನಿಗೆ ಕೂಡುವುದಿಲ್ಲ. ಹೀಗೆ ಎರಡು ರೀತಿಯಲ್ಲಿಯೂ ಕೂಡ ಬ್ರಹ್ಮನು ನಿರ್ದುಷ್ಟ ಎಂದು ನಿರ್ಣಯ-ವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**न प्रयोजनवत्त्वात् ।। ''यत्प्रयोजनार्थं सृष्ट्याद्'' इत्यादिभाष्यटीका-सूचितसङ्गत्यादिकमाह – पूर्वत्रेति ।।**

'ಯತ್ ಪ್ರಯೋಜನಾರ್ಥಂ ಸೃಷ್ಟ್ಯಾದ್' ಇತ್ಯಾದಿ ಭಾಷ್ಯ ಹಾಗೂ ಟೀಕೆಗಳಿಂದ ಸೂಚಿತವಾದ ಅಧಿಕರಣದ ಸಂಗತಿ ಮೊದಲಾದವುಗಳನ್ನು 'ಪೂರ್ವತ್ರ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**प्रकाशः – हेतुः कारणं मुखं द्वारं यस्या युक्तेरिति सा तथा । ब्रह्मैकदेशेन हेतुरुत कार्त्स्न्येनेत्येवंरूपयुक्तिः पूर्वत्र । अत्र तु सृष्टेः फलमस्त्युत नास्तीत्येवंरूपेत्यर्थः।**

ಹಿಂದಿನ ಅಧಿಕರಣದಲ್ಲಿ ಹೇತುಮುಖವಾದ ಯುಕ್ತಿವಿರೋಧವನ್ನು ಪರಿಹಾರ ಮಾಡಿದರು. 'ಹೇತುಃ ಕಾರಣಂ ಮುಖಂ ದ್ವಾರಂ ಯಸ್ಯಾ ಸಾ' ಎಂಬ ವ್ಯುತ್ಪತ್ತಿಯಂತೆ ಬ್ರಹ್ಮನ ಜಗತ್‌ಕಾರಣತ್ವದ ವಿಷಯದಲ್ಲಿ ಯಾವ ಯುಕ್ತಿವಿರೋಧವು ಪ್ರಾಪ್ತವಾಗಿತ್ತೋ, ಅದನ್ನು ಪರಿಹಾರ ಮಾಡಿದರು ಎಂದಭಿಪ್ರಾಯ. ಬ್ರಹ್ಮನು ಏಕದೇಶೇನ ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳಿದರೆ, ನಿರವಯತ್ವಶ್ರುತಿಯ ವ್ಯಾಕೋಪವೂ ಬರುತ್ತದೆ. ಬ್ರಹ್ಮನು ಸಮಗ್ರವಾಗಿ ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳಿದರೆ, ಬ್ರಹ್ಮನೇ ಇಲ್ಲದಂತಾಗುವ ಪರಿಸ್ಥಿತಿ ಬರುತ್ತದೆ. ಹೀಗೆ ಹೇತುಮುಖ ಯುಕ್ತಿವಿರೋಧವನ್ನು ಹಿಂದೆ ಹೇಳಲಾಯಿತು. ಪ್ರಕೃತ ಈ ಅಧಿಕರಣದಲ್ಲಿ ಬ್ರಹ್ಮನು ಮಾಡುವ ಜಗತ್‌ಸೃಷ್ಟಿಗೆ ಪ್ರಯೋಜನವಿದೆಯೋ, ಇಲ್ಲವೋ? ಎಂಬ ಫಲಮುಖ ಯುಕ್ತಿವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ.

**प्रकाशः – द्वितीयसूत्रसूचितामाह – किं सृष्ट्यादिकमिति ॥** ननु प्रयोजनानुद्देशेनापि जायमानायाः प्रवृत्तेर्लोके दर्शनात् ''प्रयोजनानुद्देशेन प्रवृत्तिरेव न दृष्ट'' इति टीका कथमित्यतः सुधोक्तमाह – **अयं भाव इति ॥**

'ಲೋಕವತ್ತು ಲೀಲಾಕೈವಲ್ಯಮ್' ಎಂಬ ಎರಡನೆಯ ಸೂತ್ರದಿಂದ ಸೂಚಿತವಾದ ಸಂಶಯವನ್ನು 'ಕಿಂ ಸೃಷ್ಟ್ಯಾದಿಕಮ್' ಎಂಬ ಗ್ರಂಥದಿಂಧ ತೋರಿಸಿದ್ದಾರೆ.

ಪ್ರಯೋಜನ ಉದ್ದೇಶವಿಲ್ಲದಿದ್ದರೂ ಪ್ರವೃತ್ತಿಯಾಗುವುದು ಲೋಕದಲ್ಲಿ ಕಂಡಿದೆ. ಆದ್ದರಿಂದ 'ಪ್ರಯೋಜನಾನುದ್ದೇಶೇನ ಪ್ರವೃತ್ತಿರೇವ ನ ದೃಷ್ಟಾ' ಪ್ರಯೋಜನ ಉದ್ದೇಶವಿಲ್ಲದೇ ಲೋಕದಲ್ಲಿ ಪ್ರವೃತ್ತಿಯೇ ಕಂಡಿರುವುದಿಲ್ಲ ಎಂಬ ಟೀಕಾವಾಕ್ಯವು ಹೇಗೆ ಸಾಧುವಾಗುತ್ತದೆ? ಎಂಬ ಪ್ರಶ್ನೆಗೆ ಸುಧೆಯಲ್ಲಿ ಹೇಳಿದ ಅಭಿಪ್ರಾಯವನ್ನು 'ಅಯಂ ಭಾವಃ' ಇತ್ಯಾದಿ ಗ್ರಂಥದಿಂದ ಸ್ಪಷ್ಟಪಡಿಸಿದ್ದಾರೆ.




ಹಿಂದಿನ ಅಧಿಕರಣದಲ್ಲಿ ಹೇತುಮುಖ ಯುಕ್ತಿವಿರೋಧವನ್ನು ಹೇಳಿದ್ದಾಯಿತು. ಪರಮಾತ್ಮನು ಜಗತ್ತಿಗೆ ಕಾರಣನಾಗಿದ್ದಾನೆ ಎಂಬ ವಿಷಯದಲ್ಲಿ ಬರುವ ಯುಕ್ತಿವಿರೋಧವನ್ನು ಪರಿಹರಿಸಿದ್ದಾಯಿತು. ಈ ಅಧಿಕರಣದಲ್ಲಿ ಪರಮಾತ್ಮನು ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳಿದರೆ ಇದರಿಂದ ಅವರಿಗೆ ಪ್ರಯೋಜನವಿದೆಯೋ, ಇಲ್ಲವೋ? ಎಂಬ ಫಲಮುಖವಿರೋಧವನ್ನು ಪರಿಹರಿಸುತ್ತಿದ್ದಾರೆ. ಯಾರೇ ಒಬ್ಬ ಪ್ರೇಕ್ಷಾವಂತನು ಪ್ರವೃತ್ತಿಯನ್ನು ಮಾಡಬೇಕೆಂದರೆ ಅದರಿಂದ ಪ್ರಯೋಜನವಿದ್ದೇ ಇರುತ್ತದೆ. ಪರಮಾತ್ಮನು ಈ ಜಗತ್ತಿನ ಸೃಷ್ಟಿಯನ್ನು ಮಾಡಲು ಹೊರಟಿರುವುದರಿಂದ ಅವನಿಗೆ ಇದರಿಂದ ಪ್ರಯೋಜನವಿದೇ ಎಂದೇ ಆಯಿತು. ಆದ್ದರಿಂದ ಸೃಷ್ಟ್ಯಾದಿ ವ್ಯಾಪಾರಗಳೆಲ್ಲವೂ ಕೂಡ ಕೇವಲ ಫಲಕ್ಕೋಸ್ಕರವೇ ಇರುತ್ತವೆ. ಯಾವ ಫಲವನ್ನು ಈ ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಹೊಂದುತ್ತಾನೋ, ಆ ಫಲವು ಬ್ರಹ್ಮನಿಗೆ ಮೊದಲು ಇರಲಿಲ್ಲ ಎಂಬುದು ಇದರಿಂದ ಸಿದ್ಧವಾಯಿತು. ಆದ್ದರಿಂದ ಅಪೂರ್ಣನಾದ ಭಗವಂತನಲ್ಲಿ ಜಗತ್ಸ್ರಷ್ಟೃತ್ವವೆಂಬ ಧರ್ಮವೇ ಯುಕ್ತವಾಗುವುದಿಲ್ಲ. ಇದು ಪೂರ್ವಪಕ್ಷಕಾರರ ಉದ್ದೇಶ.

ಪ್ರೇಕ್ಷಾವಂತನಾದ ಮಾತ್ರಕ್ಕೆ ಯಾವುದಾದರೂ ಪ್ರಯೋಜನವನ್ನು ಉದ್ದೇಶ ಇಟ್ಟುಕೊಂಡೇ ಪ್ರವೃತ್ತಿ ಮಾಡಬೇಕೆಂಬ ನಿಯಮವೇ ತಪ್ಪು. ಸುಖೋದ್ರೇಕಾದಿ ಸಾಮಗ್ರಿಗಳು ಇದ್ದಾಗ ಪ್ರವೃತ್ತಿಯನ್ನು ಪ್ರೇಕ್ಷಾವಂತನಾದವನೂ ಕೂಡ ಮಾಡುತ್ತಾನೆ. ಆದ್ದರಿಂದ ಸೃಷ್ಟ್ಯಾದಿವ್ಯಾಪಾರವು ಕೇವಲ ಲೀಲಾರೂಪವೆಂದೇ ಪರಿಗಣಿಸಬೇಕೇ ಹೊರತು, ಫಲಕ್ಕೋಸ್ಕರ ಎಂದು ಪರಿಗಣಿಸಬಾರದು. ಹೀಗಿರುವಾಗ ಸೃಷ್ಟ್ಯಾದಿಗಳಿಂದ ಸಾಧ್ಯವಾದ ಫಲವು ಬ್ರಹ್ಮನಲ್ಲಿ ಮೊದಲು ಇರಲಿಲ್ಲ. ಅನಂತರ ಬಂತು ಎಂಬ ಚಿಂತನೆಯೇ ಅಯುಕ್ತವಾಗುತ್ತದೆ. ಹಾಗಾಗಿ ಜಗತ್ಸ್ರಷ್ಟೃತ್ವವು ಬ್ರಹ್ಮನಲ್ಲಿ ಯುಕ್ತವಾಗುತ್ತದೆ. ಇದು ಸಿದ್ಧಾಂತದ ಪ್ರಮೇಯ.

ನ ಪ್ರಯೋಜನಾಧಿಕರಣ (2-1-9)

ಅಧಿಕರಣದ ಪೂರ್ವಪಕ್ಷ - ಈಶ್ವರನು ಪ್ರಯೋಜನದ ಉದ್ದೇಶದಿಂದ ಸೃಷ್ಟಿಪ್ರವೃತ್ತಿಯನ್ನು ಮಾಡುವುದಾದರೆ, ಅಪೂರ್ಣನಾಗಬೇಕಾಗುತ್ತದೆ. ಕೇವಲ ಸ್ವಭಾವದಿಂದಲೂ ಪ್ರವೃತ್ತಿ ಮಾಡಲು ಸಾಧ್ಯವಿಲ್ಲ. ಇವನು ಚೇತನನಾಗಿದ್ದಾನೆ. ಚೇತನನಾಗಿದ್ದರೂ ಉನ್ಮತ್ತನಾಗಿ ನಿಷ್ಫಲನಾಗಿ ಪ್ರವೃತ್ತಿಯನ್ನು ಮಾಡಲಾರನು. ಏಕೆಂದರೆ ಪ್ರೇಕ್ಷಾವಂತನಾಗಿದ್ದಾನೆ. ಪ್ರೇಕ್ಷಾವಂತನಾಗಿದ್ದರೂ ಕೇವಲ ದಯೆಯಿಂದ ಪ್ರವೃತ್ತಿ ಮಾಡಲು ಸಾಧ್ಯವಿಲ್ಲ. ಆ ದಯೆಯಿಂದ ದೊರೆಯುವ ಫಲವು ಇವನಿಗೆ ದೊರೆಯುವುದಿಲ್ಲ. ಏಕೆಂದರೆ ಅಪ್ತಕಾಮನಾಗಿದ್ದಾನೆ. ಫಲದ ಉದ್ದೇಶವೇ ಇಲ್ಲದೇ ಪ್ರವೃತ್ತಿ ಮಾಡುತ್ತಾನೆಂದು ಹೇಳಿದರೆ ಪ್ರೇಕ್ಷಾವತ್ವವೇ ಭಂಗವಾಗಬೇಕಾಗುತ್ತದೆ. ಆದ್ದರಿಂದ ಬ್ರಹ್ಮನು ನಿರ್ದುಷ್ಟನಾಗಿದ್ದಾನೆಂದು ಹೇಳಿದ್ದೇ ತಪ್ಪು.

## ಪ್ರೇಕ್ಷಾವಂತನಾದ ಪರಮಾತ್ಮನ ಪ್ರವೃತ್ತಿ ಕೇವಲ ಲೀಲೆಯಿಂದ

## तात्पर्यचन्द्रिका

**सिद्धान्तमाह – सिद्धान्तयदिति ।। अयं भावः -**

**अस्वभावप्रवृत्तौ हि प्राज्ञोऽप्याकाङ्क्षते फलम् ।**
**स्वाभाविका निमेषाद्या नह्युद्दिष्टप्रयोजनाः ।।१।।**

ಅಧಿಕರಣದ ಸಿದ್ಧಾಂತವನ್ನು ಟೀಕೆಯಲ್ಲಿ 'ಸಿದ್ಧಾಂತಯತ್' ಇತ್ಯಾದಿಯಾಗಿ ಸ್ಥಾಪನೆ ಮಾಡಿದ್ದಾರೆ. ಸಿದ್ಧಾಂತ ಭಾಗದ ಟೀಕೆಯ ಅಭಿಪ್ರಾಯ ಹೀಗಿದೆ -

ಅಸ್ವಭಾವಪ್ರವೃತ್ತೌ ಹಿ ಪ್ರಾಜ್ಞೋಽಪ್ಯಾಕಾಂಕ್ಷತೇ ಫಲಮ್ ।
ಸ್ವಾಭಾವಿಕಾ ನಿಮೇಷಾದ್ಯಾ ನಹ್ಯುದ್ದಿಷ್ಟಪ್ರಯೋಜನಾಃ ।।೧।।

ಸ್ವಾಭಾವಿಕವಲ್ಲದ ಪ್ರವೃತ್ತಿಯನ್ನು ಮಾಡುವಾಗ ಪ್ರಾಜ್ಞರಾದವರೂ ಕೂಡ ಫಲವನ್ನು ಅಪೇಕ್ಷೆ ಪಡುತ್ತಾರೆ. ಆದರೆ ಕಣ್ಣಿನ ರೆಪ್ಪೆ ಬಡಿಯುವಿಕೆ ಮೊದಲಾದ ಸ್ವಾಭಾವಿಕ ಪ್ರವೃತ್ತಿಗಳಲ್ಲಿ ಫಲದ ಅಪೇಕ್ಷೆಯನ್ನು ಪ್ರೇಕ್ಷಾವಂತರೂ ಕೂಡ ಹೊಂದಿರುವುದಿಲ್ಲ.

**स्वभावभूतात्वीशस्य क्रमात्सृष्ट्यादिकर्तृता ।**
**चूतादीनां वसन्तादौ पुष्पितत्वादिकं यथा ।।२।।**

ಸ್ವಭಾವಭೂತಾತ್ವೀಶಸ್ಯ ಕ್ರಮಾತ್ ಸೃಷ್ಟ್ಯಾದಿಕರ್ತೃತಾ ।
ಚೂತಾದೀನಾಂ ವಸಂತಾದೌ ಪುಷ್ಪಿತತ್ವಾದಿಕಂ ಯಥಾ ।।೨।।

ಮಾವಿನ ಮರ ಮೊದಲಾದವು ವಸಂತಕಾಲವು ಪ್ರಾಪ್ತವಾದಾಗ ಹೂವು, ಚಿಗುರು ಮೊದಲಾದವುಗಳನ್ನು ಸಹಜವಾಗಿ ಹೊಂದುತ್ತವೆ. ಅದರಂತೆ ಈಶ್ವರನು ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಕ್ರಮವಾಗಿ ಮಾಡುತ್ತಾನೆ. ಇದೆಲ್ಲವೂ ಅವನ ಸಹಜ ಸ್ವಭಾವ.

**देवस्यैष स्वभावोऽयमिति हि श्रुतिरब्रवीत् ।**
**गानव्याख्यानपूर्वेषु शिरोहस्तादिचेष्टितम् ।**
**प्रयोजनमनुद्दिश्य प्रेक्षावन्तोऽपि कुर्वते ॥३॥**

ದೇವಸ್ಯೈಷ ಸ್ವಭಾವೋऽಯಮಿತಿ ಹಿ ಶ್ರುತಿರಬ್ರವೀತ್ ।
ಗಾನವ್ಯಾಖ್ಯಾನಪೂರ್ವೇಷು ಶಿರೋಹಸ್ತಾದಿಚೇಷ್ಟಿತಮ್ ।
ಪ್ರಯೋಜನಮನುದ್ದಿಶ್ಯ ಪ್ರೇಕ್ಷಾವಂತೋऽಪಿ ಕುರ್ವತೇ ॥೩॥

'ದೇವಸ್ಯೈಷ ಸ್ವಭಾವೋऽಯಮ್' 'ಇಚ್ಛಾಪೂರ್ವಕವಾದ ಜಗತ್ಸೃಷ್ಟ್ಯಾದಿ ವ್ಯಾಪಾರವು ಪರಮಾತ್ಮನ ಸ್ವಭಾವವಾಗಿದೆ' ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಪ್ರೇಕ್ಷಾವಂತನು ಹಾಡು ಹೇಳುವಾಗ ತಲೆ ಅಲ್ಲಾಡಿಸುತ್ತಾನೆ. ಪಾಠ ಹೇಳುವಾಗ ಕೈ ಅಲ್ಲಾಡಿಸುತ್ತಾನೆ. ಇದರಿಂದ ಅವನಿಗೇನೂ ಪ್ರಯೋಜನ ಇರುವುದಿಲ್ಲ. ಆದರೂ ಇಂಥ ಚೇಷ್ಟೆಗಳನ್ನು ಹೇಗೆ ಮಾಡುತ್ತಾನೋ, ಅದರಂತೆ ದೇವರು ಸೃಷ್ಟ್ಯಾದಿ ಚೇಷ್ಟೆಗಳನ್ನು ಮಾಡುತ್ತಾನೆ.

**अपि च –**

**दुःखोद्रेकात्सुखोद्रेकाद्रोदने हसितादिके ।**
**प्रयोजनमनुद्दिश्य प्रवर्तन्तेऽपि पण्डिताः ॥४॥**

ದುಃಖೋದ್ರೇಕಾತ್ ಸುಖೋದ್ರೇಕಾದ್ರೋದನೇ ಹಸಿತಾದಿಕೇ ।
ಪ್ರಯೋಜನಮನುದ್ದಿಶ್ಯ ಪ್ರವರ್ತಂತೇऽಪಿ ಪಂಡಿತಾಃ ॥೧॥

ಪ್ರೇಕ್ಷಾವಂತನು ಬಹಳ ದುಃಖವಾದಾಗ ಅಳುತ್ತಾನೆ. ತುಂಬಾ ಸುಖವಾದಾಗ ನಗುತ್ತಾನೆ. ಅಳುವಿಗೆ ನಗುವಿಗೆ ಏನೂ ಪ್ರಯೋಜನವಿಲ್ಲ. ಆದರೂ ಇಂಥ ಪ್ರವೃತ್ತಿಯನ್ನು ಪಂಡಿತರೂ ಕೂಡ ಮಾಡುತ್ತಾರೆ.

**अत एव रोदने हसितादौ कारणमेव पृच्छन्ति । नतु प्रयोजनम् । ईश्वरस्य सुखोद्रेकात्प्रवृत्तिरित्युक्तमानंदमयाधिकरणे ।**

ಆದ್ದರಿಂದಲೇ ಜಗತ್ತಿನ ಜನರು ಏಕೆ ಅಳುತ್ತಿರುವಿ ? ಏಕೆ ನಗುತ್ತಿರುವಿ ? ಎಂಬುದಾಗಿ ಅಳುವಿಕೆಗೆ ಹಾಗೂ ನಗುವಿಕೆಗೆ ಕಾರಣವನ್ನು ಕೇಳುತ್ತಾರೆ ಹೊರತು, ಅಳುವಿಕೆಯ ಫಲವೇನು ? ನಗುವಿನ ಫಲವೇನು ? ಎಂದು ಪ್ರಯೋಜನದ ಬಗ್ಗೆ ಪ್ರಶ್ನೆ ಮಾಡುವುದಿಲ್ಲ. ಈಶ್ವರನ ಜಗತ್ ಸೃಷ್ಟಿಯ ಪ್ರವೃತ್ತಿಯು ಕೇವಲ ಸುಖೋದ್ರೇಕದಿಂದಲೇ ಆಗುತ್ತಿದೆ ಎಂಬುದಾಗಿ ಆನಂದಮಯಾಧಿಕರಣದಲ್ಲಿ ಸಮರ್ಥಿಸಿದ್ದೇವೆ.

ನ ಪ್ರಯೋಜನಾಧಿಕರಣ (2-1-9)

किञ्च –

**दयाया यद्यपि फलं दयालुस्तूद्दिशेन्न तत् ।**
**वाम्रादिरिव वत्सादौ दययैव प्रवर्तते ॥१॥**

ದಯಾಯಾ ಯದ್ಯಪಿ ಫಲಂ ದಯಾಲುಸ್ತೂದ್ದಿಶೇನ್ನ ತತ್ ।
ವಾಸ್ರಾದಿರಿವ ವತ್ಸಾದೌ ದಯಯೈವ ಪ್ರವರ್ತತೇ ॥೧॥

ಮತ್ತು ಆಗ ತಾನೇ ಹುಟ್ಟಿದ ಕರುವಿಗೆ ತಾಯಿಯಾದ ಹಸುವು ಅದಕ್ಕೆ ಹಾಲು ಕುಡಿಸಲು ಹೇಗೆ ದಯೆಯಿಂದ ಮುನ್ನುಗುತ್ತದೋ, ಅದರಂತೆ ಎಲ್ಲಾ ದಯಾಳುಗಳು ಮತ್ತೊಬ್ಬರ ಸಂತೋಷಕ್ಕೆ ಪ್ರವೃತ್ತರಾಗುತ್ತಾರೆ. ಇದರಿಂದ ಅವರಿಗೇನೂ ಪ್ರಯೋಜನವಿರುವುದಿಲ್ಲ.

**तथाचेश्वरस्य स्वप्रयोजनाभावेपि दयया परप्रयोजनाय प्रवृत्तिर्युक्ता ।**

ಆದ್ದರಿಂದ ಈಶ್ವರನಿಗೆ ಸ್ವಪ್ರಯೋಜನವಿಲ್ಲದಿದ್ದರೂ ಮತ್ತೊಬ್ಬರ ಪ್ರಯೋಜನಕ್ಕಾಗಿ ದಯೆಯಿಂದಲೇ ಪ್ರವೃತ್ತಿಯನ್ನು ಮಾಡುತ್ತಾನೆ.

किञ्च –

**अतिप्रयत्नसाध्येषु फलमाकाङ्क्षते जनः ।**
**नत्वनायाससंसाध्ये स्वाङ्गुल्यग्रादिचालने ॥१॥**

ಅತಿಪ್ರಯತ್ನಸಾಧ್ಯೇಷು ಫಲಮಾಕಾಂಕ್ಷತೇ ಜನಃ ।
ನತ್ವನಾಯಾಸಸಂಸಾಧ್ಯೇ ಸ್ವಾಂಗುಲ್ಯಗ್ರಾದಿಚಾಲನೇ ॥೧॥

ಅತಿಪ್ರಯತ್ನದಿಂದ ಸಾಧ್ಯವಾದ ಕಾರ್ಯದಲ್ಲಿ ಏನು ಪ್ರಯೋಜನವೆಂದು ಜನರು ಪ್ರಶ್ನಿಸುತ್ತಾರೆ? ಆದರೆ ಅನಾಯಾಸಸಾಧ್ಯವಾದ ಬೆರಳತುದಿಯನ್ನು ಅಲ್ಲಾಡಿಸುವಿಕೆ ಮೊದಲಾದ ಕಾರ್ಯದಲ್ಲಿ ಏನು ಪ್ರಯೋಜನವೆಂದು ? ಯಾವ ಜನರೂ ಪ್ರಶ್ನಿಸುವುದಿಲ್ಲ.

**अत एवाङ्गुल्यग्रादिचालने प्रयोजनाप्रश्नः । प्रश्नेऽपि तूष्णीमेवेति प्रतिवचनम्। अन्यथा ''वृथा चेष्टां न कुर्वीत'' इति निषेधो निर्विषयः स्यात् । ईश्वरस्य च सृष्ट्यादिकं नायाससाध्यम् । ''इच्छामात्रं प्रभोः सृष्टिः'' इति श्रुतेरिति ।**

ಆದ್ದರಿಂದಲೇ ಬೆರಳತುದಿಯನ್ನು ಅಲ್ಲಾಡಿಸಿದಾಗ ಯಾರೂ ಕೂಡ ಪ್ರಯೋಜನದ ಬಗ್ಗೆ ಪ್ರಶ್ನೆಯನ್ನು ಮಾಡುವುದಿಲ್ಲ. ಪ್ರಶ್ನೆ ಮಾಡಿದರೂ ಕೂಡ 'ಸುಮ್ಮನೆ ಅಲ್ಲಾಡಿಸಿದೆ' ಎಂದೇ ಉತ್ತರಿಸುತ್ತಾರೆ. ಹೀಗೊಪ್ಪದಿದ್ದರೆ 'ವೃಥಾ ಚೇಷ್ಟಾಂ ನ ಕುರ್ವೀತ' ಎಂಬ ನಿಷೇಧ ವಚನವು

ನಿರ್ವಿಷಯಕವಾಗಬೇಕಾಗುತ್ತದೆ. ಈಶ್ವರನಿಗೆ ಸೃಷ್ಟಿ, ಸ್ಥಿತ್ಯಾದಿಗಳು ಆಯಾಸಸಾಧ್ಯವೇ ಅಲ್ಲ. 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂದು ಶ್ರುತಿ ಹೇಳುವಂತೆ ಎಲ್ಲವೂ ಅವನ ಇಚ್ಛೆಯಿಂದಲೇ ನಡೆಯುತ್ತವೆ.

**टीकार्थः स्पष्टः । सूत्राक्षरार्थस्तु ईश्वरप्रवृत्तिरन्येषामिव स्वप्रयोजनार्थं न । कुतः । प्रयोजनवत्त्वात् यदर्थं प्रवृत्तिस्तस्य प्रयोजनस्याप्तकामत्वेन प्रागेव सिद्धत्वादिति ।**

ಟೀಕೆಯ ಕಠಿಣ ಪದಗಳ ಅರ್ಥವು ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ವ್ಯಾಖ್ಯಾನ ಮಾಡಿಲ್ಲ. ಸೂತ್ರಾರ್ಥ ಹೀಗಿದೆ - ಈಶ್ವರಪ್ರವೃತ್ತಿಯು ಬೇರೆಯವರ ಪ್ರವೃತ್ತಿಯಂತೆ ಸ್ವಪ್ರಯೋಜನವುಳ್ಳದ್ದಲ್ಲ. ಏಕೆಂದರೆ ಈಶ್ವರನು ಎಲ್ಲಾ ಬಗೆಯ ಪ್ರಯೋಜನವನ್ನು ಮೊದಲೇ ಹೊಂದಿದ್ದಾನೆ. ಯಾವುದರ ಪ್ರವೃತ್ತಿಯಿಂದ ಯಾವ ಪ್ರಯೋಜನವು ಅವನಿಗೆ ದೊರೆಯಬೇಕೋ, ಆಪ್ತಕಾಮನಾದ ಅವನಿಗೆ ಮೊದಲೇ ಸಿದ್ಧವಾಗಿದೆ.

**दयालुप्रवृत्ताविव परप्रयोजनवत्त्वादिति नञ आवृत्त्या स्वप्रयोजनार्थं न । कुतः । न प्रयोजनवत्त्वात् व्याख्यानादौ हस्तचलनादाविव सुखोद्रेकाद्गानादाविव च प्रयोजनवत्त्वराहित्यादिति त्रेधेति द्रष्टव्यम् ।**

ದಯಾಳುವಿನ ಪ್ರವೃತ್ತಿಯಂತೆ ಈಶ್ವರನ ಪ್ರವೃತ್ತಿಯು ಪರಪ್ರಯೋಜನವುಳ್ಳದ್ದಾಗಿದೆ. ಸೂತ್ರದಲ್ಲಿರುವ 'ನಞ್' ಅನ್ನು ಆವೃತ್ತಿಯಿಂದ ಯೋಜನೆ ಮಾಡಿಕೊಳ್ಳಬೇಕು. ತನ್ನ ಪ್ರಯೋಜನಕ್ಕೋಸ್ಕರ ಇವನು ಪ್ರವೃತ್ತಿ ಮಾಡಲಾರ ಎಂಬುದು ನಞ್ ಅಧ್ಯಾಹಾರದಿಂದ ತಿಳಿಯುತ್ತದೆ. ಏಕೆ ? ಎಂದು ಪ್ರಶ್ನಿಸಿದರೆ 'ನ ಪ್ರಯೋಜನವತ್ತ್ವಾತ್' ಅವನಿಗೆ ಯಾವುದೇ ವಿಧದ ಪ್ರಯೋಜನವು ಇರುವುದಿಲ್ಲ ಎಂಬುದು ಎರಡನೆಯ 'ನಞ್' ನಿಂದ ಅರ್ಥವಾಗುತ್ತದೆ. ಹೀಗೆ ವ್ಯಾಖ್ಯಾನ ಮಾಡಿದಾಗ ಹಸ್ತಚಲನಾದಿಗಳಂತೆ ಮತ್ತು ಸುಖೋದ್ರೇಕದಿಂದ ಗಾನಾದಿಗಳಲ್ಲಿ ಪ್ರವೃತ್ತಿ ಮಾಡುವಂತೆಯೂ ಪ್ರಯೋಜನವಿಲ್ಲದ್ದರಿಂದ ಎಂಬುದಾಗಿ ಮೂರುರೀತಿಯಲ್ಲಿ ವ್ಯಾಖ್ಯಾನ ಮಾಡಿದಂತಾಯಿತು.

ವಿವರಣೆ - ಪ್ರವೃತ್ತಿಯು ನಾಕುವಿಧ - ೧. ಸ್ವಾಭಾವಿಕ ಪ್ರವೃತ್ತಿ, ೨. ಸುಖೋದ್ರೇಕಪ್ರಯುಕ್ತವಾದ ಪ್ರವೃತ್ತಿ, ೩. ದಯೆಯಿಂದ ಪ್ರವೃತ್ತಿ, ೪. ಅನಾಯಾಸ ಸಾಧ್ಯದಿಂದ ಪ್ರವೃತ್ತಿ ಎಂದು. ಇದರಲ್ಲಿ ಕೊನೆಯದ್ದನ್ನು ಬಿಟ್ಟರೆ, ಮೊದಲ ಮೂರನ್ನು ಪ್ರಕೃತ ಗ್ರಂಥಕಾರರು ಸೂತ್ರಾರೂಢ ಮಾಡಿದ್ದಾರೆ. ಪರಮಾತ್ಮನ ಪ್ರವೃತ್ತಿಯು ಸ್ವಾಭಾವಿಕವಾಗಿದೆ. ಹಾಗೂ ಸುಖೋದ್ರೇಕ ಪೂರ್ಣವಾಗಿದೆ. ಮತ್ತು ದಯಾಪೂರ್ಣವಾಗಿದೆ ಎಂದು. ಈ ಮೂರು ಬಗೆಯ ಪ್ರವೃತ್ತಿಯನ್ನು ಹೇಳಿದಾಗಲೂ ಪರಮಾತ್ಮನಲ್ಲಿ ನಿವೃತ್ತಿಯು ಬರುವುದಿಲ್ಲ.

ನ ಪ್ರಯೋಜನಾಧಿಕರಣ (2-1-9)

**प्रकाशः —**

उक्तशङ्कोपमर्दस्यास्फुटत्वात् –

सदा प्रवृत्तिरीशस्य स्वभावादेव केवलम् ।
अङ्गचेष्टा यथा पुंसः काश्चिदुद्देशवर्जिताः ।।
देवस्यैष स्वभावोऽयमित्याह श्रुतिरञ्जसा ।

इत्याद्यनुव्याख्यानसुधोक्तं हृदि कृत्वा द्वितीयसूत्रभाष्यटीकातात्पर्यमाह – **अस्वभावेति ।।**

ಪ್ರೇಕ್ಷಾವಂತನಾದ ಪರಮಾತ್ಮನು ಜಗತ್ತಿನ ಸೃಷ್ಟ್ಯಾದಿ ಪ್ರವೃತ್ತಿಯನ್ನು ಏಕೆ ಮಾಡುತ್ತಾನೆ ? ಎಂಬ ಆಶಂಕೆಯ ಪರಿಹಾರವು ಸ್ಪಷ್ಟವಾಗದ ಕಾರಣ ಈಗ ಸ್ಪಷ್ಟಪಡಿಸುತ್ತಿದ್ದಾರೆ -

ಸದಾ ಪ್ರವೃತ್ತಿರೀಶಸ್ಯ ಸ್ವಭಾವಾದೇವ ಕೇವಲಮ್ ।
ಅಂಗಚೇಷ್ಟಾ ಯಥಾ ಪುಂಸಃ ಕಾಶ್ಚಿದುದ್ದೇಶವರ್ಜಿತಾಃ ॥
ದೇವಸ್ಯೈಷ ಸ್ವಭಾವೋऽಯಮಿತ್ಯಾಹ ಶ್ರುತಿರಂಜಸಾ ।

ನಿರಂತರ ಈಶ್ವರನ ಪ್ರವೃತ್ತಿಯು ಸ್ವಭಾವದಿಂದಲೇ ಉಂಟಾಗುತ್ತದೆ. ಯಾವುದೇ ಉದ್ದೇಶವಿಲ್ಲದೇ ಅಂಗಚೇಷ್ಟ್ಯಾದಿಗಳನ್ನು ಪುರುಷನು ಹೇಗೆ ಮಾಡುತ್ತಾನೋ, ಅದರಂತೆ 'ದೇವಸ್ಯೈಷ ಸ್ವಭಾವೋऽಯಮ್' ಎಂಬ ಶ್ರುತಿಯು ಪರಮಾತ್ಮನ ಚೇಷ್ಟೆಯು ಕ್ರೀಡಾರೂಪವಾಗಿದೆ ಎಂದು ಹೇಳುತ್ತಿದೆ. ಈ ಅನುವ್ಯಾಖ್ಯಾನವನ್ನು ಹಾಗೂ ಈ ಅನುವ್ಯಾಖ್ಯಾನದ ವ್ಯಾಖ್ಯಾನವಾದ ಸುಧೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಎರಡನೆಯ ಸೂತ್ರಭಾಷ್ಯದ ಟೀಕಾತಾತ್ಪರ್ಯವನ್ನು 'ಅಸ್ವಭಾವ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

**प्रकाशः –** व्यतिरेकमुक्त्वाऽन्वयमाह – **स्वाभाविका इति** ।। पक्षधर्मतामाह – **स्वभावभूता त्विति** ।। ईशस्य त्विति लोकपुरुषवैलक्षण्यार्थस्तुशब्दः ।।

ವ್ಯತಿರೇಕವ್ಯಾಪ್ತಿಯನ್ನು ಹೇಳಿ, ಅನ್ವಯವ್ಯಾಪ್ತಿಯನ್ನು 'ಸ್ವಾಭಾವಿಕಾ' ಎಂಬುದರಿಂದ ಪ್ರತಿಪಾದನೆ ಮಾಡುತ್ತಿದ್ದಾರೆ. ಪಕ್ಷಧರ್ಮತ್ವವನ್ನು 'ಸ್ವಭಾವಭೂತಾತ್' ಎಂಬ ವಾಕ್ಯದಿಂದ ಸಮರ್ಥನೆ ಮಾಡಿದ್ದಾರೆ. 'ಈಶಸ್ಯ ತು' ಎಂಬಲ್ಲಿ ಲೋಕಪುರುಷವೈಲಕ್ಷಣ್ಯವನ್ನು ತಿಳಿಸುವುದಕ್ಕಾಗಿ 'ತು' ಶಬ್ದವನ್ನು ಪ್ರಯೋಗಿಸಿದ್ದಾರೆ.

**प्रकाशः – क्रमादिति** ।। पूर्वं सृष्टिः सृष्टस्य पालनमित्येवमित्यर्थः । ईश्वरीयः सृष्ट्यादिव्यापारः फलोद्देशाभावेऽप्युपपन्नः । स्वाभाविकत्वात् । निमेषादिवदित्युक्तं भवति ।।

'ಕ್ರಮಾತ್' ಎಂದರೆ 'ಮೊದಲು ಸೃಷ್ಟಿ, ಸೃಷ್ಟಿ ಮಾಡಿದ್ದರ ಪಾಲನೆ, ಪಾಲನೆ ಮಾಡಿದ್ದರ ಸಂಹಾರ' ಎಂದರ್ಥ. ಈಶ್ವರನಿಗೆ ಸಂಬಂಧಪಟ್ಟ ಸೃಷ್ಟ್ಯಾದಿ ವ್ಯಾಪಾರವು ಫಲೋದ್ದೇಶವಿಲ್ಲದಿದ್ದರೂ

ಉಪಪನ್ನವಾಗುತ್ತದೆ. ಏಕೆಂದರೆ ಸ್ವಾಭಾವಿಕವಾದ್ದರಿಂದ. ನಿಮೇಷದಂತೆ ಎಂಬ ಅನುಮಾನವನ್ನು ಇಲ್ಲಿ ಪ್ರಯೋಗ ಮಾಡಿದಂತಾಯಿತು.

**ಪ್ರಕಾಶಃ** – हेतोरसिद्धिं निरसितुं मूलभूतश्रुतिमाह – **देवस्येति** ।। एषः इच्छापूर्वकसृष्ट्यादि- व्यापारः । निमेषाद्या इत्येतद्व्यनक्ति – **गानेति** ।। ''यत्प्रवृत्तिश्च नृत्तगानादिकासुखात्। दुःखाद्रोदादिका चैव'' इत्याद्यानन्दमयनयानु॰ याख्यानसुधे हृदि कृत्वाऽऽह – **अपि चेति** ।।

'ಈಶ್ವರೀಯಃ ಸೃಷ್ಟ್ಯಾದಿವ್ಯಾಪಾರಃ ಫಲೋದ್ದೇಶಾಭಾವೇಪ್ಯುಪಪನ್ನಃ ಸ್ವಾಭಾವಿಕತ್ವಾತ್' ಎಂಬ ಅನುಮಾನದಲ್ಲಿ ಹೇತ್ವಸಿದ್ಧಿದೋಷವನ್ನು ಪರಿಹಾರ ಮಾಡುವುದಕ್ಕಾಗಿ ಮೂಲಭೂತ ಶ್ರುತಿಯನ್ನು 'ದೇವಸ್ಯ' ಎಂಬ ಟೀಕೆಯಿಂದ ತೋರಿಸುತ್ತಿದ್ದಾರೆ. ಈ ಶ್ರುತಿಯಲ್ಲಿ 'ಅಯಂ' ಎಂಬುದರ ಅರ್ಥವನ್ನೇ 'ಏಷಃ' ಎಂಬ ಪದವನ್ನೂ ಕೂಡ ಹೇಳುತ್ತಿದೆ ಎಂಬ ಭ್ರಾಂತಿ ಬರುತ್ತದೆ. ಅದಕ್ಕಾಗಿ 'ಏಷಃ' ಎಂಬ ಪದಕ್ಕೆ ಇಚ್ಛಾಪೂರ್ವಕವಾದ 'ಸೃಷ್ಟ್ಯಾದಿವ್ಯಾಪಾರ' ಎಂಬ ಅರ್ಥವನ್ನು ವಿವಕ್ಷಿಸಬೇಕು. 'ನಿಮೇಷಾದ್ಯಾಃ' ಎಂಬುದನ್ನು 'ಗಾನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

'ಯತ್ ಪ್ರವೃತ್ತಿಶ್ಚ ನೃತ್ತಗಾನಾದಿಕಾಸುಖಾತ್ । ದುಃಖಾದ್ರೋದಾದಿಕಾ ಚೈವ' 'ಯಾರ ಪ್ರವೃತ್ತಿಯು ಸುಖದಿಂದ ನರ್ತನ, ಗಾನ ಮೊದಲಾದ ರೂಪವಾಗಿರುತ್ತದೋ, ದುಃಖದಿಂದ ರೋಧನ ಮೊದಲಾದವುಗಳ ರೂಪವಾಗಿರುತ್ತದೋ' ಇತ್ಯಾದಿ ಆನಂದಮಯಾಧಿಕರಣ ಅನುವ್ಯಾಖ್ಯಾನದಲ್ಲಿ ಹಾಗೂ ನ್ಯಾಯಸುಧೆಯಲ್ಲಿ ಹೇಳಿದ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು 'ಅಪಿ ಚ' ಇತ್ಯಾದಿ ಗ್ರಂಥದ ವಾಕ್ಯವು ಹೊರಟಿದೆ.

**ಪ್ರಕಾಶಃ** – एतच्च ''न प्रयोजनवत्त्वात्'' इति सूत्रस्य वक्ष्यमाणयोराद्यान्त्य-वृत्त्योस्तात्पर्यमिति ध्येयम् । एतेन ''मत्तादिलीलायाः फलानुद्देशेन सुखोद्रेकादेव दर्शनात्'' इति टीका विवृता । द्वितीयवृत्तितात्पर्यमाह – **किञ्च दयाया इति** ।।

'ನ ಪ್ರಯೋಜನವತ್ವಾತ್' ಎಂಬ ಸೂತ್ರಕ್ಕೆ ಮುಂದೆ ಹೇಳುವ ಎರಡು ಬಗೆಯ ವೃತ್ತಿಯ ತಾತ್ಪರ್ಯವನ್ನು ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ 'ಮತ್ತಾದಿಲೀಲಾಯಾಃ ಫಲಾನುದ್ದೇಶೇನ ಸುಖೋದ್ರೇಕಾದೇವ ದರ್ಶನಾತ್' ಉನ್ಮತ್ತನ ಲೀಲೆಯು ಫಲ ಉದ್ದೇಶವಿಲ್ಲದೇ, ಸುಖೋದ್ರೇಕದಿಂದಲೇ ಆಗುವುದು ಲೋಕದಲ್ಲಿ ಕಂಡಿದೆ ಎಂಬ ಟೀಕೆಯನ್ನು ವಿವರಿಸಿದಂತಾಯಿತು. ಎರಡನೆಯ ವೃತ್ತಿತಾತ್ಪರ್ಯವನ್ನು 'ಕಿಂಚ ದಯಾಯಾ' ಎಂಬುದರಿಂದ ಪ್ರತಿಪಾದನೆ ಮಾಡಿದ್ದಾರೆ.

**ಪ್ರಕಾಶಃ** – वास्रा शिशुवत्सा गौः । तदुक्तं चतुर्थस्कन्धे ध्रुवस्तुतौ ''वास्रेव वत्सकमनुग्रहकातरोऽस्मान्'' इति । ''इच्छामात्रं प्रभोस्सृष्टिरिति सृष्टौ विनिश्चिताः'' इत्यनुव्याख्यानसूचितं तात्पर्यमाह – **किञ्चातिप्रयत्नेति** ।। किञ्चेति श्लोकाद्बहिः ।

'ವಾಸ್ರಾ' ಎಂಬ ಪದಕ್ಕೆ 'ಆಗತಾನೇ ಹುಟ್ಟಿದ ಕರುವುಳ್ಳ ಹಸು' ಎಂದರ್ಥ. ಇದನ್ನೇ ಚತುರ್ಥಸ್ಕಂಧದ ಧ್ರುವಸ್ತುತಿಯಲ್ಲಿ ಈ ಶಬ್ದಪ್ರಯೋಗ ಕಂಡಿದೆ. 'ವಾಸ್ರೇವ ವತ್ಸಕಮನುಗ್ರಹಕಾತರೋಽಸ್ಮಾನ್' 'ಆಗ ತಾನೇ

ಹುಟ್ಟಿದ ಕರುವಿಗೆ ಹಸುವು ಹಾಲನ್ನು ಕುಡಿಸಲು ಹೇಗೆ ಕಾತರವಾಗಿರುತ್ತದೋ, ಅದರಂತೆ ನಮ್ಮನ್ನು ಉದ್ಧಾರ ಮಾಡಲು ನೀನು ಕಾತರನಾಗಿರುವಿ' ಎಂದು.

'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂಬ ಅನುವ್ಯಾಖ್ಯಾನದಿಂದ ಸೂಚಿತವಾದ ತಾತ್ಪರ್ಯವನ್ನು 'ಕಿಂಚಾತಿಪ್ರಯತ್ನ' ಎಂಬ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ. ಇಲ್ಲಿರುವ 'ಕಿಂಚ' ಎಂಬ ಪದವನ್ನು ಶ್ಲೋಕದ ಜೊತೆ ಸೇರಿಸಬಾರದು.

**प्रकाशः** –''तस्य पूर्णानन्दत्वेन प्राप्तप्राप्तव्यत्वात्'' इत्यादिटीकोक्तं व्यनक्ति – **यदर्थमिति** ।। सुधाभिप्रेतं वृत्तिद्वयं चाह – **दयाल्विति** ।।

'ತಸ್ಯ ಪೂರ್ಣಾನಂದತ್ವೇನ ಪ್ರಾಪ್ತಪ್ರಾಪ್ತವ್ಯತ್ವಾತ್' ಪರಮಾತ್ಮನು ಪೂರ್ಣಾನಂದವುಳ್ಳವನಾದ್ದರಿಂದ ಪಡೆಯಬೇಕಾದ್ದೆಲ್ಲವನ್ನು ಪಡೆದಿದ್ದಾನೆ ಇತ್ಯಾದಿ ಟೀಕೆಯಲ್ಲಿ ಹೇಳಿದ್ದನ್ನು 'ಯದರ್ಥಂ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ನ್ಯಾಯಸುಧೆಯ ಅಭಿಪ್ರಾಯವನ್ನು ಹಾಗೂ ಎರಡು ಬಗೆಯ ವ್ಯಾಖ್ಯಾನವನ್ನು 'ದಯಾಲು' ಇತ್ಯಾದಿ ಗ್ರಂಥದಿಂದ ಹೇಳಿರುತ್ತಾರೆ.

**प्रकाशः** – न प्रयोजनवत्त्वादिति ''नैकध्यम्'' इत्यादाविव ''अमानोनाः प्रतिषेध'' इति निषेधार्थकनकारस्य ''सुप्सुपा'' इति समासोऽयम् ।

'ನ ಪ್ರಯೋಜನವತ್ತ್ವಾತ್' ಎಂಬ ಸೂತ್ರದಲ್ಲಿ 'ನೈಕಧ್ಯಮ್' ಇತ್ಯಾದಿ ಪ್ರಯೋಗಗಳಂತೆ 'ಅಮಾನೋನಾಃ ಪ್ರತಿಷೇಧೇ' ಎಂಬ ಸೂತ್ರಕ್ಕೆ ಅನುಗುಣವಾಗಿ ನಿಷೇಧಾರ್ಥಕವಾದ ನಕಾರವನ್ನು ವಿವಕ್ಷಿಸಬೇಕು. ಆಗ 'ಸುಪ್-ಸುಪಾ' ಎಂಬುದರಿಂದ ಸಮಾಸವಾಗುತ್ತದೆ.

ವಿವರಣೆ - 'ನ ಪ್ರಯೋಜನತ್ವಾತ್' ನಞ್ ಸಮಾಸವಲ್ಲ.'ನ' ಸಮಾಸ ಆಗಿದೆ. ನಞ್ ಎಂಬುದು ನಿಪಾತವಾದ್ದರಿಂದ 'ನಲೋಪೋ ನಞಃ' ಎಂಬುದರಿಂದ ನ ಲೋಪ ಆಗಿ 'ನ ಪ್ರಯೋಜನತ್ವಮ್ ಅಪ್ರಯೋಜನವತ್ವಮ್' ಎಂದಾಗುತ್ತಿತ್ತು. 'ನ ಏಕಧಾ, ನೈಕಧಾ' ಎಂಬಂತೆ. ಆದ್ದರಿಂದ ಇದು ನಞ್ ಅಲ್ಲ ನಕಾರ ಆಗಿದೆಯೆಂದೇ ತಿಳಿಯಬೇಕು.

'ಯದ್ಯಪಿ ಸುಪ್-ಸುಪಾ' ಎಂಬಲ್ಲಿ ಎರಡು ಸುಬಂತಗಳಿಗೆ ಸಮಾಸವನ್ನು ಹೇಳಲಾಗಿದೆ. ಆದರೆ ಸೂತ್ರದಲ್ಲಿ ಯೋಗವಿಭಾಗವನ್ನು ಮಾಡಬೇಕು. ಆಗ 'ಸುಬಂತಂ ಯೇನ ಕೇನಾಪಿ ಸಮಸ್ಯತೇ' ಮತ್ತು 'ಯತ್ಕಿಂಚಿದಪಿ ಸಮಸ್ಯತೇ' ಎಂದರ್ಥವಾಗುತ್ತದೆ. ಆದ್ದರಿಂದ 'ಸುಪ್-ಸುಪಾ' ಎಂಬ ಸೂತ್ರದಿಂದ 'ನ ಪ್ರಯೋಜನವತ್ವಮ್' ಎಂಬಲ್ಲಿ ಸಮಾಸವಾಗಿದೆ ಎಂದು ಹೇಳಲು ಯಾವುದೇ ಬಾಧಕವಿಲ್ಲ.

**प्रकाशः** – ''अञ्जनगमांसनि'' इत्यत्र समस्तस्याप्यज्ग्रहणस्या वृत्त्याऽनुवर्तमानाङ्ग-ग्रहणेनान्वय इवात्रापि नकारस्य साध्येनान्वयो युक्तः । उक्तञ्च मञ्जर्यां ''अज्ग्रहणं सामर्थ्यादावर्तत इत्युक्तं भवति'' इति । नञ इत्यस्य निषेधार्थकनकारस्येत्यर्थो ध्येयः ।

'ಅಜ್ಬನಗಮಾಂಸನಿ' ಎಂಬ ಸೂತ್ರದಲ್ಲಿ ಸಮಾಸವನ್ನು ಹೊಂದಿರುವ 'ಅಚ್' ಎಂಬುದನ್ನು ಆವೃತ್ತಿ ಮಾಡಿಕೊಂಡು ಅನ್ವಯ ಮಾಡಲಾಗಿದೆ. ಆದರಂತೆ ಇಲ್ಲೂ ಕೂಡ 'ನ ಪ್ರಯೋಜನವತ್ವಾತ್' ಎಂಬಲ್ಲಿ ನಕಾರವು ಸಮಾಸದಲ್ಲಿ ಸೇರಿದ್ದರೂ ಸಾಧ್ಯದ ಜೊತೆಯೂ ಪ್ರತ್ಯೇಕವಾಗಿ ಅನ್ವಯವನ್ನು ಹೊಂದುತ್ತದೆ. ಇದನ್ನೇ ಮಂಜರಿಯಲ್ಲಿ 'ಅಜ್-ಗ್ರಹಣಂ ಸಾಮರ್ಥ್ಯಾದಾವರ್ತತೇ ಇತ್ಯುಕ್ತಂ ಭವತಿ' ಅಜ್ ಗ್ರಹಣವನ್ನು ಪ್ರತ್ಯೇಕವಾಗಿ ಅನ್ವಯ ಮಾಡಬಹುದು ಎಂದು ಹೇಳಲಾಗಿದೆ. 'ನಞ್ಃ' ಎಂಬುದಕ್ಕೆ ನಿಷೇಧಾರ್ಥಕವಾದ ನಕಾರಕ್ಕೆ ಎಂಬರ್ಥವನ್ನು ತಿಳಿಯಬೇಕು.

**प्रकाशः –** यद्वा ''न प्रयोजनवत्त्वात्'' इत्यत्र नञ्समासेऽपि ''नलोपो नञ'' इति नलोपो न भवति । ''रात्रेः कृतिविभाषा'' इति विभाषाग्रहणानुवृत्तेः प्राग्दर्शितत्वादिति भावः ।।

ಅಥವಾ 'ನ ಪ್ರಯೋಜನವತ್ವಾತ್' ಎಂಬಲ್ಲಿ ನಞ್ ಸಮಾಸವೆಂದು ತಿಳಿದರೂ ಬಾಧಕವಿಲ್ಲ. 'ನಲೋಪೋ ನಞ್ಃ' ಎಂಬ ಸೂತ್ರದಿಂದ ಇಲ್ಲಿ ನಲೋಪಕ್ಕೆ ಅವಕಾಶವೇ ಇಲ್ಲ. 'ರಾತ್ರೇಃ ಕೃತಿವಿಭಾಷಾ' ಎಂಬ ಸೂತ್ರದಲ್ಲಿ ಇರುವ ವಿಭಾಷಾ ಎಂಬ ಪದವನ್ನು ಇಲ್ಲೂ ಕೂಡ ಅನ್ವಯ ಮಾಡಿಕೊಂಡಾಗ ನಲೋಪವು ವಿಕಲ್ಪವಾಗಿ ಪ್ರಾಪ್ತವಾಗುತ್ತದೆ. ಆದ್ದರಿಂದ 'ನಞ್' ಸಮಾಸವೆಂದೂ ಕೂಡ ತಿಳಿಯಬಹುದು.




ಅಸ್ವಭಾವಪ್ರವೃತ್ತೌ ಹಿ ಪ್ರಾಜ್ಞೋಽಪ್ಯಾಕಾಂಕ್ಷತೇ ಫಲಮ್ ।
ಸ್ವಾಭಾವಿಕಾ ನಿಮೇಷಾದ್ಯಾ ನಹ್ಯುದ್ದಿಷ್ಟಪ್ರಯೋಜನಾಃ ॥೧॥

ಸ್ವಾಭಾವಿಕವಲ್ಲದ ಪ್ರವೃತ್ತಿಯನ್ನು ಮಾಡುವಾಗ ಪ್ರಾಜ್ಞರಾದವರೂ ಕೂಡ ಫಲವನ್ನು ಅಪೇಕ್ಷೆ ಪಡುತ್ತಾರೆ. ಆದರೆ ಕಣ್ಣಿನ ರೆಪ್ಪೆ ಬಡಿಯುವಿಕೆ ಮೊದಲಾದ ಸ್ವಾಭಾವಿಕ ಪ್ರವೃತ್ತಿಗಳಲ್ಲಿ ಫಲದ ಅಪೇಕ್ಷೆಯನ್ನು ಪ್ರೇಕ್ಷಾವಂತರೂ ಕೂಡ ಹೊಂದಿರುವುದಿಲ್ಲ.

ಸ್ವಭಾವಭೂತಾತ್ತ್ವೀಶಸ್ಯ ಕ್ರಮಾತ್ ಸೃಷ್ಟ್ಯಾದಿಕರ್ತೃತಾ ।
ಚೂತಾದೀನಾಂ ವಸಂತಾದೌ ಪುಷ್ಪಿತತ್ವಾದಿಕಂ ಯಥಾ ॥೨॥

ಮಾವಿನ ಮರ ಮೊದಲಾದವು ವಸಂತಕಾಲವು ಪ್ರಾಪ್ತವಾದಾಗ ಹೂವು, ಚಿಗುರು ಮೊದಲಾದವುಗಳನ್ನು ಸಹಜವಾಗಿ ಹೊಂದುತ್ತವೆ. ಆದರಂತೆ ಈಶ್ವರನು ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಕ್ರಮವಾಗಿ ಮಾಡುತ್ತಾನೆ. ಇದೆಲ್ಲವೂ ಅವನ ಸಹಜ ಸ್ವಭಾವ.

## ನ ಪ್ರಯೋಜನಾಧಿಕರಣ (2-1-9)

ದೇವಸ್ಯೈಷ ಸ್ವಭಾವೋಽಯಮಿತಿ ಹಿ ಶ್ರುತಿರಬ್ರವೀತ್ ।
ಗಾನವ್ಯಾಖ್ಯಾನಪೂರ್ವೇಷು ಶಿರೋಹಸ್ತಾದಿಚೇಷ್ಟಿತಮ್ ।
ಪ್ರಯೋಜನಮನುದ್ದಿಶ್ಯ ಪ್ರೇಕ್ಷಾವಂತೋಽಪಿ ಕುರ್ವತೇ ॥೩॥

'ದೇವಸ್ಯೈಷ ಸ್ವಭಾವೋಽಯಮ್' 'ಇಚ್ಛಾಪೂರ್ವಕವಾದ ಜಗತ್‌ಸೃಷ್ಟ್ಯಾದಿ ವ್ಯಾಪಾರವು ಪರಮಾತ್ಮನ ಸ್ವಭಾವವಾಗಿದೆ' ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಪ್ರೇಕ್ಷಾವಂತನು ಹಾಡು ಹೇಳುವಾಗ ತಲೆ ಅಲ್ಲಾಡಿಸುತ್ತಾನೆ. ಪಾಠ ಹೇಳುವಾಗ ಕೈ ಅಲ್ಲಾಡಿಸುತ್ತಾನೆ. ಇದರಿಂದ ಅವನಿಗೇನೂ ಪ್ರಯೋಜನ ಇರುವುದಿಲ್ಲ. ಆದರೂ ಇಂಥ ಚೇಷ್ಟೆಗಳನ್ನು ಹೇಗೆ ಮಾಡುತ್ತಾನೋ, ಅದರಂತೆ ದೇವರು ಸೃಷ್ಟ್ಯಾದಿ ಚೇಷ್ಟೆಗಳನ್ನು ಮಾಡುತ್ತಾನೆ.

ದುಃಖೋದ್ರೇಕಾತ್ ಸುಖೋದ್ರೇಕಾದ್ರೋದನ ಹಸಿತಾದಿಕೇ ।
ಪ್ರಯೋಜನಮನುದ್ದಿಶ್ಯ ಪ್ರವರ್ತಂತೇಽಪಿ ಪಂಡಿತಾಃ ॥೧॥

ಪ್ರೇಕ್ಷಾವಂತನು ಬಹಳ ದುಃಖವಾದಾಗ ಅಳುತ್ತಾನೆ. ತುಂಬಾ ಸುಖವಾದಾಗ ನಗುತ್ತಾನೆ. ಅಳುವಿಗೆ ನಗುವಿಗೆ ಏನೂ ಪ್ರಯೋಜನವಿಲ್ಲ. ಆದರೂ ಇಂಥ ಪ್ರವೃತ್ತಿಯನ್ನು ಪಂಡಿತರೂ ಕೂಡ ಮಾಡುತ್ತಾರೆ.

ದಯಾಯಾ ಯದ್ಯಪಿ ಫಲಂ ದಯಾಲುಸ್ತೂದ್ದಿಶೇನ್ನ ತತ್ ।
ವಾಸ್ರಾದಿರಿವ ವತ್ಸಾದೌ ದಯಯೈವ ಪ್ರವರ್ತತೇ ॥೧॥

ಮತ್ತು ಆಗ ತಾನೇ ಹುಟ್ಟಿದ ಕರುವಿಗೆ ತಾಯಿಯಾದ ಹಸುವು ಅದಕ್ಕೆ ಹಾಲು ಕುಡಿಸಲು ಹೇಗೆ ದಯೆಯಿಂದ ಮುನ್ನುಗುತ್ತದೋ, ಅದರಂತೆ ಎಲ್ಲಾ ದಯಾಳುಗಳು ಮತ್ತೊಬ್ಬರ ಸಂತೋಷಕ್ಕೆ ಪ್ರವೃತ್ತರಾಗುತ್ತಾರೆ. ಇದರಿಂದ ಅವರಿಗೇನೂ ಪ್ರಯೋಜನವಿರುವುದಿಲ್ಲ.

ಅತಿಪ್ರಯತ್ನಸಾಧ್ಯೇಷು ಫಲಮಾಕಾಂಕ್ಷತೇ ಜನಃ ।
ನತ್ವನಾಯಾಸಸಂಸಾಧ್ಯೇ ಸ್ವಾಂಗುಲ್ಯಗ್ರಾದಿಚಾಲನೇ ॥೧॥

ಅತಿಪ್ರಯತ್ನದಿಂದ ಸಾಧ್ಯವಾದ ಕಾರ್ಯದಲ್ಲಿ ಏನು ಪ್ರಯೋಜನವೆಂದು ಜನರು ಪ್ರಶ್ನಿಸುತ್ತಾರೆ? ಆದರೆ ಅನಾಯಾಸಸಾಧ್ಯವಾದ ಬೆರಳತುದಿಯನ್ನು ಅಲ್ಲಾಡಿಸುವಿಕೆ ಮೊದಲಾದ ಕಾರ್ಯದಲ್ಲಿ ಏನು ಪ್ರಯೋಜನವೆಂದು? ಯಾವ ಜನರೂ ಪ್ರಶ್ನಿಸುವುದಿಲ್ಲ.

### ದೇವರ ಸೃಷ್ಟಿ ಕ್ರೀಡೆಗೋಸ್ಕರವಲ್ಲ

## तात्पर्यचन्द्रिका

**यदुक्तमुभाभ्यां प्रयोजनान्तराभावेऽपि महाराजस्य कन्दुकादाविव लीलार्थेश्वरस्य प्रवृत्तिरित्येतदधिकरणार्थ इति**

ಅದ್ವೈತಿಗಳು ಹಾಗೂ ರಾಮಾನುಜರು ಈ ಅಧಿಕರಣದ ಬಗ್ಗೆ ಹೀಗೆ ಹೇಳಿದ್ದಾರೆ - ಮಹಾರಾಜನು ಕಂದುಕಕ್ರೀಡೆಯನ್ನು ಮಾಡುತ್ತಾನೆ. ಇದರಿಂದೇನೂ ಅವನಿಗೆ ಪ್ರಯೋಜನವಿಲ್ಲ. ಅದರಂತೆ ಈಶ್ವರನು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ. ಇದರಿಂದ ಈಶ್ವರನಿಗೆ ಏನೂ ಕೂಡ ಪ್ರಯೋಜನವಿಲ್ಲ. ಇದೇ ಈ ಅಧಿಕರಣದ ಪ್ರಮೇಯ ಎಂದು.

**तन्न । श्रुतिसूत्रविरोधात् । श्रुतौ हि ''क्रीडार्थमिति चापर'' इति लीलाप्रयोजनत्वं मतान्तरत्वेनोक्त्वा ''देवस्यैष स्वभावोऽयम्'' इति स्वमतमुक्तम्।**

ಇವರ ಈ ಅಧಿಕರಣ ರಚನೆ ಅಯುಕ್ತವಾಗಿದೆ - ಹೀಗೆ ಹೇಳಿದರೆ ಶ್ರುತಿ ಹಾಗೂ ಸೂತ್ರಗಳಿಗೆ ವಿರೋಧ ಬರುತ್ತದೆ. ಏಕೆಂದರೆ 'ಕ್ರೀಡಾರ್ಥಮಿತಿ ಚಾಪರೇ' ಎಂಬುದಾಗಿ ಪರಮಾತ್ಮನು ಕ್ರೀಡೆಗೋಸ್ಕರ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂಬುದಾಗಿ ಕೆಲವರು ಹೇಳುತ್ತಾರೆ ಎಂದು ಹೇಳುತ್ತಿದೆ. ಇದರಲ್ಲಿ ಲೀಲೆಯೇ ಪ್ರಯೋಜನವೆಂದು ಹೇಳುವುದು ಬೇರೆಯವರ ಮತವೆಂದು ಸ್ಪಷ್ಟವಾಗಿರುವುದರಿಂದ ಇದನ್ನೇ ಸೂತ್ರಕಾರರ ಅಭಿಪ್ರಾಯವೆಂದು ಸರ್ವಥಾ ತಿಳಿಯಬಾರದು. ಮತ್ತು 'ದೇವಸ್ಯೈಷ ಸ್ವಭಾವೋಽಯಮ್' ಎಂಬ ಶ್ರುತಿಯು ಸೃಷ್ಟ್ಯಾದಿಪ್ರವೃತ್ತಿಯು ತನ್ನ ಸ್ವಭಾವವಾಗಿದೆ ಎಂದೇ ಹೇಳುತ್ತಿದೆ.

**सूत्रेपि लीलार्थेत्यनुक्त्वा केवललीलेत्येवोक्तम् ।**

**तदुक्तमनुव्याख्याने –**

**लीलां प्रयोजनं कृत्वा सृष्टिः श्रुतिविरोधिनी ।**
**इति केवललीलैव निर्णीता प्रभुणा स्वयम् ।। इति ।**

ಸೂತ್ರದಲ್ಲೂ ಕೂಡ 'ಲೀಲಾರ್ಥೇ' ಎಂದು ಹೇಳದೇ 'ಕೇವಲಲೀಲಾ' ಎಂಬ ಪ್ರಯೋಗವನ್ನೇ ಮಾಡಿರುತ್ತಾರೆ. ಇದರಿಂದ ಲೀಲೆಯನ್ನೇ ಪ್ರಯೋಜನವನ್ನಾಗಿಟ್ಟುಕೊಂಡು ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂದು ತಿಳಿಯಬಾರದು. ಇದನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

ಲೀಲಾಂ ಪ್ರಯೋಜನಂ ಕೃತ್ವಾ ಸೃಷ್ಟಿಃ ಶ್ರುತಿವಿರೋಧಿನೀ ।
ಇತಿ ಕೇವಲಲೀಲೈವ ನಿರ್ಣೀತಾ ಪ್ರಭುಣಾ ಸ್ವಯಮ್ ॥

ಲೀಲೆಯನ್ನೇ ಪ್ರಯೋಜನವನ್ನಾಗಿ ಮಾಡಿಕೊಂಡು ಸೃಷ್ಟಿ ಮಾಡುತ್ತಾನೆಂಬುದು ಶ್ರುತಿವಿರುದ್ಧವಾಗಿವೆ. ಆದ್ದರಿಂದ ಪ್ರಭುಗಳಾದ ಸೂತ್ರಕಾರರು ಸೃಷ್ಟ್ಯಾದಿಪ್ರವೃತ್ತಿಯು ಕೇವಲ ಲೀಲಾರೂಪವಾಗಿದೆ ಎಂದು ನಿರ್ಣಯಿಸಿದ್ದಾರೆ ಎಂದು.

**किञ्चान्येषां पक्षे ब्रह्मणः प्रयोजनाभावेन भ्रमाधिष्ठानत्वाद्याक्षेपो लीलात्वेन समाधानं चायुक्तम् । नहि चेतनोऽचेतनो वा फलमुद्दिश्य भ्रमविषयो भवति । भ्राम्यति वा ।**

ಮತ್ತು ಅದ್ವೈತಿಗಳ ಪಕ್ಷದಲ್ಲಿ ಬ್ರಹ್ಮನಿಗೆ ಯಾವುದೇ ಪ್ರಯೋಜನವಿಲ್ಲದ್ದರಿಂದ ಭ್ರಮಾಧಿಷ್ಠಾನತ್ವಾದ್ಯಾಕ್ಷೇಪವು ಲೀಲಾರೂಪವಾಗಿದೆಯೆಂಬ ಸಮಾಧಾನವು ಅಯುಕ್ತವಾಗಿದೆ. ಚೇತನವಾಗಲೀ, ಅಚೇತನವಾಗಲೀ ಫಲದ ಉದ್ದೇಶಕ್ಕೋಸ್ಕರ ಭ್ರಮೆಗೆ ವಿಷಯವಾಗಿದ್ದು ಕಂಡಿಲ್ಲವಷ್ಟೇ. ಮತ್ತು ಭ್ರಾಂತಿಯನ್ನು ಹೊಂದುವುದು ಅಥವಾ ಭ್ರಮಗೆ ಅಧಿಷ್ಠಾನವಾಗಿರುವುದು ಕಂಡಿಲ್ಲವಷ್ಟೇ.

ವಿವರಣೆ - ಅದ್ವೈತಿಗಳು ಬ್ರಹ್ಮನನ್ನು ಭ್ರಾಂತನೆಂದು ಹೇಳಬಹುದು. ಅಥವಾ ಭ್ರಮೆಗೆ ಅಧಿಷ್ಠಾನನಾಗಿದ್ದಾನೆಂದು ಹೇಳಬಹುದು. ಅಥವಾ ಮಾಯಾವಿಯಂತೆ ಮತ್ತೊಬ್ಬರಿಗೆ ಭ್ರಾಂತಿ ಬರುವಂತೆ ಮಾಡುತ್ತಾನೆಂದು ಹೇಳಬಹುದು. ಈ ಮೂರು ಪಕ್ಷಗಳನ್ನು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲಾಗಿದೆ. ಇದರ ಮೇಲೆ ಬರುವ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುವುದಕ್ಕಾಗಿ ಈ ಅಧಿಕರಣ ಹೊರಟದೆ ಎಂಬ ಸಮಾಧಾನವನ್ನು ಅದ್ವೈತಿಗಳು ಹೇಳುತ್ತಾರೆ. ಗ್ರಂಥದಲ್ಲಿ 'ಭ್ರಮಾಧಿಷ್ಠಾನತ್ವಾದ್ಯಾಕ್ಷೇಪಃ' ಎಂಬ ಪದವಿದೆ. ಇಲ್ಲಿರುವ ಆದಿಪದದಿಂದ ಭ್ರಾಂತಿಯನ್ನು ವಿವಕ್ಷಿಸಬೇಕು. ಬ್ರಹ್ಮನು ಭ್ರಮೆಗೆ ಅಧಿಷ್ಠಾನನಾಗುವುದು ಹೇಗೆ ಸಾಧ್ಯ ? ಎಂದರೆ ಕೇವಲ ಲೀಲೆಯಿಂದ ಎಂದು ಉತ್ತರ. ಅದರಂತೆ ಹೇಗೆ ಭ್ರಾಂತನಾಗುತ್ತಾನೆ ಎಂಬ ಪ್ರಶ್ನೆಗೂ ಕೂಡ ಲೀಲೆ ಎಂಬ ಪ್ರಯೋಜನಕ್ಕೋಸ್ಕರ ಎಂಬುದೇ ಉತ್ತರ ಎಂದು ಅದ್ವೈತಿಗಳು ಹೇಳುತ್ತಾರೆ. ಆದರೆ ಉದ್ದೇಶಪೂರ್ವಕವಾಗಿ ಯಾರೂ ಕೂಡ ಭ್ರಾಂತರಾಗಲು ಸಾಧ್ಯವಿಲ್ಲ. ಶುಕ್ತಿಯು ಲೀಲೆಯೆಂಬ ಪ್ರಯೋಜನಕ್ಕೋಸ್ಕರ ಭ್ರಾಂತಿಗೆ ಅಧಿಷ್ಠಾನವಾಗಲು ಸಾಧ್ಯವಿಲ್ಲ.

**मायाविवद्व्यामोहयितृत्वमपि न चिन्मात्रस्य । नापि कल्पितस्य मायासङ्कल्पादिविशिष्टस्य । तत्प्रति तस्यैव कल्पकत्वे, आत्माश्रयात् । तद्व्यामोहनीयानां जीवानां कल्पकत्वे त्वन्योन्याश्रयात् ।**

ಮಾಯಾವಿಯು ಹೇಗೆ ಇನ್ನೊಬ್ಬರನ್ನು ಮೋಹಗೊಳಿಸುತ್ತಾನೋ, ಅದರಂತೆ ಚಿನ್ಮಾತ್ರನು ಮತ್ತೊಬ್ಬರನ್ನು ಮೋಹಗೊಳಿಸುತ್ತಾನೆ. ಇದು ಲೀಲೆಯೆಂಬ ಪ್ರಯೋಜನಕ್ಕಾಗಿ ಹೀಗೆ ಮಾಡುವುದು ತಪ್ಪಲ್ಲ ಎಂಬುದಾಗಿ ಅದ್ವೈತಿಗಳು ಹೇಳುತ್ತಾರೆ. ಇದೂ ಕೂಡ ತಪ್ಪು. ಏಕೆಂದರೆ ಚಿನ್ಮಾತ್ರದಲ್ಲಿ 'ವ್ಯಾಮೋಹಯಿತೃತ್ವ' ಎಂಬ ಧರ್ಮವೇ ಇರುವುದಿಲ್ಲ. ಮಾಯಾಸಂಕಲ್ಪಾದಿವಿಶಿಷ್ಟನಾದವನಲ್ಲಿ ವ್ಯಾಮೋಹಯಿತೃತ್ವವನ್ನು ಹೇಳುತ್ತೇವೆ ಎಂದರೆ ಆ ಕಲ್ಪಿತನಾದವನಿಗೆ ಯಾರು ಕಲ್ಪಕ ಎಂದು ಪ್ರಶ್ನಿಸುತ್ತೇವೆ ? ತಾನೇ ಕಲ್ಪಕನಾಗಿದ್ದಾನೆಂದು ಹೇಳಿದರೆ ಆತ್ಮಾಶ್ರಯದೋಷ ಬರುತ್ತದೆ. ಜೀವರು ಕಲ್ಪಕರೆಂದು ಹೇಳಿದರೆ ಯಾರನ್ನು ವ್ಯಾಮೋಹ ಮಾಡಲು ಹೊರಟಿದ್ದಾನೋ, ಅವರೇ ಇವನಿಗೆ

ಕಲ್ಪಕರಾದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಇವನ ವ್ಯಾಮೋಹದಿಂದ ಜೀವರು ಸಿದ್ಧರಾದರೆ ಅವರು ಕಲ್ಪಕರೆಂದು ಸಿದ್ಧವಾಗುತ್ತಾರೆ. ಜೀವರು ಕಲ್ಪಕರಾದರೆ ಮಾಯಾಸಂಕಲ್ಪಾದಿ ವಿಶಿಷ್ಟನಾದ ಕಲ್ಪಕನು ಸಿದ್ಧನಾಗುತ್ತಾನೆ. ಆದ್ದರಿಂದ ಈ ಪಕ್ಷವೂ ಕೂಡ ಯುಕ್ತವಲ್ಲ.

**चिन्मात्रस्य चाद्रष्टृत्वेनाभ्रान्तत्वेन चाकल्पकत्वात् । कल्पकं च विना कल्पनायोगात् ।**

ಚಿನ್ಮಾತ್ರನು ಕಲ್ಪಕನೆಂದು ಹೇಳಿದರೆ ಇವನಲ್ಲಿ ದ್ರಷ್ಟೃತ್ವವೇ ಇರುವುದಿಲ್ಲ. ಭ್ರಾಂತಿಯೂ ಕೂಡ ಇವನಲ್ಲಿ ಇರುವುದಿಲ್ಲ. ಆದ್ದರಿಂದ ಅವನು ಕಲ್ಪಕನಾಗಲು ಸಾಧ್ಯವಿಲ್ಲ. ಹೀಗೆ ಕಲ್ಪಕನೇ ಇಲ್ಲದೇ ಕಲ್ಪನೆಯು ಅಯುಕ್ತವಾಗುತ್ತದೆ.

**यत्तूक्तं कल्पतरौ –**

**प्रतिबिम्बगताः पश्यन्नृजुवक्रादिविक्रियाः ।**
**पुमान् क्रीडेद्यथा ब्रह्म तथा जीवस्थ विक्रियाः ।। इति ।**

ಕಲ್ಪತರುವಿನಲ್ಲಿ ಹೀಗೆ ಹೇಳಲಾಗಿದೆ -

ಪ್ರತಿಬಿಂಬಗತಾಃ ಪಶ್ಯನ್ನೃಜುವಕ್ರಾದಿವಿಕ್ರಿಯಾಃ।
ಪುಮಾನ್ ಕ್ರೀಡೇದ್ಯಥಾ ಬ್ರಹ್ಮ ತಥಾ ಜೀವಸ್ಥವಿಕ್ರಿಯಾಃ॥

ಪ್ರತಿಬಿಂಬದಲ್ಲಿ ವಕ್ರವಾಗಿ ಉದ್ದವಾಗಿ ಯಾವ ಮುಖವಿಕಾರಗಳನ್ನು ಕಂಡು ಪುರುಷನು ಸಂತೋಷ ಪಡುತ್ತಾನೋ, ಅದರಂತೆ ಬ್ರಹ್ಮನು ತನ್ನ ಅನೇಕ ಮುಖವಿಕಾರಗಳನ್ನು ಜೀವರಲ್ಲಿ ಕಂಡು ಸಂತೋಷ ಪಡುತ್ತಾನೆ ಎಂದು

**तन्न । संसारस्य बिम्बप्रतिबिम्बानुगतसत्यचिन्मात्रगतत्वेन प्रतिबिम्बगत-वक्रतादिवैषम्यादित्युक्तत्वात् । लोके स्वस्य विकृतात् प्रतिबिम्बात् भेदभ्रमेण क्रीडायामपि स्वस्य दुःखिजीवाभेदप्रमावतो ब्रह्मण; क्रीडायोगाच्च ।**

ಇದೂ ಕೂಡ ತಪ್ಪು. ಏಕೆಂದರೆ ಸಂಸಾರವು ಬಿಂಬನಲ್ಲಿ ಅಥವಾ ಪ್ರತಿಬಿಂಬನಲ್ಲಿ ಇದೆ ಎಂದು ಹೇಳಲು ಸಾಧ್ಯವಿಲ್ಲ. ಇವೆರಡರಲ್ಲಿ ಅನುಗತವಾದ ಚಿನ್ಮಾತ್ರದಲ್ಲಿದೆ ಎಂದೇ ಹೇಳಬೇಕು. ಇಲ್ಲದಿದ್ದರೆ ಮೋಕ್ಷ ಹಾಗೂ ಸಂಸಾರಾದಿಗಳಿಗೆ ಸಾಮಾನಾಧಿಕರಣ್ಯವು ಕೂಡುವುದಿಲ್ಲವೆಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಿದ್ದೇವೆ. ಆದ್ದರಿಂದ ಪ್ರತಿಬಿಂಬದಲ್ಲಿರುವ ವಕ್ರತೆಯು ತನಲ್ಲಿ ಇಲ್ಲವೆಂಬ ವೈಷಮ್ಯವು ಚಿನ್ಮಾತ್ರನಿಗೆ ತಿಳಿದೇ ಇರುತ್ತದೆ. ಮತ್ತು ಲೋಕದಲ್ಲಿ ತನಗಿಂತ ವಿಕಾರವಾದ

ಪ್ರತಿಬಿಂಬದಲ್ಲಿರುವ ಭೇದಭ್ರಮದಿಂದ ಅವನು ಕ್ರೀಡಿಸುವವನಾದರೂ ಕೂಡ ದುಃಖಿಯಾದ ಜೀವನಿಂದ ಅಭೇದಪ್ರಮಾವುಳ್ಳ ಬ್ರಹ್ಮನಿಗೆ ಕ್ರೀಡೆಯನ್ನೂ ಮಾಡಲೂ ಕೂಡ ಹೇಗೆ ಸಾಧ್ಯವಾಗುತ್ತದೆ? ದುಃಖವನ್ನು ಕೊಡುವ ಜೀವಾದಿಗಳಂತೆ ತಾನೂ ಕೂಡ ದುಃಖಿಯೇ ಆಗಬೇಕು.

**तस्मादस्याधिकरणस्य स्वमतप्रतिकूलत्वादेव परकीयभाष्ये ''न चेयं परमार्थविषया सृष्टिः'' इत्यादिना भामत्यामपि ''नेयं पारमार्थिकी सृष्टिर्येनानुयुज्येत प्रयोजनम् । नहि गन्धर्वनगरादिविभ्रमाः समुद्दिष्टप्रयोजनाः'' इत्यादिनाऽभ्युपेत्यवा दतोक्तेति ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् न प्रयोजनाधिकरण सम्पूर्णम् ।।९।।**

ಆದ್ದರಿಂದ ಈ ಅಧಿಕರಣವು ಅದ್ವೈತಮತಕ್ಕೆ ಪ್ರತಿಕೂಲವಾಗಿದೆ. ಆದ್ದರಿಂದಲೇ ಅವರ ಭಾಷ್ಯದಲ್ಲಿ 'ನ ಚೇಯಂ ಪರಮಾರ್ಥವಿಷಯಾ ಸೃಷ್ಟಿಃ' ಇತ್ಯಾದಿಯಾಗಿ ಹೇಳಿದ್ದಾರೆ. ಭಾಮತಿಯಲ್ಲೂ ಕೂಡ 'ನೇಯಂ ಪಾರಮಾರ್ಥಿಕೀ ಸೃಷ್ಟಿರ್ಯೇನಾನುಯುಜ್ಯೇತ ಪ್ರಯೋಜನಮ್ । ನಹಿ ಗಂಧರ್ವನಗರಾದಿವಿಭ್ರಮಾಃ ಸಮುದಿಷ್ಟಪ್ರಯೋಜನಾಃ' ಈ ಅಧಿಕರಣದಲ್ಲಿ ಹೇಳಲ್ಪಟ್ಟ ಸುಧೆಯು ಪಾರಮಾರ್ಥಿಕವಲ್ಲ. ಹಾಗಾಗಿದ್ದಲ್ಲಿ ಇದರಿಂದ ಪ್ರಯೋಜನವಿದೆಯೋ ಇಲ್ಲವೋ? ಎಂದು ವಿಚಾರ ಮಾಡಬಹುದಿತ್ತು. ಭ್ರಮೆಯಿಂದ ಸೃಷ್ಟಿ ಮಾಡಲ್ಪಟ್ಟ ಗಂಧರ್ವನಗರಾದಿಗಳಿಂದ ಹೇಗೆ ಸ್ವಲ್ಪವೂ ಪ್ರಯೋಜನವಿರುವುದಿಲ್ಲವೋ, ಅದರಂತೆ ಈ ಸೃಷ್ಟಿಯಿಂದಲೂ ಕೂಡ ಬ್ರಹ್ಮನಿಗೆ ಪ್ರಯೋಜನವಿರುವುದಿಲ್ಲ. ಆದ್ದರಿಂದ ಈ ಅಧಿಕರಣವು ಕೇವಲ ಅಂಗೀಕಾರಮಾತ್ರದಿಂದ ಹೊರಟಿದೆ ಎಂದು ಅದ್ವೈತಿಗಳೇ ಹೇಳಿದ್ದಾರೆ. ಅಂಗೀಕಾರವಾದದಿಂದ ಹೊರಟಿರುವ ಕಾರಣ ಈ ಅಧಿಕರಣವೇ ಅದ್ವೈತಿಗಳ ಮತದಲ್ಲಿ ವ್ಯರ್ಥವಾಯಿತು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ನ ಪ್ರಯೋಜನಾಧಿಕರಣವು ಸಂಪೂರ್ಣವಾಯಿತು

**प्रकाशः —**

**यदुक्तमिति ।।** ''न खलु ब्रह्म जगद्रचयितुमर्हति । प्रयोजनवत्त्वात् प्रवृत्ती-नामीश्वरस्य प्रयोजनाभावादित्याद्येन पूर्वपक्षयित्वा ''लोकवत्तु लीलाकैवल्यम्''

इत्यनेन सिद्धान्तितम् । तत्र लोकवदिति सूत्रतात्पर्यं ''केचिदिदं सूत्रमन्यथा व्याचक्षते'' इत्यादिना सुधोक्तं सङ्गृह्यानुवदति – **प्रयोजनेति** ।।

'ನ ಖಲು ಬ್ರಹ್ಮ ಜಗದ್ ರಚಯಿತುಮರ್ಹತಿ । ಪ್ರಯೋಜನವತ್ವಾತ್ ಪ್ರವೃತ್ತೀನಾಮೀಶ್ವರಸ್ಯ ಪ್ರಯೋಜನಾಭಾವಾದಿತ್ಯಾದ್ಯೇನ ಪೂರ್ವಪಕ್ಷಯಿತ್ವಾ 'ಲೋಕವತ್ತು ಲೀಲಾಕೈವಲ್ಯಮ್' ಬ್ರಹ್ಮನು ಈ ಜಗತ್ತನ್ನು ಸೃಷ್ಟಿ ಮಾಡಲು ಸಮರ್ಥನಲ್ಲ. ಏಕೆಂದರೆ ಸಕಲ ಪ್ರವೃತ್ತಿಗಳು ಪ್ರಯೋಜನವುಳ್ಳವುಗಳೇ ಆಗಿರುತ್ತವೆ. ಈಶ್ವರನಿಗೆ ಯಾವುದೇ ಪ್ರಯೋಜನವಿಲ್ಲವಾದ್ದರಿಂದ ಜಗತ್ತನ್ನು ಸೃಷ್ಟಿ ಮಾಡಲಾರ ಎಂದು ಪೂರ್ವಪಕ್ಷವನ್ನು ಮಾಡಿ, 'ಲೋಕವತ್ತು ಲೀಲಾಕೈವಲ್ಯಮ್' ಲೀಲೆಯೆಂಬ ಪ್ರಯೋಜನಕ್ಕೋಸ್ಕರ ಸೃಷ್ಟಿ ಮಾಡುತ್ತಾನೆಂದು ಸಿದ್ಧಾಂತ ಮಾಡಲಾಗಿದೆ. ಇಲ್ಲಿ 'ಲೋಕವತ್' ಎಂಬ ಸೂತ್ರದ ತಾತ್ಪರ್ಯವನ್ನು 'ಕೇಚಿದಿದಂ ಸೂತ್ರಮನ್ಯಥಾ ವ್ಯಾಚಕ್ಷತೇ' ಅದ್ವೈತಿಗಳು ಈ ಸೂತ್ರವನ್ನು ಅನ್ಯಥಾ ವ್ಯಾಖ್ಯಾನ ಮಾಡುತ್ತಾರೆ ಎಂಬುದಾಗಿ ಸುಧೆಯಲ್ಲಿ ಹೇಳಿದ್ದಾರೆ. ಅದನ್ನು ಸಂಗ್ರಹ ಮಾಡಿ, 'ಪ್ರಯೋಜನ' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ.

**प्रकाशः – श्रुताविति** ।। ''भोगार्थं सृष्टिरित्यन्ये क्रीडार्थमिति चापरे'' इति श्रुतावित्यर्थः । देवस्यायं सृष्ट्यादिविषयः एषः इच्छा तत्पूर्विका प्रवृत्तिरिति सुधोक्तोऽर्थः । 'इषु इच्छायाम्' इत्यतो भावे घञ् प्रत्ययः ।

'ಶ್ರುತೌ' ಎಂದರೆ 'ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ' ಭೋಗಕ್ಕೋಸ್ಕರ ಸೃಷ್ಟಿಯೆಂದು ಕೆಲವರು ಹೇಳುತ್ತಾರೆ. ಕ್ರೀಡೆಯೆಂಬ ಪ್ರಯೋಜನಕ್ಕೋಸ್ಕರ ಸೃಷ್ಟಿ ಎಂದು ಇನ್ನೂ ಕೆಲವು ಹೇಳುತ್ತಾರೆ ಎಂಬ ಶ್ರುತಿಯಲ್ಲಿ ಎಂದರ್ಥ. 'ದೇವಸ್ಯೈಷ ಸ್ವಭಾವೋಽಯಮ್' ಎಂಬ ಶ್ರುತಿಯಲ್ಲಿರುವ 'ಅಯಂ' ಪದಕ್ಕೆ ಸೃಷ್ಟ್ಯಾದಿವಿಷಯಕವಾದ ಎಂದರ್ಥ. 'ಏಷಃ' ಎಂಬ ಪದಕ್ಕೆ ಇಚ್ಛೆ ಎಂದರ್ಥ. ಸೃಷ್ಟ್ಯಾದಿ ವಿಷಯಕವಾದ ಇಚ್ಛೆ ಎಂದರ್ಥವು ತಿಳಿಯುತ್ತದೆ. ಇಂಥ ಪ್ರವೃತ್ತಿಯುಳ್ಳದ್ದು ಎಂಬರ್ಥವನ್ನು ಸುಧೆಯಲ್ಲಿ ಹೇಳಿದ್ದಾರೆ. 'ಇಷು ಇಚ್ಛಾಯಾಂ' ಎಂಬ ಧಾತುವಿನ ಮೇಲೆ ಭಾವಾರ್ಥದಲ್ಲಿ ಘಞ್ ಪ್ರತ್ಯಯವು ಬಂದು 'ಏಷಃ' ಎಂಬ ಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ 'ಅಯಂ' ಎಂಬುದು ವಿಶೇಷಣವಾಚಕವಾದ ಪದವಾಗಿದೆ. 'ಏಷಃ' ಎಂಬುದು ವಿಶೇಷ್ಯವಾಚಕವಾದ ಪದವಾಗಿದೆ. (ತತ್ವಪ್ರಕಾಶಿಕೆಯಲ್ಲಿ 'ಅಯಂ' ಎಂಬುದು ವಿಶೇಷಣವೆಂದು, 'ಏಷಃ' ವಿಶೇಷ್ಯವೆಂದು ವ್ಯಾಖ್ಯಾನ ಮಾಡಿದ್ದಾರೆ).

**प्रकाशः –** ईशस्य भ्रमाधिष्ठानत्वं वा भ्रान्तत्वं वा मायावित्वं वा । पक्षत्रयेऽप्ययुक्तत्वं व्यनक्ति – **न हीति** ।। मायावित्वमपि किं चिन्मात्रस्योत विशिष्टस्य ।

ಈಶ್ವರನು ಭ್ರಮೆಗೆ ಅಧಿಷ್ಠಾನನಾಗಿದ್ದಾನೆ. ಅಥವಾ ಭ್ರಾಂತನಾಗಿದ್ದಾನೆ, ಅಥವಾ ಮಾಯಾವಿಯಾಗಿದ್ದಾನೆ ಎಂಬುದಾಗಿ ಮೂರು ಪಕ್ಷವನ್ನು ಅದ್ವೈತಿಗಳು ಹೇಳಬೇಕು. ಈ ಮೂರು ಪಕ್ಷಗಳಲ್ಲೂ ಕೂಡ ಈ

ಅಧಿಕರಣವು ಅಯುಕ್ತವಾಗಿದೆ ಎಂಬುದನ್ನು 'ನ ಹಿ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ. ಮಾಯಾವಿತ್ವವೂ ಕೂಡ ಚಿನ್ಮಾತ್ರನಿಗೆ ಹೇಳುವಿರೋ? ಅಥವಾ ವಿಶಿಷ್ಟನಿಗೆ ಹೇಳುವಿರೋ? ಎಂಬುದಾಗಿ ವಿಕಲ್ಪವನ್ನು ಮಾಡಿರುತ್ತಾರೆ.

**प्रकाशः – पक्षद्वयमपि निराह – मायाविवदिति ।। न चिन्मात्रस्येति ।।** तस्योदासीनत्वादिति भावः ।

ಚಿನ್ಮಾತ್ರನು 'ಮಾಯಾವಿ' ಎಂದು, ಅಥವಾ ವಿಶಿಷ್ಟನು ಮಾಯಾವಿ ಎಂಬುದನ್ನು 'ಮಾಯಾವಿವತ್' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ. 'ನ ಚಿನ್ಮಾತ್ರಸ್ಯ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಚಿನ್ಮಾತ್ರನು ಉದಾಸೀನಸ್ವಭಾವನಾದ್ದರಿಂದ, ಅವನಲ್ಲಿ ಯಾವುದೇ ಧರ್ಮಗಳು ಬರುವುದಿಲ್ಲ ಎಂದು ತಿಳಿಯಬೇಕು.

**प्रकाशः** – अन्त्येऽपि कल्पकं स वा जीवो वा चिन्मात्रं वा । पक्षत्रयेऽपि दोषमाह – **तत्प्रतीति ।। उक्तत्वादिति ।।** ''इतरव्यपदेशादित्यत्र ।। **प्रमावत इति।।** ''अधिकं तु भेदनिर्देशात्'' इत्यत्र भामत्यां तथोक्तेरिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे न प्रयोजनाधिकरणं सम्पूर्णम् ।।२।।**

ವಿಶಿಷ್ಟನು ಕಲ್ಪಕನೆಂದರೆ ಅವನು ಜೀವನೋ, ಅಥವಾ ಚಿನ್ಮಾತ್ರನೋ? ಮೂರು ಪಕ್ಷಗಳಲ್ಲೂ ಕೂಡ ದೋಷವನ್ನು 'ತತ್ಪ್ರತಿ' ಎಂಬ ಗ್ರಂಥದಿಂದ ಹೇಳಿರುತ್ತಾರೆ. 'ಉಕ್ತತ್ವಾತ್' ಎಂದರೆ 'ಇತರವ್ಯಪದೇಶಾಧಿಕರಣದಲ್ಲಿ ಹೇಳಲಾಗಿದೆ ಎಂದರ್ಥ. 'ಪ್ರಮಾವತಃ' ಎಂಬಲ್ಲಿ 'ಅಧಿಕಂ ತು ಭೇದನಿರ್ದೇಶಾತ್' ಎಂಬ ಸೂತ್ರದಲ್ಲಿ ಭಾಮತಿಕಾರನು ಹೇಳಿರುತ್ತಾನೆ ಎಂಬರ್ಥವನ್ನು ವಿವಕ್ಷಿಸಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ನ ಪ್ರಯೋಜನಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ವೈಷಮ್ಯನೈರ್ಘೃಣ್ಯಾಧಿಕರಣ

(೨-೧-೧೦)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,

ಇವುಗಳ ವಿವರಣೆಯೊಂದಿಗೆ

ಸರಳ ಕನ್ನಡ ಅನುವಾದ

ಅಧಿಕರಣವು ಅಯುಕ್ತವಾಗಿದೆ ಎಂಬುದನ್ನು 'ನ ಹಿ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ. ಮಾಯಾವಿತ್ವವೂ ಕೂಡ ಚಿನ್ಮಾತ್ರನಿಗೆ ಹೇಳುವಿರೋ? ಅಥವಾ ವಿಶಿಷ್ಟನಿಗೆ ಹೇಳುವಿರೋ? ಎಂಬುದಾಗಿ ವಿಕಲ್ಪವನ್ನು ಮಾಡಿರುತ್ತಾರೆ.

**प्रकाशः – पक्षद्वयमपि निराह – मायाविवदिति ।। न चिन्मात्रस्येति ।।** तस्योदासीनत्वादिति भावः ।

ಚಿನ್ಮಾತ್ರನು 'ಮಾಯಾವಿ' ಎಂದು, ಅಥವಾ ವಿಶಿಷ್ಟನು ಮಾಯಾವಿ ಎಂಬುದನ್ನು 'ಮಾಯಾವಿವತ್' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ. 'ನ ಚಿನ್ಮಾತ್ರಸ್ಯ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಚಿನ್ಮಾತ್ರನು ಉದಾಸೀನಸ್ವಭಾವನಾದ್ದರಿಂದ, ಅವನಲ್ಲಿ ಯಾವುದೇ ಧರ್ಮಗಳು ಬರುವುದಿಲ್ಲ ಎಂದು ತಿಳಿಯಬೇಕು.

**प्रकाशः –** अन्त्येऽपि कल्पकं स वा जीवो वा चिन्मात्रं वा । पक्षत्रयेऽपि दोषमाह **– तत्प्रतीति ।। उक्तत्वादिति ।।** ''इतरव्यपदेशादित्यत्र ।। **प्रमावत इति।।** ''अधिकं तु भेदनिर्देशात्'' इत्यत्र भामत्यां तथोक्तेरिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे न प्रयोजनाधिकरणं सम्पूर्णम् ।।२।।**

ವಿಶಿಷ್ಟನು ಕಲ್ಪಕನೆಂದರೆ ಅವನು ಜೀವನೋ, ಅಥವಾ ಚಿನ್ಮಾತ್ರನೋ? ಮೂರು ಪಕ್ಷಗಳಲ್ಲೂ ಕೂಡ ದೋಷವನ್ನು 'ತತ್ಪ್ರತಿ' ಎಂಬ ಗ್ರಂಥದಿಂದ ಹೇಳಿರುತ್ತಾರೆ. 'ಉಕ್ತತ್ವಾತ್' ಎಂದರೆ 'ಇತರವ್ಯಪದೇಶಾಧಿಕರಣದಲ್ಲಿ ಹೇಳಲಾಗಿದೆ ಎಂದರ್ಥ. 'ಪ್ರಮಾವತಃ' ಎಂಬಲ್ಲಿ 'ಅಧಿಕಂ ತು ಭೇದನಿರ್ದೇಶಾತ್' ಎಂಬ ಸೂತ್ರದಲ್ಲಿ ಭಾಮತಿಕಾರನು ಹೇಳಿರುತ್ತಾನೆ ಎಂಬರ್ಥವನ್ನು ವಿವಕ್ಷಿಸಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ನ ಪ್ರಯೋಜನಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ವೈಷಮ್ಯನೈರ್ಘೃಣ್ಯಾಧಿಕರಣ

(೨-೧-೧೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

॥ ಶ್ರೀಗುರುಭ್ಯೋ ನಮಃ ॥

# ವೈಷಮ್ಯನೈರ್ಘೃಣ್ಯಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

ಬ್ರಹ್ಮಮೀಮಾಂಸಾಶಾಸ್ತ್ರ

## सूत्रम् – वैषम्यनैर्घृण्ये न सापेक्षत्वात्तथाहि दर्शयति।।

ಪರಮಾತ್ಮನು ಕೆಲವು ಜೀವರಿಗೆ ಸುಖವನ್ನು ನೀಡುತ್ತಾನೆ. ಇನ್ನು ಕೆಲವು ಜೀವರಿಗೆ ದುಃಖವನ್ನು ನೀಡುತ್ತಾನೆ. ಯಾವುದೇ ಕಾರಣಗಳಿಲ್ಲದೆ ಹೀಗೆ ಪಕ್ಷಪಾತ ಮಾಡುವುದು ತಪ್ಪಲ್ಲವೇ ಮತ್ತು ದುಃಖವನ್ನು ನೀಡುವುದರಿಂದ ನಿಷ್ಕಾರುಣ್ಯ ಮೊದಲಾದ ದೋಷಗಳು ಬರುತ್ತದಲ್ಲವೇ ? ಎಂದು ಸಂಶಯ ಪಡಬಾರದು. ಏಕೆಂದರೆ ಜೀವರು ಸಂಪಾದಿಸಿದ ಕರ್ಮಗಳನ್ನು ಅಪೇಕ್ಷಿಸಿ ಪರಮಾತ್ಮನು ದುಃಖಾದಿಗಳನ್ನು ನೀಡುತ್ತಾನೆ. 'ಪುಣ್ಯೇನ ಪುಣ್ಯಂ' ಎಂಬ ಶ್ರುತಿಯು ಇದನ್ನೇ ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ವೈಷಮ್ಯದೋಷ ನೈರ್ಘೃಣ್ಯದೋಷಗಳು ಬರುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – वैषम्यनैर्घृण्ये न सापेक्षत्वात्तथाहि दर्शयति ।।** स्वातन्त्र्यसिद्ध्यर्थमीश्वरस्य जीवेभ्यः फलदाने कर्मापेक्षाङ्गीकारे निर्निमित्तं वैषम्येणं फलदातुस्तस्य **वैषम्यपैर्घृण्ये** विषमत्वनिर्दयत्वे ये प्रसक्ते ते **न** स्तः । कुतः **सापेक्षत्वात्** ईश्वरस्य कर्मापेक्षावत्त्वाभ्युपगमात् । तत्कुतः? हि यस्मात्। 'पुण्येन पुण्यं' इति श्रुतिः **तथा दर्शयति** प्रतिपादयति तस्मादित्यर्थः ।।१।।

ಅರ್ಥ -- ಈಶ್ವರನು ಸ್ವತಂತ್ರಪುರುಷನಾಗಿದ್ದಾನೆ. ಸಕಲ ಜೀವರಿಗೂ ಅವರವರ ಕರ್ಮಗಳನ್ನು ನೋಡಿಕೊಂಡು ಸುಖ ದುಃಖಗಳನ್ನು ಉಣಿಸುತ್ತಾನೆ. ಹೀಗೆ ಹೇಳುವುದರಿಂದ ಒಂದು ಸಂಶಯವು ಪರಿಹಾರವಾಗುತ್ತದೆ. ಈಶ್ವರನು ಏನೂ ಕಾರಣವಿಲ್ಲದೆ ಫಲಗಳನ್ನು ನೀಡುತ್ತಾನಾದರೆ ವೈಷಮ್ಯನೈರ್ಘೃಣ್ಯೇ =

ಪರಿಪೂರ್ಣಚಂದ್ರಿಕಾ

ಪಕ್ಷಪಾತ ಹಾಗೂ ನಿಷ್ಕರುಣೆ ಎಂಬರಡು ದೋಷಗಳು ಬರುತ್ತದಲ್ಲವೇ ? ಎಂಬ ಈ ಆಕ್ಷೇಪವು. ನ = ತಪ್ಪು ಹಿ = ಏಕೆಂದರೆ ಸುಖ ದುಃಖಗಳನ್ನು ನೀಡುವ ಈಶ್ವರನು ಆಯಾ ಜೀವರ ಕರ್ಮವನ್ನು ಅಪೇಕ್ಷಿಸುತ್ತಾನೆಂದು ಅಂಗೀಕರಿಸಲಾಗಿದೆ. 'ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ' ಎಂಬ ಶ್ರುತಿಯು ತಥಾ ದರ್ಶಯತಿ = ಹಾಗೆಯೇ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿದೆ.

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — सर्वकर्तृत्वे वैषम्यनैर्घृण्ये तस्येति ।**

ಅನುವಾದ - ಪರಮಾತ್ಮನು ಸಕಲಕ್ಕೂ ಕರ್ತೃವಾಗಿದ್ದಾನೆ ಎಂದು ಪ್ರತಿಪಾದನೆ ಮಾಡಿದರೆ 'ವೈಷಮ್ಯನೈರ್ಘೃಣ್ಯ' ಎಂಬ ದೋಷವು ಬರುತ್ತದೆ.

ಪ್ರತಿಪದಾರ್ಥ -- ಯುಕ್ತಿಬದ್ಧವಾದ ಪೂರ್ವಪಕ್ಷ ಹೀಗಿದೆ - ಸರ್ವಕರ್ತೃತ್ವೇ = ಸಕಲಕ್ಕೂ ಭಗವಂತನೇ ಕರ್ತೃವಾಗುವುದಾದರೆ, ತಸ್ಯ = ಅವನಿಗೆ, ವೈಷಮ್ಯನೈರ್ಘೃಣ್ಯೇ = ಪಕ್ಷಪಾತ ಮಾಡುವಿಕೆ ಎಂಬ ದೋಷವು ಬರುತ್ತದೆ. ಇತಿ = ಇಷ್ಟು ಪೂರ್ವಪಕ್ಷ.

**भाष्यम् — अतो वक्ति —**

**।। वैषम्यनैर्घृण्ये न सापेक्षत्वात् तथा हि दर्शयति ।।१।।**

**कर्मापेक्षया फलदातृत्वान्न तस्य वैषम्यनैर्घृण्ये ।**
**'पुण्येन पुण्यं लोकं नयति पापेन पापम्' (प्र.३.७) इति हि श्रुतिः ।।१।।**

ಅನುವಾದ - ಈ ಆಕ್ಷೇಪಕ್ಕೆ ಉತ್ತರವನ್ನು ಸೂತ್ರವೇ ನೀಡುತ್ತಿದೆ. ಜೀವರ ಕರ್ಮವನ್ನು ಅಪೇಕ್ಷಿಪಟ್ಟು ಸುಖದುಃಖಾದಿಗಳ ಫಲವನ್ನು ನೀಡುತ್ತಾನಾದ್ದರಿಂದ ಅವನಿಗೆ 'ವೈಷಮ್ಯನೈರ್ಘೃಣ್ಯ' ಎಂಬ ದೋಷವಿಲ್ಲ. ಜೀವಿಯು ಪುಣ್ಯದ ಆಚರಣೆಯಿಂದ ಪುಣ್ಯಲೋಕವನ್ನು ಪಾಪದ ಆಚರಣೆಯಿಂದ ಪಾಪದ ಲೋಕವನ್ನು ಹೊಂದುತ್ತಾನೆಂದು ಶ್ರುತಿಯೇ ಹೇಳುತ್ತಿದೆ. ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ -

ಪ್ರತಿಪದಾರ್ಥ -- ಕರ್ಮಾಪೇಕ್ಷಯಾ = ಆಯಾ ಜೀವರ ಕರ್ಮಕ್ಕೆ ಅನುಸಾರಿಯಾಗಿ, ಫಲದಾತೃತ್ವಾತ್ = ಶ್ರೀಹರಿಯು ಫಲವನ್ನು ನೀಡುತ್ತಾನಾದ್ದರಿಂದ, ತಸ್ಯ = ಪರಮಾತ್ಮನಿಗೆ ವೈಷಮ್ಯನೈರ್ಘೃಣ್ಯೇ = ಪಕ್ಷಪಾತ ಮಾಡುವಿಕೆ ಎಂಬ ದೋಷವು, ನ = ಬರುವುದಿಲ್ಲ. ಏಕೆಂದರೆ ಪುಣ್ಯೇನ = ಪುಣ್ಯಕರ್ಮದಿಂದ, ಪುಣ್ಯಲೋಕಂ = ಪುಣ್ಯಲೋಕವನ್ನು, ಪಾಪೇನ = ಪಾಪಕರ್ಮದಿಂದ, ಪಾಪಂ = ಪಾಪಲೋಕವನ್ನು, ನಯತಿ = ಹೊಂದುತ್ತಾನೆ, ಇತಿ ಹಿ ಶ್ರುತಿಃ = ಹೀಗೆ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र विष्णोः सर्वकर्तृत्वे वैषम्यादिदोषप्राप्तियुक्तिविरोधपरिहारादस्ति शास्त्रादिसङ्गतिः । जगज्जन्मादिकर्तृत्वं हरेरुक्तम् । तस्य युक्तिविरोधे लक्षणस्यासम्भवित्वं स्यादतोऽसौ निराकर्तव्य एव । जन्मादिकर्तृत्वमेव विषयः । ईश्वरस्य युक्तमयुक्तं वेति सन्देहः । श्रुतिविरोधदर्शनं च सन्देहबीजम्।**

ವಿಷ್ಣುವಿಗೆ ಸರ್ವಕರ್ತೃತ್ವವನ್ನು ಹೇಳಿದರೆ ವೈಷಮ್ಯಾದಿದೋಷಗಳು ಪ್ರಾಪ್ತವಾಗುತ್ತವೆ ಎಂಬ ಯುಕ್ತಿವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ಜಗಜ್ಜನ್ಮಾದಿಕರ್ತೃತ್ವವು ಶ್ರೀಹರಿಯಲ್ಲಿ ಹೇಳಲಾಯಿತು. ಈ ಲಕ್ಷಣಕ್ಕೆ ಯುಕ್ತಿವಿರೋಧವು ಪ್ರಾಪ್ತವಾದರೆ ಲಕ್ಷಣವು ಅಸಂಭಾವಿತವಾಗುತ್ತದೆ. ಆದ್ದರಿಂದ ಯುಕ್ತಿವಿರೋಧವನ್ನು ಪರಿಹಾರ ಮಾಡಲೇಬೇಕು.

ಜನ್ಮಾದಿಕರ್ತೃತ್ವವೇ ವಿಷಯ. ಈಶ್ವರನಿಗೆ ಇದು ಯುಕ್ತವಾಗುತ್ತದೋ ಇಲ್ಲವೋ ? ಎಂಬುದು ಸಂದೇಹ. ಶ್ರುತಿವಿರೋಧದರ್ಶನವು ಸಂದೇಹಕಾರಣ.

ವಿವರಣೆ - ಟೀಕೆಯಲ್ಲಿ 'ವೈಷಮ್ಯಾದಿದೋಷ' ಎಂಬಲ್ಲಿರುವ 'ಆದಿ' ಪದದಿಂದ ಅಸ್ವಾತಂತ್ರ್ಯವೇ ಮೊದಲಾದ ವಿರೋಧಿಯುಕ್ತಿಗಳನ್ನು ವಿವಕ್ಷಿಸಬೇಕು. ಆದ್ದರಿಂದ 'ಬಹುಯುಕ್ತಯಃ' ಎಂಬುದರಿಂದಲೇ ಈ ಅಧಿಕರಣದ ಪೂರ್ವಪಕ್ಷಯುಕ್ತಿಗಳನ್ನು ಸಂಗ್ರಹ ಮಾಡಿದಂತಾಯಿತು. ಹಿಂದಿನ ಅಧಿಕರಣದಲ್ಲಿ ಲೋಕದ ಅನುಗ್ರಹಕ್ಕಾಗಿ ಭಗವಂತನು ಸೃಷ್ಟ್ಯಾದಿಕ್ರೀಡೆಯನ್ನು ಮಾಡುತ್ತಾನೆಂದು ಹೇಳಿದರು. ಹಾಗಾದರೆ ಪ್ರತಿಯೊಬ್ಬರಿಗೂ ಸುಖವೇ ಆಗಲಿ ಯಾರಿಗೂ ದುಃಖವೇ ಆಗುವುದು ಬೇಡ. ಒಂದು ವೇಳೆ ಕೆಲವರಿಗೆ ಮಾತ್ರ ಸುಖವನ್ನು ಪರಮಾತ್ಮನು ಕೊಡುವುದಾದರೆ ಅವನಿಗೆ ವೈಷಮ್ಯ ಅಸ್ವಾತಂತ್ರ್ಯ ಮೊದಲಾದ ದೋಷಗಳು ಪ್ರಾಪ್ತವಾಗುತ್ತವೆ ಎಂಬ ಆಕ್ಷೇಪವು ಹುಟ್ಟುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯಸಂಗತಿಯನ್ನು ತಿಳಿಯಬೇಕು. (ಭಾವಬೋಧ)

**तत्वप्रकाशिका – सयुक्तिकं पूर्वपक्षयति ।। सर्वेति ।। न विष्णोः सर्वकर्तृत्वं युक्तम् । तथा हि । किमसौ प्राणिकर्मसापेक्षः सृष्ट्यादि करोति तदनपेक्षो वा । नाद्यः । नियमेन कर्मापेक्षया प्रवर्तमानस्यास्वा तन्त्र्यापातात्। अस्वतन्त्रस्य च सर्वकर्तृत्वानुपपत्तिः । द्वितीये वैषम्यनैर्घृण्ये स्याताम् । निर्निमित्तं विभागेन सुखादिप्रदानात् । वैषम्यादि दोषवतश्च न सर्वकर्तृत्वम्। कर्मानपेक्षया सर्वकर्तृत्वे**

**च 'ज्योतिष्टोमेन स्वर्गकामो यजेत' इत्यादिवेदाप्रामाण्यं च स्यात् । अतो हरेः सर्वकर्तृत्वायोगान्न युक्तं लक्षणमिति भावः ।**

ಯುಕ್ತಿಬದ್ಧವಾದ ಪೂರ್ವಪಕ್ಷವನ್ನು ಸರ್ವಕರ್ತೃತ್ವ ಎಂಬ ಭಾಷ್ಯದಿಂದ ಹೇಳುತ್ತಿದ್ದಾರೆ. ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವಾಗುವುದಿಲ್ಲ. ಅದು ಹೀಗೆ - ವಿಷ್ಣುವು ಸಕಲಜೀವರ ಕರ್ಮವನ್ನು ಅಪೇಕ್ಷಿಸಿ ಸೃಷ್ಟ್ಯಾದಿಗಳನ್ನು ಮಾಡುತ್ತಾನೋ? ಅಥವಾ ಅಪೇಕ್ಷಿಸದೆ ಸೃಷ್ಟ್ಯಾದಿ-ಕ್ರಿಯೆಯನ್ನು ಮಾಡುತ್ತಾನೋ? ಮೊದಲನೆಯ ಪಕ್ಷ ತಪ್ಪು. ನಿಯಮೇನ ಕರ್ಮವನ್ನು ಅಪೇಕ್ಷಿಸಿ ಸೃಷ್ಟಿಯನ್ನು ಮಾಡುವುದಾದರೆ ಅಸ್ವಾತಂತ್ರ್ಯದೋಷವು ಬರುತ್ತದೆ. ಅಸ್ವತಂತ್ರನಾದವನಿಗೆ ಕರ್ತೃತ್ವವು ಸರ್ವಥಾ ಯುಕ್ತವಾಗುವುದಿಲ್ಲ. ಕರ್ಮವನ್ನು ಅಪೇಕ್ಷಿಸದೆ ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂದರೆ ವೈಷಮ್ಯ ಹಾಗೂ ನೈರ್ಘೃಣ್ಯದೋಷಗಳು ಪ್ರಾಪ್ತವಾಗುತ್ತವೆ. ಯಾವುದೇ ನಿಮಿತ್ತವಿಲ್ಲದೆ ಒಬ್ಬರಿಗೆ ಸುಖವನ್ನು ಮತ್ತೊಬ್ಬರಿಗೆ ದುಃಖವನ್ನು ಕೊಡುವುದರಿಂದ ಈ ದೋಷಗಳು ಬರುತ್ತವೆ. ವೈಷಮ್ಯಾದಿದೋಷವುಳ್ಳವನಿಗೂ ಕೂಡ ಸರ್ವಕರ್ತೃತ್ವಗಳು ಯುಕ್ತವಾಗುವುದಿಲ್ಲ. ಕರ್ಮವನ್ನು ಅಪೇಕ್ಷಿಸದೆ ಈಶ್ವರನು ಸೃಷ್ಟಿಯನ್ನು ಮಾಡುತ್ತಾನೆಂದು ಹೇಳಿದರೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವೇದವಾಕ್ಯಗಳಿಗೆ ಅಪ್ರಾಮಾಣ್ಯ ದೋಷವು ಬರುತ್ತದೆ. ಆದ್ದರಿಂದ ಶ್ರೀಹರಿಗೆ ಸರ್ವಕರ್ತೃತ್ವವೇ ಯುಕ್ತವಾಗುವುದಿಲ್ಲವಾದ್ದರಿಂದ ಸರ್ವಕರ್ತೃತ್ವಲಕ್ಷಣವು ಅಯುಕ್ತವಾಯಿತು. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

ಈ ಸೂತ್ರದಲ್ಲಿ ವೈಷಮ್ಯನೈರ್ಘೃಣ್ಯ ಎಂಬ ದೋಷವನ್ನು ಪರಮಾತ್ಮನಲ್ಲಿ ಆಕ್ಷೇಪಿಸಿ ಉತ್ತರಿಸಲಾಗಿದೆ. 'ವೈಷಮ್ಯ' ಎಂದರೆ ಒಬ್ಬನಿಗೆ ಸುಖನೀಡಿ ಮತ್ತೊಬ್ಬರಿಗೆ ದುಃಖವನ್ನು ನೀಡುವುದು. 'ನೈರ್ಘೃಣ್ಯ' ಎಂದರೆ ತಾನೇ ಕೊಟ್ಟ ದುಃಖದಿಂದ ಯಾರು ಸಂಕಟಪಡುತ್ತಾರೋ ಅವರನ್ನು ನೋಡಿ ಕೃಪೆಯನ್ನು ಹೊಂದದೆ ಇರುವುದು. ಇಂಥ ವೈಷಮ್ಯನೈರ್ಘೃಣ್ಯ ಎಂಬ ದೋಷವು ಪರಮಾತ್ಮನಿಗೆ ಬರುತ್ತದೆಂಬುದು ಆಕ್ಷೇಪ. ಈ ದೋಷಗಳ ಜೊತೆ ಅಸ್ವಾತಂತ್ರ್ಯ ಮೊದಲಾದ ದೋಷಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕು.

ಪರಮಾತ್ಮನು ಕರ್ಮಾದಿಗಳನ್ನು ಅಪೇಕ್ಷೆಪಡದೆ ಸೃಷ್ಟಿ ಮಾಡುತ್ತಾನೆಂದು ಹೇಳಿದರೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವಿಧಿವಾಕ್ಯಗಳು ಅಪ್ರಮಾಣವಾಗುತ್ತವೆ. ಏಕೆಂದರೆ ಸ್ವರ್ಗ ಎಂಬ ಫಲಕ್ಕೋಸ್ಕರ ಜ್ಯೋತಿಷ್ಟೋಮ ಎಂಬ ಕರ್ಮವು ಫಲಪ್ರದವೆಂದು ತಿಳಿಯುತ್ತದೆ. ಪ್ರಕೃತ ಕರ್ಮವನ್ನು ಅಪೇಕ್ಷೆಪಡದೆ ಭಗವಂತನು ಫಲವನ್ನು ನೀಡುತ್ತಾನೆಂದು ಹೇಳಿದರೆ ಕರ್ಮಫಲವಿಧಾಯಕವಾದ ವಾಕ್ಯಗಳು ಅಪ್ರಮಾಣವಾಗುತ್ತವೆ. ಹೀಗೆ ಭಗವಂತನು ಕರ್ಮವನ್ನು ಅಪೇಕ್ಷೆಪಟ್ಟರೆ. ಯುಕ್ತಿವಿರೋಧವಿದೆ. ಕರ್ಮವನ್ನು ಅಪೇಕ್ಷೆ ಪಡದಿದ್ದರೂ ಯುಕ್ತಿವಿರೋಧವಿದೆ ಎಂಬುದು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – सिद्धान्तयत्सूत्रमवतार्य व्याचष्टे।। अत इति ।। युक्तमेव विष्णोः सर्वकर्तृत्वम् । न चोक्तदोषप्रसङ्गः । कर्मापेक्षया फलदातृत्वाङ्गीकारे वैषम्यादिदोषाभावादिति भावः ।। ३५ ।।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ 'ಅತಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ವಿಷ್ಣುವಿಗೆ ಸರ್ವಕರ್ತೃತ್ವವನ್ನು ಹೇಳಿದ್ದು ಯುಕ್ತವೇ ಆಗಿದೆ. ಹಿಂದಿನ ದೋಷಕ್ಕೆ ಅವಕಾಶವಿಲ್ಲ. ಕರ್ಮವನ್ನು ಅಪೇಕ್ಷಿಪಟ್ಟು ಫಲವನ್ನು ನೀಡುತ್ತಾನಾದ್ದರಿಂದ ವೈಷಮ್ಯಾದಿ ದೋಷಗಳಿಗೆ ಅವಕಾಶವಿಲ್ಲ.

ವಿವರಣೆ - ಜೀವರು ಯಾವ ಕರ್ಮಗಳನ್ನು ಅನುಷ್ಠಾನ ಮಾಡುತ್ತಾರೋ ಅದಕ್ಕೆ ಅನುಸಾರಿಯಾಗಿಯೇ ಪರಮಾತ್ಮನು ಸುಖದುಃಖಾದಿಗಳನ್ನು ನೀಡುತ್ತಾನೆ. ಆದ್ದರಿಂದ ವೈಷಮ್ಯ ಹಾಗೂ ನೈರ್ಘೃಣ್ಯ ದೋಷಗಳಿಗೆ ಅವಕಾಶವಿಲ್ಲ. ಜೀವನು ಮಾಡಿದ ಪುಣ್ಯದಿಂದ ಪರಮಾತ್ಮನು ಪುಣ್ಯಲೋಕವನ್ನು ನೀಡುತ್ತಾನೆ. ಜೀವನು ಮಾಡಿದ ಪಾಪಕರ್ಮದಿಂದ ಪರಮಾತ್ಮನು ಪಾಪಲೋಕವನ್ನು ನೀಡುತ್ತಾನೆ.

## ಬ್ರಹ್ಮಸೂತ್ರ

**सूत्रम् – न कर्माविभागादिति चेन्नानादित्वात् ।।**

ಜೀವರ ಕರ್ಮಗಳನ್ನು ಅಪೇಕ್ಷಿಸಿ ಪರಮಾತ್ಮನು ಸುಖ ದುಃಖಾದಿಗಳನ್ನು ನೀಡುತ್ತಾನೆ. ಆದ್ದರಿಂದ ವೈಷಮ್ಯಾದಿದೋಷಗಳು ಬರುವುದಿಲ್ಲ ಎಂಬ ಸಮರ್ಥನೆಯು ತಪ್ಪು. ಏಕೆಂದರೆ ಅವನು ಸ್ವತಂತ್ರನಾದ್ದರಿಂದ ಯಾವ ಕರ್ಮವನ್ನು ಅಪೇಕ್ಷಿಸುವುದಿಲ್ಲ. ತಾನೇ ಮಾಡಿಸಿದ ಕರ್ಮವನ್ನು ಅವಲಂಬಿಸಿ ಪುನಃ ತಾನೇ ಅದಕ್ಕೆ ಸುಖ ದುಃಖಾದಿಫಲಗಳನ್ನು ನೀಡಿದರೆ ವೈಷಮ್ಯಾದಿದೋಷಗಳು ಹೇಗೆ ಪರಿಹಾರವಾಗುತ್ತದೆ. ಈ ಪೂರ್ವಪಕ್ಷವು ತಪ್ಪು. ಏಕೆಂದರೆ, ಕರ್ಮವು ಈಶ್ವರನಿಂದ ಮಾಡಿಸಿದ್ದಲ್ಲ ಅನಾದಿಯಾಗಿದೆ. ಅನಾದಿಯಾದ ಕರ್ಮವನ್ನು ಅನುಸರಿಸಿ ಪರಮಾತ್ಮನು ಪ್ರತಿಯೊಂದು ಕೆಲಸವನ್ನು ಜೀವರಿಂದ ಮಾಡಿಸುತ್ತಾನೆ. ಆದ್ದರಿಂದ ಅವನಿಗೆ ವೈಷಮ್ಯ ದೋಷವು ಬರುವುದಿಲ್ಲ.

## ಸೂತ್ರದೀಪಿಕಾ

**सूत्रदीपिका – न कर्माविभागादिति चेन्नानादित्वात् ।।** वैषम्यनैर्घृण्यादिदोष-परिहाराय ईशेनापेक्षणीयं यत्कर्म तन्नास्तीति विशिष्टनिषेधः । कुतः? **अविभागात्** तस्य कर्मणः अस्वतन्त्रवस्तुभ्यः अविभक्तत्वात् । अस्वतन्त्रत्वादिति यावत् । तथाच स्वाधीनकर्मापेक्षया वैषम्यादेरपरिहार इति चेन्न । कुतः? **अनादित्वात्**

कर्मपरम्परायाः अनादित्वादित्यर्थः । तथा चेश्वरः पूर्वपर्वमपेक्ष्योत्तरोत्तर-कर्म जीवेन कारयतीत्यङ्गीकारेण कर्मणः अपेक्षणीयत्वापत्तेः नोक्तदोष इति भावः ।।२।।

ಅರ್ಥ -- ವೈಷಮ್ಯ ಹಾಗೂ ನೈರ್ಘೃಣ್ಯ ಎಂಬ ಎರಡು ದೋಷಗಳ ಪರಿಹಾರಕ್ಕಾಗಿ ಈಶ್ವರನು ಜೀವರ ಕರ್ಮವನ್ನು ಅಪೇಕ್ಷಿಸಿ ಸುಖ ದುಃಖಾದಿಗಳನ್ನು ನೀಡುತ್ತಾನೆ ಎಂದು ಹೇಳಲಾಯಿತು. ಆದರೆ ಈಶ್ವರನು ನ ಕರ್ಮ = ಯಾವುದೇ ಕರ್ಮವನ್ನು ಅವಲಂಬಿಸಬೇಕಾಗಿಲ್ಲ. ಏಕೆಂದರೆ ಅವಿಭಾಗಾತ್ = ಜೀವನಲ್ಲಿರುವ ಕರ್ಮವು ಅಸ್ವತಂತ್ರವಾದ ವಸ್ತುಗಳಿಂದ ಅವಿಭಕ್ತವಾಗಿದೆ. ಅಂದರೆ ಆ ಕರ್ಮವೂ ಕೂಡ ಈಶ್ವರನಿಂದಲೇ ಮಾಡಿಸಲ್ಪಟ್ಟಿದೆ. ಹಾಗಾಗಿ ತನ್ನ ಅಧೀನವಾದ ಕರ್ಮದಿಂದ ಜೀವಾದಿಗಳಿಗೆ ಸುಖ ದುಃಖಾದಿಗಳನ್ನು ನೀಡಿದರೆ ವೈಷಮ್ಯ ದೋಷವು ಪರಿಹಾರವಾಗುವುದಿಲ್ಲ. ಇತಿ ಚೇನ್ನ = ಈ ಆಕ್ಷೇಪವು ತಪ್ಪು. ಅನಾದಿತ್ವಾತ್ = ಕರ್ಮ ಪರಂಪರೆಯು ಅನಾದಿಯಾಗಿದೆ. ಹಿಂದಿನ ಹಿಂದಿನ ಕರ್ಮಗಳನ್ನು ಅನುಸರಿಸಿ ಮುಂದಿನ ಕರ್ಮಗಳನ್ನು ಈಶ್ವರನು ಮಾಡಿಸುತ್ತಾನೆ. ಆದ್ದರಿಂದ ಅವನಿಗೆ ವೈಷಮ್ಯ ದೋಷವಾಗಲೀ ನೈರ್ಘೃಣ್ಯ ದೋಷವಾಗಲೀ ಬರುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् -- ।। न कर्माविभागादिति चेन्नानादित्वात् ।।२।।**

**यदपेक्षयाऽसौ फलं ददाति न तत्कर्म । 'एष ह्येव साधु कर्म कारयति तं यमेभ्यो लोकेभ्य उन्निनीषत एष उ एवासाधु कर्म कारयति तं यमधो निनीषते' (कौ. ३.८) इति श्रुतेः कर्मणोऽपि तन्निमित्तत्वादिति चेत् --**

ಅನುವಾದ - ಪರಮಾತ್ಮನು ಯಾವ ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡುತ್ತಾನೊ ಅಂಥ ಕರ್ಮವು ಇರಲು ಸಾಧ್ಯವಿಲ್ಲ. ಏಕೆಂದರೆ ಪರಮಾತ್ಮನೇ ಎಲ್ಲರ ಮೂಲಕ ಒಳ್ಳೆಯ ಕೆಲಸವನ್ನು ಮಾಡಿಸುತ್ತಾನೆ. ಅಂಥವರನ್ನು ಮೇಲಿನ ಲೋಕಕ್ಕೆ ಕೊಂಡೊಯ್ಯುತ್ತಾನೆ.ಅಶುಭಕರ್ಮಗಳನ್ನು ಮಾಡಿಸಿ ಕೆಳಗಿನ ಲೋಕ್ಕೆ ತಳ್ಳುತ್ತಾನೆ. ಹೀಗೆ ಆ ಕರ್ಮವೂ ಕೂಡ ಭಗವಂತ ಅಧೀನವೇ ಆಗಿದೆ. ಆದ್ದರಿಂದ ಶ್ರೀಹರಿಯಲ್ಲಿ ಪಕ್ಷಪಾತ ದೊಷವು ಪರಿಹಾರವಾಗುವುದಿಲ್ಲ.

ಪ್ರತಿಪದಾರ್ಥ -- ಕರ್ಮವನ್ನು ಅಪೇಕ್ಷಿಸಿ ಫಲವನ್ನು ಕೊಡುತ್ತಾನೆಂಬ ಪ್ರಮೇಯವನ್ನೇ ಆಕ್ಷೇಪಮಾಡಿ ಉತ್ತರಿಸುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಅಸೌ = ಈ ಪರಮಾತ್ಮನು, ಯದಪೇಕ್ಷಯಾ = ಯಾವ ಕರ್ಮವನ್ನು ಅಪೇಕ್ಷಿಸಿ, ಫಲಂ = ಯಾವ ಫಲವನ್ನು, ದಧಾತಿ = ಜೀವರಿಗೆ ಕೊಡುತ್ತಾನೋ, ತತ್‌ಕರ್ಮ = ಆ ಕರ್ಮವು, ನ = ಜೀವನ ಅಧೀನವಲ್ಲ. ಏಕೆಂದರೆ, ಏಷಃ = ಈ ಶ್ರೀಹರಿಯು, ಯಂ = ಯಾವ ಜೀವನಿಂದ, ಸಾಧುಕರ್ಮ = ಶುಭವಾದ ಕೆಲಸವನ್ನು, ಕಾರಯತಿ = ಮಾಡಿಸುತ್ತಾನೆಯೋ. ತಂ = ಅವನನ್ನು, ಏಭ್ಯೋ ಲೋಕೇಭ್ಯಃ = ಕೆಳಗಿನ ಲೋಕಗಳಿಂದ, ಉನ್ನಿನೀಷತೇ = ಮೇಲಿನ

ಲೋಕಗಳಿಗೆ ಕೊಂಡೊಯ್ಯುತ್ತಾನೆ. ಏಷಃ ಉ = ಈ ಹರಿಯೇ, ಯಂ = ಯಾವನನ್ನು ಕುರಿತು, ಅಸಾಧುಕರ್ಮ = ಅಶುಭಕರ್ಮಗಳನ್ನು ಕಾರಯತಿ = ಮಾಡಿಸುತ್ತಾನೋ, ತಂ = ಅವನನ್ನು, ಅಧಃ = ಕೆಳಗಿನ ಲೋಕಗಳಿಗೆ, ನಿನೀಷತೇ = ಕೊಂಡೊಯ್ಯುತ್ತಾನೆ, ಇತಿ ಶ್ರುತೇಃ = ಹೀಗೆ ವೇದಗಳು ಹೇಳುತ್ತಿರುವುದರಿಂದ, ಕರ್ಮಣೋಪಿ = ಜೀವನು ಮಾಡುವ ಕರ್ಮಗಳೂ ಕೂಡ, ತನ್ನಿಮಿತ್ತತ್ವಾತ್ = ಭಗವಂತನ ಅಧೀನವೇ ಆಗಿದೆ. ಇತಿ ಚೇತ್ = ಇಷ್ಟು ಪೂರ್ವಪಕ್ಷ.

**भाष्यम् — न, तस्यापि पूर्वं कर्म कारणमित्यनादित्वात् कर्मणः ।**

ಅನುವಾದ - ಈ ಆಕ್ಷೇಪ ತಪ್ಪು. ಜೀವನು ಆಚರಿಸುವ ಕರ್ಮಕ್ಕೆ ಹಿಂದಿನ ಕರ್ಮವೇ ಕಾರಣ. ಆ ಕರ್ಮಕ್ಕೂ ಅದರ ಹಿಂದಿನ ಕರ್ಮವು ಕಾರಣ. ಹೀಗೆ ಕರ್ಮವು ಅನಾದಿಯಾದ್ದರಿಂದ ಭಗವಂತನಿಗೆ ವೈಷಮ್ಯನೈರ್ಘೃಣ್ಯ ದೋಷವು ಬರುವುದಿಲ್ಲ.

ಪ್ರತಿಪದಾರ್ಥ -- ಸೂತ್ರದ ಪರಿಹಾರಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ - ನ = ವೈಷಮ್ಯದೋಷವು ಬರುವುದಿಲ್ಲ. ತಸ್ಯಾಪಿ = ಆ ಫಲಕಾರಣವಾದ ಕರ್ಮಕ್ಕೂ, ಪೂರ್ವಕರ್ಮ = ಹಿಂದಿನ ಕರ್ಮವು, ಕಾರಣಂ = ಕಾರಣವಾಗಿದೆ. ಇತಿ = ಹೀಗೆ ಕರ್ಮಣಃ = ಕರ್ಮವು, ಅನಾದಿತ್ವಾತ್ = ಅನಾದಿಯಾಗಿರುತ್ತದೆ.

**भाष्यम् — भविष्यत्पुराणे —**

**'पुण्यपापादिकं विष्णुः कारयेत् पूर्वकर्मणा ।**
**अनादित्वात् कर्मणश्च न विरोधः कथञ्चन ।।' इति ।।२।।**

ಅನುವಾದ - ಜೀವರಿಂದ ವಿಷ್ಣುವೇ ಪುಣ್ಯ ಹಾಗೂ ಪಾಪಗಳನ್ನು ಮಾಡಿಸುತ್ತಾನೆ. ಆದರೆ ಜೀವರು ಸಂಪಾದನೆ ಮಾಡಿದ ಹಿಂದಿನ ಕರ್ಮವನ್ನು ಅನುಸರಿಸಿ ಮಾಡಿಸುತ್ತಾನೆ. ಆ ಕರ್ಮವಾದರೂ ಅನಾದಿಯಾಗಿರುವುದರಿಂದ ವಿರೋಧಕ್ಕೆ ಅವಕಾಶವಿಲ್ಲ.

## ತತ್ವಪ್ರಕಾಶಿಕಾ

**तत्वप्रकाशिका — कर्मापेक्षया फलदातृत्वमाक्षिप्य समादधत्सूत्रमुपन्यस्याक्षेपांशं तावद्व्याचष्टे — न कर्मेति । कर्मापेक्षया फलं ददातीश्वर इत्ययुक्तम्। यदपेक्षया फलं दद्यात् तस्यापेक्ष्यस्य कर्मण एवाभावात् ।**

ಈಶ್ವರನು ಕರ್ಮವನ್ನು ಅಪೇಕ್ಷಿಸಿ ಫಲವನ್ನು ಕೊಡುತ್ತಾನೆ ಎಂಬ ಹಿಂದಿನ ಸೂತ್ರದ ಪ್ರಮೇಯವನ್ನು ಆಕ್ಷೇಪಮಾಡಿ ಸಮಾಧಾನ ನೀಡುವ ಸೂತ್ರವನ್ನು ಪಠಿಸಿ ಸೂತ್ರದಲ್ಲಿರುವ ಆಕ್ಷೇಪಾಂಶವನ್ನು 'ನ ಕರ್ಮಾ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಕರ್ಮವನ್ನು ಅಪೇಕ್ಷಿಸಿ ಈಶ್ವರನು ಫಲವನ್ನು ನೀಡುತ್ತಾನೆಂದು ಹಿಂದೆ ಹೇಳಲಾಯಿತು. ಇದು ಅಯುಕ್ತವಾಗಿದೆ. ಏಕೆಂದರೆ ಈಶ್ವರನು ಯಾವ ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡುತ್ತಾನೋ ಅಂಥ ಅಪೇಕ್ಷ್ಯವಾದ ಕರ್ಮವೇ ಇರುವುದಿಲ್ಲ.

ವಿವರಣೆ - 'ಅಪೇಕ್ಷ್ಯ ಕರ್ಮಣ ಏವ ಅಭಾವಾತ್' ಎಂಬ ಟೀಕಾಮಾತಿನ ಅಭಿಪ್ರಾಯ ಹೀಗಿದೆ - ರಾಜನು ತನ್ನ ಭಟನಿಗೆ ಛಾವಟಿ ಏಟು ಮೊದಲಾದವುಗಳನ್ನು ನೀಡಿ ದುಃಖವನ್ನು ನೀಡುತ್ತಾನೆ. ಈ ದುಃಖಕ್ಕೆ ಅವನು ಆಗಲೇ ಮಾಡಿದ ಕಳ್ಳತನ ಮೊದಲಾದ ಅಪರಾಧವೆಂಬ ಕರ್ಮವು ಕಾರಣವಾಗಿರುತ್ತದೆ. ಈ ರೀತಿಯಾಗಿ ಈಶ್ವರನು ಮನುಷ್ಯನಿಗೆ ಯಾವ ರೋಗರುಜಿನ ಮೊದಲಾದವುಗಳಿಂದ ದುಃಖವನ್ನು ಕೊಡುತ್ತಿದ್ದಾನೋ ಇದಕ್ಕೆ ನಿಮಿತ್ತಭೂತವಾದ ಆಕ್ಷಣದಲ್ಲಿ ಮಾಡಿದ ಕರ್ಮವು ಇರುವುದಿಲ್ಲ ಎಂದರ್ಥ.

ಹೀಗೆ ಹೇಳಿದ್ದರಿಂದ ನ ಕರ್ಮಾ ಎಂಬ ಭಾಷ್ಯಕ್ಕೆ ಈ ಜನ್ಮದಲ್ಲಿ ಮಾಡಿದಕರ್ಮವು ಇರುವುದಿಲ್ಲ ಎಂಬರ್ಥವನ್ನು ಹೇಳಿದಂತಾಯಿತು. (ಗುರ್ವರ್ಥದೀಪಿಕಾ)

**तत्वप्रकाशिका – अस्ति पूर्वं कर्मेति चेत् । सत्यम् । तस्याप्येष ह्येवेति श्रुतौ भगवदधीनत्वश्रवणात्स्वकृतापेक्षया फलदानेन वैषम्यादेरनिस्तारात् । अतो न कर्मापेक्षा सम्भवतीति भावः । उन्निनीषते ऊर्ध्वं नेतुमिच्छति ।**

ಅಪೇಕ್ಷ್ಯವಾದ ಕರ್ಮವಿಲ್ಲದಿದ್ದರೂ ಪೂರ್ವಕರ್ಮವು ಜೀವನಲ್ಲಿ ಇರುತ್ತದೆ. ಇದಕ್ಕೆ ಅನುಸಾರಿಯಾಗಿ ಫಲವನ್ನು ನೀಡುತ್ತಾನಲ್ಲವೇ?

ಹೌದು, ಆದರೆ ಆ ಕರ್ಮವೂ ಕೂಡ 'ಏಷ ಹ್ಯೇವ' ಎಂಬ ಶ್ರುತಿ ಹೇಳುವಂತೆ ಭಗವಂತನ ಅಧೀನವಾಗಿಯೇ ಶ್ರುತವಾಗಿದೆ. ತನ್ನ ಅಧೀನವಾದ ಕರ್ಮಕ್ಕೆ ಅನುಸಾರಿಯಾಗಿ ಭಗವಂತನು ಫಲವನ್ನು ನೀಡಿದಾಗ ವೈಷಮ್ಯಾದಿದೋಷಗಳು ಬಂದೇ ಬರುತ್ತವೆ. ಆದ್ದರಿಂದ ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡುತ್ತಾನೆಂಬುದು ಕೂಡುವುದಿಲ್ಲ ಎಂಬುದು ಪೂರ್ವಪಕ್ಷದ ಅಭಿಪ್ರಾಯ.

ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಲ್ಲಿ ಉನ್ನಿನೀಷತೇ ಎಂಬ ಪದಕ್ಕೆ ಮೇಲೆ ಕೊಂಡ್ಯೊಯ್ಯಲು ಇಚ್ಚಿಸುತ್ತಾನೆ ಎಂದರ್ಥ.

ವಿವರಣೆ - ಪರಮಾತ್ಮನು ತನ್ನ ಇಚ್ಛೆಗೆ ಅನುಗುಣವಾಗಿ ಫಲವನ್ನು ಕೊಡುತ್ತಿಲ್ಲ. ಜೀವನು ಯಾವ ಕರ್ಮವನ್ನು ಮಾಡಿದ್ದಾನೋ ಆ ಕರ್ಮಕ್ಕೆ ಅನುಸಾರಿಯಾಗಿ ಪುಣ್ಯಪಾಪಾದಿಫಲಗಳನ್ನು ಭಗವಂತನು ನೀಡುತ್ತಾನೆ. ಆದ್ದರಿಂದ ವೈಷಮ್ಯಾದಿದೋಷಗಳು ಬರುವುದಿಲ್ಲ ಎಂದು ಹೇಳಿದರೆ ಪೂರ್ವಪಕ್ಷಿಕಾರರು ಆಕ್ಷೇಪಿಸುತ್ತಾರೆ - ಈ ಜನ್ಮದಲ್ಲಿ ಅನುಭವಿಸುತ್ತಿರುವ ಸುಖದುಃಖಾದಿಗಳಿಗೆ ಈಗ ಮಾಡಿದ ಕರ್ಮವೇ ಕಾರಣವಾಗಬೇಕಾಗಿಲ್ಲ. ಹಿಂದೆ ಯಾವಾಗಲೋ ಮಾಡಿದ ಕರ್ಮ ಕಾರಣವಾಗಿರಬಹುದು ಎಂದು ಒಪ್ಪೋಣ. ಆದರೆ ಆ ಕರ್ಮವನ್ನು ಸ್ವತಂತ್ರವೆಂದು ಸಿದ್ಧಾಂತಿಗಳು ಒಪ್ಪುವುದಿಲ್ಲ. ಆ ಪೂರ್ವಕರ್ಮವೂ ಕೂಡ ಭಗವದಧೀನವೆಂದೇ ಹೇಳುತ್ತಾರೆ. 'ಏಷ ಹ್ಯೇವ'

ಎಂಬ ಕೌಶೀತಕೀ ಶ್ರುತಿಯು ಕರ್ಮವು ಭಗವದಧೀನವೆಂದು ಹೇಳುತ್ತದೆ. ಸಕಲ ಕರ್ಮವು ಭಗವದಧೀನವಾದ್ದರಿಂದ ಅದಕ್ಕೆ ಅನುಸಾರಿಯಾಗಿಯೇ ಭಗವಂತನು ಸುಖದುಃಖಾದಿ ಫಲವನ್ನು ನೀಡುತ್ತಿದ್ದಾನೆ. ಆಗ ವೈಷಮ್ಯನೈರ್ಘೃಣ್ಯದೋಷಗಳು ಬಂದೇ ಬರುತ್ತವೆ. ಆದ್ದರಿಂದಲೇ ಟೀಕೆಯಲ್ಲಿ 'ಸುಕೃತಾಪೇಕ್ಷಯಾ' ಎಂದು ಹೇಳಿದ್ದಾರೆ. ತಾನೇ ಸೃಷ್ಟಿಮಾಡಿದ ಕರ್ಮವನ್ನು ಅಪೇಕ್ಷೆಪಟ್ಟು ಫಲವನ್ನು ನೀಡುತ್ತಾನೆ ಎಂಬುದು ಇದರ ಅಭಿಪ್ರಾಯ. ಆದ್ದರಿಂದ ಈಶ್ವರನು ಕರ್ಮವನ್ನು ಅಪೇಕ್ಷಿಸಿ ಫಲವನ್ನು ಕೊಡುತ್ತಾನೆಂಬ ಹಿಂದಿನ ಸೂತ್ರದ ಪ್ರಮೇಯವು ಅಯುಕ್ತವಾಯಿತು. (ತತ್ವಸುಬೋಧಿನೀ)

ಭಾಷ್ಯದಲ್ಲಿ 'ಯಮೇಭ್ಯಃ ಲೋಕೇಭ್ಯಃ ಉನ್ನಿನೀಷತೇ' ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ. ಈ ಶ್ರುತಿಯ ಅಭಿಪ್ರಾಯ ಹೀಗಿದೆ - ಭಗವಂತನು ಯಾರನ್ನು ಮೇಲೆ ಎತ್ತಲು ಇಚ್ಛೆ ಪಡುತ್ತಾನೋ ಅವನ ಮೂಲಕ ಒಳ್ಳೆಯ ಕೆಲಸವನ್ನು ಮಾಡಿಸುತ್ತಾನೆ ಯಾರನ್ನು ಕೆಳಗೆ ತಳ್ಳಲು ಇಚ್ಛಿಸುತ್ತಾನೋ ಅವನಿಂದ ಕೆಟ್ಟಕೆಲಸವನ್ನು ಮಾಡಿಸುತ್ತಾನೆ. (ಗುರ್ವರ್ಥದೀಪಿಕಾ)

**तत्वप्रकाशिका – परिहारांशं व्याचष्टे – नेति ।। नापेक्ष्य कर्माभावो वक्तव्यः । पूर्वकर्मणः सत्त्वात् । न च वाच्यं तस्यापि भगवन्निमित्तत्वेनानपेक्ष्यतेति। भवेदेतद्यदि पूर्वतनं कर्मेश्वरेण निरपेक्षेण क्रियेत । नै तदस्ति । ततोऽपि पूर्वतनकर्मापेक्षया तस्य कारितत्वात् । तादृशस्य चापेक्ष्यतोपपत्तेः ।**

ಪೂರ್ವಪಕ್ಷದ ಪರಿಹಾರಭಾಗವನ್ನು ನ ಇತ್ಯಾದಿಯಾಗಿ ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಭಗವಂತನು ಯಾವ ಕರ್ಮವನ್ನು ಅಪೇಕ್ಷಿಸುತ್ತಾನೋ ಆ ಕರ್ಮವೇ ಇಲ್ಲವೆಂದು ಹೇಳಬಾರದು. ಪೂರ್ವಕರ್ಮವು ಇದ್ದೇ ಇರುತ್ತದೆ.

ಆ ಪೂರ್ವಕರ್ಮವೂ ಕೂಡ ಭಗವದಧೀನವೇ ಆಗಿರುವುದರಿಂದ ಫಲದಾನಕ್ಕೆ ಕರ್ಮ ಅನಪೇಕ್ಷತ್ವವನ್ನೇ ಹೇಳಿದಂತಾಗುತ್ತದಲ್ಲವೆ ? ಎಂದು ಪ್ರಶ್ನಿಸಬಾರದು. ಒಂದು ವೇಳೆ ಹಿಂದಿನ ಕರ್ಮವನ್ನು ಮತ್ತೊಂದು ಕರ್ಮದ ಅಪೇಕ್ಷೆ ಇಲ್ಲದೆ ಈಶ್ವರನು ಸೃಷ್ಟಿ ಮಾಡಿದ್ದರೆ ಈ ಆಕ್ಷೇಪ ಬರುತ್ತಿತ್ತು ಆದರೆ ಹಾಗಿಲ್ಲ. ಆ ಪೂರ್ವಕರ್ಮವನ್ನು ಭಗವಂತನು ಅದರ ಹಿಂದಿನ ಪೂರ್ವಕರ್ಮವನ್ನು ಅಪೇಕ್ಷಿಸಿಯೇ ಮಾಡಿರುತ್ತಾನೆ. ಅಂಥ ಕರ್ಮವನ್ನು ಅಪೇಕ್ಷಿಸಿಯೇ ಫಲದಾನವನ್ನು ಮಾಡುತ್ತಾನೆಂಬುದು ಯುಕ್ತವಾಗುತ್ತದೆ.

**तत्वप्रकाशिका – न च पूर्वतरस्यापीश्वरनिर्मितत्वादनपेक्षता । तस्यापि पूर्वतनकर्मापेक्षयैव कारितत्वात् । न च मन्तव्यं यत्रैव पर्यवसानं तदारभ्य दोष इति । अनादित्वात्कर्मपरम्पराया इति भावः ।। ३६ ।।**

ತತ್‌ಪೂರ್ವಕರ್ಮವು ಈಶ್ವರ ನಿರ್ಮಿತವಾಗಿರುವುದರಿಂದ ಪುನಃ ಕರ್ಮದ ಅನಪೇಕ್ಷತ್ವವೇ ಬರುತ್ತದಲ್ಲವೆ? ಎಂದು ಪ್ರಶ್ನಿಸಬಾರದು. ತತ್‌ಪೂರ್ವಕರ್ಮವೂ ಕೂಡ ಅದರ ಹಿಂದಿನ ಪೂರ್ವಕರ್ಮದ ಅಧೀನವೇ ಆಗಿರುತ್ತದೆ. ಭಗವಂತನು ತತ್‌ಪೂರ್ವಕರ್ಮವನ್ನು ಅದರ ಹಿಂದಿನ ಪೂರ್ವಕರ್ಮದ ಅಧೀನವಾಗಿಯೇ ಸೃಷ್ಟಿ ಮಾಡಿರುತ್ತಾನೆ.

ಪೂರ್ವಕರ್ಮದ ಪರಂಪರೆಯು ಎಲ್ಲಿ ಮುಕ್ತಾಯವಾಗುತ್ತದೋ ಆ ಕರ್ಮವು ಈಶ್ವರ ನಿರ್ಮಿತವಾಗಿದೆ. ಆದ್ದರಿಂದ ಕರ್ಮ ಅನಪೇಕ್ಷತ್ವದೋಷವು ಬಂದೇ ಬರುತ್ತದಲ್ಲವೆ?

ಈ ಪ್ರಶ್ನೆಯು ತಪ್ಪು. ಕರ್ಮಪರಂಪರೆಯು ಅನಾದಿಯಾದ್ದರಿಂದ ಪರ್ಯವಸಾನವೇ ಇರುವುದಿಲ್ಲ. ಆದ್ದರಿಂದ ಕರ್ಮ ಅನೇಕ್ಷತ್ವದೋಷವು ಈಶ್ವರನಲ್ಲಿ ಸರ್ವಥಾ ಬರುವುದಿಲ್ಲ.

## ಬ್ರಹ್ಮಸೂತ್ರ

**सूत्रम् – उपपद्यते चाप्युपलभ्यते च ॥**

ಜೀವನ ಕರ್ಮಗಳನ್ನು ಅಪೇಕ್ಷಿಸಿ ಸುಖ ದುಃಖಾದಿಗಳನ್ನು ನೀಡುವ ಪರಮಾತ್ಮನಿಗೆ ಅಸ್ವಾತಂತ್ರ್ಯ ದೋಷವು ಬರುವುದಿಲ್ಲ. ಕರ್ಮವು ಅನಾದಿಯಾಗಿದ್ದರೂ ಈಶ್ವರನ ಅಧೀನವೇ ಆಗಿರುತ್ತದೆ. ಹಾಗಿದ್ದರೂ ವೈಷಮ್ಯಾದಿ ದೋಷಗಳು ಬರುತ್ತದಲ್ಲವೇ ? ಎಂದು ಪುನಃ ಪ್ರಶ್ನಿಸಬಾರದು. ಏಕೆಂದರೆ, 'ಸ ಕಾರಯೇತ್ ಪುಣ್ಯಮಥಾಪಿ' ಎಂಬ ಶ್ರುತಿಯು ಇದರಿಂದ ಯಾವುದೇ ದೋಷವು ಬರುವುದಿಲ್ಲವೆಂದು ಪ್ರತಿಪಾದನೆ ಮಾಡುತ್ತಿದೆ.

## ಸೂತ್ರದೀಪಿಕಾ

**सूत्रदीपिका – उपपद्यते चाप्युपलभ्यते च ॥** ईश्वरस्य कर्मापेक्षायामप्युपपद्यते स्वातन्त्र्यं युज्यत एव । कर्मणः स्वाधीनत्वात् । ननु पुनः स्वाधीनकर्म-सापेक्षत्वकृतवैषम्यापात इत्यत उक्तम् - उपलभ्यते चेति । 'स कारयेत्' इति श्रुत्या तादृशवैषम्यं अदोषत्वेन ज्ञायते चेत्यर्थः ।।३।।

ಅರ್ಥ -- ಈಶ್ವರನು ಅನಾದಿಯಾದ ಕರ್ಮವನ್ನು ಅಪೇಕ್ಷಿಸುತ್ತಾನೆ ಎಂದು ಹೇಳಿದರೂ ಉಪಪದ್ಯತೇ = ಸ್ವಾತಂತ್ರ್ಯವು ಯುಕ್ತವೇ ಆಗುತ್ತದೆ. ಏಕೆಂದರೆ, ಅನಾದಿಯಾದ ಕರ್ಮವೂ ಕೂಡ ಈಶ್ವರನ ಅಧೀನವೇ ಆಗಿದೆ. ಹಾಗಾದರೆ ಪುನಃ ಸ್ವಾಧೀನವಾದ ಕರ್ಮದ ಅಪೇಕ್ಷೆಯಿಂದಲೇ ಸುಖ ದುಃಖಾದಿಗಳನ್ನು ನೀಡುತ್ತಾನಾದ್ದರಿಂದ ವೈಷಮ್ಯ ದೋಷವು ಬರುತ್ತದೆಂದು ಪ್ರಶ್ನಿಸಬಾರದು. ಉಪಲಭ್ಯತೇ ಚ = ಸ ಕಾರಯೇತ್ ಪುಣ್ಯಮಥಾಪಿ ಪಾಪಂ ಸ ತಾವದಾ ದೋಷವಾನೀಶಿತಾನಿ ಈಶೋ ಯತೋ ಗುಣದೋಷದಿಸತ್ತ್ವೆ ಸ್ವಯಂ ಪರೋನಾದಿರಾದಿಃ ಪ್ರಜಾನಾಮ್॥ ಎಂಬ ಶ್ರುತಿಯು ಅಂತಹ ವೈಷಮ್ಯವು ದೋಷವಾಗುವುದಿಲ್ಲವೆಂದು ಸ್ಪಷ್ಟಪಡಿಸುತ್ತಿದೆ.

ವೈಷಮ್ಯನೈರ್ಘೃಣ್ಯಾಧಿಕರಣ (೨-೧-೧೧)

## ಬ್ರಹ್ಮಸೂತ್ರಭಾಷ್ಯ

**भाष्यम् – ।। उपपद्यते चाप्युपलभ्यते च ।।३।।**

**न च कर्मापेक्षत्वेनेश्वरस्यास्वातन्त्र्यम् ।**

ಅನುವಾದ - ಭಗವಂತನು ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡುವುದಾದರೆ ಅಸ್ವಾತಂತ್ರ್ಯ ದೋಷವು ಬರುತ್ತದಲ್ಲವೆ? ಎಂದು ಆಶಂಕೆ ಮಾಡಬಾರದು.

ಪ್ರತಿಪದಾರ್ಥ -- ಈಶ್ವರಕ್ಕೆ ಕರ್ಮಸಾಪೇಕ್ಷ್ಯವು ಇರುವುದಾದರೆ ವೈಷಮ್ಯದೋಷ-ವಿಲ್ಲದಿದ್ದರೂ ಅಸ್ವಾತಂತ್ರ್ಯದೋಷ ಬರುತ್ತದಲ್ಲವೆ? ಎಂದು ಆಕ್ಷೇಪಿಸಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಕರ್ಮಾಪೇಕ್ಷತ್ವೇನ = ಜೀವರ ಕರ್ಮವನ್ನು ಅಪೇಕ್ಷಿಸಿ ಫಲ ಕೊಡುತ್ತಾನಾದ್ದರಿಂದ, ಈಶ್ವರಸ್ಯ = ಈಶ್ವರನಿಗೆ, ಅಸ್ವಾತಂತ್ರ್ಯಮ್ = ಅಸ್ವಾತಂತ್ರ್ಯದೋಷವು, ನಚ = ಬರುವುದಿಲ್ಲ.

**भाष्यम् –**

**'द्रव्यं कर्म च कालश्च स्वभावो जीव एव च ।**
**यदनुग्रहतस्सन्ति न सन्ति यदुपेक्षया ।।'**

**इत्यादिना कर्मादीनां सत्त्वस्यापि तदपेक्षत्वात् ।**

ಅನುವಾದ- ದ್ರವ್ಯ, ಕಾಲ, ಕರ್ಮ, ಸ್ವಭಾವ, ಜೀವ ಇವೆಲ್ಲವೂ ಪರಮಾತ್ಮನ ಅನುಗ್ರಹದಿಂದಲೇ ಇರುತ್ತವೆ. ಅವನ ಅನುಗ್ರಹವಿಲ್ಲದೆ ಉದಾಸೀನಕ್ಕೆ ಒಳಗಾದರೆ ನಾಶವನ್ನು ಹೊಂದುತ್ತವೆ. ಇವೇ ಮೊದಲಾದ ಪ್ರಮಾಣಗಳಿಂದ ಕರ್ಮಾದಿಗಳ ಇರುವಿಕೆಯೂ ಕೂಡ ಭಗವಂತನ ಅಧೀನವೆಂದು ಸ್ಪಷ್ಟವಾಗುತ್ತವೆ.

ಪ್ರತಿಪದಾರ್ಥ -- ದ್ರವ್ಯಂ = ದ್ರವ್ಯವು, ಚ = ಮತ್ತು, ಕರ್ಮ = ಕರ್ಮವು, ಕಾಲಶ್ಚ = ಕಾಲವು, ಸ್ವಭಾವಃ = ಯೋಗ್ಯತೆಯು, ಜೀವ ಏವ = ಜೀವನೂ ಕೂಡ, ಯದನುಗ್ರಹತಃ = ಯಾವ ಪರಮಾತ್ಮನ ಅನುಗ್ರಹದಿಂದ, ಸಂತಿ = ಅಸ್ತಿತ್ವವನ್ನು ಪಡೆದಿದವೊ, ಯದುಪೇಕ್ಷಯಾ = ಯಾವ ಪರಮಾತ್ಮನ ಉಪೇಕ್ಷೆಯಿಂದ, ನ ಸಂತಿ = ನಾಶಹೊಂದುತ್ತವೋ, ಇತ್ಯಾದಿನಾ = ಇವೇ ಮೊದಲಾದ ಪ್ರಮಾಣವಚನಗಳಿಂದ, ಕರ್ಮಾದೀನಾಂ = ಕರ್ಮಾದಿಗಳ, ಸತ್ತ್ವಸ್ಯಾಪಿ = ಇರುವಿಕೆಯು ಕೂಡ, ತದಧೀನತ್ವಾತ್ = ಶ್ರೀಹರಿಯ ಅಧೀನ- ವಾಗಿರುವುದರಿಂದ ಯಾವುದೇ ದೋಷವಿಲ್ಲ.

**भाष्यम् – न च पुनर्वैषम्याद्यापातेन दोषः ।**

**तादृशवैषम्यादेरुपलभ्यमानत्वात् ।**

ಅನುವಾದ - ಹಾಗಾದರೆ ಪುನಃ ವೈಷಮ್ಯಾದಿದೋಷಗಳು ಬರುತ್ತವೆ. ಹೀಗೆ ಪ್ರಶ್ನಿಸಬಾರದು. ಇಂಥ ವೈಷಮ್ಯಾದಿಗಳು ದೋಷವಲ್ಲವೆಂದು ಶ್ರುತಿಯೇ ಹೇಳುತ್ತಿದೆ.

ಪ್ರತಿಪದಾರ್ಥ -- ಕರ್ಮಾದಿಗಳ ಇರುವಿಕೆಯು ಭಗದವಧೀನವಾದರೆ ಪುನಃ ವೈಷಮ್ಯಾದಿದೋಷಗಳು ಬರುತ್ತದಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಪುನಃ = ಮತ್ತೆ, ವೈಷಮ್ಯಾದ್ಯಾಪಾತೇನ = ಪಕ್ಷಪಾತ ಮಾಡುವಿಕೆ ಮೊದಲಾದವು ಉಂಟಾಗುವುದರಿಂದ, ದೋಷಃ = ದೋಷಗಳು, ನ ಚ = ಬರುವುದಿಲ್ಲ. ಏಕೆಂದರೆ ತಾದೃಶವೈಷಮ್ಯಾದೇಃ = ಅಂಥ ಪಕ್ಷಪಾತಾದಿ ದೋಷಗಳು, ಉಪಲಭ್ಯಮಾನತ್ವಾತ್ = ಶ್ರುತಿಗಳಲ್ಲಿ ದೋಷವಲ್ಲವೆಂದು ಪರಿಗಣಿಸಲಾಗಿದೆ.

## भाष्यम् –

स कारयेत् पुण्यमथापि पापं न तावता दोषवानीशिताऽपि ।
ईशो यतो गुणदोषादिसत्त्वे स्वयं परोऽनादिरादिः प्रजानाम् ॥
इति चतुर्वेदशिखायाम् ॥३॥

॥ इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये वैषम्यनैर्घृण्याधिकरणम् ॥ १० ॥

ಅನುವಾದ - ಶ್ರೀಹರಿಯು ಪುಣ್ಯಕರ್ಮವನ್ನು ಪಾಪಕರ್ಮವನ್ನು ಮಾಡಿಸುತ್ತಾನೆ. ಹೀಗೆ ಎರಡೂ ಕಾರ್ಯಗಳನ್ನು ಮಾಡಿಸಿದರೂ ಅವನು ದೋಷಿಯಾಗುವುದಿಲ್ಲ. ಯಾವುದೇ ವಸ್ತುವನ್ನು ಒಳ್ಳೆಯದು ಅಥವಾ ಕೆಟ್ಟದ್ದು ಮಾಡುವವನು ಅವನೇ ಆಗಿದ್ದಾನೆ. ಗುಣಗಳಿಗೆ ಗುಣಪ್ರದನಾಗಿದ್ದಾನೆ. ದೋಷಗಳಿಗೆ ದೋಷಪ್ರದನಾಗಿದ್ದಾನೆ. ಆದರೂ ಇವೆಲ್ಲದರಿಂದ ಅತೀತನಾಗಿದ್ದಾನೆ. ಉತ್ಪತ್ತಿ ಇಲ್ಲದವನಾದ ಶ್ರೀಹರಿಯು ಎಲ್ಲರಿಗೂ ಉತ್ಪತ್ತಿಪ್ರದನಾಗಿದ್ದಾನೆ. ಹೀಗೆ ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

ಪ್ರತಿಪದಾರ್ಥ -- ಸಃ = ಶ್ರೀಹರಿಯು, ಪುಣ್ಯಂ = ಪುಣ್ಯಕೆಲಸವನ್ನು, ಅಥಾಽಪಿ = ಹಾಗೆಯೇ, ಪಾಪಂ = ಪಾಪಕೆಲಸವನ್ನು, ಕಾರಯೇತ್ = ಮಾಡಿಸುತ್ತಾನೆ. ತಾವತಾಽಪಿ = ಉಭಯಕಾರಕನಾಗಿದ್ದರೂ, ಈಶಿತಾ = ನಿಯಾಮಕನಾಗಿದ್ದಾನೆ. ಯತಃ = ಯಾವ ಕಾರಣದಿಂದ, ಈಶಃ = ಈಶನು, ಗುಣದೋಷಾದಿಸತ್ವೇ = ತನ್ನ ಅಧೀನವಾದ ಜೀವನ ಗುಣದೋಷಗಳಿದ್ದರೆ, ಈಶಃ = ಈಶನು ಅವುಗಳನ್ನು ಪ್ರೇರಿಸುತ್ತಾನೆ. ಆದ್ದರಿಂದ ಅವನು ಸ್ವತಂತ್ರನು, ಸ್ವಯಂ ಪರಃ = ತನ್ನ ಶಕ್ತಿಯಿಂದಲೇ ಸರ್ವೋತ್ತಮನು, ಅನಾದಿಃ = ಆದಿಯಿಲ್ಲದವನು, ಪ್ರಜಾನಾಮ್ = ಪ್ರಜೆಗಳಿಗೆ, ಆದಿಃ = ಉತ್ಪತ್ತಿಪ್ರದನು. ಇತಿ = ಹೀಗೆ, ಚತುರ್ವೇದ-ಶಿಖಾಯಾಮ್ = ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

. ಇಲ್ಲಿಗೆ ವೈಷಮ್ಯನೈರ್ಘೃಣ್ಯಾಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.
ವೈಷಮ್ಯನೈರ್ಘೃಣ್ಯಾಧಿಕರಣ (೨-೧-೧೦)

## ತತ್ವಪ್ರಕಾಶಿಕಾ

**ತತ್ವಪ್ರಕಾಶಿಕಾ – तथापि नियमेन कर्मापेक्षयैव फलदातुरीश्वरस्यास्वातन्त्र्यं प्रसज्जत इत्यादि शङ्कां परिहरत्सूत्रमुपन्यस्य व्याचष्टे – उपपद्यत इति ।।**

ವೈಷಮ್ಯಾದಿ ದೋಷಗಳು ಇಲ್ಲದಿದ್ದರೂ ಕೂಡ ನಿಯಮೇನ ಈಶ್ವರನು ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡುತ್ತಾನೆ. ಆದ್ದರಿಂದ ಈಶ್ವರನಿಗೆ ಅಸ್ವಾತಂತ್ರ್ಯದೋಷವು ಬರುತ್ತದಲ್ಲವೆ? ಈ ಆಶಂಕೆಯನ್ನು ಪರಿಹರಿಸಲು 'ಉಪಪದ್ಯತೇ' ಎಂಬ ಪರಿಹಾರ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಹಿಂದಿನ ಎರಡು ಸೂತ್ರಗಳಲ್ಲಿ ವೈಷಮ್ಯನೈರ್ಘೃಣ್ಯದೋಷವನ್ನು ಭಗವಂತನಲ್ಲಿ ಪರಿಹರಿಸಲಾಯಿತು. ಈ ಸೂತ್ರದಲ್ಲಿ ಅಸ್ವಾತಂತ್ರ್ಯವೆಂಬ ದೋಷವನ್ನು ಪರಿಹರಿಸುತ್ತಿದ್ದಾರೆ. ಕರ್ಮವನ್ನು ಅಪೇಕ್ಷಿಸಿ ಭಗವಂತನು ಫಲವನ್ನು ನೀಡುವುದಾದರೆ ಅಸ್ವಾತಂತ್ರ್ಯದೋಷವು ಬರುತ್ತದೆಂದು ಇದರ ಅಭಿಪ್ರಾಯ. ಅಸ್ವಾತಂತ್ರ್ಯದೋಷಕ್ಕೆ ಹೆದರಿ ಕರ್ಮವನ್ನು ಅಪೇಕ್ಷಿಸದೆ ಫಲವನ್ನು ನೀಡುತ್ತಾನೆಂದು ಹೇಳಿದರೆ ಹಿಂದಿನ ಸೂತ್ರದಲ್ಲಿ ಆಕ್ಷೇಪ ಮಾಡಿದಂತೆ ವೈಷಮ್ಯನೈರ್ಘೃಣ್ಯದೋಷಗಳು ಬರುತ್ತವೆಂಬುದು ಆಕ್ಷೇಪದ ಅಭಿಪ್ರಾಯ.

**ತತ್ವಪ್ರಕಾಶಿಕಾ – नेश्वरस्य कर्मापेक्षयाऽस्वातन्त्र्यं किं तूपपद्यते च तत्। अपेक्ष्यकर्मसत्तादेरपि स्वाधीनत्वात् ।**

**नहि स्वाधीनसत्तादिमदपेक्षायामस्वातन्त्र्यं भवति । अपेक्षा तु वैषम्याद्यप्राप्तये स्वेच्छानिमित्तैव ।**

ಈಶ್ವರನು ಕರ್ಮವನ್ನು ಅಪೇಕ್ಷಿಸುತ್ತಾನೆಂದ ಮಾತ್ರಕ್ಕೆ ಅಸ್ವಾತಂತ್ರ್ಯದೋಷವು ಬರುವುದಿಲ್ಲ. ಯಾವ ಕರ್ಮವನ್ನು ಅಪೇಕ್ಷಿಸಿ ಈಶ್ವರನು ನೀಡುತ್ತಾನೋ ಆ ಕರ್ಮದ ಸತ್ತಾ, ಪ್ರತೀತಿ, ಪ್ರವೃತ್ತಿ ಮೊದಲಾದವುಗಳು ಕೂಡ ಈಶ್ವರನ ಅಧೀನವೇ ಆಗಿವೆ. ತನ್ನ ಅಧೀನವೇ ಆದ ಸತ್ತಾ ಮೊದಲಾದವುಗಳಿರುವ ವಸ್ತುವನ್ನು ಅಪೇಕ್ಷಿಸುವುದರಿಂದ ಅಸ್ವಾತಂತ್ರ್ಯವು ಬರುವುದಿಲ್ಲ. ಅಂಥ ಕರ್ಮಾದಿಗಳನ್ನು ಅಪೇಕ್ಷಿಸುವುದೂ ಕೂಡ ತನ್ನಲ್ಲಿ ವೈಷಮ್ಯಾದಿದೋಷಗಳು ಬರಬಾರದೆಂಬ ಸ್ವೇಚ್ಛಾನಿಮಿತ್ತದಿಂದಲೇ ಎಂದು ತಿಳಿಯಬೇಕು.

ವಿವರಣೆ - ದ್ರವ್ಯ, ಕರ್ಮ, ಕಾಲ, ಸ್ವಭಾವ, ಜೀವ ಇವುಗಳ ಸತ್ತಾ ಭಗವಂತನ ಅಧೀನವಾಗಿದೆ. ಭಗವಂತನು ಇವುಗಳನ್ನು ಉಪೇಕ್ಷಿಸಿದರೆ ಇವುಗಳ ಅಸ್ತಿತ್ವವೇ ಉಳಿಯುದಿಲ್ಲ. ಹೀಗೆ ತನ್ನ ಅಧೀನವೇ ಆದ ಸತ್ತಾದಿಗಳುಳ್ಳ ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡುತ್ತಾನಾದ್ದರಿಂದ ಭಗವಂತನಲ್ಲಿ ಅಸ್ವಾತಂತ್ರ್ಯದೋಷವನ್ನು ಆಕ್ಷೇಪ ಮಾಡಬಾರದು.

ಪರಿಪೂರ್ಣಚಂದ್ರಿಕಾ

**तत्वप्रकाशिका – यदि कर्मादि सत्तापि तदधीना तर्हि तदपेक्षा नामानपेक्षैवाथाद्भवति । तथा च पुनर्वैषम्याद्यापातः स्यात् । तेन च दोषित्वमिति चेन्न । स्वाधीनकर्मापेक्षया फलदानरूपवैषम्यादेरीश्वरेऽदोषतयैव श्रुतावुपलभ्यमानत्वादिति भावः । कासौ श्रुतिरिति तामुदाहरति – स इति ।।**

ಪ್ರಶ್ನೆ - ಒಂದುವೇಳೆ ಕರ್ಮಾದಿಗಳಲ್ಲಿರುವ ಸತ್ತಾದಿಗಳು ಈಶ್ವರಾಧೀನವೆಂದು ಒಪ್ಪಿದರೆ ಅವುಗಳನ್ನು ಅಪೇಕ್ಷಿಸಿದರೂ ಅಪೇಕ್ಷಿಸದಂತೆ ಆಗುತ್ತದೆ. ಆದ್ದರಿಂದ ಪುನಃ ವೈಷಮ್ಯಾದಿ-ದೋಷಗಳು ಬರುತ್ತವೆ? ಇದರಿಂದ ಈಶ್ವರನು ದೋಷಿ ಎಂದೇ ಹೇಳಿದಂತಾಯಿತು.

ಈ ಪ್ರಶ್ನೆ ತಪ್ಪು. ತನ್ನ ಅಧೀನವಾದ ಅನಾದಿಕರ್ಮಗಳನ್ನು ಅಪೇಕ್ಷಿಸಿ ಫಲವನ್ನು ನೀಡಿದಾಗ ಯಾವ ವೈಷಮ್ಯಾದಿದೋಷಗಳು ಬರುತ್ತವೋ ಅದು ಈಶ್ವರನಲ್ಲಿ ದೋಷರೂಪವಾಗಿ ಉಳಿಯುವುದೇ ಇಲ್ಲ. ಹೀಗೆಂದು ಶ್ರುತಿಯು ಹೇಳುತ್ತಿದೆ. ಆ ಶ್ರುತಿ ಯಾವುದು ಎಂದರೆ 'ಸಃ' ಇತ್ಯಾದಿಯಾಗಿ ಭಾಷ್ಯದಲ್ಲಿ ಉದಾಹರಿಸುತ್ತಿದ್ದಾರೆ.

**तत्वप्रकाशिका – स स्वाधीनकर्मापेक्षया पुण्यादि कारयेत् । एवं तस्य कर्मण ईशितापि तावता न वैषम्यादिदोषवानित्यर्थः । एवं तर्हि कर्मापेक्षाऽपि निष्फला तदभावेऽपि दोषाभावसम्भवादिति ।**

ಈಶ್ವರನು ತನ್ನ ಅಧೀನವಾದ ಕರ್ಮವನ್ನು ಅಪೇಕ್ಷಿಸಿ ಪುಣ್ಯಪಾಪಾದಿಗಳನ್ನು ಜೀವರಿಗೆ ನೀಡುತ್ತಾನೆ. ಈ ರೀತಿಯಾಗಿ ಈಶ್ವರನು ಎಲ್ಲಾ ಕರ್ಮಗಳಿಗೆ ಪ್ರಭುವಾಗಿದ್ದರೂ ವೈಷಮ್ಯಾದಿದೋಷಗಳುಳ್ಳವನು ಆಗುವುದಿಲ್ಲ. ಹಾಗಾದರೆ ಅವನೇಕೆ ಕರ್ಮವನ್ನು ಅಪೇಕ್ಷಿಸಬೇಕು. ಹಾಗೆ ಕರ್ಮವನ್ನು ಅಪೇಕ್ಷಿಸುವುದು ನಿಷ್ಫಲ. ಕರ್ಮ ಇಲ್ಲದಿದ್ದರೂ ಕೂಡ ಈಶ್ವರನಲ್ಲಿ ದೋಷವು ಬರುವುದಿಲ್ಲವಲ್ಲವೇ?

**तत्वप्रकाशिका – मैवम् । कर्मानपेक्षत्वे वेदाप्रामाण्यप्रसङ्गात् । तदुक्तम्। 'वैषम्यं विर्घृणत्वं च वेदाप्रामाण्यकारणम् । नाङ्गीकार्यमतोऽन्यत्तु न वैषम्यादिनामकम्' इति । अतो हरेः सर्वकर्तृत्वे विरोधाभावायुक्तं लक्षणमिति सिद्धम् ।। ३७ ।।**

ಈ ಆಕ್ಷೇಪ ತಪ್ಪು. ಕರ್ಮವನ್ನು ಅಪೇಕ್ಷಿಸದಿದ್ದರೆ ವೇದಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ಇದನ್ನು ಅನುವ್ಯಾಖ್ಯಾನದಲ್ಲಿ

'ವೈಷಮ್ಯಂ ನಿರ್ಘೃಣಂತ್ವಂಚ ವೇದಾಪ್ರಾಮಾಣ್ಯಕಾರಣಮ್ ।
ನಾಂಗೀಕಾರ್ಯಮತೋ ಯತ್ತು ನತು ವೈಷಮ್ಯಾದಿನಾಮಕಮ್ ॥'
ವೈಷಮ್ಯನೈರ್ಘೃಣ್ಯಾಧಿಕರಣ (೨-೧-೧೧)

ವೈಷಮ್ಯ ಹಾಗೂ ನೈರ್ಘೃಣ್ಯಗಳು ವೇದಾಪ್ರಾಮಾಣ್ಯಕ್ಕೆ ಕಾರಣವಾಗಿದ್ದಾಗ ದೋಷ ಎನಿಸುತ್ತವೆ. ಆದರೆ ಪರಮಾತ್ಮನು ವೇದೋಕ್ತವಾದ ಅಶೇಷಕರ್ಮವನ್ನು ಅಪೇಕ್ಷಿಸಿ ಫಲಪ್ರದ-ನಾಗಿರುವುದರಿಂದ ಇವನ್ನಲ್ಲಿರುವ ವೈಷಮ್ಯ ನೈರ್ಘೃಣ್ಯಗಳು ವೇದಾಪ್ರಾಮಾಣ್ಯಕ್ಕೆ ಕಾರಣವಲ್ಲ ಎಂದು.

ಆದ್ದರಿಂದ ಶ್ರೀಹರಿಯು ಸರ್ವಕರ್ತೃವೆಂದು ಹೇಳಿದರೆ ಯಾವುದೇ ವಿರೋಧಕ್ಕೆ ಅವಕಾಶವಿಲ್ಲ. ಜನ್ಮಾದಿ ಸೂತ್ರದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣವು ಭಗವಂತನ ಲಕ್ಷಣವೆಂಬುದು ಸಿದ್ಧವಾಯಿತು

ವಿವರಣೆ - ವೈಷಮ್ಯಾದಿಗಳು ಸ್ವಾಭಾವಿಕವಾಗಿ ದೋಷಗಳಲ್ಲ. ದೋಷಕ್ಕೆ ಕಾರಣವಾಗಿ ದೋಷಗಳೆನಿಸುತ್ತವೆ. ವೇದಾಪ್ರಾಮಾಣ್ಯವೆಂಬ ದೋಷಕ್ಕೆ ಕಾರಣವಾದ್ದರಿಂದ ಇವುಗಳು ದೋಷವೆನಿಸುತ್ತವೆ ಎಂದಭಿಪ್ರಾಯ. ವೇದಾಪ್ರಾಮಾಣ್ಯದೋಷ ಬರುತ್ತದೆಂಬ ದೃಷ್ಟಿಯಿಂದ ಅಶೇಷಕರ್ಮವನ್ನು ಅಪೇಕ್ಷಿಸಿಯೇ ಈಶ್ವರನು ಫಲವನ್ನು ನೀಡುತ್ತಾನೆಂದು ಒಪ್ಪಬೇಕು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ವೈಷಮ್ಯನೈರ್ಘೃಣ್ಯಾಧಿಕರಣ ಮುಗಿಯಿತು.

## ವೈಷಮ್ಯನೈರ್ಘೃಣ್ಯಾಧಿಕರಣ
## (೨-೧-೯)

# ಭಾಗ - ೨

### ತಾತ್ಪರ್ಯಚಂದ್ರಿಕಾ, ಪ್ರಕಾಶ,
ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ
ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## वैषम्यनैर्घृण्याधिकरणम्

### ಭಗವಂತನಲ್ಲಿ ವೈಷಮ್ಯನೈರ್ಘೃಣ್ಯ ದೋಷಗಳು ಇಲ್ಲ

**वैषम्यनैर्घृण्ये न सापेक्षत्वात् तथा हि दर्शयति ।। अत्र पूर्वाधिकरणोक्त-परप्रयोजनरूपफलविषययुक्त्यविरोध उच्यत इति सङ्गतिः । अत्र विष्णोः सर्वकर्तृत्वं न युक्तमुत युक्तमिति चिन्ता । तदर्थं सुखदुःखकर्तृत्वे वैषम्याद्यापत्तिरुत नेति ।**

'ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ' ಎಂಬ ಸೂತ್ರದಿಂದ ವೈಷ್ಯಮನೈರ್ಘೃಣ್ಯಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಪರಪ್ರಯೋಜನವೆಂಬ ಫಲವಿಷಯಕವಾದ ಯುಕ್ತಿಯ ವಿರೋಧವನ್ನು ಪರಿಹಾರ ಮಾಡಲಾಗುತ್ತಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿ ಇರುತ್ತದೆ.

ಅಧಿಕರಣದ ಸಂಶಯ ಪರಂಪರೆ ಹೀಗಿದೆ - ವಿಷ್ಣುವಿಗೆ ಸರ್ವಕರ್ತೃತ್ವವು ಅಯುಕ್ತವೋ, ಅಥವಾ ಯುಕ್ತವೋ ? ಎಂಬುದು ಪ್ರಧಾನ ಸಂಶಯ. ಇದರ ಪರಿಹಾರಕ್ಕಾಗಿ ಸುಖ-ದುಃಖವನ್ನು ವಿಷ್ಣುವು ನೀಡುವುದಾದರೆ ಅವನಿಗೆ ವೈಷಮ್ಯನೈರ್ಘೃಣ್ಯದೋಷಗಳು ಬರುತ್ತವೋ, ಬರುವುದಿಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थमीश्वरः किमनादिकर्मयोग्यतादिनिरपेक्ष उत तत्सापेक्ष इति । तदर्थं च कर्मयोग्यतादिकमीश्वरानधीनमुत ईशितव्यत्वात्तदधीनमिति । तदर्थं तस्येश्वराधीनत्वे पुनरापन्नं स्वाधीनानादिसिद्धयोग्यताद्यनुसारेण सुखदुःखदत्वलक्षणं वैषम्यादिकं किं वैषम्यादिकमित्येव दोषः किं वा वेदाप्रामाण्याद्यापादकतयेति ।।**

ಈ ಸಂಶಯದ ಪರಿಹಾರಕ್ಕಾಗಿ ಈಶ್ವರನು ಅನಾದಿಯಾದ ಕರ್ಮ ಹಾಗೂ ಯೋಗ್ಯತೆಗಳನ್ನು ಅಪೇಕ್ಷೆ ಪಡುವುದಿಲ್ಲವೋ, ಅಥವಾ ಅಪೇಕ್ಷೆ ಪಡುತ್ತಾನೋ? ಎಂಬ ಸಂಶಯವು ಪರಿಹಾರವಾಗಬೇಕು.

ಇದರ ಪರಿಹಾರಕ್ಕಾಗಿ ಕರ್ಮ ಹಾಗೂ ಯೋಗ್ಯತೆ ಮೊದಲಾದವು ಈಶ್ವರನಿಗೆ ಅಧೀನವಾಗಿಲ್ಲವೋ? ಅಥವಾ ಈಶಿತವ್ಯಕೋಟಿಯಲ್ಲಿ ಸೇರಿರುವುದರಿಂದ ಈಶನ ಅಧೀನವಾಗಿವೆಯೋ ? ಎಂಬ ಸಂಶಯವು ಪರಿಹಾರವಾಗಬೇಕು.

ಇದರ ಪರಿಹಾರಕ್ಕಾಗಿ ಕರ್ಮಾದಿಗಳು ಈಶ್ವರನ ಅಧೀನವಾದರೆ ಪುನಃ ತನ್ನ ಅಧೀನವಾದ ಅನಾದಿಸಿದ್ಧವಾದ ಯೋಗ್ಯತೆ ಹಾಗೂ ಕರ್ಮಗಳಿಗೆ ಅನುಸಾರಿಯಾಗಿಯೇ ಸುಖ ಹಾಗೂ ದುಃಖಗಳನ್ನು ಕೊಡುತ್ತಾನೆ ಎಂದು ಹೇಳಿದಂತಾಯಿತು. ಆಗ ಅವನಿಗೆ ವೈಷಮ್ಯನೈರ್ಘೃಣ್ಯದೋಷಗಳು ಬಂದೇ ಬರುತ್ತವೆ. ಈ ವೈಷಮ್ಯಾದಿಗಳು ಸ್ವತಃ ದೋಷವಾಗಿವೆಯೋ, ಅಥವಾ ವೇದ ಅಪ್ರಾಮಾಣ್ಯಕ್ಕೆ ಕಾರಣವಾದ್ದರಿಂದ ದೋಷವಾಗಿವೆಯೋ ಎಂಬ ಕೊನೆಯ ಸಂಶಯವು ಪರಿಹಾರವಾಗಬೇಕು.

**पूर्वपक्षयतीति ।। अयं भावः । परप्रयोजनाय सृष्टिरिति पूर्वोक्तं न युक्तम् । एवं हि सर्वेऽपि सर्वदा सुखिनः स्युः । ईश्वरो हि कांश्चित्सुखयन् कांश्चिद्दुःखयन् विषमो निर्घृणश्च स्यात् । नच कर्मसापेक्षत्वाददोषः । ''एष ह्येव साधुकर्म कारयति'' इत्यादिश्रुत्या कर्मणोऽपीश्वरकारितत्वात् ।**

ಅಧಿಕರಣದ ಪೂರ್ವಪಕ್ಷದ ಅಭಿಪ್ರಾಯ ಹೀಗಿದೆ - ಹಿಂದಿನ ಅಧಿಕರಣದಲ್ಲಿ ಲೋಕಪ್ರಯೋಜನಕ್ಕಾಗಿ ಪರಮಾತ್ಮನು ಲೋಕವನ್ನು ಸೃಷ್ಟಿ ಮಾಡುತ್ತಾನೆ ಎಂದು ಪ್ರತಿಪಾದನೆ ಮಾಡಲಾಯಿತು. ಇದು ಯುಕ್ತವಲ್ಲ. ಹಾಗಾದಲ್ಲಿ ಪ್ರತಿಯೊಬ್ಬರೂ ಕೂಡ ಯಾವಾಗಲೂ ಸುಖಿಗಳೇ ಆಗಬೇಕಾಗುತ್ತದೆ. ಮತ್ತು ಈಶ್ವರನು ಕೆಲವರನ್ನು ಮಾತ್ರ ಸುಖಿಗಳನ್ನಾಗಿಟ್ಟು ಇನ್ನು ಕೆಲವರನ್ನು ದುಃಖಿಗಳನ್ನಾಗಿ ಇಡುತ್ತಾನಾದ್ದರಿಂದ ವೈಷಮ್ಯದೋಷ ಹಾಗೂ ನೈರ್ಘೃಣ (ನಿಷ್ಕಾರುಣ್ಯ) ಎಂಬ ದೋಷವು ಬರಬೇಕಾಗುತ್ತದೆ.

ಕರ್ಮವನ್ನು ಅಪೇಕ್ಷೆ ಪಡುವುದರಿಂದ ಈಶ್ವರನಿಗೇಕೆ ದೋಷ ಬರುತ್ತದೆ ಎಂದು ಪ್ರಶ್ನಿಸಬಾರದು. 'ಏಷ ಹ್ಯೇವ ಸಾಧುಕರ್ಮ ಕಾರಯತಿ' 'ಈ ಈಶ್ವರನೇ ಒಳ್ಳೇ ಕೆಲಸಗಳನ್ನು ಮಾಡಿಸುತ್ತಾನೆ' ಇತ್ಯಾದಿ ಶ್ರುತಿಯಿಂದ ಕರ್ಮವೂ ಕೂಡ ಈಶ್ವರನ ಅಧೀನವೇ ಆಗಿರುತ್ತದೆ.

**ननु च पूर्वपूर्वकर्मापेक्ष्योत्तरोत्तरकर्म कारयति । नच यत्र पर्यवसानं तदारभ्य दोष इति वाच्यम् । अनादित्वात्कर्मप्रवाहस्येति चेन्न । अनादिकर्मप्रवाहसत्तास्वभा**

**वादेरप्यारम्भणाद्यधिकरणन्यायेनेशाधीनत्वे पुनर्वैषम्याद्यापातात् । अनधीनत्वे तु स्वातन्त्र्यं नोपपद्येतेत्युभयथापि न निर्दोषं ब्रह्मेति पक्षः ।**

ಆಕ್ಷೇಪ - ಈಶ್ವರನು ಹಿಂದಿನ-ಹಿಂದಿನ ಕರ್ಮಗಳನ್ನು ಅಪೇಕ್ಷಿಸಿ ಮುಂದಿನ-ಮುಂದಿನ ಕರ್ಮಗಳನ್ನು ಮಾಡಿಸುತ್ತಾನೆ. ಆದ್ದರಿಂದ ಈಶ್ವರನಿಗೆ ವೈಷ್ಯನೈರ್ಘೃಣ್ಯದೋಷವು ಹೇಗೆ ಬರಲು ಸಾಧ್ಯ. ಇನ್ನು ಹಿಂದಿನ ಕರ್ಮವು ಎಲ್ಲಿ ನಿಲ್ಲುತ್ತದೋ, ಆ ಮೊದಲಿನ ಕರ್ಮವನ್ನು ಈಶ್ವರನೇ ಮಾಡಿಸಿದ್ದರಿಂದ ಅವನಿಗೆ ವೈಷಮ್ಯನೈರ್ಘೃಣ್ಯದೋಷವು ಬಂದೇ ಬರುತ್ತದೆ ಅಲ್ಲವೇ? ಎಂದು ಪ್ರಶ್ನಿಸಬಾರದು. ಕರ್ಮವು ಪ್ರವಾಹತಃ ಅನಾದಿಯಾದ್ದರಿಂದ ಅದಕ್ಕೆ ಪರ್ಯವಸಾನವೇ ಇರುವುದಿಲ್ಲ. ಆದ್ದರಿಂದ ಈಶ್ವರನಿಗೆ ವೈಷಮ್ಯನೈರ್ಘೃಣ್ಯದೋಷವು ಬರುವುದಿಲ್ಲ.

ಉತ್ತರ - ಹೀಗೆ ಆಕ್ಷೇಪ ಮಾಡುವುದು ತಪ್ಪು. ಪ್ರವಾಹತಃ ಅನಾದಿಯಾಗಿರುವ ಕರ್ಮವು ಹಾಗೂ ಕರ್ಮದ ಸತ್ತಾವು ಅದರ ಸ್ವಭಾವವು ಪ್ರತಿಯೊಂದೂ ಕೂಡ ಈಶ್ವರನ ಅಧೀನವೇ ಆಗಿದೆ. ಈ ವಿಷಯವನ್ನು ಆರಂಭಣಾಧಿಕರಣದ ನ್ಯಾಯದಿಂದ ಸಮರ್ಥಿಸಿದ್ದಾಗಿದೆ. ಆದ್ದರಿಂದ ಈಶ್ವರನಿಗೆ ವೈಷ್ಯಮ್ಯನೈರ್ಘೃಣ್ಯ ಎಂಬ ದೋಷವು ಬಂದೇ ಬರುತ್ತದೆ. ಒಂದುವೇಳೆ ಈ ಅನಾದಿಯಾದ ಕರ್ಮ ಮೊದಲಾದವು ಈಶ್ವರನ ಅಧೀನವಲ್ಲ ಎಂದು ಹೇಳಿದರೆ ಸ್ವಾತಂತ್ರ್ಯವೇ ಯುಕ್ತವಾಗುವುದಿಲ್ಲ. ಹೀಗೆ ಎರಡು ರೀತಿಯಿಂದ ವಿಚಾರ ಮಾಡಿದಾಗಲೂ ಬ್ರಹ್ಮನು ನಿರ್ದುಷ್ಟನಾಗಿದ್ದಾನೆ ಎಂಬ ಪ್ರಮೇಯವು ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

**सिद्धान्तमाह ।। सिद्धान्तयदिति ।। अयं भावः । वैषम्यनैर्घृण्ये हि किं धर्माधर्मावनपेक्ष्येश्वरस्य सुखदुःखदत्त्वे तयोः सुखदुःखहेतुत्वप्रतिपादक-वेदाप्रामाण्यापादकतया दोषौ किं वा तत्सापेक्षत्वेन वेदाप्रामाण्याभावेऽपि तस्यापीशाधीनत्वेनेश्वरस्य दोषौ ।**

ಸಿದ್ಧಾಂತವನ್ನು 'ಸಿದ್ಧಾಂತ್ಯತ್' ಇತ್ಯಾದಿ ಟೀಕಾವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಸಿದ್ಧಾಂತದ ಅಭಿಪ್ರಾಯ ಹೀಗಿದೆ - ವೈಷಮ್ಯನೈರ್ಘೃಣ್ಯದೋಷಗಳು ಧರ್ಮ ಮತ್ತು ಅಧರ್ಮಗಳನ್ನು ಅಪೇಕ್ಷೆ ಪಡದೇ ಈಶ್ವರನಿಗೆ ಸುಖ ಹಾಗೂ ದುಃಖಗಳನ್ನು ನೀಡುತ್ತವೆ ಎಂದು ಹೇಳುವುದಾದರೆ, ಆಗ ಆ ಧರ್ಮ ಮತ್ತು ಅಧರ್ಮಗಳು ಸುಖ ಹಾಗೂ ದುಃಖಗಳಿಗೆ ಕಾರಣವಾಗಿವೆ ಎಂದು ಪ್ರತಿಪಾದನೆ ಮಾಡುವ ವೇದಕ್ಕೆ ಅಪ್ರಾಮಾಣ್ಯವು ಬರಬೇಕಾಗುತ್ತದೆ. ಏತನ್ಮೂಲಕವಾಗಿ ವೈಷಮ್ಯನೈರ್ಘೃಣ್ಯಗಳು ಈಶ್ವರನಿಗೆ ದೋಷವಾಗುತ್ತವೆ ಎಂದು ಹೇಳುವಿರೋ, ಅಥವಾ ವೈಷಮ್ಯನೈರ್ಘೃಣ್ಯದೋಷಗಳು ಧರ್ಮ ಮತ್ತು ಅಧರ್ಮಗಳನ್ನು ಅಪೇಕ್ಷೆ ಪಡುವುದರಿಂದ ವೇದಕ್ಕೆ ಅಪ್ರಾಮಾಣ್ಯವು ಬಾರದಿದ್ದರೂ ಈ ಧರ್ಮಾಧರ್ಮಗಳು ಈಶ್ವರನ ಅಧೀನವಾದ್ದರಿಂದ ಈಶ್ವರನಿಗೆ ಇವು ದೋಷವಾಗುತ್ತವೆಂದು ಹೇಳುವಿರೋ ?

**नाद्यः । कर्मादिरपेक्षणात् । द्वितीयेऽपि किं जीवानामिव प्रत्यवायहेतुतया दोषौ यद्वा ''समोऽहं सर्वभूतेषु'' इत्यादिशास्त्राप्रामाण्यापादकतया अथवा समत्वरूपसद्गुणविरोधित्वेन नीचत्वापादकतया ।**

ಮೊದಲನೆಯ ಪಕ್ಷವು ತಪ್ಪು. ಏಕೆಂದರೆ ವೈಷಮ್ಯ ಹಾಗೂ ನೈರ್ಘೃಣ್ಯಗಳು ಧರ್ಮ ಮತ್ತು ಅಧರ್ಮಗಳನ್ನು ಅಪೇಕ್ಷೆ ಪಟ್ಟೇ ಪಡುತ್ತವೆ ಆದ್ದರಿಂದ ಅಪೇಕ್ಷೆ ಪಡುವುದಿಲ್ಲವೆಂಬ ಪಕ್ಷವು ತಪ್ಪಾಗುತ್ತದೆ.

ಎರಡನೆಯ ಪಕ್ಷದಲ್ಲೂ ಕೂಡ ಜೀವರಿಗೆ ಹೇಗೆ ಪ್ರತ್ಯವಾಯ ಹೇತುಗಳಾಗಿ ವೈಷಮ್ಯ ಹಾಗೂ ನೈರ್ಘೃಣ್ಯಗಳು ದೋಷವಾಗುತ್ತವೋ, ಅದರಂತೆ ಪರಮಾತ್ಮನಿಗೂ ಕೂಡ ವೈಷಮ್ಯನೈರ್ಘೃಣ್ಯಗಳು ಪ್ರತ್ಯವಾಯಹೇತುವಾಗಿ ದೋಷಗಳಾಗುತ್ತವೆ ಎಂದು ಹೇಳುತ್ತೀರೋ ? ಅಥವಾ 'ಸಮೋಽಹಂ ಸರ್ವಭೂತೇಷು' ಗೀತಾವಾಕ್ಯಕ್ಕೆ ಅಪ್ರಾಮಾಣ್ಯವು ಬರಬೇಕಾಗುತ್ತದಾದ್ದರಿಂದ ಇವು ದೋಷವಾಗುತ್ತದೆಂದು ಹೇಳುತ್ತೀರೋ? ಅಥವಾ ಸಮತ್ವರೂಪವಾದ ಸದ್ಗುಣವಿರೋಧಿಯಾಗಿರುವುದರಿಂದ ನೀಚತ್ವಾಪಾದಕವಾಗಿ ಇವು ದೋಷವಾಗುತ್ತವೆಂದು ಹೇಳುತ್ತೀರೋ ?

**नाद्यः । ईश्वरस्य विधिनिषेधातीतत्वात् । न द्वितीयः । अनादिसिद्धयोग्यताद्यनुसारित्वस्यैव तत्र समशब्दार्थत्वात् । उक्तं हि –**

**सेवायोग्यातिरेकेण स्वानामपि न दास्यति ।**
**अपराधातिरेकेण नान्यस्यातस्समो हरिः ।। इति ।**

ಮೊದಲನೆಯ ಪಕ್ಷವು ತಪ್ಪು. ಏಕೆಂದರೆ ಈಶ್ವರನು ವಿಧಿ ಹಾಗೂ ನಿಷೇಧಗಳಿಂದ ಅತೀತನಾಗಿದ್ದಾನೆ. ಆದ್ದರಿಂದ ಧರ್ಮಾಧರ್ಮಗಳನ್ನು ಪರಿಪಾಲನೆ ಮಾಡದಿದ್ದರೆ ಜೀವರಿಗೆ ಹೇಗೆ ಪ್ರತ್ಯವಾಯ ಬರುತ್ತದೋ, ಅದರಂತೆ ಈಶ್ವರನಿಗೆ ಪ್ರತ್ಯವಾಯ ಬರಲು ಸಾಧ್ಯವಿಲ್ಲ.

ಒಬ್ಬೊಬ್ಬರಿಗೆ ಒಂದೊಂದು ರೀತಿಯಲ್ಲಿ ಸುಖ-ದುಃಖಗಳನ್ನು ನೀಡಿದರೆ ಸಮತ್ವ ಎಂಬ ಗುಣವು ನಾಶವಾಗಬೇಕಾಗುತ್ತದೆಂಬ ಎರಡನೆಯ ಪಕ್ಷವೂ ಕೂಡ ತಪ್ಪು. ಏಕೆಂದರೆ 'ಸಮಾ' ಎಂಬ ಪದಕ್ಕೆ ಅನಾದಿಸಿದ್ಧವಾದ ಕರ್ಮ, ಯೋಗ್ಯತೆ ಮೊದಲಾದವುಗಳನ್ನು ಅನುಸರಿಸಿ ಫಲ ನೀಡುತ್ತಾನೆ ಎಂದೇ ಅರ್ಥ. ಇದನ್ನೇ ಹೀಗೆ ಹೇಳಲಾಗಿದೆ -

ಸೇವಾಯೋಗ್ಯಾತಿರೇಕೇಣ ಸ್ವಾನಾಮಪಿ ನ ದಾಸ್ಯತಿ ।
ಅಪರಾಧಾತಿರೇಕೇಣ ನಾನ್ಯಸ್ಯಾತಃ ಸಮೋ ಹರಿಃ ॥

ಯಾವ ಭಕ್ತರು ತನ್ನ ಸೇವೆಯನ್ನು ಮಾಡಿ, ಫಲವನ್ನು ಪಡೆದಿರುತ್ತಾರೋ, ತನ್ನವರಾದರೂ ಕೂಡ ಅವರಿಗೆ ಹೆಚ್ಚಿನ ಫಲವನ್ನು ಪರಮಾತ್ಮನು ನೀಡುವುದಿಲ್ಲ. ತನ್ನನ್ನು ದ್ವೇಷಿಸುವ ಯಾವ

ದುಷ್ಪರಿದ್ದಾರೋ, ಅವರು ಎಷ್ಟು ಅಪರಾಧವನ್ನು ಮಾಡಿದ್ದಾರೋ, ಅದಕ್ಕಿಂತ ಹೆಚ್ಚಿನ ಶಿಕ್ಷೆಯನ್ನೂ ಕೂಡ ಆ ಶ್ರೀಹರಿಯು ನೀಡಲಾರ. ಆದ್ದರಿಂದಲೇ ಇವನನ್ನು 'ಸಮ' ಎನ್ನುತ್ತಾರೆ.

**यत्र यस्य यथा वृत्तिर्विहिता वर्तनं तथा ।**
**ज्ञानं वापि समत्वं तद्विषमत्वं ततोऽन्यथा ।। इति च ।**
**अत एव यमस्य समवर्तित्वप्रसिद्धिः ।**

ಯಸ್ಯ ಯಸ್ಯ ಯಥಾ ವೃತ್ತಿರ್ವಿಹಿತಾ ವರ್ತನಂ ತಥಾ ।
ಜ್ಞಾನಂ ವಾಪಿ ಸಮತ್ವಂ ತದ್ವಿಷಮತ್ವಂ ತತೋಽನ್ಯಥಾ ॥ ಇತಿ ಚ ।

ಮತ್ತು ಯಾರಿಗೆ ಯಾವ ವಿಷಯದಲ್ಲಿ ವೃತ್ತಿಯು ವಿಹಿತವಾಗಿದೆಯೋ, ಆ ವ್ಯಕ್ತಿಯು ಆ ವಿಷಯದಲ್ಲಿ ಅದೇ ರೀತಿಯಲ್ಲಿ ವರ್ತನೆ ಮಾಡಬೇಕು. ಮತ್ತು ತದ್ವಿಷಯಕವಾದ ಜ್ಞಾನವನ್ನು ಹಾಗೆಯೇ ಹೊಂದಬೇಕು. ಇದನ್ನೇ 'ಸಮ' ಎಂದು ಕರೆಯುತ್ತಾರೆ. ಇದಕ್ಕೆ ವಿರುದ್ಧವಾದದ್ದು 'ವಿಷಮ' ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದಲೇ ಯಮದೇವರಿಗೆ ಎಲ್ಲರು 'ಸಮವರ್ತಿ' ಎಂಬ ಪ್ರಸಿದ್ಧಿ ಇದೆ.

**नहि मातृकलत्रादौ गुरुशिष्यादिकेऽपि च ।**
**वसिष्ठपुल्कसादौ च समधीस्सम उच्यते ।।१।।**

ನಹಿ ಮಾತೃಕಲತ್ರಾದೌ ಗುರುಶಿಷ್ಯಾದಿಕೇಽಪಿ ಚ ।
ವಸಿಷ್ಠಪುಲ್ಕಸಾದೌ ಚ ಸಮಧೀಃ ಸಮ ಉಚ್ಯತೇ ॥೧॥

ತಾಯಿಯಲ್ಲಿ ಹೆಂಡತಿಯಲ್ಲಿ ಒಂದೇ ರೀತಿಯಲ್ಲಿ ವರ್ತನೆ ಮಾಡುವವರನ್ನು ಸಮರಾದವರು ಎಂದು ಯಾರೂ ಕರೆಯುವುದಿಲ್ಲ. ಗುರುಗಳಲ್ಲಿ ವರ್ತನೆ ಮಾಡುವಂತೆ ಶಿಷ್ಯನಲ್ಲಿಯೂ ವರ್ತಿಸುವವನನ್ನು 'ಸಮ' ಎಂದು ಯಾರೂ ಕರೆಯುವುದಿಲ್ಲ. ಅತ್ಯಂತ ಶ್ರೇಷ್ಠತಪಸ್ವಿಗಳಾದ ವಸಿಷ್ಠರಲ್ಲಿ ವರ್ತಿಸುವಂತೆ, ಹೀನಜಾತಿಯವನಾದ ಪುಲ್ಕನಲ್ಲಿ ವರ್ತಿಸುವವನನ್ನು ಸಮಧೀ ಎಂದು ಯಾರೂ ಕರೆಯುವುದಿಲ್ಲ. ಆದ್ದರಿಂದ ಯಾರು ಯಾರ ವಿಷಯದಲ್ಲಿ ಹೇಗೆ ವರ್ತಿಸಬೇಕೋ, ಅವರು ಹಾಗೆಯೇ ವರ್ತನೆ ಮಾಡಬೇಕು. ಇದೇ 'ಸಮ' ಎಂದು ಕರೆಸಿಕೊಳ್ಳುತ್ತದೆ.

**न वा दुष्टान्निगृह्णन् शिष्टांश्चानुगृह्णन् राजा विषमः । ''शुनि चैव श्वपाके च'' इत्यादि त्वधिष्ठानवैषम्येऽपि तदधिष्ठितस्य भगवतस्तदभावपरम् ।**

ದುಷ್ಟರನ್ನು ನಿಗ್ರಹ ಮಾಡಿ, ಶಿಷ್ಟರನ್ನು ಅನುಗ್ರಹ ಮಾಡುವ ರಾಜನನ್ನು 'ವಿಷಮ' ಎಂದು ಯಾರೂ ಕರೆಯುವುದಿಲ್ಲ. 'ಶುನಿ ಚೈವ ಶ್ವಪಾಕೇ ಚ' ಎಂದು ಗೀತೆಯಲ್ಲಿ ಎಲ್ಲರನ್ನೂ ಸಮಾನವಾಗಿ

ಕಾಣಬೇಕೆಂದು ಹೇಳಿದ್ದಾರಲ್ಲವೇ ? ಎಂಬ ಪ್ರಶ್ನೆಯೂ ಕೂಡ ತಪ್ಪು. ಆ ಶ್ಲೋಕದಲ್ಲಿ ಅಧಿಷ್ಠಾನಗಳಲ್ಲಿ ವೈಷಮ್ಯವಿದ್ದರೂ ಅಧಿಷ್ಠಿತನಾದ ಪರಮಾತ್ಮನು ಎಲ್ಲರಲ್ಲಿಯೂ ಸಮಾನನಾಗಿದ್ದಾನೆ. ಅವನಲ್ಲಿ ವೈಷಮ್ಯವಿಲ್ಲ ಎಂಬ ಅಭಿಪ್ರಾಯವೇ ಇರುತ್ತದೆ.

**तृतीयेऽपि किं विविधतत्तत्स्वभावकरणाद्वैषम्यादिकं किं वानादिनित्यतत्तत्स्व भावोल्लंघनात् यद्वाऽनादिसिद्धविविधतत्तत्स्वभावस्यान्यथाकरणे शक्तत्वेऽपि तदकरणात् अथवाऽनादितत्तत्स्वभावनियमनात् ।**

**नाद्यः । चेतनस्वभावस्यानादित्वात् । न द्वितीयः । ईश्वरस्य तत्तत्स्वभावानुसारेणैव फलप्रदत्वात् । न तृतीयः । तस्य वैषम्याद्यनापादकत्वात् ।**

ಮೊದಲನೆಯ ಪಕ್ಷವು ತಪ್ಪು. ಚೇತನಸ್ವಭಾವವು ಅನಾದಿಯಾಗಿದೆ. ಆದ್ದರಿಂದ ಪರಮಾತ್ಮನೇ ಆಯಾ ಸ್ವಭಾವಗಳನ್ನು ಸೃಷ್ಟಿ ಮಾಡುತ್ತಾನೆಂದು ಹೇಳಲು ಸಾಧ್ಯವಿಲ್ಲ.

ಎರಡನೆಯ ಪಕ್ಷವೂ ಕೂಡ ತಪ್ಪು. ಈಶ್ವರನು ಆಯಾ ಜೀವರ ಸ್ವಭಾವಕ್ಕೆ ಅನುಸಾರಿಯಾಗಿಯೇ ಫಲವನ್ನು ನೀಡುತ್ತಾನೆ. ಆದ್ದರಿಂದ ಅನಾದಿಸಿದ್ಧವಾದ ಸ್ವಭಾವದ ಉಲ್ಲಂಘನೆಯನ್ನು ಸರ್ವಥಾ ಮಾಡಲಾರ.

ಮೂರನೆಯ ಪಕ್ಷವೂ ಕೂಡ ತಪ್ಪು. ಈ ಪಕ್ಷವು ವೈಷಮ್ಯನೈರ್ಘೃಣ್ಯಕ್ಕೆ ಆಪಾದಕವೇ ಅಲ್ಲ. ಏಕೆಂದರೆ ಅನ್ಯಥಾಕರ್ತುಂ ಸಮರ್ಥನಾಗಿದ್ದರೂ ಕೂಡ ಪರಮಾತ್ಮನು ಹಾಗೇ ಮಾಡಲಾರ. ಇದು ಅವನಿಗೆ ಭೂಷಣವೇ ಆಗಿದೆ.

**स्वभावमन्यथाकर्तुं यश्शक्तोऽप्यनुवर्तते ।**
**नासौ लोकेऽपि विषमो न वा निर्घृण उच्यते ॥१॥**

ಸ್ವಭಾವಮನ್ಯಥಾಕರ್ತುಂ ಯಃ ಶಕ್ತೋಽಪ್ಯನುವರ್ತತೇ ।
ನಾಸೌ ಲೋಕೇಽಪಿ ವಿಷಮೋ ನ ವಾ ನಿರ್ಘೃಣ ಉಚ್ಯತೇ ॥೧॥

ಯಾವ ಪರಮಾತ್ಮನು ಜೀವರ ಸ್ವಭಾವವನ್ನು ಅನ್ಯಥಾ ಕರ್ತುಂ ಪ್ರಭವನಾಗಿದ್ದಾರೂ ಕೂಡ ಹಾಗೇ ಮಾಡದೇ ಸ್ವಭಾವಕ್ಕೆ ಅನುಗುಣವಾಗಿಯೇ ಪ್ರೇರಣೆ ಮಾಡುತ್ತಾನೆಯೋ, ಅಂಥ ಪರಮಾತ್ಮನ ಬಗ್ಗೆ ಲೋಕದಲ್ಲಿ ಯಾರೊಬ್ಬರೂ ಕೂಡ ಇವನು ವೈಷಮ್ಯವನ್ನುಂಟು ಮಾಡುತ್ತಿದ್ದಾನೆಂದಾಗಲೀ ನಿರ್ದಯವಂತನಾಗಿದ್ದಾನೆಂದಾಗಲೀ ಹೇಳಲಾರರು.

**समर्थोऽपि हि हंसादीन् काकीकर्तुं च यो मुनिः ।**
**न काकीकुरुतेऽयं किं लोके विषम उच्यते ॥२॥**

ಸಮರ್ಥೋऽಪಿ ಹಿ ಹಂಸಾದೀನ್ ಕಾಕೀಕರ್ತುಂ ಚ ಯೋ ಮುನಿಃ ।
ನ ಕಾಕೀಕುರುತೇऽಯಂ ಕಿಂ ಲೋಕೇ ವಿಷಮ ಉಚ್ಯತೇ ॥೨॥

ತಪಸ್ವಿಯಾದ ಮುನಿಯೊಬ್ಬನು ಹಂಸವನ್ನು ಕಾಗೆಯನ್ನಾಗಿ ಮಾಡಲು ಸಮರ್ಥನಾಗಿರುತ್ತಾನೆ. ಆದರೂ ಕೂಡ ಹಂಸವನ್ನು ಕಾಗೆಯನ್ನಾಗಿ ಮಾಡಲಾರ. ಅಂದ ಮಾತ್ರಕ್ಕೆ ಯಾರೊಬ್ಬರೂ ಕೂಡ ಆ ಮುನಿಯ ಬಗ್ಗೆ 'ಇವನು ವೈಷಮ್ಯ ಮಾಡಿದನು' ಎಂದು ಹೇಳಲಾರರು.

**समर्थोपि च काकादीन् हंसीकर्तुं हि यो मुनिः ।**
**न हंसीकुरुतेऽयं किं लोके निर्घृण उच्यते ॥३॥**

ಸಮರ್ಥೋऽಪಿ ಚ ಕಾಕಾದೀನ್ ಹಂಸೀಕರ್ತುಂ ಹಿ ಯೋ ಮುನಿಃ ।
ನ ಹಂಸೀಕುರುತೇऽಯಂ ಕಿಂ ಲೋಕೇ ನಿರ್ಘೃಣ ಉಚ್ಯತೇ ॥೩॥

ಒಬ್ಬ ಮುನಿಯು ಕಾಗೆಯನ್ನು ಹಂಸವನ್ನಾಗಿ ಮಾಡಲೂ ಕೂಡ ಸಮರ್ಥನಾಗಿರುತ್ತಾನೆ. ಆದರೂ ಕೂಡ ಕಾಗೆಯನ್ನು ಹಂಸವನ್ನಾಗಿ ಮಾಡಲಾರ. ಅಂದ ಮಾತ್ರಕ್ಕೆ ಯಾರೊಬ್ಬರೂ ಕೂಡ ಆ ಮುನಿಯ ಬಗ್ಗೆ 'ಇವನು ನಿಷ್ಕರುಣಿಯಾಗಿದ್ದಾನೆ' ಎಂದು ಹೇಳಲಾರರು.

**न चतुर्थः । स्वभावनियामकत्वस्य निरतिशयस्वातन्त्र्यरूपमहागुणानुगुणत्वेन नीचत्वानापादकत्वात् । स्वभावाननुसारिदयायाश्चेश्वरे गुणत्वाभावेनानपेक्षितत्वात्। अन्यथेश्वरो दयालुत्वाद्दुःखमपि सुखमधर्ममपि धर्मं कुर्यात् ।**

ಅನಾದಿಸಿದ್ಧ ಸ್ವಭಾವಕ್ಕೆ ಅನುಗುಣವಾಗಿ ಈಶ್ವರನು ಫಲಪ್ರದನಾಗಿದ್ದಾನೆಂಬ ನಾಕನೆಯ ಪಕ್ಷವೂ ಕೂಡ ತಪ್ಪು. ಏಕೆಂದರೆ ಪರಮಾತ್ಮನು ಪ್ರತಿಯೊಬ್ಬ ಜೀವರ ಸ್ವಭಾವಕ್ಕೆ ನಿಯಾಮಕನಾಗಿದ್ದಾನೆ. ಇವನಲ್ಲಿ ನಿರತಿಶಯವಾದ ಸ್ವಾತಂತ್ರ್ಯವೆಂಬ ಮಹಾಗುಣವಿದೆ. ಇದಕ್ಕೆ ಅನುಗುಣವಾಗಿಯೇ ಸ್ವಭಾವನಿಯಾಮಕತ್ವವೆಂಬ ಧರ್ಮವನ್ನು ಇವನು ಹೊಂದಿದ್ದಾನೆ. ಆದ್ದರಿಂದ ಇದು ಅವನ ನೀಚತ್ವಕ್ಕೆ ಆಪಾದಕ ಆಗುವುದಿಲ್ಲ. ಜೀವರ ಸ್ವಭಾವಕ್ಕೆ ಅನುಸಾರಿಯಾಗದ ದಯೆಯನ್ನು ಈಶ್ವರನು ಹೊಂದಿದರೆ ಅದು ಗುಣ ಎಂದು ಕರೆಸಿಕೊಳ್ಳುವುದೇ ಇಲ್ಲ. ಇಂಥದ್ದು ಅಪೇಕ್ಷಿತವೂ ಅಲ್ಲ. ಹೀಗೊಪ್ಪದಿದ್ದರೆ ಈಶ್ವರನು ದಯಾಳುವಾದ್ದರಿಂದ ದುಃಖವನ್ನು ಸುಖವನ್ನಾಗಿ ಮಾಡಬೇಕಾಗುತ್ತದೆ. ಅಧರ್ಮವನ್ನು ಧರ್ಮವನ್ನಾಗಿ ಮಾಡಬೇಕಾಗುತ್ತದೆ.

**खिद्येत च लौकिकदयालुवत् प्राणिनां दुःखदर्शनेन ।**

**उक्तं हि –**

**विषमत्वं तु दोषाय शुभाशुभविपर्यये ।**
**शुभाशुभनियन्तृत्वं न दोषो गुण एव सः ।। इति ।**

ಲೋಕದಲ್ಲಿರುವ ದಯಾಳುಗಳು ಪ್ರಾಣಿಗಳ ದುಃಖವನ್ನು ನೋಡಿ ತಾವೂ ಕೂಡ ದುಃಖಿಸುತ್ತಾರೆ. ಇಂಥ ದಯಾಳುತ್ವವನ್ನು ಈಶ್ವರನಲ್ಲಿ ಒಪ್ಪುವುದೂ ಕೂಡ ದೋಷವೇ ಆಗಿದೆ. ಇದನ್ನು ಭಾಗವತ ತಾತ್ಪರ್ಯದಲ್ಲಿ ಹೀಗೆ ಹೇಳಲಾಗಿದೆ -

ವಿಷಮತ್ವಂ ತು ದೋಷಾಯ ಶುಭಾಶುಭವಿಪರ್ಯಯೇ ।
ಶುಭಾಶುಭನಿಯಂತೃತ್ವಂ ನ ದೋಷೋ ಗುಣ ಏವ ಸಃ ॥

ಶುಭವನ್ನು ಹಾಗೂ ಅಶುಭವನ್ನು ವ್ಯತ್ಯಾಸ ಮಾಡಿದಾಗ ಅಂಥ ವೈಷಮ್ಯವು ದೋಷವೆಂದು ಪರಿಗಣಿತವಾಗುತ್ತದೆ. ಇರುವ ಶುಭ ಮತ್ತು ಅಶುಭಗಳನ್ನು ನಿಯಂತ್ರಣೆ ಮಾಡುವುದು ದೋಷ ಎಂದು ಕರೆಸಿಕೊಳ್ಳುವುದಿಲ್ಲ ಗುಣವೇ ಆಗುತ್ತದೆ ಎಂದು.

ಯೋಗ್ಯತೆಗೆ ವ್ಯತಿರಿಕ್ತವಾಗಿ ಫಲವನ್ನು ನೀಡಿದರೆ ಆಗ ವೈಷಮ್ಯವೆಂಬ ದೋಷವು ಬರುತ್ತದೆ. ಆದರೆ ಪುಣ್ಯಾಪಾಪಗಳನ್ನು ಮತ್ತು ಯೋಗ್ಯತೆಯನ್ನು ಪರಮಾತ್ಮನೇ ನಿಯಂತ್ರಣ ಮಾಡುತ್ತಿರುವುದರಿಂದ ಪುನಃ ವೈಷಮ್ಯವು ಬರುತ್ತದೆಂದು ಹೇಳಿದರೆ ಅಂಥ ವೈಷಮ್ಯವು ದೋಷವೇ ಆಗುವುದಿಲ್ಲ.

**न विष्णोर्विषमत्वं तु योग्यतापेक्षया क्वचित् ।**
**योग्यतायास्तन्नियत्या विषमत्वं क्वचिद्भवेत् ।। इति च ।**

ನ ವಿಷ್ಣೋರ್ವಿಷಮತ್ವಂ ತು ಯೋಗ್ಯತಾಪೇಕ್ಷಯಾ ಕ್ವಚಿತ್ ।
ಯೋಗ್ಯತಾಯಾಸ್ತನ್ನಿಯತ್ಯಾ ವಿಷಮತ್ವಂ ಕ್ವಚಿದ್ಭವೇತ್ ॥

ಮಹಾವಿಷ್ಣುವು ಯೋಗ್ಯತೆಗನುಗುಣವಾಗಿಯೇ ಫಲವನ್ನು ನೀಡುತ್ತಾನೆ. ಆದ್ದರಿಂದ ಅವನಿಗೆ ವೈಷಮ್ಯವೆಂಬ ದೋಷವು ಬರುವುದಿಲ್ಲ. ದೇವತೆಗಳಲ್ಲಿರುವ ಮುಕ್ತಿಯೋಗ್ಯತ್ವ ಅಸುರರಲ್ಲಿರುವ ತಮೋಯೋಗ್ಯತ್ವ ಇವುಗಳನ್ನು ನಿಯಂತ್ರಣ ಮಾಡುವವನೂ ಕೂಡ ಅವನೇ ಆಗಿದ್ದಾನೆ. ಇದರಿಂದ ವೈಷಮ್ಯವು ಬಂದರೆ ಬರಲಿ. ಅದು ಅವನಿಗೆ ಭೂಷಣವೇ ಆಗಿದೆ.[೧]

(೧) ಈ ಭಾಗವು ಪ್ರಕ್ಷಿಪ್ತವಾದ್ದರಿಂದ ಪ್ರಕಾಶಟಿಪ್ಪಣಿಯಲ್ಲಿ ಶ್ರೀರಾಘವೇಂದ್ರಗುರುಸಾರ್ವಭೌಮರು ವ್ಯಾಖ್ಯಾನವನ್ನು ಮಾಡಿರುವುದಿಲ್ಲ.

**तदेतदभिप्रेत्योक्तमनुव्याख्याने –**

---

(जीवानामिव प्रत्यवायहेतुतया दोषौ यद्वा ''समोऽहं सर्वभूतेषु''इत्यादि शास्त्राप्रामाण्यापादकतया अथवा सर्वसमत्वरूपसद्गुणविरोधित्वेन नीचत्वापादनतया ।

नाद्यः । प्रवाहतोऽनादिकर्मापेक्षाभावात् । परं तु तत्कर्मेशाधीनम् । न द्वितीयः । ईश्वरस्य विधिनिषेधातीतत्वात् ।

न तृतीयः ।। अनादिसिद्धयोग्यताद्यनुसारित्वस्यैव तत्र समशब्दार्थत्वात् । उक्तं हि –

सेवायोग्यातिरेकेण स्वानामपि न दास्यति ।
अपराधातिरेकेण नान्यस्यातः समो हरि ।। इति ।
यस्य यत्र यथा वृत्तिर्विहिता वर्तनं तथा ।
ज्ञानं चापि समत्वं तद्विषमत्वमतोऽन्यथा ।। इति च ।

अत एव यमस्य समवर्तित्वप्रसिद्धिः ।

नहि मातृकलत्रादौ गुरुशिष्यादिकेऽपि वा ।
वसिष्ठपुल्कसादौ च समधीः सम उच्यते ।। १ ।।

नहि दुष्टान्निगृह्णन् राजा विषमः । ''शुनि चैव श्वपाके च'' इत्यादि त्वधिष्ठानवैषम्येऽपि तदधिष्ठितस्य भगवतस्तदभावपरम् । चतुर्थेऽपि किमनादि-नित्यतत्तत्स्वभावोल्लंघनाद्वैषम्यादिकं यद्वाऽनादिसिद्धविविधस्वभावस्यान्यथाकारणे शक्तत्वेऽपि तदकारणात् अथवाऽनादितत्तत्स्वभाव नियमनात् किं वा विविधतत्तत्स्वभावकरणात् । नाद्यः । ईश्वरस्य तत्तत्स्वभावानुसारेणैव फलप्रदत्वात् । न द्वितीयः । तस्य वैषम्याद्यनापादकत्वात् ।

स्वभावमन्यथाकर्तुं यः शक्तोऽप्यनुवर्तते ।
नासौ लोकेऽपि विषमो न वा निर्घृण उच्यते ।।१।।
समर्थोऽपि च हंसादीन्काकीकर्तुं हि यो मुनिः ।
न काकीकुरुतेऽयं किं लोके विषम उच्यते ।।२।।
समर्थोऽपि च काकादीन् हंसीकर्तुं हि यो मुनिः ।
न हंसीकुरुतेऽयं किं लोके निर्घृण उच्यते ।।३।।

न तृतीयः । स्वभावनियामकत्वस्य निरतिशयस्वातन्त्र्यरूपमहागुणानु-गुणत्वेन नीचत्वानापादकत्वात् । स्वभावाननुसारिदयायाश्चेश्वरे गुणत्वाभावेना-नपेक्षितत्वात् । अन्यथेश्वरो दयालुत्वाज्जडमपि चेतनं सुरापानादि च धर्मसाधनं कुर्यात् । खिद्येत च लौकिकदयालुवत्प्राणिनां दुःखदर्शनेन । उक्तं हि –

विषमत्वं तु दोषाय शुभाशुभविपर्यये ।
शुभाशुभनियन्तृत्वं न दोषो गुण एव स ।। इति ।
न विष्णोर्विषमत्वं तु योग्यतापेक्षया कचित् ।
योग्यतायास्तन्नियत्या विषमत्वं कचिद्भवा ।। इति च ।

न चतुर्थः । चेतनस्वभावस्यानादित्वेनेशाकृतत्वात्)

**वैषम्यं निर्घृणत्वं च वेदाप्रामाण्यकारणम् ।**
**नाङ्गीकार्यमतोऽन्यत्तु न वैषम्यादिनामकम् ।। इति ।**

ಈ ಅಭಿಪ್ರಾಯದಿಂದಲೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ - ವೈಷಮ್ಯ ಹಾಗೂ ನೈರ್ಘೃಣ್ಯಗಳು ವೇದದ ಅಪ್ರಾಮಾಣ್ಯಕ್ಕೆ ಕಾರಣವಾದರೆ ಅದನ್ನು ಆಗ ಒಪ್ಪಲೇ ಬಾರದು. ಅದು ದೋಷವಾಗುತ್ತದೆ. ವೇದ ಅಪ್ರಾಮಾಣ್ಯಕ್ಕೆ ಕಾರಣವಾದ ವೈಷಮ್ಯ ಹಾಗೂ ನೈರ್ಘೃಣ್ಯಗಳು ದೋಷವೆಂದೇ ಕರೆಸಿಕೊಳ್ಳಲಾರವು ಎಂದು.

**सूत्रेऽप्यनुव्याख्यानोक्तमाद्यपक्षमाद्येन निरस्य द्वितीयसूत्रे तर्हि स्वातन्त्र्यं नोपपद्येतेति शङ्कां ''उपपद्यत'' इत्यनेन निरस्य ''उपलभ्यत'' इत्यनेनानुव्याख्यानोक्तो द्वितीयः पक्षः स्वीकृत इति द्रष्टव्यम् ।**

ಸೂತ್ರದಲ್ಲಿ ಜೀವರ ಯೋಗ್ಯತೆ ಕರ್ಮಗಳನ್ನು ಅಪೇಕ್ಷೆ ಪಡದಿದ್ದರೆ ಪರಮಾತ್ಮನಲ್ಲಿ ವೈಷಮ್ಯನೈರ್ಘೃಣ್ಯ ದೋಷಗಳು ಬರುತ್ತವಲ್ಲವೇ? ಎಂಬ ಮೊದಲನೆಯ ಆಕ್ಷೇಪವನ್ನು ಈ ಅಧಿಕರಣದ ವೈಷಮ್ಯನೈರ್ಘೃಣ್ಯ ಎಂಬಸೂತ್ರದಲ್ಲಿ ನಿರಾಕರಣೆ ಮಾಡಲಾಗಿದೆ. ಹಾಗಾದರೆ ಪರಮಾತ್ಮನಲ್ಲಿ ಸ್ವಾತಂತ್ರ್ಯವೇ ಬರುವುದಿಲ್ಲವಲ್ಲವೇ? ಎಂಬುದಾಗಿ ಎರಡನೆಯ ಸೂತ್ರದ ಮೇಲೆ ಬರುವ ಆಕ್ಷೇಪವನ್ನು 'ಉಪಪದ್ಯತೇ' ಎಂಬ ಸೂತ್ರದಿಂದ ನಿರಾಕರಣೆ ಮಾಡಿದ್ದಾರೆ. ತನ್ನ ಅಧೀನವೇ ಆದ ಕರ್ಮಾದಿಗಳನ್ನು ಅಪೇಕ್ಷೆ ಪಡುವುದರಿಂದ ಪುನಃ ವೈಷಮ್ಯಾದಿದೋಷಗಳು ಬರುತ್ತದಲ್ಲವೇ? ಎಂಬ ಆಕ್ಷೇಪವನ್ನು 'ಉಪಲಭ್ಯತೇ' ಎಂಬ ಸೂತ್ರದಿಂದ ನಿರಾಕರಣೆ ಮಾಡಿದ್ದಾರೆ. ಆದ್ದರಿಂದ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಎರಡನೆಯ ಪಕ್ಷವನ್ನು ಸ್ವೀಕರಿಸಿದ್ದಾರೆ ಎಂದು ತಿಳಿಯಬೇಕು.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**वैषम्यनैर्घृण्ये ।। फलविषयेति ।।** कर्मापेक्षं फलदानं न तदनपेक्षमित्येवं रूपयुक्तीत्यर्थः ।। **सङ्गतिरिति ।।** आक्षेपिकीत्यग्रे व्यक्तम् । अधिकरणोपाधिः पादान्ते स्पष्टयिष्यत इति भावः ।

ವೈಷಮ್ಯನೈರ್ಘೃಣ್ಯಾಧಿಕರಣವು ಪ್ರಾರಂಭವಾಗುತ್ತಿದೆ. ಮೂಲದಲ್ಲಿ 'ಫಲವಿಷಯೇ ಯುಕ್ತಿವಿರೋಧಃ' ಎಂದು ಹೇಳಿದ್ದಾರೆ. ಕರ್ಮವನ್ನು ಅಪೇಕ್ಷಿಸಿ ಈಶ್ವರನು ಫಲವನ್ನು ನೀಡುತ್ತಾನೋ, ಕರ್ಮವನ್ನು ಅಪೇಕ್ಷೆ

ಪಡದೇ ಫಲವನ್ನು ನೀಡುತ್ತಾನೋ ಎಂಬ ಸ್ವರೂಪದ ಯುಕ್ತಿಯ ಅವಿರೋಧವನ್ನು ಈ ಪಾದದಲ್ಲಿ ಹೇಳಲಾಗುತ್ತದೆಂಬುದು ಇದರ ಅಭಿಪ್ರಾಯ.

'ಸಂಗತಿಃ' ಎಂದು ಮೂಲದಲ್ಲಿ ಹೇಳಿದ್ದಾರೆ. 'ಆಕ್ಷೇಪಿಕೀಸಂಗತಿ' ಎಂದು ಇದರ ಅಭಿಪ್ರಾಯ. ಈ ಅಧಿಕರಣದ ಉಪಾಧಿಯನ್ನು ಪಾದದ ಕೊನೆಯಲ್ಲಿ ಸ್ಪಷ್ಟಪಡಿಸುತ್ತಾರೆ.

**प्रकाशः –** यद्वा परप्रयोजनेत्यादिनोपाधिरप्युक्तो ध्येयः । द्विविधं हि वैषम्यादिकम् । कर्मानपेक्षत्वप्रयुक्तमन्यत्तु तदपेक्षत्वेऽपि कर्मादेस्सत्तादेरपीश्वराधीनत्व-प्रयुक्तम् । तत्राद्योपयुक्तचिन्तामाह – **न युक्तमुत युक्तमिति** ।। अन्त्योपयुक्तामाह – **तस्येश्वराधीनत्व इति** ।।

ಅಥವಾ 'ಪರಪ್ರಯೋಜನ' ಇತ್ಯಾದಿ ವಾಕ್ಯದಿಂದ ಈ ಅಧಿಕರಣದ ಉಪಾಧಿಯನ್ನು ಗ್ರಂಥಕಾರರು ಮೊದಲೇ ಹೇಳಿರುತ್ತಾರೆ ಎಂದೂ ಕೂಡ ತಿಳಿಯಬಹುದು.

ಎರಡು ಬಗೆಯಲ್ಲಿ ವೈಷಮ್ಯಾದಿಗಳು ಇರುತ್ತವೆ. ೧. ಕರ್ಮಾನಪೇಕ್ಷ ಪ್ರಯುಕ್ತವಾದದ್ದು, ೨. ಕರ್ಮವನ್ನು ಅಪೇಕ್ಷೆ ಪಟ್ಟರೂ ಕೂಡ ಕರ್ಮಾದಿಗಳು ಹಾಗೂ ಅವುಗಳ ಸತ್ತಾದಿಗಳು ಈಶ್ವರಾಧೀನವಾಗಿದೆ ತತ್‌ಪ್ರಯುಕ್ತವಾದದ್ದು ಎಂದು. ಇವೆರಡರಲ್ಲಿ ಮೊದಲನೆಯ ಉಪಾಧಿಗೆ ಉಪಯುಕ್ತವಾದ ಸಂಶಯವನ್ನು 'ನ ಯುಕ್ತಮುತ ಯುಕ್ತಮ್' ಇತ್ಯಾದಿ ಗ್ರಂಥದಿಂದ ಉಲ್ಲೇಖಿಸುತ್ತಿದ್ದಾರೆ. ಕೊನೆಯ ಉಪಾಧಿಗೆ ಉಪಯುಕ್ತವಾದ ಸಂಶಯವನ್ನು 'ತಸ್ಯೇಶ್ವರಾಧೀನತ್ವ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

**प्रकाशः –** ननु किमीश्वराधीनमित्यनधीनत्वपूर्वपक्षकोटेर्निरपेक्षत्वसाध्यं प्रति कथं हेतुत्वमिति चेदेवमत्र हेतुहेतुमद्भावः । यदि वैषम्यादिकं तत्त्वेनैव दोषस्तर्हि कर्मादेरीश्वराधीनत्वेऽपि दोषतादवस्थ्यादनधीनत्वे वाच्येऽनधीनकर्मसापेक्षत्वे तस्यैव स्वतन्त्रकर्तृत्वमित्यस्य भङ्गापत्त्या तन्निरपेक्षत्वे निर्निमित्तं सुखादि प्रयच्छतो वैषम्याद्यापत्त्या न कर्तृत्वं युक्तम् । यदि तु वेदाप्रामाण्यप्रत्यवायाद्यापादकतया दोषस्तदा तस्येशेऽभावादधीनकर्मादिसापेक्षत्वेन निर्निमित्तं सुखादिदातृत्वाभावेन तन्निमित्तवैषम्याद्यापत्त्यभावात्कर्तृत्वं युक्तमिति भावः ।

ಪ್ರಶ್ನೆ - 'ಕಿಂ ಈಶ್ವರಾಧೀನಂ' ಎಂಬುದು ಅನಧೀನತ್ವ ಪೂರ್ವಪಕ್ಷಕೋಟಿಗೆ ನಿರಪೇಕ್ಷರೂಪವಾದ ಸಾಧ್ಯವನ್ನು ಕುರಿತು ಹೇಗೆ ಹೇತುವಾಗುತ್ತದೆ ? ಎಂಬ ಪ್ರಶ್ನೆಗೆ ಹೇತುಹೇತುಮದ್ಭಾವವನ್ನು ಈ ಕ್ರಮದಲ್ಲಿ ತಿಳಿಯಬೇಕು -

ಒಂದು ವೇಳೆ ವೈಷಮ್ಯನೈರ್ಘೃಣ್ಯಗಳು ಸ್ವತಃ ದೋಷಗಳಾಗುತ್ತವೆ ಎಂದು ಪರಿಗಣಿಸಿದರೆ ಆಗ ಕರ್ಮ, ಯೋಗ್ಯತಾ ಮೊದಲಾದವುಗಳು ಈಶ್ವರನ ಅಧೀನವಾದರೂ ಕೂಡ ಈಶ್ವರನಿಗೆ ವೈಷಮ್ಯ ಹಾಗೂ

ನೈರ್ಘೃಣ್ಯದೋಷಗಳು ಬಂದೇ ಬರುತ್ತವೆ. ಈ ಕರ್ಮಾದಿಗಳು ಈಶ್ವರಾಧೀನವಲ್ಲವೆಂದು ಹೇಳಿದರೆ ತನ್ನ ಅಧೀನವಲ್ಲದ ಕರ್ಮವನ್ನು ಈಶ್ವರನು ಅಪೇಕ್ಷೆ ಪಡುತ್ತಾನಾದ್ದರಿಂದ ಈಶ್ವರನು ಸ್ವತಂತ್ರಕರ್ತೃವಾಗಿದ್ದಾನೆ ಎಂಬ ಪ್ರಮೇಯಕ್ಕೆ ಭಂಗ ಬರುತ್ತದೆ. ಈ ಭೀತಿಯಿಂದ ಕರ್ಮಾದಿಗಳ ಅಪೇಕ್ಷೆಯನ್ನು ಈಶ್ವರನು ಹೊಂದುವುದಿಲ್ಲ ಎನ್ನುವುದಾದರೆ, ಕಾರಣವಿಲ್ಲದೇ ಸುಖ-ದುಃಖಗಳನ್ನು ಕೊಡುತ್ತಾನಾದ್ದರಿಂದ ವೈಷಮ್ಯದೋಷವು ಈಶ್ವರನಿಗೆ ಬರುತ್ತದೆ. ಹೀಗೆ ಕರ್ತೃತ್ವವೇ ಈಶ್ವರನಿಗೆ ಇಲ್ಲವೆಂದಾಗುತ್ತದೆ. ಇಷ್ಟು ಪೂರ್ವಪಕ್ಷದ ಫಲಫಲಿಭಾವ.

ಒಂದು ವೇಳೆ ವೇದ ಅಪ್ರಾಮಾಣ್ಯವನ್ನು ಹುಟ್ಟಿಸುವ ಮೂಲಕ ವೈಷಮ್ಯನೈರ್ಘೃಣ್ಯಗಳು ದೋಷವಾಗುವುದಾದಲ್ಲಿ, ಆಗ ಈಶ್ವರನಲ್ಲಿ ಇವು ಇಲ್ಲವಾದ್ದರಿಂದ ತನ್ನ ಅಧೀನವೇ ಆದ ಕರ್ಮಾದಿಗಳನ್ನು ಈಶ್ವರನು ಅಪೇಕ್ಷೆ ಪಡುತ್ತಾನೆಂದು ಹೇಳಿದಂತಾಗುತ್ತದೆ. ಆಗ ಕಾರಣವಿಲ್ಲದೇ ಸುಖದುಃಖಾದಿಗಳನ್ನು ಈಶ್ವರನು ನೀಡುತ್ತಾನೆ ಎಂಬ ಆಕ್ಷೇಪಕ್ಕೆ ಅವಕಾಶ ಬರುವುದಿಲ್ಲ. ತನ್ನಿಮಿತ್ತಕವಾಗಿ ವೈಷಮ್ಯನೈರ್ಘೃಣ್ಯ-ದೋಷಗಳ ಭಯವೂ ಕೂಡ ಬರುವುದಿಲ್ಲ. ಆದ್ದರಿಂದ ಈಶ್ವರನಲ್ಲಿ ಕರ್ತೃತ್ವವು ಯುಕ್ತವಾಗುತ್ತದೆ. ಇದು ಸಿದ್ಧಾಂತದ ಫಲಫಲಿಭಾವ.

**प्रकाशः** – परप्रयोजनरूपफलविषययुक्त्यविरोध इत्यस्य टीकायामस्फुटत्वादाह – **अयं भाव इति** ।। कर्मनिरपेक्ष उत सापेक्षः । आद्य आह – **एवं हीति** ।। अयं प्रधानसौत्रहेतुनिरस्यः । द्वितीयं शङ्कते – **नचेति** ।।

'ಪರಪ್ರಯೋಜನರೂಪಫಲವಿಷಯಯುಕ್ತ್ಯವಿರೋಧಃ' ಎಂಬ ಟೀಕಾವಾಕ್ಯವು ಸ್ಪಷ್ಟವಾಗಿ ಅರ್ಥವಾಗದ್ದರಿಂದ 'ಅಯಂ ಭಾವಃ' ಇತ್ಯಾದಿ ಗ್ರಂಥವಾಕ್ಯವು ಹೊರಟಿದೆ. ಪರಮಾತ್ಮನು ಕರ್ಮವನ್ನು ಅಪೇಕ್ಷೆ ಪಡದೇ ಫಲವನ್ನು ನೀಡುತ್ತಾನೋ, ಅಥವಾ ಕರ್ಮದ ಅಪೇಕ್ಷೆ ಹೊಂದಿ ಫಲವನ್ನು ನೀಡುತ್ತಾನೋ, ಪ್ರಥಮಪಕ್ಷದಲ್ಲಿ 'ಏವಂ ಹಿ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. 'ಅಯಂ' ಎಂಬುದಕ್ಕೆ ಸಾಪೇಕ್ಷತ್ವವೆಂಬ ಸೂತ್ರದಲ್ಲಿರುವ ಪ್ರಧಾನ ಹೇತುವಿನಿಂದ ನಿರಾಕರಣೆ ಮಾಡಲು ಯೋಗ್ಯವಾಗಿದೆ. ಎರಡನೆಯ ಪಕ್ಷವನ್ನು 'ನಚ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

**प्रकाशः** – द्वितीयसूत्र भाष्यटीकोक्तचोद्यपरिहारावनूद्य पूर्वपक्षी प्रत्याह – **ननु चेति** ।। ''उपपद्यते चाप्युपलभ्यते च'' इति सूत्रव्यावर्त्यमाह – **अनादिकर्मप्रवाहेति**।। कर्माद्यपेक्षाप्रयुक्तं वैषम्यादिकमीशेऽस्ति । तत्तु न दोषः ।

ಎರಡನೆಯ ಸೂತ್ರದ ಭಾಷ್ಯ ಹಾಗೂ ಟೀಕೆಗಳಲ್ಲಿ ಹೇಳಲ್ಪಟ್ಟ ಆಕ್ಷೇಪ ಹಾಗೂ ಪರಿಹಾರವನ್ನು ಅನುವಾದ ಮಾಡಿ, ಪೂರ್ವಪಕ್ಷಕಾರನು ಪ್ರತ್ಯುತ್ತರವನ್ನು 'ನನು ಚ' ಇತ್ಯಾದಿಯಾಗಿ ನೀಡುತ್ತಿದ್ದಾನೆ. 'ಉಪಪದ್ಯತೇ ಚಾಪ್ಯುಪಲಭ್ಯತೇ ಚ' ಎಂಬ ಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು 'ಅನಾದಿಕರ್ಮಪ್ರವಾಹತಿ' ಇತ್ಯಾದಿ ಗ್ರಂಥದಿಂದ ಹೇಳಿರುತ್ತಾರೆ. ಕರ್ಮ ಹಾಗೂ ಯೋಗ್ಯತೆಗಳ ಅಪೇಕ್ಷಾ

ಪ್ರಯುಕ್ತವಾದ ವೈಷಮ್ಯಾದಿಗಳು ಈಶ್ವರನಲ್ಲಿ ಇರುತ್ತವೆ. ಇದು ದೋಷವಾಗುವುದಿಲ್ಲ. ಕರ್ಮಾದಿಗಳನ್ನು ಅಪೇಕ್ಷೆ ಪಡದೇ ಫಲವನ್ನು ನೀಡುವುದಾದರೆ ಮಾತ್ರ ದೋಷವಾಗುತ್ತದೆ.

**प्रकाशः** – तदनपेक्षत्वप्रयुक्तं तु दोषः । तत्तु नास्त्येवेत्यस्य टीकायाम-स्फुटत्वाददोषत्वस्योपपादनसापेक्षत्वात् सुधायां ''न चेदं वेदाप्रामाण्याकारणम् । कर्मादिसापेक्षत्वाङ्गीकारात् । नापि जीवानामिवेश्वरस्य प्रत्यवायहेतुः । तदभावात्'' इत्युक्तमुपलक्षणं मत्वाऽनेकविकल्पपूर्वं टीकां विवृणोति ।। **अयं भाव इति** ।।

ಆದರೆ ತದನಪೇಕ್ಷತ್ವವು ಈಶ್ವರನಲ್ಲಿ ಇರುವುದೇ ಇಲ್ಲ - ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ್ದಾರೆ. ಇದರ ಅರ್ಥವು ಸ್ಪಷ್ಟವಾಗದ ಕಾರಣ ಅದೋಷತ್ವಕ್ಕೆ ಉಪಪಾದನೆಯ ಅಪೇಕ್ಷೆ ಇರುತ್ತದೆ. ಆದ್ದರಿಂದ ಪರಮಾತ್ಮನ ನಿರ್ದೋಷತ್ವವನ್ನು ಸುಧೆಯ ಆಧಾರದಿಂದ ಸಮರ್ಥನೆ ಮಾಡುತ್ತಿದ್ದಾರೆ - 'ನ ಚೇದಂ ವೇದಾಪ್ರಾಮಾಣ್ಯಾಕಾರಣಮ್ । ಕರ್ಮಾದಿಸಾಪೇಕ್ಷತ್ವಾಂಗೀಕಾರಾತ್ । ನಾಪಿ ಜೀವಾನಾಮಿವೇಶ್ವರಸ್ಯ ಪ್ರತ್ಯವಾಯಹೇತುಃ । ತದಭಾವಾತ್' ಇದು ವೇದಾಪ್ರಾಮಾಣ್ಯಕ್ಕೆ ಕಾರಣವಾಗಿರುವುದಿಲ್ಲ. ಏಕೆಂದರೆ ಕರ್ಮಾದಿಗಳನ್ನು ಅಪೇಕ್ಷೆ ಪಡುತ್ತಾನೆ ಎಂದು ಅಂಗೀಕರಿಸಲಾಗಿದೆ. ಜೀವರುಗಳಂತೆ ಈಶ್ವರನಿಗೆ ಇದು ಪ್ರತ್ಯವಾಯಕ್ಕೂ ಹೇತುವಲ್ಲ. ಏಕೆಂದರೆ ಆ ದೋಷವು ಈಶ್ವರನಲ್ಲಿ ಇರುವುದಿಲ್ಲ ಎಂದು ಸುಧೆಯ ಈ ಮಾತು ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ ಅನೇಕ ಬಗೆಯ ವಿಕಲ್ಪಗಳನ್ನು ಮಾಡಿ ಟೀಕಾವಾಕ್ಯವನ್ನು 'ಅಯಂ ಭಾವಃ' ಇತ್ಯಾದಿಯಾಗಿ ವಿವರಣೆ ಮಾಡುತ್ತಿದ್ದಾರೆ.

**प्रकाशः** – **द्वितीयेऽपि किमिति** ।। ''वैषम्यादेरदुःखरूपतया स्वतो दोषत्वाभावात्'' इति सुधोक्तेरिति भावः । समोऽहमिति गीतावाक्यं नवमाध्यायस्थम्।

ವೈಷಮ್ಯಾದಿಗಳು ದುಃಖರೂಪವಾಗಿರುವುದಿಲ್ಲ. ಆದ್ದರಿಂದ ಸ್ವತಃ ದೋಷವೂ ಕೂಡ ಆಗಿರುವುದಿಲ್ಲ ಎಂಬುದಾಗಿ 'ವೈಷಮ್ಯಾದೇರದುಃಖರೂಪತಯಾ ಸ್ವತೋ ದೋಷತ್ವಾಭಾವಾತ್' ಎಂಬ ಸುಧಾವಾಕ್ಯವು ಪ್ರತಿಪಾದನೆ ಮಾಡುತ್ತಿದೆ. ಇದನ್ನು ಇಲ್ಲಿ ವಿವಕ್ಷಿಸಬೇಕು. 'ಸಮೋಽಹಂ' ಎಂಬ ಗೀತಾವಾಕ್ಯವು ನವಮಾಧ್ಯಾಯದಲ್ಲಿ ಇದೆ.

**प्रकाशः** – अनादीति ।।

देशकालौ गुणांश्चैव भक्त्यादीनप्यपेक्ष्य तु ।
योग्यतां च तथा कर्म सम इत्यभिधीयते ।।

इति सप्तमस्कन्धतात्पर्योक्तेरिति भावः ।।

ದೇಶ, ಕಾಲ, ಗುಣ, ಭಕ್ತಿ, ಯೋಗ್ಯತಾ, ಕರ್ಮ ಇವುಗಳನ್ನು ಅಪೇಕ್ಷಿಸಿ, ಯಾರು ಫಲವನ್ನು ನೀಡುತ್ತಾನೋ, ಅವನನ್ನು 'ಸಮ' ಎಂದು ಕರೆಯಬೇಕು. ಹೀಗೆ ಸಪ್ತಮಸ್ಕಂಧದ ತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಹೇಳಿರುತ್ತಾರೆ.

**प्रकाशः – उक्तं हीति ।। षष्ठस्कन्धतात्पर्ये ।। प्रसिद्धिरिति ।।** ''समवर्तीपरेतराट्'' इत्यादिनिघण्टौ ''ऋषभः पापिनां शास्ता त्वं यमः समदर्शन'' इत्यादौ पुराणे चेत्यर्थः । तदेव व्यतिरेकेणोपपादयति ।। **नहीति ।।**

'ಉಕ್ತಂ ಹಿ' ಎಂದರೆ ಷಷ್ಠಸ್ಕಂಧದ ತಾತ್ಪರ್ಯದಲ್ಲಿ ಹೇಳಲಾಗಿದೆ ಎಂದರ್ಥ. 'ಪ್ರಸಿದ್ಧಿಃ' ಎಂಬುದಕ್ಕೆ ಹೀಗರ್ಥ - 'ಸಮವರ್ತೀಪರೇತರಾಟ್' ಪ್ರೇತರಾಜನಾದ ಯಮಧರ್ಮನು 'ಸಮವರ್ತಿ' ಎಂದು ಕರೆಸಿಕೊಳ್ಳುತ್ತಾನೆ ಇತ್ಯಾದಿ ನಿಘಂಟು ಈ ವಿಷಯದಲ್ಲಿ ಆಧಾರವಾಗಿದೆ. 'ಋಷಭಃ ಪಾಪಿನಾಂ ಶಾಸ್ತಾ ತ್ವಂ ಯಮಃ ಸಮದರ್ಶನಃ' ಪಾಪಿಗಳಿಗೆ ಶಾಸನೆ ಮಾಡುವ ಯಮಧರ್ಮರಾಜನಾದ ನೀನು 'ಸಮದರ್ಶ' ಎಂದು ಕರೆಸಿಕೊಳ್ಳುವಿ ಎಂಬುದಾಗಿ ಪುರಾಣದಲ್ಲೂ ಕೂಡ ಪ್ರಯೋಗವಿದೆ. ಇದೇ ವಿಷಯವನ್ನು ವ್ಯತಿರೇಕಮುಖವಾಗಿ 'ನಹಿ' ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

**प्रकाशः –**''शुनि चैव श्वपाके च पण्डितास्समदर्शिन'' इत्यादिगीतोक्तिः कथमित्यत आह – **शुनि चेति** ।। नन्वयोग्यस्य योग्यताकरणाद्दयालुत्व-गुणलाभस्स्यादित्यत आह – **स्वभावाननुसारीति** ।। स्वभावनियामकत्वस्येत्युक्तार्थे संमतिमाह – **उक्तं हीति** ।। सप्तमस्कन्धतात्पर्ये प्रथमेऽध्याय उक्तमित्यर्थः ।

'ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ' ಎಂಬ ಗೀತಾಮಾತಿನಲ್ಲಿ 'ಎಲ್ಲವನ್ನೂ ಕೂಡ ಸಮಾನವಾಗಿ ಕಾಣಬೇಕೆಂದು ಹೇಳಲಾಗಿದೆ, ಇದರ ಅರ್ಥವೇನು? ಎಂಬ ಪ್ರಶ್ನೆಗೆ 'ಶುನಿ ಚ' ಎಂಬ ಗ್ರಂಥದಿಂದ ವಿವರಿಸಿದ್ದಾರೆ. (ನಾಯಿ, ಶ್ವಪಾಕ ಇವರನ್ನೆಲ್ಲಾ ಸಮಾನವಾಗಿ ಕಾಣಬೇಕು ಎಂದಭಿಪ್ರಾಯವಲ್ಲ. ಈ ಎಲ್ಲ ಅಧಿಷ್ಠಾನದಲ್ಲಿ ನೆಲಸಿರುವ ಭಗವತ್ತತ್ವ ಸಮಾನವಾಗಿದೆ ಎಂದು ತಿಳಿಯಬೇಕು.)

ಅಯೋಗ್ಯನಿಗೆ ಯೋಗ್ಯತೆಯನ್ನು ನೀಡುವುದರಿಂದ ದಯಾಳುತ್ವ ಎಂಬ ಗುಣಲಾಭವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಸ್ವಭಾವಾನನುಸಾರಿ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ. 'ಸ್ವಭಾವನಿಯಾಮಕತ್ವಸ್ಯ' ಎಂಬ ಅರ್ಥದಲ್ಲಿ 'ಉಕ್ತಂ ಹಿ' ಎಂಬ ವಾಕ್ಯದಿಂದ ಸಂವಾದವನ್ನು ತಿಳಿಸಿದ್ದಾರೆ. ಸಪ್ತಮಸ್ಕಂಧದ ತಾತ್ಪರ್ಯದ ಪ್ರಥಮಾಧ್ಯಾಯದಲ್ಲಿ ಹೇಳಲಾಗಿದೆ ಎಂದಭಿಪ್ರಾಯ.

**प्रकाशः –** ''विपर्यये'' इत्यनन्तरं ''अतस्तादृशवैषम्यं ब्रह्मसूत्रे निराकृतम्'' इत्यर्धस्येहानुपयोगादनुदाहृत्य ''शुभाशुभ'' इति तदुत्तरार्धमेवोदाहृतम् । ''गुण एव स'' इत्यनन्तरं ''अतस्तदिष्टं कृष्णस्य ब्रह्मसूत्रकृतो विभोः'' इति शेषो बोध्यः। ''न विष्णोः'' इति तु तत्रैवोक्तस्कान्दस्मृतिः ।।

'ವಿಪರ್ಯಯೇ' ಎಂಬುದರ ಅನಂತರ 'ಅತಃ ತಾದೃಶವೈಷಮ್ಯಂ ಬ್ರಹ್ಮಸೂತ್ರೇ ನಿರಾಕೃತಮ್' ಎಂಬ ಅರ್ಧಶ್ಲೋಕವನ್ನು ಪ್ರಕೃತ ಗ್ರಂಥಕಾರರು ಬಿಟ್ಟಿದ್ದಾರೆ. ಏಕೆಂದರೆ ಅದು ಪ್ರಸಂಗಕ್ಕೆ ಉಪಯುಕ್ತವಾದದ್ದಲ್ಲ.

ಅದರ ಮುಂದಿನ ವಾಕ್ಯವನ್ನು 'ಶುಭಾಶುಭ' ಎಂಬುದರಿಂದ ಉಲ್ಲೇಖಿಸಿದ್ದಾರೆ. 'ಗುಣ ಏವ ಸಃ' ಎಂಬುದರ ಅನಂತರ 'ಅತಃ ತದಿಷ್ಟಂ ಕೃಷ್ಣಸ್ಯ ಬ್ರಹ್ಮಸೂತ್ರಕೃತೋ ವಿಭೋಃ' ಎಂಬ ಮತ್ತೊಂದು ವಾಕ್ಯವನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ನ ವಿಷ್ಣೋಃ' ಎಂಬುದು ಅದೇ ತಾತ್ಪರ್ಯದಲ್ಲಿ ಉಲ್ಲೇಖಿಸಿದ ಸ್ಕಾಂದವಚನವಾಗಿದೆ.

ವಿವರಣೆ - ಭಾಗವತತಾತ್ಪರ್ಯದ ಏಳನೆಯ ಸ್ಕಂದದ ಪ್ರಥಮಾಧ್ಯಾಯದಲ್ಲಿ ಮೊದಲು ಸ್ಕಾಂದ ಪುರಾಣದ ವಚನವನ್ನು ಉಲ್ಲೇಖ ಮಾಡಿ, ಅನಂತರ 'ತಂತ್ರನಿರ್ಣಯ' ಎಂಬ ಗ್ರಂಥವನ್ನು ಶ್ರೀಮದಾಚಾರ್ಯರು ಉಲ್ಲೇಖಿಸಿದ್ದಾರೆ. ಅದೇ ಶ್ಲೋಕವನ್ನು ಇಲ್ಲಿ ಪ್ರಕೃತಕ್ಕೆ ಉಪಯೋಗವಾಗುವಂತೆ ಗ್ರಂಥಕಾರರು ಹಿಂದೆ-ಮುಂದೆ ಮಾಡಿ ಹೇಳಿರುತ್ತಾರೆ. ಭಾಗವತ ತಾತ್ಪರ್ಯದಲ್ಲಿ ಇರುವ ಶ್ಲೋಕಗಳ ಆನುಪೂರ್ವಿ ಹೀಗಿದೆ -

ನ ವಿಷ್ಣೋರ್ವಿಷಮತ್ವಂ ತು ಯೋಗ್ಯತಾಪೇಕ್ಷಯಾ ಕ್ವಚಿತ್ ।
ಯೋಗ್ಯತಾಯಾಸ್ತ್ವನಿಯತ್ಯಾ ವಿಷಮತ್ವಂ ಭವೇತವಾ ॥ ಇತಿ ಸ್ಕಾಂದೇ

ವಿಷಮತ್ವಂ ತು ದೋಷಾಯ ಶುಭಾಶುಭವಿಪರ್ಯಯೇ ।
ಅತ ತಾದೃಶವೈಷಮ್ಯಂ ಬ್ರಹ್ಮಸೂತ್ರೇ ನಿರಾಕೃತಮ್ ।
ಶುಭಾಶುಭನಿಯಂತೃತ್ವಂ ನ ದೋಷೋ ಗುಣ ಏವ ಸಃ ।
ಅತಃ ತದಿಷ್ಟಂ ಕೃಷ್ಣಸ್ಯ ಬ್ರಹ್ಮಸೂತ್ರಕೃತೋ ವಿಭೋಃ । ಇತಿ ತಂತ್ರನಿರ್ಣಯೇ

ಎಂದು

**ಪ್ರಕಾಶः – वेदाप्रामाण्येति** ।। कर्मानपेक्षत्वनिमित्तमित्यर्थः । अन्यत्तु स्वाधीन तत्सापेक्षत्वनिमित्तमित्यर्थः । उक्तार्थं सूत्रारूढं करोति ।। **सूत्रेऽपीति** ।। न केवलमनुव्याख्यान इत्यपेरर्थः ।

ಕರ್ಮಾನಪೇಕ್ಷತ್ವನಿಮಿತ್ತಕವಾದದ್ದು ವೇದಾಪ್ರಾಮಾಣ್ಯಕ್ಕೆ ಕಾರಣವಾಗಿದೆ ಎಂಬ ಅಭಿಪ್ರಾಯವನ್ನು 'ವೇದಾಪಾಮ್ರಾಣ್ಯ' ಎಂಬ ವಾಕ್ಯದಲ್ಲಿ ವಿವಕ್ಷಿಸಬೇಕು. ತನ್ನ ಅಧೀನವೇ ಆದ ಕರ್ಮ ಮತ್ತು ಯೋಗ್ಯತೆಗಳನ್ನು ಅಪೇಕ್ಷಿಸುವುದು ವೇದಾಪ್ರಾಮಾಣ್ಯಕ್ಕೆ ನಿಮಿತ್ತವಾಗಿದೆ ಇದು ದೋಷವೇ ಅಲ್ಲ ಎಂಬ ಅಭಿಪ್ರಾಯವನ್ನು ಇಲ್ಲಿ ತಿಳಿಯಬೇಕು.

ತಾವು ಇಲ್ಲಿಯ ತನಕ ಹೇಳಿದ ಪ್ರಮೇಯವನ್ನು ಸೂತ್ರಾರೂಢ ಮಾಡಲು 'ಸೂತ್ರೇऽಪಿ' ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ. ಕೇವಲ ಅನುವ್ಯಾಖ್ಯಾನದಲ್ಲಿ ಮಾತ್ರವಲ್ಲ. ಸೂತ್ರದಲ್ಲೂ ಕೂಡ ಈ ವಿಷಯ ಉಕ್ತವಾಗಿದೆ ಎಂಬುದು 'ಅಪಿ' ಪದದ ಧ್ವನಿ.

**प्रकाशः – आद्येन सापेक्षत्वादित्यंशेन** । द्वितीयसूत्रे उत्पन्नशङ्कामिति योज्यम् ।। **तर्हीति** ।। अनादिकर्मसापेक्षत्व इत्यर्थः ।। **निरस्येति** ।। ''स्वाधीनसाधनादानं तु'' इत्युक्तदिशेति भावः ।।

'ಆದ್ಯೇನ' ಎಂದರೆ 'ಸಾಪೇಕ್ಷತ್ವಾತ್' ಎಂಬ ಅಂಶದಿಂದ ಎಂದರ್ಥ. ಎರಡನೆಯ ಸೂತ್ರದಲ್ಲಿ 'ಉತ್ಪನ್ನ ಶಂಕಾಮ್' ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು. 'ತರ್ಹಿ' ಎಂದರೆ ಅನಾದಿಕರ್ಮವನ್ನು ಅಪೇಕ್ಷೆ ಪಟ್ಟರೆ ಎಂದರ್ಥ. 'ನಿರಸ್ಯ' ಎಂದರೆ 'ಸ್ವಾಧೀನಸಾಧನಾದಾನಂ ತು' ಇತ್ಯಾದಿಯಾಗಿ ನಿರಾಕರಣೆ ಮಾಡಿ ಎಂದಭಿಪ್ರಾಯ.

**प्रकाशः – स्वीकृत इति ।।** ''उपलभ्यते चेश्वरस्यैतादृशं वैषम्यं निर्घृणत्वं च प्रमाणैः'' इति सुधोक्तेः । टीकायामपि व्यक्तमुक्तेश्चेति भावः ।

'ಉಪಲಭ್ಯತೇ ಚೇಶ್ವರಸ್ಯೈತಾದೃಶಂ ವೈಷಮ್ಯಂ ನಿರ್ಘೃಣತ್ವಂ ಚ ಪ್ರಮಾಣೈಃ' ಪ್ರಮಾಣಗಳಿಂದ ವೇದಪ್ರಾಮಾಣ್ಯಕ್ಕೆ ಕಾರಣವಾದ ವೈಷಮ್ಯನೈರ್ಘೃಣ್ಯಗಳನ್ನು ಈಶ್ವರನಲ್ಲಿ ಅಂಗೀಕರಿಸಲಾಗುತ್ತದೆ ಎಂದು ಸುಧಾದಲ್ಲಿ ಹೇಳಿದ್ದಾರೆ, ಅದನ್ನು ಇಲ್ಲಿ ವಿವಕ್ಷಿಸಬೇಕು. ಟೀಕೆಯಲ್ಲೂ ಕೂಡ ಈ ವಿಷಯವನ್ನು ಸ್ಪಷ್ಟವಾಗಿ ತಿಳಿಸಿರುತ್ತಾರೆ.

## ಅದ್ವೈತ ಹಾಗೂ ವಿಶಿಷ್ಟಾದ್ವೈತದ ನಿರಾಕರಣೆ

## तात्पर्यचन्द्रिका

**यदुक्तमुभाभ्यां ईश्वरः सस्ये पर्जन्य इव साधारणकारणम् । कर्माणि तु बीजानीवासाधारणकारणानि । बीजशक्तिवैचित्र्याद्धि व्रीहियवादिसस्यवैचित्र्यम् । तस्मान्नेश्वरस्य वैषम्यादीत्याद्यसूत्रार्थ इति ।**

ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ವೈಷಮ್ಯನೈರ್ಘೃಣ್ಯಾಧಿಕರಣವನ್ನು ಹೀಗೆ ರಚನೆ ಮಾಡಿದ್ದಾರೆ - ಯಾವುದೇ ಸಸ್ಯವು ಹುಟ್ಟುವುದಕ್ಕೆ ಮಳೆಯು ಸಾಧಾರಣಕಾರಣವಾಗಿದೆ. ಅದರಂತೆ ಸಕಲ ಕರ್ಮಗಳಿಗೂ ಈಶ್ವರನೇ ಸಾಧಾರಣಕಾರಣನಾಗಿದ್ದಾನೆ. ಸಸ್ಯಕ್ಕೆ ಬೀಜವು ಅಸಾಧಾರಣ-ಕಾರಣವಾಗಿದೆ. ಅದರಂತೆ ಆಯಾ ಜೀವರ ಕರ್ಮಗಳು ಅಸಾಧಾರಣಕಾರಣವಾಗಿವೆ. ಬೀಜಗಳಲ್ಲಿರುವ ಶಕ್ತಿಯ ವೈಚಿತ್ರ್ಯದಿಂದ ಭತ್ತ, ಗೋಧಿ ಮೊದಲಾದ ಸಸ್ಯಗಳಲ್ಲಿ ವೈಚಿತ್ರ್ಯವು ಕಾಣಿಸುತ್ತಿವೆ. ಆದ್ದರಿಂದ ಈಶ್ವರನಿಗೆ ವೈಷ್ಯನೈರ್ಘೃಣ್ಯದೋಷವು ಬರುವುದಿಲ್ಲ. ಇದು ಸೂತ್ರದ ಅರ್ಥ ಎಂದು.

ವಿವರಣೆ - ಈಶ್ವರನು ಸಾಧಾರಣಕಾರಣನು ಮಾತ್ರ. ಕರ್ಮಗಳೇ ಅಸಾಧಾರಣ ಕಾರಣಗಳು. ಸಾಧಾರಣಕಾರಣನಾದ ಈಶ್ವರನು ಏಕೆ ಕೆಲವರಿಗೆ ಕೆಟ್ಟದ್ದನ್ನೇ ಮಾಡುತ್ತಾನೆ. ಕೆಲವರಿಗೆ ಒಳ್ಳೆಯದನ್ನೇ ಏಕೆ ಮಾಡುತ್ತಾನೆ ಎಂದು ಪ್ರಶ್ನಿಸುವಂತಿಲ್ಲ. ಆಯಾ ಜೀವರ ಕರ್ಮವೇ ಅದಕ್ಕೆ ಕಾರಣವಾಗಿರುತ್ತದೆ.

**तन्न । असाधारणकारणस्यापि कर्मणः ''एष ह्येव साधुकर्म कारयति'' इत्यादि श्रुत्या ''पुण्यपापादिकं विष्णुः कारयेत्'' इत्यादिस्मृत्या चेश्वरकारितत्वेन वैषम्याद्यनिस्तारात् ।**

ಇವರ ಈ ವ್ಯಾಖ್ಯಾನ ಅಯುಕ್ತವಾಗಿದೆ. ಹೀಗೆ ಹೇಳಿದಾಗಲೂ ಕೂಡ ವೈಷಮ್ಯನೈರ್ಘೃಣ್ಯದೋಷವು ತಪ್ಪಿದ್ದಲ್ಲ. ಏಕೆಂದರೆ ಕರ್ಮವನ್ನು ಇವರು ಅಸಾಧಾರಣ ಕಾರಣವೆಂದು ಹೇಳುತ್ತಾರೆ. ಆದರೆ ಈ ಕರ್ಮವು ಪರಮಾತ್ಮನಿಂದಲೇ ಮಾಡಿಸಲ್ಪಡುತ್ತದೆಂದು 'ಏಷ ಹ್ಯೇವ ಸಾಧುಕರ್ಮ ಕಾರಯತಿ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. 'ಪುಣ್ಯಪಾಪಾದಿಕಂ ವಿಷ್ಣುಃ ಕಾರಯೇತ್' ಪುಣ್ಯಪಾಪಾದಿಗಳನ್ನು ವಿಷ್ಣುವೇ ಮಾಡಿಸುತ್ತಾನೆ ಎಂಬ ಶ್ರುತಿ ಇದನ್ನೇ ಸ್ಪಷ್ಟಪಡಿಸುತ್ತಿದೆ. ಆದ್ದರಿಂದ ಈಶ್ವರನು ಸಾಧಾರಣಕಾರಣನಾಗಿರುವನು. ಕರ್ಮಾದಿಗಳು ಅಸಾಧಾರಣಕಾರಣವಾಗಿದೆ ಎಂಬ ವಿಷಯವು ಅಯುಕ್ತವಾಗಿದೆ.

**न चाबाध उपचरितार्थत्वं बहुश्रुत्यादेर्युक्तम् । उक्तं हि ''परात्तु तच्छ्रुतेः'' इत्यत्र भामत्यामपि ''एष ह्येव साधुकर्म कारयतीत्येवमादयस्तावच्छ्रुतयः सर्वव्यापारेषु जन्तूनामीश्वरपरतन्त्रतामाहुः । तदसति बाधकेन प्रशंसामात्रपरतया व्याख्यातुमुचितम्'' इति ।**

'ಏಷ ಹ್ಯೇವ' ಇತ್ಯಾದಿ ಶ್ರುತಿಗಳಿಗೆ ಗೌಣಾರ್ಥವನ್ನು ಮಾಡಬಾರದು. ಬಾಧವಿದ್ದರೆ ಮಾತ್ರ ಹಾಗೇ ಗೌಣಾರ್ಥವನ್ನು ಮಾಡಬೇಕು. ಯಾವುದೇ ಬಾಧವಿಲ್ಲದಿದ್ದಾಗ ಔಪಚಾರಿಕವಾದ ಅರ್ಥವನ್ನು ಮಾಡುವುದು ತಪ್ಪಾಗುತ್ತದೆ. ಮತ್ತು ಭಾಮತಿಯಲ್ಲೂ ಕೂಡ 'ಪರಾತ್ತು ತತ್ ಶ್ರುತೇಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಇದನ್ನೇ ಹೇಳಲಾಗಿದೆ - 'ಏಷ ಹ್ಯೇವ ಸಾಧುಕರ್ಮ ಕಾರಯತಿ ಇತ್ಯೇವಮಾದಯಃ ತಾವತ್ ಶ್ರುತಯಃ ಸರ್ವವ್ಯಾಪಾರೇಷು ಜಂತೂನಾಮೀಶ್ವರಪರತಂತ್ರತಾಮಾಹುಃ। ತದಸತಿ ಬಾಧಕೇನ ಪ್ರಶಂಸಾಮಾತ್ರಪರತಯಾ ವ್ಯಾಖ್ಯಾತುಮುಚಿತಮ್' 'ಏಷ ಹ್ಯೇವ ಸಾಧುಕರ್ಮ ಕಾರಯತಿ' ಇವೇ ಮೊದಲಾದ ಶ್ರುತಿಗಳು ಸಕಲ ವ್ಯಾಪಾರಗಳಲ್ಲಿ ಪ್ರತಿಯೊಬ್ಬರೂ ಕೂಡ ಈಶ್ವರನ ಅಧೀನನಾಗಿರುತ್ತಾರೆ ಎಂದು ಹೇಳುತ್ತಿವೆ. ಇಂಥ ಶ್ರುತಿಗಳಿಗೆ ಬಾಧಕವಿಲ್ಲದಿದ್ದಾಗ ಕೇವಲ ಪ್ರಶಂಸಾಮಾತ್ರಪರವೆಂದು ವ್ಯಾಖ್ಯಾನ ಮಾಡುವುದು ತಪ್ಪಾಗುತ್ತದೆ ಎಂದು.

**एतेन यत्कैश्चिदुक्तं ''जीव ईश्वरदत्तया साधारण्या स्वातन्त्र्यशक्त्या स्वयमेव शुभाशुभयोः प्रवर्तते । ईशस्त्वशुभ उपेक्षते । शुभे त्वनुमन्यत इति न वैषम्यादि ।**

**तदुक्तं –**

**आदावीश्वरदत्तयैव पुरुषः स्वातन्त्र्यशक्त्या स्वयं**
**तत्तज्ज्ञानचिकीर्षणप्रयतनान्युत्पादयन् वर्तते ।**

**तत्रोपेक्ष्य ततोऽनुमन्य विदधत्तन्निग्रहानुग्रहौ**
**तत्तत्कर्मफलं प्रयच्छति ततः सर्वस्य पुंसो हरिः ।।**

**इतीति ।**

ಹೀಗೆ ಹೇಳಿದ್ದರಿಂದ ರಾಮಾನುಜರು ಹೇಳುವ ಮತ್ತೊಂದು ಪ್ರಮೇಯವನ್ನು ನಿರಾಕರಣೆ ಮಾಡಿದಂತಾಯಿತು. ಅವರು ಹೀಗೆ ಹೇಳುತ್ತಾರೆ - ಜೀವನು ಈಶ್ವರನಿಂದ ಸಾಧಾರಣವಾಗಿ ಸ್ವಾತಂತ್ರ್ಯಶಕ್ತಿಯನ್ನು ಹೊಂದಿರುತ್ತಾನೆ. ಇದರಿಂದ ಸ್ವತಃ ತಾನೇ ಶುಭಕರ್ಮ ಹಾಗೂ ಅಶುಭಕರ್ಮಗಳಲ್ಲಿ ಪ್ರವೃತ್ತಿ ಮಾಡುತ್ತಾನೆ. ಹೀಗೆ ಅಶುಭಕರ್ಮದಲ್ಲಿ ಪ್ರವೃತ್ತಿ ಮಾಡಿರುವ ಜೀವನನ್ನು ಈಶ್ವರನು ಉಪೇಕ್ಷೆ ಮಾಡುತ್ತಾನೆ. ಶುಭಕರ್ಮದಲ್ಲಿ ಪ್ರವೃತ್ತಿ ಮಾಡಿರುವ ಜೀವನಿಗೆ ಅನುಮತಿಯನ್ನು ನೀಡುತ್ತಾನೆ ಆದ್ದರಿಂದ ಅವನು ಏಕೆ ಕೆಟ್ಟಕೆಲಸವನ್ನು ಮಾಡಿ ದುಃಖವನ್ನು ನೀಡುತ್ತಾನೆ ಎಂಬ ವೈಷಮ್ಯದೋಷಕ್ಕೆ ಅವಕಾಶವಿಲ್ಲ. ಇದನ್ನೇ ಹೀಗೆ ಹೇಳಲಾಗಿದೆ -

ಆದಾವೀಶ್ವರದತ್ತಯೈವ ಪುರುಷಃ ಸ್ವಾತಂತ್ರ್ಯಶಕ್ತ್ಯಾ ಸ್ವಯಂ
ತತ್ ಜ್ಞಾನಚಿಕೀರ್ಷಣಪ್ರಯತನಾನ್ಯುತ್ಪಾದಯನ್ ವರ್ತತೇ ।
ತತ್ರೋಪೇಕ್ಷ್ಯ ತತೋಽನುಮನ್ಯ ವಿದಧತ್ತನ್ನಿಗ್ರಹಾನುಗ್ರಹೌ
ತತ್ ತತ್ಕರ್ಮಫಲಂ ಪ್ರಯಚ್ಛತಿ ತತಃ ಸರ್ವಸ್ಯ ಪುಂಸೋ ಹರಿಃ ।।

ಮೊದಲು ಈಶ್ವರದತ್ತವಾದ ಸ್ವಾತಂತ್ರ್ಯಶಕ್ತಿಯಿಂದಲೇ ಪುರುಷನು ಸ್ವತಃ ಪ್ರಯತ್ನವನ್ನು ಮಾಡುತ್ತಾನೆ. ಜ್ಞಾನ ಮಾಡಬೇಕೆಂಬ ಇಚ್ಛೆ, ಪ್ರಯತ್ನ ಇವುಗಳನ್ನು ಹೊಂದುತ್ತಾನೆ. ಜೀವನ ಈ ಎಲ್ಲಾ ಕಾರ್ಯಗಳಲ್ಲಿ ಅಶುಭಕರ್ಮಗಳನ್ನು ಪರಮಾತ್ಮನು ಉಪೇಕ್ಷೆ ಮಾಡಿ, ಶುಭಕಾರ್ಯಗಳಲ್ಲಿ ಅನುಮತಿಯನ್ನು ನೀಡಿ, ಅನುಗ್ರಹವನ್ನು ಮಾಡುತ್ತಾನೆ. ಮತ್ತು ಕೆಟ್ಟ ಕೆಲಸಕ್ಕೆ ದುಃಖವನ್ನು ಒಳ್ಳೇ ಕೆಲಸಕ್ಕೆ ಸುಖವನ್ನು ಪ್ರತಿಯೊಬ್ಬರಿಗೂ ನೀಡುತ್ತಾನೆ ಎಂದು.

**तन्न । शुभाशुभप्रवृत्तिहेतुस्वातन्त्र्यदानप्रयुक्तवैषम्याद्यनिस्तारात् । ''य आत्मानमन्तरो यमयति' 'एष ह्येव साधुकर्म कारयति' 'न ऋते त्वत्क्रियते किं चनारे'' इत्यादिश्रुत्या**

**'यथा दारुमयीं योषां नरः स्थिरसमाहितः' 'भ्रामयन् सर्वभूतानि यन्त्रारूढानि मायया' ।।**

**इत्यादिस्मृत्या च विरोधाच्च ।**

ರಾಮಾನುಜರ ಈ ಅಭಿಪ್ರಾಯವು ಅಯುಕ್ತವಾಗಿದೆ - ಏಕೆಂದರೆ ಕೆಲವರು ಮಾಡುವ ಶುಭಪ್ರವೃತ್ತಿಗೂ ಈಶ್ವರನು ನೀಡಿದ ಸ್ವಾತಂತ್ರ್ಯವೇ ಕಾರಣವಾಗಿದೆ. ಕೆಲವರು ಮಾಡಿದ ಅಶುಭಪ್ರವೃತ್ತಿಗೂ ಈಶ್ವರನಲ್ಲಿರುವ ಸ್ವಾತಂತ್ರ್ಯವೇ ಕಾರಣವಾಗಿದೆ. ಆದ್ದರಿಂದ ಯಾವ ಶುಭಾಶುಭಕರ್ಮಗಳಿಗೆ ಕಾರಣವಾದ ಸ್ವಾತಂತ್ರ್ಯವಿದೆಯೋ, ಅದನ್ನು ನೀಡಿದವನು ಪರಮಾತ್ಮನೇ ಆಗಿರುವುದರಿಂದ ಅವನಿಗೆ ವೈಷಮ್ಯಾದಿ ದೋಷವು ತಪ್ಪಿದ್ದಲ್ಲ. ಮತ್ತು 'ಯ ಆತ್ಮಾನಮಂತರೋ ಯಮಯತಿ' 'ಯಾವ ಪರಮಾತ್ಮನು ಅಂತರ್ಯಾಮಿಯಾಗಿದ್ದು ಪ್ರೇರಣೆ ಮಾಡುತ್ತಾನೋ', 'ಏಷ ಹ್ಯೇಷ ಸಾಧುಕರ್ಮ ಕಾರಯತಿ' 'ಈ ಪರಮಾತ್ಮನೇ ಶುಭಕರ್ಮಗಳನ್ನು ಮಾಡಿಸುತ್ತಾನೆ'. 'ನ ಋತೇ ತ್ವತ್‌ಕ್ರಿಯತೇ ಕಿಂಚನಾರೇ' 'ನಿನ್ನನ್ನು ಬಿಟ್ಟು ಏನನ್ನೂ ಮಾಡಲಾರೆ'. ಇವೇ ಮೊದಲಾದ ಶ್ರುತಿಗಳು ಸಕಲವನ್ನು ಪರಮಾತ್ಮನೇ ಮಾಡಿಸುತ್ತಾನೆ ಎನ್ನುತ್ತಿವೆ.

'ಯಥಾ ದಾರುಮಯೀಂ ಯೋಷಾಂ ನರಃ ಸ್ಥಿರಸಮಾಹಿತಃ ।' ಕಟ್ಟಿಗೆ ಬೊಂಬೆಯೊಳಗೆ ಮನುಷ್ಯನು ಕುಳಿತು ಹೇಗೆ ಚಲನ-ವಲನಗಳನ್ನು ತೋರಿಸುತ್ತಾನೋ, ಅದರಂತೆ ನೀನೇ ನನ್ನೊಳಗೆ ಇದ್ದು ಎಲ್ಲವನ್ನೂ ಮಾಡುವಿ. 'ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥' ದೇಹವೆಂಬ ಯಂತ್ರದಲ್ಲಿರುವ ಸಕಲಭೂತಗಳನ್ನು ತನ್ನ ಮಾಯಾಶಕ್ತಿಯಿಂದ ಪರಮಾತ್ಮನು ನಿಯಂತ್ರಣದಲ್ಲಿ ಇಟ್ಟುಕೊಂಡು ಎಲ್ಲರ ಹೃದಯದಲ್ಲಿ ನೆಲಸಿದ್ದಾನೆ ಎಂಬುದಾಗಿ ಭಗವದ್ಗೀತೆ-ಯಲ್ಲಿಯೂ ಕೂಡ ಹೇಳಲಾಗಿದೆ. ಈ ಸ್ಮೃತಿಗಳ ವಿರೋಧವೂ ಕೂಡ ಬರುತ್ತವೆ.

**ईशप्रेरणं विना प्रवृत्तौ च कथं जीवस्येश्वरशरीरत्वम् । कथं च जीवस्य स्वाहिते स्वयमेव प्रवृत्तिः । हितभ्रान्त्या चेद्भ्रान्तेरपीश्वरकर्तृकत्वेन वैषम्यादि दुर्वारम् । किञ्चेश्वरस्य शक्तस्याप्युपेक्षायां निर्घृणत्वादि दुर्वारम् ।**

ಪರಮಾತ್ಮನ ಪ್ರೇರಣೆಯಿಲ್ಲದೇ ಜೀವನು ಪ್ರವೃತ್ತಿಯನ್ನು ಮಾಡುತ್ತಾನೆನ್ನುವುದಾದರೆ ಜೀವನು ಪರಮಾತ್ಮನ ಶರೀರನಾಗುತ್ತಾನೆ ಎಂದು ಹೇಳಲು ಹೇಗೆ ಸಾಧ್ಯವಾಗುತ್ತದೆ ? ಮತ್ತು ತನಗೆ ಅಹಿತವಾದ ಕೆಲಸಗಳಲ್ಲಿ ಜೀವನು ಸ್ವತಃ ತಾನೇ ಹೇಗೆ ಪ್ರವೃತ್ತಿ ಮಾಡಲು ಸಾಧ್ಯ?

ಹಿತವೆಂಬ ಭ್ರಾಂತಿಯಿಂದ ಅಹಿತವಾದ್ದರಲ್ಲಿ ಪ್ರವೃತ್ತಿ ಮಾಡುತ್ತಾನೆಂದು ಹೇಳಿದರೆ, ಜೀವನಿಗಿರುವ ಈ ಭ್ರಾಂತಿಯೂ ಕೂಡ ಈಶ್ವರಕರ್ತೃಕ ಎಂದಂತಾಯಿತು. ಆಗ ವೈಷಮ್ಯಾದಿದೋಷವು ಅಪರಿಹಾರ್ಯವಾಯಿತು.

**अशक्तत्वे तु ''आत्मनि चैवं विचित्राश्च हि सर्वोपेता च तद्दर्शनात्'' इत्यादिसूत्रैः ''परास्य शक्तिः'' इत्यादिश्रुतिभिश्च विरोधः ।**

ಮತ್ತು ಸಮರ್ಥನಾಗಿದ್ದರೂ ಕೂಡ ಈಶ್ವರನು ಸತ್ಕಾರ್ಯವನ್ನು ಮಾಡಿಸಲಾರ ಎನ್ನುವುದಾದರೆ, ವೈರ್ಘ್ಯಣ್ಯದೋಷವು ತಪ್ಪಿದ್ದಲ್ಲ. ಆ ಕೆಲಸಗಳನ್ನು ಮಾಡಿಸಲು ಅವನು ಸಮರ್ಥನಲ್ಲವೆಂದು ಹೇಳಿದರೆ 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' 'ಸರ್ವೋಪೇತಾ ಚ ತದ್ದರ್ಶನಾತ್' ಇವೇ ಮೊದಲಾದ ಸೂತ್ರಗಳಿಂದ ವಿರೋಧ ಬರುತ್ತದೆ 'ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ' ಇತ್ಯಾದಿ ಶ್ರುತಿಗಳಿಂದಲೂ ವಿರೋಧವು ಪ್ರಾಪ್ತವಾಗುತ್ತದೆ.

**एतेनैवेश्वरेच्छा अस्त्वित्येवं सामान्याकारा । नतु विशेषाकारा ततो न वैषम्यादीति तार्किककल्पनाप्यपास्ता ।**

ಹೀಗೆ ಹೇಳಿದ್ದರಿಂದ ಸಾತ್ವಿಕರ್ಮಕವನ್ನು ನಿರಾಕರಣೆ ಮಾಡಿದಂತಾಯಿತು. ಈಶ್ವರನಿಗೆ ಅಸ್ತು ಎಂಬುದು ಸಾಮಾನ್ಯಕಾರವಾದ ಇಚ್ಛೆಯಾಗಿದೆ. ಇವನು ಈ ಕೆಲಸವನ್ನು ಮಾಡಲಿ ಎಂಬ ವಿಶೇಷಾಕಾರದ ಇಚ್ಛೆಯು ಇರುವುದಿಲ್ಲ. ಆದ್ದರಿಂದ ವೈಷಮ್ಯಾದಿದೋಷಗಳು ಈಶ್ವರನಿಗೆ ಬರುವುದಿಲ್ಲ ಎಂದು ತಾರ್ಕಿಕರು ಕಲ್ಪನೆ ಮಾಡುತ್ತಾರೆ. ಇದನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಬ್ರಹ್ಮಸೂತ್ರಗಳಿಗೆ ತಾರ್ಕಿಕರು ವ್ಯಾಖ್ಯಾನವನ್ನು ಮಾಡಿರುವುದಿಲ್ಲ. ಆದರೆ ಬೇರೆ ಗ್ರಂಥಗಳಲ್ಲಿ ಅವರು ಹೇಳಿರುವ ವಿಷಯವನ್ನು ಪ್ರಕೃತ ಖಂಡನೆ ಮಾಡುತ್ತಿದ್ದಾರೆ.

**यस्य कस्यापि यत्किञ्चिदस्त्वित्येवमाकारत्वे हि कदाचिदीश्वरस्य दुःखं सुकृतादिमतो नरकादिकं च स्यात् ।**

ಯಾರಿಗೆ ಬೇಕಾದರೂ, ಏನೂ ಬೇಕಾದರೂ ಆಗಲಿ ಎಂಬ ಸಾಮಾನ್ಯಾಕಾರದ ಯುಕ್ತಿಯಿಂದಲೇ ಎಲ್ಲವೂ ನಡೆಯುತ್ತದೆ ಎಂದು ಹೇಳುವುದಾದರೆ ಈಶ್ವರನಿಗೂ ಕೂಡ ದುಃಖವು ಬರಬೇಕಾಗುತ್ತದೆ. ಒಳ್ಳೆಯ ಕೆಲಸವನ್ನು ಮಾಡಿದವನಿಗೂ ಕೂಡ ನರಕಾದಿಗಳು ಬರಬೇಕಾಗುತ್ತದೆ. ('ಯಸ್ಯ ಕಸ್ಯಾಪಿ' ಎಂದು ಹೇಳಿದರೆ ಈಶ್ವರನನ್ನು ವ್ಯಾವೃತ್ತಿ ಮಾಡದ ಕಾರಣ, ಈಶ್ವರನಿಗೂ ಕೂಡ ದುಃಖವು ಬರಬೇಕಾಗುತ್ತದೆ. 'ಯತ್‌ಕಿಂಚಿತ್' ಏನೂ ಬೇಕಾದರೂ ಆಗಲಿ ಎಂದು ಹೇಳಿದಾಗ ಶುಭಕಾರ್ಯವನ್ನು ಮಾಡಿದವನಿಗೆ ದುಃಖವು ಬರಬೇಕಾಗುತ್ತದೆ ಎಂಬ ಆಪತ್ತಿ ಬರುತ್ತದೆ.)

**नापि मदिष्टमस्त्वित्येवमाकारा । तदिच्छास्वरूपस्याद्याप्यनिरूपणात् । तस्य तस्य तत्तत्कर्मानुसारेण सुखाद्यस्त्वित्येवमाकारत्वे च कर्मण ईशानधीनत्वे श्रुत्यादिविरोधः ।**

'ನನಗೆ ಇಷ್ಟವಾದದ್ದು ಆಗಲಿ' ಎಂಬುದಾಗಿ ಈಶ್ವರನಿಗೆ ಇಚ್ಛೆಯು ಉಂಟಾಗುತ್ತದೆ. ಆದ್ದರಿಂದ ಹಿಂದಿನ ದೋಷಕ್ಕೆ ಅವಕಾಶವಿಲ್ಲ ಎಂದು ತಾರ್ಕಿಕರು ಸಮಾಧಾನವನ್ನು ಹೇಳಬಹುದು. ಆದರೆ

ಈಶ್ವರನ ಇಚ್ಛಾಸ್ವರೂಪವನ್ನು ಇಲ್ಲಿಯತನಕ ತಾರ್ಕಿಕರು ನಿರೂಪಣೆ ಮಾಡಿರುವುದಿಲ್ಲ. ಒಂದು ವೇಳೆ 'ತಸ್ಯ ತಸ್ಯ ತತ್ತತ್ಕರ್ಮಾನುಸಾರೇಣ ಸುಖಾದ್ಯಸ್ತು' ಆಯಾ ಜೀವರಿಗೆ ಅವರವರ ಕರ್ಮಕ್ಕನುಸಾರಿಯಾಗಿ ಸುಖ-ದುಃಖಾದಿಗಳು ಪ್ರಾಪ್ತವಾಗಲಿ ಎಂಬ ಸ್ವರೂಪವನ್ನು ಹೇಳುವುದಾದರೆ ಆ ಕರ್ಮವೂ ಕೂಡ ಈಶ್ವರಾಧೀನವೆಂದೇ ಹೇಳಬೇಕು. ಈಶ್ವರಾಧೀನವಲ್ಲವೆಂದು ಹೇಳಿದರೆ ಶ್ರುತ್ಯಾದಿವಿರೋಧವು ತಪ್ಪಿದ್ದಲ್ಲ.

**अधीनत्वे च वैषम्यादि दुर्वारम् । तस्मादनादियोग्यतानङ्गीकारे वैषम्यादि दुर्वारम् ।**

ಆ ಕರ್ಮವು ಈಶ್ವರನ ಅಧೀನವೆಂದು ಹೇಳಿದರೆ ವೈಷಮ್ಯನೈರ್ಘೃಣ್ಯದೋಷವು ಬಂದೇ ಬರುತ್ತದೆ. ಆದ್ದರಿಂದ ಜೀವಸ್ವರೂಪದಲ್ಲಿ ಅನಾದಿಯಾದ ಯೋಗ್ಯತೆಯನ್ನು ಅಂಗೀಕಾರ ಮಾಡಲೇಬೇಕು. ಇಲ್ಲದಿದ್ದರೆ ವೈಷಮ್ಯನೈರ್ಘೃಣ್ಯದೋಷವನ್ನು ಎದುರಿಸಲೇ ಬೇಕು.

**यच्चोक्तमुभाभ्यां आदिसृष्टौ कर्मैव नेति न शङ्क्यम् । अनादित्वात् संसारस्येति द्वितीयार्थ इति ।**

ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ಎರಡನೆಯ ಸೂತ್ರಾರ್ಥವನ್ನು ಹೀಗೆ ಹೇಳುತ್ತಾರೆ - ಪ್ರಥಮಸೃಷ್ಟಿಯಲ್ಲಿ ಕರ್ಮವೇ ಇರುವುದಿಲ್ಲ ಎಂದು ಆಶಂಕೆ ಮಾಡಬಾರದು. ಸಂಸಾರವು ಅನಾದಿಯಾದ್ದರಿಂದ ಕರ್ಮವು ಇರುತ್ತದೆ ಎಂದು.

**तन्न । मम रीत्या सुप्रसिद्धां संसारानादितामुपेत्यापेक्षितं कर्मापीशकारितमित्यवश्यपरिहर्तव्यप्रबलशङ्कापरिहारपरत्वस्य 'अनादित्वात्कर्मणश्च' इति भाष्योदाहृतस्मृत्यनुसारिणः सम्भवेऽन्यपरत्वायोगात् ।**

ಈ ವ್ಯಾಖ್ಯಾನವೂ ಕೂಡ ತಪ್ಪು. ನಾವು ಹೇಳುವಂತೆ ಸೂತ್ರಾರ್ಥವನ್ನು ಹೇಳಲು ಬರುವಾಗ ಸ್ವಕಪೋಲಕಲ್ಪಿತವಾದ ನಿಮ್ಮ ಸೂತ್ರಾರ್ಥವು ಅಯುಕ್ತವಾಗಿದೆ. ಸಂಸಾರವು ಅನಾದಿಯಾಗಿದೆ ಎಂದು ಒಪ್ಪಿ, ಅದಕ್ಕೆ ಅಪೇಕ್ಷಿತವಾದ ಕರ್ಮವು ಪರಮಾತ್ಮನಿಂದ ಸೃಷ್ಟವಾಗಿರುವ ಕಾರಣ ವೈಷಮ್ಯನೈರ್ಘೃಣ್ಯ-ದೋಷವು ಬರುತ್ತದಲ್ಲವೇ? ಎಂಬ ಆಕ್ಷೇಪವನ್ನು ಅವಶ್ಯವಾಗಿ ಪರಿಹಾರ ಮಾಡಲೇಬೇಕು. 'ಅನಾದಿತ್ವಾತ್ ಕರ್ಮಣಶ್ಚ' ಎಂಬ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗೆ ಅನುಸಾರಿಯಾಗಿ ಕರ್ಮವೂ ಕೂಡ ಅನಾದಿಯಾಗಿದೆ ಎಂಬುದಾಗಿ ಎರಡನೆಯ ಸೂತ್ರವು ಹೇಳುತ್ತಿದೆ. ಹೀಗೆ ಅರ್ಥವನ್ನು ಸುಲಭವಾಗಿ ಹೇಳಬಹುದು.

ಪರಿಪೂರ್ಣಚಂದ್ರಿಕಾ

**तृतीयस्यापि मम रीत्या न च कर्मसापेक्षत्वे स्वातन्त्र्यानुपपत्तिः । कर्मणामीशाधीनत्वेन तदुपपत्तेः । नचैवं पुनर्वैषम्याद्यापत्तिः । स्वाधीनकर्मापेक्ष्य विचित्रफलप्रदत्वस्य श्रुत्यादिषूपलभ्यमानत्वेनेष्टापत्तेरित्यवश्यपरिहार्यशङ्काद्वय-निरासकत्वसम्भवे परोक्तसंसारानादित्वोपपत्त्यादिपरत्वमयुक्तम् । नहि संसारानादित्वेऽनुपपत्तिशङ्कास्ति ।**

ಮೂರನೆಯ ಸೂತ್ರದ ಅರ್ಥವನ್ನೂ ಕೂಡ ನಾವು ಹೇಳುವಂತೆಯೇ ಹೇಳಲು ಬರುವಾಗ ನಿಮ್ಮ ಅರ್ಥವು ಅಯುಕ್ತವಾಗಿದೆ. ಈಶ್ವರನು ಕರ್ಮವನ್ನು ಅಪೇಕ್ಷಿಸುತ್ತಾನೆಂದು ಹೇಳಿದರೆ ಸ್ವಾತಂತ್ರ್ಯವು ಅನುಪಪನ್ನವಾಗುತ್ತದೆ. ಕರ್ಮಗಳು ಈಶಾಧೀನವಾದ್ದರಿಂದ ಸ್ವಾತಂತ್ರ್ಯವು ಉಪಪನ್ನವಾಗುತ್ತದೆ. ಹಾಗಾದರೆ ಪುನಃ ವೈಷಮ್ಯಾದಿದೋಷಗಳು ಬರುತ್ತದಲ್ಲವೇ? ಎಂದು ಆಕ್ಷೇಪ ಮಾಡಬಾರದು. ತನ್ನ ಅಧೀನವಾದ ಕರ್ಮವನ್ನು ಅಪೇಕ್ಷಿಸಿ ವಿಚಿತ್ರಫಲಪ್ರದನಾಗಿದ್ದಾನೆ ಎಂಬುದಾಗಿ ಶ್ರುತ್ಯಾದಿಗಳಲ್ಲಿ ಹೇಳಿರುವುದರಿಂದ ಇದು ನಮಗೆ ಇಷ್ಟಾಪತ್ತಿಯಾಗಿದೆ. ಹೀಗೆ ಅವಶ್ಯವಾಗಿ ಪರಿಹಾರ ಮಾಡಬೇಕಾದ ಎರಡು ಶಂಕೆಗಳನ್ನು ಪರಿಹಾರ ಮಾಡುವುದಕ್ಕಾಗಿಯೇ ಎರಡನೆಯ ಹಾಗೂ ಮೂರನೆಯ ಸೂತ್ರವು ಹೊರಟಿದೆ ಎನ್ನಲು ಬರುವಾಗ ಪರವಾದಿಗಳು ಹೇಳುವಂತೆ ಸಂಸಾರಾನಾದಿತ್ವವನ್ನು ಉಪಪಾದನೆ ಮಾಡುವುದಕ್ಕಾಗಿ ಮೂರನೆಯ ಸೂತ್ರ ಹೊರಟಿದೆ ಎನ್ನುವುದು ತಪ್ಪು. ಸಂಸಾರ ಅನಾದಿಯೆಂದು ಹೇಳಿದಾಗ ಯಾವುದೇ ಅನುಪಪತ್ತಿ ಶಂಕೆಗೆ ಅವಕಾಶವಿಲ್ಲ.

**यद्यप्याद्यसूत्रे वैषम्यनैर्घृण्ये द्विवचननिर्दिष्टे । तथापि ''स कारयेत् पुण्यमथापि पापम्'' इति विषयवाक्य उभयकारयितृत्वस्यैकवचनेन निर्देशात्तदनुसारेणेह सूत्र ''उपलभ्यते च'' इत्येकवचनं यथा ''आत्मनि'' इति पूर्वसूत्रे पुंलिङ्गेनात्मशब्देन निर्देशेऽपि ''सर्वोपेता'' इति सूत्रे विषयवाक्यस्यदेवताशब्दानुसारेण स्त्रीलिङ्गं तद्वत्।**

ಪ್ರಶ್ನೆ - ಪ್ರಥಮಸೂತ್ರದಲ್ಲಿ ವೈಷಮ್ಯನೈರ್ಘೃಣ್ಯೇ ಎಂಬುದಾಗಿ ಪ್ರಥಮಾವಿಭಕ್ತಿಯ ದ್ವಿವಚನವನ್ನು ಪ್ರಯೋಗ ಮಾಡಲಾಗಿದೆ. ಅದಕ್ಕನುಸಾರಿಯಾಗಿ ಮುಂದಿನ ಸೂತ್ರದಲ್ಲಿಯೂ ಕೂಡ ಪ್ರಥಮಾವಿಭಕ್ತಿ ದ್ವಿವಚನವನ್ನೇ ಪ್ರಯೋಗ ಮಾಡಬೇಕು. ಆದರೆ ಉಪಲಭ್ಯತೇ ಎಂಬುದಾಗಿ ಏಕವಚನವನ್ನು ಪ್ರಯೋಗ ಮಾಡಿದ್ದಾರೆ. ಇದು ಹೇಗೆ ಸರಿ ?

ಉತ್ತರ - ಹೌದು ! ಆದರೆ 'ಸ ಕಾರಯೇತ್ ಪುಣ್ಯಮಥಾಪಿ ಪಾಪಮ್' ಎಂಬುದು ಈ ಸೂತ್ರದ ವಿಷಯವಾಕ್ಯ. ಇಲ್ಲಿ ಪುಣ್ಯಕಾರಯಿತೃತ್ವ ಹಾಗೂ ಪಾಪಕಾರಯಿತೃತ್ವವನ್ನು ಪ್ರತ್ಯೇಕವಾಗಿ ಏಕವಚನ ಪ್ರಯೋಗದಿಂದ ಹೇಳಲಾಗಿದೆ. ವಿಷಯವಾಕ್ಯಕ್ಕೆ ಅನುಸಾರಿಯಾಗಿ 'ಉಪಲಭ್ಯತೇ' ಎಂಬುದಾಗಿ

ಸೂತ್ರದಲ್ಲೂ ಕೂಡ ಏಕವಚನವನ್ನೇ ಪ್ರಯೋಗ ಮಾಡಿದ್ದಾರೆ. ಉದಾಹರಣೆ - 'ಆತ್ಮನಿ' ಎಂಬುದಾಗಿ ಮುಂದಿನ ಸೂತ್ರದಲ್ಲಿ ಆತ್ಮಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗ ಮಾಡಲಾಗಿದೆ. ಆದರೂ ಕೂಡ 'ಸರ್ವೋಪೇತಾ ಚ' ಎಂಬ ಸೂತ್ರದಲ್ಲಿ ವಿಷಯವಾಕ್ಯದಲ್ಲಿರುವ ದೇವತಾಶಬ್ದಕ್ಕೆ ಅನುಸಾರಿಯಾಗಿ ಸ್ತ್ರೀಲಿಂಗವನ್ನು ಪ್ರಯೋಗ ಮಾಡಲಾಗಿದೆ. ಅದರಂತೆ ಇಲ್ಲಿಯೂ ಕೂಡ ವಿಷಯವಾಕ್ಯಕ್ಕೆ ಅನುಸಾರಿಯಾಗಿ ವಚನವ್ಯತ್ಯಾಸವನ್ನು ತಿಳಿಯಬೇಕು.

**परेषां त्विदमधिकरणमत्यन्तासङ्गतम् । भ्रान्तत्वेन वा भ्रमाधिष्ठानत्वेन वा वैषम्यादिशङ्कानुदयात् । नहि स्वप्नेऽयं सुखी अयं दुःखीति भ्रान्तिमतस्तद्विषयस्य वा वैषम्याद्यस्ति ।**

ಅದ್ವೈತಿಗಳ ಪ್ರಕಾರ ಈ ಅಧಿಕರಣವೇ ಅಸಂಗತ. ಅದು ಹೀಗೆ - ಬ್ರಹ್ಮನು ಭ್ರಾಂತನಾಗಿ ಅಥವಾ ಭ್ರಮೆಗೆ ಅಧಿಷ್ಠಾನನಾಗಿ, ಅಥವಾ ಮಾಯಾವಿಯಾಗಿ ಹಿಂದೆ ಪ್ರಸಕ್ತನಾಗಿದ್ದಾನೆ. ಭ್ರಾಂತನಾಗಿದ್ದಾನೆ ಅಥವಾ ಭ್ರಮೆಗೆ ಅಧಿಷ್ಠಾನನಾಗಿದ್ದಾನೆ ಎಂಬೆರಡು ಪಕ್ಷಗಳಲ್ಲಿ ವೈಷಮ್ಯನೈರ್ಘೃಣ್ಯದೋಷ ಶಂಕೆಗೆ ಅವಕಾಶವೇ ಇರುವುದಿಲ್ಲ. ಏಕೆಂದರೆ ಸ್ವಪ್ನದಲ್ಲಿ 'ಅಯಂ ಸುಖೀ' 'ಅಯಂ ದುಃಖೀ' ಎಂಬ ಭ್ರಾಂತಿಯಿರುವವನಿಗೆ, ಅಥವಾ ಭ್ರಾಂತಿಗೆ ವಿಷಯನಾದವನಿಗೆ ವೈಷಮ್ಯಾದಿದೋಷಗಳು ಬರಲು ಸಾಧ್ಯವೇ ಇಲ್ಲ. ಆದ್ದರಿಂದ ಭ್ರಾಂತನಿಗೆ ಅಥವಾ ಭ್ರಮೆಯ ಅಧಿಷ್ಠಾನನಿಗೆ ಈ ವೈಷಮ್ಯಾದಿದೋಷವನ್ನು ಆಶಂಕಿಸುವುದೇ ತಪ್ಪಾಗುತ್ತದೆ.

**मायावित्वे चेश्वरस्य स्वमायाकल्पितकर्मादिज्ञानायोगेन तत्सापेक्षत्वोक्त्ययोगात्। अत एव भामत्यां ''अभ्युपेत्य च सृष्टेस्तात्त्विकत्वमिदमुक्तम् । अनिर्वाच्या तु सृष्टिः'' इत्यस्याधिकरणस्य स्वमतप्रतिकूलतोक्ता ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् वैषम्यनैर्घृण्याधिकरणं सम्पूर्णम् ॥१०॥**

'ಮಾಯಾವಿ' ಎಂಬ ಪಕ್ಷದಲ್ಲಿ ತನ್ನ ಮಾಯೆಯಿಂದ ಸುಖ ಹಾಗೂ ದುಃಖಗಳನ್ನು ಹೊಂದುವಂತೆ ಮಾಡುವವನಾದ್ದರಿಂದ ವೈಷಮ್ಯಾದಿಶಂಕೆಗೆ ಅವಕಾಶವಿದೆ. ಆದರೆ ಈಶ್ವರನು ಯಾವ ಕರ್ಮವನ್ನು ಅಪೇಕ್ಷಿಸಿ, ಸುಖಾದಿಗಳನ್ನು ನೀಡುತ್ತಾನೋ, ಅಂಥ ಕರ್ಮವೇ ತನ್ನ ಮಾಯೆಯಿಂದ ಕಲ್ಪಿತವಾಗಿದೆ. ಯಾವುದು ತನ್ನ ಮಾಯೆಯಿಂದ ಕಲ್ಪಿತವಾಗಿರುತ್ತದೋ, ಅದು ಮಾಯಾವಿಗೆ ಕಾಣಿಸಲು ಸಾಧ್ಯವಿಲ್ಲ.

ಆದ್ದರಿಂದ ಈಶ್ವರನಿಗೂ ಕೂಡ ಕರ್ಮಾದಿಗಳ ಜ್ಞಾನವೇ ಇಲ್ಲದಂತಾಯಿತು. ಆದ್ದರಿಂದ ಮಾಯಾವಿ ಎಂಬ ಪಕ್ಷವೂ ಕೂಡ ಅಯುಕ್ತವಾಗಿದೆ. ಹೀಗೆ ಅದ್ವೈತಿಗಳಲ್ಲಿ ಈ ಅಧಿಕರಣವೇ ವ್ಯರ್ಥವಾಯಿತು. ಆದ್ದರಿಂದ ಭಾಮತಿಕಾರ ಹೀಗೆ ಹೇಳಿದನು - ಅಭ್ಯುಪೇತ್ಯ ಚ ಸೃಷ್ಟೇಃ ತಾತ್ವಿಕತ್ವಮಿದಮುಕ್ತಮ್ । ಅನಿರ್ವಾಚ್ಯಾ ತು ಸೃಷ್ಟಿಃ' ಸೃಷ್ಟಿಯು ತಾತ್ವಿಕವೆಂದು ಈ ಅಧಿಕರಣದಲ್ಲಿ ಹೇಳಿರುವುದು ಕೇವಲ ಅಂಗೀಕಾರ ವಾದ. ಸೃಷ್ಟಿಯು ಅನಿರ್ವಾಚ್ಯವೇ ಆಗಿದೆ ಎಂದು. ಹೀಗೆ ಅದ್ವೈತಿಗಳಿಗೆ ಈ ಅಧಿಕರಣವು ಪ್ರತಿಕೂಲವೇ ಆಗಿದೆ ಹೊರತು, ಅನುಕೂಲವಾಗಿರುವುದಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ವೈಷಮ್ಯನೈರ್ಘೃಣ್ಯಾಧಿಕರಣವು ಸಂಪೂರ್ಣವಾಯಿತು

**प्रकाशः –**

सूत्राक्षरार्थोऽतिरोहित इति तात्पर्यार्थमनुवदति ।। **ईश्वर इति** ।। यद्यपीदं परभाष्य एवोक्तम् । तथापि –

निमित्तमात्र एवासौ सृज्यानां सर्गकर्मणि ।
प्रधानकारणीभूता यतो वै सृज्यशक्तयः ।।

इत्यादिपराशरस्मृतिमुदाहृत्य ''सृज्यानां देवादीनां कर्मशक्तिरेव देवादिवैचित्र्यहेतुः'' इत्यादि वदतो रामानुजभाष्यकृतोऽप्यनुमतत्वादुभाभ्या-मुक्तमित्युक्तम् । उपचरितार्थत्वं प्रशंसार्थत्वम् ।

ಪರರ ಸೂತ್ರಾರ್ಥವು ಸ್ಪಷ್ಟವಾಗಿರುವುದರಿಂದ ಅದರ ತಾತ್ಪರ್ಯಾರ್ಥವನ್ನು 'ಈಶ್ವರಃ' ಇತ್ಯಾದಿ ಗ್ರಂಥದಿಂದ ಅನುಮಾನ ಮಾಡಲು ಪ್ರಾರಂಭಿಸಿದ್ದಾರೆ. ಗ್ರಂಥಕಾರರು ಅದ್ವೈತಿಗಳ ಹಾಗೂ ವಿಶಿಷ್ಟಾದ್ವೈತಿಗಳ ಸೂತ್ರದ ತಾತ್ಪರ್ಯವನ್ನು ಏಕೀಕರಣ ಮಾಡಿ, ಅನುವಾದ ಮಾಡಿದ್ದಾರೆ. ಆದರೆ ರಾಮಾನುಜಭಾಷ್ಯದಲ್ಲಿ ಹೀಗೆ ಸೂತ್ರದ ತಾತ್ಪರ್ಯವನ್ನು ಹೇಳಿಯೇ ಇರುವುದಿಲ್ಲವಲ್ಲ. ಆದ್ದರಿಂದ ಗ್ರಂಥಕಾರರು ಹೇಗೆ ಅನುವಾದ ಮಾಡಿದರು ?

ಹೌದು ಆದರೂ ಕೂಡ

ನಿಮಿತ್ತ ಮಾತ್ರ ಏವಾಸೌ ಸೃಜ್ಯಾನಾಂ ಸರ್ಗಕರ್ಮಣಿ।
ಪ್ರಧಾನಕಾರಣೀಭೂತಾ ಯತೋ ವೈ ಸೃಜ್ಯಶಕ್ತಯಃ॥

ದೇವತೆಗಳಲ್ಲಿರುವ ಸೃಷ್ಟಿ ಮಾಡುವ ಶಕ್ತಿಯೇ ಪ್ರಧಾನವಾಗಿ ಕಾರಣವಾಗಿರುತ್ತದೆ ಎಂಬುದಾಗಿ ಪರಾಶರಶ್ರುತಿಯ ವಚನವನ್ನು ಉದಾಹರಿಸಿ, 'ಸೃಜ್ಯಾನಾಂ ದೇವಾದೀನಾಂ ಕರ್ಮಶಕ್ತಿರೇವ ದೇವಾದಿವೈಚಿತ್ರ್ಯಹೇತುಃ' ಸೃಜ್ಯರಾದ ದೇವತೆಗಳ ಕರ್ಮಶಕ್ತಿಯೇ ಅವರಲ್ಲಿರುವ ವೈಚಿತ್ರ್ಯಕ್ಕೆ ಕಾರಣವಾಗಿದೆ ಎಂಬುದಾಗಿ ಹೇಳುತ್ತಾರೆ. ರಾಮಾನುಜಭಾಷ್ಯದ ಈ ಮಾತಿನ ಆಧಾರದಿಂದ 'ಉಭಾಭ್ಯಾಮ್' ಎಂಬುದಾಗಿ ಗ್ರಂಥಕಾರರು ಹೇಳಿರುತ್ತಾರೆ. ಈ ಮಾತಿನಿಂದ ಬ್ರಹ್ಮನು ಸಾಧಾರಣಕಾರಣನೆಂದು, ಕರ್ಮಗಳು ಅಸಾಧಾರಣಕಾರಣಗಳೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಗ್ರಂಥದಲ್ಲಿ 'ಉಪಚರಿತಾರ್ಥತ್ವಂ' ಎಂದರೆ ಪ್ರಶಂಸಾಪರವಾಗಿ ಎಂದರ್ಥ.

**ಪ್ರಕಾಶಃ –** ನನು ಭಾಮತ್ಯಾಮೇತದಾಶಙ್ಕ್ಯ ''ಜನ್ಮಜನ್ಮ ಯದಭ್ಯಸ್ತಂ ದಾನಮಧ್ಯಯನಂ ತಪಃ। ತೇನೈವಾಭ್ಯಾಸಯೋಗೇನ ತಚ್ಚೈವಾಭ್ಯಸ್ಯತೇ ಪುನಃ'' ಇತ್ಯಾದ್ಯುದಾಹೃತ್ಯ ಕರ್ಮಾನಾದಿತ್ವೇನ ಸಮಾಹಿತಮಿತಿ ಚೇನ್ನ । ಪೂರ್ವಕರ್ಮಣೋಽಪ್ಯನ್ಯಥಾಕರಣಶಕ್ತಿಮತ್ತ್ವೇನ ''ಸ್ವಭಾವಮನ್ಯಥಾಕರ್ತುಂ ಯಶ್ಶಕ್ತೋಽಪ್ಯನುವರ್ತತ'' ಇತ್ಯಾದಿನಾಽಸ್ಮದುಕ್ತಸಮಾಧೇರೇವಾನುಸರ್ತವ್ಯತ್ವಾದಿತಿ ಭಾವಃ ।।

ಭಾಮತಿಯಲ್ಲಿ ಈ ಗ್ರಂಥದಲ್ಲಿ ಹೇಳಿದ್ದನ್ನೇ ಆಕ್ಷೇಪ ಮಾಡಿ ಉತ್ತರಿಸಲಾಗಿದೆ - ''ಜನ್ಮಜನ್ಮ ಯದಭ್ಯಸ್ತಂ ದಾನಮಧ್ಯಯನಂ ತಪಃ । ತೇನೈವಾಭ್ಯಾಸಯೋಗೇನ ತಚ್ಚೈವಾಭ್ಯಸ್ಯತೇ ಪುನಃ'' ಪ್ರತಿಯೊಂದು ಜನ್ಮಗಳಲ್ಲಿ ದಾನ, ಅಧ್ಯಯನ, ತಪಸ್ಸುಗಳು ಹೇಗೆ ಅಭ್ಯಾಸವಾಗಿವೆಯೋ, ಅದೇ ಅಭ್ಯಾಸದಿಂದಲೇ ತೊಡಗುತ್ತಾನೆ ಎಂಬ ವಾಕ್ಯವನ್ನು ಉದಾಹರಿಸಿ, ಕರ್ಮವು ಅನಾದಿಯೆಂದು ಸಮಾಧಾನ ನೀಡಲಾಗಿದೆ. ಆದ್ದರಿಂದ ವೈಷಮ್ಯಾದಿದೋಷಕ್ಕೆ ಹೇಗೆ ಅವಕಾಶವಿದೆ ?

ಈ ಆಕ್ಷೇಪವು ತಪ್ಪು. ಏಕೆಂದರೆ ಈಶ್ವರನು ಹಿಂದಿನ ಕರ್ಮವನ್ನೂ ಕೂಡ ಅನ್ಯಥಾ ಕರ್ತುಂ ಪ್ರಭವನಾಗಿದ್ದರೂ 'ಸ್ವಭಾವಮನ್ಯಥಾಕರ್ತುಂ ಯಃ ಶಕ್ತೋಽಪ್ಯನುವರ್ತತೇ' ಸ್ವಭಾವವನ್ನು ಅನ್ಯಥಾ ಕರ್ತುಂ ಪ್ರಭವನಾಗಿದ್ದರೂ ಹಾಗೇ ಮಾಡಲಾರನು ಎಂಬುದಾಗಿ ನಾವು ಹೇಳಿದ ಸಮಾಧಾನವನ್ನು ಅನುಸರಿಸುವುದೇ ಯುಕ್ತವಾಗಿದೆ.

**ಪ್ರಕಾಶಃ – ಸಾಧಾರಣ್ಯೇತಿ** ।। ಸದಸತ್ಪ್ರವೃತ್ತಿಸಾಧಾರಣ್ಯೇತ್ಯರ್ಥಃ । ಏತಚ್ಚ ''ಕರ್ತಾ ಶಾಸ್ತ್ರಾರ್ಥವತ್ತ್ವಾತ್'' ಇತ್ಯತ್ರ ವಿವರಿಷ್ಯತೇ । ಏತೇನೇತ್ಯುಕ್ತಮೇವ ವ್ಯನಕ್ತಿ ।। **ಶುಭಾಶುಭಪ್ರವೃತ್ತೀತಿ।। ಸ್ಮೃತ್ಯಾ ಚೇತಿ।।** ಶ್ರುತೌ ಸ್ಮೃತೌ ಚ ಸರ್ವತ್ರ ಪಾರತನ್ತ್ರ್ಯಸ್ಯೈವ ಜೀವೇ ಪ್ರತೀತೇರಿತಿ ಭಾವಃ । ಯದಪ್ಯಶುಭ ಉಪೇಕ್ಷತ ಇತಿ ತದಪಿ ನೇತ್ಯಾಹ – **ಕಿಞ್ಚೇತಿ** ।।

ಗ್ರಂಥದಲ್ಲಿ 'ಈಶ್ವರದತ್ತಯಾ ಸಾಧಾರಣಾ ಸ್ವಾತಂತ್ರ್ಯಶಕ್ತ್ಯಾ' ಎಂದು ಹೇಳಿದ್ದಾರೆ. ಈಶ್ವರನು ಸಾಧಾರಣವಾಗಿ ಎಲ್ಲರಿಗೂ ಕೂಡ ಸ್ವಾತಂತ್ರ್ಯಶಕ್ತಿಯನ್ನು ನೀಡಿದ್ದಾನೆ ಎಂದು. ಇಲ್ಲಿರುವ ಸಾಧಾರಣ ಎಂಬ ಪದಕ್ಕೆ ಶುಭಾಶುಭಕರ್ಮಗಳ ಪ್ರವೃತ್ತಿಗೆ ಸಾಧಾರಣವಾಗಿ ಎಂದರ್ಥ. ಈ ವಿಷಯವನ್ನು 'ಕರ್ತಾ

ಶಾಸ್ತ್ರಾರ್ಥವತ್ತ್ವಾತ್' ಎಂಬಲ್ಲಿ ವಿವರಿಸುವವರಿದ್ದೇವೆ. 'ಏತೇನ' ಎಂದು ಹೇಳಿದ್ದನ್ನೇ 'ಶುಭಾಶುಭಪ್ರವೃತ್ತಿ' ಇತ್ಯಾದಿ ಗ್ರಂಥದಿಂದ ಸ್ಪಷ್ಟಪಡಿಸಿದ್ದಾರೆ.

'ಸ್ಮೃತ್ಯಾ ಚ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಶ್ರುತಿ-ಸ್ಮೃತಿಗಳಲ್ಲಿ ಜೀವನಿಗೆ ಪಾರತಂತ್ರ್ಯವಿರುವುದೇ ಗೋಚರವಾಗುತ್ತಿದೆ ಎಂದು. ಪರಮಾತ್ಮನು ಅಶುಭವನ್ನು ಉಪೇಕ್ಷೆ ಮಾಡುತ್ತಾನೆ ಎಂದು ಹೇಳಿದ್ದು ಅಯುಕ್ತ ಎಂಬುದನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ.

**प्रकाशः** – ''न कर्माविभागात्'' इति सूत्रार्थं प्रत्याचष्टे ।। **यच्चेति** ।। सृष्टेः प्राक्कर्म न विद्यते । कुतः । अविभागात् । ''सदेव सोम्येदमग्र आसीदेकमेवाद्वितीयम्'' इत्यविभागश्रवणात् । सृष्टेरूर्ध्वमीश्वरः कर्मापेक्षः प्रवर्तताम् । प्राक्त्वविभागादेकरूपैव सृष्टिस्स्यादिति शङ्कार्थः ।।

'ನ ಕರ್ಮಾವಿಭಾಗಾತ್' ಎಂಬ ಸೂತ್ರಾರ್ಥವನ್ನು 'ಯಚ್ಚ' ಇತ್ಯಾದಿ ಗ್ರಂಥದಿಂದ ನಿರಾಕರಣ ಮಾಡಿದ್ದಾರೆ. ಸೃಷ್ಟಿಗಿಂತ ಮೊದಲು ಕರ್ಮವೇ ಇರಲಿಲ್ಲ. ಏಕೆಂದರೆ 'ಅವಿಭಾಗಾತ್' 'ಸದೇವ ಸೌಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್' ಎಂಬ ಶ್ರುತಿಯು ಪರಮಾತ್ಮನಿಂದ ಅದು ವಿಭಕ್ತವೇ ಆಗಿರಲಿಲ್ಲ ಎಂದು ಸ್ಪಷ್ಟವಾಗಿ ಹೇಳುತ್ತಿದೆ. ಸೃಷ್ಟಿಯ ಅನಂತರ ಈಶ್ವರನು ಕರ್ಮವನ್ನು ಅಪೇಕ್ಷಿಸಿ ಪ್ರವೃತ್ತಿ ಮಾಡಲಿ. ಮೊದಲಿನ ವಿಭಾಗಕ್ಕಿಂತ ಏಕರೂಪವಾದ ಸೃಷ್ಟಿಯಾಗಲಿ ಎಂಬುದು ಶಂಕೆಯ ಅಭಿಪ್ರಾಯ.

**प्रकाशः** – **तृतीयस्यापीति** ।। परमत एव तृतीयत्वम् । मतान्तरे तु पूर्वेणैकयोगत्वात् । अनादित्वं कथमित्यवतार्य ''उपपद्यते संसारानादित्वम् । अन्यथा कृतहानाकृताभ्यागमप्रसङ्गात् । उपलभ्यते च तदनादित्वं धाता यथापूर्वमित्यादात्'' इत्युक्तं परैः । तत्प्रत्याख्याति।। **ममेति** ।।

'ತೃತೀಯಸ್ಯಾಪಿ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅದ್ವೈತಿಗಳ ಪ್ರಕಾರ ಮಾತ್ರ ಇದು ಮೂರನೆಯ ಸೂತ್ರ. ವಿಶಿಷ್ಟಾದ್ವೈತಿಗಳು ಈ ಮೂರು ಸೂತ್ರಗಳನ್ನು ಒಂದೇ ಸೂತ್ರವನ್ನಾಗಿ ಪರಿಗಣನೆ ಮಾಡಿದ್ದಾರೆ. ಅವರು ಅನಾದಿತ್ವವು ಹೇಗೆ ಯುಕ್ತವಾಗುತ್ತದೆ? ಎಂದು ಅವತಾರಿಕೆಯನ್ನು ನೀಡಿ, 'ಉಪಪದ್ಯತೇ ಸಂಸಾರಾನಾದಿತ್ವಮ್ । ಅನ್ಯಥಾ ಕೃತಹಾನಾಕೃತಾಭ್ಯಾಗಮಪ್ರಸಂಗಾತ್ । ಉಪಲಭ್ಯತೇ ಚ ತದನಾದಿತ್ವಂ ಧಾತಾ ಯಥಾಪೂರ್ವಮಿತ್ಯಾದಾತ್' ಸಂಸಾರದ ಅನಾದಿತ್ವವು ಯುಕ್ತವಾಗುತ್ತದೆ. ಇಲ್ಲದಿದ್ದರೆ ಕೃತಹಾನಾ-ಕೃತಾಭ್ಯಾಗಮಪ್ರಸಂಗವು ಬರುತ್ತದೆ. ಏಕೆಂದರೆ ಸಂಸಾರವನ್ನು ಅನಾದಿಯೆಂದು ಹೇಳದಿದ್ದರೆ ಯಾವ ವ್ಯಕ್ತಿಗೆ ಇವತ್ತಿನಿಂದ ಸಂಸಾರವು ಪ್ರಾರಂಭವಾಯಿತೋ, ಅವನಿಗೆ ಹಿಂದಿನ ದಿವಸ ಮಾಡಿದ ದೋಷಗಳು ಧರ್ಮಗಳು ಅನುವೃತ್ತವೇ ಆಗುವುದಿಲ್ಲ. ಆಗ ಕೃತಹಾನಾಕೃತಾಭ್ಯಾಗಮಪ್ರಸಂಗವು ಪ್ರಾಪ್ತವಾಗುತ್ತದೆ. ಮತ್ತು 'ಧಾತಾ ಯಥಾ ಪೂರ್ವಮ್ ಎಂಬಲ್ಲಿ ಸಂಸಾರವು ಅನಾದಿಯಾಗಿದೆ ಎಂದು ಉಪಲಭ್ಯವಾಗುತ್ತಿದೆ'.

ಹೀಗೆ ವಿಶಿಷ್ಟಾದ್ವೈತಿಗಳು ವ್ಯಾಖ್ಯಾನ ಮಾಡುತ್ತಿದ್ದಾರೆ. ಇದನ್ನು 'ಮಮ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡಿದ್ದಾರೆ.

**प्रकाशः – परोक्तेति ।। मायावाद्युक्तेत्यर्थः ।। ज्ञानायोगेनेति ।। मायाविनो** मायिकादर्शनादिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे वैषम्यनैर्घृण्याधिकरणं सम्पूर्णम् ।।१०।।**

'ಪರೋಕ್ತ' ಎಂದರೆ ಮಾಯಾವಾದಿಗಳಿಂದ ಹೇಳಲ್ಪಟ್ಟದ್ದು ಎಂದಭಿಪ್ರಾಯ. 'ಜ್ಞಾನಾಯೋಗೇನ' ಎಂದರೆ ಮಾಯಾವಿಯು ಮಾಯಿಕವಾದದ್ದನ್ನು ನೋಡಲು ಅಸಮರ್ಥನಾಗಿದ್ದಾನೆ. ಆದ್ದರಿಂದ ಪರಮಾತ್ಮನಿಗೆ ತನ್ನ ಮಾಯೆಯಿಂದ ಕಲ್ಪಿತವಾದ ಕರ್ಮಾದಿಗಳ ಜ್ಞಾನವು ಇರುವುದಿಲ್ಲ ಎಂದಭಿಪ್ರಾಯ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ವೈಷಮ್ಯನೈರ್ಘೃಣ್ಯಾಧಿಕರಣವು ಮುಕ್ತಾಯವಾಯಿತು.

* * * * * *

ಶ್ರೀಕೃಷ್ಣಾರ್ಪಣಮಸ್ತು.

# ಸರ್ವಧರ್ಮೋಪಪತ್ತ್ಯಧಿಕರಣ

(೨-೧-೧೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಸರ್ವಧರ್ಮೋಪಪತ್ತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – सर्वधर्मोपपत्तेश्च ।।**

ಇಲ್ಲಿಯ ತನಕ ಸಮರ್ಥನೆ ಮಾಡಿದಂತೆ ಬ್ರಹ್ಮನಲ್ಲಿ ಸಕಲ ಸದ್ಗುಣಗಳು ಸಿದ್ಧವಾದವು. ಯಾವುದೇ ದೋಷಗಳು ಅವನಲ್ಲಿ ಇರುವುದಿಲ್ಲ. ಸಕಲ ಗುಣಪರಿಪೂರ್ಣತ್ವದ ಸಮನ್ವಯದಲ್ಲಿ ಯುಕ್ತಿವಿರೋಧವನ್ನೂ ಕೂಡ ಆಕ್ಷೇಪಿಸಬಾರದು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – सर्वधर्मोपपत्तेश्च ।।** गुणदोषाभाववत्त्वरूपाणां **सर्वेषां धर्माणां उपपत्तेः** स्वातन्त्र्यादिना ब्रह्मणि युक्तत्वाच्च न तस्य गुणपूर्णत्वे युक्तिविरोधः शङ्कनीय इत्यर्थः ।।१।।

।। इति श्रीजगन्नाथयतिकृतायां सूत्रदीपिकायां
द्वितीयाध्यायस्य प्रथमः पादः ।।२।।१।।

ಅರ್ಥ -- ಸರ್ವಧರ್ಮೋಽಪಪತ್ತೇಶ್ಚ = ಗುಣ ಹಾಗೂ ದೋಷಗಳ ಇಲ್ಲದಿರುವಿಕೆ ಎಂಬ ಧರ್ಮಗಳು ಸ್ವಾತಂತ್ರ್ಯವೆಂಬ ಪ್ರವೃತ್ತಿ ನಿಮಿತ್ತದಿಂದ ಪರಮಾತ್ಮನಲ್ಲಿ ಯುಕ್ತವಾಗುತ್ತದೆ. ಆದ್ದರಿಂದ ಪರಮಾತ್ಮನು ಸಕಲ ಗುಣಪರಿಪೂರ್ಣನಾಗಿದ್ದಾನೆ ಎಂಬ ಸಮನ್ವಯಾಧ್ಯಾಯದ ವಿಷಯದಲ್ಲಿ ಯುಕ್ತಿವಿರೋಧವನ್ನು ಆಕ್ಷೇಪ ಮಾಡಬಾರದು.

ಇಲ್ಲಿಗೆ ಶ್ರೀಜಗನ್ನಾಥ ಯತಿಗಳಿಂದ ರಚಿತವಾದ ಸೂತ್ರದೀಪಿಕೆಯಲ್ಲಿ
ದ್ವಿತೀಯಾಧ್ಯಾಯದ ಪ್ರಥಮ ಪಾದವು ಸಮಾಪ್ತವಾಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – अवशिष्टैरूपसंहरति –**

**।। सर्वधर्मोपपत्तेश्च ।।१।।**

**गुणाः श्रुताः सुविरुद्धाश्च देवे सन्त्यश्रुता अपि नैवात्र शङ्का ।**
**चिन्त्या अचिन्त्याश्च तथैव दोषाः श्रुताश्च नाङ्गैर्हि तथा प्रतीताः ।।**
**इति सर्वगुणोपपत्तिश्रुतेः ।।१।।**

**।। इति सर्वधर्मोपपत्त्यधिकरणम्**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये द्वितीयस्याध्यायस्य प्रथमः पादः ।।**

ಅನುವಾದ - ಸಂಪೂರ್ಣ ಪ್ರಥಮಾಧ್ಯಾಯದಲ್ಲಿ ಜಗತ್ಕರ್ತೃತ್ವವೇ ಮೊದಲಾದ ಗುಣಗಳನ್ನು ಮಹಾವಿಷ್ಣುವಿನಲ್ಲಿ ಸಮರ್ಥಿಸಲಾಯಿತು. ಇನ್ನು ಉಳಿದ ಅನೇಕ ಗುಣಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಾ ಉಪಸಂಹಾರ ಮಾಡುತ್ತಿದ್ದಾರೆ.

ಕ್ರೀಡಾದಿಗುಣವಿಷ್ಟನಾದ ಶ್ರೀಹರಿಯಲ್ಲಿ ಆಪಾತತಃ ವಿರುದ್ಧವಾದ ಅನೇಕ ಗುಣಗಳು ಶ್ರುತಿಯಲ್ಲಿ ಕೇಳಿಬರುತ್ತಿವೆ. ಲಕ್ಷ್ಮೀದೇವಿ, ಚತುರ್ಮುಖ ಮೊದಲಾದವರಿಗೆ ತಿಳಿದಿರುವ ಮತ್ತು ಅವರಿಗೂ ತಿಳಿಯಲಾಗದ ಗುಣಗಳು ಪರಮಾತ್ಮನಲ್ಲಿವೆ. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ. ನಾವು ಯೋಚನೆ ಮಾಡುವ ದೋಷಗಳು ಪರಮಾತ್ಮನಲ್ಲಿ ಸರ್ವಥಾ ಇರುವುದಿಲ್ಲ. ಹೀಗಿರುವಾಗ

**ಊಹೆಗೆ ಸಿಗದ ದೋಷಗಳು ಅವನಲ್ಲಿ ಇರಲು ಹೇಗೆ ಸಾಧ್ಯ? ಅನೇಕ ಶ್ರುತಿಗಳಿಂದ ಪರಮಾತ್ಮನಲ್ಲಿ ಉತ್ಪತ್ತಿ ಮೊದಲಾದ ದೋಷಗಳು ಇರುವುದಿಲ್ಲವೆಂದು ತಿಳಿಯುತ್ತಿದೆ. ಆದ್ದರಿಂದ ಪರಮಾತ್ಮನಲ್ಲಿ ಅನಂತ ಕಲ್ಯಾಣಗುಣಪರಿಪೂರ್ಣತ್ವವು ಯುಕ್ತವಾಗುತ್ತದೆ.**

ಪ್ರತಿಪದಾರ್ಥ -- ವಿಷ್ಣುವಿನ ಸರ್ವಗುಣಪರಿಪೂರ್ಣತ್ವ ವಿಷಯದಲ್ಲಿ ಮತ್ತು ಸರ್ವದೋಷರಾಹಿತ್ಯವಿಷಯದಲ್ಲಿ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಇದುವರೆಗೂ ಎಲ್ಲಾ ಸೂತ್ರಗಳಿಂದ ಈ ವಿಷಯವನ್ನು ಸಮರ್ಥನೆ ಮಾಡಿದ್ದರಿಂದ ಈ ಸೂತ್ರವೇಕೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ಅವಶಿಷ್ಟೈಃ = ಹಿಂದೆ ಸಮನ್ವಯ ಮಾಡಿದ ಗುಣಗಳಷ್ಟೇ ಅಲ್ಲದೆ ಇನ್ನೂ ಅನೇಕ ಗುಣಗಳನ್ನು, ಉಪಸಂಹರತಿ = ಯುಕ್ತಿವಿರೋಧವನ್ನು ಪರಿಹಾರಮಾಡುವ ಮೂಲಕವಾಗಿ ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಿದ್ದಾರೆ -

ದೇವೇ = ಕ್ರೀಡಾದಿಗುಣವಿಶಿಷ್ಟನಾದ ಶ್ರೀಹರಿಯಲ್ಲಿ, ಸುವಿರುದ್ಧಾಃ = ಲೋಕದದೃಷ್ಟಿಯಲ್ಲಿ ಆಪಾತತಃ ವಿರುದ್ಧವಾದಂತೆ ತೋರುವ, ಗುಣಾಃ = ಗುಣಗಳು, ಶ್ರುತಾಃ = ಶ್ರುತಿಯಲ್ಲಿ ಹೇಳಲ್ಪಟ್ಟವೆ, ಅಶ್ರುತಾಃ = ಎಲ್ಲೂ ಕೇಳದ ಲಕ್ಷ್ಮೀ, ಚತುರ್ಮುಖ ಮೊದಲಾದವರಿಂದಲೂ ತಿಳಿಯಲು ಸಾಧ್ಯವಾಗದ, ಗುಣಾಃ = ಗುಣಗಳು, ಸಂತಿ = ಶ್ರೀಹರಿಯಲ್ಲಿವೆ. ಅತ್ರ = ಈ ವಿಷಯದಲ್ಲಿ, ನೈವಾಪಿ ಶಂಕ್ಯಾ = ಸ್ವಲ್ಪವೂ ಸಂದೇಹ ಪಡಬಾರದು. ತಥೈವ = ಹಾಗೆಯೇ, ಚಿಂತ್ಯಾಃ = ನಮ್ಮ ಊಹೆಗೆ ಸಿಲುಕುವ, ಚ = ಮತ್ತು, ಅಚಿಂತ್ಯಾಃ = ಊಹೆಗೆ ನಿಲುಕದ ಗುಣಗಳು ಶ್ರೀಹರಿಯಲ್ಲಿವೆ. ತಥೈವ = ಇದರಂತೆ, ದೋಷಾಃ = ಊಹೆಗೆ ಸಿಗುವ ದೋಷಗಳು ಪರಮಾತ್ಮನಲ್ಲಿ, ಸರ್ವಥಾ = ಇರುವುದಿಲ್ಲ. ನ ಶ್ರುತಾಃ = ಶ್ರುತಿಯಲ್ಲಿ ಎಲ್ಲಿಯೂ ಕೇಳಿ ಬರುತ್ತಿಲ್ಲ. ಅಜ್ಞೈರ್ಹಿ = ಅಜ್ಞಜನರಿಂದ, ತಥಾ = ಹಾಗೆ, ಪ್ರತೀತಾಃ = ಪ್ರತೀತವಾದ, ದೋಷಾಃ = ದೋಷಗಳು, ನ = ಸರ್ವಥಾ ಇರುವುದಿಲ್ಲ. ಇತಿ = ಹೀಗೆ, ಸರ್ವಗುಣೋಪಪತ್ತಿಶ್ರುತೇಃ = ಸಕಲವಿಧವಾದ ಅನಂತಗುಣವಿಶಿಷ್ಟನಾದ ಅನಂತಗುಣಗಳನ್ನು ಪ್ರತಿಪಾದನೆ ಮಾಡುವ ಶ್ರುತಿಗಳಿರುವುದರಿಂದ ಪರಮಾತ್ಮನಲ್ಲಿ ಅನಂತಗುಣಪರಿಪೂರ್ಣತ್ವವು ಸಿದ್ಧವಾಯಿತು.

**ಇಲ್ಲಿಗೆ ವೈಷಮ್ಯನೈರ್ಘೃಣ್ಯಾಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.**

**ಶ್ರೀಮದಾನಂದತೀರ್ಥಭಗವತ್ ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಎರಡನೆಯ ಅಧ್ಯಾಯದಲ್ಲಿ ಪ್ರಥಮ ಪಾದವು ಸಮಾಪ್ತವಾಯಿತು.**

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका –**

**सर्वेषां युक्तिविरोधानां परिहृतत्वात्किमुत्तरसूत्रेणेत्यतस्तात्पर्यमाह – अवशिष्टैरिति ।।**

ಎಲ್ಲಾ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾಯಿತು. ಪುನಃ ಈ ಸೂತ್ರವೇಕೆ ? ಎಂಬ ಪ್ರಶ್ನೆಗೆ ಉತ್ತರಿಸುವ ಸೂತ್ರದ ತಾತ್ಪರ್ಯವನ್ನು 'ಅವಶಿಷ್ಟೈಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿವರಣೆ - ಇಲ್ಲಿಯ ತನಕ ಆನಂದ ಮೊದಲಾದ ಗುಣಗಳನ್ನು ಮಹಾವಿಷ್ಣುವಿನಲ್ಲಿ ಸಮರ್ಥಿಸಿ ಯಾವುದೇ ಯುಕ್ತಿಗಳ ವಿರೋಧವಿಲ್ಲವೆಂದು ಸಮರ್ಥಿಸಿದ್ದಾಯಿತು. ಪುನಃ ಈ ಅಧಿಕರಣವು ವ್ಯರ್ಥವಲ್ಲವೆ ? ಎಂಬ ಆಕ್ಷೇಪಕ್ಕೆ 'ಅವಶಿಷ್ಟೈಃ ಉಪಸಂಹರತಿ' ಎಂಬ ಭಾಷ್ಯದ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅದನ್ನು ಟೀಕೆಯಲ್ಲಿ 'ಸರ್ವೇಷಾಂ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – विशिष्य प्रतिपादितेभ्यः स्रष्टृत्वादिगुणेभ्योऽवशिष्टैः सवगुणैः प्रतिपादितैरुपसंहरति । किमुक्तं भवति । उक्तावशिष्टान् सर्वगुणान् युक्तिविरोधपरिहारेण समर्थ्य विष्णोः पूर्णगुणत्वं निगमयत्यत्र सूत्रकर्तेत्यर्थः। अत एवात्र विष्णोः पूर्णगुणत्वे युक्तिविरोधपरिहारादस्ति शास्त्रादिसङ्गतिः ।**

ಹಿಂದಿನ ಅಧಿಕರಣಗಳಲ್ಲಿ ವಿಶೇಷವಾಗಿ ಪ್ರತಿಪಾದನೆ ಮಾಡಲ್ಪಟ್ಟ ಸ್ರಷ್ಟೃತ್ವಾದಿಗುಣಗಳನ್ನು ಬಿಟ್ಟು ಉಳಿದ ಆನಂದಾದಿ ಸಕಲಗುಣಗಳಿಂದ ಈ ಪಾದವನ್ನು ಉಪಸಂಹಾರ ಮಾಡುತ್ತಿದ್ದಾರೆ.

ಇಷ್ಟು ಹೇಳಿದಂತಾಯಿತು. ಹಿಂದಿನ ಅಧಿಕರಣದಲ್ಲಿ ಹೇಳದೆ ಇರುವ ಸಕಲಗುಣಗಳಿಗೆ ಯುಕ್ತಿ ವಿರೋಧವನ್ನು ಪರಿಹಾರ ಮಾಡುವ ಮೂಲಕ ವಿಷ್ಣುವಿಗೆ ಪೂರ್ಣಗುಣತ್ವವನ್ನು ಈ ಅಧಿಕರಣದಲ್ಲಿ ಸೂತ್ರಕಾರರು ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದಲೇ ವಿಷ್ಣುವಿನ ಪೂರ್ಣಗುಣತ್ವದಲ್ಲೇ ಯುಕ್ತಿವಿರೋಧವನ್ನು ಈ ಅಧಿಕರಣವು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ .

ವಿವರಣೆ - ಹಿಂದಿನ ಅಧಿಕರಣದಲ್ಲಿ ಜಗತ್‌ಸ್ರಷ್ಟೃತ್ವವಿಷಯದಲ್ಲಿರುವ ಯುಕ್ತಿವಿರೋಧವನ್ನು ಪರಿಹಾರ ಮಾಡಿದ್ದಾಯಿತು. ಆದರೆ ಆನಂದ ಮೊದಲಾದ ಗುಣಗಳಿಗೆ ಬರುವ ಯುಕ್ತಿಯ ವಿರೋಧವನ್ನು

ಆಕ್ಷೇಪ ಮಾಡಿ ಪರಿಹಾರ ಮಾಡಿಲ್ಲ. ಹೀಗೆ ಯಾವ ಗುಣಗಳ ವಿಷಯದಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡಿಲ್ಲವೋ ಆ ಎಲ್ಲಾ ವಿರೋಧಗಳ ಪರಿಹಾರವನ್ನು ಈ ಅಧಿಕರಣದಲ್ಲಿ ಸೂತ್ರಕಾರರು ಮಾಡಿ ಸಕಲಗುಣ ಪರಿಪೂರ್ಣತ್ವವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದ ಈ ಅಧಿಕರಣಕ್ಕೆ ಶಾಸ್ತ್ರಾದಿಸಂಗತಿಗಳು ಇರುತ್ತದೆ. ವಿಷ್ಣುವಿಷಯಕವಾದ್ದರಿಂದ ಶಾಸ್ತ್ರಸಂಗತಿಗಳು ಯುಕ್ತಿ ವಿರೋಧ ಪರಿಹಾರ ಇರುವುದರಿಂದ ಅಧ್ಯಾಯಸಂಗತಿ ಮತ್ತು ಪಾದಸಂಗತಿಗಳು ಇರುತ್ತವೆಂದು ತಿಳಿಯಬೇಕು. ಹಿಂದಿನ ಅಧಿಕರಣದಲ್ಲಿ ಜಗತ್ಕಾರಣತ್ವವಿಷಯದಲ್ಲಿರುವ ಯುಕ್ತಿವಿರೋಧವನ್ನು ಪರಿಹಾರ ಮಾಡಿದ ಮೇಲೆ ಬ್ರಹ್ಮಶಬ್ದಾರ್ಥವಾದ ಪೂರ್ಣಗುಣತ್ವದ ವಿಷಯದಲ್ಲಿ ಬರುವ ಯುಕ್ತಿ ವಿರೋಧವನ್ನು ಈ ಅಧಿಕರಣದಲ್ಲಿ ಮಾಡುತ್ತಿರುವುದರಿಂದ ಆನಂತರ್ಯಸಂಗತಿಯು ಕೂಡ ಇರುತ್ತದೆಂದು ತಿಳಿಯಬೇಕು. (ಭಾವಬೋಧ)

**ತತ್ವಪ್ರಕಾಶಿಕಾ – समस्तगुणसम्पूर्णो विष्णुरित्युक्तम् । तस्य च युक्तिविरुद्धत्वे पूर्वाध्यायो बाधितः स्यात् । अतोऽसौ परिहर्तव्यः । विष्णोर्गुणपूर्णत्वं विषयः । युक्तमयुक्तं वेति सन्देहः । पूर्वाधायोऽन्यत्रादर्शनं च सन्देहबीजम् ।**

ವಿಷ್ಣುವೇ ಸಕಲಗುಣಪರಿಪೂರ್ಣನಾಗಿದ್ದಾನೆಂದು ಹೇಳಲಾಯಿತು. ಇದಕ್ಕೆ ಯುಕ್ತಿವಿರೋಧವು ಪ್ರಾಪ್ತವಾದರೆ ಪ್ರಥಮಾಧ್ಯಾಯವೇ ಬಾಧಿತವಾಗುತ್ತದೆ. ಆದ್ದರಿಂದ ಇದನ್ನು ಪರಿಹಾರ ಮಾಡಲೇ ಬೇಕು. ಹಾಗಾಗಿ ವಿಷ್ಣುವಿನ ಗುಣಪರಿಪೂರ್ಣತ್ವವು ಅಧಿಕರಣದ ವಿಷಯ. ಯುಕ್ತವೋ ಅಯುಕ್ತವೋ? ಎಂದು ಸಂದೇಹ. ಪೂರ್ವಾಧ್ಯಾಯದಲ್ಲಿ ಹೇಳಲ್ಪಟ್ಟ ಗುಣಪೂರ್ಣತ್ವ ಹಾಗೂ ಇದು ಬೇರೆ ಕಡೆ ಕಾಣದಿರುವಿಕೆಯು ಸಂದೇಹಬೀಜ.

**ತತ್ವಪ್ರಕಾಶಿಕಾ – न युक्तमिति पूर्वः पक्षः । सर्वचेतनानामपूर्णत्व-नियमात् । अस्यापि चेतनत्वेनापूर्णताया अवश्यम्भावित्वात् । अन्यथातिप्रसङ्गदिति प्राप्ते सिद्धान्तयत्सूत्रं पठित्वा व्याचष्टे – सर्वेति ॥**

ವಿಷ್ಣುವಿಗೆ ಸಕಲಗುಣಪರಿಪೂರ್ಣತ್ವವು ಯುಕ್ತವಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ಏಕೆಂದರೆ ಸಕಲಚೇತನರು ಅಪೂರ್ಣರೇ ಆಗಿರುತ್ತಾರೆಂಬ ನಿಯಮವಿದೆ. ಇವನೂ ಕೂಡ ಚೇತನಾಗಿರುವುದರಿಂದ ಅಪೂರ್ಣನಾಗಿರುತ್ತಾನೆಂದೇ ಅವಶ್ಯವಾಗಿ ಒಪ್ಪಬೇಕು. ಇಲ್ಲದಿದ್ದರೆ ಅತಿಪ್ರಸಂಗವು ಪ್ರಾಪ್ತವಾಗುತ್ತದೆ.

ಈ ಆಕ್ಷೇಪವನ್ನು ನಿರಾಕರಣೆ ಮಾಡುತ್ತಾ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ 'ಸರ್ವ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಅನ್ಯಥಾ ಅತಿಪ್ರಸಂಗಾತ್' ಎಂಬ ಟೀಕಾಮಾತಿನ ಅಭಿಪ್ರಾಯ ಹೀಗಿದೆ- ಸಕಲ ಚೇತರಲ್ಲಿ ಸಕಲಗುಣಪರಿಪೂರ್ಣತ್ವವು ಕಾಣಿಸುತ್ತಿಲ್ಲ. ಎಲ್ಲೂ ಕಾಣಿಸದ ಈ ಗುಣವನ್ನು ಈಶ್ವರನಲ್ಲಿ ಅಂಗೀಕಾರ ಮಾಡಿದರೆ ಬೇರೆಡೆ ಕಾಣಿಸದ ಜಡತ್ವ ಅನಿತ್ಯಾದಿಗಳನ್ನು ಕೂಡ ಈಶ್ವರನಲ್ಲಿ
ಪರಿಪೂರ್ಣಚಂದ್ರಿಕಾ

ಒಪ್ಪಬೇಕಾಗುತ್ತದೆ. ಅಥವಾ ಸಜಾತೀಯವಾದ ವ್ಯಕ್ತಿಗಳ ನಡುವೆ ಒಂದಕ್ಕೆ ಮಾತ್ರ ವೈಲಕ್ಷಣ್ಯವನ್ನು ಒಪ್ಪಲು ಕಾರಣವಿಲ್ಲವೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ. (ಗುರ್ವರ್ಥದೀಪಿಕಾ)

**तत्वप्रकाशिका – नायुक्तं विष्णोः पूर्णत्वम् । तस्य चेतनत्वेऽपि स्वातन्त्र्यादिना सर्वगुणोपपत्तेः । स्वातन्त्र्यादिमतः पूर्णगुणत्वनियमात् ।**

ವಿಷ್ಣುವಿನಲ್ಲಿ ಸಕಲಗುಣಪರಿಪೂರ್ಣತ್ವವು ಅಯುಕ್ತವೇ ಅಲ್ಲ. ಇವನು ಚೇತನನಾಗಿದ್ದರೂ ಕೂಡ ಸ್ವಾತಂತ್ರ್ಯವೆಂಬ ಅಸಾಧಾರಣಧರ್ಮ ಇರುವುದರಿಂದ ಸಕಲಗುಣಪರಿಪೂರ್ಣವುಳ್ಳವನು ಆಗುತ್ತಾನೆ. ಸ್ವಾತಂತ್ರ್ಯಾದಿ ಅಸಾಧಾರಣಧರ್ಮವಿರುವವನಲ್ಲ. ಪೂರ್ಣಗುಣತ್ವವು ನಿಯಮೇನ ಇದ್ದೇ ಇರುತ್ತದೆ.

ವಿವರಣೆ - 'ಯತ್ರ ಚೇತನತ್ವಮ್ ನ ತತ್ರ ಸಕಲಗುಣಪರಿಪೂರ್ಣತ್ವಮ್' ವ್ಯಾಪ್ತಿಯನ್ನು ಪೂರ್ವಪಕ್ಷಕಾರರು ಹೇಳಿದರು. ಅದಕ್ಕೆ ವಿರುದ್ಧವಾಗಿ 'ಯತ್ರ ಸ್ವಾತಂತ್ರ್ಯಮ್ ತತ್ರ ಗುಣಪರಿಪೂರ್ಣತ್ವಂ' ಎಂಬ ವ್ಯಾಪ್ತಿಯನ್ನು ನಾವು ಹೇಳುತ್ತಿದ್ದೇವೆ 'ವಿಷ್ಣುಃ ಸಕಲಗುಣಪರಿಪೂರ್ಣಃ ಸ್ವತಂತ್ರತ್ವಾತ್' ಎಂಬುದಾಗಿ ಅನುಮಾನ ಪ್ರಯೋಗ ಮಾಡಿದರೆ ಅಪ್ರಯೋಜಕಾಶಂಕೆಯನ್ನು ಪೂರ್ವಪಕ್ಷಕಾರರಿಗೆ ಮಾಡಲು ಸಾಧ್ಯವಿಲ್ಲ. ಆದರೆ 'ವಿಷ್ಣುಃ ನ ಗುಣಪರಿಪೂರ್ಣಃ ಚೇತನತ್ವಾತ್' ಎಂದು ಪೂರ್ವಪಕ್ಷಕಾಕರರು ಅನುಮಾನವನ್ನು ಪ್ರಯೋಗ ಮಾಡಿದರೆ ಚೇತನತ್ವವಿದ್ದರೂ ಗುಣಪರಿಪೂರ್ಣತ್ವವೇ ಇರಲಿ ಎಂದು ನಾವು ಅಪ್ರಯೋಜಕ ಶಂಕೆಯನ್ನು ಮಾಡಿದಾಗ ಅವರಲ್ಲಿ ಉತ್ತರವಿಲ್ಲ.

ಪರಮಾತ್ಮನು ಸರ್ವತಂತ್ರಸ್ವತಂತ್ರನಾಗಿರುವುದರಿಂದ ತನ್ನ ಮಹಿಮೆಗೆ ಪೂರಕವಾದ ಸಾರ್ವಜ್ಞ್ಯಾದಿಗುಣಗಳೆಲ್ಲವನ್ನು ಅಪೇಕ್ಷಿಸುತ್ತಾನೆ. ಮತ್ತು ಅಂಥ ಗುಣಗಳನ್ನು ಹೊಂದಲು ಸ್ವಾತಂತ್ರ್ಯ ಇರುವುದರಿಂದ ಸಮರ್ಥನೂ ಕೂಡ ಆಗಿದ್ದಾನೆ. ಹಾಗಾಗಿ 'ಸಕಲಗುಣಪ್ರಯಜ್ಯತೇ ಸತಿ ಸಮರ್ಥತ್ವಾತ್ ಸಕಲಶುಭಗುಣವಾನ್ ಹರಿಃ' ಎಂಬುದಾಗಿ ಮತ್ತೊಂದು ಯುಕ್ತಿಯನ್ನು ಕೂಡ ಇದರಿಂದ ಸೂಚನೆ ಮಾಡಿದಂತಾಯಿತು. 'ಸರ್ವಧರ್ಮೋಪಪತ್ತೇಶ್ಚ' ಎಂಬ ಸೂತ್ರದಿಂದ ಈ ಯುಕ್ತಿಯು ಸೂಚಿತವಾಗಿದೆ. (ಗುರ್ವರ್ಥದೀಪಿಕಾ)

**तत्वप्रकाशिका – न केवलं युक्त्या सर्वधर्मोपपत्तिः किं तर्हि 'गुणाः श्रुताः' इति सर्वधर्मोपपादकश्रुतेश्चेति भावः । सुविरुद्धा लोकदृष्ट्या । अश्रुता अपि रमादिचिन्त्यास्तदचिन्त्याश्चेत्यर्थः । अतो विष्णोः सर्वगुणपूर्णत्वे युक्तिविरोध-गन्धाभावादुक्तं सर्वमुपपन्नमिति सिद्धम् ।। ३८ ।।**

।। इति श्रीमदानन्दतीर्थभगवत्पादाचार्यविरचितस्य श्रीमद्ब्रह्मसूत्रभाष्यस्य टीकायां

श्रीमज्जयतीर्थमुनिविरचितायां तत्त्वप्रकाशिकायां

द्वितीयाध्यायस्य प्रथमः पादः ।। श्रीरस्तु ।।

ಸರ್ವಧರ್ಮೋಪಪತ್ತ್ಯಧಿಕರಣ (೨-೧-೧೧)

ಕೇವಲ ಯುಕ್ತಿಯಿಂದಷ್ಟೇ ಸಕಲಧರ್ಮಗಳು ವಿಷ್ಣುವಿನಲ್ಲಿ ಉಪಪನ್ನವಾಗುತ್ತವೆ ಎಂದಲ್ಲ. 'ಗುಣಾಃ ಶ್ರುತಾಃ' ಎಂಬ ಶ್ರುತಿಪ್ರಮಾಣ ಇರುವುದರಿಂದಲೂ ಕೂಡ ಸಕಲಗುಣಗಳುಳ್ಳವನಾಗುತ್ತಾನೆ. ಹೀಗೆ 'ಸುವಿರುದ್ಧಾಃ' ಎಂಬುದಕ್ಕೆ ಲೋಕದೃಷ್ಟಿಯಿಂದಲೂ ವಿರುದ್ಧವಾದ ಧರ್ಮಗಳು ಎಂದರ್ಥ. 'ಅಶ್ರುತಾಃ' ಎಂಬುದಕ್ಕೆ ನಮ್ಮಿಂದ ಅಶ್ರುತವಾಗಿದ್ದರೂ ಕೂಡ ರಮಾದೇವಿ ಮೊದಲಾದವರಿಂದ ಚಿಂತ್ಯವಾದ ಮತ್ತು ಅಚಿಂತ್ಯವಾದ ಗುಣಗಳು ಇರುತ್ತವೆ ಎಂದರ್ಥ.

ಆದ್ದರಿಂದ ಮಹಾವಿಷ್ಣುವಿನಲ್ಲಿರುವ ಸಕಲಗುಣಪರಿಪೂರ್ಣತ್ವಕ್ಕೆ ಯುಕ್ತಿವಿರೋಧದ ಗಂಧವೂ ಕೂಡ ಇರುವುದಿಲ್ಲ. ಆದ್ದರಿಂದ ಪ್ರಥಮಾಧ್ಯಾಯದಲ್ಲಿ ಸಮರ್ಥನೆ ಮಾಡಿದ ಸಕಲಗುಣ ಪರಿಪೂರ್ಣತ್ವವು ಉಪಪನ್ನವಾಯಿತು.

ವಿವರಣೆ - ಭಾಷ್ಯದಲ್ಲಿ 'ಗುಣಾಃ ಶ್ರುತಾಃ' ಇತ್ಯಾದಿಯಾಗಿ ಶ್ರುತಿಯನ್ನು ಉಲ್ಲೇಖ ಮಾಡಲಿಲ್ಲ. ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು -

ಲೋಕದೃಷ್ಟಿಯಿಂದ ವಿರುದ್ಧವಾದ ಗುಣಗಳು ಭಗವಂತನಲ್ಲಿ ಅವಿರುದ್ಧವಾಗಿವೆ. ಇದರಂತೆ ವೇದದಲ್ಲಿ ತಿಳಿಸದೆ ಇರುವ ಗುಣಗಳು ಭಗವಂತನಲ್ಲಿ ಇರುತ್ತವೆ. ವಾಸ್ತವಿಕವಾಗಿ ಅನುಕ್ತಂ ಪಂಚಭಿರ್ವೇದೈಃ ನ ವಸ್ತು ಅಸ್ತಿ' ಎಂಬ ಮಾತಿನಂತೆ ವೇದದಲ್ಲಿ ಹೇಳದಿರುವ ವಿಚಾರವೇ ಇರುವುದಿಲ್ಲ. ಆದ್ದರಿಂದ 'ಶ್ರುತಾಃ' ಎಂದು ಹೇಳುವುದು ಹೇಗೆ ಸಾಧ್ಯ ? ಎಂಬುದಕ್ಕೆ ಸಾಮಾನ್ಯವಾಗಿ ಶ್ರುತವಾಗಿದ್ದರೂ ವಿಶೇಷವಾಗಿ ಶ್ರುತವಾಗಿರುವುದಿಲ್ಲ ಎಂದರ್ಥ. ಈ ಶ್ರುತವಾಗದ ಗುಣಗಳು ರಮಾದೇವಿ ಚತುರ್ಮುಖ ಮೊದಲಾದವರಿಂದ ಚಿಂತ್ಯವಾದದ್ದು ಇವೆ. ಅಚಿಂತ್ಯವಾದದ್ದು ಇರುತ್ತವೆ. ಚತುರ್ಮುಖನು ಎಷ್ಟು ಗುಣಗಳನ್ನು ಚಿಂತಿಸುತ್ತಾನೋ ಅದಕ್ಕಿಂತ ಹೆಚ್ಚಿನ ಗುಣಗಳು ಪರಮಾತ್ಮನಲ್ಲಿದೆ. ಚತುರ್ಮುಖನಿಗಿಂತ ಹೆಚ್ಚುಗುಣಗಳನ್ನು ರಮಾದೇವಿಯು ಚಿಂತಿಸುತ್ತಾಳೆ. ಅದಕ್ಕಿಂತ ಹೆಚ್ಚಿನ ಗುಣಗಳು ಭಗವಂತನಲ್ಲಿದೆ. ಎಂಬುದಷ್ಟೇ ಇದರ ಅಭಿಪ್ರಾಯ.

ಇಲ್ಲಿಗೆ ಸರ್ವಧರ್ಮೋಪಪತ್ತ್ಯಧಿಕರಣವು ಮುಗಿಯಿತು

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ಬ್ರಹ್ಮಸೂತ್ರಭಾಷ್ಯದ ಟೀಕೆಗೆ ಶ್ರೀಮದ್ ಜಯತೀರ್ಥಭಿಕ್ಷುಗಳಿಂದ ರಚಿತವಾದ ತತ್ತ್ವಪ್ರಕಾಶಿಕೆಯಲ್ಲಿ ಎರಡನೆ ಅಧ್ಯಾಯದ ಮೊದಲನೆಯ ಪಾದವು ಸಮಾಪ್ತವಾಯಿತು.

## ಸರ್ವಧರ್ಮೋಪಪತ್ತ್ಯಧಿಕರಣ
## (೨-೧-೧೧)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
### ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ
### ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## सर्वधर्मोपपत्त्यधिकरणम्

### ನಿರ್ದೋಷಗುಣಪೂರ್ಣತ್ವದಲ್ಲಿ ಯುಕ್ತಿವಿರೋಧ ಪರಿಹಾರ

**सर्वधर्मोपपत्तेश्च ।। पूर्वाधिकरणेष्वेकैकगुण एकैकदोषाभावे च युक्त्यविरोध उक्तः । अत्र तूपसंहारसूत्रे सर्वत्रेति सङ्गत्यादिकम् ।**

ಹಿಂದಿನ ಎಲ್ಲಾ ಅಧಿಕರಣಗಳಲ್ಲಿ ಒಂದೊಂದೇ ಗುಣಗಳ ವಿಷಯದಲ್ಲಿ ಹಾಗೂ ಒಂದೋದೇ ದೋಷಾಭಾವಗಳ ವಿಷಯದಲ್ಲಿ ಯುಕ್ತಿವಿರೋಧವಿಲ್ಲವೆಂದು ತೋರಿಸಲಾಯಿತು. ಕೊನೆಯ ಉಪಸಂಹಾರ ಸೂತ್ರದಲ್ಲಿ ಎಲ್ಲಾ ಗುಣಗಳ ವಿಷಯದಲ್ಲಿ ಹಾಗೂ ಎಲ್ಲಾ ದೋಷಾಭಾವಗಳ ವಿಷಯದಲ್ಲಿ ಯುಕ್ತಿಯ ಅವಿರೋಧವನ್ನು ತೋರಿಸುತ್ತಿದ್ದಾರೆ. ಆದ್ದರಿಂದ ಈ ಅಧಿಕರಣಕ್ಕೆ ಸಂಗತಿಯು ಇರುತ್ತದೆ.

**अत्र विष्णोरुक्तं निर्दोषगुणपूर्णत्वं न युक्तमुत युक्तमिति चिन्ता । तदर्थं किं गुणित्वे कदाचिद्दोषित्वं प्रयोजकं अत एव दोषाभावे गुणाभाव उत दोषित्वे दोषपरिहाराशक्तिर्गुणाभावे च गुणसम्पादनाशक्तिः प्रयोजिकेति ।**

ಈ ಅಧಿಕರಣದ ಸಂಶಯಪರಂಪರೆ ಹೀಗಿದೆ - ಶ್ರೀಹರಿಯೇ ನಿರ್ದೋಷಗುಣಪೂರ್ಣನಾಗಿದ್ದಾನೆಂದು ಹೇಳಲಾಯಿತು. ಇದು ಯುಕ್ತವೋ, ಅಯುಕ್ತವೋ? ಎಂಬುದು ಪ್ರಧಾನವಾದ ಸಂಶಯ. ಇದರ ಪರಿಹಾರಕ್ಕಾಗಿ ಈಶ್ವರನು ಗುಣವುಳ್ಳವನಾದರೆ, ಕೆಲವೊಮ್ಮೆ ದೋಷವುಳ್ಳವನಾಗಬೇಕಾಗುತ್ತದೆ. ಆದ್ದರಿಂದಲೇ ದೋಷವು ಶ್ರೀಹರಿಯಲ್ಲಿ ಇಲ್ಲವೆಂದಾದರೆ, ಗುಣವೂ ಕೂಡ

ಇಲ್ಲವೆಂದೇ ಅರ್ಥ ಎಂದು ಹೇಳಬೇಕೋ? ಅಥವಾ ದೋಷವುಳ್ಳವನಾಗಬೇಕಾದರೆ ದೋಷವನ್ನು ಪರಿಹರಿಸಿಕೊಳ್ಳುವ ಶಕ್ತಿ ಇರುವುದಿಲ್ಲ ಎಂದಾಗುತ್ತದೆ. ಗುಣಗಳಿಲ್ಲ ಎಂದಾದರೆ ಗುಣವನ್ನು ಸಂಪಾದನೆ ಮಾಡುವ ಶಕ್ತಿ ಇಲ್ಲ ಎಂಬುದು ಪ್ರಯೋಜಕವಾಗುತ್ತದೆ. ಹೀಗೆ ಹೇಳಬೇಕೋ?

**पूर्वपक्षस्तु । गुणिनः कदाचिद्दोषित्वनियमादीश्वरस्य गुणित्ववद्दोषित्वं वा दोषाभाववद्गुणाभावो वा । ननु चेतनान्तरेष्वदृष्टासर्वगुणपूर्तिर्दोषमात्राराहित्यं चेति।**

ಅಧಿಕರಣದ ಪೂರ್ವಪಕ್ಷ ಹೀಗಿದೆ - ಯಾರು ಗುಣವುಳ್ಳವನು ಆಗಿರುವನೋ, ಅವನು ಕೆಲವೊಮ್ಮೆ ದೋಷವುಳ್ಳವನೂ ಕೂಡ ಆಗಿರುತ್ತಾನೆ ಎಂಬುದು ಲೋಕಸಿದ್ಧ ನಿಯಮವಾಗಿದೆ. ಈಶ್ವರನು ಗುಣಿ ಆಗಿರುವಂತೆ ದೋಷಿಯೂ ಕೂಡ ಆಗಬೇಕು. ಅಥವಾ ದೋಷ ಇಲ್ಲದವನಾದ್ದರಿಂದ ಗುಣಗಳು ಇಲ್ಲದವನಾಗಬೇಕು. ಇವೆರಡನ್ನು ಬಿಟ್ಟು, ಬೇರೆ ಯಾವುದೇ ಚೇತನದಲ್ಲಿ ಕಾಣದ ಸಕಲಗುಣಪೂರ್ಣತ್ವವನ್ನು ಹಾಗೂ ಸಕಲದೋಷಗಳ ಅಭಾವವನ್ನು ಹೇಳುವುದು ಸರಿಯಲ್ಲ.

**सिद्धान्तस्तु ।**

**नित्यनिर्मुक्तदोषं च सदा सम्प्राप्तसद्गुणम् ।**
**परं ब्रह्म भवेत्तत्र प्रेप्साशक्तियुतत्वतः ॥१॥**

**ब्रह्म सदा प्राप्तसर्वसद्गुणं तत्प्रेप्सुत्वे सति तत्र शक्तत्वात् संमतवत् ।**

ಅಧಿಕರಣದ ಸಿದ್ಧಾಂತ ಹೀಗಿದೆ -

ನಿತ್ಯನಿರ್ಮುಕ್ತದೋಷಂ ಚ ಸದಾ ಸಂಪ್ರಾಪ್ತಸದ್ಗುಣಮ್ ।
ಪರಂ ಬ್ರಹ್ಮ ಭವೇತ್ತತ್ರ ಪ್ರೇಪ್ಸಾಶಕ್ತಿಯುತತ್ವತಃ ॥೧॥

ನಿತ್ಯವಾಗಿ ಎಲ್ಲಾ ದೋಷಗಳಿಂದ ಅಧಿಕನಾಗಿದ್ದಾನೆ. ನಿರಂತರವಾಗಿ ಎಲ್ಲಾ ಸದ್ಗುಣಗಳಿಂದ ಸಂಪ್ರಾಪ್ತನಾಗಿದ್ದಾನೆ. ಅವನಲ್ಲಿರುವ ಪ್ರೇಪ್ಸಾಶಕ್ತಿಯಿಂದ ಈ ಎರಡು ಮಹಾಗುಣಗಳು ಯುಕ್ತವಾಗುತ್ತವೆ.

ಇಲ್ಲಿ ಹೀಗೆ ಅನುಮಾನವನ್ನು ಮಾಡುತ್ತೇವೆ - 'ಬ್ರಹ್ಮ ಸದಾ ಪ್ರಾಪ್ತಸರ್ವಸದ್ಗುಣಂ ತತ್ ಪ್ರೇಪ್ಸುತ್ವೇ ಸತಿ ತತ್ರ ಶಕ್ತತ್ವಾತ್ ಸಮ್ಮತವತ್' ಲೋಕದಲ್ಲಿ ಯಾರು ಯಾವುದನ್ನು ಹೊಂದಲು ಬಯಸಿ ಅದನ್ನು ಹೊಂದಲು ಶಕ್ತನಾಗಿರುತ್ತಾನೋ, ಅವನು ಆ ಗುಣವನ್ನು ಹೊಂದುತ್ತಾನೆ. ಅದರಂತೆ ಬ್ರಹ್ಮನು ಸಕಲಗುಣಗಳನ್ನು ಹೊಂದಲು ಬಯಸಿ, ಅದನ್ನು ಹೊಂದಲು ಶಕ್ತನಾಗಿದ್ದಾನೆ. ಆದ್ದರಿಂದ ಸಕಲಗುಣಪರಿಪೂರ್ಣನಾಗಿದ್ದಾನೆ.

**तथा सदा त्यक्तसर्वदोषं तज्जिहासुत्वे सति तत्र शक्तत्वात् । सम्मतवत् ।**

ಇದರಂತೆ ಮತ್ತೊಂದು ಅನುಮಾನವನ್ನೂ ಕೂಡ ಮಾಡುತ್ತೇವೆ. ಬ್ರಹ್ಮ 'ಸದಾ ತ್ಯಕ್ತಸರ್ವದೋಷಂ ತಜ್ಜಿಹಾಸುತ್ವೇ ಸತಿ ತತ್ರ ಶಕ್ತತ್ವಾತ್ ಸಮ್ಮತವತ್' ಲೋಕದಲ್ಲಿ ಯಾವ ದೋಷವನ್ನು ಬಿಡಲು ಯಾರು ಸಮರ್ಥನಾಗಿದ್ದಾನೋ, ಅವನು ಆ ದೋಷದಿಂದ ರಹಿತನೇ ಆಗಿರುತ್ತಾನೆ. ಅದರಂತೆ ಬ್ರಹ್ಮನು ಎಲ್ಲಾ ದೋಷಗಳನ್ನು ಬಿಡಲು ಇಚ್ಛಿಸಿ ಅದನ್ನು ಬಿಡಲು ಸಮರ್ಥನಾಗಿರುತ್ತಾನೆ. ಆದ್ದರಿಂದಲೇ ನಿರಂತರವಾಗಿ ಸಕಲದೋಷಗಳಿಂದ ರಹಿತನಾಗಿದ್ದಾನೆ.

**प्रेप्सादिकं च प्रेक्षावत्त्वेनेत्युपपत्त्यनुगृहीतया सौत्रचशब्दोपात्तया ''गुणाः श्रुताः'' इत्यादिभाष्योदाहृतया श्रुत्या गुणदोषाभावरूपसर्वधर्मसिद्धिरिति ।**

ಶ್ರೀಹರಿಗೆ ಸಕಲಗುಣಗಳನ್ನು ಹೊಂದಬೇಕೆಂಬ ಇಚ್ಛೆ ಹಾಗೂ ಸಕಲದೋಷಗಳಿಂದ ದೂರವಾಗಿರಬೇಕೆಂಬ ಅಪೇಕ್ಷೆಯು ಇದೆಯೆಂದು ಹೇಗೆ ನಿರ್ಣಯಿಸುತ್ತೀರಿ? ಎಂದರೆ ಪ್ರೇಕ್ಷಾವಂತನಾಗಿರುವುದರಿಂದ ಎಂಬ ಹೇತುವಿನಿಂದ ಸಾಧನೆ ಮಾಡುತ್ತೇವೆ. ಹೀಗೆ ಉಪಪತ್ತ್ಯನುಗೃಹೀತವಾದ ಸೂತ್ರದಲ್ಲಿರುವ ಚಶಬ್ದದಿಂದ ತಿಳಿಸಲ್ಪಟ್ಟ 'ಗುಣಾಃ ಶ್ರುತಾ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತ್ಯಾದಿಗಳಿಂದ ಪರಮಾತ್ಮನು ಸಕಲಗುಣಪರಿಪೂರ್ಣನಾಗಿದ್ದಾನೆ. ಸಕಲದೋಷಗಂಧ ವಿದುರನಾಗಿದ್ದಾನೆ. ಆದ್ದರಿಂದಲೇ ಸರ್ವಧರ್ಮಗಳು ಅವನಲ್ಲಿ ಸಿದ್ಧವಾಗುತ್ತವೆ.

**इदं सूत्रं सर्वधर्मविनिर्मुक्तब्रह्मवादिनां प्रतिकूलमिति स्फुटमेव ।**

'ಸರ್ವಧರ್ಮೋಪಪತ್ತೇಶ್ಚ' ಎಂಬ ಈ ಸೂತ್ರವು ಸಕಲಧರ್ಮಗಳನ್ನು ಬ್ರಹ್ಮನಲ್ಲಿ ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದಲೇ ಅದ್ವೈತಿಗಳಿಗೆ ಇದು ಪ್ರತಿಕೂಲವಾಯಿತು. ಏಕೆಂದರೆ ಅವರು ಬ್ರಹ್ಮನು ಸರ್ವಧರ್ಮವಿನಿರ್ಮುಕ್ತನಾಗಿದ್ದಾನೆನ್ನುತ್ತಾನೆ.

**अस्मिन्पाद आद्येऽधिकरणत्रिके वेदस्याप्रमाणत्वादीश्वरस्यैवाभावाज्जन्मादिसूत्रोक्तं लक्षणमसम्भवीत्याक्षिप्य तन्निरास इत्याद्यत्रिकमेका पेटिका ।**

ಈ ಪಾದದಲ್ಲಿ ಪ್ರಾರಂಭದ ಮೂರು ಅಧಿಕರಣಗಳು ಒಂದು ಪೇಟಿಕೆ. ಅದು ಹೀಗೆ - ವೇದವು ಅಪ್ರಮಾಣವಾಗಿದೆ. ಆದ್ದರಿಂದ ಈಶ್ವರನ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲದ್ದರಿಂದ ಈಶ್ವರನೇ ಇಲ್ಲ. ಹೀಗಿರುವಾಗ ಜನ್ಮಾದಿಸೂತ್ರದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣತ್ವ ಎಂಬ ಲಕ್ಷಣವು ಅಸಂಭಾವಿತವಾಗುತ್ತದೆ. ಹೀಗೆ ಆಕ್ಷೇಪ ಮಾಡಿ, ಇದರ ಖಂಡನೆಯನ್ನು ಮಾಡಲು ಪ್ರಾರಂಭದ ಮೂರು ಅಧಿಕರಣಗಳು ಹೊರಟವೆ. ಆದ್ದರಿಂದ ಸ್ಮೃತ್ಯಧಿಕರಣ, ನ ವಿಲಕ್ಷಣತ್ವಾಧಿಕರಣ, ಅಭಿಮಾನ್ಯಧಿಕರಣ ಈ ಮೂರು ಒಂದೇ ಪೇಟಿಕೆ ಆಗುತ್ತವೆ.

**तत्राप्याद्येऽधिकरणे स्मृतिविरोधेन साक्षात् सर्ववेदप्रामाण्याक्षेपः । द्वितीये कारीर्यादिविधिवाक्याप्रामाण्यसाधकयुक्तिविरोधमुखेन सर्ववेदप्रामाण्याक्षेपः । तृतीये ''मृदब्रवीत्'' इत्यादि सिद्धार्थवाक्याप्रामाण्यसाधक-दृष्टयुक्तिविरोधमुखेन सर्ववेदप्रामाण्याक्षेपः ।**

ಈ ಮೂರು ಅಧಿಕರಣಗಳಲ್ಲೂ ಕೂಡ ಮೊದಲನೆಯ ಸ್ಮೃತ್ಯಧಿಕರಣದಲ್ಲಿ ಸ್ಮೃತಿಯ ವಿರೋಧವನ್ನು ಪರಿಹಾರ ಮಾಡುವ ಮೂಲಕ ಸಾಕ್ಷಾತ್ತಾಗಿ ಸಕಲವೇದಗಳ ಪ್ರಾಮಾಣ್ಯವನ್ನು ಆಕ್ಷೇಪ ಮಾಡಲಾಗಿದೆ. ಇದರ ಮುಂದಿನ ನ ವಿಲಕ್ಷಣತ್ವಾಧಿಕರಣದಲ್ಲಿ ಕಾರೀರ್ಯಾದಿ ವಿಧಿವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಸಾಧಿಸುವ ಯುಕ್ತಿಯ ವಿರೋಧವನ್ನು ಪರಿಹಾರ ಮಾಡುವ ಮೂಲಕ ಸಕಲ ವೇದದ ಪ್ರಾಮಾಣ್ಯವನ್ನು ಆಕ್ಷೇಪ ಮಾಡಲಾಗಿದೆ. ಮೂರನೆಯ ಅಭಿಮಾನ್ಯಧಿಕರಣದಲ್ಲಿ 'ಮೃದಬ್ರವೀತ್' ಇವೇ ಮೊದಲಾದ ಸಿದ್ಧಾರ್ಥವಾದ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಸಾಧಿಸುವ ದೃಷ್ಟಯುಕ್ತಿವಿರೋಧದ ಮೂಲಕ ಸರ್ವವೇದದ ಪ್ರಾಮಾಣ್ಯವನ್ನು ಆಕ್ಷೇಪ ಮಾಡಲಾಗಿದೆ. ಹೀಗೆ ಕ್ರಮವಾಗಿ ಅಧಿಕರಣಗಳ ವಿನ್ಯಾಸವು ಸ್ವರಸವಾಗಿವೆ.

**चतुर्थमारभ्याधिकरणचतुष्टये वेदप्रामाण्यमीश्वरस्वरूपं च स्वीकृत्योक्तलक्षणाक्षेप इत्यधिकरणचतुष्टयमेका पेटिका । तत्राद्ये श्रुत्युपसर्जनकयुक्ति विरोधेन लक्षणमसम्भवीत्याक्षेपः ।**

ನಾಕನೆಯ ಅಧಿಕರಣದಿಂದ ಆರಂಭಿಸಿ ನಾಕು ಅಧಿಕರಣಗಳು ಒಂದೇ ಪೇಟಿಕೆ ಎನಿಸುತ್ತವೆ. ಏಕೆಂದರೆ ವೇದಪ್ರಾಮಾಣ್ಯ ಹಾಗೂ ಈಶ್ವರಸ್ವರೂಪವನ್ನು ಅಂಗೀಕಾರ ಮಾಡಿ, ಈಶ್ವರನ ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವನ್ನು ಆಕ್ಷೇಪ ಮಾಡುತ್ತಿರುವುದರಿಂದ ಈ ನಾಕು ಅಧಿಕರಣಗಳು ಒಂದೇ ಅವಚ್ಛೇದಕಕೋಟಿಯಲ್ಲಿ ಸೇರುತ್ತದೆ.

ಈ ನಾಕರಲ್ಲಿಯೂ ಮೊದಲನೆಯ ಅಧಿಕರಣವು ಶ್ರುತಿಯ ಬೆಂಬಲವುಳ್ಳ ಯುಕ್ತಿಯ ವಿರೋಧದ ಮೂಲಕ, ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವು ಅಸಂಭಾವಿತವಾಗಿವೆ ಎಂಬ ಆಕ್ಷೇಪವನ್ನು ನಿರಾಕರಣೆ ಮಾಡುತ್ತಿದೆ.

ವಿವರಣೆ - ಸರ್ವೇ ಭಾವಾಃ ಪ್ರಳಯೇ ಅಸದ್ಭವಿತುಂ ಅರ್ಹಂತಿ ಭಾವತ್ವಾತ್' ಎಂಬ ಅನುಮಾನದಿಂದ ಈಶ್ವರನು ಪ್ರಳಯಕಾಲದಲ್ಲಿ ಇರುವುದಿಲ್ಲವೆಂದು ಯುಕ್ತಿಯು ಸಮರ್ಥಿಸುತ್ತಿದೆ. ಇದಕ್ಕೆ 'ಅಸದೇವೇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳು ಆಧಾರವಾಗಿವೆ. ಹೀಗೆ ಈಶ್ವರನೇ ಇಲ್ಲದ ಕಾರಣ ಅವನಲ್ಲಿ ಜಗಜ್ಜನ್ಮಾದಿಕಾರಣತ್ವವು ಅಸಂಭಾವಿತವಾಗುತ್ತದೆಂಬುದು ಅಸದಧಿಕರಣದ ಅಭಿಪ್ರಾಯ.

**द्वितीये बहुश्रुतिसिद्धयुक्तिविरोधेन लक्षणमसम्भव्यतिव्याप्तं चेत्याक्षेपः ।**

ಸರ್ವಧರ್ಮೋಪಪತ್ತ್ಯಧಿಕರಣ (2-1-11)

ಎರಡನೆಯ ಭೋಕ್ತ್ರಧಿಕರಣದಲ್ಲಿ ಬಹುಶ್ರುತಿಸಿದ್ಧವಾದ ಯುಕ್ತಿಯ ವಿರೋಧದ ಮೂಲಕ ಲಕ್ಷಣವು ಅಸಂಭಾವಿತವಾಗಿದೆ. ಹಾಗೂ ಅತಿವ್ಯಾಪ್ತವಾಗಿದೆಯೆಂದು ಆಕ್ಷೇಪ ಮಾಡಲಾಗಿದೆ.

**ವಿವರಣೆ** - 'ವಿಷ್ಣುಃ ಜಗತ್‌ಕರ್ತಾನ ಭವತಿ ಅಸರ್ವಕರ್ತೃಜೀವಾಭಿನ್ನತ್ವಾತ್' ಎಂಬ ಅನುಮಾನದಲ್ಲಿ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯಿಂದ ಹೇತುವು ಪಕ್ಷದಲ್ಲಿ ಸಿದ್ಧವಾಗುತ್ತದೆ. ಆದ್ದರಿಂದ ಈ ಅನುಮಾನದಲ್ಲಿ ಪಕ್ಷಧರ್ಮತ್ವವು ಶ್ರುತಿಸಿದ್ಧವಾಯಿತು. ಹಿಂದಿನ ಅಧಿಕರಣದಲ್ಲಿ ಪ್ರತಿಜ್ಞಾಭಾಗಕ್ಕೆ ಕೇವಲ ಶ್ರುತಿಸಂವಾದವನ್ನು ಹೇಳಲಾಗಿತ್ತು. ಇಲ್ಲಿ ಪಕ್ಷಧರ್ಮತಾವಿಗೆ ಶ್ರುತಿಸಿದ್ಧತ್ವವನ್ನು ಹೇಳುತ್ತಿದ್ದಾರೆ. ಈ ವ್ಯತ್ಯಾಸವನ್ನು ಗಮನಿಸಬೇಕು.

**तृतीये विष्णोः कर्तृत्वेऽपि बहुयुक्तिविरोधाज्जन्मादिसूत्राभिप्रेतं स्वतन्त्रकर्तृत्वमसम्भवीत्याक्षेपः ।**

ಮೂರನೆಯ ಆರಂಭಣಾಧಿಕರಣದಲ್ಲಿ ವಿಷ್ಣುವಿನ ಕರ್ತೃತ್ವವಿಷಯದಲ್ಲೂ ಕೂಡ ಅನೇಕ ಯುಕ್ತಿಗಳ ವಿರೋಧವಿರುವುದರಿಂದ ಜನ್ಮಾದಿಸೂತ್ರದಿಂದ ಅಭಿಪ್ರೇತವಾದ ಸ್ವತಂತ್ರಕರ್ತೃತ್ವವು ಅಸಂಭಾವಿತವಾಗುತ್ತದೆ ಎಂದು ಆಕ್ಷೇಪ ಮಾಡಲಾಗಿದೆ.

**ವಿವರಣೆ** - ಮೂರನೆಯ ಆರಂಭಣಾಧಿಕರಣದಲ್ಲಿ ಸ್ವತಂತ್ರಕರ್ತೃತ್ವವನ್ನು ಆಕ್ಷೇಪ ಮಾಡಲಾಗಿದೆ. ಪ್ರಕೃತ್ಯಾದಿಗಳು ಜಗತ್ತಿಗೆ ಸ್ವತಃ ಕಾರಣವಾಗಲು ಸಾಧ್ಯವಿರುವಾಗ ಪರಮಾತ್ಮನೇಕೆ ಕಾರಣವೆಂದು ಹೇಳಬೇಕು? ಮತ್ತು ಪ್ರಕೃತ್ಯಾದಿಗಳು ಪರಮಾತ್ಮನ ಅಧೀನವೆಂದು ಏಕೆ ಹೇಳಬೇಕು ? ಎಂಬುದು ಆಕ್ಷೇಪದ ಸಾರ.

**चतुर्थे तु विष्णोर्महदादौ स्वतन्त्रकर्तृत्वेऽपि श्रुतिप्रत्यक्षसंवादियुक्तिविरोधान्न घटादिकर्तृत्वमित्याक्षेपः ।**

ನಾಕನೆಯದ್ದು 'ಇತರವ್ಯಪದೇಶಾಧಿಕರಣ', ಇದರಲ್ಲಿ ವಿಷ್ಣು ಮಹತ್ತತ್ತ್ವ ಮೊದಲಾದವುಗಳಿಗೆ ಸ್ವತಂತ್ರಕಾರಣನಾಗಲಿ, ಆದರೆ ಘಟಪಟಾದಿಕರ್ತೃ ಆಗುವುದು ಬೇಡ. 'ಜೀವಾದ್‌ಭವಂತಿ ಭೂತಾನಿ' ಇತ್ಯಾದಿ ಶ್ರುತಿಗಳು ಹಾಗೂ ಪ್ರತಿಯೊಬ್ಬರ ಪ್ರತ್ಯಕ್ಷ ಇವೆರಡರ ಸಂವಾದವುಳ್ಳ ಯುಕ್ತಿಯು ಘಟಪಟಾದಿಕರ್ತೃತ್ವವನ್ನು ಜೀವಾದಿಗಳಿಗೆ ಸಾಧಿಸುತ್ತಿದೆ. ಆದ್ದರಿಂದ ಪರಮಾತ್ಮನು ಘಟಪಟಾದಿಗಳಿಗೆ ಕರ್ತೃ ಆಗುವುದು ಬೇಡ ಎಂದು ಆಕ್ಷೇಪ ಮಾಡಲಾಗಿದೆ.

**अष्टमे सप्तमोक्तो जीवस्य स्वतन्त्रकर्तृत्वे यस्तर्कविरोधः सः ईश्वरेऽपि सम इति व्याघातपर्यवसायितर्कविरोधे शङ्किते शुष्कतर्कागोचरत्वादिना तदुद्धारः ।**

ಈ ಪಾದದ ಎಂಟನೆಯ ಅಧಿಕರಣ ಎಂದರೆ 'ಶಬ್ದಮೂಲತ್ವಾಧಿಕರಣ' ಈ ಅಧಿಕರಣದಲ್ಲಿ ಹಿಂದಿನ ಏಳನೆಯ ಇತರವ್ಯಪದೇಶಾಧಿಕರಣದಲ್ಲಿ ಜೀವನು ಸ್ವತಂತ್ರಕರ್ತೃವಾದರೆ, ಯಾವ ತರ್ಕವಿರೋಧವನ್ನು ಹೇಳಲಾಯಿತೋ, ಅದು ಈಶ್ವರನಲ್ಲಿಯೂ ಸಮಾನವಾಗಿದೆಯಲ್ಲವೇ?

ಎಂಬುದಾಗಿ ವ್ಯಾಘಾತಪರ್ಯವಸಾಯಿ ಆದ ತರ್ಕವಿರೋಧವನ್ನು ಆಶಂಕಿಸಲಾಗಿದೆ. ಈಶ್ವರನು ಶುಷ್ಕತರ್ಕಕ್ಕೆ ಅಗೋಚರನಾದ್ದರಿಂದ ದೋಷವಿಲ್ಲವೆಂದು ಪರಿಹರಿಸಲಾಗಿದೆ.

ವಿವರಣೆ - ಜೀವನು ಸ್ವತಂತ್ರಕರ್ತೃವಾದರೆ ಪೂರ್ಣವಾದ ಕರ್ತೃವುಳ್ಳವನೋ, ಅಥವಾ ಅಂಶತಃ ಕರ್ತೃವುಳ್ಳವನೋ ? ಎಂಬುದಾಗಿ ವಿಕಲ್ಪ ಮಾಡಿ ನಿರಾಕರಣೆ ಮಾಡಲಾಗಿದೆ. ಇದು ಈಶ್ವರನಲ್ಲೂ ಕೂಡ ಸಮಾನವಾಗಿದೆ. ಒಂದು ವೇಳೆ ಈಶ್ವರನಲ್ಲಿ ತರ್ಕವಿರೋಧವನ್ನು ಪರಿಹಾರ ಮಾಡಿಕೊಂಡರೆ ಜೀವನಲ್ಲೂ ಕೂಡ ಆ ತರ್ಕವಿರೋಧ ಪರಿಹಾರವು ಸಮಾನವಾಗುತ್ತದ ಎಂಬುದು ಆಕ್ಷೇಪ ಸಾರ.

**एवं हेतुमुखयुक्तिविरोधेषु निरस्तेषु नवमदशमाभ्यां फलमुखैरीश्वरस्य दोषित्वपर्यवसायिभिर्लिङ्गश्रुत्यनुगृहीतैर्दृढतर्कैर्विरोधे शङ्किते तन्निरास इति द्विकमेका पेटिका ।**

ಹೀಗೆ ಹೇತುಮುಖಯುಕ್ತಿವಿರೋಧವನ್ನು ಪರಿಹಾರ ಮಾಡಿ, ಒಂಬತ್ತನೆಯ ಹಾಗೂ ಹತ್ತನೆಯ ಅಧಿಕರಣಗಳಲ್ಲಿ ಫಲಮುಖವಾದ ವಿರೋಧಗಳನ್ನು ಪರಿಹರಿಸಲಾಗಿದೆ. ಈಶ್ವರನ ದೋಷಿತ್ವದಲ್ಲಿ ಪರ್ಯವಸಾನವಾಗುವ ಲಿಂಗ ಹಾಗೂ ಶ್ರುತಿಗಳಿಂದ ಅನುಗ್ರಹೀತವಾದ ದೃಢವಾದ ತರ್ಕಗಳಿಂದ ವಿರೋಧವನ್ನು ಆಶಂಕೆ ಮಾಡಿದರೆ ಅದನ್ನು ಪರಿಹಾರ ಮಾಡುವುದಕ್ಕಾಗಿ ಈ ಎರಡು ಅಧಿಕರಣಗಳು ಹೊರಟವೆ. ಆದ್ದರಿಂದ ಇವರಡು ಸೇರಿ ಒಂದು ಪೇಟಿಕಾ ಆಗುತ್ತದೆ.

ವಿವರಣೆ - ಸೃಷ್ಟಿಯನ್ನು ಮಾಡುವುದರಿಂದ ಯಾವುದೇ ಪ್ರಯೋಜನವು ಪರಮಾತ್ಮನಿಗೆ ಇರುವುದಿಲ್ಲ. ಪ್ರಯೋಜನವು ಇರುವುದಾದಲ್ಲಿ, ಮೊದಲು ಆ ಪ್ರಯೋಜನವನ್ನು ಹೊಂದದ ಕಾರಣ ಅಪೂರ್ಣನಾಗುತ್ತಾನೆ. ಪರಮಾತ್ಮನ ನಿರ್ದೋಷತ್ವವನ್ನು ನಪ್ರಯೋಜನತ್ವಾಧಿಕರಣದಲ್ಲಿ ಆಕ್ಷೇಪ ಮಾಡಲಾಗಿದೆ.

ಎಲ್ಲವನ್ನು ಪರಮಾತ್ಮನೇ ಮಾಡುವುದಾದರೆ ಕೆಲವರಿಗೆ ಸುಖವನ್ನು ಕೆಲವರಿಗೆ ದುಃಖವನ್ನು ಕೊಡುತ್ತಾನಾದ್ದರಿಂದ ಪಕ್ಷಪಾತದೋಷವು ಬರುತ್ತದೆ. ಕೆಲವರಿಗೆ ನಿರಂತರವಾಗಿ ದುಃಖವನ್ನೇ ಕೊಡುವುದರಿಂದ ನಿಷ್ಕಾರುಣ್ಯವೆಂಬ ದೋಷವೂ ಕೂಡ ಬರುತ್ತದೆ ಎಂಬ ಆಕ್ಷೇಪವನ್ನು ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿ ಮಾಡಲಾಗಿದೆ. ಹೀಗೆ ಎರಡೂ ಅಧಿಕರಣಗಳು ಈಶ್ವರನ ನಿರ್ದೋಷವನ್ನು ಆಕ್ಷೇಪ ಮಾಡುತ್ತಿವೆ. ಆದ್ದರಿಂದ ಇವೆರಡು ಸೇರಿ ಒಂದೇ ಪೇಟಿಕಾ ಎನಿಸುತ್ತವೆ.

**एकादशे तु जिज्ञासासूत्रस्थब्रह्मशब्देन सूचितस्य जन्मादिसूत्रे सम्भावितस्य पूर्णगुणत्वस्याक्षेपे तदुद्धार इति द्रष्टव्यम् ।**

ಹನ್ನೊಂದಯನೆಯದ್ದು ಸರ್ವಧರ್ಮೋಪಪತ್ತ್ಯಧಿಕರಣ. ಇದು ಜಿಜ್ಞಾಸಾಸೂತ್ರದಲ್ಲಿರುವ ಬ್ರಹ್ಮಶಬ್ದದಿಂದ ಸೂಚಿತವಾದ ಹಾಗೂ ಜನ್ಮಾದಿಸೂತ್ರದಿಂದ ಸಂಭಾವಿತವಾದ ಪೂರ್ಣಗುಣತ್ವವನ್ನು ಆಕ್ಷೇಪ ಮಾಡುತ್ತಿದೆ. ಇದರ ಪರಿಹಾರವನ್ನು ಮಾಡುತ್ತಿರುವುದರಿಂದ ಇದು ಪ್ರತ್ಯೇಕ ಅಧಿಕರಣವೆಂದು ಪರಿಗಣಿತವಾಗಿದೆ.

ಸರ್ವಧರ್ಮೋಪಪತ್ತ್ಯಧಿಕರಣ (2-1-11)

**अत्रानुव्याख्याने –**

**स्मृतियुक्तिश्रुतिगुणयुक्तयो बहुयुक्तयः ।**
**एवं चतुर्विधा नैव विरुध्यन्तेऽन्वयं प्रति ।।**

**इत्येतत्पादीयाधिकरणानामुपाधय उक्ताः ।**

ಅನುವ್ಯಾಖ್ಯಾನದಲ್ಲಿ ಇದನ್ನು ಹೀಗೆ ಸಂಗ್ರಹಿಸಿದ್ದಾರೆ -

ಸ್ಮೃತಿಯುಕ್ತಿಶ್ರುತಿಗುಣಯುಕ್ತಯೋ ಬಹುಯುಕ್ತಯಃ ।
ಏವಂ ಚತುರ್ವಿಧಾ ನೈವ ವಿರುಧ್ಯಂತೇಽನ್ವಯಂ ಪ್ರತಿ ॥

ಸ್ಮೃತಿವಿರೋಧ, ಯುಕ್ತಿವಿರೋಧ, ಶ್ರುತಿಗುಣವಾದ ಯುಕ್ತಿವಿರೋಧ, ಅನೇಕ ಯುಕ್ತಿಗಳ ವಿರೋಧ ಎಂಬುದಾಗಿ ನಾಕುಬಗೆಯ ವಿರೋಧವನ್ನು ಸಮನ್ವಯದ ವಿಷಯದಲ್ಲಿ ಪರಿಹರಿಸಲಾಗುತ್ತಿದೆ ಎಂಬುದಾಗಿ ಈ ಪಾದದ ಎಲ್ಲಾ ಅಧಿಕರಣಗಳ ಉಪಾಧಿಯನ್ನು ಶ್ರೀಮದಾಚಾರ್ಯರು ಸಂಗ್ರಹಿಸಿದ್ದಾರೆ. ಒಟ್ಟು ಇವರು ಸಂಗ್ರಹಿಸಿದ್ದು ನಾಕು ಮಾತ್ರ. ಆದರೆ ಗ್ರಂಥಕಾರರು ಇಲ್ಲಿ ಅನೇಕ ಬಗೆಯ ಯುಕ್ತಿವಿರೋಧವನ್ನು ಹೇಳಿದ್ದಾರೆ. ಇದು ಹೇಗೆ ? ಎಂಬ ಪ್ರಶ್ನೆಗೆ ಹೀಗೆ ಉತ್ತರವನ್ನು ತಿಳಿಯಬೇಕು -

**तत्राद्येऽधिकरणे स्मृत्या द्वितीये युक्त्या तृतीये दृढयुक्त्या चतुर्थे श्रुतिसंवादियुक्त्या विरोधनिरास इति स्पष्टम् । स्मृतियुक्तीत्यत्र युक्तिशब्दस्य दृढादृढयुक्तिपरत्वात् ।**

ಮೊದಲನೆಯ ಸ್ಮೃತ್ಯಧಿಕರಣದಲ್ಲಿ ಸ್ಮೃತಿಯ ವಿರೋಧವನ್ನು ಪರಿಹರಿಸಲಾಗಿದೆ. ಎರಡನೆಯ ನವಿಲಕ್ಷಣತ್ವಾಧಿಕರಣದಲ್ಲಿ ಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. ಮೂರನೆಯ ಅಭಿಮಾನ್ಯಧಿಕರಣದಲ್ಲಿ ದೃಢಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. ನಾಕನೆಯ ಅಸದಧಿಕರಣದಲ್ಲಿ ಶ್ರುತಿಸಂವಾದವುಳ್ಳ ಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. ಆದ್ದರಿಂದ 'ಸ್ಮೃತಿಯುಕ್ತಿಶ್ರುತಿಗುಣಯುಕ್ತಯಃ' ಎಂಬುದಕ್ಕೆ ಮಾಡಿದ ವ್ಯಾಖ್ಯಾನವು ಸ್ಪಷ್ಟವಾಯಿತು. ಏಕೆಂದರೆ 'ಸ್ಮೃತಿಯುಕ್ತಿ' ಎಂಬಲ್ಲಿ ಯುಕ್ತಿ ಶಬ್ದಕ್ಕೆ ದೃಢವಾದ ಯುಕ್ತಿ, ಅದೃಢವಾದ ಯುಕ್ತಿ ಎಂದು ಎರಡು ಬಗೆಯಲ್ಲಿ ಅರ್ಥವನ್ನು ತಿಳಿಯಬಹುದು.

**पञ्चमे बहुश्रुतिसिद्धयुक्त्या षष्ठे बहुयुक्तिभिः सप्तमे बहुप्रमाणसंवादियुक्त्या अष्टमे व्याघातपर्यवसायितया बहुमतयुक्त्या नवमे प्रयोजनोद्देशेनुद्देशे च दोष इति**

**बहुसुदृढयुक्त्या दशमे कर्मादिसापेक्षत्वेऽनपेक्षत्वे च दोष इति बहुमुखदृढयुक्त्याएकादशे निर्दोषत्वेति पूर्णगुणत्वमहाप्रमेयविरोधित्वेन बहुमतयुक्त्या विरोधनिरास इति पञ्चममारभ्य सप्ताप्युपाधयो बहुयुक्तिशब्देन विवक्षिता इति ।। द्रष्टव्यम् ।।**

**इति सर्वधर्मोपपत्त्यधिकरणम् ।।११।।**

**इति श्रीमद्ब्रह्मण्यतीर्थपूज्यपादानां शिष्येण व्यासयतिना विरचितायां श्रीमद्भाष्यटीकाविवृतौ तात्पर्यचन्द्रिकायां द्वितीयाध्यायस्य प्रथमः पादः ।।२।।१।।**

ಐದನೆಯ 'ಭೋಕ್ತ್ರಧಿಕರಣ'ದಲ್ಲಿ ಬಹುಶ್ರುತಿಗಳಿಂದ ಸಿದ್ಧವಾದ ಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. ಆರನೆಯ 'ಆರಂಭಣಾಧಿಕರಣ'ದಲ್ಲಿ ಬಹುಯುಕ್ತಿಗಳ ವಿರೋಧವನ್ನು ಪರಿಹರಿಸಲಾಗಿದೆ. ಏಳನೆಯದ್ದು 'ಇತರವ್ಯಪದೇಶಾಧಿಕರಣ'. ಇದರಲ್ಲಿ ಅನೇಕ ಪ್ರಮಾಣಗಳ ಸಂವಾದವುಳ್ಳ ಯುಕ್ತಿಯ ವಿರೋಧವನ್ನು ಪರಿಹರಿಸಿದ್ದಾರೆ. ಎಂಟನೆಯದ್ದು 'ಶಬ್ದಮೂಲತ್ವಾಧಿಕರಣ'. ಇದರಲ್ಲಿ ವ್ಯಾಘಾತಪರ್ಯವಸಾಯಿಯಾದ ಬಹುಮತವಾದ ಯುಕ್ತಿಯ ವಿರೋಧವನ್ನು ಪರಿಹರಿಸಿದ್ದಾರೆ. ಒಂಬತ್ತನೆಯದ್ದು 'ನಪ್ರಯೋಜನಾಧಿಕರಣ' ಇದರಲ್ಲಿ ಪರಮಾತ್ಮನು ಪ್ರಯೋಜನದ ಉದ್ದೇಶವನ್ನು ಹೊಂದಿದರೂ, ಅಥವಾ ಹೊಂದದೇ ಇದ್ದರೂ ಕೂಡ ದೋಷವು ತಪ್ಪಿದ್ದಲ್ಲ ಎಂದು ಹೇಳುತ್ತಿರುವುದರಿಂದ ಅತ್ಯಂತ ದೃಢತಮವಾದ ಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. ಹತ್ತನೆಯದ್ದು 'ವೈಷಮ್ಯನೈರ್ಘೃಣ್ಯಾಧಿಕರಣ'. ಇದರಲ್ಲಿ ಪರಮಾತ್ಮನು ಕರ್ಮಾದಿಗಳನ್ನು ಅಪೇಕ್ಷೆ ಪಟ್ಟರೂ, ಪಡದಿದ್ದರೂ ದೋಷವು ತಪ್ಪಿದ್ದಲ್ಲ ಎಂಬುದಾಗಿ ಬಹುಮುಖದಲ್ಲಿ ದೃಢಯುಕ್ತಿಯ ವಿರೋಧವನ್ನು ಪರಿಹರಿಸಿದ್ದಾರೆ. ಹನ್ನೊಂದನೆಯದ್ದು 'ಸರ್ವಧರ್ಮೋಪಪತ್ತ್ಯಧಿಕರಣ'. ಇದರಲ್ಲಿ ಪರಮಾತ್ಮನು ನಿರ್ದುಷ್ಟನಾಗಿದ್ದಾನೆ ಹಾಗೂ ಗುಣಪೂರ್ಣನಾಗಿದ್ದಾನೆ ಎಂಬೆರಡು ಮಹಾಪ್ರಮೇಯಗಳಿಗೆ ವಿರೋಧ ಬರುವ ಬಹುಮತವಾದ ಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. ಹೀಗೆ ಐದನೆಯ ಅಧಿಕರಣದಿಂದ ಒಟ್ಟು ಏಳು ಅಧಿಕರಣಗಳಿಗೆ 'ಬಹುಯುಕ್ತಿ' ಎಂಬ ಒಂದೇ ಪದದಿಂದ ಉಪಾಧಿಯನ್ನು ಶ್ರೀಮದಾಚಾರ್ಯರು ತಿಳಿಸಿದ್ದಾರೆ. 'ಬಹುಯುಕ್ತಯಃ' ಎಂಬುದಕ್ಕೆ ಹೀಗೆ ಅನೇಕ ಮಜಲುಗಳಲ್ಲಿ ಅರ್ಥವನ್ನು ತಿಳಿಯಬೇಕು.

**ಇಲ್ಲಿಗೆ ಸರ್ವಧರ್ಮೋಪಪತ್ತ್ಯಧಿಕರಣವು ಸಮಾಪ್ತವಾಯಿತು**

**ಇಲ್ಲಿಗೆ ಶ್ರೀ ಬ್ರಹ್ಮಣ್ಯತೀರ್ಥಪೂಜ್ಯರ ಶಿಷ್ಯರಾದ ವ್ಯಾಸತೀರ್ಥರಿಂದ ರಚಿತವಾದ ಶ್ರೀಮತ್ ಬ್ರಹ್ಮಸೂತ್ರಭಾಷ್ಯದ ಟೀಕೆಯ ವಿವೃತ್ತಿಯೆನಿಸಿದ ತಾತ್ಪರ್ಯಚಂದ್ರಿಕಾ ಗ್ರಂಥದಲ್ಲಿ ಎರಡನೆಯ ಅಧ್ಯಾಯದ ಮೊದಲನೆಯ ಪಾದವು ಸಮಾಪ್ತವಾಯಿತು.**

**ಸರ್ವಧರ್ಮೋಪಪತ್ತ್ಯಧಿಕರಣ (2-1-11)**

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**सर्वधर्मोपपत्तेश्च ।।** ''उपसंहरति'' इति भाष्यादिसूचितमाह – **एकैकेति ।।** कर्तृत्वादौ वैषम्याद्यभावादौ चेत्यर्थः । अधिकरणोपाधिरगतार्थता चादिपदार्थः । ''विष्णोर्गुणपूर्णत्वं विषय'' इत्यादिटीकां व्यनक्ति ।। **अत्रेति ।।**

'ಉಪಸಂಹರತಿ' ಇತ್ಯಾದಿ ಭಾಷ್ಯದಿಂದ ಸೂಚಿತವಾದ ಪ್ರಮೇಯವನ್ನು 'ಏಕೈಕ' ಇತ್ಯಾದಿ ಗ್ರಂಥದಿಂದ ತಿಳಿಸಿದ್ದಾರೆ. ಇತರವ್ಯಪದೇಶಾಧಿಕರಣದಲ್ಲಿ ಪರಮಾತ್ಮನಲ್ಲಿ ಸರ್ವಕರ್ತೃತ್ವವಿದೆ ಎಂಬ ಒಂದೇ ಗುಣವನ್ನು ಸಮರ್ಥಿಸಲಾಯಿತು. ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿ ಪರಮಾತ್ಮನಿಗೆ ವೈಷಮ್ಯನೈರ್ಘೃಣ್ಯದೋಷವಿಲ್ಲ ಎಂದಷ್ಟೇ ಸಮರ್ಥಿಸಲಾಯಿತು ಎಂದಭಿಪ್ರಾಯ. ಆದಿಪದದಿಂದ ಅಗತಾರ್ಥತ್ವ ಇವುಗಳನ್ನು ವಿವಕ್ಷಿಸಬೇಕು.

'ವಿಷ್ಣೋಃ ಗುಣಪೂರ್ಣತ್ವಂ ವಿಷಯಃ' ವಿಷ್ಣುವಿನ ಗುಣಪೂರ್ಣತ್ವವೇ ವಿಷಯವಾಗಿದೆ ಇತ್ಯಾದಿ ಟೀಕೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः –** यदि दोषित्वप्रयुक्तं गुणित्वं तदभावे च तदभावस्तदा विष्णोर्दोषित्वे विशेषणाभावाद्दोषाभावे च विशेष्याभावान्न निर्दोषगुणपूर्णत्वम् । यदि तु द्वितीयस्तदोभयत्र शक्तत्वान्निर्दोषगुणपूर्णं ब्रह्मेति स्पष्टः फलफलिभाव इति भावः ।

ಪೂರ್ವಪಕ್ಷದ ಫಲಫಲಿಭಾವ ಹೀಗಿದೆ - ಒಂದುವೇಳೆ ದೋಷಿಯಾಗಿದ್ದಾನೆಂಬ ಕಾರಣದಿಂದ ಈಶ್ವರನು ಗುಣಿಯಾಗುವುದಾದರೆ, ದೋಷವಿಲ್ಲದವನಾದ್ದರಿಂದ ಗುಣಗಳಿಲ್ಲದವನಾಗಿದ್ದಾನೆ ಎಂಬುದಾಗಿ ಅನ್ವಯವ್ಯತಿರೇಕವನ್ನು ಹೇಳುವುದಾದರೆ, ಆಗ ವಿಷ್ಣುವು ದೋಷಿಯಾದ್ದರಿಂದ ದೋಷಾಭಾವವೆಂಬ ವಿಶೇಷಣವು ಇಲ್ಲವಾಯಿತು. ನಿರ್ದೋಷತ್ವವೆಂಬ ವಿಶೇಷಣವೇ ಬರಲಿಲ್ಲ ಎಂದಾಯಿತು. ಆದ್ದರಿಂದ ನಿರ್ದೋಷಗುಣಪೂರ್ಣತ್ವವು ಶ್ರೀಹರಿಯಲ್ಲಿ ಸಿದ್ಧವಾಗುವುದಿಲ್ಲ ಎಂದಂತಾಯಿತು.

ಸಿದ್ಧಾಂತದ ಫಲಫಲಿಭಾವ ಹೀಗಿದೆ - ಒಂದುವೇಳೆ ಗುಣತ್ವವು ದೋಷತ್ವಪ್ರಯುಕ್ತವಲ್ಲವೆಂದು ಹೇಳಿದ್ದರೆ, ಆಗ ಶ್ರೀಹರಿಯು ಗುಣವುಳ್ಳವನಾಗಲು ಹಾಗೂ ಸಕಲದೋಷರಹಿತನಾಗಲು ಸಮರ್ಥನಾಗಿದ್ದಾನೆಂದಾಯಿತು. ಆಗ ಬ್ರಹ್ಮನು ನಿರ್ದೋಷಗುಣಪೂರ್ಣನಾಗಿದ್ದಾನೆ ಎಂಬ ಪ್ರಮೇಯವು ಸ್ಪಷ್ಟವಾಯಿತು.

**प्रकाशः** – टीकायामस्फुटत्वात्सुधातात्पर्यविवरणेन टीकां व्यनक्ति ।। **पूर्वपक्षस्त्विति** ।। ''उपपत्तेः'' इति सौत्रन्यायं सुधायां विवृतं सङ्गृह्णाह – **नित्येति** ।। सद्गुणं चेत्यन्वयः । न्यायद्वयमेतत् । प्रेप्सेति चोपलक्षणमिति भावेन सङ्ग्रहं व्याचष्टे ।। **ब्रह्मेति** ।।

ಟೀಕೆಯಲ್ಲಿ ಪೂರ್ವಪಕ್ಷವು ಸ್ಪಷ್ಟವಾಗಿರುವುದಿಲ್ಲ. ಸುಧೆಯಲ್ಲಿ ಸ್ಪಷ್ಟವಾಗಿದೆ. ಆದ್ದರಿಂದ ಸುಧಾತಾತ್ಪರ್ಯವನ್ನು ವಿವರಿಸುವ ಮೂಲಕ ಟೀಕೆಯನ್ನು ವ್ಯಾಖ್ಯಾನ ಮಾಡಲು 'ಪೂರ್ವಪಕ್ಷಸ್ತು' ಇತ್ಯಾದಿ ಗ್ರಂಥವು ಹೊರಟಿದೆ.

'ಉಪಪತ್ತೇಃ' ಎಂಬ ಸೂತ್ರನ್ಯಾಯವನ್ನು ಸುಧೆಯಲ್ಲಿ ವಿವರಣೆ ಮಾಡಿದ್ದಾರೆ. ಅದರ ಸಂಗ್ರಹವನ್ನೇ 'ನಿತ್ಯ' ಇತ್ಯಾದಿ ವಾಕ್ಯದಿಂದ ಮಾಡಿರುತ್ತಾರೆ. 'ಸದ್ಗುಣಂ ಚ' ಎಂಬುದನ್ನೂ ಕೂಡ ಅನ್ವಯ ಮಾಡಿಕೊಳ್ಳಬೇಕು. ಒಟ್ಟು ಎರಡು ನ್ಯಾಯವನ್ನು ಇಲ್ಲಿ ಹೇಳಿದಂತಾಯಿತು.

'ಪ್ರೇಪ್ಸಾ' ಎಂದು ಹೇಳಿರುವುದು ಕೇವಲ 'ಉಪಲಕ್ಷಣ' ಎಂಬ ಅಭಿಪ್ರಾಯದಿಂದ 'ಬ್ರಹ್ಮ' ಇತ್ಯಾದಿಯಾಗಿ ಸಂಗ್ರಹಿಸಿ ಅನುಮಾನವನ್ನು ಪ್ರಯೋಗ ಮಾಡುತ್ತಿದ್ದಾರೆ.

**प्रकाशः** – सत्त्वादिव्यावृत्तये सदिति गुणविशेषणम् । तेन ''केवलो निर्गुणश्चेतथ'' इत्यादिश्रुतिबाधः प्रत्युक्तः । विशेषणासिद्धिं निराह – **प्रेप्सेति** ।। विशेष्यं तु ''आत्मनि चैवं विचित्राश्च हि'' इत्यादिना सिद्धमिति भावः ।

ಸತ್ವವನ್ನು ವ್ಯಾವೃತ್ತ ಮಾಡುವುದಕೋಸ್ಕರ ಸತ್ ಎಂಬುದಾಗಿ ಗುಣವಿಶೇಷಣವನ್ನು ಮಾಡಿದ್ದಾರೆ. ಇದರಿಂದ 'ಕೇವಲೋ ನಿರ್ಗುಣಶ್ಚ' ಇತ್ಯಾದಿ ಶ್ರುತಿಬಾಧವನ್ನು ಪರಿಹರಿಸಿದಂತಾಯಿತು. ವಿಶೇಷಣಾಸಿದ್ಧಿಯನ್ನು 'ಪ್ರೇಪ್ಸ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ. ವಿಶೇಷ್ಯವು 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಇತ್ಯಾದಿ ಸೂತ್ರದಿಂದ ಸಿದ್ಧವಾಗಿದೆ.

**प्रकाशः** – उक्तप्रमेयस्य सङ्ग्रहेण बुद्ध्यारोहाय पेटिकासङ्गतीराह – **अस्मिन्निति** ।।

ಇಲ್ಲಿಯತ ತನಕ ಹೇಳಿದ ಈ ಪಾದದ ಎಲ್ಲಾ ಪ್ರಮೇಯವನ್ನು ಸಂಗ್ರಹ ಮಾಡಿ, ಬುದ್ಧಿಯಲ್ಲಿ ಆರೋಹಣ ಮಾಡುವುದಕ್ಕಾಗಿ ಪೇಟಿಕಾಸಂಗತಿಯನ್ನು ಸ್ವತಃ ಗ್ರಂಥಕಾರರು 'ಅಸ್ಮಿನ್' ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ.

**प्रकाशः** – कथं त्रित्वमित्यतोऽवान्तरभेदमाह – **तत्रापीति** ।।

ಮೊದಲನೆಯ ಪೇಟಿಕೆಯಲ್ಲಿ ಒಂದೇ ಪ್ರಮೇಯವನ್ನು ಪರಿಹಾರ ಮಾಡುತ್ತಿರುವುದರಿಂದ ಪುನಃ ಅಧಿಕರಣ ಭೇದವನ್ನು ಏಕೆ ವಿವಕ್ಷಿಸಿದರು? ಎಂಬ ಪ್ರಶ್ನೆಗೆ 'ತತ್ರಾಪಿ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಮಹಾಪ್ರಮೇಯವು ಒಂದೇ ಆಗಿದ್ದರೂ, ಅವಾಂತರಪ್ರಮೇಯದಲ್ಲಿ ವ್ಯತ್ಯಾಸವಿರುವುದರಿಂದ ಅಧಿಕರಣಗಳು ಭಿನ್ನಭಿನ್ನವಾಗಿವೆ ಎಂದಭಿಪ್ರಾಯ.

ಸರ್ವಧರ್ಮೋಪಪತ್ತ್ಯಧಿಕರಣ (2-1-11)

**प्रकाशः** – समयपादीयाद्यनुव्याख्यानस्यैतत्पादीयसर्वाधिकरणोपाधिपरत्वं सुधायां न प्रतीयत इति स्वयं तद्विवृणोति – **अत्रानुव्याख्यान इति** ।। **बहुमुखेति** ।। अनेकत्वोपलक्षणमिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे सर्वधर्मोपपत्त्यधिकरणं सम्पूर्णम् ।।११।।**

ಇದೇ ಸಮಯಪಾದದ ಮೊದಲನೆಯ ಅಧಿಕರಣದ ಪ್ರಾರಂಭದಲ್ಲಿ ಅನುವ್ಯಾಖ್ಯಾನಕಾರರು ಈ ಪಾದದ ಎಲ್ಲಾ ಅಧಿಕರಣದ ಉಪಾಧಿಯನ್ನು ಒಂದೇ ಶ್ಲೋಕದಲ್ಲಿ ಸಂಗ್ರಹಿಸಿದ್ದಾರೆ. ಆದರ ವಿವರಣೆ ಸುಧೆಯಲ್ಲಿ ಕಾಣಿಸುವುದಿಲ್ಲ. ಆದ್ದರಿಂದ ಗ್ರಂಥಕಾರರು ಸ್ವತಃ ಇಲ್ಲಿ ಆ ಅನುವ್ಯಾಖ್ಯಾನವನ್ನು ಅತ್ರಾನುವ್ಯಾಖ್ಯಾನೇ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡಿದ್ದಾರೆ. 'ಬಹುಮುಖ' ಎಂಬಲ್ಲಿ ಅನೇಕತ್ವವನ್ನು ಉಪಲಕ್ಷಣಯಾ ವಿವಕ್ಷಿಸಬೇಕು.

ಇಲ್ಲಿಗೆ ಸರ್ವಧರ್ಮೋಪಪತ್ತ್ಯಧಿಕರಣವು ಮುಗಿಯಿತು.

ಇಲ್ಲಿಗೆ ಸರ್ವತಂತ್ರಸ್ವತಂತ್ರರಾದ ಶ್ರೀಸುಧೀಂದ್ರತೀರ್ಥಗುರುಪಾದರ ಶಿಷ್ಯಂದಿರಾದ ಶ್ರೀಮದ್ರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ತಾತ್ಪರ್ಯಚಂದ್ರಿಕಾ ಪ್ರಕಾಶಟಿಪ್ಪಣಿಯಲ್ಲಿ ಎರಡನೆಯ ಅಧ್ಯಾಯದ ಮೊದಲನೆಯ ಪಾದವು ಸಮಾಪ್ತವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ರಚನಾನುಪಪತ್ತ್ಯಧಿಕರಣ
(೨-೨-೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ರಚನಾನುಪಪತ್ತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – रचनानुपपत्तेश्च नानुमानम् ।।**

ಸಾಂಖ್ಯರ ಅನುಮಾನದಿಂದ ಪರಿಕಲ್ಪಿತವಾದ ಜಡಪ್ರಕೃತಿಯು ಜಗತ್ತಿಗೆ ಕಾರಣವಾಗುವುದಿಲ್ಲ. ಏಕೆಂದರೆ, ಜಡವಾದ ಪ್ರಕೃತಿಯಲ್ಲಿ ಜ್ಞಾನ, ಇಚ್ಛಾ, ಪ್ರಯತ್ನಗಳು ಇಲ್ಲದ ಕಾರಣ ಸ್ವತಃ ಪ್ರವೃತ್ತಿಯು ಕೂಡುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**रचनानुपपत्तेश्च नानुमानम् ।।** अनुमीयत इत्यनुमानम् । साङ्ख्यानुमानकल्पितं प्रधानं न जगत्कर्तृ । कुतः? **रचनानुपपत्तेः** प्रधानस्य जडत्वेन स्वतः प्रवृत्त्यननुपपत्तेः । अचेतनस्य स्वतः प्रवृत्तौ प्रमाणाभावाच्चेत्यर्थः ।।१।।

ಅರ್ಥ -- 'ಅನುಮೀಯತೇ' ಅನುಮಾನಂ = ಎಂಬ ವ್ಯುತ್ಪತ್ತಿಯಿಂದ ಅನುಮಾನ ಶಬ್ದಕ್ಕೆ ಅನುಮಾನದಿಂದ ಸಾಧಿಸುವ ಜಡಪ್ರಕೃತಿ ಎಂದರ್ಥ. ಸಾಂಖ್ಯಾನುಮಾನದಿಂದ ಪರಿಕಲ್ಪಿತವಾದ ಪ್ರಕೃತಿಯು ನ = ಜಗತ್ತಿಗೆ ಕಾರಣವಾಗುವುದಿಲ್ಲ. ಏಕೆಂದರೆ, ರಚನಾನುಪಪತ್ತೇಃ = ಜಡವಾದ ಪ್ರಕೃತಿಗೆ ಸ್ವತಃ ಪ್ರವೃತ್ತಿಯು ಅನುಪಪನ್ನವಾಗಿದೆ. ಚ = ಅಚೇತನವಾದ ಜಡಪ್ರಕೃತಿಗೆ ಸ್ವತಃ ಪ್ರವೃತ್ತಿ ಇರುತ್ತದೆನ್ನಲು ಪ್ರಮಾಣವಿರುವುದಿಲ್ಲ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – इतरेषां चानुपलब्धेरिति सामान्यतो निराकरणं समयानां कृतम् । विशेषतो निराकरोत्यस्मिन् पादे ।**

ಅನುವಾದ - ಹಿಂದೆ ದ್ವಿತೀಯಾಧ್ಯಾಯದ ಪ್ರಥಮ ಪಾದದ ಪ್ರಾರಂಭದಲ್ಲಿ 'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಿಂದ ಎಲ್ಲ ದರ್ಶನಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಲಾಯಿತು. ಈ ಪಾದದಲ್ಲಿ ಒಂದೊಂದೇ ದರ್ಶನಗಳನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ.

ಪ್ರತಿಪದಾರ್ಥ -- ಈ ಪಾದದ ಪ್ರಮೇಯವನ್ನು ತೋರಿಸುತ್ತಿದ್ದಾರೆ. ಇತರೇಷಾಂ ಚಾನುಪಬ್ಧೇಃ ಇತಿ = 'ಇತರೇಷಾಂ ಚಾನುಪಬ್ಧೇಃ' ಎಂಬ ಸೂತ್ರದಲ್ಲಿ, ಸಮಯಾನಾಮ್ = ಕಾಣಾದ ಪಾಶುಪತ ಮೊದಲಾದ ದರ್ಶನಗಳ, ನಿರಾಕರಣಂ ಕೃತಮ್ = ನಿರಾಕರಣೆಯು ಮಾಡಲಾಯಿತು. ಅಸ್ಮಿನ್‌ಪಾದೇ = ಈ ಪಾದದಲ್ಲಿ, ಸಾಮಾನ್ಯತಃ = ಸಾಮಾನ್ಯವಾದ, ವಿಶೇಷತಃ = ವಿಶೇಷವಾಗಿ ಒಂದೊಂದು ದರ್ಶನಗಳ ಪ್ರತ್ಯೇಕವಾದ ದೋಷಗಳನ್ನು ಹೇಳುವ ಮೂಲಕ, ಎಲ್ಲ ದರ್ಶನಗಳನ್ನು ಪ್ರತ್ಯೇಕವಾಗಿ, ನಿರಾಕರೋತಿ = ನಿರಾಕರಿಸುತ್ತಿದ್ದಾರೆ.

**भाष्यम् – अचेतनप्रवृत्तिमतं प्रथमतो निराकरोति ।**

ಅನುವಾದ - ಸಮಸ್ತ ಜಗತ್ತಿಗೆ ಜಡವಾದ ಪ್ರಕೃತಿಯೇ ಕಾರಣವಾಗಿದೆ. ಹೀಗೆ ಈಶ್ವರನನ್ನು ಒಪ್ಪದ ಸಾಂಖ್ಯರು ಹೇಳುತ್ತಾರೆ. ಇವರ ಮತವನ್ನು ಪ್ರಾರಂಭದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ.

ಪ್ರತಿಪದಾರ್ಥ -- ಈ ಪಾದದ ಮೊದಲನೆಯ ಅಧಿಕರಣದ ಪ್ರಮೇಯವನ್ನು ತೋರಿಸುತ್ತಿದ್ದಾರೆ. ಅಚೇತನಪ್ರವೃತ್ತಿಮತಂ = ಜಗತ್ತಿಗೆ ಜಡವಾದ ಪ್ರಕೃತಿಯೇ ಕಾರಣವಾಗಿದೆ ಎಂದು ಹೇಳುವ ನಿರೀಶ್ವರ ಸಾಂಖ್ಯಮತನ್ನು, ಪ್ರಥಮತಃ = ಈ ಪಾದದ ಮೊದಲನೆಯ ಅಧಿಕರಣದ ಪ್ರಾರಂಭದಲ್ಲಿ, ನಿರಾಕರೋತಿ = ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ.

**भाष्यम् – ।। रचनानुपपत्तेश्च नानुमानम् ।।१।।**

**अचेतनस्य स्वतः प्रवृत्त्यनुपपत्तेर्नानुमानपरिकल्पितं प्रधानं जगत्कर्तृ**

ಅನುವಾದ - ಜಡವಾದ ವಸ್ತುವಿಗೆ ಸ್ವಾಭಾವಿಕವಾದ ಪ್ರವೃತ್ತಿಯು ಇರುವುದಿಲ್ಲ. ಅನುಮಾನದಿಂದ ಸಿದ್ಧವಾದ ಜಡಪ್ರವೃತ್ತಿಯು ಜಗತ್ತಿಗೆ ಕಾರಣವಾಗುವುದಿಲ್ಲ.

ಪ್ರತಿಪದಾರ್ಥ -- ನಾನುಮಾನಮ್ ಎಂಬ ಸೂತ್ರ ಅಂಶವನ್ನು ವ್ಯಾಖ್ಯಾನ ಮಾಡುವುದರಿಂದಲೇ ಪಕ್ಷವು ತೋರಿಸಿದಂತಾಗುತ್ತದೆ ಎಂಬ ಅಭಿಪ್ರಾಯದಿಂದ ಸಿದ್ಧಾಂತವನ್ನೇ ಹೇಳುತ್ತಿದ್ದಾರೆ. ಅಚೇತನಸ್ಯ = ಪ್ರಕೃತಿ ಮೊದಲಾದ ಜಡಪದಾರ್ಥಗಳಿಗೆ ಸ್ವತಃ = ಈಶ್ವರನ ಅಪೇಕ್ಷೆಯಿಲ್ಲದೆ, ಪ್ರವೃತ್ತ್ಯನುಪಪತ್ತೇಃ = ಕ್ರಿಯೆ ಮೊದಲಾದವುಗಳು ಅನುಪಪನ್ನವಾಗುತ್ತವೆ. ಆದ್ದರಿಂದ ಅನುಮಾನಪರಿಕಲ್ಪಿತಂ = ಪ್ರಧಾನಮ್ ಜಗತ್‌ಕರ್ತೃ ಕಾರ್ಯತ್ವಾತ್ ಎಂಬ ಅನುಮಾನದಿಂದ ಕಲ್ಪಿತವಾದ, ಪ್ರಧಾನಮ್ = ಪ್ರವೃತ್ತಿಯು, ಜಗತ್‌ಕರ್ತೃ = ಜಗತ್ತಿನ ಸೃಷ್ಟಿಕಾರಣವು, ನ = ಆಗಿರುವುದಿಲ್ಲ.

**भाष्यम् — चशब्देन प्रमाणाभावं दर्शयति ।।१।**

ಅನುವಾದ - ಸೂತ್ರದಲ್ಲಿರುವ ಚ ಶಬ್ದವು ಅಚೇತನವೇ ಜಗತ್‌ಕರ್ತೃವಾಗಿದೆ ಎಂಬ ವಿಷಯದಲ್ಲಿ ಪ್ರಮಾಣ ಇಲ್ಲ ಎಂಬುದನ್ನು ಸೂಚನೆ ಮಾಡುತ್ತಿದೆ.

ಪ್ರತಿಪದಾರ್ಥ -- ಜಡವಾದ ಪ್ರಕೃತಿಯು ಜಗತ್ತಿಗೆ ಕಾರಣವಾಗುತ್ತದೆ ಎಂಬುದು ಪ್ರಮಾಣ ಪ್ರಮಿತವಾಗಿದೆ. ಇದನ್ನು ಯುಕ್ತಿಯಿಂದ ನಿರಾಕರಣೆ ಮಾಡಲು ಸಾಧ್ಯವಿಲ್ಲವೆಂಬ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ. ಚ ಶಬ್ದೇನ = ಚ ಶಬ್ದದಿಂದ, ಪ್ರಮಾಣಾಭಾವಂ = ಯಾವುದೇ ಪ್ರಮಾಣವು ಇರುವುದಿಲ್ಲವೆಂದು, ದರ್ಶಯತಿ = ಪ್ರಮಾಣಪುರಸ್ಸರವಾಗಿ ಹೇಳುತ್ತಿದ್ದಾರೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका —**

**श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः ।**

**एतत्पादप्रतिपाद्यं दर्शयति ।। इतरेषामिति ।। सर्वविरोधानां युक्तिमूलत्वेन तद्विरोधस्य प्राबल्यात् प्रथमपादे स निराकृतः । इतरविरोधत्रयेऽनादिकालानुवृत्त-समयविरोधस्यैव प्रबलत्वात् श्रुतिसमन्वयसिद्धे ब्रह्मणो जगत्कारणत्वे समयविरोधं परिहर्तुं तानस्मिन् पादे निराकरोति भगवान् सूत्रकारः ।**

ಈ ಪಾದದಿಂದ ಪ್ರತಿಪಾದ್ಯವಾದ ಪ್ರಮೇಯವನ್ನು 'ಇತರೇಷಾಮ್' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

ಎಲ್ಲಾ ವಿರೋಧಗಳು ಯುಕ್ತಿಮೂಲಕವಾಗಿವೆ. ಆದ್ದರಿಂದ ಯುಕ್ತಿವಿರೋಧವು ಪ್ರಬಲವಾದ್ದರಿಂದ ಅದನ್ನು ಪ್ರಥಮಪಾದದಲ್ಲಿ ನಿರಾಕರಿಸಿದ್ದಾಯಿತು. ಉಳಿದ ಮೂರು ವಿರೋಧಗಳಲ್ಲಿ ಅನಾದಿಕಾಲದಿಂದ ಪರಂಪರಾಗತವಾದ ಸಮಯವಿರೋಧವೇ ಪ್ರಬಲವಾಗಿದೆ. ಶ್ರುತಿಸಮನ್ವಯದಿಂದ

ಬ್ರಹ್ಮನಲ್ಲಿ ಯಾವ ಜಗತ್ಕಾರಣತ್ವವು ಸಿದ್ಧವಾಗಿದೆಯೋ ಇದಕ್ಕೆ ಸಮಯವಿರೋಧವು ಪ್ರಾಪ್ತವಾದರೆ ಅದನ್ನು ಈ ಪಾದದಲ್ಲಿ ಭಗವಾನ್ ಸೂತ್ರಕಾರರು ನಿರಾಕರಣೆ ಮಾಡಲು ಪ್ರವೃತ್ತರಾಗಿದ್ದಾರೆ.

ವಿವರಣೆ - ಅವಿರೋಧಾಧ್ಯಾಯ ಎನಿಸಿದ ಎರಡನೆಯ ಈ ಅಧ್ಯಾಯದಲ್ಲಿ ನಾಕು ಪಾದಗಳಿವೆ. ಇದರಲ್ಲಿ ಕ್ರಮವಾಗಿ ನಾಕು ವಿರೋಧಗಳನ್ನು ಪರಿಹರಿಸಿದ್ದಾರೆ. ಯುಕ್ತಿವಿರೋಧ, ಸಮಯವಿರೋಧ,ಶ್ರುತಿವಿರೋಧ, ನ್ಯಾಯೋಪೇತಶ್ರುತಿವಿರೋಧ ಎಂದು. ಈ ನಾಕರಲ್ಲಿ ಯುಕ್ತಿವಿರೋಧವು ಪ್ರಬಲ. ಏಕೆಂದರೆ ಪ್ರತಿಯೊಂದಕ್ಕೂ ಯುಕ್ತಿಯು ಆವಶ್ಯಕವಾದ್ದರಿಂದ ಅದರ ವಿರೋಧವು ಪ್ರಾಪ್ತವಾದರೆ ಮುಂದಿನ ಪ್ರಮೇಯವೇ ಸಿದ್ಧವಾಗುವುದಿಲ್ಲ. ಹೀಗೆ ಪ್ರಬಲವಾದ ಯುಕ್ತಿವಿರೋಧವನ್ನು ಪ್ರಥಮಪಾದಲ್ಲಿ ನಿರಾಕರಣೆ ಮಾಡಿ ಮುಂದೆ ಸಮಯವಿರೋಧ ಶ್ರುತಿವಿರೋಧ ನ್ಯಾಯೋಪೇತಶ್ರುತಿವಿರೋಧವನ್ನು ಪರಿಹರಿಸಬೇಕಾಗಿದೆ. ಈ ಮೂರರಲ್ಲಿ ಅನಾದಿಕಾಲದಿಂದ ಬಂದಿರುವುದರಿಂದ ಸಮಯವಿರೋಧವು ಪ್ರಬಲವಾಗಿದೆ. ಅಂಥ ಸಮಯವಿರೋಧವನ್ನು ಈ ಪಾದದಲ್ಲಿ ಪರಿಹಾರ ಮಾಡುತ್ತಿರುವುದರಿಂದ ಇದಕ್ಕೆ ಸಮಯಪಾದ ಎಂದೇ ಹೆಸರು.

ಸಮಯವು ಹೇಗೆ ಅನಾದಿಯಾಗಿದೆಯೋ ಅದರಂತೆ ಅಪೌರುಷೇಯವಾದ ವೇದವು ಕೂಡ ಅನಾದಿಯಾಗಿದೆ. ಆದ್ದರಿಂದ ಅಪೌರುಷೇಯವಾದ ವೇದಕ್ಕಿಂತ ಸಮಯವೇ ದುರ್ಬಲವಾಗಬಹುದಲ್ಲವೇ? ಎಂಬ ಪ್ರಶ್ನೆಯನ್ನು ಟೀಕೆಯಲ್ಲಿ ಅನಾದಿ ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ. 'ಅನಾದಿಕಾಲತೋ ವೃತ್ತಾಃ ಸಮಯಾ ಹಿ ಪ್ರವಾಹತಃ' ಎಲ್ಲಾ ಸಮಯಗಳು ಸ್ವಭಾವತಃ ಅನಾದಿನಿತ್ಯವಾಗಿವೆ ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಆದ್ದರಿಂದ ವೇದವು ಹೇಗೆ ಅನಾದಿಯೋ ಅದರಂತೆ ಸಮಯಗಳೂ ಕೂಡ ಅನಾದಿಯಾಗಿವೆ. ಅನಾದಿತ್ವವಿಷಯದಲ್ಲಿ ಸಾಮ್ಯವಿದ್ದರೂ ಕೂಡ ಅಜ್ಞಾನ ಬಂದಾಗಷ್ಟೇ ವೇದವಿರೋಧವು ಸ್ಫುರಣವಾಗುತ್ತದೆ. ಸಮಯವಿರೋಧವು ವಿಮರ್ಶದೆಶೆಯಲ್ಲೂ ಕೂಡ ಪ್ರಾಪ್ತವಾಗುತ್ತದೆ. ಆದ್ದರಿಂದ ಸಮಯವಿರೋಧವೇ ಪ್ರಬಲವಾಗಿದೆ ಎಂದಂತಾಯಿತು. ಅಥವಾ ಬಹುಜನಪರಿಗ್ರಹಿತವಾದ್ದರಿಂದ ಪ್ರಾಜ್ಞರೆನಿಸಿದ ಕಪಿಲ ಮೊದಲಾದವರಿಂದ ಪ್ರವರ್ತಿಸಲ್ಪಟ್ಟದ್ದರಿಂದ ಸಮಯವಿರೋಧವು ಪ್ರಬಲವೆಂಬುದು ಟೀಕೆಯ ಅಭಿಪ್ರಾಯ.

**तत्वप्रकाशिका – न च वाच्यमितरेषां चानुपलब्धेरिति कपिलकणादादिसमयानामुक्तानुपलब्ध्याऽनाप्तोक्तत्वेन निराकृतत्वाद् व्यर्थोऽयं पाद इति ।**

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಿಂದ ಕಪಿಲ, ಕಣಾದ ಮೊದಲಾದವರ ಸಮಯಗಳನ್ನು ಅನುಸರಿಸಿದಾಗ ಇಷ್ಟಪ್ರಾಪ್ತಿರೂಪವಾದ ಫಲವು ಸಿಗುತ್ತಿಲ್ಲ. ಆದ್ದರಿಂದ ಅವೆಲ್ಲವೂ ಅನಾಪ್ತವಾಕ್ಯಗಳೆಂದು ಈಗಾಗಲೇ ನಿರಾಕರಿಸಿದ್ದಾಗಿದೆ. ಆದ್ದರಿಂದ ಪುನಃ ಈ ಪಾದದ ಆರಂಭವು ವ್ಯರ್ಥವಲ್ಲವೆ?

ವಿವರಣೆ - ಇದೇ ಅಧ್ಯಾಯದ ಪ್ರಥಮಪಾದದ ನಾಕನೇ ಸೂತ್ರದಲ್ಲಿ 'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಿಂದ ಕಪಿಲಾದಿ ಸಮಯಗಳನ್ನು ನಿರಾಕರಿಸಿದ್ದಾಗಿದೆ. ಅವರು ಹೇಳಿದಂತೆ ಅನುಷ್ಠಾನ ಮಾಡಿದಾಗ ಫಲವು ದೊರಕುತ್ತಿಲ್ಲವಾದ್ದರಿಂದ ಅವರನ್ನು ಅನಾಪ್ತರೆಂದು ಅಲ್ಲಿಯೇ ನಿರಾಕರಣೆ ಮಾಡಿದ್ದಾಗಿದೆ. ಈ ಪಾದದಲ್ಲಿಯೂ ಅದನ್ನೇ ಪ್ರತಿಪಾದನೆ ಮಾಡಿದರೆ ಪುನರುಕ್ತಿ ಬರುತ್ತದೆಂಬುಂದು ಆಕ್ಷೇಪದ ಅಭಿಪ್ರಾಯ. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – तत्र सामान्यतो निराकृतानामत्र विशेषतो निराकरणात् । न ह्यनादिकालानुवृत्तानां प्रतीतिसुन्दराणां तेषां सामान्यतो निराकरणेऽधिकारिणो निःशङ्कप्रवृत्तिर्भवतीति भावः ।**

'ಇತರೇಷಾಂ ಚಾನುಪಲಬ್ಧೇಃ' ಎಂಬ ಸೂತ್ರದಲ್ಲಿ ಎಲ್ಲಾ ಸಮಯಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ್ದಾಗಿದೆ. ಈ ಪಾದದಲ್ಲಿ ಪ್ರತಿಯೊಂದು ಸಮಯಗಳನ್ನು ಆಮೂಲಾಗ್ರವಾಗಿ ನಿರಾಕರಣೆ ಮಾಡಲಾಗುತ್ತಿದೆ. ಅನಾದಿಕಾಲದಿಂದ ಪರಂಪರಾಗತವಾದ ಆಪಾತತಃ ಸುಂದರವಾದ ಈ ಎಲ್ಲ ಮತಗಳನ್ನು ಸಾಮಾನ್ಯವಾಗಿ ನಿರಾಕರಣೆ ಮಾಡಿದ ಮಾತ್ರಕ್ಕೆ ಅಧಿಕಾರಿಗಳು ತತ್ತ್ವವಾದದಲ್ಲಿ ನಿಃಶಂಕಾಪ್ರವೃತ್ತಿಯನ್ನು ಸರ್ವಥಾ ಮಾಡಲಾರರು ಎಂಬುದು ಇಲ್ಲಿಯ ಅಭಿಪ್ರಾಯ.

**तत्वप्रकाशिका – आद्याधिकरणार्थं दर्शयति – अचेतनेति ।। समया द्विविधाः । हैतुकपाषण्डभेदात् । वेदवादिनां प्रथमपादे निराकृतत्वात् ।**

ಮೊದಲನೆಯ ಅಧಿಕರಣದ ಪ್ರಮೇಯವನ್ನು ಅಚೇತನ ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ಸಮಯಗಳು ಎರಡುವಿಧ ೧. ಹೈತುಕ ೨. ಪಾಷಂಡ ಎಂದು. ವೇದವಾದವೆಂಬ ಮತ್ತೊಂದು ಸಮಯವನ್ನು ಪ್ರಥಮಪಾದದಲ್ಲೇ ನಿರಾಕರಣೆ ಮಾಡಿದ್ದಾಗಿದೆ.

ವಿವರಣೆ - 'ವೇದವಾದರತೋ ನ ಸ್ಯಾತ್ ನ ಪಾಷಂಡೀ ನ ಹೈತುಕೀ' ಎಂಬುದಾಗಿ ಭಾಗವತದ ಏಕಾದಶಸ್ಕಂದದಲ್ಲಿ ಸಮಯಗಳು ಮೂರು ವಿಧ ಎಂದು ಹೇಳಲಾಗಿದೆ. ಆದರೆ ಪ್ರಕೃತ ತತ್ವಪ್ರಕಾಶಿಕೆಯಲ್ಲಿ 'ಸಮಯಾಃ ದ್ವಿವಿಧಾಃ ಎಂದು ಹೇಳಿದ್ದಾರೆ. ಇದು ಹೇಗೆ? ಎಂಬ ಪ್ರಶ್ನೆಗೆ 'ವೇದವಾದಿನಾಂ' ಎಂಬ ಮಾತೇ ಉತ್ತರಿಸುತ್ತಿದೆ. ವೇದವಾದಿಗಳ ಮತವನ್ನು ಪ್ರಥಮಪಾದದಲ್ಲೇ ನಿರಾಕರಣೆ ಮಾಡಿದ್ದರಿಂದ ಇಲ್ಲಿ ಅದನ್ನು ಪರಿಗಣಿಸಿಲ್ಲ.

'ವೇದವಾದಿನಾಂ' ಎಂಬುದಕ್ಕೆ ಹೀಗರ್ಥ - 'ವೇದೇನ ಸಃ ವಾದೋ ಯಃ ವೇದವಾದಃ ಇತೀರಿತಃ ತರ್ಕೇಣ ವೇದಸ್ಯಾನ್ಯಾರ್ಥಕಲ್ಪನಂ ತದ್‌ವಿದೋವಿದುಃ' ಕುತರ್ಕಗಳಿಂದ ವೇದಗಳಿಗೆ ಅಪಾರ್ಥವನ್ನು ಕಲ್ಪನೆ ಮಾಡಿ ವೇದದಿಂದಲೇ ವೇದವಿರೋಧಿಯಾದ ವಾದವನ್ನು ಮಂಡಿಸುವವನು ಎಂದರ್ಥ. (ಭಾವದೀಪ)

**तत्वप्रकाशिका – 'अक्षपादकणादौ च सांख्ययोगौ च हैतुकाः । बौद्धपाशुपताद्यास्तु पाषण्डा इति कीर्तिताः' । तत्र पाषण्डेभ्योऽपि हैतुकाः प्रबलाः। युक्तिमत्त्वात् । तेषु च साङ्ख्यचार्वाकसमयस्यैवातिविरोधित्वम् । ईश्वरनिरपेक्षाचेतनप्रवृत्तिवादित्वात् ।**

'ಅಕ್ಷಪಾದಕಣಾದೌ ಚ ಸಾಂಖ್ಯಯೋಗೌ ಚ ಹೈತುಕಾಃ ।
ಬೌದ್ಧಪಾಶುಪತಾದ್ಯಾಸ್ತು ಪಾಷಂಡಾ ಇತಿ ಕೀರ್ತಿತಾಃ ।

ತಾರ್ಕಿಕಮತ, ವೈಶೇಷಿಕಮತ, ಸಾಂಖ್ಯಮತ, ಯೋಗಮತ, ಬೌದ್ಧಮತ ಇವೆಲ್ಲವೂ ಪಾಷಂಡಮತಗಳೆಂದು ಕರೆಯಲ್ಪಟ್ಟಿವೆ.

ಈ ಮತಗಳಲ್ಲಿ ಯುಕ್ತಿಯನ್ನು ಆಶ್ರಯಿಸಿರುವುದರಿಂದ ಪಾಷಂಡಮತಗಳಿಗಿಂತ ಹೈತುಕರು ಪ್ರಬಲರು. ಅವರಲ್ಲಿಯೂ ಸಾಂಖ್ಯಮತ, ಚಾರ್ವಾಕಮತಗಳು ಅತ್ಯಂತ ವಿರೋಧಿಯಾಗಿವೆ. ಏಕೆಂದರೆ ಈಶ್ವರನನ್ನೇ ಒಪ್ಪದೆ ಅಚೇತನದಿಂದ ಜಗತ್ತಿನ ಪ್ರವೃತ್ತಿಯೆಂದು ಒಪ್ಪುತ್ತಾರೆ.

ವಿವರಣೆ - ಹೈತುಕ ಮತ್ತು ಪಾಷಂಡಮತಗಳಲ್ಲಿ ಹೈತುಕರು ಪ್ರಬಲರು. ಯಾರು ವೇದವನ್ನು ಒಪ್ಪದೆ ಮತವನ್ನು ಸ್ಥಾಪನೆ ಮಾಡುತ್ತಾರೋ ಅವರು ಪಾಷಂಡಿಗಳು. ವೇದವನ್ನು ಒಪ್ಪಿ ಯುಕ್ತಿಗೆ ಪ್ರಾಬಲ್ಯವನ್ನು ಹೇಳುವವರು ಹೈತುಕರು. ಆದ್ದರಿಂದ ಇವರು ಪಾಷಂಡಿಗಳಿಗಿಂತ ಪ್ರಬಲರು. ಹೈತುಕರಲ್ಲಿ ಸಾಂಖ್ಯ ಮತ್ತು ಚಾರ್ವಾಕರು ಈಶ್ವರನನ್ನೇ ಒಪ್ಪದ ಕಾರಣ ಅತ್ಯಂತ ವಿರೋಧಿಗಳು. ವಾಸ್ತವಿಕವಾಗಿ ಸಾಂಖ್ಯಮತದಲ್ಲಿ ಸೇಶ್ವರಸಾಂಖ್ಯಮತ ನಿರೀಶ್ವರ ಸಾಂಖ್ಯಮತವೆಂಬ ಪ್ರಭೇದವಿದೆ. ಆದರೆ ಈಶ್ವರನನ್ನು ಒಪ್ಪಿದರೂ ಪ್ರಕೃತಿಗೆ ಪ್ರಾಧಾನ್ಯವನ್ನು ಹೇಳುವುದರಿಂದ ಈಶ್ವರನನ್ನು ಒಪ್ಪಿಯೂ ಉಪಯೋಗವಿಲ್ಲ. ಆದ್ದರಿಂದ ನಿರೀಶ್ವರ ಸಾಂಖ್ಯರನ್ನೇ ಇಲ್ಲಿ ವಿವಕ್ಷಿಸಿದ್ದಾರೆ.

**तत्वप्रकाशिका – तत्र चार्वाकसमयस्यातिविरोधित्वेऽप्यतितुच्छत्वेन प्रथमं निषेध्यताऽयोगादादौ साङ्ख्यसमयो निराकर्तव्यः । स च द्विविधः । निरीश्वरः सेश्वरश्च । तत्र निरीश्वरस्यैवातिविरोधित्वम् । अतो निरीश्वरसाङ्ख्यमतमेवादौ निराकरोतीति भावः।**

ಸಾಂಖ್ಯ ಮತ್ತು ಚಾರ್ವಾಕಮತಗಳ ನಡುವೆ ಚಾರ್ವಾಕಮತವು ಅತ್ಯಂತ ವಿರೋಧಿಯಾಗಿದೆ. ಆದರೂ ಸಹ ಈ ಮತವು ಹೇಯವಾಗಿದೆ. ಆದ್ದರಿಂದ ಇದನ್ನು ಮೊದಲು ನಿರಾಕರಣೆ ಮಾಡುವುದು ಯೋಗ್ಯವಲ್ಲ. ಹಾಗಾಗಿ ಸಾಂಖ್ಯಮತವನ್ನು ಸಮಯಪಾದದ ಪ್ರಾರಂಭದಲ್ಲಿ ನಿರಾಕರಣೆ ಮಾಡಬೇಕು.

ಈ ಸಾಂಖ್ಯಮತವು ಎರಡುವಿಧ, ನಿರೀಶ್ವರ, ಸೇಶ್ವರ ಎಂದು ಇವೆರಡರಲ್ಲಿ ನಿರೀಶ್ವರ-ಸಾಂಖ್ಯಮತವೇ ಅತ್ಯಂತ ವಿರೋಧಿಯಾಗಿದೆ. ಆದ್ದರಿಂದ ನಿರೀಶ್ವರ ಸಾಂಖ್ಯಮತವನ್ನೇ ಮೊದಲು ನಿರಾಕರಣೆ ಮಾಡುತ್ತಿದ್ದಾರೆ.

**तत्वप्रकाशिका – अत एवात्र हरेर्जगत्कारणत्वे निरीश्वरसाङ्ख्यमतविरोध-परिहारादस्ति शास्त्रादिसङ्गतिः । विष्णुः सर्वकर्तेत्युक्तम् । तत्र च साङ्ख्यमतविरोधे लक्षणासम्भवप्रसङ्गादसौ निराकर्तव्य एव ।**

ಈ ಅಧಿಕರಣದಲ್ಲಿ ಶ್ರೀಹರಿಯ ಜಗತ್ಕಾರಣತ್ವವಿಷಯದಲ್ಲಿ ನಿರೀಶ್ವರಸಾಂಖ್ಯಮತದ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ವಿಷ್ಣುವೇ ಸರ್ವಕರ್ತೃವಾಗಿದ್ದಾನೆಂದು ಈ ಹಿಂದೆಯೇ ಹೇಳಲಾಯಿತು. ಈ ವಿಷಯದಲ್ಲಿ ಸಾಂಖ್ಯಮತದ ವಿರೋಧವು ಪ್ರಾಪ್ತವಾದರೆ ವಿಷ್ಣುವಿನ ಸರ್ವಕರ್ತೃತ್ವಲಕ್ಷಣವು ಅಸಂಭಾವಿತವಾಗುತ್ತದೆ. ಆದ್ದರಿಂದ ಈ ಮತವನ್ನು ನಿರಾಕರಣೆ ಮಾಡಲೇಬೇಕು.

ರಚನಾನುಪಪತ್ತ್ಯಧಿಕರಣ (೨-೨-೧)

**तत्वप्रकाशिका – अतो विष्णोः सर्वकर्तृत्वं विषयः । युक्तं न वेति सन्देहः। समयविवादः सन्देहबीजम् । न युक्तमिति पूर्वः पक्षः । प्रकृतेरेव महदादिकारणत्वात्।**

ಆದ್ದರಿಂದ ವಿಷ್ಣುವಿನ ಸರ್ವಕರ್ತೃತ್ವವೇ ಅಧಿಕರಣದ ವಿಷಯ. ಇದು ಯುಕ್ತವೋ ಅಲ್ಲವೋ? ಎಂಬುದು ಸಂದೇಹ. ಸಮಯಗಳ ವಿವಾದವೇ ಸಂದೇಹಬೀಜ. ಸರ್ವಕರ್ತೃತ್ವವು ಯುಕ್ತವಾಗುವುದಿಲ್ಲವೆಂಬುದು ಪೂರ್ವಪಕ್ಷ, ಏಕೆಂದರೆ ಪ್ರಕೃತಿಯೇ ಮಹದಾದಿತತ್ವಗಳಿಗೆ ಕಾರಣವಾಗುತ್ತದೆ.

**तत्वप्रकाशिका – भवितव्यं खलु कार्येण स्वसदृशकारणवतैव । अन्यथाऽतिप्रसङ्गात् । न हीश्वरस्य महदादिसारूप्यमीश्वरवादिभिरभ्युपेयते ।**

ಕಾರಣವು ತನಗೆ ಅನುಗುಣವಾದ ಕಾರ್ಯವನ್ನೇ ಹುಟ್ಟಿಸುತ್ತದೆ. ಹೀಗೆ ಒಪ್ಪದಿದ್ದರೆ ಅತಿಪ್ರಸಂಗ ಬರುತ್ತದೆ. ಈಶ್ವರನನ್ನು ಒಪ್ಪುವವರು ಈಶ್ವರನು ಮಹದಾದಿಗಳಿಗೆ ಸದೃಶನೆಂದು ಒಪ್ಪದೇ ಇರುವ ಕಾರಣ ಅವನನ್ನು ಮಹದಾದಿ ಸೃಷ್ಟಿಗೆ ಕಾರಣನೆಂದೂ ಒಪ್ಪಲಾಗುವುದಿಲ್ಲ.

ವಿವರಣೆ - ಯಾವುದೇ ಒಂದು ಕಾರಣವು ಕಾರ್ಯವನ್ನು ಹುಟ್ಟಿಸುವಾಗ ತನ್ನ ಸ್ವಭಾವಕ್ಕೆ ಅನುಗುಣವಾದ ಕಾರ್ಯವನ್ನು ಹುಟ್ಟಿಸುತ್ತದೆ. ಮಣ್ಣಿನಿಂದ ಘಟ ಹುಟ್ಟಿತು ಎಂದರೆ ಘಟವೂ ಕೂಡ ಮಣ್ಣಿನ ಸ್ವರೂಪವಾಗಿರುತ್ತದೆ. ಅದರಂತೆ ಮಹಾದಾದಿತತ್ವಗಳನ್ನು ಈಶ್ವರನು ಹುಟ್ಟಿಸುತ್ತಾನೆಂದರೆ ಇವನೂ ಕೂಡ ಮಹದಾದಿತತ್ವ ಸ್ವರೂಪನೇ ಆಗಿರಬೇಕು. ಆದರೆ ಈಶ್ವರನನ್ನು ಹಾಗೆ ಜಡವೆಂದು ಎಲ್ಲಿಯೂ ಹೇಳಿಲ್ಲ. ಆದ್ದರಿಂದ ಮಹದಾದಿತತ್ವಗಳಿಗೆ ಕಾರಣನೂ ಆಗುವುದಿಲ್ಲ. ಇದು ಪೂರ್ವಪಕ್ಷಿಗಳ ಧೋರಣೆ.

**तत्वप्रकाशिका – न च प्रकृतिप्रेरकत्वेनेश्वरोऽङ्गीकर्तव्यः । केवलप्रकृतेरेव कर्तृत्वाभ्युपगामात् । न चान्यदीश्वराङ्गीकारे प्रयोजनं पश्यामः । अतः प्रकृतेरेवाशेषकर्तृत्वान्नेश्वरस्य कर्तृत्वं वा अस्तीति उक्तमयुक्तमिति प्राप्ते सिद्धान्तयत्सूत्रमुपन्यस्य व्याचष्टे – रचनेति।।**

ಪ್ರಕೃತಿಗೆ ಪ್ರೇರಕನಾಗಿ ಈಶ್ವರನನ್ನು ಒಪ್ಪಿದರೆ ಸಾಕು ಎಂದು ಹೇಳಬಾರದು. ಇದಕ್ಕಿಂತ ನೇರವಾಗಿ ಪ್ರಕೃತಿಗೇ ಕರ್ತೃತ್ವವನ್ನು ಒಪ್ಪುವುದು ಸುಲಭ. ಪ್ರಕೃತಿಗಿಂತ ಅತಿರಿಕ್ತವಾದ ಈಶ್ವರನನ್ನು ಒಪ್ಪಲು ಪ್ರಯೋಜನವೂ ಕಾಣಿಸುತ್ತಿಲ್ಲ. ಆದ್ದರಿಂದ ಜಡವಾದ ಪ್ರಕೃತಿಗೆ ಅಶೇಷಕರ್ತೃತ್ವವನ್ನು ಒಪ್ಪಬೇಕಾದ್ದರಿಂದ ಈಶ್ವರನಿಗೆ ಕರ್ತೃತ್ವವನ್ನು ಒಪ್ಪುವುದು ಅಯುಕ್ತವಾಗಿದೆ ಎಂಬುದು ಅಧಿಕರಣದ ಪೂರ್ವಪಕ್ಷ. ಇದನ್ನು ನಿರಾಕರಣೆ ಮಾಡುವ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ರಚನಾನುಪಪತ್ತೇಶ್ಚ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – न कार्यं स्वसदृशकारणवत् कार्यत्वादित्यनुमानेन कारणतया कल्पितं प्रधानं जगत्कर्तृ । स्वतः प्रवृत्तिमदेव हि कर्तृ भवति । न च**

**प्रधानस्य स्वतःप्रवृत्तिर्युक्ता अचेतनत्वाद् घटवत् । अतो युक्तं विष्णोर्जगत्कारणत्वमिति भावः**

'ಕಾರ್ಯಂ ಸ್ವಸದೃಶಕಾರಣವತ್ ಕಾರ್ಯತ್ವಾತ್' 'ಕಾರ್ಯವು ತನಗೆ ಸದೃಶವಾದ ಕಾರಣವುಳ್ಳದ್ದು ಕಾರ್ಯವಾದ್ದರಿಂದ' ಎಂಬ ಅನುಮಾನದಿಂದ ಪ್ರಕೃತಿಯೇ ಜಗತ್ತಿಗೆ ಕಾರಣವೆಂದು ಪೂರ್ವಪಕ್ಷಿಗಳು ಕಲ್ಪನೆ ಮಾಡಿ ಪ್ರಕೃತಿಯೇ ಜಗತ್ ಕರ್ತೃ ಎಂದು ಸಾಧನೆ ಮಾಡಿದರು. ಆದರೆ ಇದು ತಪ್ಪು. ಏಕೆಂದರೆ ಯಾವುದು ತನ್ನ ಶಕ್ತಿಯಿಂದಲೇ ಪ್ರವೃತ್ತಿ ಮಾಡುತ್ತದೋ ಅದು ಮಾತ್ರ ಕರ್ತೃ ಎಂದು ಕರೆಸಿಕೊಳ್ಳುತ್ತದೆ. ಪ್ರಧಾನಕ್ಕೆ ಸ್ವತಃ ಪ್ರವೃತ್ತಿಯೇ ಇರುವುದಿಲ್ಲ. ಅಚೇತನವಾದ ಘಟಕ್ಕೆ ಹೇಗೆ ಸ್ವತಃ ಪ್ರವೃತ್ತಿ ಇಲ್ಲವೋ ಅದರಂತೆ ಪ್ರಕೃತಿಯೂ ಕೂಡ ಅಚೇತನವಾದ್ದರಿಂದ ಸ್ವತಃಪ್ರವೃತ್ತಿಯನ್ನು ಮಾಡುವುದಿಲ್ಲ. ಆದ್ದರಿಂದ ವಿಷ್ಣುವೇ ಜಗತ್ತಿಗೆ ಕಾರಣನಾಗುತ್ತಾನೆಂಬುದು ಯುಕ್ತವಾಯಿತು.

ವಿವರಣೆ - 'ಸ್ವತಃ ಕರ್ತಾ' ಎಂಬ ಸೂತ್ರದಂತೆ ಸ್ವಾತಂತ್ರ್ಯ ಇದ್ದಲ್ಲೇ ಕರ್ತೃತ್ವ ಇರುತ್ತದೆ. ಇದನ್ನು ಟೀಕೆಯಲ್ಲಿರುವ 'ಹಿ' ಶಬ್ದವು ಸೂಚಿಸುತ್ತಿದೆ.

ಸ್ವತಃಪ್ರವೃತ್ತಿಯ ಅಭಾವದಿಂದ ಕರ್ತೃತ್ವಾಭಾವವನ್ನು ಸಾಧನೆ ಮಾಡಿ ಅಸಿದ್ಧಿಯ ಪರಿಹಾರಕ್ಕೋಸ್ಕರ ಅಚೇತನತ್ವಹೇತುವಿನಿಂದ ಸ್ವತಃಪ್ರವೃತ್ತಿಯ ಅಭಾವವನ್ನು ನಾವು ಸಾಧನೆ ಮಾಡುತ್ತಿಲ್ಲ. ಸ್ವತಃಪ್ರವೃತ್ತಿಯನ್ನೇ ಕರ್ತೃತ್ವವೆಂದು ಹೇಳುತ್ತಿದ್ದೇವೆ. ಸಾಂಖ್ಯರು ಯಾವ ಪ್ರಕೃತಿಯಲ್ಲಿ ಕರ್ತೃತ್ವವನ್ನು ಸಾಧನೆ ಮಾಡಲು ಇಚ್ಛಿಸುತ್ತಿದ್ದಾರೋ ಅಂಥ ಪ್ರಕೃತಿಯಲ್ಲಿ ಸ್ವತಃಪ್ರವೃತ್ತಿಯು ಇರುವುದಿಲ್ಲ. ಆದ್ದರಿಂದ ಅನುಮಾನಪರಿಕಲ್ಪಿತವಾದ ಪ್ರಧಾನವು ಸಾಕ್ಷಾತ್ತಾಗಿ ಸ್ವತಃಪ್ರವೃತ್ತಿರೂಪವಾದ ಕರ್ತೃತ್ವವನ್ನು ಹೊಂದಲು ಸಾಧ್ಯವಿಲ್ಲ.

ಹೀಗೆ ಹೇಳಿದ್ದರಿಂದ 'ಪ್ರಕೃತಿಃ ನ ಕರ್ತ್ರೀ ಸ್ವತಃ ಪ್ರವೃತ್ತ್ಯಭಾವಾತ್' ಎಂದು ಅನುಮಾನ ಮಾಡಿದಂತಾಯಿತು. ಈ ಅನುಮಾನದಲ್ಲಿ ಹೇತ್ವಸಿದ್ಧಿ ದೋಷವನ್ನು ಆಕ್ಷೇಪ ಮಾಡಿದರೆ 'ಅಚೇತನತ್ವಾತ್' ಎಂಬ ಹೇತುವನ್ನು ಹೇಳಲಾಗಿದೆ.

**तत्वप्रकाशिका – प्रामाणिकं प्रधानस्य जगत्कारणत्वं न युक्त्या निराकर्तुं शक्यमित्यत आह – चशब्देनेति ।।**

ಪ್ರಧಾನಕ್ಕೆ ಜಗತ್‌ಕಾರಣತ್ವವು ಪ್ರಮಾಣಸಿದ್ಧವಾಗಿದೆ. ಇದನ್ನು ಯುಕ್ತಿಯಿಂದ ನಿರಾಕರಣೆ ಮಾಡಲು ಸಾಧ್ಯವಿಲ್ಲ. ಎಂಬ ಆಕ್ಷೇಪಕ್ಕೆ ಭಾಷ್ಯದಲ್ಲಿ 'ಚ ಶಬ್ದೇನ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – प्राचीनमनुमानं तु कारणत्वमात्रसाधकं न प्रकृतोपयोगि । स्वतःप्रवृत्तिसाधकं तु प्रमाणं नास्त्येवेति भावः ।। १ ।।**

ಹಿಂದೆ ಪೂರ್ವಪಕ್ಷಿಗಳು ಮಾಡಿದ ಅನುಮಾನವು ಕೇವಲ ಕಾರಣತ್ವವನ್ನಷ್ಟೇ ಸಾಧಿಸುತ್ತದೆ. ಪ್ರಕೃತಕ್ಕೆ ಉಪಯೋಗವಾದದ್ದನ್ನು ಸಾಧಿಸುವುದಿಲ್ಲ. ಪ್ರಕೃತಿಯಲ್ಲಿ ಸ್ವತಃ ಪ್ರವೃತ್ತಿಯನ್ನು ಸಾಧನೆ

ಮಾಡಬೇಕು. ಈ ವಿಷಯದಲ್ಲಿ ಪ್ರಮಾಣವು ಸರ್ವಥಾ ಇರುವುದಿಲ್ಲ. ಆದ್ದರಿಂದ ಪ್ರಕೃತಿಯು ಜಗತ್ತಿಗೆ ಕಾರಣ ಆಗುವುದಿಲ್ಲ.

## ಬ್ರಹ್ಮಸೂತ್ರ

**सूत्रम् – प्रवृत्तेश्च ।।२।।**

'ಅಹಂ ಕರೋಮಿ' 'ನಾನು ಮಾಡುತ್ತೇನೆ' ಇತ್ಯಾದಿಯಾಗಿ ಚೇತನರಿಗೆ ಮಾತ್ರ ಇಚ್ಛಾನುಸಾರಿಯಾದ ಪ್ರಯತ್ನವು ಅನುಭೂತವಾಗಿದೆ. ಈ ಕಾರಣದಿಂದಲೂ ಜಡಪ್ರಕೃತಿಯು ಜಗತ್ತಿಗೆ ಕಾರಣವಾಗುವುದಿಲ್ಲ.

## ಸೂತ್ರದೀಪಿಕಾ

**सूत्रदीपिका – प्रवृत्तेश्च ।।** अहं करोमीति चेतनस्यैव **प्रवृत्तेर्दर्शनाच्च** न प्रधानं जगत्कर्तृ इत्यर्थः ।।२।।

'ಅಹಂ ಕರೋಮಿ' ಎಂಬುದಾಗಿ ಚೇತನನೇ ಪ್ರವೃತ್ತಿ ಮಾಡುವುದು ಕಂಡಿರುವುದರಿಂದ ಪ್ರಧಾನವು ಜಗತ್ಕಾರಣವಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। प्रवृत्तेश्च ।।२।।**

**चेतनस्य स्वतः प्रवृत्तिदर्शनाच्च ।।२।।**

ಅನುವಾದ - ಜಡವಾದ ಪ್ರಕೃತಿಗೆ ಪ್ರಯತ್ನವೂ ಕೂಡುವುದಿಲ್ಲ. ಚೇತನರಲ್ಲಿ ಮಾತ್ರ ಪ್ರಯತ್ನ ಇರುವುದು ಕಂಡಿದೆ.

ಪ್ರತಿಪದಾರ್ಥ -- ಚೇತನಪ್ರಪಂಚಕ್ಕೆ ಮಾತ್ರ ಸ್ವತಂತ್ರಪ್ರವೃತ್ತಿ ಇದೆಯೇ ಹೊರತಾಗಿ ಜಡವಾದುದ್ದಕ್ಕೆ ಇರುವುದಿಲ್ಲ. ಈ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ. ಚೇತನಸ್ಯ = ಚೇತನರಲ್ಲಿ ಮಾತ್ರ, ಸ್ವತಃ ಪ್ರವೃತ್ತಿಃ = ಸ್ವಾಭಾವಿಕವಾದ ಪ್ರವೃತ್ತಿಯು, ದರ್ಶನಾಚ್ಚ = ಕಂಡಿರುತ್ತದೆ. ಆದ್ದರಿಂದಲೂ ಜಡಪ್ರಕೃತಿಯು ಕಾರಣವಾಗುವುದಿಲ್ಲ.

## ತತ್ವಪ್ರಕಾಶಿಕಾ

**तत्वप्रकाशिका –**

**एवं प्रधानस्य कारणत्वमचेतनत्वादिना निराकृत्य युक्त्यन्तरेणापि तन्निराकुर्वत्सूत्रमुपन्यस्य व्याचष्टे – प्रवृत्तेश्चेति ।।**

ಪ್ರಧಾನಕ್ಕೆ ಜಗತ್ಕಾರಣತ್ವವನ್ನು ಅಚೇತನತ್ವ ಹೇತುವಿನಿಂದ ಹಿಂದಿನ ಸೂತ್ರದಲ್ಲಿ ನಿರಾಕರಣೆ ಮಾಡಿದರು. ಪ್ರಕೃತ ಈ ಸೂತ್ರದಲ್ಲಿ ಮತ್ತೊಂದು ಯುಕ್ತಿಯನ್ನೂ ಹೇಳುವ ಮೂಲಕ ಜಗತ್ಕಾರಣತ್ವವನ್ನು ನಿರಾಕರಣೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸಿ ಪ್ರವೃತ್ತೇಶ್ಚ ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಅಚೇತನತ್ವಾದಿನಾ' ಎಂಬಲ್ಲಿರುವ ಆದಿಪದದಿಂದ ಪ್ರಮಾಣಾಭಾವವನ್ನು ಸ್ವೀಕರಿಸಬೇಕು. 'ಯುಕ್ತ್ಯಂತರೇಣ' ಎಂಬಲ್ಲಿ ಚೇತನಕರ್ತೃತ್ವಸಾಧಕವಾದ ಯುಕ್ತಿಯಿಂದಲೂ ಕೂಡ ಎಂಬುದನ್ನು ವಿವಕ್ಷಿಸಬೇಕು.

**तत्वप्रकाशिका – महदादिसृष्टिश्चेतनेच्छानुसारिणी सृष्टित्वात् पटसृष्टिवदित्यनुमानविरूद्धत्वाच्च नाचेतनस्य कारणत्वं सम्भवति ।**

'ಮಹದಾದಿಸೃಷ್ಟಿಃ ಚೇತನೇಚ್ಛಾನುಸಾರಿಣೀ ಸೃಷ್ಟಿತ್ವಾತ್ ಪಟಸೃಷ್ಟಿವತ್' ಪಟಸೃಷ್ಟಿಯು ಸೃಷ್ಟಿಯಾಗಿದೆ. ಚೇತನದ ಇಚ್ಛೆಗೆ ಅನುಸಾರಿಯಾಗಿದೆ. ಇದರಂತೆ ಮಹದಾದಿಸೃಷ್ಟಿಯೂ ಕೂಡ ಸೃಷ್ಟಿಯಾಗಿರುವುದರಿಂದ ಚೇತನದ ಇಚ್ಛೆಗೆ ಅನುಸಾರಿಯೇ ಆಗಿರುತ್ತದೆಂಬುದಾಗಿ ಅನುಮಾನದಿಂದ ಚೇತನವೇ ಮಹಾದಾದಿತತ್ವಗಳಿಗೆ ಕಾರಣವೆಂದು ತಿಳಿಯುತ್ತದೆ. ಅಚೇತನಕಾರಣತ್ವವು ಈ ಅನುಮಾನವಿರುದ್ಧವಾಗಿರುವುದರಿಂದ ಅಚೇತನವಾದ ಪ್ರಕೃತಿಗೆ ಕಾರಣತ್ವವು ಕೂಡುವುದಿಲ್ಲ.

ಪಟಾದಿಸೃಷ್ಟಿಯಲ್ಲೂ ಕೂಡ ಚೇತನದ ವ್ಯಾಪಾರವೇ ಏಕೆ ಬೇಕು ? ಎಂದು ಪ್ರಶ್ನಿಸಬಾರದು. 'ಅಹಂ ಕರೋಮಿ' ಎಂದು ಪ್ರತೀತಿ ಇದೆ. ಇದರಿಂದ ಚೇತನನು ಅಲ್ಲಿ ಪ್ರವೃತ್ತಿಯನ್ನು ಮಾಡುತ್ತಿದ್ದಾನೆ ಎಂದು ತಿಳಿಯುತ್ತಿದೆ.

**तत्वप्रकाशिका – न च वाच्यं पटादिसृष्टावपि न चेतनस्य व्यापार इति । अहं करोमीति चेतनस्य प्रवृत्तिदर्शनादिति भावः ।**

ಪಟಸೃಷ್ಟಿ ಎಂಬ ದೃಷ್ಟಾಂತದಲ್ಲಿ ಚೇತನೇಚ್ಛಾನುಸಾರಿತ್ವ ಎಂಬ ಸಾಧ್ಯವಿಲ್ಲದ ಕಾರಣ ಸಾಧ್ಯವೈಕಲ್ಯವನ್ನು ಆಕ್ಷೇಪಿಸುತ್ತಾರೆ. ಆದರೆ 'ಅಹಂ ಕರೋಮಿ' ಎಂಬ ಅನುಭವ ಇರುವುದರಿಂದ ಅನುಭವವಿರುದ್ಧವಾದದ್ದನ್ನು ಆಕ್ಷೇಪ ಮಾಡಬಾರದು. ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು ಬರುವುದಿಲ್ಲ.

**तत्वप्रकाशिका – न चेदं व्यवहारमात्रमिति वाच्यम् । बाधकाभावात् । अन्यथा विशिष्टज्ञानमात्रलोपप्रसङ्गात् । प्रकृतेः कर्तृत्वं बाधकमिति चेन्न । परस्पराश्रयप्रसङ्गात् । प्रतिपादयिष्यति चैतदिति ।। २ ।।**

'ಅಹಂ ಕರೋಮಿ' ಎಂಬುದು ಕೇವಲ ವ್ಯವಹಾರ ಎಂಬ ಆಕ್ಷೇಪವು ತಪ್ಪು. 'ಅಹಂ ಕರೋಮಿ' ಎಂಬುದನ್ನು ಭ್ರಾಂತಿ ಎಂದು ಹೇಳಬೇಕೆಂದರೆ ಬಾಧಕವಿರಬೇಕು. ಆದರೆ ಯಾವುದೇ ಬಾಧಕವಿಲ್ಲ.

ಹೀಗೆ ಒಪ್ಪದಿದ್ದರೆ 'ಅಯಂ ಘಟಃ' ಎಂಬ ವಿಶಿಷ್ಟಪ್ರತೀತಿಯೂ ಕೂಡ ಭ್ರಾಂತಿ ಎಂದು ಹೇಳಬೇಕಾಗುತ್ತದೆ.

ಪ್ರಕೃತಿಯ ಕರ್ತೃತ್ವವು ಬಾಧಕವಲ್ಲವೆ? ಎಂದು ಪ್ರಶ್ನಿಸಬಾರದು. ಹಾಗಾದರೆ ಅನ್ಯೋನ್ಯಾಶ್ರಯ-ದೋಷವು ಪ್ರಾಪ್ತವಾಗುತ್ತದೆ. ಇದನ್ನು ಮುಂದೆ ಸಮರ್ಥಿಸುತ್ತೇವೆ.

ವಿವರಣೆ - ಜೀವಕರ್ತೃತ್ವವು'ಅಹಂ ಕರೋಮಿ' ಎಂಬ ಅನುಭವದಿಂದ ಸಿದ್ಧವಾಗಿರುವುದರಿಂದ ಚೇತನಕರ್ತೃತ್ವವನ್ನೇ ಒಪ್ಪಬೇಕು ಎಂದು ಹೇಳಿದರೆ ಪೂರ್ವಪಕ್ಷಿ 'ಅಹಂ ಕರೋಮಿ' ಎಂಬುದನ್ನು ಭ್ರಾಂತಿ ಎಂದು ಆಕ್ಷೇಪಿಸುತ್ತಾನೆ. ಆದರೆ ಭ್ರಾಂತಿ ಎಂದು ಹೇಳಬೇಕೆಂದರೆ ಅದಕ್ಕೆ ಬಾಧಕಪ್ರತೀತಿ ಇರಬೇಕು. ಆದರೆ ಬಾಧಕವಿಲ್ಲದ ಕಾರಣ 'ಅಹಂ ಕರೋಮಿ' ಎಂಬುದನ್ನು ಭ್ರಾಂತಿ ಎಂದು ಹೇಳಲು ಸಾಧ್ಯವಿಲ್ಲ. ಪ್ರತೀತಿಜ್ಞಾನಕ್ಕೆ ಬಾಧಕಜ್ಞಾನ ಇಲ್ಲದಿದ್ದರೂ ಅದನ್ನು ಭ್ರಾಂತಿ ಎನ್ನುವುದಾದರೆ 'ಅಯಂ ಘಟಃ' ಎಂಬ ವಿಶಿಷ್ಟಜ್ಞಾನವನ್ನು ಕೂಡ 'ಭ್ರಾಂತಿ' ಎಂದು ಹೇಳಬೇಕಾಗುತ್ತದೆ. ಇದನ್ನು ಪರಿಹರಿಸಲು ಪ್ರಕೃತಿಯ ಕರ್ತೃತ್ವವನ್ನು ಬಾಧಕವೆಂದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಪ್ರಕೃತಿಯು ಕರ್ತೃ ಎಂದು ಸಿದ್ಧವಾದರೆ ಈ ವಿಷಯಕ್ಕೆ ಬಾಧ ಇರುವುದರಿಂದ 'ಅಹಂ ಕರೋಮಿ' ಎಂಬುದು ಪ್ರಮಾಣ ಅಲ್ಲವೆಂದಾಗುತ್ತದೆ. 'ಅಹಂ ಕರೋಮಿ' ಎಂಬುದು ಪ್ರಮಾಣವಲ್ಲ ಎಂದು ಸಿದ್ಧವಾದರೆ ಪ್ರಕೃತಿಯೇ ಜಗತ್‌ಕರ್ತೃ ಎಂಬುದು ಸಿದ್ಧವಾಗುತ್ತದೆ.

## ಬ್ರಹ್ಮಸೂತ್ರ

**सूत्रम् – पयोऽम्बुवचेत् तत्रापि ।।**

ಹಾಲು ಸ್ವಾಭಾವಿಕವಾಗಿ ಮೊಸರಾಗುತ್ತದೆ. ನೀರು ಸ್ವಾಭಾವಿಕವಾಗಿಯೇ ತಗ್ಗಾದ ಪ್ರದೇಶದಲ್ಲಿ ಹರಿಯುತ್ತದೆ. ಅದರಂತೆ ಜಡಪ್ರಕೃತಿಯೂ ಕೂಡ ತಾನಾಗಿಯೇ ಜಗತ್ತಾಗಿ ಪರಿಣಾಮ ಹೊಂದಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಹಾಲು ನೀರು ಮೊದಲಾದವುಗಳಲ್ಲಿಯೂ ಅಂತರ್ಯಾಮಿಯಾದ ಪರಮಾತ್ಮನೇ ನೆಲೆಸಿ ಆಯಾ ಕಾರ್ಯಗಳನ್ನು ಮಾಡಿಸುತ್ತಾನೆ ಹೊರತು ಸ್ವಾಭಾವಿಕವಾಗಿ ಯಾವುದೇ ಜಡಪ್ರಕೃತಿಗೆ ಕಾರ್ಯಪ್ರವರ್ತಕತ್ವವು ಇರುವುದಿಲ್ಲ.

## ಸೂತ್ರದೀಪಿಕಾ

**सूत्रदीपिका – अपिशब्दश्चेतनप्रवृत्त्याकर्षणार्थः । पयोऽम्बुवत्** यथाऽचेतनयोः पयोऽम्बुनोः प्रवृत्तिर्दृष्टा तथा प्रधानस्याप्यस्त्विति चेन्न । कुतः? यतस्तत्रापि पयोऽम्ब्वादावपि अन्ततः ईश्वरादेव प्रवृत्तिः । न स्वतः प्रवृत्तिरित्यर्थः ।।३।।

ಸೂತ್ರದಲ್ಲಿರುವ ಅಪಿ ಶಬ್ದವು ಹಿಂದಿನ ಸೂತ್ರದಲ್ಲಿ ಹೇಳಿದ ಚೇತನ ಪ್ರವೃತ್ತಿಯನ್ನು ಅನುಕರ್ಷ ಮಾಡುತ್ತಿದೆ. ಪಯೋಽಂಬುವತ್ = ಯಾವ ರೀತಿಯಾಗಿ ಅಚೇತನವಾದ ಹಾಲು ಮತ್ತು ನೀರುಗಳಲ್ಲಿ ಸ್ವಾಭಾವಿಕವಾಗಿ ಪ್ರವೃತ್ತಿಯು ಕಂಡಿರುತ್ತದೋ ಅದರಂತೆ ಪ್ರಧಾನವು ಕೂಡ ಸ್ವಾಭಾವಿಕವಾಗಿ ಪ್ರವೃತ್ತಿಯನ್ನು

ಮಾಡಬಹುದಲ್ಲವೇ, ಇತಿ ಚೇತ್ = ಹೀಗೆ ಪ್ರಶ್ನಿಸಬಾರದು. ಏಕೆಂದರೆ ತತ್ರಾಪಿ = ಹಾಲು ಮತ್ತು ನೀರುಗಳಲ್ಲಿಯೂ ಅಂತರ್ಯಾಮಿಯಾದ ಈಶ್ವರನು ನೆಲೆಸಿರುತ್ತಾನೆ. ಆದ್ದರಿಂದಲೇ ಇವುಗಳಲ್ಲಿ ಪ್ರವೃತ್ತಿಯು ಕಾಣಸುತ್ತಿದೆಯೇ ಹೊರತು ಸ್ವತಂತ್ರವಾದ ಪ್ರವೃತ್ತಿಯು ಎಲ್ಲಿಯೂ ಇರುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। पयोऽम्बुवच्चेत् तत्रापि ।।३।।**

**पयोऽम्बुवदचेतनस्यापि प्रवृत्तिर्युज्यत इति न युक्तम् ।**

**'एतस्य वा अक्षरस्य प्रशासने गार्गि प्राच्योऽन्या नद्यः स्यन्दन्ते याश्च श्वेतेभ्यः पर्वतेभ्यः प्रतीच्योऽन्या यां यां च दिशमनु' (बृ.५.८.९.) 'एतेन ह वाव पयो मण्डं भवति' इत्यादि ना तत्रापीश्वरनिमित्तप्रवृत्तिश्रुतेः ।।३।।**

ಅನುವಾದ - ಹಾಲು ಪರಿಣಾಮ ಹೊಂದಿ ಮೊಸರಾಗುತ್ತದೆ. ನೀರು ಹರಿಯುತ್ತದೆ. ಈ ದೃಷ್ಟಾಂತದಂತೆ ಅಚೇತನವಾದ ಪ್ರಕೃತಿಯೂ ಕೂಡ ತನ್ನಷ್ಟಕ್ಕೆ ತಾನೇ ಜಗತ್ತನ್ನು ಸೃಷ್ಟಿಮಾಡುತ್ತದೆ. ಹೀಗೇಕೆ ಹೇಳಬಾರದು. ಈ ಪ್ರಶ್ನೆ ತಪ್ಪು.

ಪೂರ್ವದಿಕ್ಕಿನಲ್ಲಿ ಹರಿಯುತ್ತಿರುವ ಪಶ್ಚಿಮದಿಕ್ಕಿನಲ್ಲಿ ಹರಿಯುವ ಯಾವ ನದಿಗಳು ಇವೆಯೊ ಅವೆಲ್ಲವೂ ಬಿಳಿಯಾದ ಹಿಮಾಲಯದಿಂದ ಯಾವ ದಿಕ್ಕಿನ ಕಡೆ ಹರಿಯುತ್ತದೋ ಅವನು ಮಾತ್ರ ಪಾತಾಳ ಲೋಕದಲ್ಲಿ ಇರಲು ಸಮರ್ಥನು. ಈ ಪರಮಾತ್ಮನಿಂದಲೇ ಹಾಲು ಮೊಸರಾಗುತ್ತದೆ. ಇವೇ ಮೊದಲಾದ ಶ್ರುತಿಪ್ರಮಾಣಗಳಿಂದ ಈಶ್ವರನಿಮಿತ್ತಕವಾದ ಪ್ರವೃತ್ತಿಯೇ ಅಲ್ಲಿ ಇರುತ್ತದೆ ಎಂದು ತಿಳಿಯಬೇಕು.

ಪ್ರತಿಪದಾರ್ಥ -- ಹಿಂದಿನ ಆಕ್ಷೇಪ ಈ ಸೂತ್ರವು ಉತ್ತರಿಸುತ್ತಿದೆ - ಪಯೋಽಂಬುವತ್ = ಹಾಲು ನೀರು ಮೊದಲಾದವುಗಳಂತೆ, ಅಚೇತನಸ್ಯಾಪಿ = ಜಡಗಳಿಗೂ, ಪ್ರವೃತ್ತಿಃ = ಚೇತನದಂತೆ ಪ್ರವೃತ್ತಿಯು, ಯುಜ್ಯತೇ ಇತಿ = ಯುಕ್ತವಾಗುತ್ತದೆ ಎಂದು ಹೇಳುವುದು, ನ ಯುಕ್ತಮ್ = ಯೋಗ್ಯವಲ್ಲ. ಏಕೆಂದರೆ ಏತಸ್ಯ ಅಕ್ಷರಸ್ಯ = ಏತಸ್ಯ ಅಕ್ಷರಸ್ಯ ಎಂದು ಪ್ರಾರಂಭಿಸಿ, ಹೇ ಗಾರ್ಗಿ = ಎಲೈ ಗಾರ್ಗಿಯೇ, ಅನ್ಯಾನದ್ಯಃ = ಕೆಲವು ನದಿಗಳು, ಪ್ರಾಚ್ಯಃ = ಪೂರ್ವದಿಕ್ಕಿನವುಗಳಾಗಿ, ಸ್ಯಂದಂತಿ = ಹರಿಯುತ್ತವೆ. ಯಾಶ್ಚ ಅನ್ಯಃ = ಇನ್ನು ಕೆಲವು, ಶ್ವೇತೇಭ್ಯಃ ಪರ್ವತೇಭ್ಯಃ = ಶುಕ್ಲ ವರ್ಣದ ಹಿಮವತ್ ಪರ್ವತಗಳಿಂದ, ಪ್ರತೀಚ್ಯಃ = ಪಶ್ಚಿಮ ದಿಕ್ಕಿನಲ್ಲಿ ಹರಿಯುತ್ತವೆ. ಯಾಂ ಯಾಂ = ಯಾವ, ಯಾವ ದಿಶಮ್ = ದಿಕ್ಕಿನಕಡೆ, ಅನು = ಅನುಸಾರಿಯಾಗಿ ಹರಿಯುತ್ತದೋ ಅವೆಲ್ಲವೂ, ಅಕ್ಷರಸ್ಯ = ಅಕ್ಷರಶಬ್ದವಾಚ್ಯನಾದ, ಪ್ರಶಾಸನೇ = ಪರಮಾತ್ಮನ ಶಾಸನ ನಿಮಿತ್ತವಾಗಿ ಎಂಬುದಾಗಿ ಹೇಳುತ್ತದೆ.

ರಚನಾನುಪಪತ್ತ್ಯಧಿಕರಣ (೨-೨-೧)

ಏತೇನ = ಈ ಪರಮಾತ್ಮನಿಂದ, ಪಯಃ = ಹಾಲು, ಮಂಡಂ = ಮೊಸರು, ಭವತಿ = ಆಗುತ್ತದೆ. ಹ = ಇದು ಪ್ರಮಾಣ ಪ್ರಮಿತವಾಗಿದೆ. ಇತ್ಯಾದಿ = ಇವೇ ಮೊದಲಾದವುಗಳಲ್ಲಿ, ತತ್ರಾಪಿ = ಜಡಪರಿಣಾಮಗಳಲ್ಲಿಯೂ, ಈಶ್ವರನಿಮಿತ್ತಪ್ರವೃತ್ತಿಶ್ರುತೇಃ = ಪರಮಾತ್ಮನ ಮೂಲಕವೇ ಪರಿಣಾಮಾದಿ ಪ್ರವೃತ್ತಿಗಳು ಆಗುತ್ತವೆ. ಹೀಗೆ ಶ್ರುತಿ ಹೇಳುತ್ತಿರುವುದರಿಂದ ಜಡಪದಾರ್ಥಕ್ಕೆ ಕರ್ತೃತ್ವವು ಸರ್ವಥಾ ಕೂಡುವುದಿಲ್ಲ.

## ತತ್ವಪ್ರಕಾಶಿಕಾ

**तत्वप्रकाशिका – उक्तमाक्षिप्य समादधत्सूत्रं पठित्वा व्याचष्टे – पयोऽम्बुवदिति ।। अपिपदं चेतनप्रवृत्तेराकर्षणार्थम् ।**

ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ ಸಮಾಧಾನವನ್ನು ಹೇಳುವ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸಲು 'ಪಯೋಽಂಬುವತ್' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. ಸೂತ್ರದಲ್ಲಿರುವ 'ಅಪಿ' ಪದವು 'ಚೇತನಪ್ರವೃತ್ತೇಃ' ಎಂಬುದನ್ನು ಆಕರ್ಷಣ ಮಾಡುವುದಕ್ಕಾಗಿ ಪ್ರಯುಕ್ತವಾಗಿದೆ.

ವಿವರಣೆ - ಹಿಂದಿನ ಸೂತ್ರದಲ್ಲಿ 'ಚೇತನಸ್ಯ ದರ್ಶನಾತ್' ಎಂಬೆರಡು ಪದಗಳನ್ನು ಅಧ್ಯಾಹಾರ ಮಾಡಿರುವುದರಿಂದ 'ಚೇತನಸ್ಯ ಪ್ರವೃತ್ತೇಃ ದರ್ಶನಾತ್' ಎಂಬುದಾಗಿ ಸೂತ್ರ ಶರೀರವು ಪರ್ಯವಸಿತವಾಯಿತು. ಇಲ್ಲೂ ಕೂಡ 'ಚೇತನಪ್ರವೃತ್ತೇಃ ದರ್ಶನಾತ್' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಅದಕ್ಕಾಗಿ ಸೂತ್ರದಲ್ಲಿ 'ಅಪಿ' ಪದವನ್ನು ಪ್ರಯೋಗಿಸಿದ್ದಾರೆ.

**तत्वप्रकाशिका – यदुक्तमचेतनत्वान्न स्वतःप्रवृत्तिः प्रधानस्येति तदयुक्तम्। पयसोऽचेतनस्यापि दध्याकारेण परिणामदर्शनात्, अचेतनस्याम्बुनो गतिदर्शनात् । तथा कूलस्य पतनदर्शनात् । अतोऽचेतनत्वेऽपि तद्वत्प्रधानस्यापि स्वतःप्रवृत्तिः किं न स्यात् ? इति न युक्तम् ।**

ಅಚೇತನವಾದ್ದರಿಂದ ಸ್ವತಃ ಪ್ರವೃತ್ತಿ ಇಲ್ಲವೆಂದು ಹಿಂದಿನ ಸೂತ್ರದಲ್ಲಿ ಹೇಳಲಾಯಿತು. ಇದು ಅಯುಕ್ತವಾಗಿದೆ. ಏಕೆಂದರೆ ಹಾಲು ಅಚೇತನವಾಗಿದ್ದರೂ ಕೂಡ ಮೊಸರಿನ ಆಕಾರದಲ್ಲಿ ಪರಿಣಾಮವನ್ನು ಹೊಂದುವುದು ಕಂಡಿದೆ. ಮತ್ತು ನೀರು ಅಚೇತನವಾಗಿದ್ದರೂ ಹರಿಯುವುದು ಕಂಡಿದೆ. ಸೇತುವೆಯು ತನ್ನಷ್ಟಕ್ಕೆ ತಾನು ಬೀಳುವುದು ಕಂಡಿದೆ. ಆದ್ದರಿಂದ ಪ್ರಕೃತಿಯು ಅಚೇತನವಾಗಿದ್ದರೂ ಹಾಲು ಮೊದಲಾದವುಗಳಂತೆ ಸ್ವತಃ ಪ್ರವೃತ್ತಿಯನ್ನು ಏಕೆ ಮಾಡಬಾರದು?

**तत्वप्रकाशिका – पयोऽम्ब्वादिप्रवृत्तावपीश्वरनिमित्तत्वाभिधायकश्रुतिसद्भावे नाचेतनत्वहेतोर्व्यभिचाराभावात् । ततश्च न तन्निदर्शनेन प्रधानस्य स्वतःप्रवृत्तिराशासितव्येति भावः । याः काश्चित्प्राच्यां दिशि स्थिताः**

**काश्चित्प्रतीच्यां दिशि स्थिता नद्यः श्वेतेभ्यः पर्वतेभ्यो यां यां दिशमनुस्यन्दन्ते ता एतस्यैवाक्षरस्याऽज्ञायां सत्यां तां तां दिशमनुस्यन्दन्त इत्यर्थः ।। ३ ।।**

ಈ ಪೂರ್ವಪಕ್ಷವು ಅಯುಕ್ತವಾಗಿದೆ. ಹಾಲು ನೀರು ಮೊದಲಾದ ಅಚೇತನಪದಾರ್ಥದಲ್ಲಿ ಯಾವ ಪ್ರವೃತ್ತಿಯು ಕಾಣಿಸುತ್ತಿದೆಯೋ ಅದೂ ಕೂಡ ಈಶ್ವರಾಧಿನವಾಗಿಯೇ ಇರುತ್ತದೆ. ಹೀಗೆ ಶ್ರುತಿಗಳು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಅಚೇತನತ್ವಹೇತುವಿಗೆ ವ್ಯಭಿಚಾರದೋಷವು ಬರುವುದಿಲ್ಲ. ಆದ್ದರಿಂದ ಅಚೇತನವಾದ ಹಾಲು ಮೊದಲಾದವುಗಳ ಉದಾಹರಣೆಯಿಂದ ಪ್ರಕೃತಿಯ ಸ್ವತಃಪ್ರವೃತ್ತಿಯನ್ನು ನಿರೀಶ್ವರವಾದಿಗಳು ಅಪೇಕ್ಷೆ ಪಡಬಾರದು ಎಂಬುದು ಸೂತ್ರದ ಅಭಿಪ್ರಾಯ.

ಪೂರ್ವದಿಕ್ಕಿನಲ್ಲಿ ಇರುವ ನದಿಗಳು, ಪಶ್ಚಿಮದಿಕ್ಕಿನಲ್ಲಿ ಇರುವ ನದಿಗಳು, ಶ್ವೇತಪರ್ವತದಲ್ಲಿರುವ ನದಿಗಳು ಯಾವ ಯಾವ ದಿಕ್ಕನ್ನು ಅನುಸರಿಸಿ ಹರಿಯುತ್ತವೋ, ಆ ನದಿಗಳು ಅಕ್ಷರ ಎಂಬ ಹೆಸರನ್ನು ಹೊಂದಿರುವ ಭಗವಂತನ ಆಜ್ಞೆಯಿಂದಲೇ ಅಯಾ ದಿಕ್ಕುಗಳಲ್ಲಿ ಹರಿಯುತ್ತವೆಂಬುದು ಉಪನಿಷತ್ತಿನ ಅಭಿಪ್ರಾಯ.

## ಬ್ರಹ್ಮಸೂತ್ರ

**सूत्रम् – व्यतिरेकानवस्थितेश्चानपेक्षत्वात् ।।**

ಸಕಲ ಪದಾರ್ಥಗಳಲ್ಲಿಯೂ ಈಶ್ವರನೇ ನೆಲೆಸಿ ಆಯಾ ಕ್ರಿಯೆಗಳನ್ನು ನಡೆಯುವಂತೆ ಮಾಡುತ್ತಾನೆ. ಹೀಗೆ 'ನ ಋತೇ ತ್ವತ್‌ಕ್ರೀಯತೇ' ಎಂಬ ಶ್ರುತಿಯು ಹೇಳುತ್ತಿದೆ. ಚೇತನನ ಅಪೇಕ್ಷೆಯಿಲ್ಲದೇ ಜಡಪದಾರ್ಥ ಸ್ವತಃ ಕ್ರಿಯಾಶೀಲವಾಗುತ್ತದೆನ್ನಲು ಯಾವುದೇ ದೃಷ್ಟಾಂತವು ಇರುವುದಿಲ್ಲ. ಮತ್ತು ಸಜ್ಜನರು ಇದನ್ನು ಆದರ ಮಾಡುವುದಿಲ್ಲ.

## ಸೂತ್ರದೀಪಿಕಾ

**सूत्रदीपिका – व्यतिरेकानवस्थितेः** 'न ऋते' इति श्रुत्या ईश्वरव्यतिरेकेण कस्यापि कर्मणः असत्त्वावगमात् । तत एवाचेतनस्यैव स्वतः प्रवृत्तिरिति निरीश्वरसाङ्ख्यमतस्याप्रामाणिकत्वात्।अतएवानपेक्षत्वात् सद्भिरनादरणीयत्वान्न तद्विरोधो विष्णुकर्तृत्वस्येत्यर्थः ।।४।। ।।

ವ್ಯತಿರೇಕಾನವಸ್ಥಿತೇಃ = 'ನ ಋತೇ ತ್ವತ್‌ಕ್ರಿಯತೇ ಕಿಂಚನಾರೇ ಮಹಾ.....' ಎಂಬ ಶ್ರುತಿಯಿಂದ ಈಶ್ವರನಿಲ್ಲದೇ ಯಾವುದೇ ಕ್ರಿಯೆಯು ನಡೆಯುವುದಿಲ್ಲ ಎಂಬುದಾಗಿ ಸಿದ್ಧವಾಗಿರುವುದರಿಂದ ಜಡಪ್ರಕೃತಿಯೇ

ಸ್ವಾಭಾವಿಕವಾಗಿ ತೋರಿಕೆ ಮಾಡುತ್ತದೆ ಎಂದು ಹೇಳಲು ದೃಷ್ಟಾಂತವಿಲ್ಲ. ಹಾಗೇ ಹೇಳುವ ನಿರೀಶ್ವರಸಾಂಖ್ಯಮತವು ಅಪ್ರಮಾಣವಾಗಿದೆ. ಆದ್ದರಿಂದ ಅನಪೇಕ್ಷತ್ವಾತ್ = ಸಜ್ಜನರಿಂದ ಅನಾದರಕ್ಕೆ ಪಾತ್ರವಾಗಿದೆ. ಹೀಗಿರುವಾಗ ಜಗತ್ತಿಗೆ ಪ್ರಕೃತಿಯು ಕಾರಣವಾಗಿರುವುದರಿಂದ ಬ್ರಹ್ಮಕಾರಣತ್ವಕ್ಕೆ ವಿರೋಧ ಬರುತ್ತದೆಂದು ಆಕ್ಷೇಪಿಸಲು ಬರುವುದಿಲ್ಲ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ರಚನಾನುಪಪತ್ತ್ಯಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**ಭಾಷ್ಯಮ್ –।। व्यतिरेकानवस्थितेश्चानपेक्षत्वात् ।।४।।**

**'न ऋते त्वत्क्रियते किञ्चनारे' (ऋ.१०.११३.९) इति तद्-व्यतिरेकेण कस्यापि कर्मणोऽनवस्थितेरनपेक्षितमेवाचेतनवादिमतम् ।।४।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये रचनानुपपत्त्यधिकरणम् ।। १ ।।**

ಅನುವಾದ- ಎಲೈ ಭಗವಂತನೇ ನಿನ್ನ ಹೊರತಾಗಿ ದೂರದಲ್ಲಿ ಅಥವಾ ಸಮೀಪದಲ್ಲಿ ಯಾವುದೂ ಕ್ರಿಯಾಶೀಲವಾಗುವುದಿಲ್ಲ. ಹೀಗೆ ಶ್ರುತಿಯು ಪರಮಾತ್ಮನಿಲ್ಲದೆ ಯಾವ ವಸ್ತುವಿನ ಕ್ರಿಯೆಯೂ ನಡೆಯುವುದಿಲ್ಲ ಎಂದು ತಿಳಿಸುತ್ತದೆ. ಆದ್ದರಿಂದ ಜಡವಾದ ಪ್ರಕೃತಿಯು ಯಾರನ್ನೂ ಅಪೇಕ್ಷೆ ಮಾಡದೆ ತನ್ನಷ್ಟಕ್ಕೆ ತಾನೇ ಸೃಷ್ಟಿಕ್ರಿಯೆಯನ್ನು ನಡೆಸುತ್ತದೆಂದು ಹೇಳುವ ಅಚೇತನವಾದಿಗಳಾದ ಸಾಂಖ್ಯರ ಮತವು ಯುಕ್ತವಲ್ಲ.

ಪ್ರತಿಪದಾರ್ಥ -- ತ್ವತ್‌ಕ್ರಿಯತೇ = ನಿನ್ನ ಹೊರತಾಗಿ, ಆರೇ = ಸಮೀಪದಲ್ಲಾಗಲಿ ಅಥವಾ ದೂರದಲ್ಲಿಯಾಗಲಿ, ಕಿಂಚನ = ಯಾರಿಂದಲೂ ಏನನ್ನು, ನ ಕ್ರಿಯತೇ = ಮಾಡಲು ಸಾಧ್ಯವಿಲ್ಲ. ಇತಿ = ಹೀಗೆ ಶ್ರುತಿಪ್ರಮಾಣ ಇರುವುದರಿಂದ, ತದ್ವ್ಯತಿರೇಕೇಣ = ಶ್ರೀಹರಿಯನ್ನು ಬಿಟ್ಟು, ಕಸ್ಯಾಪಿ = ಬೇರೆ ಯಾರಿಗೂ, ಕರ್ಮಣಃ = ಯಾವುದೇ ಕ್ರಿಯೆಗಳಲ್ಲಿ, ಅನವಸ್ಥಿತೇಃ = ನಿಲ್ಲಲು ಸಾಧ್ಯವಿಲ್ಲ. ಆದ್ದರಿಂದ ಅಚೇತನವಾದಿಮತಮ್ = ಜಡವಾದ ಪ್ರಕೃತಿಗೆ ಜಗತ್‌ಕರ್ತೃತ್ವವನ್ನು ಒಪ್ಪುವ ನಿರೀಶ್ವರಸಾಂಖ್ಯಮತವು, ಅನಪೇಕ್ಷಿತಮೇವ = ಸಾಧಕರಿಗೆ ಅಪೇಕ್ಷಿತವಲ್ಲ. ಆದ್ದರಿಂದ ಸಂಪೂರ್ಣವಾಗಿ ನಿರಾಕರಣೆ ಮಾಡಲ್ಪಡಬೇಕು.

ಇಲ್ಲಿಗೆ ರಚನಾನುಪಪತ್ತ್ಯಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಪರಿಪೂರ್ಣಚಂದ್ರಿಕಾ

## ತತ್ವಪ್ರಕಾಶಿಕಾ

**तत्वप्रकाशिका – ननु श्रुतिसामर्थ्येन पयोऽम्बुनोः प्रवृत्तेरीश्वराधीनत्वेऽप्यय-स्कान्ताद्यचेतनान्तरप्रवृत्तौ भविष्यति व्यभिचारः ? सेत्स्यति च प्रधानस्य प्रवृत्तौ निदर्शनम् ? उददाहरणस्यानादरणीयत्वात् । न हि पयोऽम्बुप्रवृत्तेरीश्वराधीनत्वेऽन्यथापि तन्निमित्तया भवितव्यमित्यस्ति नियामकम् ? इत्याशङ्कां परिहरत्सूत्रमुन्यस्य व्याचष्टे – व्यतिरेकेति ।।**

ಶ್ರುತಿಯ ಸಾಮರ್ಥ್ಯದಿಂದ ಹಾಲು ಮತ್ತು ನೀರುಗಳ ಪ್ರವೃತ್ತಿಯು ಈಶ್ವರಾಧೀನವೆಂದು ಸಿದ್ಧವಾಯಿತು. ಆದರೂ ಕೂಡ ಅಯಸ್ಕಾಂತ ಮೊದಲಾದ ಬೇರೆ ಅಚೇತನಗಳ ಪ್ರವೃತ್ತಿಯಲ್ಲಿ ಈಶ್ವರಾಧೀನ್ಯವನ್ನು ಒಪ್ಪುವ ಅವಶ್ಯಕತೆಯಿಲ್ಲ. ಆದ್ದರಿಂದ ಆ ಸ್ಥಳದಲ್ಲಿ ವ್ಯಭಿಚಾರವು ಬರುತ್ತದೆ. ಮತ್ತು ಪ್ರಧಾನವು ಸ್ವತಃಪ್ರವೃತ್ತವಾಗುತ್ತದೆನ್ನಲು ಉದಾಹರಣೆಯೂ ಕೂಡ ದೊರಕುತ್ತದೆ. ಈ ಅಯಸ್ಕಾಂತದ ಉದಾಹರಣೆಯನ್ನು ಅನಾದರ ಮಾಡಬಾರದು. ಹಾಲು ಮತ್ತು ನೀರುಗಳ ಪ್ರವೃತ್ತಿಯು ಈಶ್ವರಾಧೀನವೇ ಆಗಲಿ, ಆದರೆ ಅಚೇತನದ ಪ್ರವೃತ್ತಿಯು ಈಶ್ವರಾಧೀನ ಎನ್ನಲು ಏನು ನಿಯಾಮಕ ? ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ 'ವ್ಯತಿರೇಕ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಪ್ರಧಾನಂ ನ ಸ್ವತಂತ್ರಂ ಪ್ರವರ್ತತೇ ಅಚೇತನತ್ವಾತ್' ಎಂಬ ಅನುಮಾನಕ್ಕೆ ಅಯಸ್ಕಾಂತದಲ್ಲಿ ವ್ಯಭಿಚಾರ ಬರುತ್ತದೆ. ಅಯಸ್ಕಾಂತವು ಅಚೇತನವಾದ್ದರಿಂದ ಹೇತು ಇದೆ. ಆದರೆ ಇದರಲ್ಲಿ ಸ್ವತಃಪ್ರವೃತ್ತಿಯೇ ಇರುವುದರಿಂದ ಸಾಧ್ಯವು ಇರುವುದಿಲ್ಲ. ಮತ್ತು 'ಪ್ರಧಾನಂ ಸ್ವತಃ ಪ್ರವರ್ತತೇ ಅಚೇತನತ್ವಾತ್ ಅಯಸ್ಕಾಂತವತ್' ಎಂಬುದಾಗಿ ಪ್ರತಿಕೂಲಾನುಮಾನದಿಂದ ಅಯಸ್ಕಾಂತದ ದೃಷ್ಟಾಂತದಿಂದ ಪ್ರಕೃತಿಯಲ್ಲಿ ಸ್ವತಃಪ್ರವೃತ್ತಿಯನ್ನೇ ಸಮರ್ಥನೆ ಮಾಡಬಹುದು.

**तत्वप्रकाशिका – सर्वप्रवृत्तीनामीश्वरनिमित्तत्वस्य श्रुतिसिद्धत्वान्न कुत्राप्युक्तहेतोर्व्यभिचारो नाप्यचेतनप्रवृत्तौ निदर्शनमिति । अतः प्रमाणविरुद्धं निष्प्रमाणकं च स्वतोऽचेतनप्रवृत्तिमतमनपेक्षितमेव प्रेक्षावतामिति भावः ।**

ಎಲ್ಲಾ ವಸ್ತುಗಳ ಪ್ರವೃತ್ತಿಗೂ ಈಶ್ವರನೇ ನಿಮಿತ್ತಕಾರಣನಾಗಿದ್ದಾನೆ. ಈ ವಿಷಯವು ಶ್ರುತಿಸಿದ್ಧವಾಗಿದೆ. ಆದ್ದರಿಂದ ಅಚೇತನತ್ವಹೇತುವಿಗೆ ಎಲ್ಲಿಯೂ ಕೂಡ ವ್ಯಭಿಚಾರವೇ ಬರುವುದಿಲ್ಲ. ಮತ್ತು ಅಚೇತನಕ್ಕೆ ಸ್ವತಂತ್ರ ಪ್ರವೃತ್ತಿ ವಿಷಯದಲ್ಲಿ ಯಾವುದೇ ದೃಷ್ಟಾಂತವೂ ಕೂಡ ಇರುವುದಿಲ್ಲ. ಆದ್ದರಿಂದ ಅಚೇತನಕ್ಕೆ ಸ್ವತಃಪ್ರವೃತ್ತಿ ಇದೆ ಎಂಬುದು ಪ್ರಮಾಣವಿರುದ್ಧವಾಗಿದೆ. ಮತ್ತು ಪ್ರಮಾಣವೂ

ಇರುವುದಿಲ್ಲ. ಹಾಗಾಗಿ ಪ್ರೇಕ್ಷಾವಂತರು ಅಚೇತನವು ಸ್ವತಃ ಪ್ರವೃತ್ತವಾಗುತ್ತದೆಂಬ ಮತವನ್ನು ಅಂಗೀಕರಿಸುವುದಿಲ್ಲ.

ವಿವರಣೆ - 'ಏತಸ್ಯ ವಾ ಅಕ್ಷರಸ್ಯ' ಮತ್ತು 'ಏತೇನ ಹ ವಾವ' 'ನ ಋತೇ ತ್ವತ್‌ಕ್ರಿಯತೇ' ಇತ್ಯಾದಿ ಶ್ರುತಿಪ್ರಮಾಣಗಳು ಸಕಲಪ್ರವೃತ್ತಿಯು ಈಶ್ವಾರಾಧೀನವೆಂದು ಸಮರ್ಥನೆ ಮಾಡುತ್ತಿವೆ. ಮತ್ತು ಅಚೇತನದ ಸ್ವತಂತ್ರಪ್ರವೃತ್ತಿವಿಷಯದಲ್ಲಿ ಪ್ರಮಾಣವೂ ಕೂಡ ಇರುವುದಿಲ್ಲ. ಆದ್ದರಿಂದ ಈ ಮತವನ್ನು ಉಪೇಕ್ಷೆ ಮಾಡಬೇಕು ಎಂಬುದು ಸೂತ್ರದ ಅಭಿಪ್ರಾಯ.

**तत्वप्रकाशिका – इन्द्रियगणपते धनवन् यशस्विन् मखपते त्वमिन्द्रियगणेषु निषुसीद । तत्र च स्थित्वा महान्तं परमानन्दमाश्चर्यतमं त्वां त्वमेव पूजय । यतस्त्वामेव विशेषेण ज्ञानिनां प्रकृष्टतममाहुरतस्त्वैव पूज्यत्वम् । यतश्च त्वदृते दूरे समीपे वा न केनचित् किञ्चित् क्रियते अतस्त्वमेव पूजक इत्यर्थः । अतो निरीश्वर- साङ्ख्यमतस्याप्रमाणत्वेन तद्विरोधाभावायुक्तं हरेर्लक्षणमिति सिद्धम् ॥४॥**

ಗಣಪತೇ - ಸಕಲ ಇಂದ್ರಿಯಗಳಿಗೆ ನಿಯಾಮಕನಾದ ಭಗವಂತನೇ, ಮಘವನ್ - ಸಂಪತ್ ಭರಿತನಾದವನೇ, ಯಶಸ್ವಿನ್ - ಯಶಸ್ವಿಯಾದವನೇ, ಎಲ್ಲಾ ಯಜ್ಞಗಳಿಗೂ ಅಧಿಪತಿಯಾದವನೇ ನೀನು, ಗಣೇಷು - ಇಂದ್ರಿಯಗಳ ಸಮೂಹದಲ್ಲಿ, ನಿಷುಸೀದ - ಬಂದು ನೆಲೆಸು, ಅಲ್ಲಿ ನೆಲಿಸಿ, ಕವೀನಾಂ - ಜ್ಞಾನಿಗಳ ಮಧ್ಯೆ, ತ್ವಾಂ - ನಿನ್ನನ್ನು, ವಿಪ್ರತಮಮ್ - ಸರ್ವೋತ್ತಮನನ್ನಾಗಿ, ಆಹುಃ- ಹೇಳುತ್ತಾರೆ, ಚಿತ್ರಂ - ಅತ್ಯಂತ ಆಶ್ಚರ್ಯನಾದ, ಮಹಾಮರ್ಕಂ - ಪರಮಾನಂದಸ್ವರೂಪಿಯಾದ ತ್ವಾಂ - ನಿನ್ನನ್ನು ನೀನೇ, ಅರ್ಚ - ಪೂಜಿಸಿಕೊಳ್ಳು. ಏಕೆಂದರೆ ವಿಶೇಷವಾಗಿ ಜ್ಞಾನಿಗಳು ಅತ್ಯಂತ ಶ್ರೇಷ್ಠನೆಂದು ಹೇಳುತ್ತಾರೆ. ಆದ್ದರಿಂದ ನೀನೇ ಪೂಜ್ಯನಾಗಿರುವಿ. ಯಾವ ಕಾರಣದಿಂದ ತ್ವದೃತೇ - ನಿನ್ನನ್ನು ಬಿಟ್ಟು, ಕಿಂಚನ - ಯಾವುದೂ ಕೂಡ ಅರೇ - ದೂರದ ಪದಾರ್ಥವಾಗಲಿ ಹತ್ತಿರದ ಪದಾರ್ಥವಾಗಲಿ, ನ ಕ್ರಿಯತೇ- ಯಾರಿಂದಲೂ ಸ್ವತಂತ್ರವಾಗಿ ಏನನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ನೀನೇ ಪೂಜಕನಾಗಿರುವಿ. ಎಂಬುದು ನಿಷುಸೀದ ಇತ್ಯಾದಿ ಶ್ರುತಿಯ ಅರ್ಥ.

ಹೀಗೆ ನಿರೀಶ್ವರಸಾಂಖ್ಯಮತ ಅಪ್ರಾಮಾಣಿಕವಾಗಿರುವುದರಿಂದ ಇದರ ವಿರೋಧವು ಪ್ರಾಪ್ತವಾಗುವುದಿಲ್ಲ. ಆದ್ದರಿಂದ ಶ್ರೀಹರಿಯ ಜಗಜ್ಜನ್ಮಾದಿಕಾರಣತ್ವಲಕ್ಷಣವು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ರಚನಾನುಪಪತ್ತ್ಯಧಿಕರಣವು ಮುಗಿಯಿತು

# ಅನ್ಯತ್ರಾಭಾವಾಧಿಕರಣ

(೨-೨-೨)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,

ಇವುಗಳ ವಿವರಣೆಯೊಂದಿಗೆ

ಸರಳ ಕನ್ನಡ ಅನುವಾದ

***

ಇರುವುದಿಲ್ಲ. ಹಾಗಾಗಿ ಪ್ರೇಕ್ಷಾವಂತರು ಅಚೇತನವು ಸ್ವತಃ ಪ್ರವೃತ್ತವಾಗುತ್ತದೆಂಬ ಮತವನ್ನು ಅಂಗೀಕರಿಸುವುದಿಲ್ಲ.

ವಿವರಣೆ - 'ಏತಸ್ಯ ವಾ ಅಕ್ಷರಸ್ಯ' ಮತ್ತು 'ಏತೇನ ಹ ವಾವ' 'ನ ಋತೇ ತ್ವತ್‌ಕ್ರಿಯತೇ' ಇತ್ಯಾದಿ ಶ್ರುತಿಪ್ರಮಾಣಗಳು ಸಕಲಪ್ರವೃತ್ತಿಯು ಈಶ್ವಾರಾಧೀನವೆಂದು ಸಮರ್ಥನೆ ಮಾಡುತ್ತಿವೆ. ಮತ್ತು ಅಚೇತನದ ಸ್ವತಂತ್ರಪ್ರವೃತ್ತಿವಿಷಯದಲ್ಲಿ ಪ್ರಮಾಣವೂ ಕೂಡ ಇರುವುದಿಲ್ಲ. ಆದ್ದರಿಂದ ಈ ಮತವನ್ನು ಉಪೇಕ್ಷೆ ಮಾಡಬೇಕು ಎಂಬುದು ಸೂತ್ರದ ಅಭಿಪ್ರಾಯ.

**तत्वप्रकाशिका – इन्द्रियगणपते धनवन् यशस्विन् मखपते त्वमिन्द्रियगणेषु निषुसीद । तत्र च स्थित्वा महान्तं परमानन्दमाश्चर्यतमं त्वां त्वमेव पूजय । यतस्त्वामेव विशेषेण ज्ञानिनां प्रकृष्टतममाहुरतस्तवैव पूज्यत्वम् । यतश्च त्वदृते दूरे समीपे वा न केनचित् किञ्चित् क्रियते अतस्त्वमेव पूजक इत्यर्थः । अतो निरीश्वर- साङ्ख्यमतस्याप्रमाणत्वेन तद्विरोधाभावाद्युक्तं हरेर्लक्षणमिति सिद्धम् ॥४॥**

ಗಣಪತೇ - ಸಕಲ ಇಂದ್ರಿಯಗಳಿಗೆ ನಿಯಾಮಕನಾದ ಭಗವಂತನೇ, ಮಘವನ್ - ಸಂಪತ್ ಭರಿತನಾದವನೇ, ಯಶಸ್ವಿನ್ - ಯಶಸ್ವಿಯಾದವನೇ, ಎಲ್ಲಾ ಯಜ್ಞಗಳಿಗೂ ಅಧಿಪತಿಯಾದವನೇ ನೀನು, ಗಣೇಷು - ಇಂದ್ರಿಯಗಳ ಸಮೂಹದಲ್ಲಿ, ನಿಷುಸೀದ - ಬಂದು ನೆಲೆಸು, ಅಲ್ಲಿ ನೆಲಿಸಿ, ಕವೀನಾಂ - ಜ್ಞಾನಿಗಳ ಮಧ್ಯೆ, ತ್ವಾಂ - ನಿನ್ನನ್ನು, ವಿಪ್ರತಮಮ್ - ಸರ್ವೋತ್ತಮನನ್ನಾಗಿ, ಆಹುಃ- ಹೇಳುತ್ತಾರೆ, ಚಿತ್ರಂ - ಅತ್ಯಂತ ಆಶ್ಚರ್ಯನಾದ, ಮಹಾಮರ್ಕಂ - ಪರಮಾನಂದಸ್ವರೂಪಿಯಾದ ತ್ವಾಂ - ನಿನ್ನನ್ನು ನೀನೇ, ಅರ್ಚ - ಪೂಜಿಸಿಕೊಳ್ಳು. ಏಕೆಂದರೆ ವಿಶೇಷವಾಗಿ ಜ್ಞಾನಿಗಳು ಅತ್ಯಂತ ಶ್ರೇಷ್ಠನೆಂದು ಹೇಳುತ್ತಾರೆ. ಆದ್ದರಿಂದ ನೀನೇ ಪೂಜ್ಯನಾಗಿರುವಿ. ಯಾವ ಕಾರಣದಿಂದ ತ್ವದೃತೇ - ನಿನ್ನನ್ನು ಬಿಟ್ಟು, ಕಿಂಚನ - ಯಾವುದೂ ಕೂಡ ಆರೇ - ದೂರದ ಪದಾರ್ಥವಾಗಲಿ ಹತ್ತಿರದ ಪದಾರ್ಥವಾಗಲಿ, ನ ಕ್ರಿಯತೇ- ಯಾರಿಂದಲೂ ಸ್ವತಂತ್ರವಾಗಿ ಏನನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ನೀನೇ ಪೂಜಕನಾಗಿರುವಿ. ಎಂಬುದು ನಿಷುಸೀದ ಇತ್ಯಾದಿ ಶ್ರುತಿಯ ಅರ್ಥ.

ಹೀಗೆ ನಿರೀಶ್ವರಸಾಂಖ್ಯಮತ ಅಪ್ರಾಮಾಣಿಕವಾಗಿರುವುದರಿಂದ ಇದರ ವಿರೋಧವು ಪ್ರಾಪ್ತವಾಗುವುದಿಲ್ಲ. ಆದ್ದರಿಂದ ಶ್ರೀಹರಿಯ ಜಗಜ್ಜನ್ಮಾದಿಕಾರಣತ್ವಲಕ್ಷಣವು ಸಿದ್ಧವಾಯಿತು.

ಇಲ್ಲಿಗೆ ತತ್ತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ರಚನಾನುಪಪತ್ತ್ಯಧಿಕರಣವು ಮುಗಿಯಿತು

# ಅನ್ಯತ್ರಾಭಾವಾಧಿಕರಣ

(೨-೨-೨)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಅನ್ಯತ್ರಾಭಾವಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – अन्यत्राभावाच्च न तृणादिवत् ।।**

ಪರಮಾತ್ಮನ ಸನ್ನಿಧಾನದಿಂದಷ್ಟೇ ಜಗತ್ತಿನ ಸೃಷ್ಟಿಯಾಗುತ್ತದೆ. ಅಂದರೆ ಪರಮಾತ್ಮನು ಸಹಕಾರಿ ಕಾರಣನಾಗಿದ್ದಾನೆ. ಪ್ರಕೃತಿಯು ಸ್ವತಂತ್ರವಾದ ಕಾರಣವಾಗಿ ಜಗತ್ತನ್ನು ಸೃಷ್ಟಿ ಮಾಡುತ್ತದೆ. ಈ ಮತವೂ ಕೂಡ ಅಸಾಧುವಾಗಿದೆ. ಸೇಶ್ವರಸಾಂಖ್ಯರು ಈಶ್ವರನನ್ನು ಒಪ್ಪಿದರೂ ಸ್ವತಂತ್ರನಲ್ಲವೆಂದು ಹೇಳುತ್ತಾರೆ. ಪ್ರತಿಯೊಂದು ಪದಾರ್ಥಗಳಲ್ಲಿಯೂ ಈಶ್ವರನ ಅಸ್ತಿತ್ವವು ಇರುವುದರಿಂದ ಸೇಶ್ವರಸಾಂಖ್ಯಮತವು ಅಸಾಧುವಾಗಿದೆ.ಮಾತ್ರ

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – तृणादिवत्** यथा पृथिवीजन्यतृणादिकार्ये पर्जन्यः सहकारिमात्रं तथा प्रकृतिजन्यमहदादिकार्योऽपीश्वरः अनुग्राहकः । न स्वतन्त्र इति सेश्वरसाङ्ख्यपक्षोऽपि न । कुतः? **अन्यत्राभावात्** ईश्वरादन्यत्र तत्प्रेरणां विना जगतोऽभावादीश्वरस्य प्रकृतिसत्तादिप्रदत्वाच्चेत्यर्थः ।।१।।

ಅರ್ಥ - ತೃಣಾದಿವತ್ = ಪೃಥಿಯಿಂದ ಹುಟ್ಟಿದ ಹುಲ್ಲು ಮೊದಲಾದವುಗಳ ಹುಟ್ಟುವಿಕೆಗೆ ಹೇಗೆ ಮಳೆಯು ಕೇವಲ ಸಹಕಾರಿಕಾರಣವಾಗಿದೆಯೋ, ಅದರಂತೆ ಪ್ರಕೃತಿಜನ್ಯವಾದ ಮಹತ್ತತ್ತ್ವ ಮೊದಲಾದ ಕಾರ್ಯಗಳಿಗೂ ಈಶ್ವರನೇ ಅನುಗ್ರಾಹಕನಾಗಿದ್ದಾನೆ ಹೊರತು ಸ್ವತಂತ್ರನಾದ ಕಾರಣನಾಗಿಲ್ಲ. ಆದ್ದರಿಂದ ಸೇಶ್ವರಸಾಂಖ್ಯಪಕ್ಷವೂ ಕೂಡ ನಿರಾಕೃತವಾಯಿತು. ಏಕೆಂದರೆ ಅನ್ಯತ್ರಾಭಾವಾತ್ = ಈಶ್ವರನ ಪ್ರೇರಣೆಯಿಲ್ಲದೇ ಜಗತ್ತೇ ಇರುವುದಿಲ್ಲ. ಮತ್ತು ಈಶ್ವರನು ಪ್ರಕೃತ್ಯಾದಿಗಳ ಇರುವಿಕೆಗೂ ಕಾರಣನಾಗಿದ್ದಾನೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅನ್ಯತ್ರಾಭಾವಾಧಿಕರಣವು ಮುಗಿಯಿತು.
ಪರಿಪೂರ್ಣಚಂದ್ರಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – सेश्वरसाङ्ख्यमतं निराकरोति । यथा पृथिव्या एव पर्जन्यानुगृहीतं तृणादिकमुत्पद्यते, एवं प्रधानादीश्वरानुगृहीतं जगदिति ।।**

ಅನುವಾದ - ಈ ಅಧಿಕರಣದಲ್ಲಿ ಪ್ರಧಾನವೇ ಜಗತ್‌ಕರ್ತೃ. ದೇವರು ಇದ್ದರೂ ಕೂಡ ಗೌಣ. ಹೀಗೆ ಹೇಳುವ ಸೇಶ್ವರಸಾಂಖ್ಯಮತವನ್ನು ನಿರಾಕರಣೆ ಮಾಡಲಾಗಿದೆ. ಯಾವ ರೀತಿಯಾಗಿ ಮಳೆಯಿಂದ ಸಹಕಾರ ಪಡೆದ ಭೂಮಿಯು ಹುಲ್ಲು ಮೊದಲಾದವುಗಳನ್ನು ತನ್ನ ಶಕ್ತಿಯಿಂದ ಹುಟ್ಟಿಸುತ್ತದೋ ಅದೇ ರೀತಿಯಾಗಿ ಈಶ್ವರನ ಸಹಕಾರಪಡೆದ ಪ್ರಕೃತಿಯು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತದೆ. ಇದು ಸೇಶ್ವರಸಾಂಖ್ಯರು ಹೇಳಿದ ಮತ.

ಪ್ರತಿಪದಾರ್ಥ -- ಈ ಅಧಿಕರಣದ ಪ್ರಮೇಯವನ್ನು ಹೇಳುತ್ತಿದ್ದಾರೆ. ಸೇಶ್ವರಸಾಂಖ್ಯಮತಮ್ = ಪ್ರಧಾನವೇ ಜಗತ್‌ಕರ್ತೃ. ಈಶ್ವರನು ಗುಣಭೂತನಾಗಿರುತ್ತಾನೆ ಎಂದು ಹೇಳುತ್ತದೆ. ಈ ಸೇಶ್ವರಸಾಂಖ್ಯಮತವನ್ನು, ನಿರಾಕರೋತಿ = ಈ ಅಧಿಕರಣದಲ್ಲಿ ನಿರಾಕರಣೆ ಮಾಡಲಾಗಿದೆ. ಯಥಾ = ಯಾವ ರೀತಿಯಾಗಿ, ಪೃಥಿವ್ಯಾ ಏವ = ಭೂಮಿಯಿಂದಲೇ, ಪರ್ಜನ್ಯಾನುಗೃಹೀತಂ = ಮಳೆಯ ಸಹಕಾರ ಪಡೆದ, ತೃಣಾದಿಕಮ್ = ಹುಲ್ಲು ಮೊದಲಾದವುಗಳು ಸಹಜವಾಗಿ, ಉತ್ಪದ್ಯತೇ = ಹುಟ್ಟುತ್ತದೋ, ಏವಂ = ಅದೇ ರೀತಿಯಾಗಿ, ಈಶ್ವರಾನುಗೃಹೀತಂ = ಈಶ್ವರ ಅನುಗ್ರಹ ಪಡೆದ, ಪ್ರಧಾನಾತ್ = ಪ್ರಕೃತಿಯಿಂದಲೇ, ಜಗತ್ = ಜಗತ್ತಿನ ಸೃಷ್ಟ್ಯಾದಿಗಳು ನಡೆಯುತ್ತವೆ. ಇತಿ = ಹೀಗೆಂಬುದಾಗಿ.

**भाष्यम् – अतो ब्रवीति –**

**।। अन्यत्राभावाच्च न तृणादिवत् ।।१।।**

ಅನುವಾದ - ಮೇಲೆ ಹೇಳಿದ ಸೇಶ್ವರಸಾಂಖ್ಯಮತವನ್ನು ನಿರಾಕರಣ ಮಾಡಲು ಸೂತ್ರವು ಹೊರಟಿದೆ. ಹುಲ್ಲು ಮೊದಲಾದವುಗಳ ಉತ್ಪತ್ತಿಯಲ್ಲಿ ಮಳೆಯು ಸಹಕಾರಿ ಆದಂತೆ ಈಶ್ವರನು ಜಗದುತ್ಪತ್ತಿಯಲ್ಲಿ ಸಹಕಾರಿಯಲ್ಲ. ಸ್ವತಂತ್ರವಾಗಿ ಉತ್ಪಾದಕನಾಗಿದ್ದಾನೆ.

ಪ್ರತಿಪದಾರ್ಥ -- ಅತಃ = ಮೇಲಿನ ಆಕ್ಷೇಪಕ್ಕೆ, ಬ್ರವೀತಿ = ಉತ್ತರವನ್ನು ನೀಡುತ್ತಿದ್ದಾರೆ. ಆದ್ದರಿಂದ 'ಅನ್ಯತ್ರಭಾವಾಚ್ಚ ನ ತೃಣಾದಿವತ್' ಎಂಬುದಾಗಿ.

**भाष्यम् –**

**'यच्च किञ्चिज्जगत्सर्वं दृश्यते श्रूयतेऽपि वा ।**
**अन्तर्बहिश्च तत्सर्वं व्याप्य नारायणः स्थितः ।।'**

ಅನ್ಯತ್ರಾಭಾವಾಧಿಕರಣ (೨-೨-೨)

**'ब्रह्मण्येवेदमाविरासीद्, ब्रह्मणि स्थितं, ब्रह्मणि लयमभ्युपैति ब्रह्मैवाधस्ताद्, ब्रह्मैवोपरिष्टाद्, ब्रह्म मध्यतो ब्रह्म सर्वतः, 'ब्रह्मैवेदं सर्वम्' (बृ.४.५.१) इत्यादिश्रुतिभ्योऽन्यत्र जगतोऽभावात् तृणादीनां पर्जन्यवन्नानुग्राहकत्वमात्रमीश्वरस्य ।**

ಅನುವಾದ - ಈ ಕಣ್ಣಿಗೆ ಕಾಣಿಸುವ ಪ್ರಪಂಚದಲ್ಲಿ ಏನೇನು ಇವೆಯೋ ಅಥವಾ ಕಿವಿಯಿಂದ ಕೇಳಿಸುತ್ತಿರುವ ಯಾವ ಪದಾರ್ಥಗಳಿವೆಯೋ ಅವುಗಳೆಲ್ಲವನ್ನು ಒಳಗಿನಿಂದ ಹಾಗೂ ಹೊರಗಿನಿಂದ ವ್ಯಾಪಿಸಿ ನಿಂತಿರುವನು. ಪ್ರತಿಯೊಂದು ವಸ್ತುಗಳ ಸ್ಥಿತಿಗೆ ಕಾರಣನಾಗಿರುವವನು ನಾರಾಯಣನೇ ಆಗಿದ್ದಾನೆ. ಇವನೇ ಜಗತ್ತಿಗೆ ಕಾರಣಪುರುಷನು.

ಬ್ರಹ್ಮನಿಂದಲೇ ಈ ಜಗತ್ತು ಉದ್ಭವವಾಗಿದೆ. ಬ್ರಹ್ಮನಲ್ಲಿಯೇ ಆಶ್ರಯ ಪಡೆದಿದೆ. ಬ್ರಹ್ಮನಿಂದಲೇ ಸಂಹಾರವನ್ನು ಹೊಂದುತ್ತದೆ. ಬ್ರಹ್ಮನು ಪ್ರತಿಯೊಂದು ವಸ್ತುಗಳ ಕೆಳಗೆ ಮೇಲೆ ಮಧ್ಯಭಾಗದಲ್ಲಿ ಮತ್ತು ಎಲ್ಲೆಡೆಯು ಅಂತರ್ಯಾಮಿಯಾಗಿ ನೆಲೆಸಿದ್ದಾನೆ.

ಬ್ರಹ್ಮನೇ ಈ ಜಗತ್ತಿನ ಎಲ್ಲಡೆಯೂ ತುಂಬಿದ್ದಾನೆ.

ಇವೇ ಮೊದಲಾದ ಶ್ರುತಿವಾಕ್ಯಗಳಿಂದ ಬ್ರಹ್ಮನನ್ನು ಬಿಟ್ಟು ಜಗತ್ತು ಅಸ್ತಿತ್ವವನ್ನು ಪಡೆದಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಹುಲ್ಲು ಬೆಳೆಯಲು ಮಳೆಯು ಕೇವಲ ಸಹಕಾರ ಮಾಡುವಂತೆ ಜಗತ್ತಿನ ಸೃಷ್ಟಿಗೆ ಬ್ರಹ್ಮನು ಕೇವಲ ಸಹಕಾರಿ ಆಗಿದ್ದಾನೆಂದು ಹೇಳುವುದು ಅಯುಕ್ತವಾಗಿದೆ.

ಪ್ರತಿಪದಾರ್ಥ -- ಯತಃ = ಯಾವ, ಕಿಂಚಿತ್ = ಜಗತ್, ಕಿಂಚಿತ್‌ದೃಶ್ಯತೇ = ಸಣ್ಣ ವಸ್ತುವಿನಿಂದ ಆರಂಭಿಸಿ ಕಣ್ಣಿಗೆ ಕಾಣಿಸುವ ಪ್ರತಿಯೊಂದರಲ್ಲಿ, ಸರ್ವಜಗತ್ = ಅಂಥ ಜಗತ್ತಿನ ಒಳಗೆ, ಚ = ಮತ್ತು, ಬಹಿಃ = ಹೊರಗೆ, ದೃಶ್ಯತೇ = ಕಾಣಿಸುತ್ತಿದೆಯೋ, ಶ್ರೂಯತೇऽಪಿ ವಾ = ಕೇಳಿಸಲ್ಪಡುತ್ತಿದೆಯೋ, ಸರ್ವಂ ಜಗತ್ = ಈ ಎಲ್ಲಾ ಜಗತ್ತು, ಇದರ ಒಳಗೂ, ಬಹಿಃ ಚ = ಹೊರಗೂ ಬ್ರಹ್ಮನಿಂದ ತುಂಬಿದೆ. ನಾರಾಯಣಃ = ಶ್ರೀಮಾನ್‌ನಾರಾಯಣನು, ವ್ಯಾಪ್ಯ = ಸಮಸ್ತ ವ್ಯಾಪಿಸಿ, ಸ್ಥಿತಃ = ನೆಲೆಸಿದ್ದಾನೆ.

ಇದಂ = ಈ ಜಗತ್ತನ್ನು, ಬ್ರಹ್ಮಣಿ ಏವ = ಬ್ರಹ್ಮನಲ್ಲಿಯೇ, ಆವಿರಾಸೀತ್ = ಉದ್ಭವವನ್ನು ಪಡೆಯಿತು. ಬ್ರಹ್ಮಣಿ = ಬ್ರಹ್ಮನಲ್ಲಿಯೇ, ಸ್ಥಿತಂ = ಆಶ್ರಯವನ್ನು ಪಡೆದಿದೆ. ಬ್ರಹ್ಮನಲ್ಲಿಯೇ ಲಯಂ = ಲಯವನ್ನು. ಅಭ್ಯಪೇತಿ = ಹೊಂದುತ್ತದೆ. ಬ್ರಹ್ಮೈವ = ಬ್ರಹ್ಮನೇ, ಮಧ್ಯತಃ = ಜಗತ್ತಿನ ಮಧ್ಯಭಾಗದಲ್ಲಿ, ಬ್ರಹ್ಮೈವ = ಬ್ರಹ್ಮನೇ, ಸರ್ವತಃ = ಎಲ್ಲ ಕಡೆಗಳಲ್ಲಿ, ಬ್ರಹ್ಮೈವ = ಬ್ರಹ್ಮನೇ, ಇದಂ ಸರ್ವಂ = ಈ ಎಲ್ಲ ಜಗತ್ತು, ಬ್ರಹ್ಮೈವ = ಬ್ರಹ್ಮನದೇ ಆಗಿದೆ, ಇತ್ಯಾದಿ ಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳ ಆಧಾರದಿಂದ, ಅನ್ಯತ್ರ = ಭಗವಂತನನ್ನು ಬಿಟ್ಟು, ಜಗತೋऽಭಾವಾತ್ = ಜಗತ್ತೇ ಇಲ್ಲದ ಕಾರಣ, ತೃಣಾದೀನಾಂ = ಹುಲ್ಲು ಮೊದಲಾದವುಗಳಿಗೆ, ಪರ್ಜನ್ಯವತ್ = ಮಳೆಯಂತೆ, ಅನುಗ್ರಾಹಕತ್ವ ಮಾತ್ರಂ = ಸಹಕಾರವನ್ನು ಮಾತ್ರ ಹೇಳುವಿಕೆಯು, ಈಶ್ವರಸ್ಯ = ಬ್ರಹ್ಮನಿಗೆ, ನ = ಸರ್ವಥಾ ಕೂಡುವುದಿಲ್ಲ. ಈಶ್ವರನು ಸ್ವತಂತ್ರಕಾರಣನಾಗಿರುತ್ತಾನೆ.

ಪರಿಪೂರ್ಣಚಂದ್ರಿಕಾ

भाष्यम् –

'स एव भूयो निजवीर्यचोदितां स्वजीवमायां प्रकृतिं सिसृक्षतीम् ।
अनामरूपात्मनि रूपनामनी विधित्समानोऽनुससार शास्तिकृत् ।।'

इति भागवते । 'द्रव्यं कर्म च कालश्च' इत्यादि च । चशब्देन प्रकृतिसत्तादिप्रदत्वं चाङ्गीकृतम् ।।१।।

।। इति श्रीमदानन्दतीर्थभगवत्पादाचार्यविरचिते
ब्रह्मसूत्रभाष्ये अन्यत्राभावाधिकरणम् ।। २ ।।

ಅನುವಾದ - ಜಗತ್ತಿಗೆ ಆದೇಶ ಮಾಡುವ ಶ್ರೀಹರಿಯೇ ರೂಪಗಳಿಲ್ಲದ ತನಗೆ ಆಧಾರವಾಗಿರುವ ಪ್ರಕೃತಿಯಲ್ಲಿ ಅರ್ಥ ಮತ್ತು ಶಬ್ದಗಳನ್ನು ಪುನಃ ಸೃಷ್ಟಿ ಮಾಡಲು ಶ್ರದ್ಧೆಯುಳ್ಳವನಾಗಿ ತನ್ನ ಸಾಮರ್ಥ್ಯದಿಂದ ಪ್ರೇರಿತವಾದ ತನ್ನ ಅಧೀನವಾಗಿ ಜೀವನಿಗೆ ಬಂಧವನ್ನು ನೀಡುವ ಸೃಷ್ಟಿಗೆ ತೊಡಗಿದ ಲಕ್ಷ್ಮಿಯನ್ನು ಅನುಗ್ರಹಿಸಿದನು. ಹೀಗೆ ಭಾಗವತದಲ್ಲಿ ಹೇಳಲಾಗಿದೆ. ಮತ್ತು ದ್ರವ್ಯ, ಕರ್ಮ, ಕಾಲ, ಇವೆಲ್ಲವೂ ಈಶ್ವರನ ಅಧೀನವೇ ಆಗಿವೆಯೆಂದು ಭಾಗವತ ಹೇಳುತ್ತಿದೆ. ಸೂತ್ರದಲ್ಲಿರುವ ಚಶಬ್ದದಿಂದ ಪ್ರಕೃತಿಗೆ ಶಕ್ತಿ, ಸತ್ತಾ ಮೊದಲಾದವುಗಳನ್ನು ಕೊಡುವವನು ಭಗವಂತನೇ ಆಗಿದ್ದಾನೆಂದು ಒಪ್ಪಲಾಗಿದೆ.

ಪ್ರತಿಪದಾರ್ಥ -- ಸೂತ್ರದಲ್ಲಿರುವ ಚ ಶಬ್ದವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಯಃ = ಯಾವ ಪರಮಾತ್ಮನು ಪ್ರಳಯಕಾಲದಲ್ಲಿದ್ದನೋ, ಸೈವ = ಅವನೇ, ಭೂಯಃ = ಮತ್ತೆ, ಶಾಸ್ತಿಕೃತ್ = ಜಗತ್ತಿನ ಶಾಸನ ಮಾಡುವ, ಸ ಏವ = ಆ ಶ್ರೀಹರಿಯೇ, ಅನಾಮರೂಪಾತ್ಮನಿ = ನಾಮ ಮತ್ತು ರೂಪಗಳಿಲ್ಲದ ತನಗೆ ಆಧಾರವಾಗಿರುವ ಪ್ರಕೃತಿಯಲ್ಲಿ, ರೂಪನಾಮನೀ = ಅರ್ಥ ಮತ್ತು ಶಬ್ದ ಪ್ರಪಂಚಗಳನ್ನು, ವಿಧಿತ್ಸಮಾನಃ = ಸೃಷ್ಟಿ ಮಾಡಲು ಇಚ್ಛೆಯುಳ್ಳವನಾಗಿ, ನಿಜವೀರ್ಯಚೋದಿತಾನ್ = ತನ್ನ ಸಾಮರ್ಥದಿಂದ ಪ್ರೇರಿತವಾದ, ಸ್ವಜೀವಮಾಯಾಮ್ = ತನ್ನ ಅಧೀನವಾಗಿ ಜೀವನಿಗೆ ಬಂಧನವನ್ನು ಉಂಟುಮಾಡುವ, ಸಿಸೃಕ್ಷತೀಮ್ = ಸೃಷ್ಟಿಗೆ ತೊಡಗಿದ, ಪ್ರಕೃತಿಂ = ಲಕ್ಷ್ಮೀದೇವಿಯನ್ನು, ಅನುಸಸಾರ = ಅನುಸರಿಸಿದನು. ಇತಿ = ಹೀಗೆ, ಭಾಗವತೇ = ಭಾಗವತ ಗ್ರಂಥದಲ್ಲಿ ಹೇಳಲಾಗಿದೆ.

ಮತ್ತು ದ್ರವ್ಯಂ ಕರ್ಮ ಚ ಕಾಲಶ್ಚ = ದ್ರವ್ಯ ಕರ್ಮ ಕಾಲ ಇವೆಲ್ಲವೂ ಭಗವಂತನ ಅನುಗ್ರಹವಿದ್ದರೆ ಮಾತ್ರ ಇರಲು ಸಾಧ್ಯ. ಇತ್ಯಾದಿಚ = ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ ಪರಮಾತ್ಮನೊಬ್ಬನೇ ಸ್ವತಂತ್ರಕರ್ತೃವೆಂದು ಸಿದ್ಧವಾಗುತ್ತದೆ. ಪರಮಾತ್ಮನು ಕೇವಲ ಅನುಗ್ರಾಹಕನಷ್ಟೇ ಅಲ್ಲ, ಚ = ಶಬ್ದೇನ ಸೂತ್ರದಲ್ಲಿರುವ ಚ ಶಬ್ದದಿಂದ, ಪ್ರಕೃತಿ ಸತ್ತಾದಿ ಪ್ರದತ್ವಂ = ಪ್ರಕೃತ್ಯಾದಿಗಳಿಗೆ ಸತ್ತಾದಿಗಳನ್ನು ಕೊಡುವವನೂ ಆಗಿದ್ದಾನೆಂದು, ಅಂಗೀಕೃತಮ್ = ಅಂಗೀಕರಿಸಲಾಗಿದೆ.

ಇಲ್ಲಿಗೆ ಅನ್ಯತ್ರಾಭಾವಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.
ಅನ್ಯತ್ರಾಭಾವಾಧಿಕರಣ (೨-೨-೨)

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अधिकरणार्थं दर्शयति ।। सेश्वरेति ।। अत एवात्र विष्णोः स्वतन्त्रकर्तृत्वे सेश्वरसाङ्ख्यसमयविरोधनिरासादस्ति शास्त्रादिसङ्गतिः।**

ಈ ಅಧಿಕರಣದ ಪ್ರಮೇಯವನ್ನು ಭಾಷ್ಯಕಾರರು 'ಸೇಶ್ವರಸಾಂಖ್ಯಮತಂ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ಆದ್ದರಿಂದ ಈ ಅಧಿಕರಣದಲ್ಲಿ ವಿಷ್ಣುವಿನ ಸ್ವತಂತ್ರಕರ್ತೃತ್ವ ವಿಷಯದಲ್ಲಿ ಸೇಶ್ವರಸಾಂಖ್ಯಮತದ ವಿರೋಧವನ್ನು ನಿರಾಕರಣೆ ಮಾಡಿದಂತಾಯಿತು. ಆದ್ದರಿಂದ ಶಾಸ್ತ್ರಾದಿ-ಸಂಗತಿಗಳು ಇರುತ್ತದೆ.

ವಿವರಣೆ - 'ನ ಋತೇ ತ್ವತ್‌ಕ್ರಿಯತೇ' ಇತ್ಯಾದಿ ಶ್ರುತಿಯು ಗುಣಭರಿತನಾದ ಈಶ್ವರ ವಿಷಯಕವಾಗಿದೆ. ಆದ್ದರಿಂದ 'ವ್ಯತಿರೇಕಾನವಸ್ಥಿತೇಃ' ಎಂಬ ಸೂತ್ರದಲ್ಲಿ ಹೇಳಿದ ದೋಷವು ಬರುವುದಿಲ್ಲ. ಹಿಂದೆ ನಿರೀಶ್ವರಸಾಂಖ್ಯವಾದಿಗಳನ್ನು ನಿರಾಕರಿಸಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯಸಂಗತಿಯು ಪ್ರಾಪ್ತವಾಗುತ್ತದೆ. ಈ ಮತದಲ್ಲಿ ಸಾಂಖ್ಯರು ಈಶ್ವರನನ್ನು ಒಪ್ಪಿದರೂ ಕೂಡ ಈಶ್ವರನಿಗೆ ಸ್ವಾತಂತ್ರ್ಯವನ್ನು ಒಪ್ಪದ ಕಾರಣ ನಿರೀಶ್ವರವಾದದಲ್ಲಿ ಅಂತರ್ಭಾವ ಆಗುವುದಿಲ್ಲ. ಆದ್ದರಿಂದ ಈಶ್ವರನನ್ನು ಒಪ್ಪುವ ವೈಶೇಷಿಕಾದಿಮತದ ಜೊತೆ ಇದನ್ನು ಸೇರಿಸಿಲ್ಲ. (ವಾಕ್ಯಾರ್ಥ ಮುಕ್ತಾವಳಿ)

**तत्वप्रकाशिका – स्वातन्त्र्येण जगत्कर्तेश्वर इति निगदितम् । तस्य च साङ्ख्यसमयविरोधे लक्षणानुपपत्तिः स्यात् इत्यवश्यं निरसनीयः । तद्धरेः स्वातन्त्र्येण जगत्कारणत्वं विषयः । युक्तमयुक्तं वेति संशयः । मतविमतिः सन्देहबीजम् ।**

ವಿಷ್ಣುವೇ ಜಗತ್ತಿಗೆ ಸ್ವತಂತ್ರಕರ್ತೃ ಆಗಿದ್ದಾನೆಂದು ಈ ಹಿಂದೆ ಹೇಳಲಾಯಿತು. ವಿಷ್ಣುವಿನ ಈ ಜಗತ್‌ಕರ್ತೃತ್ವಲಕ್ಷಣಕ್ಕೆ ಸಾಂಖ್ಯಮತದ ವಿರೋಧವು ಬರುತ್ತದೆ. ಆದ್ದರಿಂದ ಇದು ವಿಷ್ಣುವಿನ ಲಕ್ಷಣವಾಗುವುದಿಲ್ಲ. ಅದಕ್ಕಾಗಿ ಈ ಸಾಂಖ್ಯಮತವನ್ನು ಅವಶ್ಯವಾಗಿ ನಿರಾಕರಣೆ ಮಾಡಬೇಕು. ವಿಷ್ಣುವು ಸ್ವತಂತ್ರನಾಗಿ ಜಗತ್ತಿಗೆ ಕಾರಣ ಎಂಬುದು ಈ ಅಧಿಕರಣದ ವಿಷಯ. ಜಗತ್ಕಾರಣತ್ವವು ವಿಷ್ಣುವಿನಲ್ಲಿ ಯುಕ್ತವೋ ಅಯುಕ್ತವೋ? ಎಂಬುದು ಸಂದೇಹ. ಮತಗಳಲ್ಲಿರುವ ವೈಮತ್ಯವೇ ಸಂದೇಹಬೀಜ.

**तत्वप्रकाशिका – पूर्वपक्षयति – यथेति ।। नेश्वरस्य स्वतन्त्रकर्तृत्वं युक्तम्। प्रधानादेव जगदुत्पत्तेः सम्भवात् । न चाचेतनस्य स्वतः प्रवृत्त्यनुपपत्तिरित्युक्तमेवेति वाच्यम्। प्रधानादेव जगदुत्पत्तावीश्वरस्यानुग्राहकत्वाभ्युपगमात् ।**

ಅಧಿಕರಣದ ಪೂರ್ವಪಕ್ಷವನ್ನು 'ಯಥಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಈಶ್ವರನಿಗೆ ಸ್ವತಂತ್ರ ಕರ್ತೃತ್ವವು ಅಯುಕ್ತವಾಗಿದೆ. ಪ್ರಕೃತಿಯಿಂದಲೇ ಜಗತ್ತು ಹುಟ್ಟುವಾಗ ಈಶ್ವರನೇಕೆ ಬೇಕು. ಅಚೇತನವಾದ ಪ್ರಕೃತಿಗೆ ಸ್ವತಃಪ್ರವೃತ್ತಿಯು ಅನುಪಪನ್ನವೆಂದು ಈಗಾಗಲೇ ಹೇಳಿದ್ದೇವಲ್ಲವೆ? ಎಂದು ಪ್ರಶ್ನಿಸಬಾರದು. ಪ್ರಕೃತಿಯಿಂದಲೇ ಜಗತ್ತು ಹುಟ್ಟುತ್ತದೆ. ಇಂಥ ಪ್ರಕೃತಿಗೆ ಈಶ್ವರನು ಅನುಗ್ರಹಕನಾಗಿದ್ದಾನೆಂದು ಒಪ್ಪುತ್ತೇವೆ.

**तत्वप्रकाशिका – यथा खलु पृथिव्येव तृणादिकार्याणां प्रधानं कारणं पर्जन्यानुग्रहेण चोत्पादयति। तथा प्रधानस्यैव प्राधान्यमीश्वरस्त्वनुग्राहकमात्रमिति न तस्य स्वातन्त्र्येण जगत्कारणत्वलक्षणं युक्तमिति भावः ।**

ಹುಲ್ಲು ಮೊದಲಾದ ಸಸ್ಯಗಳ ಉತ್ಪತ್ತಿಗೆ ಭೂಮಿಯೇ ಮುಖ್ಯ ಕಾರಣ. ಮಳೆಯು ಕೇವಲ ಸಹಕಾರಿ. ಅದರಂತೆ ಪ್ರಧಾನವೇ ಜಗತ್ತಿನ ಉತ್ಪತ್ತಿಗೆ ಮುಖ್ಯಕಾರಣ. ಈಶ್ವರನು ಕೇವಲ ಸಹಕಾರಿ. ಹೀಗಿರುವಾಗ ಸ್ವತಂತ್ರಕಾರಣತ್ವ ಲಕ್ಷಣವು ಈಶ್ವರನಲ್ಲಿ ಯುಕ್ತವಾಗುವುದಿಲ್ಲ.

**तत्वप्रकाशिका – सिद्धान्तयत्सूत्रमवतार्य व्याचष्टे ।। अत इति ।। युक्तमेव विष्णोर्जगत्कारणत्वं स्वातन्त्र्येण न तु यथा तृणादीनां पर्जन्योऽनुग्राहकस्तथाऽनुग्राहकत्वमात्रम् । सर्वपदार्थानां सत्तादिप्रदानाय सर्वगतत्वोक्तेरीश्वरप्रेरणामन्तरेण कस्यापि वस्तुनः सत्त्वस्यैवाभावात् ।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ 'ಅತಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಸ್ವಾತಂತ್ರ್ಯೇಣ ಜಗತ್ಕಾರಣತ್ವವು ವಿಷ್ಣುವಿನ ಲಕ್ಷಣವೆಂದು ಹೇಳಿದ್ದು ಯುಕ್ತವೇ ಆಗಿದೆ. ಹೊರತಾಗಿ ಹುಲ್ಲು ಮೊದಲಾದ ಸಸ್ಯಗಳಿಗೆ ಮಳೆಯನೀರು ಸಹಕಾರಿಯಾದಂತೆ ವಿಷ್ಣು ಜಗದುತ್ಪತ್ತಿಗೆ ಕೇವಲ ಸಹಕಾರಿಯಾಗಿರುವುದಿಲ್ಲ. ಪ್ರತಿಯೊಂದು ಪದಾರ್ಥಗಳಿಗೆ ಸತ್ತಾ ಮೊದಲಾದವುಗಳನ್ನು ನೀಡುವ ಮೂಲಕ ಸರ್ವಗತನಾಗಿದ್ದಾನೆ. ಭಗವಂತನ ಪ್ರೇರಣೆಯಿಲ್ಲದೆ ಯಾವುದೇ ವಸ್ತುಗಳಿಗೆ ಅಸ್ತಿತ್ವವೇ ಕೂಡುವುದಿಲ್ಲ.

ವಿವರಣೆ - ಸಾಂಖ್ಯರು ಅನುಗ್ರಾಹಕಶಬ್ದಕ್ಕೆ ತನ್ನ ಶಕ್ತಿಯಿಂದಲೇ ಜಗದಾಕಾರವಾಗಿ ಪರಿಣಾಮವನ್ನು ಹೊಂದುವ ಪ್ರಧಾನಕ್ಕೆ ಪರಮಾತ್ಮನು ದೂರದಲ್ಲಿದ್ದು ಜಲದಾನಾದಿಗಳ ಮೂಲಕ ಸ್ವಲ್ಪ ಮಾತ್ರ ಉಪಕಾರಕನಾಗಿದ್ದಾನೆಂದು ಹೇಳುತ್ತಾರೆ. ಇಂಥ ಅನುಗ್ರಾಹಕತ್ವವನ್ನು ಈಶ್ವರನಲ್ಲಿ ಸರ್ವಥಾ ಒಪ್ಪಬಾರದೆಂದು ನಿರಾಕರಿಸಿದ್ದಾರೆ. (ಗುರ್ವರ್ಥದೀಪಿಕಾ)

ಪ್ರಧಾನದಿಂದ ಜಗತ್ತು ಉತ್ಪತ್ತಿಯಾಗುವಾಗ ಈಶ್ವರನಲ್ಲಿ ಒಪ್ಪಿದ ಅನುಗ್ರಾಹಕತ್ವವೆಂದರೆ ಫಲೋಪಕಾರಿಲಿಂಗತ್ವರೂಪವಾದದ್ದು ಹೊರತು ಸಾಧನೋಪಕಾರಿರೂಪತ್ವವಾದದ್ದು ಅಲ್ಲ. ಆದ್ದರಿಂದಲೇ ಭಾಷ್ಯದಲ್ಲಿ ಮಳೆಯ ಸಹಕಾರಿವುಳ್ಳದ್ದು ಹುಲ್ಲು. ಈಶ್ವರನ ಸಹಕಾರವುಳ್ಳದ್ದು ಜಗತ್ತು ಎಂಬುದಾಗಿ ಹೇಳಿರುತ್ತಾರೆ. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – न हि 'यदधीनं यस्य सत्तादि' तत्तस्यानुग्राहकमात्रमिति भावः । 'ब्रह्मैवेदं सर्वम्' इति तदधीना सत्तेत्युच्यते । न केवलं कार्यस्येश्वराधीनत्वान्नानुग्राहकत्वमात्रं तस्य किन्तु सर्वकारणत्वेनाभ्युपगतप्रकृतिसत्तादेरपि तदधीनत्वम् । अतश्च विष्णोरेव स्वातन्त्र्यमिति सप्रमाणकं सूत्राक्षरार्थमाह – स इति**

ಯಾವ ವಸ್ತುವಿನ 'ಸತ್ತಾ' ಮೊದಲಾದವು ಯಾರ ಅಧೀನವೋ ಆ ವ್ಯಕ್ತಿಯು ಆ ವಸ್ತುವಿಗೆ ಕೇವಲ ಅನುಗ್ರಾಹಕನಾಗಲು ಸಾಧ್ಯವಿಲ್ಲ ಎಂಬುದು ಈ ಅಧಿಕರಣದ ಅಭಿಪ್ರಾಯ. 'ಬ್ರಹ್ಮೈವೇದಂ' ಎಂಬ ಶ್ರುತಿಯು ಸಮಸ್ತ ಜಗತ್ತಿನ ಅಸ್ತಿತ್ವವು ಭಗವದಧೀನವೆಂದು ಹೇಳುತ್ತಿದೆ. ಕೇವಲ ಜಗತ್ತು ಈಶ್ವರನ ಅಧೀನವಾದ್ದರಿಂದ ಅನುಗ್ರಾಹಕವೆಂದು ಅಭಿಪ್ರಾಯವಲ್ಲ. ಸರ್ವಕಾರಣವೆಂದು ಅಂಗೀಕಾರ ಮಾಡಿರುವುದರಿಂದ ಪ್ರಕೃತಿಯ ಸತ್ತಾದಿಗಳೂ ಕೂಡ ಭಗವದಧೀನವೇ ಆಗಿವೆ. ಆದ್ದರಿಂದಲೂ ಜಗತ್ತಿನ ಉತ್ಪತ್ತಿವಿಷಯದಲ್ಲಿ ವಿಷ್ಣುವೇ ಸ್ವತಂತ್ರ ಎಂಬ ವಿಷಯವು ಪ್ರಮಾಣದಿಂದ ನಿಶ್ಚಿತವಾಗಿದೆ ಎಂಬ ಸೂತ್ರದ ಅಭಿಪ್ರಾಯವನ್ನು ಭಾಷ್ಯಕಾರರು 'ಸಚ' ಇತ್ಯಾದಿಯಾಗಿ ಪ್ರತಿಪಾದನೆ ಮಾಡುತ್ತಿದ್ದಾರೆ.

**तत्वप्रकाशिका – 'स एव' इति हर्यधीनोद्बोधत्वं प्रकृतेरुच्यते । द्रव्यमिति तदधीनसत्त्वम् । स्वजीवमायां स्वाधीनां जीवबन्धिकाम् । सिसृक्षतीं सर्जनोन्मुखीम्। आत्मनि आत्माधारत्वेन । चशब्देन सूचितमिति शेषः । अतः सेश्वरसाङ्ख्यमतस्याप्रमाणिकत्वेनाविरोधाद्युक्तं हरेर्जगत्कारणमिति सिद्धम् ।।५।।**

ಭಾಷ್ಯದಲ್ಲಿ ಉದಾಹರಿಸಿದ ಭಾಗವತದ ಮಾತಿನಲ್ಲಿ 'ಸ ಏವ' ಎಂಬುದರಿಂದ ಪ್ರಕೃತಿಯು ಭಗವಂತನ ಅಧೀನವೆಂದು ಹೇಳಲಾಗಿದೆ. 'ದ್ರವ್ಯಂ ಕರ್ಮ ಚ' ಎಂಬ ಪ್ರಮಾಣದಿಂದ ಪ್ರಕೃತಿಯಲ್ಲಿರುವ ಸತ್ತಾವು ಭಗವಂತನ ಅಧೀನವೆಂದು ಹೇಳಲಾಗಿದೆ.

'ಸ್ವಜೀವಮಾಯಾಂ' ಎಂಬ ಪದಕ್ಕೆ ತನ್ನ ಅಧೀನವಾದ ಜೀವನಿಗೆ ಬಂಧಕಳಾದ ಲಕ್ಷ್ಮೀ ಎಂದರ್ಥ. 'ಸಿಸೃಕ್ಷತೀಂ' ಎಂಬುದಕ್ಕೆ ಸೃಷ್ಟಿಗೆ ಉನ್ಮುಖಳಾಗಿ ಎಂದು 'ಆತ್ಮನಿ' ಎಂಬುದಕ್ಕೆ ತನ್ನಲ್ಲಿ ಆಶ್ರಯಿಸಿರುವಂತೆ ಎಂದರ್ಥ. ಸೂತ್ರದಲ್ಲಿರುವ ಚ ಶಬ್ದದಿಂದ ಈ ಎಲ್ಲಾ ಪ್ರಮಾಣಗಳನ್ನು ಸೂಚನೆ ಮಾಡಿದ್ದಾರೆ ಎಂದು ಶೇಷಪೂರಣೆ ಮಾಡಿಕೊಳ್ಳಬೇಕು.

ಆದ್ದರಿಂದ ಸೇಶ್ವರಸಾಂಖ್ಯಮತವು ಕೂಡ ಅಪ್ರಾಮಾಣಿಕವಾಗಿದೆ. ಇದರ ವಿರೋಧವು ಶ್ರೀಹರಿಯ ಜಗತ್ಕಾರಣತ್ವಕ್ಕೆ ಸರ್ವಥಾ ಬರುವುದಿಲ್ಲ. ಆದ್ದರಿಂದ ಶ್ರೀಹರಿಯು ಸ್ವತಂತ್ರವಾಗಿ ಜಗತ್ಸೃಷ್ಟ್ಯಾದಿಕಾರಣ ಎಂಬ ಪ್ರಮೇಯವು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅನ್ಯತ್ರಾಭಾವಾಧಿಕರಣ ಮುಗಿಯಿತು.

# ಅಭ್ಯುಪಗಮಾಧಿಕರಣ

(೨-೨-೩)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಅಭ್ಯುಪಗಮಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – अभ्युपगमेऽप्यर्थाभावात् ।।**

ಚಾರ್ವಾಕರು ತನ್ನ ವಾದವನ್ನು ಸಿದ್ಧಾಂತವಲ್ಲವೆಂದು ಹೇಳಿದರೆ ನಮ್ಮ ಇಷ್ಟವು ಸಿದ್ಧವಾಯಿತು. ಒಂದುವೇಳೆ ತನ್ನ ವಾದವು ಸಿದ್ಧಾಂತವೆಂದು ಹೇಳಿದರೆ ವಿಷಯಪ್ರಯೋಜನಗಳಿಲ್ಲವೆಂದು ಅವನೇ ಒಪ್ಪಿಕೊಂಡಿರುವುದರಿಂದ ಸ್ವವ್ಯಾಹತಿ ಬರುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** नेत्यनुवर्तते । अनभ्युपगमेऽपि चार्वाकैः स्वशास्त्रस्य सिद्धान्तत्वानभ्युपगमे सिद्धमस्मदिष्टम् । **अभ्युपगमेऽपि अर्थाभावात्** सद्धान्तत्वव्यापकयोः अर्थशब्दितविषयप्रयोजनयोः असत्वाङ्गीकारात् स्वव्याघातः स्यादिति न तत्पक्षोऽपि युक्त इत्यर्थः ।।१।।

ಅರ್ಥ -- 'ನ' ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳಬೇಕು. ಅನಭ್ಯುಪಗಮೇऽಪಿ = ತಮ್ಮ ಶಾಸ್ತ್ರಕ್ಕೆ ಚಾರ್ವಾಕರು ಸಿದ್ಧಾಂತತ್ವವನ್ನು ಒಪ್ಪದಿದ್ದರೆ ನಮ್ಮ ಇಷ್ಟವು ಸಿದ್ಧವಾಯಿತು. ಅಭ್ಯುಪಗಮೇऽಪಿ = ತಮ್ಮ ಶಾಸ್ತ್ರಕ್ಕೆ ಸಿದ್ಧಾಂತತ್ವವನ್ನು ಒಪ್ಪಿದರೂ ಕೂಡ, ಅರ್ಥಾಭಾವಾತ್ = ವಿಷಯಪ್ರಯೋಜನ ಮೊದಲಾದವನ್ನು ಇಲ್ಲವೆಂದು ಅವನು ಹೇಳಿರುವುದರಿಂದ ಸ್ವವ್ಯಾಹತಿ ದೋಷವು ಬರುತ್ತದೆ. ಆದ್ದರಿಂದ ಚಾರ್ವಾಕನ ಪಕ್ಷವು ಅಯುಕ್ತವಾಯಿತು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅಭ್ಯುಪಗಮಾಧಿಕರಣವು ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – लोकायतिकपक्षं निराकरोति –**

**।। अभ्युपगमेऽप्यर्थाभावात् ।।१।।**

**यस्य धर्माधर्मौ न स्तस्तत्सिद्धान्ते किं प्रयोजनम् ? अतः स्वव्याहतेरेवोपेक्ष्यः ।।१।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये अभ्युपगमाधिकरणम् ।। ३ ।।**

ಅನುವಾದ - ಚಾರ್ವಾಕಮತವನ್ನು ನಿರಾಕರಣೆ ಮಾಡಲು ಈ ಅಧಿಕರಣ ಹೊರಟಿದೆ.

ಯಾವ ವ್ಯಕ್ತಿಗೆ ಧರ್ಮ-ಅಧರ್ಮ ಇವುಗಳಲ್ಲಿ ವಿಶ್ವಾಸವಿಲ್ಲವೋ ಅಂಥ ಚಾರ್ವಾಕಸಿದ್ಧಾಂತವನ್ನು ಒಪ್ಪುವುದರಿಂದ ಏನು ಪ್ರಯೋಜನ? ಪ್ರಯೋಜನವಿಲ್ಲದೆ ಸಿದ್ಧಾಂತವನ್ನು ಒಪ್ಪುವುದು ಸ್ವವ್ಯಾಹತವಾಗುತ್ತದೆ. ಆದ್ದರಿಂದ ಈ ಮತವು ಉಪೇಕ್ಷೆ ಮಾಡಲು ಅರ್ಹವಾಗಿದೆ.

ಪ್ರತಿಪದಾರ್ಥ -- ಚಾರ್ವಾಕಮತ ನಿರಾಕರಣೆಗಾಗಿ ಅಧಿಕರಣ ಹೊರಟಿದೆ. ಲೋಕಾಯತಿಕಪಕ್ಷಂ = ಚಾರ್ವಾಕನ ಪಕ್ಷವನ್ನು, ನಿರಾಕರೋತಿ = ನಿರಾಕರಿಸುತ್ತಿದ್ದಾರೆ. ಯಸ್ಯ = ಯಾವ ದಾರ್ಶನಿಕನಿಗೆ, ಧರ್ಮಾಧರ್ಮೌ = ಪುಣ್ಯ ಹಾಗೂ ಪಾಪಗಳು, ನ ಸ್ತಃ = ತನ್ನ ಸಿದ್ಧಾಂತದಲ್ಲಿ ಅಂಗೀಕಾರ ಮಾಡಿರುವುದಿಲ್ಲವೊ, ತತ್‌ಸಿದ್ಧಾಂತೇ = ಅವನ ಸಿದ್ಧಾಂತದಲ್ಲಿ, ಕಿಂ ಪ್ರಯೋಜನಂ = ಯಾವ ಪ್ರಯೋಜನವಿದೆ, ಅತಃ = ಆದ್ದರಿಂದ ಸ್ವವ್ಯಾಹತೇಃ = ನನ್ನ ತಾಯಿ ಬಂಜೆ ಎಂಬಂತೆ ಸ್ವವ್ಯಾಹತಿ ಎಂಬ ದೋಷದಿಂದಲೇ ಉಪೇಕ್ಷ್ಯಃ = ಈ ಸಿದ್ಧಾಂತವು ಉಪೇಕ್ಷಣೀಯವಾಗಿದೆ.

ಇಲ್ಲಿಗೆ ಅಭ್ಯುಪಗಮಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका –**

**अधिकरणार्थं दर्शयति ।। लोकायतिकेति ।। अत एवात्र विष्णोर्जगत्कारणत्वे चार्वाकसमयविरोधपरिहारादस्ति शास्त्रादिसङ्गतिः ।**

ಈ ಅಧಿಕರಣದ ಪ್ರಮೇಯವನ್ನು ಲೋಕಯತಿಕಪಕ್ಷಮ್ ಎಂಬ ಭಾಷ್ಯದಿಂದ ತೋರಿಸುತ್ತಿದ್ದಾರೆ. ಆದ್ದರಿಂದಲೇ ವಿಷ್ಣುವಿನ ಜಗತ್ಕಾರಣತ್ವಕ್ಕೆ ಚಾರ್ವಾಕಮತದ ವಿರೋಧವನ್ನು ಪರಿಹರಿಸಿದಂತಾಯಿತು. ಇದರಿಂದ ಶಾಸ್ತ್ರಾದಿಸಂಗತಿಗಳನ್ನು ತೋರಿಸಿದಂತಾಯಿತು.

ವಿವರಣೆ - ಅಚೇತನವಾದ ಪ್ರಕೃತಿಗೆ ಜಗತ್ಕಾರಣತ್ವವನ್ನು ಒಪ್ಪುವುದು ಬೇಡ. ಶರೀರವು ಚೇತನವಾದ್ದರಿಂದ ಇದಕ್ಕೆ ಕರ್ತೃತ್ವವನ್ನು ಒಪ್ಪಬಹುದಾದ್ದರಿಂದ ಈಶ್ವರನ ಅವಶ್ಯಕತೆ ಇರುವುದಿಲ್ಲವೆಂಬುದು ಚಾರ್ವಾಕರ ಅಭಿಪ್ರಾಯ. ಸಾಂಖ್ಯರನ್ನು ಕುರಿತು ಹೇಗೆ ಶ್ರುತ್ಯಾದ್ಯಭಾವವು ಪ್ರಾಪ್ತವಾಯಿತೋ ಅದರಂತೆ ಚಾರ್ವಾಕರಿಗೆ ಶ್ರುತ್ಯಾದ್ಯಭಾವವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಶ್ರುತ್ಯಾದಿಗಳಿಗೆ ಪ್ರಾಮಾಣ್ಯವನ್ನು ಇವರು ಒಪ್ಪುವುದಿಲ್ಲ. ಹೀಗೆ ಹಿಂದಿನ ಅಧಿಕರಣದ ಮೇಲೆ ಅಭ್ಯಧಿಕಾಶಂಕೆಯಿಂದ ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಅನಂತರ್ಯಸಂಗತಿ ಇರುತ್ತದೆ. (ಭಾವದೀಪ)

**तत्वप्रकाशिका – हरिर्जगत्कर्तेत्युक्तम् । तत्र चार्वाकमतविरोधेनाभावापत्तेस् तन्निराकार्यमेव । तदीश्वरस्य जगत्कर्तृत्वं विषयः । युक्तं न वेति सन्देहः । विप्रतिपत्तिः सन्देहबीजम् ।**

ಶ್ರೀಹರಿಯೇ ಜಗತ್ತಿಗೆ ಕಾರಣಕರ್ತಾ ಎಂದು ಈಗಾಗಲೇ ಹೇಳಿದ್ದಾಗಿದೆ. ಈ ವಿಷ್ಣುವಿನ ಜಗತ್ ಕರ್ತೃತ್ವಲಕ್ಷಣಕ್ಕೆ ಚಾರ್ವಾಕಮತದಿಂದ ವಿರೋಧ ಬರುವುದರಿಂದ ಇದನ್ನು ವಿಷ್ಣುವಿನ ಲಕ್ಷಣವೆಂದೇ ಹೇಳಲಾಗದು. ಆದ್ದರಿಂದ ಚಾರ್ವಾಕಮತವನ್ನು ನಿರಾಕರಣೆ ಮಾಡಲೇ ಬೇಕು.

ಈಶ್ವರನ ಜಗತ್‌ಕರ್ತೃತ್ವವೇ ಅಧಿಕರಣದ ವಿಷಯ. ಇದು ವಿಷ್ಣುವಿನಲ್ಲಿ ಯುಕ್ತವೋ ಅಯುಕ್ತವೋ ? ಎಂಬುದು ಸಂದೇಹ. ಮತಗಳಲ್ಲಿ ವಿಪ್ರತಿಪತ್ತಿಯು ಸಂದೇಹಬೀಜ.

**तत्वप्रकाशिका – न युक्तमिति पूर्वः पक्षः । अन्तरेणापीश्वरं पूर्वपूर्वस्मादुत्तरोत्तरोत्पत्तिसम्भवात्। क्वचित्स्वभावादेव मदिरोत्पत्तिवदुपपत्तेश्च । न च साङ्ख्यं प्रतीव श्रुत्यादिबाधो वक्तुं युक्तः । तस्याप्रामाण्यात् ।**

ಈಶ್ವರನಿಗೆ ಜಗತ್‌ಕರ್ತೃತ್ವವೇ ಇಲ್ಲದಿರುವುದು ಅಧಿಕರಣದ ಪೂರ್ವಪಕ್ಷ. ಈಶ್ವರನನ್ನು ಒಪ್ಪದಿದ್ದರೂ ಕೂಡ ಜಗದುತ್ಪತ್ತಿಯನ್ನು ಕೂಡಿಬಹುದು. ಹಿಂದಿನ ಪದಾರ್ಥಗಳು ಮುಂದಿನ ಪದಾರ್ಥಗಳಿಗೆ ಕಾರಣವಾಗಿವೆ ಎಂದೇ ಹೇಳಬಹುದು. ಕೆಲವೆಡೆ ಸ್ವಭಾವದಿಂದಲೇ ಮದಿರೋತ್ಪತ್ತಿಯಂತೆ ಉಪಪನ್ನವಾಗುತ್ತದೆ. ಇವರಿಗೆ ಸಾಂಖ್ಯರಿಗೆ ಶ್ರುತ್ಯಾದಿಬಾಧವನ್ನು ಹೇಳಿದಂತೆ ಹೇಳಲಾಗದು. ಏಕೆಂದರೆ ಚಾರ್ವಾಕರು ಶ್ರುತಿಗೆ ಅಪ್ರಾಮಾಣ್ಯವನ್ನು ಒಪ್ಪಿದ್ದಾರೆ.

ವಿವರಣೆ - 'ಪೂರ್ವಪೂರ್ವಸ್ಮಾತ್' ಎಂಬುದಾಗಿ ಹೇಳಿರುವುದು ಭೂಮಿ ಬೆಟ್ಟ ಮೊದಲಾದವುಗಳ ಉತ್ಪತ್ತಿಯ ವಿಷಯದಲ್ಲಿ, ಸ್ವಭಾವದಿಂದಲೇ ಮದಿರೋತ್ಪತ್ತಿಯಂತೆ ಉತ್ಪತ್ತಿಯನ್ನು ಹೇಳಿದ್ದು ಜೀವೋತ್ಪತ್ತಿಯ ವಿಷಯದಲ್ಲಿ, ತೆಂಗಿನ ಮರದ ಒಳಗೆ ಇರುವ ನೀರು ಅದರ ಹೂವನ್ನು ಕತ್ತಿಯಿಂದ ತುಂಡು ಮಾಡಿದಾಗ ಮದಿರಾ ರೂಪದಿಂದ ಹೊರಗೆ ಬರುತ್ತದೆ. ಅದರಂತೆ ದೇಹದಲ್ಲಿ ಜೀವನು ಇದ್ದಾನೆಂದು ತಿಳಿಯಬೇಕು. ಹೀಗೆ ಚಾರ್ವಾಕರು ಭೂಮಿ ಮೊದಲಾದವುಗಳ ಉತ್ಪತ್ತಿಯ ಬಗ್ಗೆ ಮತ್ತು ಜೀವೋತ್ಪತ್ತಿಯ ಬಗ್ಗೆ ಸಮರ್ಥನೆ ಮಾಡುತ್ತಾರೆ. ಅದನ್ನು ಪ್ರಕೃತ ಟೀಕೆಯಲ್ಲಿ 'ಕ್ವಚಿತ್' ಇತ್ಯಾದಿ ವಾಕ್ಯದಿಂದ ಉಪಸ್ಥಾಪನೆ ಮಾಡಿದ್ದಾರೆ.

**तत्वप्रकाशिका – न च धर्माद्यसिद्धिविरोधः । तदनभ्युपगमात् । न हि धर्माद्यनभ्युपगमे किञ्चिद्बाधं पश्यामः । न ह्येतस्याभावापराधेन सत्यामपि बाह्यसामग्र्यां कार्यानुत्पादो दृष्टो येन जानीमोऽस्त्यलौकिकं कारणमिति । अतोऽदृष्टस्य वस्तुनोऽभावान्नेश्वरस्य जगत्कारणत्वलक्षणं युक्तमिति प्राप्ते सिद्धान्तयत्सूत्रमुपन्यस्य व्याचष्टे – अभ्युपगमेऽपीति ।।**

ಶ್ರುತಿಯನ್ನು ಅಪ್ರಮಾಣವೆಂದರೆ ಧರ್ಮಾದಿಗಳೇ ಸಿದ್ಧವಾಗುವುದಿಲ್ಲ. ಆದ್ದರಿಂದ ಧರ್ಮಾದಿಸಿದ್ಧಿಯ ವಿರೋಧವು ಬರುತ್ತದಲ್ಲವೆ ? ಎನ್ನಬಾರದು. ನಾವು ಧರ್ಮಾದಿಗಳನ್ನು ಕೂಡ ಒಪ್ಪುವುದಿಲ್ಲ. ಧರ್ಮಾದಿಗಳನ್ನು ಒಪ್ಪದಿದ್ದರೆ ಯಾವುದೇ ಬಾಧಕವು ಕಾಣಿಸುತ್ತಿಲ್ಲ. ಸಕಲಬಾಹ್ಯಸಾಮಗ್ರಿಗಳಿದ್ದು ಧರ್ಮಾದಿಗಳಿಲ್ಲ ಎಂಬ ಕಾರಣದಿಂದ ಯಾವುದಾದರು ಒಂದು ಕಾರ್ಯವು ಉತ್ಪನ್ನವಾಗಿಲ್ಲ ಎಂದು ಕಂಡಿದ್ದರೆ ಅಲೌಕಿಕವಾದ ಧರ್ಮಾದಿಗಳನ್ನು ಪ್ರಮಾಣವೆಂದು ಒಪ್ಪಬಹುದಿತ್ತು. ಆದರೆ ಹಾಗೆ ಕಂಡಿಲ್ಲ. ಆದ್ದರಿಂದ ಕಣ್ಣಿಗೆ ಕಾಣಿಸದ ಯಾವುದೇ ವಸ್ತುವೇ ಇರುವುದಿಲ್ಲ. ಹಾಗಾಗಿ ಜಗತ್ಕಾರಣತ್ವವು ಅಯುಕ್ತವಾಗಿದೆ. ಇಷ್ಟು ಈ ಅಧಿಕರಣದ ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಪರಿಹಾರಕವಾದ ಸಿದ್ಧಾಂತವನ್ನು 'ಅಭ್ಯುಪಗಮೇऽಪಿ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – युक्तमेव विष्णोर्जगत्कारणत्वमिति । यदुक्तम् - अदृष्टार्थ एव नास्तीति कुतो जगदीश्वरः कुतस्तरां जगत्कारणत्वमिति । तत् प्रष्टव्यम् ।**

**तस्सिद्धान्ते किं प्रयोजनमिति । अपेक्षितं खलु शास्त्रेऽधिकार्यादि । तत्र न तावद्धर्मस्वर्गापवर्गादि, अनभ्युपगमात् ।**

ವಿಷ್ಣುವಿನ ಜಗತ್ಕಾರಣತ್ವವು ಯುಕ್ತವೇ ಆಗಿದೆ. ಅದೃಷ್ಟಾರ್ಥವೇ ಇಲ್ಲದಿದ್ದಾಗ ಜಗತ್ತಿಗೆ ಈಶ್ವರನು ಇರಲು ಹೇಗೆ ಸಾಧ್ಯ? ಅವನಲ್ಲಿ ಜಗತ್ಕಾರಣತ್ವವು ಇರಲು ಕೂಡ ಹೇಗೆ ಸಾಧ್ಯ? ಎಂದು ಚಾರ್ವಾಕರು ಕೇಳಿದ್ದರು. ಇಂಥವರನ್ನು ಕುರಿತು ಪ್ರಶ್ನಿಸುತ್ತೇವೆ.

ಇಂಥ ಸಿದ್ಧಾಂತದಿಂದ ಏನು ಪ್ರಯೋಜನ? ಶಾಸ್ತ್ರದಲ್ಲಿ ಅಧಿಕಾರ ಪ್ರಯೋಜನ ಸಂಬಂಧಗಳು ಅತ್ಯಂತ ಆವಶ್ಯಕ. ಚಾರ್ವಾಕನು ಧರ್ಮ, ಸ್ವರ್ಗ, ಮೋಕ್ಷ ಯಾವುದನ್ನು ಕೂಡ ಅಂಗೀಕಾರ ಮಾಡಿರುವುದಿಲ್ಲ. ಆದ್ದರಿಂದ ಅದೃಷ್ಟವಾದ ಪ್ರಯೋಜನವೇ ಇಲ್ಲ.

**तत्वप्रकाशिका – नापि दृष्टं धनादि, तदभावात् । वार्तादिप्रयोजनत्वाच तस्य । न च धर्माद्यभावबोधनद्वारा लोकोपकारः । तदभावज्ञाने परस्परहिंसादिनाऽपकारस्यैव प्राप्तेः।**

ಇದರಂತೆ ದೃಷ್ಟವಾದ ಹಣ ಮೊದಲಾದ ಲಾಭವು ಕೂಡ ಚಾರ್ವಾಕನ ಸಿದ್ಧಾಂತದಿಂದ ದೊರೆಯುವುದಿಲ್ಲ. ಏಕೆಂದರೆ ಅವನ ಶಾಸ್ತ್ರವನ್ನು ಕೇಳಿದಾಗ ಹಣ ಸಿಗುತ್ತಿಲ್ಲ. ವಾಣಿಜ್ಯದಿಂದಷ್ಟೇ ಹಣವು ದೊರೆಯುತ್ತದೆ. ಧರ್ಮಾದಿಗಳು ಇರುವುದಿಲ್ಲವೆಂಬ ಪರಿಜ್ಞಾನ ಬಂದಲ್ಲಿ ಪರಸ್ಪರ ಹಿಂಸಾದಿಗಳಿಂದ ಅಪಕಾರವೇ ಪ್ರಾಪ್ತವಾಗುತ್ತದೆ.

ವಿವರಣೆ - 'ವಾರ್ತಾದಿಪ್ರಯೋಜನತ್ವಾಚ್ಚ' ಎಂಬ ಟೀಕಾವಾಕ್ಯದಲ್ಲಿರುವ ವಾರ್ತಾ ಎಂಬ ಪದಕ್ಕೆ 'ವಾಣಿಜ್ಯ' ಎಂಬರ್ಥ. ಆದಿ ಪದದಿಂದ ಕೃಷಿಯನ್ನು ವಿವಕ್ಷಿಸಬೇಕು. ವ್ಯಾಪಾರ ಕೃಷಿ ಮೊದಲಾದವುಗಳಿಂದ ಹಣ ದೊರೆಯುತ್ತದೆ. ಶಾಸ್ತ್ರವನ್ನು ಕೇಳುವುದರಿಂದ ಹಣ ದೊರೆಯುವುದಿಲ್ಲ ಎಂದರ್ಥ. ಚಾರ್ವಾಕರು ಧರ್ಮಾಧರ್ಮವನ್ನು ಒಪ್ಪದಿದ್ದರೆ ಅವರ ಶಾಸ್ತ್ರಕ್ಕೆ ಯಾವುದೇ ಪ್ರಯೋಜನ ಇರುವುದಿಲ್ಲ ಎಂಬುದು ಸಿದ್ಧಾಂತಿಗಳಾದ ನಮ್ಮ ಅಭಿಪ್ರಾಯವಾಗಿದೆ.

ಧರ್ಮಾದಿಗಳನ್ನು ಒಪ್ಪದಿದ್ದರೆ ಶಾಸ್ತ್ರಕ್ಕೆ ವಿಷಯವೂ ಕೂಡ ಇರುವುದಿಲ್ಲ. ಧರ್ಮಾದ್ಯಭಾವವನ್ನೇ ವಿಷಯ ಎನ್ನಬೇಕು. ಇದನ್ನು ಪ್ರತಿಪಾದಿಸುವುದರಿಂದ ಲೋಕಕ್ಕೆ ಯಾವ ಉಪಕಾರವಾಗುವುದಿಲ್ಲ. ಅಷ್ಟೇ ಅಲ್ಲದೆ ಧರ್ಮಾದ್ಯಭಾವದ ಪರಿಜ್ಞಾನದಿಂದ ಪರಸ್ಪರ ಹಿಂಸಾದಿಗಳೇ ಉಂಟಾಗುತ್ತವೆ. ಲೋಕೋಪಕಾರವನ್ನು ಫಲವೆಂದು ಅಂಗೀಕಾರ ಮಾಡಿದರೂ ಧರ್ಮವೇ ಇಲ್ಲದ್ದರಿಂದ ಚಾರ್ವಾಕ ಶಾಸ್ತ್ರದಿಂದ ಲೋಕೋಪಕಾರರೂಪವಾದ ಪ್ರಯೋಜನ ಇರುವುದಿಲ್ಲ. ಆದರಿಂದ ಅನರ್ಥವೇ ಆಗುತ್ತದೆ. ಆದ್ದರಿಂದ ಲೋಕೋಪಕಾರವನ್ನು ಫಲವೆಂದು ಹೇಳಲು ಸಾಧ್ಯವಿಲ್ಲ. (ಭಾವದೀಪ)

**तत्वप्रकाशिका – न चोपकारोऽपि स्वरूपतः प्रयोजनमिति । तेनापि प्रयोजनं वाच्यम् । न तावददृष्टं तदभावात् । नापि दृष्टम् । न हि कुवर्त्मना**

**गच्छन्तं प्रति मार्गोपदेशाऽविपालो लौकिकैरदृष्टनिरपेक्षैरुपक्रियते । अतो न किञ्चित्समयस्य प्रयोजनम् ।**

ಉಪಕಾರವು ಸ್ವರೂಪತಃ ಪ್ರಯೋಜನವೆಂದು ಅವರೂ ಕೂಡ ಒಪ್ಪಿರುವುದಿಲ್ಲ. ಸುಖದ ಪ್ರಾಪ್ತಿ ದುಃಖದ ನಿವೃತ್ತಿಗಳೇ ಉಪಕಾರದ ಪ್ರಯೋಜನ. ಈ ಉಪಕಾರದಿಂದ ದೊರೆಯುವ ಪ್ರಯೋಜನವು ಅದೃಷ್ಟರೂಪವೆಂದು ಹೇಳಲಾಗದು. ಏಕೆಂದರೆ ಚಾರ್ವಾಕರು ಅದೃಷ್ಟವನ್ನೇ ಒಪ್ಪಿರುವುದಿಲ್ಲ. ದೃಷ್ಟಪ್ರಯೋಜನವು ಇದೆ ಎಂದೂ ಹೇಳಲು ಸಾಧ್ಯವಿಲ್ಲ. ದಾರಿ ತಪ್ಪಿದ ಮನುಷ್ಯನಿಗೆ ಮಾರ್ಗವನ್ನು ಉಪದೇಶಿಸುವ ಕುರಿಕಾಯುವವನೇ ಮೊದಲಾದ ಲೌಕಿಕರಿಗೂ ಅದೃಷ್ಟದ ಅಪೇಕ್ಷೆ ಇಲ್ಲದಿದ್ದರೂ ಉಪಕಾರ ಮಾಡುವುದು ಕಂಡಿದೆ. ಆದ್ದರಿಂದ ಚಾರ್ವಾಕಸಿದ್ಧಾಂತಕ್ಕೆ ಯಾವುದೇ ಪ್ರಯೋಜವಿನಲ್ಲ.

ವಿವರಣೆ - ಅದೃಷ್ಟಪ್ರಯೋಜನವಿಲ್ಲದಿರುವಂತೆ ದೃಷ್ಟಪ್ರಯೋಜನವೂ ಸಹ ಇಲ್ಲ. ಉಪಕಾರ ಮಾಡಿದ ವ್ಯಕ್ತಿಯಲ್ಲಿ ಲೋಕವು ಪ್ರತ್ಯುಪಕಾರವನ್ನು ಮಾಡಿಯೇ ಮಾಡುತ್ತಾರೆ. ಆಡು ಕಾಯುವವನು ದಾರಿ ತಪ್ಪಿದವನಿಗೆ ಸರಿಯಾದ ದಾರಿಯನ್ನು ತೋರಿಸಿದರೆ ಹಣ ಮೊದಲಾದವುಗಳನ್ನು ಪಡೆಯಬಹುದೆಂಬುದು ಲೋಕದಲ್ಲಿ ಕಂಡಿದೆಯಲ್ಲವೆ? ಎಂಬ ಪ್ರಶ್ನೆಗೆ 'ನ ಹಿ' ಎಂಬ ಟೀಕೆಯಿಂದ ಉತ್ತರಿಸಿದ್ದಾರೆ. ಅಲ್ಲಿ ಪ್ರತ್ಯುಪಕಾರದಿಂದ ಅದೃಷ್ಟ ಇದೆ ಎಂಬ ಅನುಸಂಧಾನ ಇರುವುದರಿಂದ ಹಾಗೆ ಹಣವನ್ನು ನೀಡುತ್ತಾನೆ. ಆದರೆ ಚಾರ್ವಾಕನಾದ ನಿನಗೆ ಅದೃಷ್ಟದ ಅನುಸಂಧಾನವೇ ಇರುವುದಿಲ್ಲ. ಆದ್ದರಿಂದ ನಿನ್ನಿಂದ ಉಪಕೃತವಾದ ಲೋಕವು ನಿನಗೆ ಏಕೆ ಪ್ರತ್ಯುಪಕಾರವನ್ನು ಮಾಡುತ್ತದೆ ಎಂದು ಅಭಿಪ್ರಾಯ.

**तत्वप्रकाशिका – नापि विषयः अदृष्टाभावात् । नापि दृष्टः । 'अप्राप्ते शास्त्रमर्थवत्' इति न्यायात् । नापि धर्मादिभ्रान्तिनिरासाय तदभावः । तदुपायाभावात् ।**

ಚಾರ್ವಾಕಮತದಲ್ಲಿ ವಿಷಯವೂ ಕೂಡ ಇರುವುದಿಲ್ಲ. ಏಕೆಂದರೆ ಅದೃಷ್ಟವನ್ನೇ ಅವರು ಒಪ್ಪಿರುವುದಿಲ್ಲ. ದೃಷ್ಟವಿಷಯವೂ ಕೂಡ ಇರುವುದಿಲ್ಲ. ಅಪ್ರಾಪ್ತವಾದದ್ದರಲ್ಲೇ ಶಾಸ್ತ್ರವು ಅರ್ಥವತ್ತಾಗುತ್ತದೆ. ದೃಷ್ಟವಿಷಯವನ್ನು ಹೇಳಿದರೆ ಶಾಸ್ತ್ರಕ್ಕೆ ಅಪೂರ್ವತ್ವವು ಉಂಟಾಗುವುದಿಲ್ಲ. ಇನ್ನು ಧರ್ಮಾದಿಭ್ರಾಂತಿನಿರಾಸಕ್ಕೋಸ್ಕರ ಶಾಸ್ತ್ರವು ಹೊರಟಿರುವುದರಿಂದ ಸಾರ್ಥಕವೆನ್ನಬೇಕು. ಆದರೆ ಧರ್ಮಾದಿಗಳಿಲ್ಲ ಎಂದು ತಿಳಿಸುವ ಯಾವ ಸಾಧನವೂ ಕೂಡ ಕಾಣಸುತ್ತಿಲ್ಲ.

**तत्वप्रकाशिका – न हि प्रत्यक्षं धर्माद्यभावं गृह्णाति । अपरामर्शेऽदर्शनात् । परामर्शे दर्शनं तु नानुमानाद्भिद्यते । विषयप्रयोजनाभावे काऽधिकारिणं प्रत्याशा ?**

ಪ್ರತ್ಯಕ್ಷವು ಧರ್ಮಾದ್ಯಭಾವವನ್ನು ತಿಳಿಸುತ್ತದೆಂದು ಹೇಳಬಹುದಲ್ಲವೆ? ಎನ್ನಬಾರದು. ಇಂದ್ರಿಯದಿಂದ ಘಟಾಭಾವವು ತಿಳಿಯುವಂತೆ ಧರ್ಮಾದ್ಯಭಾವವು ತಿಳಿಯುತ್ತಿಲ್ಲ. ಪರಾಮರ್ಶೆಮಾಡದಿದ್ದಾಗ

ಧರ್ಮಾದ್ಯಭಾವವು ತಿಳಿಯುವುದಿಲ್ಲ. ಪರಾಮರ್ಶೆ ಮಾಡಿದ ಮೇಲೆ ಧರ್ಮಾದ್ಯಭಾವವು ತಿಳಿಯುತ್ತದೆಂದು ಹೇಳಬೇಕು. ಆದರೆ ಈ ಪರಾಮರ್ಶವು ಅನುಮಾನಸ್ವರೂಪವೇ ಆಗುತ್ತದೆ ಹೊರತು ಪ್ರತ್ಯಕ್ಷರೂಪವಾಗುವುದಿಲ್ಲ. ಹೀಗೆ ವಿಷಯಪ್ರಯೋಜನಗಳಿಲ್ಲದೆ ಇದ್ದಾಗ ಚಾರ್ವಾಕಮತದ ಶಾಸ್ತ್ರಕ್ಕೆ ಅಧಿಕಾರಿಯನ್ನು ಅಪೇಕ್ಷೆ ಪಡಲು ಹೇಗೆ ಸಾಧ್ಯ ?

**तत्वप्रकाशिका – माऽस्तु मत्सिद्धान्ते प्रयोजनादीति चेत्तर्हि 'यः सिद्धान्तोऽसौ प्रयोजनादिमान्' इति नियमात् । अतः सिद्धान्तेऽपि प्रयोजनाद्यभावाभ्युपगमे तस्य स्वव्याहतिः स्यात् ।**

ನನ್ನ ಸಿದ್ಧಾಂತಕ್ಕೆ ಪ್ರಯೋಜನಾದಿಗಳೇ ಬೇಡ ಎಂದು ಹೇಳಲಾಗದು. ಯಾವುದು ಸಿದ್ಧಾಂತವೋ ಅದರಲ್ಲಿ ಪ್ರಯೋಜನಾದಿಗಳು ಇರಲೇಬೇಕೆಂಬ ನಿಯಮವಿದೆ. ಆದ್ದರಿಂದ ನಿನ್ನ ಮತವನ್ನು ಸಿದ್ಧಾಂತವೆಂದು ಒಪ್ಪಿ ಪ್ರಯೋಜನಾದಿಗಳು ಇಲ್ಲವೆಂದು ಹೇಳಿದರೆ ಸ್ವಾವ್ಯಾಹತಿದೋಷವು ಪ್ರಾಪ್ತವಾಗುತ್ತದೆ.

**तत्वप्रकाशिका – न ह्यभ्युपगमोऽप्रयोजनश्चेति युक्तम् । मे माता वन्ध्येतिवत् स्वव्याहतं च वदन् भवानुपेक्ष्य एव जायते न तु परिहाराय विषय इति भावः । अतश्चार्वाकसमयस्यानुपपन्नत्वेनाविरोधकत्वाद्युक्तं जगत्कारणत्वं ब्रह्मणि इति सिद्धम् ।। ६ ।।**

ಸಿದ್ಧಾಂತವನ್ನು ಒಪ್ಪಿ ಪ್ರಯೋಜನವಿಲ್ಲವೆಂದು ಹೇಳುವುದು ಯುಕ್ತವಲ್ಲ. 'ನನ್ನ ತಾಯಿಯು ಬಂಜೆ' ಎನ್ನುವುದು ಹೇಗೆ ಸ್ವವ್ಯಾಹತ ಆಗಿದೆಯೋ, ಅದರಂತೆ ನೀನೂ ಕೂಡ ಸ್ವವ್ಯಾಹತವಾಗಿ ಮಾತನಾಡುತ್ತಿರುವುದರಿಂದ ನಿರ್ಲಕ್ಷ್ಯಕ್ಕೆ ಒಳಗಾಗಿರುವಿ. ನಿನ್ನ ಆಕ್ಷೇಪಗಳಿಗೆ ಉತ್ತರ ಕೊಡುವ ಅವಶ್ಯಕತೆಯಿಲ್ಲ.

ಹೀಗೆ ಚಾರ್ವಾಕಸಮಯವು ಅತ್ಯಂತ ಅನುಪಪನ್ನವಾಗಿರುವುದರಿಂದ ಇದರ ವಿರೋಧವು ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವಲಕ್ಷಣವು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅಭ್ಯುಪಗಮಾಧಿಕರಣ ಮುಗಿಯಿತು.

# ಪುರುಷಾರ್ಥಾಧಿಕರಣ

(೨-೨-೪)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

# ಪುರುಷಾಶ್ಮಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**ಸೂತ್ರಮ್ – ಪುರುಷಾಶ್ಮವದಿತಿ ಚೇತ್ತತ್ರಾಪಿ ।।**

ಶರೀರವು ಜಡವಾಗಿದೆ ಆದರೂ ಚೇತನನ ಸಂಪರ್ಕದಿಂದ ಕಲ್ಲು ಮೊದಲಾದ ವಸ್ತುಗಳನ್ನು ಹೊತ್ತು ತರುವಂತೆ ಜಡವಾದ ಪ್ರಕೃತಿಯೇ ಈಶ್ವರನ ಸಂಪರ್ಕದಿಂದ ಸೃಷ್ಟಿ ಕಾರ್ಯವನ್ನು ಮಾಡುತ್ತದೆ ಎಂದು ಹೇಳಬಾರದು.

ಶಾರೀರಿಕ ಕ್ರಿಯೆಯು ಕೇವಲ ಚೇತನನ ಸಂಪರ್ಕದಿಂದಷ್ಟೇ ಆಗುತ್ತಿರುವುದಲ್ಲ. ಹೊರತಾಗಿ 'ನ ಋತೇ ತ್ವತ್ಕ್ರೀಯತೇ' ಎಂಬ ಶ್ರುತಿಯಂತೆ ಪರಮಾತ್ಮನಿಂದಲೇ ಶಾರೀರಿಕ ಕ್ರಿಯೆಯು ನಡೆಯುತ್ತಿದೆ. ಆದ್ದರಿಂದ ದೃಷ್ಟಾಂತವೇ ಸರಿಯಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – पुरुषाश्मवत्** यथा पुरुषसम्बन्धादचेतनं शरीरं अश्मानयनादौ प्रवर्तते तथा अचेतनप्रकृतिः चेतनसम्बन्धात् प्रवर्तत **इति चेन्न** । कुतः यतः **तत्रापि** शरीरप्रवृत्तावपि चेतनस्य ईश्वरस्यैव कर्तृत्वे । न दृष्टान्ताभावः । अत इत्यर्थः ।।१।।

ಪುರುಷಾಶ್ಮವತ್ = ಯಾವರೀತಿಯಾಗಿ ಅಚೇತನವಾದ ಶರೀರವು ಚೇತನನ ಸಂಬಂಧದಿಂದ ಕಲ್ಲು ಮೊದಲಾದವುಗಳ ಪರಿಮಿತಿಯಲ್ಲಿ ಪ್ರವೃತ್ತಿಯನ್ನು ಮಾಡುತ್ತದೋ, ಅದರಂತೆ ಅಚೇತನವಾದ ಪ್ರಕೃತಿಯು

ಚೇತನನಾದ ಈಶ್ವರನ ಸಂಬಂಧದಿಂದ ಜಗತ್ತಿನ ಸೃಷ್ಟಿಪ್ರಕ್ರಿಯೆಯಲ್ಲಿ ತೊಡಗುತ್ತದೆ. ಇತಿ ಚೇತ್ ನ = ಹೀಗೆ ಹೇಳಬಾರದು. ಏಕೆಂದರೆ ತತ್ರಾಪಿ = ಶರೀರಪ್ರವೃತ್ತಿಯಲ್ಲಿಯೂ ಚೇತನನಾದ ಈಶ್ವರನೇ ಕರ್ತೃವಾಗಿದ್ದಾನೆ. ಆದ್ದರಿಂದ ದೃಷ್ಟಾಂತವೈಷಮ್ಯವಿದೆ. ಆದ್ದರಿಂದ ಸೇಶ್ವರಸಾಂಖ್ಯರು ಹೇಳುವ ಪ್ರಕೃತಿಯೇ ಜಗತ್‌ಕರ್ತೃತ್ವವಾಗುವುದು ಅಸಾಧುವಾಗಿದೆ.

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – पुरुषोपसर्जनप्रकृतिकर्तृवादमपाकरोति –**

**।। पुरुषाश्मवदिति चेत् तथाऽपि ।।१।।**

**यथा चेतनसम्बन्धादचेतनमेव शरीरमश्मादिकमादाय गच्छति एवमचेतनाऽपि प्रकृतिः पुरुषसम्बन्धात् प्रवर्तत इति चेन्न । 'न ऋते त्वत्क्रियते' इति तत्रापि तथात्वे दृष्टान्ताभावात् ।।१।।**

ಅನುವಾದ - ಜಗತ್ತಿನ ಸೃಷ್ಟಿಯ ವಿಷಯದಲ್ಲಿ ಚೇತನನು ಅಮುಖ್ಯನಾಗಿದ್ದಾನೆ. ಪ್ರಕೃತಿಯು ಮುಖ್ಯವಾಗಿದೆ. ಹೀಗೆ ಯಾವ ದಾರ್ಶನಿಕರು ಒಪ್ಪುತ್ತರೋ ಅಂಥ ಚೇತನದ ಸಂಬಂಧದಿಂದ ಅಚೇತನವಾದ ಶರೀರವು ಕಲ್ಲು ಮೊದಲಾದ ಭಾರ ವಸ್ತುಗಳನ್ನು ಹೊತ್ತು ನಡೆಯುತ್ತದೋ ಅದರಂತೆ ಪ್ರಕೃತಿಯು ಜಡವಾಗಿದ್ದರೂ ಪುರುಷನ ಸಂಬಂಧದಿಂದ ಜಗತ್ತಿನ ಸೃಷ್ಟಿಯನ್ನು ಮಾಡಲು ಸಮರ್ಥವಾಗಿರುತ್ತದೆ. ಹೀಗೆ ನಿರೀಶ್ವರಸಾಂಖ್ಯರು ಹೇಳುತ್ತಾರೆ. ಇದು ತಪ್ಪು.

'ನ ಋತೇ ತ್ವತ್ಕ್ರಿಯತೇ' ಎಂಬ ಶ್ರುತಿ ಪ್ರಮಾಣದಂತೆ ಪರಮಾತ್ಮನ ಪ್ರೇರಣೆಯಿಲ್ಲದೆ ಜಗತ್ತಿನ ಸೃಷ್ಟಿಯು ನಡೆಯಲು ಸಾಧ್ಯವಿಲ್ಲ. ಶರೀರದ ಪ್ರವೃತ್ತಿಯಲ್ಲಿಯೂ ಪರಮಾತ್ಮನ ಪ್ರೇರಣೆ ಬೇಕು. ಪುರುಷನು ಗೌಣವಾಗಿದ್ದಾನೆ, ಜಡವಾದ ಪ್ರಕೃತಿಯು ಪ್ರಧಾನವಾಗಿದೆ. ಇದರಿಂದ ಸೃಷ್ಟಿಯು ನಡೆಯುತ್ತದೆ ಎನ್ನಲು ಯಾವುದೇ ದೃಷ್ಟಾಂತವಿರುವುದಿಲ್ಲ. ಮತ್ತು ಪರಮಾತ್ಮನ ಪ್ರೇರಣೆಯಿಲ್ಲದೆ ಯಾವುದೇ ಪ್ರವೃತ್ತಿಯೂ ಕೂಡ ನಡೆಯುತ್ತಿದೆ ಎನ್ನಲು ಲೋಕದಲ್ಲಿ ದೃಷ್ಟಾಂತವಿಲ್ಲ.

ಪ್ರತಿಪದಾರ್ಥ -- ಪುರುಷೋಪಸರ್ಜನಪ್ರಕೃತಿಕರ್ತೃವಾದಮ್ = ಚೇತನನಾದ ಪುರುಷನು ಗೌಣವಾಗಿದ್ದಾನೆ. ಅಚೇತನವಾದ ಪ್ರಕೃತಿಯು ಪ್ರಧಾನವಾಗಿದೆ. ಈ ಪ್ರಕೃತಿಯೇ ಜಗತ್ತಿಗೆ ಕಾರಣವಾಗಿದೆ ಎಂಬ ನಿರೀಶ್ವರಸಾಂಖ್ಯಮತವನ್ನು, ಅಪಾಕರೋತಿ = ನಿರಾಕರಣೆ ಮಾಡುತ್ತಿದ್ದಾರೆ. ಯಥಾ = ಯಾವರೀತಿಯಾಗಿ, ಅಚೇತನಮೇವ = ಜಡವೇ ಆಗಿರುವ, ಶರೀರಮ್ = ಶರೀರವು, ಚೇತನಸಂಬಂಧಾತ್ = ಜೀವನ ಸಂಪರ್ಕದಿಂದ,

ಅಶ್ಮಾದಿಕಮಾದಾಯ = ಕಲ್ಲು ಮೊದಲಾದ ಪದಾರ್ಥಗಳನ್ನು ಎತ್ತಿಕೊಂಡು, ಗಚ್ಛತಿ = ಹೋಗುತ್ತದೋ, ಏವಂ = ಅದೇ ರೀತಿಯಾಗಿ, ಪ್ರಕೃತಿಃ = ಪ್ರಕೃತಿಯು, ಅಚೇತನಾऽಪಿ = ಜಡವಾಗಿದ್ದರೂ, ಪುರುಷಸಂಬಂಧಾತ್ = ಚೇತನಸಂಬಂಧದಿಂದ, ಪ್ರವರ್ತತೇ = ಜಗತ್ತಿನ ಸೃಷ್ಟಿಸಂಬಂಧದಲ್ಲಿ ತೊಡಗುತ್ತದೆ. ಇತಿ ಚೇತ್ = ಹೀಗೆ ನಿರೀಶ್ವರಸಾಂಖ್ಯವಾದಿಗಳು ಹೇಳುವುದು, ನ = ತಪ್ಪು.

ಏಕೆಂದರೆ 'ನ ಋತೇ ತ್ವತ್ಕ್ರಿಯತೇ ಇತಿ' = ಶ್ರೀಹರಿಯನ್ನು ಬಿಟ್ಟು ಯಾರಲ್ಲಿಯೂ ಕರ್ತೃತ್ವ ಇಲ್ಲವೆಂದು ಶ್ರುತಿ ಹೇಳುತ್ತಿರುವುದರಿಂದ, ತತ್ರಾಪಿ = ಶರೀರದ ಪ್ರವೃತ್ತಿಯಲ್ಲಿಯೂ, ತಥಾತ್ವೇ = ಪರಮಾತ್ಮಾಧೀನತ್ವವು ಸಿದ್ಧವಾಗುತ್ತದೆ. ದೃಷ್ಟಾಂತಾಭಾವಾತ್ = ಚೇತನನು ಗೌಣವಾಗಿ ಜಡವು ಪ್ರಧಾನವಾಗಿ ಸೃಷ್ಟಿಯು ನಡೆಯುತ್ತದೆನ್ನಲು ಯಾವುದೇ ದೃಷ್ಟಾಂತ ಇರುವುದಿಲ್ಲ.

### ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका – अधिकरणप्रतिपाद्यं दर्शयति ।। पुरुषेति ।। अत्र विष्णोः सर्वकर्तृत्वे निरीश्वरसाङ्ख्यैकदेशमतविरोधपरिहारादस्ति शास्त्रादिसङ्गतिः । विष्णोर्जगत्कारणत्वमुक्तम् । तत्रैव मतविरोधेऽसम्भवप्राप्तेरवश्यनिरसनीयं तद्भवति । ईश्वरस्य जगत्कारणत्वं विषयः । युक्तमयुक्तं वेति सन्देहः । समयविप्रतिपत्तिः सन्देहबीजम्।**

ಈ ಅಧಿಕರಣದಿಂದ ಪ್ರತಿಪಾದ್ಯವಾದ ಪ್ರಮೇಯವನ್ನು ಭಾಷ್ಯದಲ್ಲಿ 'ಪುರುಷೋಪಸರ್ಜನ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ವಿಷ್ಣುವಿನ ಸರ್ವಕರ್ತೃತ್ವಲಕ್ಷಣಕ್ಕೆ ನಿರೀಶ್ವರಸಾಂಖ್ಯೈಕದೇಶಿಗಳ ಮತದ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಲಾಯಿತು. ಈ ವಿಷಯದಲ್ಲಿ ಮತವಿರೋಧವು ಪ್ರಾಪ್ತವಾದಾಗ ಜಗತ್ಕಾರಣತ್ವವು ವಿಷ್ಣುವಿನಲ್ಲಿ ಅಸಂಗತವಾಗುತ್ತದೆ. ಆದ್ದರಿಂದ ಅವಶ್ಯವಾಗಿ ಈ ಮತವನ್ನು ನಿರಾಕರಣೆ ಮಾಡಲೇಬೇಕು.

ಈಶ್ವರನ ಜಗತ್ಕಾರಣತ್ವವೇ ಅಧಿಕರಣದ ವಿಷಯ. ಈಶ್ವರನಲ್ಲಿ ಜಗತ್ಕಾರಣತ್ವವು ಯುಕ್ತವೋ ಅಯುಕ್ತವೋ ? ಎನ್ನುವುದು ಸಂದೇಹ. ಸಮಯದ ವಿಪ್ರತಿಪತ್ತಿಯು ಸಂದೇಹಬೀಜ.

ವಿವರಣೆ - ಸಾಂಖ್ಯಮತವು ಎರಡುವಿಧ - 1) ಕೇವಲ ಅಚೇತನವು ಜಗತ್ತಿಗೆ ಕಾರಣ. 2) ಚೇತನನಿಂದ ಸಹಿತವಾದ ಅಚೇತನವು ಜಗತ್ತಿಗೆ ಕಾರಣ ಎಂದು. ಈ ಎರಡು ಮತಗಳಲ್ಲಿ ಮೊದಲನೆಯದ್ದು ನಿರೀಶ್ವರಸಾಂಖ್ಯಮತ. ಇದನ್ನು ಮೊದಲನೆಯ ರಚನಾನುಪಪತ್ತ್ಯಧಿಕರಣದಲ್ಲಿ ನಿರಾಕರಣೆ ಮಾಡಿದ್ದಾಯಿತು.

ಎರಡನೆಯದು ಪುನಃ ಎರಡುವಿಧ - 1) ಅಪ್ರಧಾನನಾದ ಈಶ್ವರನಿಂದ ಅನುಗೃಹೀತವಾಗಿ ಜಗತ್ತಿಗೆ ಕಾರಣ. 2) ಜೀವನಿಂದ ಕೂಡಿದ ಪ್ರಧಾನವು ಜಗತ್ತಿಗೆ ಕಾರಣ ಎಂದು. ಈ ಎರಡು ಪಕ್ಷಗಳಲ್ಲಿ ಅಂತಿಮವಾಗಿ ನಿರೀಶ್ವರವಾದದಲ್ಲಿ ಪರ್ಯವಸಾನವಾಗುವ ಅಪ್ರಧಾನನಾದ ಈಶ್ವರನಿಂದ ಅನುಗ್ರಹಿಸ್ಪಟ್ಟ ಪ್ರಧಾನವು ಜಗತ್ತಿಗೆ ಕಾರಣವೆಂಬ ಮೊದಲನೆಯ ಮತವನ್ನು ಎರಡನೆಯ ಅನ್ಯತ್ರಾಭಾವಾಧಿಕರಣದಲ್ಲಿ ನಿರಾಕರಣೆ ಮಾಡಲಾಯಿತು.

ಇನ್ನು ಜೀವನಿಂದ ಕೂಡಿದ ಪ್ರಧಾನವು ಜಗತ್ತಿಗೆ ಕಾರಣವೆಂಬ ಎರಡನೆಯ ಪಕ್ಷ ಪುನಃ ಎರಡುವಿಧ. 1) ಜೀವನು ಅಪ್ರಧಾನನಾಗಿದ್ದಾನೆ. ಪ್ರಕೃತಿಯೇ ಪ್ರಧಾನವಾಗಿದೆ. 2) ಪ್ರಕೃತಿ ಹಾಗೂ ಜೀವ ಪ್ರಧಾನವಾಗಿದ್ದಾನೆ ಎಂದು. ಈ ಎರಡು ಪಕ್ಷಗಳಲ್ಲಿ ಜೀವನು ಅಪ್ರಧಾನನಾಗಿದ್ದಾನೆಂಬುದು ನಿರೀಶ್ವರಸಾಂಖ್ಯಮತದ ಏಕದೇಶವೇ ಆಗಿರುವುದರಿಂದ ಇದು ಅತ್ಯಂತ ವಿರುದ್ಧವೇ ಆಗಿದೆ. ಆದ್ದರಿಂದ ಪ್ರಕೃತ ಈ ಪುರುಷಾಶ್ಮಾಧಿಕರಣದಲ್ಲಿ ಇದನ್ನು ನಿರಾಕರಣೆ ಮಾಡುತ್ತಿದ್ದಾರೆ.

ಇಲ್ಲಿ ನಿರಾಕರಣೆ ಮಾಡಲ್ಪಟ್ಟ ಮತವು ಅತ್ಯಂತ ವಿರೋಧಿಯಾಗಿರುವುದರಿಂದ ರಚನಾನುಪಪತ್ತ್ಯಧಿಕರಣದಲ್ಲಿಯೇ ಈ ಅಧಿಕರಣವನ್ನು ಹೇಳಬೇಕಿತ್ತಲ್ಲವೆ?

ಈ ಪ್ರಶ್ನೆ ತಪ್ಪು. ಅಭ್ಯಧಿಕಾಶಂಕೆಗೆ ಅನುಗುಣವಾಗಿ ಅಧಿಕರಣಗಳ ಕ್ರಮವು ಯುಕ್ತಿಬದ್ಧವಾಗಿದೆ. ಅದು ಹೀಗೆ - ಪರಮಚೇತನನಾದ ಭಗವಂತನೇ ಸಕಲಕ್ಕೂ ಕಾರಣನಾಗಿದ್ದಾನೆಂದು ಹಿಂದೆ ಹೇಳಲಾಯಿತು. ಈ ತತ್ವಕ್ಕೆ ಜಡವಾದ ಪ್ರಕೃತಿಯೇ ಕಾರಣವೆಂಬ ವಾದವು ನೇರವಾಗಿ ವಿರೋಧಿಯಾಗಿರುವುದರಿಂದ ಮೊದಲು ಕೇವಲ ಪ್ರಕೃತಿಕರ್ತೃತ್ವವಾದವನ್ನು ನಿರಾಕರಣೆ ಮಾಡಿದರು. ಪುನಃ ಕೇವಲ ಅಚೇತನವು ಜಗತ್ತಿಗೆ ಕಾರಣವಾಗುವುದು ಬೇಡ ಈಶ್ವರನ ಅನುಗ್ರಹವುಳ್ಳ ಅಚೇತನವು ಜಗತ್ತಿಗೆ ಕಾರಣವಾಗಲಿ ? ಎಂಬ ಆಶಂಕೆಯು ಪ್ರಾಪ್ತವಾದರೆ ಎರಡನೆಯ ಅನ್ಯತ್ರಾಭಾವಾಧಿಕರಣದಲ್ಲಿ ಅದನ್ನು ನಿರಾಕರಣೆ ಮಾಡಿದರು.

ಅಚೇತನಕ್ಕೆ ಕರ್ತೃತ್ವವನ್ನು ಒಪ್ಪವುದೇ ಬೇಡ. ಚೈತನ್ಯಾಶ್ರಯವಾದ ಶರೀರಕ್ಕೆ ಕರ್ತೃತ್ವವನ್ನು ಒಪ್ಪೋಣ ಎಂಬ ಆಶಂಕೆಯು ಪ್ರಾಪ್ತವಾದರೆ ಅಭ್ಯುಪಗಮಾಧಿಕರಣದಲ್ಲಿ ಈ ಮತವನ್ನು ನಿರಾಕರಣೆ ಮಾಡಿದರು. ಕೇವಲ ಅಚೇತನಕ್ಕೆ ಕರ್ತೃತ್ವವು ಯುಕ್ತವಾಗಿದ್ದರೂ ಚೇತನಸಂಬಂಧದಿಂದ ಕರ್ತೃತ್ವವು ಯುಕ್ತವಾಗಬಹುದು. ಆದ್ದರಿಂದ ಈಶ್ವರನ ಅವಶ್ಯಕತೆ ಏಕೆ ? ಎಂಬ ಆಶಂಕೆಯು ಪ್ರಾಪ್ತವಾದರೆ ನಾಕನೆಯ ಈ ಪುರುಷಾಶ್ಮಾಧಿಕರಣವು ಹೊರಟದೆ. ಹೀಗೆ ಅಧಿಕರಣಗಳ ಕ್ರಮವು ಯುಕ್ತಿಯುಕ್ತವಾಗಿರುವುದರಿಂದ ಈ ಪುರುಷಾಶ್ಮಾಧಿಕರಣಕ್ಕೆ ಆನಂತರ್ಯಸಂಗತಿಯು ಅತ್ಯಂತ ಸಂಗತವಾಗಿದೆ. (ವಾಕ್ಯಾರ್ಥಮುಕ್ತಾವಳಿ)

ಪುರುಷಾಶ್ಮಾಧಿಕರಣ (೨-೨-೪)

**तत्वप्रकाशिका – पूर्वपक्षस्य सूत्र एवोक्तत्वात्तदुपन्यस्य पूर्वपक्षांशं तावद्व्याचष्टे – पुरुषेति ।। न हरेर्जगत्कारणत्वं युक्तम् । प्रधानस्यैव कर्तृत्वेनेश्वरस्य वैयर्थ्यात् ।**

ಪೂರ್ವಪಕ್ಷವನ್ನು ಸೂತ್ರಕಾರರೇ ಹೇಳಿದ್ದಾರೆ. ಆದ್ದರಿಂದ ಸೂತ್ರವನ್ನು ಉಪನ್ಯಾಸ ಮಾಡಿ ಪೂರ್ವಪಕ್ಷದ ಭಾಗವನ್ನು (ಪುರುಷ) ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಶ್ರೀಹರಿಗೆ ಜಗತ್ಕಾರಣತ್ವವು ಕೂಡುವುದಿಲ್ಲ. ಪ್ರಕೃತಿಯೇ ಕರ್ತೃ ಎನಿಸಿರುವುದರಿಂದ ಈಶ್ವರನು ವ್ಯರ್ಥವಾಗುತ್ತಾನೆ.

**तत्वप्रकाशिका – अचेतनस्य स्वतःप्रवृत्तिर्दूषितेति चेन्न । केवलप्रधानस्य कारणत्वानुपपत्तावपि पुरुषोपसर्जनस्य तदुपपत्तेः । भवति चात्र प्रयोगः । 'विप्रतिपन्ना प्रवृत्तिः पुरुषोपसर्जनाचेतननिमित्ता, प्रवत्तित्वात्, अश्मानयनादि-प्रवृत्तिवत्' इति ।**

ಅಚೇತನಕ್ಕೆ ಸ್ವತಃ ಪ್ರವೃತ್ತಿಯು ಕೂಡುವುದಿಲ್ಲವೆಂದು ಈಗಾಗಲೇ ದೂಷಣೆ ಮಾಡಿದ್ದೇವಲ್ಲವೆ?

ಹೀಗೆ ಪ್ರಶ್ನಿಸಬಾರದು. ಕೇವಲ ಪ್ರಕೃತಿಗೆ ಕಾರಣತ್ವವು ಅನುಪಪನ್ನವಾದರೂ ಪುರುಷನಿಂದ ಗೌಣವಾಗಿ ಅನುಗ್ರಹಿತವಾದ್ದರಿಂದ ಕೇವಲ ಪ್ರಕೃತಿಗೆ ಕಾರಣತ್ವವು ಯುಕ್ತವಾಗುತ್ತದೆ. ಆದ್ದರಿಂದ ಇಲ್ಲಿ ಹೀಗೆ ಅನುಮಾನವನ್ನು ಪ್ರಯೋಗ ಮಾಡುತ್ತೇವೆ - 'ವಿಪ್ರತಿಪನ್ನಾ ಪ್ರವೃತಿಃ, ಪುರುಷೋಪಸರ್ಜನಾ ಚೇತನನಿಮಿತ್ತಪ್ರವೃತ್ತಿತ್ವಾತ್ ಅಶ್ಮಾನಯನಾದಿಪ್ರವೃತ್ತಿವತ್' ಕಲ್ಲು ಮೊದಲಾದವುಗಳ ತರುವಿಕೆಯೆಂಬ ಪ್ರವೃತ್ತಿಯು ಪ್ರವೃತ್ತಿಯಾಗಿದೆ. ಚೇತನನಿಮಿತ್ತವೂ ಆಗಿದೆ. ಅದರಂತೆ ವಿಪ್ರತಿಪನ್ನವಾದ ಪ್ರವೃತ್ತಿಯೂ ಕೂಡ ಪ್ರವೃತ್ತಿಯಾಗಿರುವುದರಿಂದ ಚೇತನನಿಮಿತ್ತವೇ ಆಗಿರಬೇಕೆಂದು ಅನುಮಾನ ಮಾಡುತ್ತೇವೆ.

**तत्वप्रकाशिका – न च दृष्टान्ते विवदितव्यम् । पुरुषसम्बन्धेनाचेतनस्यैव शरीरस्याश्माद्यादानादिप्रवृत्तिदर्शनात् । अतो जगज्जन्मादिकारणत्वलक्षणमीश्वरस्यैवेत्ये-तद्दूरोत्सारितमिति भावः । सिद्धान्तांशं व्याचष्टे – नेति ।।**

ದೃಷ್ಟಾಂತದಲ್ಲಿ ವಿವಾದವಿಲ್ಲ. ಪುರುಷಸಂಬಂಧದಿಂದ ಅಚೇತನವಾದ ಶರೀರದಲ್ಲಿ ಕಲ್ಲು ತರುವಿಕೆ ಮೊದಲಾದ ಪ್ರವೃತ್ತಿಯು ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಜಗಜ್ಜನ್ಮಾದಿಕಾರಣತ್ವರೂಪವಾದ ಲಕ್ಷಣವು ಪರಮಾತ್ಮನದ್ದೇ ಎಂಬುದು ದೂರತೋಪಾಸ್ತವಾಗಿದೆ. ಇಷ್ಟು ಪೂರ್ವಪಕ್ಷಿಗಳ ಅಭಿಪ್ರಾಯ.

ಸೂತ್ರದಲ್ಲಿರುವ ಸಿದ್ಧಾಂತಭಾಗವನ್ನು 'ನ ಋತೇ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – युक्तमेव विष्णोः सर्वकर्तृत्वम् । पुरुषोपसर्जनप्रधानस्य जगत्कारणत्त्वे प्रमाणाभावात् । न चोक्तमनुमानम् । 'न ऋते त्वत्क्रियते किञ्चनारे' इति श्रुतेः । तत्र शरीरप्रवृत्तावपि परमात्माधीनत्वे सिद्धे सति विप्रतिपन्नप्रवृत्तेः पुरुषोपसर्जनप्रधानाधीनत्वसाधने दृष्टान्ताभावादिति भावः ।।७।।**

ವಿಷ್ಣುವಿನ ಸರ್ವಕರ್ತೃತ್ವವು ಯುಕ್ತವಾಗಿದೆ.ಪುರುಷನು ಅಪ್ರಧಾನವಾಗಿದ್ದು ಪ್ರಧಾನವಾಗಿ ಪ್ರಕೃತಿಗೆ ಜಗತ್ಕಾರಣತ್ವ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲ. ಪೂರ್ವಪಕ್ಷಕಾರರು ಹೇಳಿದ ಯುಕ್ತಿಯೂ ಕೂಡ ಪ್ರಮಾಣವಲ್ಲ. ಏಕೆಂದರೆ 'ನ ಋತೇ ಕಿಂಚನಾರೇ' ಎಂಬ ಶ್ರುತಿಯು ಭಗವಂತನ ಹೊರತಾಗಿ ಬೇರೆ ಯಾವುದಕ್ಕೂ ಕರ್ತೃತ್ವಶಕ್ತಿ ಇಲ್ಲವೆಂದು ಸ್ಪಷ್ಟವಾಗಿ ಹೇಳುತ್ತಿದೆ.

ಶರೀರದ ಪ್ರವೃತ್ತಿಯಲ್ಲೂ ಕೂಡ ಪರಮಾತ್ಮನ ಅಧೀನತ್ವವೇ ಸಿದ್ಧವಾಗಿದೆ. ಆದ್ದರಿಂದ ವಿಪ್ರತಿಪನ್ನವಾದ ಜಗತ್ತಿನ ಸೃಷ್ಟಿ ಎಂಬ ಪ್ರವೃತ್ತಿಯಲ್ಲೂ ಕೂಡ ಪುರುಷನು ಅಪ್ರಧಾನವಾಗಿವುಳ್ಳ ಪ್ರಧಾನದಿಂದ ಉಂಟಾಗಿದೆ ಎಂದು ಸಾಧಿಸುವ ಹೇತುವಿಗೆ ದೃಷ್ಟಾಂತವೇ ಇರುವುದಿಲ್ಲ ಎಂಬುದು ಸಿದ್ಧಾಂತದ ಅಭಿಪ್ರಾಯ.

ವಿವರಣೆ - ಸೂತ್ರದಲ್ಲಿರುವ ಪುರುಷಶಬ್ದಕ್ಕೆ ಜೀವನ ಸಂಬಂಧವುಳ್ಳ ಶರೀರ ಎಂಬ ಅರ್ಥವನ್ನು ವಿವಕ್ಷಿಸಬೇಕು. ಅಶ್ಮಾಪದವು ಲಕ್ಷಣಾವೃತ್ತಿಯಿಂದ ಕಲ್ಲು ಮೊದಲಾದವುಗಳ ತರುವಿಕೆಯ ಪ್ರವೃತ್ತಿಯನ್ನು ಹೇಳುತ್ತಿದೆ. ಆದ್ದರಿಂದ ಜೀವಸಮ್ಮಿಲಿತವಾದ ಶರೀರಕ್ಕೆ ಅಶ್ಮನಯನದ ಪ್ರವೃತ್ತಿಯಂತೆ ಪ್ರಕೃತಿಯೂ ಕೂಡ ಅಪ್ರಧಾನನಾದ ಜೀವನ ಸಂಪರ್ಕದಿಂದ ಪ್ರವೃತ್ತಿವುಳ್ಳದ್ದಾಗುತ್ತದೆಂಬುದು ಸೂತ್ರಖಂಡದ ಅಭಿಪ್ರಾಯ. ಅವ್ಯಯಗಳಿಗೆ ಅನೇಕಾರ್ಥ ಇರುವುದರಿಂದ ಆವೃತ್ತವಾದ ತಥಾ ಶಬ್ದಕ್ಕೆ ಅಲ್ಲಿ ಎಂದರ್ಥ. ಎರಡನೆಯ ತಥಾಶಬ್ದಕ್ಕೆ 'ವ್ಯತಿರೇಕಾನವಸ್ಥಿತೇಃ' ಎಂಬ ಸೂತ್ರದಲ್ಲಿ ಹೇಳಿರುವಂತೆ ಎಂದರ್ಥ. (ವಾಕ್ಯಾರ್ಥಮುಕ್ತಾವಳಿ)

## ಬ್ರಹ್ಮಸೂತ್ರ

**सूत्रम् – अङ्गित्वानुपपत्तेः ।।**

ಶಾರೀರಿಕ ಕ್ರಿಯೆಯಲ್ಲಿ ಜೀವನು ಗೌಣನಾಗಿದ್ದಾನೆ. ಶರೀರವೇ ಪ್ರಧಾನವಾಗಿದೆ ಎಂದು ಪ್ರಶ್ನಿಸಬಾರದು. ಏಕೆಂದರೆ ನಮ್ಮೆಲ್ಲರ ಅನುಭವದಿಂದ ಜೀವನೇ ಅಂಗಿಯೆಂದು ಸಿದ್ಧವಾಗಿದ್ದಾನೆ. ಆದ್ದರಿಂದ ಜೀವನೇ ಪ್ರಧಾನನು ಹೊರತು, ಶರೀರವಲ್ಲ. ಈ ಕಾರಣದಿಂದ ಸಾಂಖ್ಯರು ನೀಡಿದ ದೃಷ್ಟಾಂತವು ಅನುಪಪನ್ನವಾಗಿದೆ.

## ಸೂತ್ರದೀಪಿಕಾ

**सूत्रदीपिका — पुरुषस्याङ्गत्वेऽङ्गीकृते सति 'अङ्गमङ्गीति' वाक्ये अङ्गित्वस्य प्रधान्यस्य उत्त्यनुपपत्तेः । न पुरुषोपसर्जनप्रकृतिकर्तृत्वपक्षे दृष्टान्तोऽस्तीत्यर्थः ।।२।।**

ಶಾರೀರಿಕ ಕ್ರಿಯೆಯಲ್ಲಿ ಜೀವನು ಗೌಣನಾಗಿ 'ಅಂಗ' ಎನಿಸಿದ್ದಾನೆ. ಶರೀರವು ಪ್ರಧಾನವಾದ್ದರಿಂದ ಅಂಗಿಯಾಗಿದೆ ಎಂಬ ಆಕ್ಷೇಪವು ತಪ್ಪು. ಏಕೆಂದರೆ 'ಅಂಗಮಂಗೀ' ಎಂಬ ವಾಕ್ಯದಲ್ಲಿ ಯಾರು ಅಂಗಿಯೋ, ಅವನೇ ಪ್ರಧಾನ ಎಂದು ಹೇಳಿರುವುದರಿಂದ ನಮ್ಮೆಲ್ಲರ ಅನುಭವದಂತೆ ಜೀವನು ಪ್ರಧಾನನಾದ್ದರಿಂದ ಅವನೇ ಅಂಗಿ ಆಗುತ್ತಾನೆ. ಆದ್ದರಿಂದ ಪುರುಷನು ಗೌಣವಾಗಿ ಪ್ರಕೃತಿಯೇ ಪ್ರಧಾನವಾದ ಜಗತ್‌ಕಾರಣವಾಗಿದೆ ಎಂಬ ಸೇಶ್ವರಸಾಂಖ್ಯರು ನೀಡಿದ ದೃಷ್ಟಾಂತವೇ ಯುಕ್ತವಲ್ಲ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಪುರುಷಾಶ್ಮಾಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। अङ्गित्वानुपपत्तेः ।।२।।**

**शरीरप्रवृत्तौ पुरुषस्याङ्गित्वात्, 'अङ्गमङ्गी समादाय यथा कार्यं करोत्यसौ' इत्यङ्गित्वव्यवहारोऽनुपपन्नः ।।२।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये पुरुषाश्माधिकरणम् ।। ४ ।।**

ಅನುವಾದ - ಶರೀರದಿಂದ ನಡೆಯುವ ಪ್ರವೃತ್ತಿಯಲ್ಲಿ ಪುರುಷನು ಪ್ರಧಾನ. ಹಾಗೂ ಶರೀರವು ಅಪ್ರಧಾನ. ಪ್ರಧಾನವಾದ ಜೀವನು ಅಪ್ರಧಾನವಾದ ತನ್ನ ಶರೀರವನ್ನು ಪಡೆದು ಹೇಗೆ

ಕೆಲಸವನ್ನು ಮಾಡುತ್ತಾನೋ ಅದರಂತೆ ಪರಮಾತ್ಮನು ಪ್ರಕೃತಿಯ ಸಹಕಾರದಿಂದ ತಾನೇ ಸೃಷ್ಟಿಯನ್ನು ಮಾಡುತ್ತಾನೆ. ಆದ್ದರಿಂದ ಪುರುಷನೇ ಪ್ರಧಾನನಾದ್ದರಿಂದ ಪುರುಷನು ಗೌಣವೆಂದು ಹೇಳುವುದು ತಪ್ಪು.

ಪ್ರತಿಪದಾರ್ಥ -- ಶರೀರಪ್ರವೃತ್ತೌ = ಶರೀರದ ಪ್ರವೃತ್ತಿಯಲ್ಲಿ, ಪುರುಷಸ್ಯ = ಜೀವನಿಗೆ, ಅಂಗಿತ್ವಾತ್ = ಪ್ರಧಾನ್ಯವಿರುವುದರಿಂದ ದೋಷವಿಲ್ಲ. ಆದ್ದರಿಂದ ಅಂಗೀ = ಪ್ರಧಾನನಾದ ಚೇತನನು, ಅಂಗಂ = ಅಪ್ರಧಾನವಾದ ಶರೀರವನ್ನು, ಸಮಾದಾಯ = ಹೊಂದಿ, ಯಥಾ = ಹೇಗೆ, ಕಾರ್ಯಂ = ಕಾರ್ಯವನ್ನು, ಕರೋತಿ = ಮಾಡುತ್ತಾನೇ ಅದೇ ರೀತಿಯಾಗಿ, ಅಸೌ = ಭಗವಂತನು ಪ್ರಕೃತಿಯ ಸಹಾಯದಿಂದ ಸೃಷ್ಟಿಯನ್ನು ಮಾಡುತ್ತಾನೆ. ಇತಿ = ಹೀಗೆ ಅಂಗಿತ್ವವ್ಯವಹಾರಃ = ಪುರುಷನು ಗೌಣ, ಪ್ರಕೃತಿಯು ಪ್ರಧಾನ ಎಂಬ ವ್ಯವಹಾರವು, ಅನುಪಪನ್ನಃ = ಅಸಾಧುವಾಗಿದೆ.

ಇಲ್ಲಿಗೆ ಪುರುಷಾಶ್ಮಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – हैतुकमन्यश्चायं श्रुत्यवष्टम्भेनोक्तं दृष्टान्तदोषं न गणयतीत्यतो हेत्वन्तरेण दृष्टान्ते साध्यविकलतां साधयत्सूत्रमुपन्यस्य व्याचष्टे ।। अङ्गित्वेति ।।**

ಅನುಮಾನವನ್ನಷ್ಟೇ ಪ್ರಮಾಣವನ್ನಾಗಿ ಒಪ್ಪುವ ತನ್ನನ್ನು ಮಾತ್ರ ಹೈತುಕ ಎಂದೊಪ್ಪುವವನು (ನಿರೀಶ್ವರಸಾಂಖ್ಯನು) ಶ್ರುತಿಯ ಆಧಾರದಿಂದ ಹೇಳಲ್ಪಟ್ಟ ದೃಷ್ಟಾಂತದೋಷವನ್ನು ಪರಿಗಣಿಸುವುದಿಲ್ಲ. ಆದ್ದರಿಂದ ಮತ್ತೊಂದು ಹೇತುವಿನಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವನ್ನು ಸಾಧಿಸುವ ಸೂತ್ರವನ್ನು ಪಠಿಸಿ ಅಂಗಿತ್ವ ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾನೆ.

ವಿವರಣೆ - ಮುಂದಿನ 'ಅಂಗಿತ್ವಾನುಪಪತ್ತೇಃ' ಎಂಬ ಸೂತ್ರದಲ್ಲಿ ಸಮುಚ್ಚಾಯಕವಾದ ಚ ಶಬ್ದವೇ ಇಲ್ಲದ್ದರಿಂದ 'ಹೈತುಕಮನ್ಯಶ್ಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ಹೇತ್ವಂತರೇಣ ಎಂಬುದಕ್ಕೆ ಶ್ರುತಿವಿರೋಧಕ್ಕಿಂತ ಭಿನ್ನವಾದ ಮತ್ತೊಂದು ಹೇತುವಿನಿಂದ ಎಂದರ್ಥ. ಸೂತ್ರದಲ್ಲಿ 'ಪುರುಷಾಶ್ಮವತ್' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಪುರುಷಸ್ಯ ಎಂಬುದನ್ನು ಕೂಡ ಅನುವೃತ್ತಿ ಮಾಡಿಕೊಳ್ಳಬೇಕು.

**तत्वप्रकाशिका – यदि शरीरमेव पुरुषोपसर्जनं प्रवर्तेत तदा शरीरमङ्गि पुरुषोऽङ्गमित्युक्तं स्यात्। तथा च पुरुषस्याङ्गित्वेन शरीरस्याङ्गत्वेन च लौकिकपरीक्षकव्यवहारो न स्यात् । विद्यते चासावतो न पुरुषोपसर्जनशरीरस्य च प्रवृत्तिरिति दृष्टान्तो न युज्यत इति भावः । अतो मतान्तविरोधाभावाद्युक्तं जगत्कारणत्वलक्षणं विष्णोरिति सिद्धम् ॥८॥**

ಒಂದುವೇಳೆ ಶರೀರವೇ ಪ್ರಧಾನವಾಗಿ ಪುರುಷನು ಅಪ್ರಧಾನವಾದರೆ ಆಗ ಯಾವ ಪ್ರವೃತ್ತಿ ಉಂಟಾಗುತ್ತದೋ ಅಲ್ಲಿ ಶರೀರವು ಅಂಗಿಯು ಪುರುಷನು ಅಂಗನು ಎಂದು ಹೇಳಿದಂತಾಗುತ್ತದೆ. ಆದ್ದರಿಂದ ಪುರುಷನು ಅಂಗೀ ಶರೀರವು ಅಂಗ ಎಂದು ಹೇಳುವ ಲೌಕಿಕಪರೀಕ್ಷಕರು ಮಾಡುವ ವ್ಯವಹಾರವೇ ಕೂಡದೇ ಇರಬೇಕಾದೀತು. ಆದರೆ ಲೌಕಿಕರು ಪುರುಷನನ್ನು 'ಅಂಗೀ' ಎಂದೇ ವ್ಯವಹರಿಸುತ್ತಾರೆ.

ಆದ್ದರಿಂದ ಪುರುಷರನ್ನು ಗೌಣವೆಂದು ವಿವಕ್ಷಿಸಿ ಪ್ರಕೃತಿಯಿಂದಲೇ ಪ್ರವೃತ್ತಿಯನ್ನು ಹೇಳಲು ದೃಷ್ಟಾಂತವು ಅಯುಕ್ತವಾಗಿದೆ. ಆದ್ದರಿಂದ ನಿರೀಶ್ವರಸಾಂಖ್ಯಮತದ ವಿರೋಧವು ಇಲ್ಲದಿರುವುದರಿಂದ ವಿಷ್ಣುವಿನ ಜಗತ್ಕಾರಣತ್ವಲಕ್ಷಣವು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಪುರುಷಾಶ್ಮಾಧಿಕರಣ ಮುಗಿಯಿತು

# ಅನ್ಯಥಾಽನುಮಿತ್ಯಧಿಕರಣ

(೨-೨-೫)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಅನ್ಯಥಾऽನುಮಿತ್ಯಧಿಕರಣ

**ದೇವದೇವೋತ್ತಮ ದೇವತಾಸಾರ್ವಭೌಮ**
**ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ**
**ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ**

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – अन्यथाऽनुमितौ च ज्ञशक्तिवियोगात् ।।**

ಹಿಂದೆ ಹೇಳಿದ್ದಕ್ಕಿಂತ ವಿಭಿನ್ನವಾಗಿ ಜೀವನೇ ಪ್ರಧಾನನು, ಪ್ರಕೃತಿಯು ಅಪ್ರಧಾನವೆಂದು ಅನುಮಾನ ಮಾಡಿದರೂ ಕೂಡ ಜೀವನಿಗೆ ಅಂಗಿತ್ವವು ಉಪಪನ್ನವಾಗುವುದಿಲ್ಲ. ಏಕೆಂದರೆ ಶರೀರದೊಂದಿಗೆ ಜೀವನು ಸಂಬಂಧವನ್ನು ಹೊಂದಲು ಸ್ವತಂತ್ರಶಕ್ತಿ ಇರುವುದಿಲ್ಲ. ಈ ವಿಷಯದಲ್ಲಿ ಯಾವುದೇ ದೃಷ್ಟಾಂತವಿಲ್ಲ. ಅಂದರೆ ಭಗವಂತನ ಪ್ರೇರಣೆಯಿಲ್ಲದೇ ಜೀವನು ಕ್ರಿಯಾಶೀಲನಾಗಲು ದೃಷ್ಟಾಂತವಿಲ್ಲ ಎಂದರ್ಥ.

**ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ**

## ಸೂತ್ರದೀಪಿಕಾ

**सूत्रदीपिका** – चशब्देनाङ्गित्वानुपपत्तेरित्यस्य समाकर्षः । यथा **प्राचीनपक्षान्यप्रकारेण** प्रकृत्युपसर्जनपुरुषकर्तृत्वस्या**नुमितौ** साधनेऽपि। **ज्ञशक्तिवियोगात्** ज्ञस्य जीवस्य शरीरसम्बन्धार्थं प्रवृत्तिशक्तिवियोगात् अङ्गित्वानुपपत्तेरेवेत्यर्थः ।।१।।

'ಚ' ಶಬ್ದದಿಂದ 'ಅನ್ಯಥಾऽನುಪಪತ್ತೇಃ' ಎಂಬುದನ್ನು ಸಮಾಕರ್ಷ ಮಾಡಿಕೊಳ್ಳಬೇಕು. ಅನ್ಯಥಾ = ಯಾವ ರೀತಿಯಾಗಿ ಹಿಂದೆ ಹೇಳಿದ್ದಕ್ಕಿಂತ ವಿಲಕ್ಷಣವಾಗಿ ಪ್ರಕೃತಿಯು ಅಪ್ರಧಾನವಾಗಿದೆ. ಜೀವನು ಪ್ರಧಾನನಾಗಿದ್ದಾನೆ ಎಂದು, ಅನುಮಿತೌ = ಸಾಧಿಸಿದರೂ, ಜ್ಞಶಕ್ತಿವಿಯೋಗಾತ್ = ಜೀವನು ಶರೀರದ ಸಂಬಂಧವನ್ನು ಹೊಂದಲು ಸ್ವತಃ ಪ್ರವೃತ್ತಿಶಕ್ತಿ ಇಲ್ಲದ ಕಾರಣ ಅಂಗಿತ್ವವು ಅನುಪಪನ್ನವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – प्रकृत्युपसर्जनपुरुषकर्तृत्ववादमपाकरोति –**

**।। अन्यथाऽनुमितौ च ज्ञशक्तिवियोगात् ।।१।।**

ಅನುವಾದ - ಜಗತ್ತಿನ ಸೃಷ್ಟಿಯಲ್ಲಿ ಪ್ರಕೃತಿಯ ಗೌಣ ಪುರುಷನು ಪ್ರಧಾನ ಎಂಬ ಸಾಂಖ್ಯರ ಮತವನ್ನು ಇಲ್ಲಿ ನಿರಾಕರಣೆ ಮಾಡುತ್ತಿದ್ದಾರೆ.

ಪ್ರತಿಪದಾರ್ಥ -- ಅಧಿಕರಣದ ಪ್ರಮೇಯವನ್ನು ಹೇಳುತ್ತಿದ್ದಾರೆ. ಪ್ರಕೃತ್ಯುಪಸರ್ಜನ-ಪುರುಷಕರ್ತೃತ್ವವಾದಮ್ = ಪ್ರಕೃತಿಯು ಅಪ್ರಧಾನವಾಗಿದೆ ಚೇತನನು ಪ್ರಧಾನನಾಗಿದ್ದಾನೆ. ಅಂಥ ಚೇತನನೇ ಸೃಷ್ಟಿಗೆ ಕರ್ತೃವಾಗಿದ್ದಾನೆ ಎಂದು ಹೇಳುವ ನಿರೀಶ್ವರಸಾಂಖ್ಯರ ಏಕದೇಶಮತವನ್ನು, ಅಪಾಕರೋತಿ = ನಿರಾಕರಣೆ ಮಾಡುತ್ತಿದ್ದಾರೆ.

**भाष्यम् – शरीरसम्बन्धात् पुरुषः प्रवर्तत इत्यङ्गिकारेऽपि स्वतस्तस्यासामर्थ्या-च्छरीरसम्बन्ध एवायुक्तः ।।१।।**

ಅನುವಾದ - ಶರೀರದ ಸಂಬಂಧವಿರುವ ಪ್ರಯುಕ್ತ ಪುರುಷನು ವ್ಯಾಪಾರದಲ್ಲಿ ತೊಡಗುತ್ತಾನೆ. ಹೀಗೆ ಅಂಗೀಕಾರ ಮಾಡಿದರೂ ಪುರುಷನಿಗೆ ಸ್ವತಃ ಸಾಮರ್ಥ್ಯವಿಲ್ಲದ ಕಾರಣ ಶರೀರದೊಂದಿಗೆ ಸಂಪರ್ಕವಾಗಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಶರೀರಸಂಬಂಧಾತ್ = ಶರೀರದ ಸಂಬಂಧದಿಂದ, ಪುರುಷಃ = ಚೇತನನು, ಪ್ರವರ್ತತೇ = ಪ್ರವೃತ್ತಿವುಳ್ಳವನಾಗುತ್ತಾನೆ, ಇತಿ = ಹೀಗೆ, ಅಂಗೀಕಾರೇऽಪಿ = ಒಪ್ಪಿದರೂ, ಸ್ವತಃ = ಸ್ವಾಭಾವಿಕವಾಗಿ, ಅಸಾಮರ್ಥ್ಯಾತ್ = ಸಾಮರ್ಥ್ಯವಿಲ್ಲದ್ದರಿಂದ, ಶರೀರ ಸಂಬಂಧಃ = ಜೀವನಿಗೆ ಶರೀರದ ಸಂಬಂಧವನ್ನು ಹೇಳುವುದು, ಅಯುಕ್ತಃ = ಅಸಂಭಾವಿತವಾಗುತ್ತದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका –**

**अधिकरणार्थं दर्शयति – प्रकृतीति ।। अत्र विष्णोर्जगत्कारणत्वे निरीश्वर-साङ्ख्यैकदेशविरोधपरिहारादस्ति शास्त्रादिसङ्गतिः । ईश्वरस्य जगत्कारणत्वमुक्तम् । तस्य च समयविरुद्धत्वे लक्षणायुक्तेरसौ परिहरणीय एव । तदीश्वरस्याखिलकारणत्वं विषयः । युक्तमयुक्तं वेति संशयः । मतविगानं सन्देहबीजम् ।**

ಅಧಿಕರಣದ ಪ್ರಮೇಯವನ್ನು ಪ್ರಕೃತಿ ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ಈ ಆಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವವಿಷಯಕ್ಕೆ ನಿರೀಶ್ವರಸಾಂಖ್ಯೈಕದೇಶಿಗಳ ಮತದ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ಈಶ್ವರನಿಗೆ ಲಕ್ಷಣವಾಗಿ ಜಗತ್ಕಾರಣತ್ವವನ್ನು ಹೇಳಲಾಯಿತು. ಇದಕ್ಕೆ ಸಮಯವಿರೋಧವು ಪ್ರಾಪ್ತವಾದಾಗ ಜಗತ್ಕಾರಣತ್ವವು ಈಶ್ವರನ ಲಕ್ಷಣವೆಂಬುದು ಯುಕ್ತವಾಗುವುದಿಲ್ಲ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾತಲೇಬೇಕು.

ಈಶ್ವರನ ಲಕ್ಷಣವಾದ ಸಮಸ್ತ ಜಗತ್ಕಾರಣತ್ವವೇ ಅಧಿಕರಣದ ವಿಷಯ. ಈ ಲಕ್ಷಣವು ಈಶ್ವರನಿಗೆ ಯುಕ್ತವೋ ಅಯುಕ್ತವೋ ? ಎಂಬುದು ಸಂಶಯ. ಸಾಂಖ್ಯಮತದಲ್ಲಿರುವ ವಿಪ್ರತಿಪತ್ತಿಯು ಸಂದೇಹಬೀಜ.

**ತತ್ವಪ್ರಕಾಶಿಕಾ – न युक्तमिति पूर्वः पक्षः । प्रधानादेव जगदुत्पत्तिसम्भवेनेश्वरानुपयोगात् । न चाचेतनस्य तदनुपपत्तिदोषः । पुरुषयुक्तस्योपपत्तेः।**

ವಿಷ್ಣುವಿನ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು ಈ ಅಧಿಕರಣದ ಪೂರ್ವಪಕ್ಷ. ಪ್ರಕೃತಿಯಿಂದಲೇ ಜಗತ್ತಿನ ಸೃಷ್ಟಿ ಮೊದಲಾದವುಗಳು ಉಂಟಾಗುವುದರಿಂದ ಈಶ್ವರನ ಅವಶ್ಯಕತೆ ಇರುವುದಿಲ್ಲ. ಜಡವಾದ ಪ್ರಕೃತಿಗೆ ಜಗತ್ಕಾರಣತ್ವವು ಅನುಪಪನ್ನವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ಆ ಜಡವು ಪುರುಷನಿಂದ ಸಹಿತವಾಗಿರುವ ಕಾರಣ ಜಗತ್ಕಾರಣತ್ವವು ಯುಕ್ತವಾಗುತ್ತದೆ.

**ತತ್ವಪ್ರಕಾಶಿಕಾ – न चाङ्गित्वानुपपत्तिः । प्रकृत्युपसर्जनपुरुषस्य कर्तृत्वाङ्गीकारात् । तथा च प्रयोगः । विमता प्रवृत्तिरचेतनोपसर्जनपुरुषाधीना प्रवृत्तित्वादश्मानयनादिप्रवृत्तिवदिति । नच दृष्टान्तदोषः शरीररोपसर्जनपुरुषस्य प्रवृत्तिदर्शनात् । श्रुतेश्चावज्ञानात् । अतो न जगत्कारणत्वलक्षणं ब्रह्मणो युक्तमिति प्राप्ते सिद्धान्तयत्सूत्रमुपन्यस्य व्याचष्टे – अन्यथेति ॥**

ಪ್ರಕೃತಿಯು ಅಪ್ರಧಾನವಾಗಿರುವುದರಿಂದ ಅಂಗಿತ್ವವ್ಯವಹಾರವು ಉಪಪನ್ನವಾಗುವುದಿಲ್ಲ ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಅಪ್ರಧಾನವಾದ ಪ್ರಕೃತಿಯಿಂದ ಕೂಡಿದ ಪುರುಷನಿಗೆ ಕರ್ತೃತ್ವವನ್ನು ಅಂಗೀಕರಿಸುತ್ತೇವೆ. ಇಲ್ಲಿ ತಿಳಿಯಬೇಕಾದ ಅನುಮಾನಪ್ರಯೋಗ ಹೀಗಿದೆ - 'ವಿಮತಾ ಪ್ರವೃತ್ತಿಃ ಅಚೇತನೋಪಸರ್ಜನಪುರುಷಾಧೀನಾ ಪ್ರವೃತ್ತಿತ್ವಾತ್ ಅಶ್ಮಾನಯನಪ್ರವೃತ್ತಿವತ್' ಕಲ್ಲು ತರುವಿಕೆ ಮೊದಲಾದ ಪ್ರವೃತ್ತಿಯು ಪ್ರವೃತ್ತಿಯಾಗಿದೆ. ಅಚೇತನಶರೀರವು ಅಪ್ರಧಾನವಾಗಿವುಳ್ಳ ಪುರುಷಾಧೀನವಾಗಿದೆ. ಆದರಂತೆ ಜಗತ್ತಿನ ಸೃಷ್ಟಿ ಮುಂತಾದ ಪ್ರವೃತ್ತಿಯೂ ಕೂಡ ಪ್ರವೃತ್ತಿ ಆಗಿರು . ಂದ ಪ್ರಕೃತಿಯೇ ಅಪ್ರಧಾನವಾಗಿಯುಳ್ಳ ಪುರುಷನ ಅಧೀನವಾಗಿದೆ ಎಂದು ತಿಳಿಯಬೇಕು.

ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವನ್ನು ಆಕ್ಷೇಪಿಸಬಾರದು. ಶರೀರವೇ ಅಪ್ರಧಾನವಾಗಿಯುಳ್ಳ ಪುರುಷನ ಪ್ರವೃತ್ತಿಯು ಸ್ಪಷ್ಟವಾಗಿ ಕಾಣಸುತ್ತದೆ. 'ನಯತೇ ತ್ವತ್‌ಕ್ರಿಯತೇ' ಎಂಬ ಶ್ರುತಿಯನ್ನು ನಾವು ಒಪ್ಪುವುದಿಲ್ಲ. ಆದ್ದರಿಂದ ಜಗತ್ಕಾರಣತ್ವಲಕ್ಷಣವು ಬ್ರಹ್ಮನಲ್ಲಿ ಅಯುಕ್ತವಾಗುತ್ತದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ 'ಅನ್ಯಥಾ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – चशब्देनाङ्गित्वानुपपत्तेः समाकर्षः । युक्तमीश्वरस्य जगत्कारणत्वम् । प्रकृत्युपसर्जनपुरुस्य कर्तृत्वे मानाभावात् । प्राचीनपक्षादन्यथानुमितमिति चेन्न । दृष्टान्ते सध्याभावात् । तथाहि – शरीरोपसर्जनः पुरुषः प्रवर्तत इति पक्षे किं पुरुषस्य प्रवृत्तिशक्तिरस्ति न वा ।**

ಸೂತ್ರದಲ್ಲಿರುವ ಚ ಶಬ್ದದಿಂದ 'ಅಂಗಿತ್ವಾನುಪಪತ್ತೇಃ' ಎಂಬುದನ್ನು ಸಮಾಕರ್ಷ ಮಾಡಿಕೊಳ್ಳಬೇಕೆಂದು ತಿಳಿಯುತ್ತದೆ. ಈಶ್ವರನಿಗೆ ಜಗತ್ಕಾರಣತ್ವವು ಯುಕ್ತವೇ ಆಗುತ್ತದೆ. ಪ್ರಕೃತಿಯು ಅಪ್ರಧಾನವಾಗಿಯುಳ್ಳ ಪುರುಷನಿಂದ ಜಗತ್ತು ಉತ್ಪನ್ನವಾಗುತ್ತದೆಂಬ ವಿಷಯದಲ್ಲಿ ಯಾವುದೇ ಪ್ರಮಾಣ ಇರುವುದಿಲ್ಲ. ಮತ್ತು ಹಿಂದಿನ ಮತಕ್ಕಿಂತ ವಿಲಕ್ಷಣವಾಗಿ ಜೀವನಿಗೆ ಅಂಗಿತ್ವವನ್ನು ಒಪ್ಪಿರುವುದರಿಂದ ಯಾವುದೇ ದೋಷ ಬರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ದೃಷ್ಟಾಂತದಲ್ಲಿ ಸಾಧ್ಯವೇ ಇರುವುದಿಲ್ಲ. ಏಕೆಂದರೆ ಶರೀರವು ಅಪ್ರಧಾನವಾಗಿಯುಳ್ಳ ಪುರುಷನಿಂದ ಪ್ರವೃತ್ತಿಯು ಆಗುತ್ತದೆ ಎಂಬ ಪಕ್ಷದಲ್ಲಿ ಪುರುಷನಿಗೆ ಪ್ರವೃತ್ತಿ ಮಾಡುವ ಶಕ್ತಿ ಇದೆಯೋ ಇಲ್ಲವೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು.

**तत्वप्रकाशिका – यद्यस्ति तर्हि शरीरवैयर्थ्यम् । यदि न शक्तिस्तर्हि पुरुषाङ्गित्वमनुपपन्नं स्यात्। शरीरसम्बन्धार्थं केवलस्य पुरुषस्य शक्त्यभावात् । यदि तत्रास्ति शक्तिस्तर्ह्यन्यत्रापि स्यादित्यन्यतरवैयर्थ्यम् ।**

ಒಂದುವೇಳೆ ಪುರುಷನಿಗೆ ಪ್ರವೃತ್ತಿಶಕ್ತಿಯು ಸ್ವತಂತ್ರವಾಗಿ ಇದೆ ಎಂದು ಹೇಳುವುದಾದರೆ ಶರೀರವೇ ವ್ಯರ್ಥವಾಗುತ್ತದೆ. ಒಂದುವೇಳೆ ಸ್ವತಂತ್ರಶಕ್ತಿಯು ಇಲ್ಲವೆಂದು ಹೇಳುವುದಾದರೆ ಆಗ ಪುರುಷನು ಅಂಗಿಯಾಗಿದ್ದಾನೆಂಬುದು ಅನುಪಪನ್ನವಾಗುತ್ತದೆ. ಏಕೆಂದರೆ ಶರೀರಸಂಬಂಧವನ್ನು ಹೊಂದಲು ಕೇವಲ ಪುರುಷನಿಗೆ ಶಕ್ತಿಯು ಇರುವುದಿಲ್ಲ ಶರೀರಸಂಬಂಧವನ್ನು ಪಡೆಯುವುದರಲ್ಲಿ ಪುರುಷನಿಗೆ ಶಕ್ತಿ ಇರುವುದಾದರೆ ಕಲ್ಲು ಮೊದಲಾದವುಗಳನ್ನು ಎತ್ತಲೂ ಕೂಡ ಪುರುಷನಿಗೆ ಶಕ್ತಿ ಇರುತ್ತದೆಂದು ಹೇಳಿದಂತಾಯಿತು. ಆಗ ಶರೀರವು ವ್ಯರ್ಥವಾಗುತ್ತದೆ.

**तत्वप्रकाशिका – शरीरसम्बन्धात् पूर्वमपि प्रकृतिसम्बद्धस्यास्ति शक्तिरिति चेत् तत्पूर्वमप्येवमित्यनवस्थापातात् ।**

ಶರೀರ ಸಂಬಂಧ ಆಗುವುದಕ್ಕಿಂತ ಮೊದಲೂ ಕೂಡ ಪ್ರಕೃತಿಯ ಸಂಬಂಧವು ಪುರುಷನಿಗಿದೆ ಎಂದು ಹೇಳಿದರೆ ಆಗ ಆ ಪ್ರಕೃತಿಸಂಬಂಧವಾಗುವ ಮೊದಲು ಮತ್ತೊಂದು ಪ್ರಕೃತಿಯ ಸಂಬಂಧ ಇದೆ ಎಂದಾಯಿತು. ಅದಕ್ಕಾಗಿ ಮತ್ತೊಂದು ಪ್ರಕೃತಿಯ ಸಂಬಂಧವನ್ನು ಒಪ್ಪಬೇಕಾಗುತ್ತದೆ. ಹೀಗೆ ಪರಂಪರೆಯನ್ನು ಹೇಳಿದರೆ ಅನವಸ್ಥಾದೋಷವನ್ನು ಇವರು ಎದುರಿಸಬೇಕು.

**ತತ್वप्रकाशिका – अनादिताश्रयणे निष्प्रकृतीनां मुक्तानां प्रवृत्तिरुदाहर्तव्या । अतो यथा पुरुषस्य शरीरसम्बन्धक्रियायां न शरीरोपकृतस्य प्रवृत्तिर्नापि केवलस्येतीश्वरोऽङ्गीकार्यः।**

ಪ್ರಕೃತಿಯು ಅನಾದಿಯಾದ್ದರಿಂದ ಅನವಸ್ಥಾದೋಷವು ಬರುವುದಿಲ್ಲವೆಂದರೆ ಪ್ರಕೃತಿಯ ಸಂಬಂಧವಿಲ್ಲದ ಮುಕ್ತಜೀವರ ಪ್ರವೃತ್ತಿಯು ಕೂಡ ಪ್ರವೃತ್ತಿತ್ವ ಎಂಬ ಹೇತುವಿಗೆ ಅಲ್ಲಿ ಅಚೇತನವೇ ಪ್ರಧಾನವಾಗಿಯುಳ್ಳ ಪುರುಷನ ಪ್ರವೃತ್ತಿತ್ವವು ಇಲ್ಲವಾದ್ದರಿಂದ ಸಾಧ್ಯವು ಬರುವುದಿಲ್ಲ. ಹೀಗೆ ವ್ಯಭಿಚಾರದೋಷವು ಮುಕ್ತಜೀವರಲ್ಲಿ ಬರುತ್ತದೆ. ಆದ್ದರಿಂದ ಪುರುಷನಿಗೆ ಹೇಗೆ ಶರೀರಸಂಬಂಧ ಎಂಬ ಕ್ರಿಯೆಯಲ್ಲಿ ಶರೀರ ಉಪಕೃತವಾದ ಪ್ರವೃತ್ತಿಯು ಇರುವುದಿಲ್ಲವೋ ಅದರಂತೆ. ಶರೀರ ಸಂಬಂಧ ಇಲ್ಲದ ಸ್ಥಳದಲ್ಲಿಯೂ ಕೂಡ ಪ್ರವೃತ್ತಿಯು ಉಂಟಾಗುವುದಿಲ್ಲ. ಆದ್ದರಿಂದ ಪುರುಷನ ಪ್ರವೃತ್ತಿಗಾಗಿ ಈಶ್ವರನನ್ನು ಅಂಗೀಕಾರಮಾಡಲೇ ಬೇಕು.

**तत्वप्रकाशिका – तथाश्मानयनप्रवृत्तावपीति दृष्टान्ताभाव इति भावः ।।९।।**

ಇದೇ ರೀತಿಯಾಗಿ ಕಲ್ಲು ತರುವಿಕೆ ಮೊದಲಾದ ಪ್ರವೃತ್ತಿಗಳಲ್ಲಿಯೂ ಕೂಡ ಈಶ್ವರನನ್ನು ಒಪ್ಪಲೇ ಬೇಕಾಗುತ್ತದೆ. ಕೇವಲ ಪ್ರಕೃತಿ ಅಥವಾ ಪುರುಷರ ವ್ಯಾಪಾರದಿಂದ ಈ ಪ್ರವೃತ್ತಿಯು ನಡೆಯುವುದಿಲ್ಲ. ಹಾಗಾಗಿ ದೃಷ್ಟಾಂತದಲ್ಲಿ ಪ್ರಕೃತಿಯೇ ಅಪ್ರಧಾನವಾಗುಳ್ಳ ಪುರುಷಪ್ರಧಾನವಾಗಿರುವಿಕೆಯು ಇರುವುದಿಲ್ಲ. ಏಕೆಂದರೆ ಪೂರ್ವಪಕ್ಷಿಗಳು ಈಶ್ವರನನ್ನು ಒಪ್ಪಿರುವುದಿಲ್ಲ. ಆದ್ದರಿಂದ ಅನುಮಾನಕ್ಕೆ ದೃಷ್ಟಾಂತವೇ ಇರುವುದಿಲ್ಲವೆಂಬುದು ಸೂತ್ರದ ಅಭಿಪ್ರಾಯ.

## ಬ್ರಹ್ಮಸೂತ್ರ

**सूत्रम् – विप्रतिषेधाच्चासमञ्जसम् ।।**

ಹೀಗೆ ಸಕಲ ಶ್ರುತಿ-ಸ್ಮೃತಿ ಯುಕ್ತಿಗಳಿಗೆ ವಿರುದ್ಧವಾದ್ದರಿಂದ ಈಶ್ವರನೇ ಇಲ್ಲವೆಂಬ ಸಾಂಖ್ಯಮತವು ಅಯುಕ್ತವಾಗಿದೆ.

## ಸೂತ್ರದೀಪಿಕಾ

**सूत्रदीपिका –** विप्रतिषेधात् सकलश्रुतिस्मृतियुक्तिविरुद्धत्वादनीश्वरमत-मसमञ्जसमयुक्तमित्यर्थः ।।२।।

ವಿಪ್ರತಿಷೇಧಾಚ್ಚ = ಸಕಲಶ್ರುತಿಸ್ಮೃತಿ ಯುಕ್ತಿವಿರುದ್ಧವಾದ್ದರಿಂದ ಅಸಮಂಜಸಮ್ = ಈಶ್ವರನನ್ನು ಒಪ್ಪದ ಸಾಂಖ್ಯಮತವು ಅಯುಕ್ತವಾಗಿದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅನ್ಯಥಾಽನುಮಿತ್ಯಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। विप्रतिषेधाच्चासमञ्जसम् ।।२।।**

**सकलश्रुतिस्मृतियुक्तिविरुद्धत्वाच्च अनीश्वरमतमसमञ्जसम् ।**

**'श्रुतयः स्मृतयश्चैव युक्तयश्चेश्वरं परम् ।**

**वदन्ति तद्विरुद्धं यो वदेत् तस्मान्न चाधमः ।।' इति पाद्मे ।।२।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये अन्यथाऽनुमित्यधिकरणम् ।। ५ ।।**

ಅನುವಾದ - ಎಲ್ಲಾ ವಿಧವಾದ ಶ್ರುತಿ ಸ್ಮೃತಿ ಯುಕ್ತಿಗಳಿಗೆ ವಿರುದ್ಧವಾದ್ದರಿಂದ ನಿರೀಶ್ವರ ಸಾಂಖ್ಯಮತವು ಅಸಾಧುವಾಗಿದೆ.

ಶ್ರುತಿಗಳು ಸ್ಮೃತಿಗಳು ಮತ್ತು ಯುಕ್ತಿಗಳು ಪರಮಾತ್ಮನನ್ನು ಸರ್ವೇಶ್ವರ ಎಂದು ಹೇಳುತ್ತಿವೆ ಅದಕ್ಕೆ ವಿರುದ್ಧವಾಗಿ ಹೇಳಿದರೆ ಆ ವ್ಯಕ್ತಿಗಳಿಗಿಂತ ನೀಚರಾದವರು ಮತ್ತೊಬ್ಬರಿಲ್ಲ. ಹೀಗೆ ಪದ್ಮಪುರಾಣವು ಹೇಳಿದೆ.

ಪ್ರತಿಪದಾರ್ಥ -- ಇಲ್ಲಿಯತನಕ ಪ್ರತ್ಯೇಕವಾಗಿ ದೂಷಣೆ ಮಾಡಿದ ನಿರೀಶ್ವರ ಮತಗಳನ್ನು ಸಾಮಾನ್ಯದೋಷದಿಂದ ನಿರಾಕರಿಸುತ್ತಿದ್ದಾರೆ. ಸಕಲಶ್ರುತಿಸ್ಮೃತಿಯುಕ್ತಿವಿರುದ್ಧತ್ವಾತ್ = ಎಲ್ಲ ವಿಧವಾದ ಶ್ರುತಿಸ್ಮೃತಿ ಹಾಗೂ ಯುಕ್ತಿಗಳಿಗೆ ವಿರುದ್ಧವಾದ್ದರಿಂದ, ಅನೀಶ್ವರಮತಮ್ = ಈಶ್ವರನನ್ನು ಒಪ್ಪದೆ ಇರುವ ದರ್ಶನಗಳು, ಅಸಮಂಜಸಮ್ = ಅಯುಕ್ತವಾಗಿವೆ.

ಶ್ರುತಯಃ = ಶ್ರುತಿಗಳು, ಸ್ಮೃತಯಶ್ಚೈವ = ಸ್ಮೃತಿಗಳೂ ಕೂಡ, ಯುಕ್ತಯಶ್ಚ = ಯುಕ್ತಿಗಳೂ ಕೂಡ, ಈಶ್ವರಂ = ಪರಮಾತ್ಮನನ್ನು, ಪರಂ = ಸರ್ವೋತ್ತಮನೆಂದು, ವದಂತಿ = ಹೇಳುತ್ತಿವೆ. ತದ್‌ವಿರುದ್ಧಂ = ಇದಕ್ಕೆ ವಿರುದ್ಧವಾಗಿ, ಯಃ = ಯಾರು ವದೇತ್ ಹೇಳುತ್ತಾನೋ, ತಸ್ಮಾತ್ = ಅವನಿಗಿಂತ, ಅಧಮಃ = ನಿಜವಾದವನು, ನಚ = ಇರುವುದಿಲ್ಲ. ಇತಿ = ಹೀಗೆ, ಪಾದ್ಮೇ = ಪದ್ಮಪುರಾಣದಲ್ಲಿ ಹೇಳಲಾಗಿದೆ.

ಇಲ್ಲಿಗೆ ಅನ್ಯಥಾಽನುಮಿತ್ಯಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ತ್ವಪ್ರಕಾಶಿಕಾ

**तत्वप्रकाशिका – एवं प्रत्येकं दूषितान्यनीश्वरमतानि सामान्यदूषणेन निराकुर्वत् सूत्रमुपन्यस्य व्याचष्टे – विप्रतिषेधादिति ।।**

ಪ್ರತ್ಯೇಕವಾಗಿ ದೋಷಿಸಲ್ಪಟ್ಟ ಈಶ್ವರನನ್ನು ಒಪ್ಪದ ಮತಗಳಿಗೆ ಪ್ರಕೃತ ಸಾಮಾನ್ಯದೋಷದಿಂದ ನಿರಾಕರಣೆ ಮಾಡುವ ಸೂತ್ರವನ್ನು 'ವಿಪ್ರತಿಷೇಧಾತ್' ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಈ ಅಧಿಕರಣದ ಪ್ರಥಮಸೂತ್ರದಲ್ಲಿ ಸಾಂಖ್ಯರು ಹೇಳಿದ ಅನುಮಾನಕ್ಕೆ ಸಾಧ್ಯವೈಕಲ್ಯದೋಷವನ್ನು ಹೇಳಲಾಯಿತು. ಎರಡನೆಯ ಸೂತ್ರದಲ್ಲಿ ಹಿಂದಿನ ಮತಗಳಂತೆ ಈ ಮತಕ್ಕೂ ಶ್ರುತಿಸ್ಮೃತಿಗಳ ವಿರೋಧ ಇದೆ ಎಂದು ಹೇಳುತ್ತಿದ್ದಾರೆ.

**तत्वप्रकाशिका – कुतोऽनीश्वरमतानां श्रुत्यादिविरुद्धत्वमित्यत आह –श्रुतय इति ।। नात्र सेश्वरसाङ्ख्येन सन्तोष्टव्यम् । स्वातन्त्र्यानभ्युपगमात् । 'ईश्वरं परं वदन्ति' इति हि स्मृतिः । अतो न साङ्ख्यादिमतविरोधेन लक्षणासम्भव इति सिद्धम्।।**

ಈಶ್ವರನನ್ನು ಒಪ್ಪದ ಮತಗಳಿಗೆ ಶ್ರುತಿಸ್ಮೃತಿಗಳ ವಿರೋಧವು ಏಕೆ ಬರುತ್ತದೆ ? ಎಂಬ ಪ್ರಶ್ನೆಗೆ 'ಶ್ರುತಯಃ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ನಿರೀಶ್ವರಸಾಂಖ್ಯರನ್ನು ನೋಡಿ ಸಂತೋಷ ಪಡಲು ಸಾಧ್ಯವಿಲ್ಲ. ಈಶ್ವರನನ್ನು ಅವರು ಒಪ್ಪಿದರೂ ಕೂಡ ಸ್ವಾತಂತ್ರ್ಯವನ್ನು ಒಪ್ಪಿರುವುದಿಲ್ಲ. ಏಕೆಂದರೆ ಈಶ್ವರನನ್ನು ಶ್ರುತಿಗಳು ಸರ್ವೋತ್ತಮ ಎಂದು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಸಾಂಖ್ಯ ಮೊದಲಾದ ಸಮಯಗಳ ವಿರೋಧ ಬರುವುದರಿಂದ ಬ್ರಹ್ಮನ ಲಕ್ಷಣವು ಅಸಂಭಾವಿತವಾಗಿದೆ ಎಂದು ಸಿದ್ಧವಾಯಿತು.

ವಿವರಣೆ - ಯಾರು ಈಶ್ವರನನ್ನು ಒಪ್ಪುವುದಿಲ್ಲವೋ ಅವರಿಗೆ ಶ್ರುತಿಸ್ಮೃತಿಗಳ ವಿರೋಧವು ಬರುತ್ತದೆಂದು ಹೇಳಿದಾಗ ಈಶ್ವರನನ್ನು ಒಪ್ಪುವ ಸಾಂಖ್ಯನು ಸಂತೋಷಪಡಬಹುದು. 'ನಾನು ಈಶ್ವರನನ್ನು ಒಪ್ಪುವುದರಿಂದ ನನಗೆ ಶ್ರುತಿಸ್ಮೃತಿಗಳ ವಿರೋಧ ಬರುವುದಿಲ್ಲ' ಎಂದು. ಆದರೆ ಯಾವ ಶ್ರುತಿಸ್ಮೃತಿಗಳು ಈಶ್ವರನನ್ನು ಪ್ರತಿಪಾದನೆ ಮಾಡುತ್ತಿವೆಯೋ ಅದೇ ಶ್ರುತಿಸ್ಮೃತಿಗಳು ಈಶ್ವರನಿಗೆ ಸರ್ವೋತ್ತಮತ್ವವನ್ನು ಕೂಡ ಪ್ರತಿಪಾದನೆ ಮಾಡುತ್ತಿವೆ. ಸೇಶ್ವರಸಾಂಖ್ಯನು ಈಶ್ವರನನ್ನು ಒಪ್ಪಿದರೂ ಕೂಡ ಅವನಲ್ಲಿ ಸರ್ವೋತ್ತಮತ್ವವನ್ನು ಒಪ್ಪುವುದಿಲ್ಲ. ಪ್ರಕೃತಿಗೆ ಅನುಗ್ರಹ ಮಾಡುವವನು ಎಂದಷ್ಟೇ ಒಪ್ಪುತ್ತಾನೆ. ಆದ್ದರಿಂದ ಸೇಶ್ವರಸಾಂಖ್ಯವಾದಿಗಳಿಗೂ ಕೂಡ ಶ್ರುತಿಸ್ಮೃತಿಗಳ ವಿರೋಧವು ಬಂದೇ ಬರುತ್ತದೆ. ಹೀಗೆ ಸಕಲ ಅನೀಶ್ವರವಾದಿಗಳಿಗೆ ಶ್ರುತಿಸ್ಮೃತಿಗಳ ವಿರೋಧವು ತಪ್ಪಿದ್ದಲ್ಲ. ಇಲ್ಲಿಗೆ ಈಶ್ವರನನ್ನು ಒಪ್ಪದ ಮತದವರ ನಿರಾಕರಣೆಯು ಮುಗಿಯಿತು.

ಇಲ್ಲಿಗೆ ತತ್ತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅನ್ಯಥಾಽನುಮಿತ್ಯಧಿಕರಣ ಮುಗಿಯಿತು.

ರಚನಾನುಪಪತ್ತ್ಯಧಿಕರಣದಿಂದ
ಅನ್ಯಥಾಽನುಮಿತ್ಯಧಿಕರಣದ ತನಕ
(೨-೨-(೧-೫))

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ಎರಡನೆಯ ಅಧ್ಯಾಯ

## ಎರಡನೆಯ ಪಾದ

## ರಚನಾನುಪಪತ್ತ್ಯಧಿಕರಣದಿಂದ - ಅನ್ಯಥಾನುಮಿತ್ಯಧಿಕರಣದ ತನಕ

ಸಮಯಗಳ ವಿರೋಧ ಪರಿಹಾರಕ್ಕಾಗಿ ಈ ಪಾದ

**युक्त्यविरोध उक्तः । समयाविरोध उच्यते । यद्यपि वेदानां ''न विलक्षणत्वात्'' इत्यत्रापौरुषेयत्वेन निर्दोषत्वमाद्याध्याये ब्रह्मणि समन्वयश्चोक्तः । वेदविरोधिनां सांख्यादिसमयानां तु ''इतरेषां चानुपलब्धेः'' इत्यत्रानाप्तिमूलत्वयुक्तीनां च गतपाद एवाभासत्वमुक्तम् । तथापि –**

**अनादिकालतो वृत्ताः समया हि प्रवाहतः ।**
**न चोच्छेदोऽस्ति कस्यापि समयस्येत्यतो विभुः ।।**

**इत्यनुव्याख्यानोक्तरीत्या समयानां वेदवदनादितोनुवृत्तत्वादभियोगतो बहुजनपरिगृहीतत्वाद्बहुयुक्त्युपबृंहितत्वात् प्राज्ञैः कपिलादिभिः प्रवर्तितत्वाच्च वेदवदेव प्रामाण्यमिति मन्दस्य शङ्कायां –**

ಯುಕ್ತಿಯ ವಿರೋಧವಿಲ್ಲ ಎಂದು ಹಿಂದಿನ ಪಾದದಲ್ಲಿ ಹೇಳಿಯಾಯಿತು. ಈ ಪಾದದಲ್ಲಿ ಸಮಯಗಳ ವಿರೋಧವಿಲ್ಲ ಎಂದು ಹೇಳುತ್ತಾರೆ.

ಪ್ರಶ್ನೆ - ವಾಸ್ತವಿಕವಾಗಿ ಈ ಅಧ್ಯಾಯದ ಮೊದಲನೆಯ ಪಾದದ 'ನ ವಿಲಕ್ಷಣತ್ವಾಧಿಕರಣದಲ್ಲಿ ವೇದಗಳು ಅಪೌರುಷೇಯವಾಗಿವೆ, ಆದ್ದರಿಂದ ನಿರ್ದುಷ್ಟವಾಗಿವೆ ಎಂದು ಸಮರ್ಥಿಸಲಾಯಿತು, ಹಾಗೂ ಮೊದಲನೇ ಅಧ್ಯಾಯದಲ್ಲಿ ಸಕಲ ವೇದಗಳಿಗೂ ಬ್ರಹ್ಮನಲ್ಲಿ ಸಮನ್ವಯವನ್ನು ಹೇಳಿಯಾಗಿದೆ.

ಆದ್ದರಿಂದ ಸಮಯವಿರೋಧ ಬಂದರೂ ಈ ಎರಡು ಅಂಶಗಳಿಗೆ ಏನೂ ಬಾಧಕವಿಲ್ಲ, ಹಾಗೂ 'ಇತರೇಷಾಂ ಚಾನುಪಲಬ್ಧೇಃ' ಎಂಬಲ್ಲಿ ವೇದವಿರೋಧಿಯಾದ ಸಾಂಖ್ಯವೇ ಮೊದಲಾದ ಸಮಯಗಳಿಗೆ ಅನಾಪ್ತಿಮೂಲತ್ವ ಇಲ್ಲ ಎಂಬುದನ್ನೂ ಅವರು ಹೇಳುವ ಯುಕ್ತಿಗಳಿಗೆ ಆಭಾಸತ್ವವನ್ನೂ ಹೇಳಿಯಾಗಿದೆ, ಆದ್ದರಿಂದ ಈ ಸಮಯಪಾದ ಅನಾರಂಭಣೀಯವಾಗಿದೆ.

ಉತ್ತರ - ಹೌದು, ಆದರೂ ಕೂಡ ಮಂದರ ಶಂಕಾಪರಿಹಾರಕ್ಕಾಗಿ ಈ ಪಾದ ಹೊರಟಿದೆ, ಆದ್ದರಿಂದ ಆರಂಭಣೀಯತ್ವ ಸಿದ್ಧವಾಗುತ್ತದೆ.

ಅನಾದಿಕಾಲತೋ ವೃತ್ತಾಃ ಸಮಯಾ ಹಿ ಪ್ರವಾಹತಃ ।
ನ ಚೋಚ್ಛೇದೋಽಸ್ತಿ ಕಸ್ಯಾಪಿ ಸಮಯಸ್ಯೇತ್ಯತೋ ವಿಭುಃ ॥

ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿರುವಂತೆ ಸಮಯಗಳು ವೇದದಂತೆ ಅನಾದಿಕಾಲದಿಂದ ಅನುವೃತ್ತವಾಗಿವೆ. ಆಗ್ರಹಪೂರ್ವಕವಾಗಿ ಬಹುಜನಪರಿಗೃಹೀತವಾಗಿವೆ. ಅನೇಕ ಯುಕ್ತಿಗಳಿಂದ ಬಲಿಷ್ಠವಾಗಿವೆ. ಪ್ರಾಜ್ಞರಾದ ಕಪಿಲಾದಿಗಳಿಂದ ಪ್ರವರ್ತಿತವಾಗಿವೆ. ಈ ಎಲ್ಲಾ ಕಾರಣಗಳಿಂದ ವೇದದಂತೆಯೇ ಈ ಸಮಯಗಳೂ ಪ್ರಮಾಣವಾಗಿವೆ ಎಂದು ತಿಳಿದರೆ ಸಂದೇಹ ಬರುತ್ತದೆ. ಅಂತಹ ಮಂದರ ಶಂಕಾಪರಿಹಾರಕ್ಕಾಗಿ ಈ ಪಾದ ಪ್ರಾರಂಭವಾಗಿದೆ.

**दौर्लभ्याच्छुद्धबुद्धीनां बाहुल्यादल्पवेदिनाम् ।**
**तामसत्वाच्च लोकस्य मिथ्याज्ञानप्रसक्तितः ॥**

**विद्वेषात् परमे तत्वे तत्ववेदिषु चानिशम् ।**
**अनादिवासनायोगादसुराणां बहुत्वतः ॥**
**दुराग्रहगृहीतत्वाद्वर्तन्ते समयाः सदा ॥**

ದೌರ್ಲಭ್ಯಾತ್ ಶುದ್ಧಬುದ್ಧೀನಾಂ ಬಾಹುಲ್ಯಾದಲ್ಪವೇದಿನಾಮ್ ।
ತಾಮಸತ್ವಾಚ್ಚ ಲೋಕಸ್ಯ ಮಿಥ್ಯಾಜ್ಞಾನಪ್ರಸಕ್ತಿತಃ ॥
ವಿದ್ವೇಷಾತ್ ಪರಮೇ ತತ್ವೇ ತತ್ವವೇದಿಷು ಚಾನಿಶಮ್ ।
ಅನಾದಿವಾಸನಾಯೋಗಾದಸುರಾಣಾಂ ಬಹುತ್ವತಃ ॥
ದುರಾಗ್ರಹಗೃಹೀತತ್ವಾದ್ವರ್ತಂತೇ ಸಮಯಾಃ ಸದಾ ॥

ಎಂಬ ಅನುವ್ಯಾಖ್ಯಾನದಲ್ಲಿ ಶುದ್ಧಬುದ್ಧಿಯುಳ್ಳವರು ವಿರಳವಾಗಿರುವುದರಿಂದ ಅಲ್ಪಬುದ್ಧಿಗಳು ಅಧಿಕ ಸಂಖ್ಯೆಯಲ್ಲಿರುವುದರಿಂದ ಲೋಕದಲ್ಲಿ ತಮೋಗುಣ ಹಾಗೂ ಮಿಥ್ಯಾಜ್ಞಾನಗಳೇ ಇರುತ್ತವೆ. ಯಾವಾಗಲೂ ಪರತತ್ವದಲ್ಲಿ ಹಾಗೂ ತತ್ವಜ್ಞಾನಿಗಳಲ್ಲಿ ದ್ವೇಷ ಇರುವುದರಿಂದ ಅನಾದಿವಾಸನಾದಿಂದಲೂ, ಅಸುರರ ಸಂಖ್ಯೆ ಹೆಚ್ಚಿರುವುದರಿಂದಲೂ, ದುರಾಗ್ರಪೀಡಿತನಾಗಿರುವುದರಿಂದಲೂ ಸಮಯಗಳು ಸದಾ ಇರುತ್ತವೆ (ಈ ಕಾರಣಗಳಿಂದ ಎಲ್ಲಾ ಬಗೆಯ ಸಮಯಗಳು ಬಹುಜನಪರಿಗ್ರಹೀತವಾಗಿದೆ ಎಂದರ್ಥ).

ರಚನಾನುಪಪತ್ತ್ಯಧಿಕರಣ-ಅನ್ಯಥಾನುಪಪತ್ತ್ಯಧಿಕರಣ (2-2-(1-5))

**इत्यनुव्याख्यानोक्तरीत्या प्रवाहानाद्यनुवृत्तिबहुजनपरिग्रहयोरन्यथाप्युपपत्तेर्वेदवच्च स्वरूपानादित्वस्याभावाद्युक्तीनां च वक्ष्यमाणदृढयुक्त्यागमबाधितत्वेनाभासत्वादत एव च प्रवर्तकानामप्यप्राज्ञात्वादित्येवं "इतरेषां चानुपलब्धेः" इत्यनेनोक्तानाप्तत्वस्य तत्तत्प्रमेयेषु दृढयुक्तिविरोधस्य विशिष्योक्त्या प्रपञ्चनार्थोऽयं पादः ।**

ಈ ಅನುವ್ಯಾಖ್ಯಾನದಲ್ಲಿ ತಿಳಿಸಿರುವಂತೆ ಸಮಯಗಳು ಪ್ರವಾಹತಃ ಅನಾದಿ ಹಾಗೂ ಬಹುಜನಪರಿಗೃಹೀತವಾಗಿವೆ. ಆದ್ದರಿಂದ ಪ್ರಮಾಣ ಎಂಬುದು ಅನ್ಯಥಾಸಿದ್ಧ. ಎಂದರೆ ಪ್ರವಾಹತಃ ಅನಾದಿತ್ವ ಹಾಗೂ ಬಹುಜನಪರಿಗೃಹೀತತ್ವ ಎಂಬುದು ಪ್ರಾಮಾಣ್ಯಕ್ಕೆ ಪ್ರಯೋಜಕಗಳಲ್ಲ. ಇದಿಲ್ಲದಿದ್ದರೂ ಪ್ರಾಮಾಣ್ಯ ಬರಬಹುದು. ಅನಾದಿತ್ವವು ಎರಡು ವಿಧ. ಪ್ರವಾಹತಃ ಅನಾದಿ, ಸ್ವರೂಪತಃ ಅನಾದಿ ಎಂಬುದಾಗಿ. ಇದರಲ್ಲಿ ಪ್ರವಾಹತಃ ಅನಾದಿತ್ವವು ಅನ್ಯಥಾಸಿದ್ಧ ಎಂದು ಹೇಳಿಯಾಯಿತು. ಇನ್ನು ಸ್ವರೂಪತಃ ಅನಾದಿತ್ವವು ಈ ಸಮಯಗಳಿಗೆ ಇಲ್ಲವೇ ಇಲ್ಲ. ಇನ್ನು ಯುಕ್ತ್ಯುಪಬೃಂಹಿತತ್ವದಿಂದ ಸಹಿತವಾಗಿರುವುದರಿಂದಲೂ ಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ, ಏಕೆಂದರೆ ಈ ಯುಕ್ತಿಗಳು ನಾವು ಮುಂದೆ ಹೇಳಲಿರುವ ಧೃಢಯುಕ್ತಿಗಳಿಂದ ಮತ್ತು ಆಗಮದಿಂದ ವಿರೋಧಿಗಳಾದ್ದರಿಂದಲೂ ಆಭಾಸಗಳಾಗುತ್ತವೆ. ಯುಕ್ತಿಗಳು ದುಷ್ಟವಾಗಿರುವುದರಿಂದಲೇ ಪ್ರಾಜ್ಞರಿಂದ ಪ್ರವೃತ್ತವಾಗಿವೆ. ಆದ್ದರಿಂದ ಪ್ರಾಮಾಣ್ಯ ಹೇಳಬೇಕು ಎಂಬುದೂ ಸರಿಯಲ್ಲ ಏಕೆಂದರೆ ದುಷ್ಟಯುಕ್ತಿಗಳನ್ನು ಹೇಳುವವರು ಪ್ರಾಜ್ಞರಾಗಲು ಸಾಧ್ಯವಿಲ್ಲ, ಹೀಗೆ 'ಇತರೇಷಾಂ ಚಾನುಪಲಬ್ದೇಃ' ಎನ್ನುವಲ್ಲಿ ಹೇಳಿದ ಅನಾಪ್ತತ್ವವನ್ನೇ ಪ್ರತಿಯೊಂದು ವಿಷಯದಲ್ಲೂ ಧೃಢಯುಕ್ತಿಗಳಿಂದ ವಿಶೇಷವಾಗಿ ಮುಂದೆ ಹೇಳುವುದರಿಂದ ಇದು ಹಿಂದೆ ಹೇಳಿದರ ಪ್ರಪಂಚನರೂಪವಾಗಿದೆ.

**प्रपञ्चनं च न समयानामुच्छेदनार्थम् । तेषां प्रवाहतोऽनन्तत्वात् ।**

'ಪ್ರಪಂಚನ' ಎಂದರೆ ಆ ಸಮಯಗಳನ್ನು ಬುಡಸಮೇತ ನಿರ್ಮೂಲನ ಮಾಡುವುದಲ್ಲ. ಅದು ಅಸಾಧ್ಯ. ಏಕೆಂದರೆ ಎಲ್ಲಾ ಸಮಯಗಳು ಪ್ರವಾಹತಃ ಕೊನೆಯಿಲ್ಲದಾಗಿವೆ.

**किन्त्वीशानुग्रहयोगिनां सतां पुंसां तन्निमित्तसंशयादिनिरासार्थम् ।**

ಹಾಗಾದರೆ ಪ್ರಪಂಚನವು ಈಶ್ವರನಾಗ್ರಹಪಾತ್ರರಾದ ಸಜ್ಜನರಿಗೆ ಇತರ ಸಮಯಗಳನ್ನು ನೋಡಿದಾಗ ಬರುವ ಸಂಶಯನಿವೃತ್ತಿಗಾಗಿ ಎಂದು ತಿಳಿಯಬೇಕು. (ಸಂಶಯಾದಿ ಎನ್ನುವಲ್ಲಿ ಆದಿಪದರಿಂದ ವಿಪರೀತಜ್ಞಾನ ಗ್ರಹಿಸಬೇಕು)

**विहितं चासन्मतनिराकरणं मुमुक्षोः "विद्यां चाविद्यां च" इत्यादि श्रुतिष्विति सार्थकोऽयं पादः ।**

ದುಷ್ಟಮತನಿರಾಕರಣೆಯು ಮೋಕ್ಷಾಭಿಲಾಷಿಗಳಿಗೆ ಉಪನಿಷತ್ತಿನಲ್ಲಿ ವಿಹಿತವಾಗಿದೆ. ಆದ್ದರಿಂದಲೂ ಈ ಪಾದ ಸಾರ್ಥಕ. ಈಶಾವಾಸ್ಯೋಪನಿಷತ್ತಿನಲ್ಲಿ 'ವಿದ್ಯಾಂ ಚಾವಿದ್ಯಾಂ ಚ' ಎಂಬುದಾಗಿ ಈ

ವಿಷಯ ಹೇಳಲ್ಪಟ್ಟಿದೆ. (ಮೋಕ್ಷವು ಎರಡು ಬಗೆ. ಇಷ್ಟಪ್ರಾಪ್ತಿ, ಅನಿಷ್ಟನಿವೃತ್ತಿ. ಯಥಾರ್ಥಜ್ಞಾನದಿಂದ ಇಷ್ಟಪ್ರಾಪ್ತಿಯಾದರೆ ಮಿಥ್ಯಾವಾದಿಗಳನ್ನು ನಿರಾಕರಿಸುವುದರಿಂದ ಅನಿಷ್ಟನಿವೃತ್ತಿಯಾಗುತ್ತದೆ. ಆದ್ದರಿಂದ ದುರ್ಮತಗಳ ನಿರಾಕರಣೆ ಮುಮುಕ್ಷುವಿಗೆ ಅತ್ಯಂತ ಆವಶ್ಯಕ, ಹಾಗಾಗಿ ಈ ಪಾದವು ಅತ್ಯಂತ ಸಾರ್ಥಕವಾಗಿದೆ)

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

''सर्वविरोधानाम्'' इत्यादिटीकोक्तपादार्थमाह – **युक्तीति** ।।

'ಸರ್ವವಿರೋಧಾನಾಂ' ಎಂಬುದಾಗಿ ಟೀಕಾದಲ್ಲಿ ಹೇಳಿರುವ ಪಾದಪ್ರಯೋಜನವನ್ನು ವಿವರಿಸುತ್ತಾರೆ 'ಯುಕ್ತಿ' ಎಂಬುದಾಗಿ.

**प्रकाशः –** पौर्वापर्यबीजं तु प्रागेव विवृतमिति भावेन सर्वविरोधानां युक्तिमूलत्वेनेत्याद्यंशस्तु नात्र विवृतः ।

ಪಾದಗಳ ಪೂರ್ವಾಪರೀಭಾವವನ್ನು ಮೊದಲೇ ವಿವರಿಸಿರುವುದರಿಂದ ಟೀಕಾದಲ್ಲಿರುವ 'ಸರ್ವವಿರೋಧಾನಾಂ ಯುಕ್ತಿಮೂಲತ್ವಾತ್' ಎಂಬ ಅಂಶವನ್ನು ಇಲ್ಲಿ ವಿವರಿಸಿಲ್ಲ.

**प्रकाशः –** ''नच वाच्यम्'' इत्यादि ''भाव इत्यन्त'' टीकां विवृण्वन् ''नन्वनारम्भणीय एवायं पादः'' इत्यारभ्य ''समन्वयस्योक्तत्वात्'' इत्यन्तं सुधोक्तं चोद्यमनूद्य तत्रोक्तसमाधानेन पादसार्थक्यमाह – **यद्यपीति** ।।

'ನ ಚ ವಾಚ್ಯಂ' ಎಂದು ಆರಂಭವಾಗಿ 'ಭಾವಃ' ಎಂಬುದರ ತನಕ ಟೀಕಾವಾಕ್ಯವನ್ನು ವಿವರಿಸುವವರಾಗಿ 'ನನ್ವನಾರಂಭಣೀಯ' ಎಂದು ಪ್ರಾರಂಭವಾಗಿ 'ಸಮನ್ವಯಸ್ಯೋಕ್ತತ್ವಾತ್' ಎಂಬುದರ ತನಕ ಇರುವ ವಾಕ್ಯಗಳಿಂದ ಸುಧಾದಲ್ಲಿ ಹೇಳಿರುವ ಕ್ಷುದ್ರಾಕ್ಷೇಪವನ್ನು ಅನುವಾದ ಮಾಡಿ ಅಲ್ಲಿ(ಸುಧಾ) ಹೇಳಿರುವ ಸಮಾಧಾನದಿಂದಲೇ ಈ ಪಾದದ ಪ್ರಯೋಜನವನ್ನು ಹೇಳುತ್ತಿದ್ದಾರೆ 'ಯದ್ಯಪಿ' ಎಂಬುದಾಗಿ.

**प्रकाशः – निर्दोषत्वमिति** ।। तथा च न मतविरोधादप्रामाण्यम् । समन्वयस्योक्तत्वान्न मतानां श्रुत्युपेतत्वेन प्राबल्यम् ।

'ನಿರ್ದೋಷತ್ವಂ' ಎಂಬ ಮೂಲಗ್ರಂಥದಲ್ಲಿ ವೇದಗಳು ನಿರ್ದುಷ್ಟ ಎಂದು ಸಮರ್ಥನೆ ಮಾಡಿರುವುದರಿಂದ ಮತವಿರೋಧ ಬಂದರೆ ವೇದಗಳಿಗೆ ಅಪ್ರಾಮಾಣ್ಯ ಬರುವುದಿಲ್ಲ ಎಂದರ್ಥ. ಇನ್ನು ಈ ಸಮಯಗಳು ಶ್ರುತಿಮೂಲಕವಾಗಿವೆ. ಆದ್ದರಿಂದ ಪ್ರಬಲವಾಗಿವೆ ಎಂಬ ವಾದವೂ ಸರಿಯಲ್ಲ. ಏಕೆಂದರೆ,

ಸಕಲಶ್ರುತಿಗಳಿಗೂ ಹಿಂದೆ ಬ್ರಹ್ಮನಲ್ಲಿ ಸಮನ್ವಯ ಹೇಳಿರುವುದರಿಂದ ಈ ಸಮಯಗಳು ಅದಕ್ಕೆ ವಿರೋಧಿಗಳಾದ್ದರಿಂದ ಶ್ರುತಿಮೂಲತ್ವ ಬರುವುದಿಲ್ಲ.

**प्रकाशः –** आप्तिमूलश्रुतित्वेन वा युक्त्युपेतत्वेन वा प्राबल्यं नास्ति । प्रागेव स्मृतीनामनाप्तिमूलत्वेन युक्तीनामाभासत्वेन निरासादिति न समयाविरोधायायं पाद आरब्धव्य इति शङ्काभिप्रायः ।।

ಆಪ್ತಿಮೂಲಕವಾದ ಶ್ರುತಿಯಿಂದ ಅಥವಾ ಯುಕ್ತಿಸಹಿತವಾದ್ದರಿಂದ ಯುಕ್ತಿಗಳಿಗೆ ಪ್ರಾಬಲ್ಯ ಸಿದ್ಧವಾಗುವುದಿಲ್ಲ. ಏಕೆಂದರೆ, ಈ ಮೊದಲೇ ಸ್ಮೃತಿಗಳಿಗೆ ಆಪ್ತಿಮೂಲತ್ವ ಇಲ್ಲದ್ದರಿಂದ ಯುಕ್ತಿಗಳೆಲ್ಲವೂ ದುಷ್ಟವಾಗಿವೆಯೆಂದು ಸಮರ್ಥನೆ ಮಾಡಿರುವುದರಿಂದ ನಿರಾಸ ಮಾಡಿದ್ದಾಗಿದೆ. ಆದ್ದರಿಂದ ಈ ಪಾದವು ಸಮಯವಿರೋಧಪರಿಹಾರಕ್ಕಾಗಿ ಹೊರಡುವ ಆವಶ್ಯಕತೆ ಇಲ್ಲ ಎಂಬುದು ಶಂಕೆಯ ಅಭಿಪ್ರಾಯ.

**प्रकाशः – अनादीति** ।। एतेन ''न ह्यनादिकाल'' इत्यादिटीकैतन्मूलेत्युक्तं भवति । अभियोगतः आग्रहतः ।।

ಅನಾದಿ ಮೊದಲಾದ ಗ್ರಂಥದಿಂದ ಟೀಕಾದಲ್ಲಿರುವ 'ನ ಹ್ಯನಾದಿಕಾಲ' ಇತ್ಯಾದಿ ವಾಕ್ಯವು 'ಅನಾದಿಕಾಲತಃ' ಎಂಬ ಅನುವ್ಯಾಖ್ಯಾನ ಮೂಲವಾಗಿದೆ ಎಂದು ಹೇಳಿದಂತಾಯಿತು. ಅಭಿಯೋಗ ಶಬ್ದಕ್ಕೆ ಆಗ್ರಹ ಎಂದರ್ಥ.

**प्रकाशः – विशेष्योक्त्येति** ।। एतेन ''अत्र विशेषतो निराकरणात्'' इति टीका विवृता ।

'ವಿಶೇಷ್ಯೋಕ್ತ್ಯಾ' ಎಂಬುದರಿಂದ 'ಅತ್ರ ವಿಶೇಷತೋ ನಿರಾಕರಣಾತ್' ಎಂಬ ಟೀಕಾವಾಕ್ಯವು ವಿವರಿಸಲ್ಪಟ್ಟಿದೆ.

**प्रकाशः –** नन्वेवंविधसमयानामुत्सादनासम्भवात्प्रपञ्चनं व्यर्थमित्यतः ''अधिकारिणो निश्शङ्का प्रवृत्तिर्भवति'' इति टीकाभिप्रायमाह **– प्रपञ्चनं चेति** ।।

ಆಕ್ಷೇಪ - ಪ್ರವಾಹತಃ ಅನಾದಿತ್ವ ಮೊದಲಾದ ವಿಶೇಷಣಗಳಿಂದ ಕೂಡಿದ ಈ ಸಮಯಗಳನ್ನು ನಿರ್ಮೂಲ ಮಾಡುವುದು ಅಸಂಭವ. ಆದ್ದರಿಂದ ಪ್ರಪಂಚನವು ವ್ಯರ್ಥ.

ಸಮಾಧಾನ - 'ಅಧಿಕಾರಿಣೋ ನಿಶ್ಶಂಕಾ ಪ್ರವೃತ್ತಿರ್ಭವತಿ' ಎಂಬ ಟೀಕಾದಲ್ಲಿ ಹೇಳಿರುವ ಅಭಿಪ್ರಾಯದಿಂದ ಉತ್ತರವನ್ನು ವಿವರಿಸುತ್ತಾರೆ (ಶುದ್ಧಬುದ್ಧಿಯುಳ್ಳ ಸಜ್ಜನರಿಗೆ ಈಶಾನುಗ್ರಹವಾಗಲು, ಅವರಿಗೆ ಉಂಟಾಗಿರುವ ಸಂದೇಹ ನಿವೃತ್ತಿಗಾಗಿ ಪ್ರಪಂಚನವು ಸಾರ್ಥಕವಾಗಿದೆ).

**प्रकाशः –** ''तथापि शुद्धबुद्धीनामीशानुग्रहयोगिनाम् । सुयुक्तयस्तमो हन्युः'' इत्याद्यनुव्याख्यानोक्तेरिति भावः ।

ಮೂಲದಲ್ಲಿ ಹೇಳಿರುವ ಪ್ರಪಂಚನ ಶಬ್ದದ ಅರ್ಥವು ಅನುವ್ಯಾಖ್ಯಾನದಲ್ಲಿ 'ತಥಾಪಿ ಶುದ್ಧಬುದ್ಧೀನಾಮೀಶಾನುಗ್ರಹಯೋಗಿನಾಮ್' ಎಂಬುದಾಗಿ ಹೇಳಿದೆ ಎಂದರ್ಥ.

**प्रकाशः** – परकीयदोषोत्कीर्तने कथं न दोष इत्यत आह – **विहितं चेति** ।। अविद्यां मिथ्याज्ञानिनिन्दाम् ।

''विद्यां चाविद्यां च यस्तद्वेदोभयं सह ।
अविद्यया मृत्युं तीर्त्वा विद्ययाऽमृतमश्नुत''

इत्यादिश्रुतिष्वित्यर्थः ।

ಪರಕೀಯ ದೋಷ ತೋರಿಸುವುದು ದೋಷವಲ್ಲವೇ ಎಂದರೆ ಅದಕ್ಕೆ ಉತ್ತರವನ್ನು 'ವಿಹಿತಂ ಚ' ಎನ್ನುವಲ್ಲಿ ಹೇಳಿದ್ದಾರೆ. 'ಅವಿದ್ಯಾ' ಎಂದರೆ ಮಿಥ್ಯಾಜ್ಞಾನಿಯ ನಿಂದೆ ಎಂದರ್ಥ. ಮೂಲದಲ್ಲಿ ಹೇಳಿರುವ ಶ್ರುತಿಯ ಪೂರ್ಣವಾಕ್ಯ ಹೀಗಿದೆ - ''ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ। ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ'' ಎಂಬುದಾಗಿ.

### ವಿರುದ್ಧ ಸಮಯಗಳು ಒಟ್ಟು ಎರಡು ವಿಧ

## तात्पर्यचन्द्रिका

**तत्र समया द्विविधाः । हैतुकाः पाषण्डाश्चेति ।**

ಸಮಯಗಳು ಎರಡು ವಿಧ. ಹೈತುಕ ಹಾಗೂ ಪಾಷಂಡ ಎಂಬುದಾಗಿ.

**उक्तं हि ''योगसांख्यकणादाक्षपादा वै हेतुवादिनः । पश्चीशशाक्तबुद्धाद्याः पाषण्डा इति कीर्तिताः'' इति ।**

ಸಮಯಗಳು ಎರಡು ವಿಧ ಎನ್ನುವುದನ್ನು ಈ ಪ್ರಮಾಣದಲ್ಲಿ ಹೇಳಿದ್ದಾರೆ - 'ಯೋಗ, ಸಾಂಖ್ಯ, ಕಣಾದ, ಅಕ್ಷಪಾದ, ಇವರು ಹೇತುವಾದಿಗಳು. ಇವರಿಂದ ಪ್ರವೃತ್ತವಾದ ಸಮಯ ಹೈತುಕ, ಪಶುಪತಿ, ಶಕ್ತಿಗಳನ್ನು ಜಗತ್ಕಾರಣ ಎನ್ನುವ ಪಾಶುಪತರು, ಶಾಕ್ತರು ಹಾಗೂ ಬೌದ್ಧರು ಪಾಷಂಡಿಗಳು'.

**यद्यपि**

**''वेदेन सह वादो यो वेदवाद इतीरितः ।
तर्केण वेदस्यान्यार्थकल्पनं तद्विदो विदुः''**

**इत्युक्तलक्षणा वेदवादिनोऽपि**

**''वेदवादरतो न स्यान्न पाषण्डी न हैतुकी ।
वेदवादरताः पार्थ नान्यदस्तीति वादिनः''**

**इत्यादौ पाषण्ड्यादिवदेव निषिद्धाः ।**

ಪ್ರಶ್ನೆ - ವೇದವಾದಿಗಳೂ ಪಾಷಂಡಿಗಳಂತೆಯೇ ನಿರಾಕರಣೆಗೆ ಯೋಗ್ಯರಾಗಿದ್ದಾರೆ. ವೇದವಾದಿಗಳು ಯಾರೆಂದರೆ ಅದನ್ನು

'ವೇದೇನ ಸಹ ವಾದೋ ಯೋ ವೇದವಾದ ಇತೀರಿತಃ ।

ತರ್ಕೇಣ ವೇದಸ್ಯಾನ್ಯಾರ್ಥಕಲ್ಪನಂ ತದ್ವಿದೋ ವಿದುಃ ॥''

ಎಂಬ ಪ್ರಮಾಣವು ವಿವರಿಸುತ್ತಿದೆ. ಯಾರು ವೇದದೊಂದಿಗೆ ವಾದಕ್ಕೆ ಇಳಿಯುತ್ತಾರೋ ಅವರು ವೇದವಾದಿಗಳು. ಇಂತಹ ವೇದವಾದಿಗಳು ತರ್ಕದಿಂದ ವೇದಕ್ಕೆ ಅನ್ಯಾರ್ಥವನ್ನು ಕಲ್ಪನೆ ಮಾಡುತ್ತಾರೆ. ಇಂತಹ ವೇದವಾದಿಗಳು ನಿರಾಕರಣೆಗೆ ಯೋಗ್ಯರಾಗಿದ್ದಾರೆ ಎಂಬುದನ್ನು

''ವೇದವಾದರತೋ ನ ಸ್ಯಾನ್ನ ಪಾಷಂಡೀ ನ ಹೈತುಕೀ''

ಎಂಬ ವಾಕ್ಯದಲ್ಲಿ ಹೇಳಿದ್ದಾರೆ. ವೇದವಾದಿಗಳು ಹೈತಕರೂ ಅಲ್ಲ ಪಾಷಂಡಿಗಳೂ ಅಲ್ಲ ಅವರು ಪೃಥಕ್ ನಿರಾಕಾರ್ಯರು ಎಂದರ್ಥ. ಮತ್ತು ಗೀತೆಯಲ್ಲಿ

''ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ''

ಎಂಬುದಾಗಿ ಅವರನ್ನು ಪಾಷಂಡಿಗಳಂತೆಯೇ ನಿರಾಕರಣೆ ಮಾಡಬೇಕು ಎಂದು ಹೇಳಿದ್ದಾರೆ. ಆದ್ದರಿಂದ ಇಲ್ಲಿ ಕೇವಲ ಹೈತುಕರನ್ನು, ಪಾಷಂಡಿಗಳನ್ನು ನಿರಾಕರಣೆ ಮಾಡಿದರೆ ವೇದವಾದಿಗಳನ್ನು ನಿರಾಕರಿಸಿದಂತಾಗುವುದಿಲ್ಲ. ಅವರ ನಿರಾಕರಣೆಗೆ ಇನ್ನೊಂದು ಅಧಿಕರಣ ಆರಂಭ ಮಾಡಬೇಕಾಗುತ್ತದೆ ಎಂದು ಅಭಿಪ್ರಾಯ.

**तथापि त आद्यपाद एव निरस्ता इति नेह निरस्याः । तदाह ''वेदवादिनां प्रथमपादे निराकृतत्वात्'' इति ।**

ಉತ್ತರ - ವೇದವಾದಿಗಳನ್ನು ಆದ್ಯಪಾದದಲ್ಲಿಯೇ ನಿರಾಕರಣೆ ಮಾಡಿದ್ದಾಗಿದೆ. ಹಾಗಾಗಿ ಇಲ್ಲಿ ಪುನಃ ನಿರಾಕರಣೆ ಮಾಡಿಲ್ಲ. ಈ ವಿಷಯವನ್ನೇ ಟೀಕಾದಲ್ಲಿ 'ವೇದವಾದಿನಾಂ ಪ್ರಥಮಪಾದೇ ನಿರಾಕೃತತ್ವಾತ್' ಎಂಬುದಾಗಿ ಹೇಳಿದ್ದಾರೆ.

(ಹೈತುಕರಿಗೂ, ವೇದವಾದಿಗಳಿಗೂ ಇರುವ ವ್ಯತ್ಯಾಸ ಏನೆಂದರೆ, ಹೈತುಕರಾದ ವೈಶೇಷಿಕ ನೈಯಾಯಿಕರು ನೇರವಾಗಿ ವೇದಗಳಿಗೆ ಅರ್ಥ ಮಾಡಲು ಹೋಗದೆ ಉದಾಸೀನರಾಗಿರುತ್ತಾರೆ. ಆದರೆ ವೇದವಾದಿಗಳು ನೇರವಾಗಿ ವೇದವಾಕ್ಯಗಳಿಗೆ ಅಪಾರ್ಥವನ್ನು ಹೇಳುತ್ತಾರೆ. ಪ್ರಾಭಾಕರರು, ಭಾಟ್ಟರು, ಅದ್ವೈತಿಗಳು ವೇದವಾದಿಗಳಲ್ಲಿ ಸೇರುತ್ತಾರೆ)

**तत्र हैतुका हेतुभिः प्रबला इत्यादौ निराकार्याः ।**

ಹೈತುಕರು ಹಾಗೂ ಪಾಷಂಡಿಗಳಲ್ಲಿ ಹೈತುಕರು ಮೊದಲು ನಿರಾಕರಣೆ ಮಾಡಲು ಯೋಗ್ಯರು. ಏಕೆಂದರೆ, ಅವರು ಬಲವಾದ ಹೇತುಗಳನ್ನು ಹೇಳುವುದರಿಂದ ಪ್ರಬಲರಾಗಿದ್ದಾರೆ. (ಮಹಾಮಲ್ಲ ಭಂಗನ್ಯಾಯ ಅನುಸರಿಸಿ ಎಂದು ತಿಳಿಯಬೇಕು)

**हैतुकेष्वपि सेश्वरेभ्यो वैशेषिकादिभ्यः प्रायेण निरीश्वराः सांख्यादयो वैदिकस्येश्वरवादस्यातिविरोधिनः ।**

ಹೈತುಕರಲ್ಲಿಯೂ ಎರಡು ವಿಧ. ಸೇಶ್ವರ, ನಿರೀಶ್ವರ ಎಂಬುದಾಗಿ. ಸೇಶ್ವರವಾದಿಗಳು ವೈಶೇಷಿಕ, ನೈಯಾಯಿಕ ಮೊದಲಾದವರು. ನಿರೀಶ್ವರವಾದಿಗಳು ಸಾಂಖ್ಯ, ಚಾರ್ವಾಕ ಮೊದಲಾದವರು. ಇವರಲ್ಲಿ ಸೇಶ್ವರವಾದಿಗಳಿಗಿಂತಲೂ ನಿರೀಶ್ವರವಾದಿಗಳು ಮೊದಲು ನಿರಾಕರಣೆಗೆ ಯೋಗ್ಯರು. ಏಕೆಂದರೆ. ವೈದಿಕರಾದ ಈಶ್ವರವಾದಿಗಳಾದ ನಮಗೆ ನಿರೀಶ್ವರವಾದಿಗಳು ಅತ್ಯಂತ ವಿರೋಧಿಗಳು. ಹಾಗಾಗಿ ಮೊದಲು ನಿರೀಶ್ವರವಾದಿಗಳ ನಿರಾಕರಣೆ ಮಾಡುತ್ತಾರೆ.

**यद्यपि चार्वाकोऽत्यन्तविरोधी । तथापि तन्मतस्यातितुच्छत्वेन ''इतरेषां चानुपलब्धेः'' इति न्यायसञ्चाराविषयत्वेन च प्रथमं निरासानर्हत्वादादौ सांख्या निराकार्याः ।**

ಪ್ರಶ್ನೆ - ನಿರೀಶ್ವರ ವಾದಿಗಳ ನಿರಾಕರಣೆ ಮೊದಲು ಮಾಡಬೇಕು ಎಂಬುದು ಸಿದ್ಧವಾಯಿತು. ಅವರಲ್ಲಿಯೂ ಚಾರ್ವಾಕನು ಎಲ್ಲರಿಗಿಂತಲೂ ಹೆಚ್ಚು ವಿರೋಧಿಯಾದ್ದರಿಂದ ಮೊದಲು ಚಾರ್ವಾಕಮತ ನಿರಾಕರಣೆ ಮಾಡಬೇಕಾಗಿತ್ತು. ಆದರೆ, ಸೂತ್ರಕಾರರು ಮೊದಲು ಸಾಂಖ್ಯಮತವನ್ನೇಕೆ ನಿರಾಕರಣೆ ಮಾಡಿದ್ದಾರೆ?

ಉತ್ತರ - ನಿಜ, ಆದರೂ ಕೂಡ ಚಾರ್ವಾಕನು ಅತಿತುಚ್ಛನಾಗಿರುವನು ಎಂದರೆ ಅವನು ಪ್ರಥಮ ನಿರಾಕರಣೆಗೂ ಅಯೋಗ್ಯ ಎಂಬ ದೃಷ್ಟಿಯಿಂದ ಮೊದಲು ಚಾರ್ವಾಕನ ನಿರಾಕರಣೆ ಮಾಡಿಲ್ಲ ಎಂದು ಒಂದು ಉತ್ತರ. ಇನ್ನೊಂದು ಉತ್ತರ ಏನೆಂದರೆ ಈ ಪಾದದಲ್ಲಿ 'ಇತರೇಷಾಂ ಚಾನುಪಲಬ್ಧೇಃ' ಎನ್ನುವ ಸೂತ್ರದಲ್ಲಿ ವಿಷಯದ ವಿಸ್ತಾರ ಮಾಡುತ್ತಾರೆ ಎಂದು ಹಿಂದೆ ಹೇಳಿಯಾಗಿದೆ. ಈ ಸೂತ್ರದಲ್ಲಿ ಯಾವ ನ್ಯಾಯವನ್ನು ಸಂಚಾರ ಮಾಡಿದ್ದಾರೋ (ಈ ಫಲಕ್ಕಾಗಿ ಈ ಕಾರ್ಯವನ್ನು ಮಾಡಬೇಕು ಎಂದು ಇತರರು ಹೇಳಿರುವುದು ಸರಿಯಲ್ಲ ಆ ಕಾರ್ಯ ಮಾಡಿದರೂ ಫಲಪ್ರಾಪ್ತಿಯಾಗದಿರುವುದರಿಂದ) ಆ ನ್ಯಾಯಕ್ಕೆ ಚಾರ್ವಾಕನು ವಿಷಯವೇ ಆಗುವುದಿಲ್ಲ. ಏಕೆಂದರೆ ಅದೃಷ್ಟವನ್ನೇ ಒಪ್ಪದ ಚಾರ್ವಾಕನು ಫಲಕ್ಕಾಗಿ ಯಾವ ಕಾರ್ಯವನ್ನೂ ವಿಧಾನ ಮಾಡುವುದೇ ಇಲ್ಲ. ಹಾಗಾಗಿ ಚಾರ್ವಾಕನನ್ನು ಮೊದಲು ನಿರಾಕರಿಸದೆ ಸಾಂಖ್ಯಮತವನ್ನು ನಿರಾಕರಣೆ ಮಾಡಿದ್ದಾರೆ ಎಂದರ್ಥ.

**प्रकाशः —**

एतत्पादीयद्वादशाधिकरणपूर्वपक्षादेरत्राप्रपञ्चनाद्युगपदेव सर्वाधिकरणसङ्गतीर्विवरीतुकामः ''समया द्विविधाः'' इत्यादिटीकां सप्रमाणं विवृणोति — तत्रेति ।।

ಎರಡನೇ ಅಧ್ಯಾಯದ ಮೊದಲನೇ ಪಾದದಲ್ಲಿ ಹನ್ನೆರಡು ಅಧಿಕರಣಗಳಿವೆ. ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತಗಳನ್ನು ಚಂದ್ರಿಕಾದಲ್ಲಿ ವಿವರಿಸುವುದಿಲ್ಲ. ಆದ್ದರಿಂದ ಎಲ್ಲಾ ಅಧಿಕರಣಗಳು ಸಂಗತಿಯನ್ನು ಒಂದೇ ಸಾರಿ ವಿವರಣೆ ಮಾಡಲು ಬಯಸಿರುವ ಗ್ರಂಥಕಾರರು 'ಸಮಯಾ ದ್ವಿವಿಧಾಃ' ಎಂಬ ಟೀಕಾವಾಕ್ಯವನ್ನು ಪ್ರಮಾಣಸಹಿತವಾಗಿ ವಿವರಿಸುತ್ತಿದ್ದಾರೆ 'ತತ್ರ' ಎಂಬುದಾಗಿ.

**प्रकाशः – उक्तं हीति ।। एकादशस्कन्धेऽष्टादशाध्यायतात्पर्य इत्यर्थः ।**

'ಯೋಗಸಾಂಖ್ಯ.......' ಎಂಬ ಪ್ರಮಾಣವು ಭಾಗವತದ ಹನ್ನೊಂದನೇ ಸ್ಕಂದದ ಹದಿನೆಂಟನೆಯ ಅಧ್ಯಾಯದ ತಾತ್ಪರ್ಯದಲ್ಲಿ ಹೇಳಿದೆ ಎಂದರ್ಥ.

**प्रकाशः – टीकायां गीतातात्पर्योक्तनारदीयस्मृत्युक्तावप्यत्र स्मृतौ शाक्तस्याधिकस्याप्युक्तेस्तज्ज्ञापनायैतत् स्मृत्युक्तिः ।**

ಪ್ರಶ್ನೆ - ಗ್ರಂಥಕಾರರು 'ಯೋಗಸಾಂಖ್ಯ....' ಎಂಬ ಭಾಗವತತಾತ್ಪರ್ಯದಲ್ಲಿ ಆಚಾರ್ಯರು ಉದಾಹರಿಸುವ ಸ್ಮೃತಿಯನ್ನು ಪ್ರಮಾಣವಾಗಿ ಹೇಳಿದ್ದಾರೆ. ಆದರೆ, ಟೀಕಾಕಾರರು ಗೀತಾತಾತ್ಪರ್ಯದಲ್ಲಿ ಹೇಳಿರುವ ನಾರದೀಯ ಸ್ಮೃತಿಯನ್ನು ಉದಾಹರಿಸಿದ್ದಾರೆ. ಆದ್ದರಿಂದ ಟೀಕಾನುಸಾರಿಯಾದ ವ್ಯಾಖ್ಯಾನ ಆಗಲಿಲ್ಲವಲ್ಲ ?

ಉತ್ತರ - ಚಂದ್ರಿಕಾದಲ್ಲಿ ಈ ಸ್ಮೃತಿಯನ್ನು ಉದಾಹರಿಸಲು ಒಂದು ಕಾರಣವಿದೆ. ಅದೇನೆಂದರೆ ಈ ಸ್ಮೃತಿಯಲ್ಲಿ ಶಾಕ್ತರ ಗ್ರಹಣವಿದೆ. ಆದರೆ, ಟೀಕಾದಲ್ಲಿ ಹೇಳಿರುವ ಸ್ಮೃತಿಯಲ್ಲಿ ಶಾಕ್ತರ ಉಲ್ಲೇಖ ಇಲ್ಲ. ಹಾಗಾಗಿ ಶಾಕ್ತರೂ ಕೂಡ ಪಾಷಂಡಿಗಳು ಎಂದು ತಿಳಿಸುವುದಕ್ಕಾಗಿ ಬೇರೊಂದು ಸ್ಮೃತಿಯನ್ನು ಚಂದ್ರಿಕಾಕಾರರು ಹೇಳಿದ್ದಾರೆ.

**प्रकाशः – ननु कथं द्वैविध्यम् । ''वेदवादरताः पार्थ नान्यदस्तीति वादिनः'' इति गीतायां ''वेदवादरतो न स्यान्न पाषण्डी न हैतुकः'' इति भागवते च विधान्तरस्याप्युक्तेरित्यतः ''वेदवादिनाम्'' इत्यादिटीकां शङ्कापूर्वं विवृणोति – यद्यपीति ।।**

ಆಕ್ಷೇಪ - ಸಮಯಗಳು ಎರಡು ವಿಧ ಎಂದು ಹೇಳಿದಿರಿ. ಅದು ಸರಿಯಲ್ಲ. 'ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ' ಎಂಬ ಗೀತಾವಾಕ್ಯದಲ್ಲಿ ಹಾಗೂ 'ವೇದವಾದರತೋ ನ ಸ್ಯಾನ್ನ ಪಾಷಂಡೀ ನ ಹೈತುಕಃ' ಎಂಬ ಭಾಗವತವಾಕ್ಯದಲ್ಲಿಯೂ ಕೂಡ ಇವರಿಬ್ಬರಿಗಿಂತ ಅತಿರಿಕ್ತರಾದ ವೇದವಾದಿಗಳೆಂಬ ಮೂರನೆಯ ಪಂಗಡದವರು ಇದ್ದಾರೆ ಎಂದು ತಿಳಿಯುತ್ತಿದೆ.

ಸಮಾಧಾನ - ಇದಕ್ಕೆ ಉತ್ತರವನ್ನು 'ವೇದವಾದಿನಾಮ್' ಎಂಬ ಟೀಕೆಯಲ್ಲಿ ಹೇಳಿದ್ದಾರೆ. ಅದನ್ನು ಶಂಕಾಪೂರ್ವಕವಾಗಿ ವಿವರಿಸುತ್ತಾರೆ 'ಯದ್ಯಪಿ' ಎಂಬುದಾಗಿ. ವೇದವಾದಿಗಳ ನಿರಾಕರಣೆ ಮಾಡಿಯಾಗಿದೆ ಆದ್ದರಿಂದ ಪುನಃ ಮಾಡುವುದಿಲ್ಲ ಎಂದು ಅಭಿಪ್ರಾಯ.

**प्रकाशः – इत्युक्तेति ।। एकादशस्कन्धतात्पर्योदाहृतवचनोक्तलक्षणा इत्यर्थः ।**

ವೇದವಾದಿಗಳ ಲಕ್ಷಣವನ್ನು ಹನ್ನೊಂದನೇ ಸ್ಕಂಧದ ಭಾಗವತತಾತ್ಪರ್ಯದಲ್ಲಿ ಹೇಳಿದ್ದಾರೆ. ಅಲ್ಲಿ ಹೇಳಿರುವ ಲಕ್ಷಣವುಳ್ಳವರು ಎಂದರ್ಥ.

**प्रकाशः – तथा च सिद्धान्तिनामपि वेदवादित्वात्कथं तन्निरास इति प्रत्युक्तम् ।।**

ಪ್ರಶ್ನೆ - ವೇದವಾದಿಗಳನ್ನು ನಿರಾಕರಣೆ ಮಾಡಿಯಾಗಿದೆ ಎಂದು ಹೇಳಿದಿರಿ. ಇದು ಸರಿಯಲ್ಲ. ಏಕೆಂದರೆ ಅವರು ನಿರಾಕರಣೆಗೆ ಯೋಗ್ಯರೇ ಅಲ್ಲ. ಏಕೆಂದರೆ ಸಿದ್ಧಾಂತಿಗಳಾದ ನೀವೂ ಕೂಡ ವೇದವಾದಿಗಳೇ ಆಗಿದ್ದೀರಿ.

ಉತ್ತರ - ವೇದವಾದಿಗಳು ಎಂದರೆ ವೇದದ ವಿರುದ್ಧವಾಗಿ ವಾದಕ್ಕೆ ಇಳಿಯುವವರು. ಅಂದರೆ, ಕುತರ್ಕಗಳಿಂದ ವೇದಕ್ಕೆ ಅಪಾರ್ಥ ಮಾಡುವವರು ಎಂದರ್ಥ. ಸಿದ್ಧಾಂತಿಗಳಾದ ನಾವು ಇಂತಹ ವೇದವಾದರು ಆಗುವುದಿಲ್ಲ. ಹಾಗಾಗಿ ಮೇಲಿನ ಆಕ್ಷೇಪಕ್ಕೆ ಅವಕಾಶವಿಲ್ಲ.

**प्रकाशः – तदाहेति** ।। टीकाकृदित्यर्थः । ततः किमित्यतः ''तत्र पाषण्डेभ्यो हैतुकाः प्रबलाः'' इत्यादिटीकां व्यनक्ति – **तत्रेति** ।। आदौ पूर्वषट्के ।

'ವೇದವಾದಿನಾಂ' ಎಂಬ ಮಾತನ್ನು ಟೀಕಾಕಾರರು ಹೇಳಿದ್ದಾರೆ ಎಂದರ್ಥ. ಸಮಯ ವಿಭಾಗವನ್ನು ಹೇಳಿದ್ದರಿಂದ ಏನು ಪ್ರಯೋಜನ ಎಂದರೆ ''ತತ್ರ ಪಾಷಂಡೇಭ್ಯೋ ಹೈತುಕಾಃ ಪ್ರಬಲಾಃ' ಎಂಬ ಟೀಕಾವಾಕ್ಯವನ್ನು ವಿವರಿಸುವುದೇ ಉದ್ದೇಶ ಎಂದು ಆ ವಾಕ್ಯವನ್ನು ವಿವರಿಸುತ್ತಾರೆ. 'ಆದೌ ಪೂರ್ವಷಟ್ಕೇ - ಆದೌ ಎಂಬುದಕ್ಕೆ ಪೂರ್ವಷಟ್ಕದಲ್ಲಿ ಎಂದರ್ಥ. ಈ ಪಾದದಲ್ಲಿ ಒಟ್ಟು ಹನ್ನೆರಡು ಅಧಿಕರಣಗಳು. ಅದರಲ್ಲಿ ಆರು ಆರು ಎಂದು ಎರಡು ಗುಂಪು. ಮೊದಲ ಆರು ಅಧಿಕರಣಗಳನ್ನು ಪೂರ್ವಷಟ್ಕ ಎಂದು ಕರೆದಿದ್ದಾರೆ. ಇಲ್ಲಿ ಹೈತುಕರ ನಿರಾಕರಣೆ. ಉತ್ತರಷಟ್ಕದಲ್ಲಿ ಪಾಷಂಡಿಗಳ ನಿರಾಕರಣೆ ಎಂದರ್ಥ.

**प्रकाशः** – ''तेषु च'' इत्यादिटीकार्थमाह – **हैतुकेष्वपीति** ।। ''अत्र चार्वाक'' इत्यादिटीकार्थमाह – **यद्यपीति** ।। **इति न्यायेति** ।। फलविसंवादिसाधनोपदेष्टृत्वाद-प्रामाण्यमागमस्येत्येवंरूपन्यायेत्यर्थः । तेन प्रत्यक्षमात्रप्रामाण्योपगमेनेष्टापादनादिति भावः ।

'ತೇಷು ಚ' ಎಂಬ ಟೀಕಾವಾಕ್ಯದ ಅರ್ಥವನ್ನು ಹೈತುಕೇಷು ಎಂಬುದರಿಂದ ಹೇಳುತ್ತಿದ್ದಾರೆ. 'ಅತ್ರ ಚಾರ್ವಾಕ' ಎಂಬ ಟೀಕಾವಾಕ್ಯವನ್ನು ಯದ್ಯಪಿ ಎಂಬ ಗ್ರಂಥದಿಂದ ವಿವರಿಸುತ್ತಿದ್ದಾರೆ. ಚಾರ್ವಾಕನು 'ಇತರೇಷಾಂ ಚಾನುಪಲಬ್ಧೇಃ' ಎಂಬಲ್ಲಿನ ನ್ಯಾಯಕ್ಕೆ ವಿಷಯನಾಗುವುದಿಲ್ಲ ಎಂದು ಚಂದ್ರಿಕಾದಲ್ಲಿ ಹೇಳಿದೆ. ಆ ನ್ಯಾಯ ಯಾವುದು ಎಂದರೆ, ಅದಕ್ಕೆ ಹೇಳುತ್ತಾರೆ, 'ಇಂತಹ ಫಲಕ್ಕಾಗಿ ಇಂತಹ ಸಾಧನಗಳನ್ನು ಹೇಳಿದಾಗ ಆ ಸಾಧನಗಳ ಅನುಷ್ಠಾನ ಮಾಡಿದಾಗಲೂ ಫಲ ಪ್ರಾಪ್ತಿಯಾಗದಿದ್ದರೆ ಆಗ ಆ ಸಾಧನಗಳು ಫಲವಿಸಂವಾದಿಯಾದ ಸಾಧನಗಳು. ಅಂತಹ ಫಲವಿಸಂವಾದಿಯಾದ ಸಾಧನಗಳನ್ನು ಸಾಂಖ್ಯರೇ ಮೊದಲಾದವರು ಉಪದೇಶಿಸುತ್ತಾರೆ. ಇಂತಹ ಫಲವಿಸಂವಾದಿಯಾದ ಉಪದೇಶವಿರುವುದರಿಂದ ಅವರ ಸಮಯಗಳು ಅಪ್ರಮಾಣ ಹಾಗೂ ಅದನ್ನು ಉಪದೇಶ ಮಾಡುವವರು ಅನಾಪ್ತರು' ಎಂಬುದೇ ಆ ನ್ಯಾಯ. ಈ ನ್ಯಾಯಕ್ಕೆ ಚಾರ್ವಾಕನು ವಿಷಯನಲ್ಲ ಎಂದರ್ಥ. ಏಕೆಂದರೆ ಇತರ ಸಮಯರವರು ಅದೃಷ್ಟವನ್ನು ಒಪ್ಪಿ ಅದಕ್ಕಾಗಿ ಸಾಧನಗಳನ್ನು ಹೇಳುತ್ತಾರೆ. ಚಾರ್ವಾಕನು ಅದೃಷ್ಟವನ್ನೇ ಒಪ್ಪುವುದಿಲ್ಲ. ಪ್ರತ್ಯಕ್ಷ ಮಾತ್ರ ಪ್ರಮಾಣ ಎನ್ನುತ್ತಾನೆ. ಹಾಗಾಗಿ ಚಾರ್ವಾಕನು ಯಾವುದೇ ಅದೃಷ್ಟಫಲವನ್ನು ಉದ್ದೇಶಿಸಿ ಸಾಧನಗಳ ಉಪದೇಶ ಮಾಡುವುದಿಲ್ಲ. ಅದೃಷ್ಟಫಲವಿಸಂವಾದವನ್ನು ಹೇಳಿದರೆ ಇಷ್ಟಾಪತ್ತಿ (ಅದು ನನಗೆ ಸಮ್ಮತ) ಎಂದೇ ಅವನು ಹೇಳುತ್ತಾನೆ.

**प्रकाशः** – यद्वा दृष्टफलसाधने फलविसंवाददृष्टान्तेनादृष्टफलसाधनेऽपि फलविसंवादानुमानात्तदुपदेष्टुरनाप्तत्वमित्येवंरूपन्यायेत्यर्थः । तेनादृष्टानभ्युपगमात्तत्रोक्तन्यायविस्मृतिरूपत्वादस्य पादस्येति भावः ।

ಇನ್ನೊಂದು ರೀತಿಯಲ್ಲಿ ಚಾರ್ವಾಕನು ಪ್ರಕೃತ ನಿರಾಕರಣೆಗೆ ವಿಷಯನಲ್ಲ ಎಂದು ಹೇಳುತ್ತಾರೆ. 'ಇತರೇಷಾಂ ಚಾನುಪಲಬ್ಧೇಃ' ಎಂಬಲ್ಲಿ ಹೇಳಿರುವ ನ್ಯಾಯ ಹೀಗೂ ಇದೆ. - ''ಸಾಂಖ್ಯಾದಿಗಳು ದೃಷ್ಟಫಲವನ್ನು ಉದ್ದೇಶಿಸಿ ಯಾವ ಸಾಧನಗಳನ್ನು ಹೇಳಿದ್ದಾರೋ ಆ ಸಾಧನಗಳಿಂದ ದೃಷ್ಟಫಲ ದೊರೆಯುತ್ತಿಲ್ಲ. ಆದ್ದರಿಂದ ಅಂತಹ ಸಾಂಖ್ಯಾದಿಗಳು ಅದೃಷ್ಟಫಲವನ್ನು ಉದ್ದೇಶಿಸಿ ಯಾವ ಸಾಧನಗಳನ್ನು ಹೇಳಿದ್ದಾರೋ ಅದೂ ಸಹ ಉಂಟಾಗುವುದಿಲ್ಲ ಎಂದು ಅನುಮಾನದಿಂದ ತಿಳಿಯಬಹುದು. ಹಾಗಾಗಿ ಇಂತಹ ಫಲವಿಸಂವಾದಿಯಾದ ಉಪದೇಶ ಮಾಡುವವರು ಆಪ್ತರಾಗಲು ಸಾಧ್ಯವಿಲ್ಲ'' ಎಂಬುದೇ ನ್ಯಾಯ. ಈ ನ್ಯಾಯಕ್ಕೆ ಚಾರ್ವಾಕನು ವಿಷಯನಲ್ಲ. ಏಕೆಂದರೆ, ಅವನು ಅದೃಷ್ಟವನ್ನು ಒಪ್ಪುವುದೇ ಇಲ್ಲ. 'ಇತರೇಷಾಂ ಚಾನುಪಲಬ್ಧೇಃ' ಅನ್ನುವಲ್ಲಿ ಯಾವ ನ್ಯಾಯ ಹೇಳಿದ್ದಾರೆ ಅವರ ವಿವರಣೆ ರೂಪವಾಗಿದೆ ಈ ಪಾದ, ಆದ್ದರಿಂದ ಇಲ್ಲಿ ಚಾರ್ವಾಕನಿಗೆ ಪ್ರವೇಶವಿಲ್ಲ.

### ಸಮಯಗಳ ನಿರಾಕರಣೆಯಲ್ಲೂ ತಾರತಮ್ಯ

## तात्पर्यचन्द्रिका

**सांख्यमतमपि केवलाचेतनकर्तृत्वचेतनसहिताचेतनकर्तृत्वाभ्यां द्वेधा ।**

ಸಾಂಖ್ಯಮತವೂ ಎರಡು ವಿಧ. ಅಚೇತನಕ್ಕೆ ಮಾತ್ರ ಕರ್ತೃತ್ವವನ್ನು ಒಪ್ಪುವವರು ಹಾಗೂ ಚೇತನ ಸಹಿತವಾದ ಅಚೇತನಕ್ಕೆ ಕರ್ತೃತ್ವವನ್ನು ಒಪ್ಪುವವರು ಎಂಬುದಾಗಿ.

**इह च कर्तृत्वं नाम स्वत एव प्रवृत्तिमत्त्वम् ।**

ಪ್ರಶ್ನೆ - ಕೇವಲ ಅಚೇತನಕ್ಕೆ ಕರ್ತೃತ್ವ ಹೇಗೆ ಕೂಡುತ್ತದೆ. ಏಕೆಂದರೆ ಜ್ಞಾನ, ಇಚ್ಛಾ ಪ್ರಯತ್ನವುಳ್ಳದ್ದು ಕರ್ತೃ ಎಂಬುದಾಗಿ ಲೋಕದಲ್ಲಿ ಪ್ರಸಿದ್ಧಿಯಾಗಿದೆ ಅಲ್ಲವೇ?

ಉತ್ತರ - ಈ ಮತದ ಪ್ರಕಾರ ಕರ್ತೃತ್ವ ಎಂದರೆ ಸ್ವತಃ ಪ್ರವೃತ್ತಿಯುಳ್ಳದ್ದು ಎಂಬುದಾಗಿ ಅಷ್ಟೇ ತಿಳಿಯಬೇಕು. (ಇನ್ನೊಂದರ ಅಪೇಕ್ಷೆ ಇಲ್ಲದೇ ಪ್ರವೃತ್ತಿವುಳ್ಳದ್ದು ಕರ್ತೃ ಎಂದರ್ಥ. ಅದು ಜಡಕ್ಕೂ ಹೇಳಬಹುದು)

**तत्राद्यं वैदिकस्य स्वतन्त्रचेतनकर्तृत्वस्य चेतनरूपविशेष्यस्यैवानङ्गीकारेणात्यन्तविरोधीत्याद्याधिकरणे तन्निरासः ।**

ಸಾಂಖ್ಯಮತ ಎರಡುವಿಧ ಎಂದು ಹೇಳಿಯಾಯಿತು. ಅವೆರಡರಲ್ಲಿ ಮೊದಲನೆಯದಾದ ಅಚೇತನಕರ್ತೃತ್ವವನ್ನು ಮೊದಲು ನಿರಾಕರಣೆ ಮಾಡುತ್ತಾರೆ. ಏಕೆಂದರೆ ವೈದಿಕಮತಕ್ಕೆ ಈ ಮತವು ಅತ್ಯಂತ ವಿರೋಧಿ. ವೈದಿಕರಾದ ನಾವು ಸ್ವತಂತ್ರನಾದ ಚೇತನಕ್ಕೆ ಕರ್ತೃತ್ವವನ್ನು ಅಂಗೀಕರಿಸುತ್ತೇವೆ.

ಆದರೆ ಅಚೇತನಕರ್ತೃತ್ವವಾದಿಯಾದ ಸಾಂಖ್ಯನು ಚೇತನವನ್ನೇ ಒಪ್ಪುವುದಿಲ್ಲ. ಹೀಗಾಗಿ ಅತ್ಯಂತ ವಿರೋಧಿಯಾದ್ದರಿಂದ ಅವನ ನಿರಾಕರಣೆ ಮೊದಲನೇ ಅಧಿಕರಣದಲ್ಲಿ ಮಾಡಲಾಗಿದೆ.

**द्वितीयमपि सांख्यमतं गुणभूतेश्वरानुगृहीतप्रधानकर्तृत्वेन जीवसहित-प्रधानकर्तृत्वेन चेति द्वेधा ।**

ಸಾಂಖ್ಯರಲ್ಲಿ ಚೇತನಸಹಿತವಾದ ಅಚೇತನಕ್ಕೆ ಕರ್ತೃತ್ವವನ್ನು ಹೇಳುವ ಎರಡನೇ ಪ್ರಕಾರದವರಲ್ಲಿಯೂ ಪುನಃ ಎರಡು ವಿಧ. ಅಪ್ರಧಾನನಾದ ಈಶ್ವರನಿಂದ ಅನುಗ್ರಹಿಸಲ್ಪಟ್ಟ ಪ್ರಧಾನ(ಪ್ರಕೃತಿ)ಕ್ಕೆ ಕರ್ತೃತ್ವ ಹೇಳುವವರು ಹಾಗೂ ಜೀವಸಹಿತವಾದ ಪ್ರಧಾನಕ್ಕೆ ಕರ್ತೃತ್ವ ಹೇಳುವವರು ಎಂಬುದಾಗಿ.

**तत्र यद्यपि निरीश्वरं द्वितीयं सेश्वरादाद्यादतिविरोधि ।**

ಪ್ರಶ್ನೆ- ಈ ಎರಡು ವಿಧದವರಲ್ಲಿ ಎರಡನೆಯವರು ಅಂದರೆ ಜೀವಸಹಿತಪ್ರಧಾನಕ್ಕೆ ಕರ್ತೃತ್ವ ಹೇಳುವವರು ನಿರೀಶ್ವರರೇ ಆಗಿದ್ದಾರೆ. ಹಾಗಾಗಿ ವೈದಿಕಮತಕ್ಕೆ ಅತಿವಿರೋಧಿಗಳಾದ್ದರಿಂದ ಅವರ ನಿರಾಕರಣೆ ಮೊದಲು ಮಾಡಬೇಕು. ಆದರೆ ಹಾಗೆ ಮಾಡದೆ ಗುಣಭೂತ ಈಶ್ವರ ಅನುಗ್ರಹೀತವಾದ ಪ್ರಧಾನ ಕರ್ತೃತ್ವವಾದಿಗಳಾದ ಮೊದಲನೆಯವರ ನಿರಾಕರಣೆ ಮಾಡಿರುವುದು ಹೇಗೆ ಕೂಡುತ್ತದೆ?

**तथाप्याद्यस्य सेश्वरस्य ''न ऋते'' इत्यादिश्रुतेर्गुणभूतेश्वरविषयत्वसम्भवात् ''व्यतिरेकानवस्थितेः'' इति प्रथमाधिकरणोक्तदोषो नेत्याक्षेपेण प्रवृत्तेः द्वितीयाधिकरणे निरासः ।**

ಉತ್ತರ - ಮೊದಲನೇ ಅಧಿಕರಣದಲ್ಲಿ ಕೇವಲ ಅಚೇತನ ಕರ್ತೃತ್ವಮತವನ್ನು ನಿರಾಕರಿಸಲಾಗಿದೆ. ಈ ಅಧಿಕರಣದ 'ವ್ಯತಿರೇಕಾನವಸ್ಥಿತೇಃ' ಎಂಬ ಸೂತ್ರದಲ್ಲಿ 'ನ ಋತೇ ತ್ವತ್ಕ್ರಿಯತೇ ಕಿಂಚನಾರೇ' ಎಂಬ ಶ್ರುತಿಯು ಈಶ್ವರನನ್ನು ಬಿಟ್ಟು ಯಾವಪ್ರವೃತ್ತಿಯೂ ಆಗುವುದಿಲ್ಲ ಎಂದು ಹೇಳುತ್ತಿರುವುದರಿಂದ ಈ ಶ್ರುತಿಯ ವಿರೋಧ ಅಚೇತನಕರ್ತೃತ್ವಮತಕ್ಕೆ ಬರುತ್ತದೆ ಎಂಬುದಾಗಿ ದೋಷವನ್ನು ಹೇಳಿದ್ದಾರೆ. ಈ ದೋಷಪರಿಹಾರಕ್ಕಾಗಿ ಸಾಂಖ್ಯರು ಈ ಶ್ರುತಿಯು ಗುಣಭೂತ ಈಶ್ವರ ವಿಷಯವಾಗಿದೆ. ಹಾಗಾಗಿ ನಮಗೆ (ಗುಣಭೂತ ಈಶ್ವರ ಅನುಗ್ರಹೀತ ಅಚೇತನಕರ್ತೃತ್ವವಾದಿಗಳಿಗೆ) ಪ್ರಥಮಾಧಿಕರಣದಲ್ಲಿ ಹೇಳಿದ ದೋಷ ಬರುವುದಿಲ್ಲ ಎಂದು ಹೇಳಿದರೆ ಅವರನ್ನು ನಿರಾಕರಣೆ ಮಾಡುವುದಕ್ಕೆ ದ್ವಿತೀಯಾಧಿ-ಕರಣ ಹೊರಟಿದೆ. ಹಾಗಾಗಿ ಸಂಗತಿ ಇರುವುದರಿಂದ ಹಿಂದೆ ಹೇಳಿದ ಆಕ್ಷೇಪಕ್ಕೆ ಅವಕಾಶವಿಲ್ಲ.

**इदं च मतं सेश्वरमपि सांख्यमतत्वादीश्वरस्य स्वातन्त्र्यास्वीकारेण फलतो निरीश्वरवादान्तर्भावाच्च न सेश्वरवैशेषिकादि परीक्षायां निरस्तम् ।**

ಎರಡನೆಯ ಅಧಿಕರಣದಲ್ಲೇ ಗುಣಭೂತನಾದ ಈಶ್ವರನಿಂದ ಅನುಗ್ರಹೀತಅಚೇನತಕರ್ತೃತ್ವ ಮತವನ್ನು ನಿರಾಕರಿಸುವುದಕ್ಕೆ ಇನ್ನೊಂದು ಕಾರಣವೂ ಇದೆ. ಈ ಮತವು ಮೇಲ್ನೋಟಕ್ಕೆ ಸೇಶ್ವರಮತ

ಎಂದು ಕಂಡರೂ ವಾಸ್ತವಿಕವಾಗಿ ನಿರೀಶ್ವರಮತವೇ ಆಗಿದೆ. ಸಾಂಖ್ಯರು ಎಲ್ಲಿಯೂ ಸ್ವತಂತ್ರನಾದ ಈಶ್ವರನನ್ನು ಒಪ್ಪುವುದೇ ಇಲ್ಲ. ಹಾಗಾಗಿ ಗುಣಭೂತ ಈಶ್ವರನನ್ನು ಒಪ್ಪುವ ಸಾಂಖ್ಯಮತವೂ ಸೇಶ್ವರ ಮತವೇ ಆಗಿದೆ. ಆದ್ದರಿಂದ ಈ ಮತವನ್ನು ಸೇಶ್ವರವಾದಿಗಳಾದ ವೈಶೇಷಿಕರ ನಿರಾಕರಣೆ ಮಾಡುವ ಸ್ಥಳದಲ್ಲೇ ಮಾಡಬೇಕಾಗಿತ್ತು ? ಎಂಬ ಪ್ರಶ್ನೆಗೆ ಅವಕಾಶವಿಲ್ಲ, ವಾಸ್ತವದಲ್ಲಿ ಈ ಸಾಂಖ್ಯಮತವು ನಿರೀಶ್ವರಮತವೇ ಆಗಿದೆ. ಆದ್ದರಿಂದ ಅಚೇತನಕರ್ತೃತ್ವಮತ ನಿರಾಕರಣೆಯ ನಂತರ ಇವರ ನಿರಾಕರಣೆ ಸಂಗತವಾಗಿದೆ.

**तृतीये मा भूत्केवलमीश्वरगुणकं वा जडं कर्तृ । तथापीश्वरो न कर्ता । सदेहस्यैव चेतनस्य कर्तृत्वात् । ईश्वरस्य चादेहत्वात् ।**

ಮೂರನೆಯ ಅಧಿಕರಣದಲ್ಲಿ ಚಾರ್ವಾಕಮತವನ್ನು ನಿರಾಕರಣೆ ಮಾಡುತ್ತಾರೆ. ಅದಕ್ಕೆ ಸಂಗತಿಯನ್ನು ಹೇಳುತ್ತಿದ್ದಾರೆ. ಮೊದಲ ಎರಡು ಅಧಿಕರಣಗಳಲ್ಲಿ ಕೇವಲ ಅಚೇತನಕ್ಕೆ ಮತ್ತು ಈಶ್ವರಾನುಗ್ರಹೀತವಾದ ಅಜೇತನಕ್ಕೆ ಕರ್ತೃತ್ವ ಕೊಡುವುದಿಲ್ಲ ಎಂದು ಹೇಳಿದ್ದೀರಿ. ಆದರೂ ಕೂಡ ಈಶ್ವರನಿಗೆ ಕರ್ತೃತ್ವ ಕೊಡುವುದಿಲ್ಲ. ಏಕೆಂದರೆ ಲೋಕದಲ್ಲಿ ದೇಹವುಳ್ಳವನೇ ಕರ್ತೃ ಎಂಬುದಾಗಿ ಅನುಭವ ಇದೆ. ಈಶ್ವರನಿಗಾದರೋ ದೇಹವೇ ಇಲ್ಲ. ಆದ್ದರಿಂದ ಈಶ್ವರನಿಗೆ ಕರ್ತೃತ್ವ ಕೊಡುವುದಿಲ್ಲ ಎಂದು ಚಾರ್ವಾಕ ಆಕ್ಷೇಪ ಎತ್ತುತ್ತಾನೆ. ಹೀಗೆ ಚಾರ್ವಾಕನ ಪ್ರಸಕ್ತಿ ಬಂದಿದೆ.

**श्रुत्यनुमानाभ्यां केवलस्येश्वरगुणस्य वा जडस्य कर्तृत्वनिरासोऽप्ययुक्तः ।**

ಚಾರ್ವಾಕ ಇನ್ನೊಂದು ಆಕ್ಷೇಪವನ್ನು ಮಾಡುತ್ತಾನೆ. ಅದೇನೆಂದರೆ, ಮೊದಲೆರಡು ಅಧಿಕರಣಗಳಲ್ಲಿ ನೀವು ಶ್ರುತಿ (ನ ಋತೇ ತ್ವತ್ಕ್ರಿಯತೇ) ಮತ್ತು ಅನುಮಾನ(ಸ್ವತಃ ಪ್ರವೃತ್ತ್ಯನುಪಪತ್ತಿಯಿಂದ)ದಿಂದ ಸಾಂಖ್ಯರ ನಿರಾಕರಣೆಯನ್ನು ಮಾಡಿದ್ದೀರಿ. ಇದು ಸರಿಯಲ್ಲ.

**तयोरप्रमाणत्वात्**

'ತಯೋರಪ್ರಮಾಣಾತ್ವಾ..

ಏಕೆಂದರೆ ಈ ಶ್ರುತಿ ಮತ್ತು ಅನುಮಾನ ಎರಡೂ ಪ್ರಮಾಣವೇ ಆಗಿಲ್ಲ. ಪ್ರತ್ಯಕ್ಷ ಒಂದೇ ಪ್ರಮಾಣ.

**इति द्वितीयाक्षेपेण मध्य उत्थितस्य तथा वस्तुतो चेतनस्य देहस्यैव कर्तृत्वांगीकारेण सांख्यमतसन्निकृष्टस्य**

ಈ ಎರಡು ಆಕ್ಷೇಪಗಳನ್ನು ಮಾಡಿದಾಗ ಮಧ್ಯದಲ್ಲಿ ಎದ್ದು ನಿಂತ ಚಾರ್ವಾಕನ ನಿರಾಕರಣೆ ಮೂರನೇ ಅಧಿಕರಣದಲ್ಲಿ ಮಾಡಿರುವುದು ಸಂಗತವಾಗಿದೆ.

ಚಾರ್ವಾಕನ ನಿರಾಕರಣೆ ಮೂರನೆಯ ಅಧಿಕರಣದಲ್ಲಿ ಮಾಡುವುದಕ್ಕೆ ಇನ್ನೂ ಒಂದು ಕಾರಣ ಏನೆಂದರೆ ಚಾರ್ವಾಕಮತವು ಸಾಂಖ್ಯಮತಕ್ಕೆ ಅತ್ಯಂತ ಸಮೀಪದಲ್ಲಿದೆ. ಏಕೆಂದರೆ ಸಾಂಖ್ಯರು ಹೇಗೆ

ಅಚೇತನಕ್ಕೆ ಕರ್ತೃತ್ವವನ್ನು ಹೇಳುತ್ತಾರೋ ಹಾಗೇ ಚಾರ್ವಾಕನೂ ಕೂಡ ಅಚೇತನವಾದ ದೇಹಕ್ಕೇ ಕರ್ತೃತ್ವವನ್ನು ಹೇಳುತ್ತಾನೆ. ಆದ್ದರಿಂದ ಸಾಂಖ್ಯಮತ ನಿರಾಕರಣೆಯ ನಂತರ ಚಾರ್ವಾಕನ ನಿರಾಕರಣೆ ಸೂಕ್ತವಾಗಿದೆ. (ಚಂದ್ರಿಕಾದಲ್ಲಿ 'ವಸ್ತುತಃ ಅಚೇತನಸ್ಯ' ಎಂದು 'ವಸ್ತುತಃ' ಎಂಬ ವಿಶೇಷಣ ಕೊಟ್ಟಿದ್ದಾರೆ. ಏಕೆಂದರೆ, ಚಾರ್ವಾಕನು ದೇಹವೇ ಜೀವ ಎನ್ನುತ್ತಾನೆ, ಹಾಗಾಗಿ ಅಚೇತನವಾದ ದೇಹಕ್ಕೆ ಕರ್ತೃತ್ವ ಹೇಳುವುದಿಲ್ಲವಲ್ಲ ? ಎಂದರೆ ಅವನು ಹಾಗೆ ದೇಹಾತ್ಮರಿಗೆ ಐಕ್ಯ ಹೇಳಿದರೂ ವಸ್ತುಸ್ಥಿತಿ ಏನೆಂದರೆ ದೇಹವೇ, ಜೀವನೇ ಬೇರೆ, ದೇಹವು ಅಚೇತನವೇ ಆಗಿದೆ ಎಂದು ತಿಳಿಸಲು)

**तथा उत्तरसूत्रवक्ष्यमाणपुरुषाश्मदृष्टान्तनिर्वाहक निरासविषयस्य च चार्वाकस्य निरासः ।**

ಚಾರ್ವಾಕನ ನಿರಾಕರಣೆಯನ್ನು ಮೂರನೆಯ ಅಧಿಕರಣದಲ್ಲೇ ಮಾಡಲು ಮತ್ತೊಂದು ಕಾರಣ ಹೇಳುತ್ತಿದ್ದಾರೆ. ನಾಕನೆಯ ಅಧಿಕರಣದಲ್ಲಿ ಕೇವಲ ಜಡಕ್ಕೆ ಕರ್ತೃತ್ವ ಕೂಡದಿದ್ದರೂ ಪುರುಷ(ಜೀವ)ನಿಂದ ಅಧಿಷ್ಠಿತವಾದ (ಸಹಿತವಾದ) ಶರೀರಕ್ಕೆ ಕರ್ತೃತ್ವ ಹೇಳಬಹುದು ಎಂದು ಹೇಳಿ ಅದಕ್ಕೆ ಪುರುಷಾಷ್ಮ ದೃಷ್ಟಾಂತವನ್ನು ಕೊಡುತ್ತಾರೆ. ಕೇವಲ ಶರೀರವು ಕಲ್ಲನ್ನು ತರಲು ಸಮರ್ಥವಾಗುವುದಿಲ್ಲ. ಕೇವಲ ಜೀವನೂ ಕಲ್ಲನ್ನು ತರಲು ಸಮರ್ಥನಲ್ಲ. ಆದರೆ ಜೀವನಿಂದ ಸಹಿತವಾದ ಶರೀರವು ಕಲ್ಲನ್ನು ತರಲು ಶಕ್ತವಾಗುತ್ತದೆ. ಅದೇ ರೀತಿ ಕೇವಲ ದೇಹಕ್ಕೆ ಕರ್ತೃತ್ವ ಕೂಡದಿದ್ದರೂ ಜೀವನಿಂದ ಕೂಡಿದ ದೇಹಕ್ಕೆ ಕರ್ತೃತ್ವವನ್ನು ಹೇಳಬಹುದಲ್ಲವೇ ಎಂದು.

ಈ ದೃಷ್ಟಾಂತವನ್ನು ಹೇಳಬೇಕಾದರೆ ಮೊದಲು ಚಾರ್ವಾಕನ ನಿರಾಕರಣೆ ಮಾಡಿದರೆ ಸುಲಭವಾಗುತ್ತದೆ. ಹೇಗೆಂದರೆ ದೃಷ್ಟಾಂತದಲ್ಲಿ ಕೇವಲ ಶರೀರವು ಕಲ್ಲನ್ನು ತರಲು ಸಮರ್ಥವಾಗುವುದಿಲ್ಲ ಎಂದು ಹೇಳಿದ್ದಾರೆ. ಈ ಅಂಶವು ಚಾರ್ವಾಕನ ನಿರಾಕರಣೆಯಿಂದ ಪ್ರಾಪ್ತವಾಗುತ್ತದೆ.

**अनन्तरं चार्वाकं प्रत्युक्तो विषयाद्यभावदोषो नास्माकमिति तृतीयाक्षेपेणोत्थितस्य जीवसहिताचेतनकर्तृत्त्वस्य निरासः ।**

ಚಾರ್ವಾಕಮತ ನಿರಾಕರಣೆ ಆದ ಮೇಲೆ ನಾಕನೆಯ ಅಧಿಕರಣದಲ್ಲಿ ಜೀವಸಹಿತ ಜಡಕರ್ತೃತ್ವವಾದವನ್ನು ನಿರಾಕರಿಸುತ್ತಾರೆ. ಅದಕ್ಕೆ ಸಂಗತಿಯನ್ನು ತೋರಿಸುತ್ತಿದ್ದಾರೆ. ಚಾರ್ವಾಕನನ್ನು ನಿರಾಕರಿಸುವಾಗ ನಾವು ಅವನಿಗೆ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧ ಇದಾವುದೂ ನಿನ್ನ ಶಾಸ್ತ್ರಕ್ಕೆ ಇಲ್ಲ ಎಂಬ ದೋಷವನ್ನು ಹೇಳಿದ್ದೇವೆ. ಈ ಸಂದರ್ಭದಲ್ಲಿ ಜೀವಸಹಿತಜಡಕರ್ತೃತ್ವವಾದಿಯಾದ ನೀವು ಚಾರ್ವಾಕನಿಗೆ ಹೇಳಿದ ವಿಷಯಾದ್ಯಭಾವದೋಷ ನನಗೆ ಬರುವುದಿಲ್ಲ, ಏಕೆಂದರೆ ನಾನು ಅತೀಂದ್ರಿಯವನ್ನು ಒಪ್ಪುತ್ತೇನೆ, ಶ್ರುತಿ ಮತ್ತು ಅನುಮಾನಗಳಿಗೆ ಪ್ರಾಮಾಣ್ಯವನ್ನೂ ಒಪ್ಪುತ್ತೇನೆ ಎಂಬುದಾಗಿ ಎದ್ದುನಿಂತರೆ ಆಗ ಅವರ ನಿರಾಕರಣೆ ಪ್ರಸ್ತುತವಾಗುತ್ತದೆ.

**जीवसहितस्य प्रधानस्य कर्तृत्त्वमपि जीवस्योपसर्जनत्वप्राधान्याभ್ಯां द्वेधा ।**

ಈ ಜೀವಸಹಿತಪ್ರಧಾನಕರ್ತೃತ್ವ ವಾದಿಗಳಲ್ಲೂ ಎರಡು ವಿಧ. ಜೀವನಿಗೆ ಪ್ರಾಧಾನ್ಯ ಹೇಳುವವರು ಹಾಗೂ ಅಪ್ರಾಧಾನ್ಯವನ್ನು ಹೇಳುವವರು ಎಂಬುದಾಗಿ. ಅಂದರೆ, ಜೀವೋಪಸರ್ಜನಪ್ರಧಾನಕರ್ತೃತ್ವ ವಾದಿಗಳು ಹಾಗೂ ಜೀವಪ್ರಧಾನಪ್ರಕೃತ್ಯುಪಸರ್ಜನಕರ್ತೃತ್ವ ವಾದಿಗಳು ಎಂಬುದಾಗಿ.

**तत्र चेतनस्याचेतनं प्रत्युपसर्जनत्वरूपस्याद्यस्यातिविरुद्धत्वाच्चतुर्थे तन्निरासः।**

ಈ ಎರಡು ಪ್ರಕಾರಗಳಲ್ಲಿ ಮೊದಲನೆಯವರಾದ ಜೀವಕ್ಕೆ ಅಪ್ರಾಧಾನ್ಯವನ್ನು ಹಾಗೂ ಪ್ರಕೃತಿಗೆ ಪ್ರಾಧಾನ್ಯವನ್ನು ಹೇಳುವವರು ವೈದಿಕರಿಗೆ ಅತ್ಯಂತ ವಿರೋಧಿಗಳಾದ್ದರಿಂದ ಅವರ ನಿರಾಕರಣೆ ನಾಕನೆಯ ಅಧಿಕರಣದಲ್ಲಿ ಮಾಡಲಾಗಿದೆ.

**पञ्चमे तु चतुर्थोक्तांगित्वानुपपत्त्युद्धारेणोत्थितस्य द्वितीयस्य निरासः ।**

ಐದನೇ ಅಧಿಕರಣದಲ್ಲಿ ಜೀವನಿಗೆ ಪ್ರಾಧಾನ್ಯ ಪ್ರಕೃತಿಗೆ ಅಪ್ರಾಧಾನ್ಯ ಹೇಳುವ ಮತದ ನಿರಾಕರಣೆ ಮಾಡಲಾಗಿದೆ. ಇದಕ್ಕೆ ಸಂಗತಿಯನ್ನು ಹೇಳುತ್ತಿದ್ದಾರೆ. ನಾಕನೆಯ ಅಧಿಕರಣದಲ್ಲಿ ಅಚೇತನಕ್ಕೆ ಪ್ರಾಧಾನ್ಯವನ್ನು ಒಪ್ಪಿದರೆ ಅದು ನಮ್ಮೆಲ್ಲರ ಅನುಭವಕ್ಕೆ ವಿರುದ್ಧ ಎಂದು ದೋಷ ಹೇಳಿದರೆ ಆಗ ಆ ದೋಷಪರಿಹಾರಕ್ಕಾಗಿ ನಾವು ಪ್ರಕೃತಿಗೆ ಪ್ರಾಧಾನ್ಯ ಹೇಳುವುದಿಲ್ಲ ಜೀವನಿಗೆ ಹೇಳುತ್ತೇವೆ ಎಂದು ಎರಡನೆಯ ಪ್ರಕಾರದವರು ಎದ್ದರೆ ಅವರ ನಿರಾಕರಣೆಯನ್ನು ಐದನೆಯ ಅಧಿಕರಣದಲ್ಲಿ ಮಾಡಿರುವುದು ಸಂಗತವಾಗುತ್ತದೆ.

**प्रकाशः –**

''स च द्विविध'' इत्यादि व्यनक्ति – **सांख्यमतमपीति ।।**

'ಸ ಚ ದ್ವಿವಿಧಃ' ಎಂಬುದನ್ನು ಸಾಂಖ್ಯಮತಮಪಿ ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ.

**प्रकाशः –** ईशकर्तृत्ववादविरोधस्फोरणायोक्तं केवलाचेतनकर्तृत्वेत्यादि ।

ಮೂಲದಲ್ಲಿ ಅಚೇತನಕರ್ತೃತ್ವ ಎಂದಷ್ಟೇ ಹೇಳದೆ 'ಕೇವಲ' ಶಬ್ದವನ್ನು ಸೇರಿಸಿದ್ದಾರೆ. ಇದರ ಪ್ರಯೋಜನ ಏನೆಂದರೆ ಕೇವಲಅಚೇತನಕರ್ತೃತ್ವ ಮತವು ಈಶ್ವರಕರ್ತೃತ್ವ ಮತಕ್ಕೆ ವಿರೋಧಿ ಎಂದು ಸೂಚಿಸುವುದೇ ಆಗಿದೆ. (ಈಶ್ವರಕರ್ತೃತತ್ವ ವಾದಿಗಳಾದ ನಾವೂ ಅಚೇತನಕ್ಕೆ (ಪ್ರಕೃತಿಗೆ) ಕರ್ತೃತ್ವ ಒಪ್ಪುತ್ತೇವೆ. ಆದರೆ, ಕೇವಲ ಅಚೇತನಕ್ಕೆ ಕರ್ತೃತ್ವ ಒಪ್ಪುವುದಿಲ್ಲ)

**प्रकाशः –** बुद्धिपूर्वककृतिमत्त्वादेरचेतनेऽयोगाट्टीकोक्तमेवाह – **इह चेति ।।**

ಅಚೇತನಕ್ಕೆ ಬುದ್ಧಿ, ಇಚ್ಛಾ, ಪ್ರಯತ್ನ ಇಲ್ಲದಿರುವುದರಿಂದ ಅದಕ್ಕೆ ಕರ್ತೃತ್ವ ಹೇಗೆ ಕೂಡುತ್ತದೆ ? ಎಂಬ ಪ್ರಶ್ನೆಗೆ ಟೀಕಾದಲ್ಲಿ ಹೇಳಿರುವ ಉತ್ತರವನ್ನೇ 'ಇಹ ಚ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः – टीकोपलक्षणमिति भावेनाह – द्वितीयमपीति ।।**

ಟೀಕಾದಲ್ಲಿ ಸಾಂಖ್ಯಮತವು ಎರಡುವಿಧ ಎಂದಷ್ಟೇ ಹೇಳಿದ್ದಾರೆ. ಅದನ್ನು ಉಪಲಕ್ಷಣ ಎಂದು ತಿಳಿದು ಚಂದ್ರಿಕಾಕಾರರು ಎರಡನೆಯವರಲ್ಲಿ ಮತ್ತೆ ಎರಡು ವಿಭಾಗವನ್ನು ಹೇಳುತ್ತಿದ್ದಾರೆ.

**प्रकाशः – व्यतिरेकेति** ।। ''न ऋते त्वत्क्रियते'' इत्यादेरीशव्यतिरेकेण कस्याप्यनवस्थितेरित्युक्तदोष इत्यर्थः । **द्वितीये** ''अन्यत्राभावाच्च न तृणादिवत्'' इत्यत्र। तृतीये ''अभ्युपगमेप्यर्थाभावात्'' इत्यत्र ।। **केवलमिति** ।। रचनेत्यत्रोक्तम् ।। **ईश्वरेति** ।। ''अन्यत्राभावाच्च'' इत्यत्रोक्तमित्यर्थः ।।

'ನ ಋತೇ ತ್ವತ್ಕ್ರಿಯತೇ' ಎಂಬ ಶ್ರುತಿಯಲ್ಲಿ ಈಶ್ವರನನ್ನು ಬಿಟ್ಟು ಯಾವ ಕರ್ಮವೂ ನಡೆಯಲು ಸಾಧ್ಯವಿಲ್ಲ ಎಂದು ಹೇಳಿರುವ ದೋಷ ಎಂದರ್ಥ. 'ದ್ವಿತಿಯೇ' ಎಂದರೆ 'ಅಭ್ಯುಪಗಮೇಪ್ಯರ್ಥಾಭಾವಾತ್' ಎಂಬ ಅನ್ಯತ್ರಾಭಾವಾಧಿಕರಣದಲ್ಲಿ ಎಂದರ್ಥ. ಕೇವಲ ಅಚೇತನಕ್ಕೆ ಕರ್ತೃತ್ವವನ್ನು 'ರಚನಾನುಪಪತ್ತೇಃ' ಎಂಬಲ್ಲಿ ಹೇಳಿದೆ ಎಂದರ್ಥ. ಈಶ್ವರನು ಅಪ್ರಧಾನನಾದ ಅಚೇತನಕ್ಕೆ ಕರ್ತೃತ್ವವನ್ನು 'ಅನ್ಯತ್ರಾಭಾವಾಚ್ಚ' ಎಂಬಲ್ಲಿ ಹೇಳಿದೆ ಎಂದರ್ಥ.

**प्रकाशः – श्रुतीति** ।। ''एतस्य वा अक्षरस्य प्रशासने गार्गि न ऋते त्वत्क्रियत'' इत्यादिश्रुत्या विमता सृष्टिश्चेतनेच्छानुसारिणी सृष्टित्वात् पटसृष्टिवदित्याद्यनुमानेन चेत्यर्थः ।।

ಶ್ರುತಿ ಹಾಗೂ ಅನುಮಾನಗಳು ಪ್ರಮಾಣವಲ್ಲ ಎಂದು ಚಾರ್ವಾಕ ಹೇಳುತ್ತಾನೆ. ಶ್ರುತಿ ಹಾಗೂ ಅನುಮಾನ ಯಾವುದು ಎಂಬುದನ್ನು ಹೇಳುತ್ತಿದ್ದಾರೆ - ''ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನ ಋತೇ ತ್ವತ್ಕ್ರಿಯತೇ'' ಎಂಬುದು ಶ್ರುತಿ. ''ವಿಮತಾ ಸೃಷ್ಟಿಶ್ಚೇತನೇಚ್ಛಾನುಸಾರಿಣೀ ಸೃಷ್ಟಿತ್ವಾತ್'' ಎಂಬುದು ಅನುಮಾನ. ಅಪ್ರಮಾಣವಾದ ಈ ಶ್ರುತಿ ಹಾಗೂ ಅನುಮಾನದಿಂದ ಈಶ್ವರಕರ್ತೃತ್ವವು ಸಿದ್ಧವಾಗುವುದಿಲ್ಲ ಎಂದು ಚಾರ್ವಾಕ ಹೇಳುತ್ತಾನೆ ಎಂದರ್ಥ.

**प्रकाशः – वक्ष्यमाणेति** ।। अचेतनं शरीरमेव स्वतः प्रवृत्तिमत्त्वरूप-कर्तृत्ववदिति मतस्य निरासे हि चेतनाधिष्ठितमेव शरीरं प्रवर्तते न केवलमिति सिद्ध्या पुरुषाधिष्ठितं शरीरं यथाऽश्मानयनादौ प्रवर्तते तथा प्रधानमिति वक्ष्यमाणदृष्टान्तनिर्वाह इति दृष्टान्तनिर्वाहकनिरासेत्युक्तम् ।।

ಮೂರನೆಯ ಅಧಿಕರಣದಲ್ಲಿ ಅಚೇತನವಾದ ಶರೀರವೇ ಸರ್ವಪ್ರವೃತ್ತಿರೂಪವಾದ ಕರ್ತೃತ್ವವುಳ್ಳದ್ದಾಗಿದೆ ಎಂಬ ಚಾರ್ವಾಕ ಮತವನ್ನು ನಿರಾಕರಿಸಿದ ಮೇಲೆಚೇತನಸಹಿತವಾದ ಶರೀರಕ್ಕೆ ಪ್ರವೃತ್ತಿ ಎಂಬುದು ಸಿದ್ಧವಾಗುತ್ತದೆ. ಹೀಗೆ ಸಿದ್ಧವಾದಾಗ ನಾಲ್ಕನೆಯ ಅಧಿಕರಣದಲ್ಲಿ ದೃಷ್ಟಾಂತವನ್ನು ಹೇಳಿದ್ದಾರೆ, ಪುರುಷ (ಜೀವ) ನಿಂದ ಸಹಿತವಾದ ಶರೀರವೇ ಹೇಗೆ ಕಲ್ಲನ್ನು ತರುವ ವ್ಯಾಪಾರದಲ್ಲಿ ತೊಡಗುತ್ತದೋ ಹಾಗೆಯೇ

ಜೀವಸಹಿತವಾದ ಪ್ರಧಾನವು ಜಗತ್ತಿನ ವ್ಯಾಪಾರದಲ್ಲಿ ಪ್ರವೃತ್ತವಾಗುತ್ತದೆ ಎಂಬುದಾಗಿ ಇದಕ್ಕೆ ಸಂಗತಿ ಬರುತ್ತದೆ. ಅದನ್ನೇ ದೃಷ್ಟಾಂತನಿರ್ವಾಹಕನಿರಾಸ ಎಂದು ಹೇಳಿದ್ದಾರೆ. ದೃಷ್ಟಾಂತ ಎಂದರೆ ಪುರುಷಾಶ್ಮದೃಷ್ಟಾಂತ, ಅದರ ನಿರ್ವಾಹಕದ ನಿರಾಸ ಎಂದರೆ ಚಾರ್ವಾಕಮತನಿರಾಸ ಎಂದರ್ಥ. ಅದನ್ನು ಮೂರನೆಯ ಅಧಿಕರಣದಲ್ಲಿ ಮಾಡಲಾಗಿದೆ ಎಂದು ಅಭಿಪ್ರಾಯ. (ನಿರ್ವಾಹಕನಿರಾಸ = ನಿರ್ವಹಣೆ ಮಾಡಲು ಅನುಕೂಲವಾದ ನಿರಾಸ ಎಂದರ್ಥ)

**प्रकाशः – चतुर्थ इति ।। ''पुरुषाश्मवदिति चेत्तथापि'' इत्यत्र ।।**

'ಚತುರ್ಥೇ' ಎಂದರೆ 'ಪುರುಷಾಶ್ಮವದಿತಿ ಚೇತ್ತಥಾಪಿ' ಎಂಬ ನಾಲ್ಕನೆಯ ಅಧಿಕರಣದಲ್ಲಿ ಎಂದರ್ಥ.

**प्रकाशः – पञ्चम इति ।। ''अन्यथानुमितौ च ज्ञशक्तिवियोगात्'' इत्यत्र ।**

'ಪಂಚಮೇ' ಎಂದರೆ 'ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್' ಎಂಬ ಐದನೆಯ ಅಧಿಕರಣದಲ್ಲಿ ಎಂದರ್ಥ.

ನಿರೀಶ್ವರ ವಾದಿಗಳನ್ನು ನಿರಾಕರಿಸಿದ ಮೇಲೆ ಸೇಶ್ವರವಾದಿಗಳ ನಿರಾಕರಣೆ

## तात्पर्यचन्द्रिका

**एवं निरीश्वरे चतुर्विधे सांख्ये सचार्वाकेऽधिकरणपञ्चकेन निरस्ते षष्ठे निरीश्वरपक्षोक्तो दोषो नास्माकमीश्वरवादिनाम् ।**

ಈ ರೀತಿಯಾಗಿ ಐದು ಅಧಿಕರಣಗಳಲ್ಲಿ ನಾಕು ವಿಧವಾದ ನಿರೀಶ್ವರ ಸಾಂಖ್ಯಮತವನ್ನು ನಾಕು ಅಧಿಕರಣಗಳಲ್ಲಿ ಹಾಗೂ ಒಂದು ಅಧಿಕರಣದಲ್ಲಿ ಚಾರ್ವಾಕಮತವನ್ನು ನಿರಾಕರಣೆ ಮಾಡಲಾಗಿದೆ. ಇಷ್ಟಾದ ಮೇಲೆ ಈಶ್ವರವಾದಿಗಳಾದ (ಈಶ್ವರನನ್ನು ಒಪ್ಪುವ) ವೈಶೇಷಿಕರೇ ಮೊದಲಾದವರು, ನೀವು ನಿರೀಶ್ವರವಾದಿಗಳಿಗೆ ಹೇಳಿದ ದೋಷ ನಮಗೆ ಬರುವುದಿಲ್ಲ ಎಂದು ಎದ್ದು ನಿಂತು ಹೇಳಿದರೆ ಅವರ ನಿರಾಕರಣೆಗಾಗಿ ಆರನೆಯ ಅಧಿಕರಣ ಹೊರಟಿದೆ.

**किन्त्वीश्वरोऽष्टगुणक एव । न त्वानन्दादिगुणक इति पञ्चमाक्षेपेण समुत्थित-सेश्वराक्षपादकणादादिनिरासः । योगस्तु ''एतेन योगःप्रत्युक्त'' इत्यतीतपाद एव विशिष्य निरस्तः ।**

ಪ್ರಶ್ನೆ - ವೈಶೇಷಿಕರೇ ಮೊದಲಾದವರು ಈಶ್ವರನನ್ನು ಒಪ್ಪುವುದರಿಂದ ಅವರು ನಮಗೆ ಅನುಕೂಲರೇ ಆಗಿದ್ದಾರೆ. ಹಾಗಾಗಿ ಅವರ ನಿರಾಕರಣೆಯನ್ನು ಏಕೆ ಮಾಡಬೇಕು?

ಉತ್ತರ - ವೈಶೇಷಿಕರು ಈಶ್ವರನನ್ನು ಒಪ್ಪಿದರೂ ಈಶ್ವರನಿಗೆ ಎಂಟು ಗುಣಗಳನ್ನು ಮಾತ್ರ ಒಪ್ಪುತ್ತಾರೆ. ನಾವು ಹೇಳುವಂತೆ ಆನಂದಾದಿ ಅನಂತ ಗುಣಗಳನ್ನು ಒಪ್ಪುವುದಿಲ್ಲ. ಆದ್ದರಿಂದ ಅವರು ನಿರಾಕರಣೆಗೆ ಯೋಗ್ಯರಾಗಿದ್ದಾರೆ. ಅಕ್ಷಪಾದದಿಂದ ಪ್ರವೃತ್ತವಾದದ್ದು ನೈಯಾಯಿಕ ಮತ ಹಾಗೂ

ಕಣಾದನಿಂದ ವೈಶೇಷಿಕ ಮತ ಪ್ರವೃತ್ತವಾಗಿದೆ. ಹೀಗೆ ಐದನೆಯ ಹಾಗೂ ಆರನೆಯ ಅಧಿಕರಣಗಳಿಗೆ ಆಕ್ಷೇಪಿಕೀಸಂಗತಿ ಇದೆ ಎಂದು ತಿಳಿಯಬೇಕು. (ಅಕ್ಷಪಾದನಿಗೆ ಗೌತಮ ಎಂಬ ನಾಮಾಂತರವಿದೆ)

**एवं हैतुकेषु निरस्तेषु पाषण्डनिरासावसरः । पाषण्डोऽपि वेदप्रामाण्यानङ्गीकाराङ्गीकाराभ्यां द्वेधा । तत्राद्योऽतिविरोधित्वादादौ निराकार्यः । स च बौद्धजैनभेदेन द्वेधा ।**

ಹೀಗೆ ಹೈತುಕರ ನಿರಾಕರಣೆ ಆದ ಮೇಲೆ ಪಾಷಂಡಮತಗಳ ನಿರಾಕರಣೆ ಪ್ರಸ್ತುತವಾಗುತ್ತದೆ. ಪಾಷಂಡಮತವೂ ಎರಡು ವಿಧ. ವೇದಗಳಿಗೆ ಪ್ರಾಮಾಣ್ಯ ಒಪ್ಪದವರು, ವೇದಗಳಿಗೆ ಪ್ರಾಮಾಣ್ಯ ಒಪ್ಪುವವರು ಎಂಬುದಾಗಿ. ಇವರಿಬ್ಬರಲ್ಲಿ ಮೊದಲನೆಯವರು, ವೇದಗಳಿಗೆ ಪ್ರಾಮಾಣ್ಯ ಒಪ್ಪದವರು ಅತ್ಯಂತ ವಿರೋಧಿಗಳಾದ್ದರಿಂದ ಅವರ ನಿರಾಕರಣೆ ಮೊದಲು ಮಾಡಬೇಕಾಗಿದೆ. ವೇದ ಅಪ್ರಾಮಾಣ್ಯವಾದಿಗಳು ಕೂಡ ಬೌದ್ಧ, ಜೈನ ಎಂಬುದಾಗಿ ಎರಡು ವಿಧ.

**तत्र बौद्धशास्त्रस्य प्रथमनिर्मितत्वात्प्रबलत्वाचादौ बौद्धा निराकार्याः । तेऽपि वैभाषिकाः सौत्रान्तिकाः माध्यमिकाः योगाचाराश्चेति चतुर्धा ।**

ಬೌದ್ಧ ಹಾಗೂ ಜೈನ ಇವರಿಬ್ಬರಲ್ಲಿ ಬೌದ್ಧಶಾಸ್ತ್ರವು ಮೊದಲು ನಿರ್ಮಿತವಾದ್ದರಿಂದ ಹಾಗೂ ಪ್ರಬಲವಾದ್ದರಿಂದ ಬೌದ್ಧರು ಮೊದಲು ನಿರಾಕರಣೆಗೆ ಅರ್ಹರಾಗಿದ್ದಾರೆ.' ಬೌದ್ಧರೂ ಕೂಡ ವೈಭಾಷಿಕರು, ಸೌತ್ರಾಂತಿಕರು, ಮಾಧ್ಯಮಿಕರು ಹಾಗೂ ಯೋಗಾಚಾರರು ಎಂದು ನಾಕುವಿಧ.

**तत्र यद्यपि परमाणुपुञ्जरूपः क्षणिको बाह्यार्थो घटादिः सन् प्रत्यक्षश्चेति वदतः सौत्रान्तिकात्सोऽनुमेय इति वदन् वैभाषिकोऽत्यन्तं विरोधी ।**

ಪ್ರಶ್ನೆ - ಸೂತ್ರಕಾರರು ಬೌದ್ಧರ ನಿರಾಕರಣೆ ಮಾಡುವಾಗ ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ ಹಾಗೂ ಯೋಗಾಚಾರ ಎಂಬ ಕ್ರಮದಲ್ಲಿ ನಿರಾಕರಣೆ ಮಾಡಿರುವುದು ಸರಿಯಲ್ಲ, ಹೇಗೆಂದರೆ ಸೌತ್ರಾಂತಿಕರು ಈ ಜಗತ್ತು ಪರಮಾಣುಪುಂಜರೂಪವಾಗಿದೆ, ಅದು ಕ್ಷಣಿಕ, ಬಾಹ್ಯವಸ್ತುಗಳಾದ ಘಟಪಟಾದಿಗಳು ಸತ್ಯ ಹಾಗೂ ಪ್ರತ್ಯಕ್ಷಗೋಚರ ಎಂದು ಹೇಳುತ್ತಾರೆ. ಆದರೆ, ವೈಭಾಷಿಕರು ಜಗತ್ತು ಪರಮಾಣುಪುಂಜರೂಪ, ಕ್ಷಣಿಕ, ಸತ್ಯ ಎಂದು ಒಪ್ಪುತ್ತಾರೆ. ಅದು ಪ್ರತ್ಯಕ್ಷ ವಿಷಯ ಎಂದು ಒಪ್ಪದೆ ಅನುಮೇಯ (ಅನುಮಾನದಿಂದ ವೇದ್ಯ) ಎಂದು ಹೇಳುತ್ತಾರೆ. ಹಾಗಾಗಿ, ಸೌತ್ರಾಂತಿಕರಿಗಿಂತ ವೈಭಾಷಿಕರು ಪ್ರತ್ಯಕ್ಷ ಒಪ್ಪದೇ ಇರುವುದರಿಂದ ಅತ್ಯಂತ ವಿರೋಧಿಗಳಾಗಿದ್ದಾರೆ.

**ततोऽपि ज्ञानातिरेकेण बाह्यार्थ एव नास्तीति वदन् योगाचारोऽतितरां विरोधी।**

ಈ ವೈಭಾಷಿಕರಿಗೆ ಹೋಲಿಸಿದಾಗ ಯೋಗಾಚಾರರು ಇನ್ನೂ ಹೆಚ್ಚು ವಿರೋಧಿಗಳು. ಏಕೆಂದರೆ ಜ್ಞಾನಕ್ಕಿಂತ ಹೊರತಾದ ಯಾವ ಬಾಹ್ಯ ಪದಾರ್ಥಗಳೂ ಇಲ್ಲವೇ ಇಲ್ಲ ಎಂದು ಹೇಳುತ್ತಾರೆ.

**ततोऽपि सर्वशून्यवादी माध्यमिकोऽतितमां विरोधीति माध्यमिकयोगाचार-वैभाषिकसौत्रान्तिकाः क्रमेण निराकार्याः ।**

ಈ ಯೋಗಾಚಾರರಿಗೆ ಹೋಲಿಸಿದಾಗ ಮಾಧ್ಯಮಿಕರು ಇನ್ನೂ ಅಧಿಕ ವಿರೋಧಿಗಳು. ಏಕೆಂದರೆ, ಯೋಗಾಚಾರರು ಜ್ಞಾನ ಒಂದನ್ನಾದರೂ ಸತ್ಯವಾದದ್ದನ್ನು ಒಪ್ಪುತ್ತಾರೆ. ಆದರೆ, ಈ ಮಾಧ್ಯಮಿಕರು ಸರ್ವಶೂನ್ಯವಾದಿಗಳು. ಶೂನ್ಯ ಒಂದೇ ಸತ್ಯ ಉಳಿದದ್ದೆಲ್ಲಾ ಸುಳ್ಳು ಎನ್ನುತ್ತಾರೆ. ಹಾಗಾಗಿ ನಿರಾಕರಣೆಯ ಕ್ರಮ ಮಾಧ್ಯಮಿಕ-ಯೋಗಾಚಾರ-ವೈಭಾಷಿಕ-ಸೌತ್ರಾಂತಿಕ ಎಂದು ಇರಬೇಕಾಗಿತ್ತು.

**तथापि परमाण्वारम्भवादनिरासेन तत्पुञ्जवादोपस्थितेः पुञ्जरूपबाह्यार्थ-सत्त्ववादित्वेनैकीकृत्यावान्तरभेदमविवक्षित्वा तार्किकं प्रत्युक्तमीश्वरस्य वैदिकत्व-मयुक्तम्।**

ಉತ್ತರ - ಆರನೆಯ ಅಧಿಕರಣದಲ್ಲಿ ಪರಮಾಣು ಆರಂಭವಾದಿಗಳಾದ ವೈಶೇಷಿಕ ನೈಯಾಯಿಕರ ನಿರಾಕರಣೆ ಮಾಡಿದ ನಂತರ ಪರಮಾಣುಪುಂಜವಾದವು ಬುದ್ಧಿಯಲ್ಲಿ ಉಪಸ್ಥಿತವಾಗುತ್ತದೆ. ಹಾಗಾಗಿ ಏಳನೆಯ ಅಧಿಕರಣದಲ್ಲಿ ವೈಭಾಷಿಕ ಸೌತ್ರಾಂತಿಕರ ನಿರಾಕರಣೆ ಸಂಗತವಾಗುತ್ತದೆ. ಸೂತ್ರಕಾರರು ವೈಭಾಷಿಕ ಸೌತ್ರಾಂತಿಕರ ನಿರಾಕರಣೆಗೆ ಪ್ರತ್ಯೇಕ ಅಧಿಕರಣ ಮಾಡದೇ ಇಬ್ಬರನ್ನೂ ಒಟ್ಟಿಗೆ ಸೇರಿಸಿ ನಿರಾಕರಿಸಿದ್ದಾರೆ. ಇಬ್ಬರನ್ನೂ ಒಟ್ಟಿಗೆ ಸೇರಿಸುವುದಕ್ಕೆ ಕಾರಣ ಇಬ್ಬರೂ ಪರಮಾಣುಪುಂಜವಾದಿಗಳು ಹಾಗೂ ಜಗತ್ತು ಕ್ಷಣಿಕ ಮತ್ತು ಸತ್ಯ ಎಂದು ಹೇಳುವವರು. ಇವರಿಬ್ಬರಲ್ಲಿ ವೈಭಾಷಿಕರು ಬಾಹ್ಯವಸ್ತುಗಳು ಪ್ರತ್ಯಕ್ಷ ಎಂದು ಹೇಳುತ್ತಾರೆ. ಆದರೆ, ಸೌತ್ರಾಂತಿಕರು ಬಾಹ್ಯವಸ್ತುಗಳು ಅನುಮೇಯ ಎನ್ನುತ್ತಾರೆ. ಈ ಒಂದು ಭೇದ ಇದ್ದರೂ, ಅದನ್ನು ಪರಿಗಣಿಸದೆ ಇಲ್ಲಿ ಇಬ್ಬರನ್ನೂ ಒಟ್ಟಿಗೆ ನಿರಾಕರಿಸಲಾಗಿದೆ.

**वेदस्यैवाप्रमाणत्वादिति षष्ठाक्षेपेण प्रवृत्तयोर्वैभाषिकसौत्रान्तिकयोस्सप्तमे निरासः ।**

ಏಳನೆಯ ಅಧಿಕರಣದಲ್ಲಿ ವೈಭಾಷಿಕ ಸೌತ್ರಾಂತಿಕರ ನಿರಾಕರಣೆಗೆ ಇನ್ನೊಂದು ಕಾರಣವೂ ಇದೆ. ಆರನೆಯ ಅಧಿಕರಣದಲ್ಲಿ ನಾವು ತಾರ್ಕಿಕರಿಗೆ ಈಶ್ವರನು ವೇದೈಕಸಮಧಿಗಮ್ಯ ಎಂದು ಹೇಳಿದ್ದೇವೆ. ಅದಕ್ಕೆ ಪ್ರತಿಯಾಗಿ ವೈಭಾಷಿಕ ಸೌತ್ರಾಂತಿಕರು ಇದು ಸರಿಯಲ್ಲ ಎಂದಿದ್ದಾರೆ.

ವೇದವೇ ಅಪ್ರಮಾಣವಾಗಿದೆ ಎಂದು ಆಕ್ಷೇಪ ಮಾಡುತ್ತಾರೆ. ಅವರ ನಿರಾಕರಣೆ ಸಂಗತವಾಗುತ್ತದೆ.

**अथ परमाणुपञ्जवादिनं प्रत्युक्तो दोषो नास्माकमिति सप्तमाक्षेपेणोत्थितस्य शून्यवादस्य विज्ञानवादादप्यतिविरुद्धत्वादष्टमे तन्निरासः ।**

ಅನಂತರ, ಪರಮಾಣುಪುಂಜವಾದಿಗಳಿಗೆ ಹೇಳಿದ ದೋಷ ನಮಗೆ ಬರುವುದಿಲ್ಲ. ನಾವು ಜಗತ್ತನ್ನು ಪರಮಾಣುಪುಂಜ ರೂಪ ಎಂದು ಒಪ್ಪುವುದಿಲ್ಲ. ಹೊರತಾಗಿ ಶೂನ್ಯ ಒಂದೇ ಸತ್ಯ

ಎನ್ನುತ್ತೇವೆ ಎಂದು ಆಕ್ಷೇಪ ಒಡ್ಡುವ ಶೂನ್ಯವಾದಿಗಳ ನಿರಾಕರಣೆ ಅಷ್ಟಮಾಧಿಕರಣದಲ್ಲಿ ಮಾಡಲಾಗಿದೆ. ಶೂನ್ಯವಾದಿಗಳು ವಿಜ್ಞಾನವಾದಿಗಳಿಗಿಂತ ಹೆಚ್ಚು ವಿರೋಧಿಗಳಾದ್ದರಿಂದ ಶೂನ್ಯವಾದಿಗಳ ನಿರಾಕರಣೆ ಮೊದಲು ಮಾಡಲಾಗಿದೆ.

**परिशेषान्नवमे शून्यवादिनं प्रति ''नासतो दृष्टत्वात्'' इत्युक्तो दोषो नास्माकमित्यष्टमाक्षेपेण समुत्थितस्य विज्ञानवादस्य निरासः ।**

ಬೌದ್ಧರಲ್ಲಿ ಇನ್ನು ಉಳಿದವರು ಯೋಗಾಚಾರರು (ವಿಜ್ಞಾನವಾದಿಗಳು) ಅವರ ನಿರಾಕರಣೆ ಒಂಭತ್ತನೇ ಅಧಿಕರಣದಲ್ಲಿ ಮಾಡಲಾಗಿದೆ. ನೀವು 'ನಾಸತೋ ದೃಷ್ಟತ್ವಾತ್' ಎಂದು ಶೂನ್ಯದಿಂದ ಜಗದುತ್ಪತ್ತಿ ಸಾಧ್ಯವಿಲ್ಲ ಎಂದು ಶೂನ್ಯವಾದಿಗಳಿಗೆ ಏನು ದೋಷ ಹೇಳಿದ್ದೀರೋ ಅದು ನಮಗೆ ಬರುವುದಿಲ್ಲ ಏಕೆಂದರೆ ನಾವು ವಿಜ್ಞಾನವನ್ನು ಸತ್ಯವಾದುದನ್ನು ಒಪ್ಪುತ್ತೇವೆ ಎಂದು ವಿಜ್ಞಾನವಾದಿಗಳು ಆಕ್ಷೇಪ ಎತ್ತಿದರೆ ಅವರ ನಿರಾಕರಣೆ ಶೂನ್ಯವಾದಿಗಳ ನಂತರ ಸಂಗತವಾಗುತ್ತದೆ.

**दशमे शून्यवाद्युक्तमसत्त्वं विज्ञानवाद्युक्तं सत्त्वं च स्यादिति वदतां स्याद्वादिनामस्माकं नैकैकपक्षोक्तदोष इति नवमाक्षेपेण प्रवृत्तस्य क्षपणकस्य निरासः ।**

ಹತ್ತನೆಯ ಅಧಿಕರಣದಲ್ಲಿ ಕ್ಷಪಣಕನ (ಜೈನ) ನಿರಾಕರಣೆ ಮಾಡಲಾಗಿದೆ. ಅದಕ್ಕೆ ಸಂಗತಿ ಹೇಳುತ್ತಾರೆ. ಜೈನರಿಗೆ ಸ್ಯಾತ್‌ವಾದಿಗಳು ಎಂದೂ ಹೆಸರಿದೆ. ಎಂದರು ಎಲ್ಲವೂ ಸರಿ ಎಂದು ಹೇಳುತ್ತಾರೆ. ಸತ್ ಸ್ಯಾತ್, ಅಸತ್ ಸ್ಯಾತ್, ಇತ್ಯಾದಿಯಾಗಿ. ಸ್ಯಾದ್ ವಾದಿಗಳಾದ ನಮಗೆ ನೀವು ಶೂನ್ಯವಾದಕ್ಕೆ ಹೇಳಿದ ದೋಷವಾಗಲೀ, ವಿಜ್ಞಾನವಾದಿಗಳಿಗೆ ಹೇಳಿದ ದೋಷವಾಗಲೀ ಬರುವುದಿಲ್ಲ. ಹೇಗೆಂದರೆ, ಅಸತ್ ಪಕ್ಷಕ್ಕೆ ಹೇಳಿದ ದೋಷ ನಮಗೆ ಬರುವುದಿಲ್ಲ, ಸತ್ವವನ್ನೂ ಒಪ್ಪಿರುವುದರಿಂದ ಸತ್‌ಪಕ್ಷಕ್ಕೆ ಹೇಳಿದ ದೋಷವೂ ಬರುವುದಿಲ್ಲ, ಅಸತ್ತನ್ನೂ ಒಪ್ಪುವುದರಿಂದ ಎಂದು ಈ ಸ್ಯಾತ್ ವಾದಿಗಳ ನಿರಾಕರಣೆ ಹತ್ತನೆಯ ಅಧಿಕರಣದಲ್ಲಿ ಮಾಡಿರುವುದು ಸಂಗತವಾಗುತ್ತದೆ.

**एवमवैदिके पाषण्डे निरस्ते वैदिकपाषण्डनिरासावसरः ।**

ಇಲ್ಲಿಯವರೆಗೆ ಅವೈದಿಕರಾದ ಪಾಷಂಡಿಗಳ ನಿರಾಕರಣೆ ಮಾಡಿ ಇನ್ನು ಮುಂದೆ ವೈದಿಕ ಪಾಷಂಡಿಗಳ ನಿರಾಕರಣೆ ಮಾಡುತ್ತಾರೆ.

**स च शैवस्कान्दसौरगाणपत(त्य)शाक्तादिभेदेनानेकधा ।**

ವೈದಿಕ ಪಾಷಂಡಿಗಳು ಶೈವ, ಸ್ಕಾಂದ, ಸೌರ, ಗಾಣಪತ, ಶಾಕ್ತ ಎಂದು ಅನೇಕವಿಧ. (ಶೈವ ಎಂದರೆ ಶಿವನೇ ಜಗತ್‌ಕರ್ತಾ ಮತ್ತು ಸರ್ವೋತ್ತಮ ಎಂದು ಹೇಳುವ ಮತ, ಹೀಗೆ ಸ್ಕಾಂದ ಮತವೂ ಕೂಡ)

**तत्र सर्वेभ्योऽपि शैवसमयः प्रबल इति तस्य शैवपाशुपतकालामुखमहाव्रत भेदेन चतुर्विधस्य क्षपणकं प्रति ''नैकस्मिन्नसम्भवात्'' इत्युक्तो दोषो नास्माकमिति दशमाक्षेपेण प्रवृत्तस्यैकादशे निरासः ।**

ಈ ವೈದಿಕಪಾಷಂಡಿಗಳಲ್ಲಿ ಶೈವರು ಪ್ರಬಲರು. ಹಾಗಾಗಿ ಮೊದಲು ಅವರ ನಿರಾಕರಣೆ. ಈ ಶೈವಮತವೂ ನಾಲ್ಕು ವಿಧ, ಶೈವ, ಪಾಶುಪತ, ಕಾಲಾಮುಖ, ಮಹಾವ್ರತ ಎಂಬುದಾಗಿ. ಈ ಶೈವರು, 'ನೈಕಸ್ಮಿನ್ನಸಂಭವಾತ್' ಎನ್ನುವಲ್ಲಿ ನೀವು ಜೈನರಿಗೆ ಹೇಳಿದ ದೋಷ (ಒಂದೇ ವಸ್ತುವಿನಲ್ಲಿ ಸಪ್ತಪ್ರಕಾರಗಳು ಕೂಡುವುದಿಲ್ಲ, ಅದು ಅಸಂಭವವಾದ್ದರಿಂದ ಎಂದು) ನಮಗೆ ಬರುವುದಿಲ್ಲ. ನಾವು ಜಗತ್ತು ಸತ್ಯ ಎಂದು ಒಪ್ಪುವುದರಿಂದ ಎಂದು ಆಕ್ಷೇಪ ಮಾಡಿದರೆ ಅವರ ನಿರಾಕರಣೆಯನ್ನು ಹನ್ನೊಂದನೆಯ ಅಧಿಕರಣದಲ್ಲಿ ಮಾಡಲಾಗಿದೆ.

**यद्यपि स्कान्दसौरगाणपतादिवन्महावाममध्यमवामाणुवामभेदेन त्रिविधं शाक्तमतमपि शैवमतनिरासकन्यायैनैव निरस्तम् ।**

ಪ್ರಶ್ನೆ- ಹನ್ನೆರಡನೆಯ ಅಧಿಕರಣದಲ್ಲಿ (ಉತ್ಪತ್ತ್ಯಧಿಕರಣ) ಶಾಕ್ತಮತನಿರಾಕರಣೆ ಮಾಡಿರುವುದು ವ್ಯರ್ಥ. ಶೈವಮತನಿರಾಕರಣೆಯಿಂದಲೇ ಸೌರ, ಗಾಣಪತ ಮೊದಲಾದವರ ನಿರಾಕರಣೆ ಆದಂತೆ ಶಾಕ್ತಮತನಿರಾಕರಣೆಯನ್ನೂ ಮಾಡಿದಂತಾಗುತ್ತದೆ. ಹಾಗಿದ್ದರೂ, ಪ್ರತ್ಯೇಕ ಶಾಕ್ತಮತ ನಿರಾಕರಿಸುವುದಾದರೆ, ಸೌರ, ಗಾಣಪತ ಮೊದಲಾದ ಮತಗಳನ್ನೂ ಪ್ರತ್ಯೇಕವಾಗಿ ನಿರಾಕರಿಸಬೇಕಾಗುತ್ತದೆ. ಶಾಕ್ತಮತವು ಮೂರುವಿಧ. ಮಹಾವಾಮ, ಮಧ್ಯಮವಾಮ ಮತ್ತು ಅಣುವಾಮ ಎಂಬುದಾಗಿ.

**तथापि स्त्रीमात्रादुत्पत्त्यसम्भव इति विशेषदोषविवक्षया द्वादशे निरस्तमित्यधिकरणानामवान्तरसङ्गतिः ।**

ಉತ್ತರ - ನಿಜ, ಆದರೂ ಶಾಕ್ತಮತಕ್ಕೆ ಒಂದು ವಿಶೇಷ ದೋಷ ಹೇಳುವುದಕ್ಕಾಗಿ ಪ್ರತ್ಯೇಕ ನಿರಾಕರಣೆ ಮಾಡಲಾಗಿದೆ. ಶಾಕ್ತರು ಶಕ್ತಿಯೇ ಜಗತ್‌ಕರ್ತ್ರೀ ಎನ್ನುತ್ತಾರೆ. ಅದು ಸರಿಯಲ್ಲ. ಸ್ತ್ರೀಮಾತ್ರದಿಂದ ಉತ್ಪತ್ತಿ ಎಲ್ಲಿಯೂ ಕಂಡಿಲ್ಲ ಎಂಬುದೇ ಆ ದೋಷ.

ಹೀಗೆ ಎರಡನೆಯ ಪಾದದಲ್ಲಿರುವ ಅಧಿಕರಣಗಳಿಗೆ ಅವಾಂತರಸಂಗತಿಯನ್ನು ತಿಳಿಯಬೇಕು.

**प्रकाशः —**

षष्ठे । ''महद्दीर्घवद्वाह्रस्वपरिमण्डलाभ्याम्'' इत्यत्र ।

'ಷಷ್ಠೇ' ಎಂದರೆ 'ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಮ್' ಎಂಬ ಆರನೆಯ ಅಧಿಕರಣದಲ್ಲಿ ಎಂದರ್ಥ.

**प्रकाशः** – सिद्धान्तप्रातिकूल्यं व्यनक्ति ।। **अष्टगुणक इति** ।।

ವೈಶೇಷಿಕರು ಈಶ್ವರನನ್ನು ಒಪ್ಪುವುದರಿಂದ ಸಿದ್ಧಾಂತಿಗಳಾದ ನಮಗೆ ಅನುಕೂಲರೇ ಆಗಿದ್ದಾರಲ್ಲವೇ ? ಇದು ತಪ್ಪು. ನಮ್ಮ ಸಿದ್ಧಾಂತಕ್ಕೆ ಅವರು ವಿರೋಧಿಗಳಾಗಿದ್ದಾರೆ ಅನ್ನುವುದನ್ನು ಅಷ್ಟಗುಣಕ ಎಂಬಲ್ಲಿ ವಿವರಿಸುತ್ತಿದ್ದಾರೆ. ಈಶ್ವರನಿಗೆ ಎಂಟೇ ಗುಣಗಳನ್ನು ಹೇಳುವುದರಿಂದ ಅವರು ವಿರೋಧಿಗಳೇ ಆಗಿದ್ದಾರೆ ಎಂದರ್ಥ.

**प्रकाशः** – ननु योगस्यापि हैतुकत्वेन स्मृतावुक्तेः कुतो न तन्निरास इत्यत आह – **योगस्त्विति** ।।

ಆಕ್ಷೇಪ - ಯೋಗಮತವೂ ಹೈತುಕ ಎಂಬುದಾಗಿ ಹಿಂದೆ ಹೇಳಿದ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ. ಹಾಗಾಗಿ ಯೋಗಮತನಿರಾಕರಣೆ ಏಕೆ ಮಾಡಲಿಲ್ಲ.

ಸಮಾಧಾನ - ಇದಕ್ಕೆ ಸಮಾಧಾನವನ್ನು 'ಯೋಗಸ್ತು' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಯೋಗಮತವು ಹಿಂದೆಯೇ ನಿರಾಕೃತವಾಗಿದೆ ಎಂದು ಅಭಿಪ್ರಾಯ.

**प्रकाशः** – ''समुदाय उभयहेतुकेऽपि'' इत्यधिकरणोपक्रमतां ''द्विविधसमयिनां मध्ये हैतुकनिरासानन्तरं पाषण्डिनां निराकरणं प्राप्तम्'' इत्यादिटीकां प्रसङ्गादत्र विवृण्वन्नुत्तराधिकरणानामपि सङ्गतिमाह – **एवमिति** ।।

''ಸಮುದಾಯ ಉಭಯಹೇತುಕೇऽಪಿ'' ಎನ್ನುವ ಅಧಿಕರಣದ ಪ್ರಾರಂಭದಲ್ಲಿರುವ ''ದ್ವಿವಿಧಸಮಯಿನಾಂ ಮಧ್ಯೇ ಹೈತುಕನಿರಾಸಾನಂತರಂ ಪಾಷಂಡಿನಾಂ ನಿರಾಕಾರಣಂ ಪ್ರಾಪ್ತಮ್'' ಇತ್ಯಾದಿ ಟೀಕಾವಾಕ್ಯವನ್ನು ವಿವರಿಸುವವರಾಗಿ ಮುಂದಿನ ಅಧಿಕರಣಗಳ ಸಂಗತಿಯನ್ನೂ ಕೂಡ ಹೇಳುತ್ತಿದ್ದಾರೆ.

**प्रकाशः** – ''पाषण्डिनोऽपि द्विविधाः । अवैदिका वैदिकाश्च'' इत्यादिटीका-वाक्यार्थं व्यनक्ति – **पाषण्डोऽपीति** ।।

''ಪಾಷಂಡಿನೋऽಪಿ ದ್ವಿವಿಧಾಃ ಅವೈದಿಕಾ ವೈದಿಕಾಶ್ಚ'' ಎಂಬ ಟೀಕಾವಾಕ್ಯದ ಅರ್ಥವನ್ನು 'ಪಾಷಂಡೋಽಪಿ' ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ.

**प्रकाशः** – ''बौद्धानां बहुविधत्वेऽपि'' इत्यादिटीकार्थं व्यनक्ति ।। **तेऽपीति** ।। ''ते च चतुर्विधा'' इत्यादिसुधोक्तेरिति भावः ।।

''ಬೌದ್ಧಾನಾಂ ಬಹುವಿಧತ್ವೇऽಪಿ'' ಎನ್ನುವ ಟೀಕಾವಾಕ್ಯವನ್ನು 'ತೇऽಪಿ' ಎನ್ನುವುದರಿಂದ ವಿವರಿಸುತ್ತಿದ್ದಾರೆ. ಸುಧಾದಲ್ಲಿ 'ತೇ ಚ ಚತುರ್ವಿಧಾಃ' ಎಂಬುದಾಗಿ ಹೇಳಿದ್ದಾರೆ. ಆದಕ್ಕೆ ಅನುಸಾರಿಯಾಗಿ ಇಲ್ಲಿಯೂ ಹೇಳಲಾಗಿದೆ ಎಂದರ್ಥ.

**प्रकाशः** – **सप्तम इति** ।। ''समुदाय उभयहेतुकेऽपि तदप्राप्तिः'' इत्यत्र ।

''ಸಮುದಾಯ ಉಭಯಹೇತುಕೇऽಪಿ ತದಪ್ರಾಪ್ತಿಃ'' ಎಂಬ ಸಮುದಾಯಾಧಿಕರಣದಲ್ಲಿ ಎಂದರ್ಥ.

ರಚನಾನುಪಪತ್ತ್ಯಧಿಕರಣ-ಅನ್ಯಥಾನುಪಪತ್ತ್ಯಧಿಕರಣ (2-2-(1-5))

**प्रकाशः** – अष्टमे ''नासतो दृष्टत्वात्'' इत्यत्र । नवमे ''न भावोऽनुपलब्धेः'' इत्यत्र । दशमे ''नैकस्मिन्नसम्भवात्'' इत्यत्र । ''अवैदिकपाषण्डिसमय-निरासानन्तरम्'' इत्यादि पत्युर्नयटीकां व्यनक्ति ।। **एवमिति** ।। अत्र गाणपतेति पाठस्साधुः। गणपतिशब्दस्य पत्युत्तरपदत्वेऽपि ''अश्वपत्यादिभ्यश्च'' इत्यण्प्रत्ययेनैव भाव्यत्वात्। चतुर्थाद्यपादेऽश्वपत्यादिसूत्रे मञ्जर्यां ''गाणपत्य इत्यपशब्द'' इत्युक्तत्वाच्च।

'ಅಷ್ಟಮೇ' ಎಂದರೆ ''ನಾಸತೋಽ ದೃಷ್ಟತ್ವಾತ್'' ಎಂಬ ಅಸದಧಿಕರಣದಲ್ಲಿ ಎಂದರ್ಥ. 'ನವಮೇ' ಎಂದರೆ ''ನ ಭಾವೋಽನುಪಲಬ್ಧೇಃ'' ಎಂಬ ಅನುಪಲಬ್ಧ್ಯಧಿಕರಣದಲ್ಲಿ ಎಂದರ್ಥ. 'ದಶಮೇ' ಎಂದರೆ ''ನೈಕಸ್ಮಿನ್ನಸಂಭವಾತ್'' ಎಂಬ ನೈಕಸ್ಮಿನ್ನಧಿಕರಣದಲ್ಲಿ ಎಂದರ್ಥ. ''ಅವೈದಿಕಪಾಷಂಡಿಸಮಯನಿರಾಸಾ-ನಂತರಮ್'' ಎಂಬ ಪತ್ಯುರಧಿಕರಣದ ಟೀಕಾವಾಕ್ಯವನ್ನು ವಿವರಿಸುತ್ತಿದ್ದಾರೆ ಏವಂ ಎಂಬುದರಿಂದ. ಚಂದ್ರಿಕಾದಲ್ಲಿ 'ಗಾಣಪತ' ಎಂಬ ಶಬ್ದವೇ ಇರಬೇಕು. ಅದೇ ಸರಿಯಾದ ರೂಪ. ಗಣಪತಿಶಬ್ದವು ಪತಿಶಬ್ದ ಉತ್ತರದಲ್ಲಿ ಹೊಂದಿದ್ದರೂ ''ಅಶ್ವಪತ್ಯಾದಿಭ್ಯಶ್ಚ'' ಎಂಬ ಪಾಣಿನೀಯ ಸೂತ್ರದಿಂದ 'ಅಣ' ಪ್ರತ್ಯಯವನ್ನು ಹೊಂದುತ್ತದೆ. ಗಣಪತಿ+ಅಣ್ ಎಂದು ಇರಲು ಣಕಾರ ಇತ್ ಆದ್ದರಿಂದ ''ತದ್ಧಿತೇಷ್ವಚಾಮಾದೇಃ''ಎಂಬ ಸೂತ್ರದಿಂದ ಆದಿವೃದ್ಧಿ ಬಂದಾಗ ಗಾಣಪತಿ+ಅ ಎಂದಾಗಿ ಯಸ್ಯೇತಿ ಚ ಎಂಬ ಸೂತ್ರದಿಂದ ಇಕಾರ ಲೋಪವಾದರೆ 'ಗಾಣಪತ' ಎಂದಾಗುತ್ತದೆ. ನಾಕನೇ ಅಧ್ಯಾಯದ ಮೊದಲನೇ ಪಾದದಲ್ಲಿ 'ಅಶ್ವಪತ್ಯಾದಿಭ್ಯಶ್ಚ' (೪.೧.೮೪) ಎಂಬ ಸೂತ್ರದಲ್ಲಿ ಪದಮಂಜರಿಯಲ್ಲೂ 'ಗಾಣಪತ್ಯ ಇತ್ಯಪಶಬ್ದಃ' ಎಂದು ಹೇಳಿದ್ದಾರೆ.

ವಿಶೇಷವಿಚಾರ : ಗಣಪತಿ ಶಬ್ದವು ಪತಿ ಶಬ್ದವನ್ನು ಉತ್ತರಪದವಾಗಿ ಹೊಂದಿದೆ. ಆದ್ದರಿಂದ ''ದಿತ್ಯದಿತ್ಯಾದಿತ್ಯಪತ್ಯುತ್ತರಗಣದಾಭ್ಯಃ'' (೪.೧.೮೫) ಎಂಬ ಸೂತ್ರದಿಂದ 'ಣ್ಯ' ಪ್ರತ್ಯಯ ಬಂದರೆ ಗಾಣಪತ್ಯ ಎಂದು ರೂಪವಾಗುತ್ತದೆ. ಆದರೆ ಗಣಪತಿ ಶಬ್ದವು ಅಶ್ವಪತ್ಯಾದಿಗಣಪಠಿತವಾಗಿದೆ. ಆದ್ದರಿಂದ 'ಣ್ಯ' ಪ್ರತ್ಯಯಕ್ಕೆ ಅಪವಾದವಾಗಿ ''ಅಶ್ವಪತ್ಯಾದಿಭ್ಯಶ್ಚ' ಎಂಬ ಹಿಂದಿನ ಸೂತ್ರದಿಂದ 'ಅಣ್' ಪ್ರತ್ಯಯವನ್ನೇ ಹೊಂದುತ್ತದೆ. ಆಗ 'ಗಾಣಪತ' ಎಂದೇ ರೂಪವಾಗುತ್ತದೆ. 'ಗಾಣಪತ್ಯ' ಎಂದು ಆಗುವುದಿಲ್ಲ.

**प्रकाशः** – एकादशे ''पत्युरसामञ्जस्यात्'' इत्यत्र । ''पूर्वन्यायेन निरस्तमपि शक्तिमतम्'' इत्यादिचरमाधिकरणटीकां व्यनक्ति ।। **यद्यपीति** ।। द्वादशे । ''उत्पत्त्यसम्भवात्'' इत्यत्र ।

ಹನ್ನೊಂದನೆಯ ''ಪತ್ಯುರಸಾಮಂಜಸ್ಯಾತ್'' ಎಂಬ ಪತ್ಯುರಧಿಕರಣದಲ್ಲಿ ಎಂದರ್ಥ. ''ಪೂರ್ವನ್ಯಾಯೇನ ನಿರಸ್ತಮಪಿ ಶಕ್ತಿಮತಮ್'' ಎಂಬ ಕೊನೆಯ ಅಧಿಕರಣದ ಟೀಕಾ ವಾಕ್ಯವನ್ನು 'ಯದ್ಯಪಿ' ಎಂಬುದರಿಂದ ವಿವರಿಸುತ್ತಿದ್ದಾರೆ. 'ದ್ವಾದಶೇ' ಎಂದರೆ ''ಉತ್ಪತ್ತ್ಯಸಂಭವಾತ್'' ಎಂಬ ಉತ್ಪತ್ತ್ಯಧಿ ಕರಣದಲ್ಲಿ ಎಂದರ್ಥ.

## तात्पर्यचन्द्रिका

**अत्र तत्तत्समयोक्तानां पूर्वपक्षन्यायानां तद्विरोधिनां सिद्धान्तन्यायानां च प्रसिद्धत्वादत्र भाष्यटीकयोः स्पष्टत्वादनुव्याख्यानसुधयोः प्रपञ्चितत्वाच्च नास्माभिः पृथगुच्यन्ते ।**

ಈ ಪಾದದಲ್ಲಿ ಆಯಾ ಸಮಯಗಳಲ್ಲಿ (ಸಾಂಖ್ಯಾದಿ) ಹೇಳಿದ ನ್ಯಾಯಗಳೇ ನಮಗೆ ಪೂರ್ವಪಕ್ಷನ್ಯಾಯಗಳು. ಅವು ಪ್ರಸಿದ್ಧವಾಗಿವೆ. ಆ ಪೂರ್ವನ್ಯಾಯಗಳಿಗೆ ವಿರುದ್ಧವಾದವು ಸಿದ್ಧಾಂತ-ನ್ಯಾಯಗಳು. ಅವೂ ಪ್ರಸಿದ್ಧವಾಗಿವೆ. ಮತ್ತು ಭಾಷ್ಯ ಟೀಕಾಗಳಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ. ಹಾಗೂ ಅನುವ್ಯಾಖ್ಯಾನ, ನ್ಯಾಯಸುಧೆಯಲ್ಲಿ ಪೂರ್ವಪಕ್ಷ ಸಿದ್ಧಾಂತನ್ಯಾಯಗಳನ್ನು ವಿವರಿಸಲಾಗಿದೆ. ಆದ್ದರಿಂದ ಚಂದ್ರಿಕಾದಲ್ಲಿ ಅವುಗಳನ್ನು ಪ್ರತ್ಯೇಕವಾಗಿ ಹೇಳುವುದಿಲ್ಲ.

**उक्तञ्च न्यायविवरणे ''उक्तविरोधिनस्तत्तत्समयसिद्धाः पूर्वपक्ष-न्यायास्तद्विरोधिनोऽन्य इति प्रसिद्धमेव'' इति ।।**

ನ್ಯಾಯವಿವರಣದಲ್ಲಿಯೂ ಆಚಾರ್ಯರು ಹೀಗೇ ಹೇಳಿದ್ದಾರೆ. ''ಉಕ್ತವಿರೋಧಿನಃ ತತ್ಸಮಯಸಿದ್ಧಾಃ ಪೂರ್ವಪಕ್ಷನ್ಯಾಯಾಃ ತದ್ವಿರೋಧಿನಃ ಅನ್ಯೇ ಇತಿ ಪ್ರಸಿದ್ಧಮೇವ'' ಎಂಬುದಾಗಿ. ನಾವು ಮೊದಲನೇ ಅಧ್ಯಾಯದಲ್ಲಿ ದೇವರಿಗೆ ಜಗತ್ಕಾರಣತ್ವ, ಗುಣಪೂರ್ಣತ್ವ, ಸಕಲವೇದಪ್ರತಿಪಾದ್ಯತ್ವ ಇತ್ಯಾದಿ ಗುಣಗಳನ್ನು ಹೇಳಿದ್ದೇವೆ. ಅದಕ್ಕೆ ವಿರುದ್ಧವಾದ ಸಮಯಗಳಲ್ಲಿ ಹೇಳಿರುವ ನ್ಯಾಯಗಳೇ ಪೂರ್ವಪಕ್ಷನ್ಯಾಯಗಳು. ಆ ಪೂರ್ವಪಕ್ಷ ನ್ಯಾಯಗಳಿಗೆ ವಿರುದ್ಧವಾದದ್ದೇ ಸಿದ್ಧಾಂತನ್ಯಾಯಗಳು. ಇವೆರಡೂ ಪ್ರಸಿದ್ಧವೇ ಆಗಿವೆ.

**रचनानुपपत्तेश्च नानुमानम् ।। अत्र श्रुतिसमन्वयेनोक्तं ब्रह्मणः स्रष्टृत्वादिकं न घटत उत घटत इति चिन्ता ।**

'ರಚನಾನುಪಪತ್ತೇಶ್ಚ ನಾನುಮಾನಮ್' ಈ ಅಧಿಕರಣಕ್ಕೆ ಮಾತ್ರ ತದರ್ಥಚಿಂತಾವನ್ನು ಹೇಳುತ್ತಿದ್ದಾರೆ. ಶ್ರುತಿಸಮನ್ವಯದಿಂದ ಬ್ರಹ್ಮನಿಗೆ ಹೇಳಿದ ಸೃಷ್ಟಿಕರ್ತೃತ್ವಾದಿಗಳು ಕೂಡುವುದೋ ಇಲ್ಲವೋ ? ಎಂಬುದು ಸಂಶಯ.

**तदर्थं सांख्यसमयविरोधात्किं श्रुतिरप्रमाणमुत नेति ।**

ಈ ಸಂಶಯದ ಮೇಲೆ ಸಾಂಖ್ಯಮತದ ವಿರೋಧ ಬರುವುದರಿಂದ ಶ್ರುತಿಯ ಪ್ರಮಾಣ ಹೌದೋ ಅಲ್ಲವೋ ? ಎಂಬ ಸಂಶಯ ಬರುತ್ತದೆ.

**तदर्थं युक्तिमूलत्वेनाभिप्रेतसांख्यसमयोक्तं प्रधानस्य जगद्रचयितृत्वादिकं किं युक्तमुत नेति ।**

ಸಾಂಖ್ಯರು ಅನುಮಾನಪ್ರಮಾಣದ ಮೂಲಕ ಪ್ರಧಾನಕ್ಕೆ ಹೇಳಿರುವ ಜಗತ್ಕರ್ತೃತ್ವಾದಿಗಳು ಸರಿಯೋ ತಪ್ಪೋ ? ಎಂಬ ಸಂಶಯ ಅನಂತರ ಪ್ರಾಪ್ತವಾಗುತ್ತದೆ.

**एवमन्यत्राप्येतत्पादीयाधिकरणेषु चिन्तापरम्परा ऊह्या ।**

ಇದೇ ರೀತಿಯಾಗಿ ಈ ಪಾದದ ಉಳಿದ ಅಧಿಕರಣಗಳಲ್ಲಿಯೂ ಸಂಶಯಪರಂಪರೆಯನ್ನು ಊಹಿಸಿಕೊಳ್ಳಬೇಕು.

**अस्मिन्नधिकरणे टीका स्पष्टार्था । सूत्राक्षरयोजना तु अनुमानं सांख्योक्तानुमानकल्पितं प्रधानं न स्वतन्त्रकारणम् । जडस्य रचयितृत्वानुपपत्तेः ।**

ಈ ಅಧಿಕರಣದಲ್ಲಿ ಟೀಕಾವಾಕ್ಯಗಳ ಅರ್ಥ ಸ್ಪಷ್ಟವಾಗಿದೆ. ಸೂತ್ರದಲ್ಲಿರುವ ಪದಗಳ ಯೋಜನೆ (ಅನ್ವಯ) ಹೀಗಿದೆ - 'ಅನುಮಾನಂ' ಎಂದರೆ ಸಾಂಖ್ಯರು ಹೇಳುವ ಅನುಮಾನದಿಂದ ಸಿದ್ಧವಾಗುವ ಪ್ರಧಾನವು 'ನ' ಎಂದರೆ ಸ್ವತಂತ್ರಕಾರಣ ಅಲ್ಲ. ಜಡವಾದ ಪ್ರಧಾನಕ್ಕೆ ರಚಯಿತೃತ್ವ ಎಂದರೆ ಕರ್ತೃತ್ವ ಕೂಡದೇ ಇರುವುದರಿಂದ.

**चशब्दोक्तात् मानाभावाच्च । न चानुमानं मानम् ।**

ಸೂತ್ರದಲ್ಲಿರುವ 'ಚ' ಶಬ್ದಕ್ಕೆ ಪ್ರಮಾಣ ಇಲ್ಲದಿರುವುದರಿಂದ ಎಂದರ್ಥ. ಇನ್ನೊಂದು ರೀತಿಯಿಂದ ಸೂತ್ರಾಕ್ಷರ ಯೋಜನೆ ಮಾಡುತ್ತಿದ್ದಾರೆ. 'ನಾನುಮಾನಂ' ಎಂಬಲ್ಲಿ 'ಅನುಮಾನಂ' 'ನ' ಅಂದರೆ ಪ್ರಧಾನವು ಜಗತ್ಕಾರಣ ಎಂಬ ವಿಷಯದಲ್ಲಿ ಅನುಮಾನವು ಪ್ರಮಾಣವಾಗುವುದಿಲ್ಲ.

**महदादिकं सकारणकं सजातीयकारणजन्यं वा सजातीयोपादानकं वा स्वतन्त्रकारणजन्यं वा कार्यत्वादित्याद्यनुमानरचनायाः सिद्धसाधनेन स्वतन्त्रजड-जन्यमिति रचनायाश्च दृष्टान्ताभावेनानुपपत्तेरिति द्रष्टव्या ।**

ಸಾಂಖ್ಯರು ಹೇಳುವ ಅನುಮಾನ ಯಾವುದು ಎಂದರೆ, ಮಹತ್ತತ್ತ್ವವೇ ಮೊದಲಾದುದು (ಪಕ್ಷ) ಕಾರಣಸಹಿತವಾಗಿದೆ (೧ನೇ ಸಾಧ್ಯ) ಅಥವಾ ಸಜಾತೀಯ ಕಾರಣದಿಂದ ಜನ್ಯವಾಗಿದೆ (೨ನೇ ಸಾಧ್ಯ) ಸಜಾತೀಯವಾದ ಉಪಾದಾನಕಾರಣವುಳ್ಳದ್ದಾಗಿದೆ (೩ನೇ ಸಾಧ್ಯ) ಸ್ವತಂತ್ರಕಾರಣದಿಂದ ಹುಟ್ಟಿದೆ (೪ನೇ ಸಾಧ್ಯ) ಕಾರ್ಯವಾದ್ದರಿಂದ (ಹೇತು) ಎಂದೂ. ಈ ಅನುಮಾನಗಳ ರಚನಾ = ರಚನೆಯು ಅನುಪಪತ್ತೇಃ ಕೂಡುವುದಿಲ್ಲ. ಏಕೆಂದರೆ ಇದೆಲ್ಲವೂ ದುಷ್ಟಾನುಮಾನಗಳಾಗಿವೆ. ಇಲ್ಲಿ ನಾಕೂ ಅನುಮಾನಗಳಿಗೆ ೧. ಮಹದಾದಿಗಳು ಕಾರಣಸಹಿತವಾಗಿದೆ, ೨. ಸಜಾತೀಯ ಕಾರಣಜನ್ಯವಾಗಿದೆ, ೩. ಸಜಾತೀಯ ಉಪಾದಾನವುಳ್ಳದ್ದಾಗಿದೆ, ೪. ಸ್ವತಂತ್ರಕಾರಣಜನ್ಯವಾಗಿದೆ ಎಂಬ ವಾಕ್ಯ ಅನುಮಾನಗಳಿಗೆ ಸಿದ್ಧಸಾಧನ ಎಂಬ ದೋಷ ಬರುತ್ತದೆ. ನಾವು ಒಪ್ಪಿರುವುದನ್ನೇ ನೀವು ಸಾಧನೆ ಮಾಡಿದರೆ ಸಿದ್ಧಸಾಧನ ಬರುತ್ತದೆ.

ಇನ್ನು ಮಹದಾದಿಗಳು ಸ್ವತಂತ್ರಜಡಜನ್ಯವಾಗಿವೆ ಎಂದು ಅನುಮಾನ ಹೇಳಿದರೆ ಈ ಅನುಮಾನಕ್ಕೆ ದೃಷ್ಟಾಂತಾಭಾವ ಎಂಬ ದೋಷ ಬರುತ್ತದೆ. ಏಕೆಂದರೆ ಜಡವಾದುದೆಲ್ಲವೂ ಪಕ್ಷದಲ್ಲೇ ಸೇರಿದೆ ಆದ್ದರಿಂದ ದೃಷ್ಟಾಂತಸ್ಥಳವೇ ಇಲ್ಲ. ಹಾಗಾಗಿ ವ್ಯಾಪ್ತಿ ಸಿದ್ಧವಾಗುವುದಿಲ್ಲ.

**प्रकाशः –**

**रचनानुपपत्तेश्च** ।। पूर्वपादान्त्योत्तरपादाद्याधिकरणयोर्नावश्यं सङ्गत्यपेक्षेति तदनुक्तिः । ''विष्णोस्सर्वकर्तृत्वं विषयः'' इत्यादिटीकां व्यनक्ति – **अत्रेति** ।। उत्तरचिन्तोत्थानार्थं श्रुतिसमन्वयेनोक्तमित्युक्तम् ।

ಹಿಂದಿನ ಪಾದದ ಕೊನೆಯ ಅಧಿಕರಣಕ್ಕೂ ಮುಂದಿನ ಪಾದದ ಮೊದಲನೇ ಅಧಿಕರಣಕ್ಕೂ ಸಂಗತಿಯನ್ನು ಹೇಳುವ ಅವಶ್ಯಕತೆ ಇಲ್ಲ. ಆದ್ದರಿಂದ ಅದನ್ನು ಹೇಳಲಿಲ್ಲ. ''ವಿಷ್ಣೋಸ್ಸರ್ವಕರ್ತೃತ್ವಂ ವಿಷಯಃ'' ಎಂಬ ಟೀಕಾವಾಕ್ಯವನ್ನು ವಿವರಿಸುತ್ತಿದ್ದಾರೆ. ಅತ್ರ ಎಂಬ ಗ್ರಂಥದಿಂದ. ವೇದವು ಪ್ರಮಾಣವೋ ಅಲ್ಲವೋ ? ಎಂಬ ಮುಂದಿನ ಸಂಶಯ ಹುಟ್ಟುವುದಕ್ಕೋಸ್ಕರ ಮೊದಲನೆಯ ನಿರೂಪಣೆಯಲ್ಲಿ 'ಶ್ರುತಿಸಮನ್ವಯೇನೋಕ್ತಂ' ಎಂದು ಹೇಳಿದ್ದಾರೆ.

**प्रकाशः** – फलफलिभावोऽत्र व्यक्तः ।

ಸಂಶಯಗಳ ಫಲಫಲಿಭಾವವು ಸ್ಪಷ್ಟವಾಗಿದೆ. ಯುಕ್ತಿಮೂಲಕವಾಗಿ ಸಾಂಖ್ಯಸಮಯದಲ್ಲಿ ಹೇಳಿದ ಪ್ರಧಾನದ ಜಗತ್ಕರ್ತೃತ್ವಾದಿಗಳು ಯುಕ್ತ ಎಂದಾದರೆ ಆಗ ಸಾಂಖ್ಯಸಮಯವಿರೋಧ ಬರುವುದರಿಂದ ಶ್ರುತಿಯು ಅಪ್ರಮಾಣವೆಂದಾಗಿ ಶ್ರುತಿಸಮನ್ವಯದಿಂದ ಬ್ರಹ್ಮನಿಗೆ ಹೇಳಿರುವ ಜಗತ್ಕರ್ತೃತ್ವಾದಿಗಳು ಕೂಡುವುದಿಲ್ಲ ಎಂದಾಗುತ್ತದೆ. (ಇದು ಒಂದು ರೀತಿಯಿಂದ ಫಲಫಲಿಭಾವ) ಯುಕ್ತಿಮೂಲಕವಾಗಿ ಸಾಂಖ್ಯಸಮಯದಲ್ಲಿ ಹೇಳಿದ ಪ್ರಧಾನದ ಜಗತ್ಕರ್ತೃತ್ವಾದಿಗಳು ಅಯುಕ್ತ ಎಂದಾದರೆ, ಆಗ ಸಾಂಖ್ಯಸಮಯದ ವಿರೋಧ ಬರುವುದಿಲ್ಲವಾದ್ದರಿಂದ ಶ್ರುತಿಯು ಪ್ರಮಾಣ ಎಂದಾಗಿ ಶ್ರುತಿಸಮನ್ವಯದಿಂದ ಸಿದ್ಧವಾದ ಬ್ರಹ್ಮನ ಜಗಜ್ಜನ್ಮಾದಿಕಾರಣತ್ವವು ಕೂಡುತ್ತದೆ. (ಇದು ಇನ್ನೊಂದು ರೀತಿಯಿಂದ ಫಲಫಲಿಭಾವ)

**प्रकाशः** – ''न कार्यं स्वसदृशकारणवत्,कार्यत्वात्'' इत्यादिटीकोक्तं सूत्राक्षरारूढं दर्शयति ।। **अनुमानमिति** ।।

''ನ ಕಾರ್ಯಂ ಸ್ವಸದೃಶಕಾರಣವತ್, ಕಾರ್ಯತ್ವಾತ್'' ಇದೇ ಮೊದಲಾದ ಟೀಕಾವನ್ನು ಸೂತ್ರಾಕ್ಷರಕ್ಕೆ ಅನುಗುಣವಾಗಿ ತೋರಿಸುತ್ತಿದ್ದಾರೆ 'ಅನುಮಾನಂ' ಎಂಬ ಗ್ರಂಥದಿಂದ.

**प्रकाशः** – अनुमीयत इत्यनुमानमिति ''कृत्यल्युटो बहुलम्'' इति कर्मणि बा हुलकल्युडंतत्वमुपेत्यार्थमाह – **सांख्येति** ।।

ಮೊದಲನೇ ವಿಧವಾದ ಸೂತ್ರಾಕ್ಷರಯೋಜನೆಯಲ್ಲಿ 'ಅನುಮಾನ' ಶಬ್ದವು ಕರ್ಮಣಿ ಲ್ಯುಡಂತವಾಗಿ ಪ್ರಯೋಗಿಸಲಾಗಿದೆ ಎಂದರ್ಥ. 'ಲ್ಯುಟ್' ಪ್ರತ್ಯಯವು ಸಾಮಾನ್ಯವಾಗಿ 'ಕರಣ' 'ಅಧಿಕರಣ' 'ಭಾವ' ಎಂಬ ಅರ್ಥದಲ್ಲಿ ಬಂದರೂ ''ಕೃತ್ಯಲ್ಯುಟೋ ಬಹುಲಮ್'' ಎಂಬ ಲ್ಯುಟ್ ಪ್ರತ್ಯಯವಿಧಾಯಕ ಸೂತ್ರದಲ್ಲಿ 'ಬಹುಲಂ' ಎಂಬ ಶಬ್ದ ಇರುವುದರಿಂದ ಕರ್ಮಾರ್ಥದಲ್ಲಿಯೂ 'ಲ್ಯುಟ್' ಬರಬಹುದು.

**प्रकाशः – अनुमानान्यग्रे व्यक्तानि ।**

ಆ ಅನುಮಾನಗಳು ಯಾವುವು ಎಂಬುದು ಮುಂದೆ ಸ್ಪಷ್ಟವಾಗುತ್ತದೆ.

**प्रकाशः –''प्राचीनानुमानं तु कारणत्वमात्रसाधकम्'' इत्यादिटीकार्थमपि सूत्रारूढं दर्शयन्ननुमानपदं करणल्युडंतमुपेत्य ''रचनानुपपत्तेस्तन्न सर्वज्ञानुमागतम्'' इत्यनुव्याख्यानसूचितं सूत्रस्य योजनान्तरमाह – न चेति ।।**

''ಪ್ರಾಚೀನಾನುಮಾನಂ ತು ಕಾರಣತ್ವಮಾತ್ರಸಾಧಕಮ್'' ಎಂಬ ಟೀಕಾವಾಕ್ಯವನ್ನು ಸೂತ್ರಾರೂಢವನ್ನಾಗಿ ತೋರಿಸುತ್ತಿದ್ದಾರೆ. ಎರಡನೇ ವಿಧವಾದ ಸೂತ್ರಾಕ್ಷರದ ಯೋಜನೆಯಲ್ಲಿ 'ಅನುಮಾನಂ' ಎಂಬ ಶಬ್ದವು ಕರಣಲ್ಯುಡಂತವಾಗಿಯೇ ಪ್ರಯೋಗಿಸಲ್ಪಟ್ಟಿದೆ ಎಂದು ಇಟ್ಟುಕೊಳ್ಳಬೇಕು. ಈ ಎರಡನೇ ವಿಧವಾದ ಸೂತ್ರಾಕ್ಷರ ಯೋಜನೆಯು 'ರಚನಾನುಪಪತ್ತೇಸ್ತನ್ನ ಸರ್ವಜ್ಞಾನುಮಾಗತಮ್' ಎಂಬ ಅನುವ್ಯಾಖ್ಯಾನದಲ್ಲಿ ಸೂಚಿತವಾಗಿದೆ ಎಂದರ್ಥ.

**प्रकाशः – सिद्धेति ।।** प्रधानेशयोर्मयाऽप्यङ्गीकारादिति भावः ।

ಸಾಂಖ್ಯರು ಹೇಳಿದ ಅನುಮಾನಗಳಿಗೆ ನಾವು ಸಿದ್ಧಸಾಧನ ಎಂಬ ದೋಷ ಹೇಳಿದ್ದೇವೆ. ನಾವೂ ಸಹ ಪ್ರಧಾನ ಈಶ್ವರ ಇಬ್ಬರಿಗೂ ಕರ್ತೃತ್ವವನ್ನು ಅಂಗೀಕಾರ ಮಾಡಿದ್ದೇವೆ. ಆದರೆ ಪ್ರಧಾನವು ಅಸ್ವತಂತ್ರಕರ್ತೃವೆಂದು ಈಶ್ವರನು ಸ್ವತಂತ್ರಕರ್ತೃವೆಂದು ಹೇಳುತ್ತೇವೆ. ಈ ಅಂಶದಲ್ಲಿ ಮಾತ್ರ ವ್ಯತ್ಯಾಸ.

ಸೇಶ್ವರಸಾಂಖ್ಯಮತನಿರಾಕರಣೆಗಾಗಿ ಎರಡನೆಯ ಅಧಿಕರಣ

## तात्पर्यचन्द्रिका

**द्वितीयाधिकरणे ''यच्च किञ्चित्'' इत्यादिभाष्योदाहृतश्रुतौ सर्वगतत्वोक्तेः प्रकृतोपयोगं दर्शयितुं टीकायां ''सत्तादिप्रदानाय'' इत्युक्तम् ।**

ಎರಡನೆಯ ಅಧಿಕರಣದಲ್ಲಿ ಸೇಶ್ವರಸಾಂಖ್ಯಮತವನ್ನು ನಿರಾಕರಣೆ ಮಾಡಲಾಗಿದೆ. ಈ ಅಧಿಕರಣದ ಭಾಷ್ಯದಲ್ಲಿ ''ಯಚ್ಚ ಕಿಂಚಿತ್ ಜಗತ್ ಸರ್ವಂ'' ಎಂಬ ಶ್ರುತಿಯನ್ನು ಹೇಳಿ ಭಗವಂತನು ಸರ್ವಗತ ಎಂಬುದನ್ನು ಹೇಳಿದ್ದಾರೆ. ಭಗವಂತನು ಸರ್ವಗತ ಎಂದು ಹೇಳಿದ್ದು ಪ್ರಕೃತ ಹೇಗೆ ಉಪಯೋಗ ಎಂಬುದನ್ನು ಟೀಕಾದಲ್ಲಿ ''ಸತ್ತಾದಿಪ್ರದಾನಾಯ'' ಎಂಬ ವಾಕ್ಯದಲ್ಲಿ ತಿಳಿಸಲಾಗಿದೆ. ಭಗವಂತನು ಎಲ್ಲ ವಸ್ತುಗಳಿಗೂ ಸತ್ತಾ, ಪ್ರತೀತಿ, ಪ್ರವೃತ್ತಿ ಮೊದಲಾದುದನ್ನು ಕೂಡಲು ಸರ್ವಗತನಾಗಿದ್ದಾನೆ ಎಂದರ್ಥ. ಹಾಗಾಗಿ ಪ್ರಕೃತೋಪಯೋಗಿತ್ವ ಇದೆ.

**''स एव'' इत्यादिभाष्यं सौत्रचशब्दव्याख्यानमित्याह – न केवलमित्यादिना।।**

ಸೂತ್ರದಲ್ಲಿರುವ 'ಚ' ಶಬ್ದದ ವ್ಯಾಖ್ಯಾನವೇ 'ಸ ಏವ' ಇತ್ಯಾದಿ ಭಾಷ್ಯ ಎಂಬುದನ್ನು ''ನ ಕೇವಲಂ'' ಎಂಬುದರಿಂದ ಟೀಕಾರಾಯರು ಹೇಳುತ್ತಿದ್ದಾರೆ.

**नानुग्राहकत्वमात्रमिति समस्तं पदम् ।**

''ನಾನುಗ್ರಾಹಕತ್ವಮಾತ್ರಮ್'' ಎಂಬ ಭಾಷ್ಯದಲ್ಲಿರುವ ಪದವು ಸಮಸ್ತಪದ ಎಂದರ್ಥ. (ನಾನುಗ್ರಾಹಕತ್ವಮಾತ್ರಮ್ ಎನ್ನುವಲ್ಲಿ 'ನಞ್' ಸಮಾಸ. 'ನಞ್' ಎಂಬ ಅವ್ಯಯದೊಡನೆ ಸಮಾಸ. ಹೊರತು 'ನಞ್' ನೊಡನೆ ಅಲ್ಲ. ಆದ್ದರಿಂದ 'ನ ಲೋಪೋ ನಞಃ' ಎಂಬುದರಿಂದ ನಕಾರಕ್ಕೆ ಲೋಪ ಬಂದಿಲ್ಲ. 'ನ' ಎನ್ನುವ ಪದ ಇಲ್ಲಿ ವಿರೋಧ ಎಂಬರ್ಥದಲ್ಲಿದೆ ಎಂದು ತಿಳಿಯಬೇಕು 'ಅಸುರ' ಎಂಬ ಪದವು ಉದಾಹರಣೆ.

**तथा च न केवलमन्यत्राभावादित्यनेनोक्तं कार्यस्येश्वराधीनत्वमेव सेश्वरसांख्योक्तस्यानुग्राहकत्वमात्रस्य विरोधि ।**

''ಅನ್ಯತ್ರಾಭಾವಾತ್'' ಎಂಬ ಸೂತ್ರಾಂಶದಿಂದ ಕಾರ್ಯವಸ್ತುವೆಲ್ಲವೂ ಈಶ್ವರಾಧೀನ ಎಂದು ಹೇಳಲಾಗಿದೆ. ಆದ್ದರಿಂದ ಸೇಶ್ವರಸಾಂಖ್ಯರು ಈಶ್ವರನಿಗೆ ಹೇಳಿರುವ ಅನುಗ್ರಾಹಕತ್ವಮಾತ್ರಕ್ಕೆ ಇದು ವಿರೋಧಿ.

**किन्तु स एवेत्यादिभाष्योक्तप्रमाणसिद्धसौत्रचशब्दसूचितं सर्वहेतुभूतप्रकृति-सत्तादेरीश्वराधीनत्वमपि विरोधीत्यर्थः ॥**

ಹಿಂದೆ ಹೇಳಿದ ಒಂದು ವಿರೋಧ ಅಷ್ಟೇ ಅಲ್ಲದೇ 'ಸ ಏವ' ಎಂಬ ಭಾಷ್ಯದಲ್ಲಿ ಹೇಳಿರುವ ಪ್ರಮಾಣದಿಂದ ಸಿದ್ಧವಾದ ಮತ್ತು ಸೂತ್ರದಲ್ಲಿ 'ಚ' ಶಬ್ದದಿಂದ ಸೂಚಿತವಾದ ಎಲ್ಲ ಕಾರ್ಯವಸ್ತುಗಳಿಗೂ ಕಾರಣವಾದ ಪ್ರಕೃತಿಯ ಸತ್ತಾದಿಗಳೂ ಈಶ್ವರಾಧೀನ ಎಂಬುದು ಕೂಡ ಸೇಶ್ವರಸಾಂಖ್ಯರು ಹೇಳುವ ಅನುಗ್ರಾಹಕತ್ವಮಾತ್ರಕ್ಕೆ ವಿರೋಧಿ ಎಂದು ಅಭಿಪ್ರಾಯ.

(ನಾನುಗ್ರಾಹಕತ್ವಮಾತ್ರಂ ಎಂಬಲ್ಲಿ 'ನ' ಎಂಬುದು ವಿರೋಧ ಎಂಬರ್ಥದಲ್ಲಿದೆ ಎಂದು ಹೇಳಿರುವುದರಿಂದ ಅನುಗ್ರಾಹಕತ್ವಮಾತ್ರಕ್ಕೆ ವಿರೋಧಿ ಎಂದರ್ಥವಾಗುತ್ತದೆ. ವಿರೋಧ ಎರಡು ಬಗೆ. ಕಾರ್ಯವಸ್ತುಗಳೆಲ್ಲವೂ ಈಶ್ವರಾಧೀನ ಎಂಬುದು ಒಂದು ವಿರೋಧ. ಕಾರಣವಸ್ತುಗಳೂ ಈಶ್ವರಾಧೀನ ಎನ್ನುವುದು ಎರಡನೆಯ ವಿರೋಧ ಎಂದು ಅಭಿಪ್ರಾಯ.)

**सूचितमिति शेष इति ॥ सत्तादिप्रदत्वं च प्रामाणिकैरङ्गीकृतमिति सौत्रचशब्देन सूचितमित्यर्थः ।**

'ಸೂಚಿತಮಿತಿ ಶೇಷಃ' ಎಂಬ ಟೀಕಾವಾಕ್ಯದ ಅಭಿಪ್ರಾಯ - ಸತ್ತಾದಿಪ್ರದತ್ವವು ಪ್ರಾಮಾಣಿಕರಿಂದ ಅಂಗೀಕರಿಸಲ್ಪಟ್ಟಿದೆ ಎಂಬುದನ್ನು ಸೂತ್ರದ 'ಚ' ಶಬ್ದದಿಂದ ಸೂಚಿಸಲಾಗಿದೆ ಎಂದು.

**''अभ्युपगमेप्यर्थाभावात्'' इति तृतीयाधिकरणसूत्रेऽर्थशब्देन न केवलं प्रयोजनमभिप्रेतम् । किन्तु विषयोऽपि ।**

"ಅಭ್ಯುಪಗಮೇಪ್ಯರ್ಥಾಭಾವಾತ್" ಎಂಬ ಮೂರನೆಯ ಅಧಿಕರಣದ ಸೂತ್ರದಲ್ಲಿ 'ಅರ್ಥ' ಶಬ್ದಕ್ಕೆ ಕೇವಲ ಪ್ರಯೋಜನ ಎಂದಷ್ಟೇ ಅರ್ಥವಲ್ಲ, 'ವಿಷಯ' ಎಂಬುದೂ ಅರ್ಥ ಎಂದು ತಿಳಿಯಬೇಕು. (ಕೋಶದಲ್ಲಿ "ಅರ್ಥೋಽಭಿಧೇಯರೈವಸ್ತು ಪ್ರಯೋಜನನಿವೃತ್ತಿಷು" ಎಂಬುದಾಗಿ ಅರ್ಥಶಬ್ದಕ್ಕೆ ಪ್ರಯೋಜನ, ವಿಷಯ ಎರಡೂ ಅರ್ಥ ಇರುವುದು ಗೊತ್ತಾಗುತ್ತದೆ.)

**भाष्येऽपि प्रयोजनशब्देन न केवलं फलं किन्तु प्रयुज्यतेऽनेनेति विषयोऽपीत्यभिप्रेत्याह**

ಭಾಷ್ಯದಲ್ಲಿಯೂ ಕೂಡ 'ಪ್ರಯೋಜನ' ಎಂಬ ಶಬ್ದಕ್ಕೆ ಫಲ ಎಂದಷ್ಟೇ ಅರ್ಥ ಅಲ್ಲ. ಕಿಂತು 'ವಿಷಯ' ಎಂಬುದಾಗಿಯೂ ಅರ್ಥ ಇಟ್ಟುಕೊಳ್ಳಬೇಕು. ಪ್ರಯೋಜನ ಶಬ್ದಕ್ಕೆ ವಿಷಯ ಎಂಬರ್ಥ ಹೇಗೆ ಬರುತ್ತದೆ ಎಂದರೆ, 'ಪ್ರಯುಜ್ಯತೇ ಪ್ರವರ್ತ್ಯತೇ, ಅನೇನ' ಎಂಬ ವ್ಯುತ್ಪತ್ತಿಯಿಂದ. ಈ ವ್ಯುತ್ಪತ್ತಿಯನ್ನು ಇಟ್ಟುಕೊಂಡರೆ ಯಾವುದರಿಂದ ಅಧಿಕಾರಿಗಳಿಗೆ ಪ್ರವೃತ್ತಿ ಶಾಸ್ತ್ರದಲ್ಲಿ ಉಂಟಾಗುತ್ತದೋ ಅದು, ಎಂದರ್ಥ ಬರುವುದರಿಂದ ಫಲ, ವಿಷಯ ಎರಡೂ ಅರ್ಥ ಸಿದ್ಧವಾಗುತ್ತದೆ. ಫಲ, ವಿಷಯ ಎರಡೂ ಇದ್ದರೆ ಅಧಿಕಾರಿಗಳು ಶಾಸ್ತ್ರಾಧ್ಯಯನದಲ್ಲಿ ತೊಡಗುತ್ತಾರೆ.

**नापि विषय इति ।।**

ಹಿಂದೆ ಹೇಳಿದ ಅಭಿಪ್ರಾಯದಿಂದ 'ನಾಪಿ ವಿಷಯಃ' ಎಂಬ ಟೀಕಾವಾಕ್ಯ ಹೊರಟಿದೆ. ಚಾರ್ವಾಕ ಮತಕ್ಕೆ ಫಲವೂ ಇಲ್ಲ, ವಿಷಯವೂ ಇಲ್ಲ ಎಂದರ್ಥ.

**अपरामर्शोऽदर्शनादित्यादि ।। धर्मादिकं नास्ति । प्रत्यक्षेणानुपलंभादित्यादि परामर्शाभावे धर्माद्यभावस्याप्रतीतेः ।**

ಚಾರ್ವಾಕನು ಅದೃಷ್ಟವಾದ ಧರ್ಮ, ಅಧರ್ಮ ಮೊದಲಾದವುಗಳನ್ನು ಒಪ್ಪುವುದಿಲ್ಲ. ಈ ಧರ್ಮಾದಿಗಳು ಇಲ್ಲ ಎಂದು ತಿಳಿಸುವುದೇ ನಮ್ಮ ಶಾಸ್ತ್ರಕ್ಕೆ ವಿಷಯ ಎನ್ನುತ್ತಾರೆ. ಅದಕ್ಕೆ ಅವರು ಹೇಳುವ ಪ್ರಮಾಣ, ಧರ್ಮಾದಿಗಳು (ಪಕ್ಷ) ಇರುವುದಿಲ್ಲ (ಸಾಧ್ಯ) ಪ್ರತ್ಯಕ್ಷವಾಗಿ ಕಾಣುತ್ತಿಲ್ಲವಾದ್ದರಿಂದ (ಹೇತು) ಎಂಬ ಅನುಮಾನ. ಈ ಪ್ರಮಾಣದಿಂದ ಧರ್ಮಾದಿಗಳ ಅಭಾವವು ಪರಾಮರ್ಶ (ಲಿಂಗಪರಾಮರ್ಶ) ಇಲ್ಲದೆ ತಿಳಿಯಲು ಸಾಧ್ಯವಿಲ್ಲ.

**परामर्शेन धर्माद्यभावदर्शनं तु नानुमानाद्भिद्यते ।**

ಸರಿ, ಪರಾಮರ್ಶದಿಂದಲೇ ತಿಳಿಯಲಿ ಎಂದರೆ ಆಗ ಅನುಮಾನದಿಂದಲೇ ಧರ್ಮಾದಿಗಳ ಅಭಾವಜ್ಞಾನ ಬರುತ್ತದೆನ್ನಬೇಕು.

**परामर्शेत्यनेनानुमितिकरणस्य दर्शनशब्देनानुमितेश्च त्वयैवोक्तत्वादित्यर्थः ।**

ಪರಾಮರ್ಶ ಶಬ್ದಕ್ಕೆ 'ಅನುಮಿತಿಕರಣ' (ಅನುಮಿತಿ ಬರಲು ಸಾಧನ) ಎಂಬುದಾಗಿ ಹಾಗೂ ದರ್ಶನ ಶಬ್ದಕ್ಕೆ ಅನುಮಿತಿ (ಅನುಮಾನದಿಂದ ಹುಟ್ಟುವ ಜ್ಞಾನ) ಎಂಬುದಾಗಿ ಅರ್ಥ ಎಂದು ನೀನು

ಒಪ್ಪಿರುವಿ. ಆದ್ದರಿಂದ ಪರಾಮರ್ಶೆ ಒಪ್ಪಿದರೆ ಅಪಸಿದ್ಧಾಂತ. ಒಪ್ಪದಿದ್ದರೆ ಧರ್ಮಾದ್ಯಭಾವಜ್ಞಾನವೇ ಹುಟ್ಟುವುದಿಲ್ಲ.

ವಿಶೇಷವಿಚಾರ: (ಪರಾಮರ್ಶ ಶಬ್ದಕ್ಕೆ ವ್ಯಾಪ್ತಿವಿಶಿಷ್ಟಪಕ್ಷಧರ್ಮತಾಜ್ಞಾನಂ ಪರಾಮರ್ಶಃ ಎಂದರ್ಥ. ಪರ್ವತಃ, ವಹ್ನಿಮಾನ್, ಧೂಮಾತ್ (ಪರ್ವತವು ವಹ್ನಿವುಳ್ಳದ್ದಾಗಿದೆ ಧೂಮ ಇರುವುದರಿಂದ) ಎನ್ನುವಲ್ಲಿ 'ವಹ್ನಿವ್ಯಾಪ್ಯವಾದ ಧೂಮವುಳ್ಳದ್ದಾಗಿದೆ ಪರ್ವತ' ಎಂಬ ಜ್ಞಾನವೇ ಪರಾಮರ್ಶ. ಈ ಪರಾಮರ್ಶದಿಂದ ಹುಟ್ಟುವ 'ಪರ್ವತವು ವಹ್ನಿವುಳ್ಳದ್ದಾಗಿದೆ' ಎಂಬ ಜ್ಞಾನವೇ ಅನುಮಿತಿ)

**स्वव्याहतिमुपपादयति ।। न ह्यभ्युपगमो प्रयोजनश्चेति युक्तमिति ।।**

"ನ ಹ್ಯಭ್ಯುಪಗಮಃ ಪ್ರಯೋಜನಶ್ಚ ಯುಕ್ತಂ" ಎಂಬ ಟೀಕಾವಾಕ್ಯದಲ್ಲಿ ಸ್ವವ್ಯಾಹತಿಯನ್ನು ಸಮರ್ಥನೆ ಮಾಡುತ್ತಿದ್ದಾರೆ.

**"मत्सिद्धान्तः" इत्यनेन सप्रयोजनत्वाद्यविनाभूतसिद्धान्तत्वमभ्युपगम्य "मास्तु प्रयोजनम्" इत्यनेनाप्रयोजनत्वोक्तिर्व्याहतेत्यर्थः ।**

ಚಾರ್ವಾಕನು 'ಮತ್ಸಿದ್ಧಾಂತಃ' (ನನ್ನ ಸಿದ್ಧಾಂತ) ಎಂದು ಹೇಳಿದಾಗ ಸಿದ್ಧಾಂತ ಎಂದಾಗಬೇಕಾದರೆ ಇರಲೇಬೇಕಾದ ವಿಷಯ ಪ್ರಯೋಜನಗಳನ್ನು ಒಪ್ಪಿ ಪುನಃ "ಮಾಸ್ತು ಪ್ರಯೋಜನಮ್" ಎಂಬ ಮಾತಿನಿಂದ ಪ್ರಯೋಜನ ವಿಷಯ ಇಲ್ಲ ಎಂದರೆ ಅವನ ಮಾತು ಸ್ವವ್ಯಾಹತವಾಗುತ್ತದೆ. ನನ್ನ ತಾಯಿ ಎಂದು ಹೇಳಿ ಆಮೇಲೆ 'ಅವಳು ವಂಧ್ಯಾ' ಎಂದರೆ ಹೇಗೋ ಹಾಗೆ.

**अत्र भाष्ये "उपेक्ष्य" इत्यनेन टीकायां "न युक्तम्" इत्यनेन च पूर्वसूत्रान्नञोऽनुवृत्तिर्दर्शिता ।**

ಭಾಷ್ಯದಲ್ಲಿ 'ಉಪೇಕ್ಷ್ಯ' ಎಂಬುದರಿಂದ ಹಾಗೂ ಟೀಕಾದಲ್ಲಿ " ನ ಯುಕ್ತಂ" ಎಂಬುದರಿಂದ ಈ ಸೂತ್ರದಲ್ಲಿ ಹಿಂದಿನ ಸೂತ್ರದಿಂದ 'ನಞ್' ಎಂಬುದರ ಅನುವೃತ್ತಿಯನ್ನು ಮಾಡಿಕೊಳ್ಳಬೇಕು ಎಂದು ತಿಳಿಸಲಾಗಿದೆ.

**अनेन च त्वदीयशास्त्रस्य सिद्धान्तत्वानभ्युपगमे सिद्धमस्मदिष्टम् ।**

'ನಞ್' ಅನುವೃತ್ತಿಯಿಂದ ಹೀಗೆ ಅರ್ಥ ತಿಳಿಯಬೇಕು. ಅನುವೃತ್ತವಾದ 'ನ' ಶಬ್ದವನ್ನು 'ಅಭ್ಯುಪಗಮೇ' ಎಂಬುದರ ಜೊತೆಗೆ ಸೇರಿಸಿದರೆ ಆಗ 'ಅನಭ್ಯುಪಗಮೇ' ಎಂದರ್ಥವಾಗುತ್ತದೆ. ಆಗ ನಿನ್ನ ಶಾಸ್ತ್ರವನ್ನು ಸಿದ್ಧಾಂತ ಎಂದು ನೀನೇ ಒಪ್ಪದಿದ್ದರೆ ನಮ್ಮ ಇಷ್ಟಾರ್ಥ ಸಿದ್ಧವಾಯಿತು ಎಂದರ್ಥ.

**अभ्युपगमेऽपि तद्व्यापकयोर्विषयप्रयोजनयोरभावाभ್ಯुपगमाद्व्याघात इति सूत्राक्षरयोजना सूचिता ।**

ಈಗ 'ನ' ಶಬ್ದವನ್ನು ಪ್ರತ್ಯೇಕ ಇಟ್ಟುಕೊಳ್ಳಬೇಕು. ಆಗ, ನೀನು ನಿನ್ನ ಶಾಸ್ತ್ರವನ್ನು ಸಿದ್ಧಾಂತ ಎಂದು ಒಪ್ಪಿದರೂ ಶಾಸ್ತ್ರ ಎಂದಾಗುವುದಾದರೆ, ಇರಲೇಬೇಕಾದ ವಿಷಯ ಪ್ರಯೋಜನಾದಿಗಳು ಇಲ್ಲ ಎಂದು ಹೇಳಿದಂತಾಯಿತು. ಆಗ ಸ್ವವ್ಯಾಹತಿ ಬರುವುದರಿಂದ ನೀನು ಉಪೇಕ್ಷ್ಯನಾಗುವಿ. ಅಥವಾ ನಿನ್ನ ಮತ ಸರಿಯಲ್ಲ ಎಂದರ್ಥವಾಗುತ್ತದೆ. ಹೀಗೆ ಸೂತ್ರಾಕ್ಷರಯೋಜನೆ ಸೂಚಿತವಾಗಿದೆ (ಭಾಷ್ಯದಲ್ಲಿ ಎಂದರ್ಥ)

**चतुर्थपञ्चमाधिकरणयोष्टीका स्पष्टार्था ।।**

ನಾಲ್ಕನೇ ಹಾಗೂ ಐದನೇ ಅಧಿಕರಣಗಳ ಟೀಕಾಗ್ರಂಥವು ಸ್ಪಷ್ಟವಾಗಿ ಅರ್ಥವಾಗುತ್ತದೆ.

**स्पष्टत्वात् पूर्वपक्षादिन्यायानां भाष्यटीकयोः ।**
**अपव्याख्यैव सूत्राणामस्माभिर्दूष्यतेऽञ्जसा ।।१।।**

ಭಾಷ್ಯಟೀಕೆಗಳಲ್ಲಿ ಪೂರ್ವಪಕ್ಷನ್ಯಾಯ ಸಿದ್ಧಾಂತನ್ಯಾಯಗಳು ಸ್ಪಷ್ಟವಾಗಿರುವುದರಿಂದ ಸೂತ್ರಗಳಿಗೆ ಇತರರು ಮಾಡುವ ಅಪವ್ಯಾಖ್ಯಾನವನ್ನು ಮಾತ್ರ ನಾವು ಚೆನ್ನಾಗಿ(ಸ್ಪಷ್ಟವಾಗಿ) ನಿರಾಕರಿಸುತ್ತೇವೆ.

**भाष्यकारेण सन्मार्गे गच्छताऽन्ये कुमार्गगाः ।**
**निरस्ता इति भावेन कंठतो न निराकृताः ।।२।।**

ಪ್ರಶ್ನೆ - ಭಾಷ್ಯಕಾರರು ಅಪವ್ಯಾಖ್ಯಾನವನ್ನು ಏಕೆ ನಿರಾಕರಿಸಿಲ್ಲ ?

ಉತ್ತರ - ಭಾಷ್ಯಕಾರರು ಸರಿಯಾದ ಮಾರ್ಗದಲ್ಲಿ ಹೋಗುತ್ತಾ ಉಳಿದ ಮಾರ್ಗವೆಲ್ಲವೂ ಕೆಟ್ಟ ಮಾರ್ಗ ಎಂಬುದಾಗಿ ತಿಳಿಸಿದ್ದಾರೆ. ಈ ಭಾವನೆಯಿಂದ ಅವರು ಸ್ಪಷ್ಟಮಾತುಗಳಿಂದ ಅಪವ್ಯಾಖ್ಯಾನಗಳನ್ನು ನಿರಾಕರಿಸಿಲ್ಲ. ಅವರು ಸೂಚಿಸಿರುವ ನಿರಾಕರಣೆಯನ್ನು ನಾವು ಸ್ಪಷ್ಟವಾಗಿ ಹೇಳುತ್ತೇವೆ ಎಂದರ್ಥ.

**प्रकाशः –**

सूत्रान्तरयोजना स्फुटा । क्रमोऽपि पूर्वोक्तरीत्योहनीय इति भावः । तत्र तत्रास्पष्टवाक्यानि व्यनक्ति ।। **यच्च किञ्चिदित्यादिना** ।। अभ्युपगमेऽपीत्यतः प्राक् ''अन्यत्राभावाच्च'' इत्येतन्नयटीकावाक्यविवरणम् । समस्तपदत्वे कोऽर्थः सम्पन्न इत्यतो नेत्यस्य विरोधार्थत्वमुपेत्य लब्धमर्थमाह – **तथा चेति** ।।

ಈ ಅಧಿಕರಣದಲ್ಲಿರುವ ಇತರ ಸೂತ್ರಗಳ ಯೋಜನೆ ಸ್ಪಷ್ಟವಾಗಿದೆ. ಸೂತ್ರಗಳ ಕ್ರಮವೂ ಕೂಡ ಹಿಂದೆ ಹೇಳಿರುವಂತೆ ತಿಳಿಯಬೇಕು. ಅಲ್ಲಲ್ಲಿರುವ ಸ್ಪಷ್ಟವಾಗಿ ಅರ್ಥ ತಿಳಿಯದಿರುವ ವಾಕ್ಯಗಳಿಗೆ ವ್ಯಾಖ್ಯಾನ ಮಾಡುತ್ತಾರೆ 'ಯಚ್ಚ ಕಿಂಚಿತ್' ಎಂಬ ಗ್ರಂಥದಿಂದ. ''ಸತ್ತಾದಿಪ್ರದಾನಾಯ'' ಎಂಬ ಟೀಕಾವಾಕ್ಯವು

''ಅಭ್ಯುಪಗಮೇಽಪಿ'' ಎಂಬ ಸೂತ್ರದ ಹಿಂದಿರುವ ''ಅನ್ಯತ್ರಾಭಾವಾಚ್ಚ ನ ಸ್ವಪ್ನಾದಿವತ್'' ಎಂಬ ಅಧಿಕರಣದಲ್ಲಿದೆ. ಅದರ ವಿವರಣೆ ಇಲ್ಲಿ ಮಾಡಲಾಗಿದೆ. 'ನಾನುಗ್ರಾಹಕತ್ವಮಾತ್ರಮ್' ಎಂಬುದು ಸಮಸ್ತಪದ ಎಂದಿಟ್ಟುಕೊಂಡರೆ ಯಾವ ಅರ್ಥ ಬರುತ್ತದೆ ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಉತ್ತರವಾಗಿ 'ನ' ಎಂಬುದಕ್ಕೆ ವಿರೋಧ ಎಂಬ ಅರ್ಥವನ್ನು ಗ್ರಹಿಸಿ ಅದರಿಂದ ಸಿಗುವ ಅರ್ಥವನ್ನು ''ತಥಾ ಚ'' ಎಂಬ ಗ್ರಂಥದಿಂದ ಹೇಳುತ್ತಿದ್ದಾರೆ.

**प्रकाशः – अत्रेति ।।** अभ्युपगमेऽपीति सूत्रे नञोऽनुवृत्तिर्दर्शितेत्यन्वयः ।

'ಅಭ್ಯುಪಗಮೇಽಪ್ಯರ್ಥಾಭಾವಾತ್' ಎಂಬ ಸೂತ್ರದ ಹಿಂದಿನ ಸೂತ್ರದಲ್ಲಿಂದ ''ನಞ್'' ಪದದ ಅನುವೃತ್ತಿಯು ತಿಳಿಸಲ್ಪಟ್ಟಿದೆ ಎಂದು 'ಅತ್ರ ಚ' ಎಂಬ ವಾಕ್ಯದಲ್ಲಿ ಅನ್ವಯವನ್ನು ತಿಳಿಯಬೇಕು.

ಪರವಾದಿಗಳು ಹತ್ತು ಸೂತ್ರಗಳನ್ನು ಒಂದೇ ಅಧಿಕರಣವೆನ್ನುವರು

## तात्पर्यचन्द्रिका

**अत्र यदुक्तमुभाभ्यां ''रचनानुपपत्तेः'' इत्यादि ''विप्रतिषेधात्'' इत्यन्तं सूत्रदशकमेकमधिकरणं चेतनानधिष्ठितस्य प्रधानस्य जगद्रचयितृत्वनिरासकमिति ।**

ಈ ವಿಷಯದಲ್ಲಿ (ಪಾದದಲ್ಲಿ) ಶಂಕರರು ಮತ್ತು ರಾಮಾನುಜರು ಹೇಳಿರುವುದು 'ರಚನಾನುಪಪತ್ತೇಃ' ಎಂಬುದರಿಂದ ಆರಂಭಿಸಿ ''ವಿಪ್ರತಿಷೇಧಾತ್'' ಎನ್ನುವ ತನಕ ಹತ್ತು ಸೂತ್ರಗಳ ಒಂದೇ ಅಧಿಕರಣ. ಈ ಅಧಿಕರಣದಲ್ಲಿ ಚೇತನನಿಂದ ಕೂಡಿರದ ಪ್ರಧಾನ(ಪ್ರಕೃತಿ)ಕ್ಕೆ ಜಗತ್ ಕರ್ತೃತ್ವ(ರಚಯಿತ್ವ)ವನ್ನು ನಿರಾಕರಿಸಲಾಗಿದೆ ಎಂದು.

**तन्न । मम रीत्या निरीश्वरसांख्यविंध्यादिमते केवलाचेतनकर्तृत्वमतस्य सेश्वर सांख्यपातंजलादिमतस्य पुनरपि निरीश्वरसांख्ये पुरुषोपसर्जनप्रकृतिकर्तृत्वमतस्य प्रकृत्युपसर्जनपुरुषकर्तृत्वमतस्य च पूर्वपूर्वदोषोद्धारेणोत्थितस्याऽवश्यनिरसनीयस्य च क्रमेण निरासायाधिकरणपञ्चकसंभवे तदनिरासेनैकीकरणायोगात् ।**

(ಇಬ್ಬರೂ) ನೀವು ಹೇಳಿರುವುದು ಸರಿಯಲ್ಲ. ನಾವು ಹೇಳಿರುವಂತೆ ಐದು ಅಧಿಕರಣಗಳು ಆಗುತ್ತವೆ. ಮೊದಲು ಅಚೇತನಕ್ಕೆ ಕರ್ತೃತ್ವವನ್ನು ಹೇಳುವ ನಿರೀಶ್ವರ ಸಾಂಖ್ಯರಾದ ವಿಂಧ್ಯಾದಿಗಳ ಮತ ಅದರ ನಿರಾಕರಣೆ ಮಾಡಿದ್ದಾರೆ. ಅನಂತರ ಎರಡನೇ ಅಧಿಕರಣದಲ್ಲಿ ಸೇಶ್ವರಸಾಂಖ್ಯರಾದ ಪತಂಜಲಿಗಳ ಮತ ನಿರಾಕರಣೆ. ಮೂರನೇ ಅಧಿಕರಣದಲ್ಲಿ ಚಾರ್ವಾಕಮತ ನಿರಾಕರಣೆ. ನಾಕನೇ ಹಾಗೂ ಐದನೇ ಅಧಿಕರಣದಲ್ಲಿ ನಿರೀಶ್ವರಸಾಂಖ್ಯರಲ್ಲೇ ಒಂಬ್ಬರಾದ ಪುರುಷೋಪಸರ್ಜನ-ಪ್ರಕೃತಿಕರ್ತೃತ್ವಮತ ಹಾಗೂ ಪ್ರಕೃತಿ ಉಪಸರ್ಜನ ಪ್ರಧಾನಕರ್ತೃತ್ವಮತ ಇವುಗಳ ನಿರಾಕರಣೆ. ಹೀಗೆ ಐದು ಅಧಿಕರಣಗಳನ್ನು ಮಾಡಿ ಐದು ಪ್ರತ್ಯೇಕ ಮತಗಳ ನಿರಾಕರಣೆ ಮಾಡಲು ಬರುವಾಗ ಅದಾವುದನ್ನೂ ಮಾಡದೇ ಎಲ್ಲವನ್ನೂ ಒಟ್ಟು ಸೇರಿಸಿ ಒಂದೇ ಅಧಿಕರಣ ಮಾಡಿರುವುದು ಸರಿಯಲ್ಲ.

**किञ्च तृतीयाध्यायस्य तृतीयपादे ''एक आत्मनः शरीरे भावात्'' इत्यधिकरणं त्वया चार्वाकमतनिरासकत्वेन व्याख्यातम् ।**

ಇನ್ನೊಂದು ದೋಷ ಏನೆಂದರೆ, ನೀನು (ಅದ್ವೈತಿ) ಮೂರನೇ ಅಧ್ಯಾಯದಲ್ಲಿ ಮೂರನೇ ಪಾದದಲ್ಲಿ 'ಏಕ ಆತ್ಮನಃ ಶರೀರೇ ಭಾವಾತ್' ಎಂಬ ಅಧಿಕರಣದಲ್ಲಿ ಚಾರ್ವಾಕಮತವನ್ನು ನಿರಾಕರಣೆ ಮಾಡಲು ಹೊರಟಿದೆ ಎಂದು ವ್ಯಾಖ್ಯಾನ ಮಾಡಿರುವಿ.

**ततो वरमत्रैव मतान्तरनिरसावसरे तन्निरासः ।**

ಚಾರ್ವಾಕಮತವನ್ನು ನಿರಾಕರಣೆ ಮಾಡುವುದಕ್ಕಿಂತ ಇತರ ಮತಗಳ ನಿರಾಕರಣೆಯ ಪ್ರಸ್ತಾಪ ಇರುವ ಎರಡನೇ ಅಧ್ಯಾಯದಲ್ಲೇ ಚಾರ್ವಾಕಮತ ನಿರಾಕರಣೆ ಮಾಡುವುದು ಉಚಿತ.

**किञ्च चिन्मात्रस्यापि कर्तृत्वभ्रान्तत्वभ्रामयितृत्वानि न युक्तानीत्युक्तम् ।**

(ಈ ಪಾದದಲ್ಲಿ ವ್ಯಾಸರಾಜರು ಅದ್ವೈತಿಯು ಯಾವ ಮತವನ್ನು ನಿರಾಕರಣೆ ಮಾಡುತ್ತಾನೋ, ಆ ಮತ ನಿರಾಕರಣೆಗೆ ಏನು ಯುಕ್ತಿಯನ್ನು ಹೇಳುತ್ತಾನೋ ಅದೆಲ್ಲವೂ ಅದ್ವೈತಿಗೇ ಅಂಟಿಕೊಳ್ಳುತ್ತದೆ ಎಂದು ನಿರೂಪಿಸುತ್ತಾರೆ. ಉದಾ: ಸಾಂಖ್ಯಮತ ನಿರಾಕರಣೆಗೆ ಏನು ದೋಷವನ್ನು ಹೇಳುತ್ತಾನೋ ಅದು ಅವನ ಮತಕ್ಕೂ ಬರುತ್ತದೆ ಎಂದು ತಿಳಿಸುತ್ತಾರೆ)

ಸಾಂಖ್ಯರನ್ನು ನೋಡಿ ಅದ್ವೈತಿಯು ಕೇವಲ ಪ್ರಧಾನಕ್ಕೆ ಜಗತ್‌ರಚಯಿತೃತ್ವ ಕೂಡುವುದಿಲ್ಲ ಎಂದು ಹೇಳುತ್ತಾನೆ. ಆದಕ್ಕೆ ನಾವು ಅವನಿಗೆ ಕೇಳುವುದು ನಿನ್ನ ಮತದಲ್ಲಿ ಜಗತ್‌ರಚಯಿತೃತ್ವ ಚಿನ್ ಮಾತ್ರಕ್ಕೆ ಕೂಡುತ್ತದೆಯೋ? ಎಂದು. ಅದು ಕೂಡುವುದಿಲ್ಲ ಏಕೆಂದರೆ, ರಚಯಿತೃತ್ವ ಎಂದರೆ ಮೂರು ಅರ್ಥ ಅವನು ಹೇಳಬಹುದು. ಕರ್ತೃತ್ವ, ಭ್ರಾಂತತ್ವ, ಭ್ರಾಮಯಿತೃತ್ವ. ಕರ್ತೃತ್ವ ಎಂದರೆ ನಾವು ಹೇಳುವಂತೆ, ಭ್ರಾಂತತ್ವ ಎಂದರೆ ಈ ಜಗತ್ತೆಲ್ಲವೂ ಆರೋಪಿತ ಚಿನ್‌ಮಾತ್ರನು ಈ ಜಗತ್ತನ್ನು ಭ್ರಮದಿಂದ ನೋಡುತ್ತಾನೆ. ಭ್ರಾಮಯಿತೃತ್ವ ಎಂದರೆ ಅವನು ಇನ್ನೊಬ್ಬರು ಭ್ರಮೆಯಿಂದ ನೋಡುವಂತೆ ಮಾಡುತ್ತಾನೆ. ಈ ಮೂರು ಅರ್ಥವೂ ಕೂಡುವುದಿಲ್ಲ ಎಂದು ನಾವು ಹಿಂದೆಯೇ ಹೇಳಿದ್ದೇವೆ. ಏಕೆಂದರೆ. ಚಿನ್‌ಮಾತ್ರನು ನಿನ್ನ ಪ್ರಕಾರ ನಿರ್ಧರ್ಮಕನಾದ್ದರಿಂದ ಅವನಲ್ಲಿ ಕರ್ತೃತ್ವವೇ ಮೊದಲಾದ ಯಾವ ಧರ್ಮವೂ ಬರಲು ಸಾಧ್ಯವಿಲ್ಲ.

**भ्रमाधिष्ठानत्वं त्वचेतनस्यापि युक्तम् ।**

ಇನ್ನು ರಚಯಿತೃತ್ವ ಎಂದರೆ ಭ್ರಮಾದಿಷ್ಠಾನತ್ವ ಎಂದರ್ಥ ಎಂದರೆ, ಈ ಭ್ರಮಾದಿಷ್ಠಾನತ್ವ ಅಚೇತನಕ್ಕೂ ಹೇಳಬಹುದು.(ಶುಕ್ತಿಯನ್ನು ನೋಡಿ ರಜತ ಎಂದು ಭ್ರಮೆ ಬಂದಾಗ ಅಲ್ಲಿ ಭ್ರಮಾಕ್ಕೆ ಅಧಿಷ್ಠಾನ ಅಚೇನತವಾದ ಶುಕ್ತಿಯೇ) ಅಚೇತನಕ್ಕೆ ಕರ್ತೃತ್ವಾದಿಗಳು ಬರದಿದ್ದರೂ ಭ್ರಮಾಧಿಷ್ಠಾನತ್ವ ಬರಬಹುದು ಎಂದು ಅಭಿಪ್ರಾಯ.

**विकारस्त्वचेतनस्यैव युक्तः ।**

ಇನ್ನು ರಜಯಿತೃತ್ವ ಎಂದರೆ ವಿಕಾರ ಎಂದರ್ಥ. ಅಂದರೆ ಜಗದಾಕಾರೇಣ (ಜಗದಾಕಾರವಾಗಿ) ಪರಿಣಾಮ ಹೊಂದುವುದು. ಇದೂ ಸರಿಯಲ್ಲ. ಪರಿಣಾಮ ಹೊಂದುವಿಕೆ ಎಂಬುದು ಅಚೇತದ್ದೇ ಧರ್ಮ ಹೊರತು ಚೇತನದ್ದಲ್ಲ.

**कर्तृत्वेतरपक्षेषु सौत्ररचनाशब्दास्वारस्यं च ।**

ರಚನಾಶಬ್ದಕ್ಕೆ ಕರ್ತೃತ್ವವನ್ನು ಬಿಟ್ಟು ಬೇರೆ ಅರ್ಥವನ್ನು ಮಾಡಿದರೆ ಆಗ ಸೂತ್ರಕ್ಕೆ ಅಸ್ವಾರಸ್ಯ ಬರುತ್ತದೆ.

**यदि च चिन्मात्र आरोपितं वाऽविद्यान्तःकरणादिविशिष्टे तात्त्विकं वा कर्तृत्वं तर्हि प्रधानेऽपि पुरुषभेदाग्रहादारोपितं वा पुरुषविशिष्टे तात्त्विकं वा चेतनत्वकर्तृत्वादिकमस्तु ।**

ಹಿಂದೆ ನಾವು ಕರ್ತೃತ್ವಾದಿಗಳು ನಿರ್ಧರ್ಮಕನಾದ ಚಿನ್‌ಮಾತ್ರನಿಗೆ ಕೂಡುವುದಿಲ್ಲ ಎಂದು ಹೇಳಿದ್ದೇವೆ. ಅದಕ್ಕೆ ಉತ್ತರವಾಗಿ ಅದ್ವೈತಿ ಹೇಳುತ್ತಾನೆ - ಕರ್ತೃತ್ವವು ಚಿನ್‌ಮಾತ್ರನಲ್ಲಿ ಆರೋಪಿತ ವಾಸ್ತವ ಅಲ್ಲ. ಹಾಗಾಗಿ ನೀವು ಹೇಳಿದ ದೋಷ ಇಲ್ಲ, ಅಥವಾ ಚಿನ್‌ಮಾತ್ರ ಎಂದರೆ ನಿರ್ಧರ್ಮಕನಾದ ಬ್ರಹ್ಮ ಅಲ್ಲ. ಅವಿದ್ಯಾ ಅಂತಃಕರಣಾದಿಗಳಿಂದ ಕೂಡಿದ ವಿಶಿಷ್ಟಚೈತನ್ಯ ಎಂದರ್ಥ. ಅವನಲ್ಲಿ ಕರ್ತೃತ್ವವು ತಾತ್ವಿಕವೇ ಆಗಿದೆ. ಆದ್ದರಿಂದ, ನೀವು ಹೇಳುವ ದೋಷ ಬರುವುದಿಲ್ಲ. ಎಂದರೆ ಸಿದ್ಧಾಂತಿಗಳು ಉತ್ತರ ಕೊಡುತ್ತಾರೆ- ಈ ರೀತಿಯಾದ ಆರೋಪಿತ ಕರ್ತೃತ್ವ ಪ್ರಧಾನದಲ್ಲಿಯೂ ಹೇಳಬಹುದು. ಪ್ರಧಾನದಲ್ಲಿಯೂ ಅನುಗ್ರಾಹಕನಾದ ಪುರುಷನಿಂದ ಭೇದ ತಿಳಿಯದೇ ಹೋದಾಗ ಕರ್ತೃತ್ವ ಕೂಡುತ್ತದೆ. ಅಥವಾ ಪುರುಷವಿಶಿಷ್ಟವಾದ ಪ್ರಧಾನಕ್ಕೆ ವಾಸ್ತವವಾದ ಕರ್ತೃತ್ವವನ್ನೇ ಹೇಳಬಹುದು.

**यत्तु परैरुक्तमचेतनस्य प्रवृत्तेरप्यनुपपत्तेरिति द्वितीयार्थ इति तन्न ।**

ಅದ್ವೈತಿಗಳು ''ಪ್ರವೃತ್ತೇಶ್ಚ'' ಎಂಬ ಎರಡನೇ ಸೂತ್ರಕ್ಕೆ ಅರ್ಥ ಮಾಡುವಾಗ ಅಚೇತನಕ್ಕೆ ಪ್ರವೃತ್ತಿಯೂ ಕೂಡುವುದಿಲ್ಲವಾದ್ದರಿಂದ (ಕರ್ತೃತ್ವ ಸರ್ವಥಾ ಇಲ್ಲ) ಎಂಬುದಾಗಿ ಹೇಳಿದ್ದಾರೆ. ಇದು ಸರಿಯಲ್ಲ.

**उदासीनस्वभावस्य चेतनस्यापि न प्रवृत्तिरित्यवश्यपरिहार्यसांख्यशङ्काया अहं करोमीत्याद्यनुभवबलेन निरासार्थं ''पयोंबुवच्च'' इत्युत्तरसूत्रेऽनुषङ्गार्थं ''रचनानुपपत्तेः'' इत्यनेनापौनरुक्तयर्थं च द्वितीयस्थस्य प्रवृत्तिपदस्य चेतनप्रवृत्तिपरताया एव न्याय्यत्वात् ।**

''ಪ್ರವೃತ್ತೇಶ್ಚ'' ಎಂಬ ಸೂತ್ರಕ್ಕೆ ನಾವು ಹೇಳಿರುವಂತೆ ಚೇತನಪ್ರವೃತ್ತಿ ಪರವಾಗಿಯೇ ಅರ್ಥವನ್ನು ಹೇಳಬೇಕು. ಅದೇ ಸರಿಯಾದ ವ್ಯಾಖ್ಯಾನ. (ಇದನು ಮೂರು ಕಾರಣಗಳಿಂದ ಸಮರ್ಥನೆ

ಮಾಡಿದ್ದಾರೆ) ನಾವು 'ರಚನಾನುಪಪತ್ತೇಃ' ಎಂಬ ಸೂತ್ರದಲ್ಲಿ ಅಚೇತನಕ್ಕೆ ರಚನಾ = ಸ್ವತಃ ಪ್ರವೃತ್ತಿ ಕೂಡುವುದಿಲ್ಲ ಎಂದು ಹೇಳಿದಾಗ ಸಾಂಖ್ಯನು ಹೀಗೆ ಪ್ರಶ್ನೆ ಮಾಡುತ್ತಾನೆ. ನೀವು ಅಚೇತನಕ್ಕೆ ಸರ್ವಪ್ರವೃತ್ತಿ ಕೂಡುವುದಿಲ್ಲ ಎಂದು ಹೇಳಿದಂತೆ ಉದಾಸೀನನಾದ್ದರಿಂದ (ಅವನ ಮತಪ್ರಕಾರ) ಚೇತನನಿಗೂ ಪ್ರವೃತ್ತಿ ಕೂಡುವುದಿಲ್ಲ ಎಂದು .ಅದಕ್ಕೆ ಉತ್ತರವಾಗಿ ''ಪ್ರವೃತ್ತೇಶ್ಚ'' ಎಂಬ ಸೂತ್ರದಲ್ಲಿ 'ಅಹಂ ಕರೋಮಿ' ನಾನು ಮಾಡುತ್ತಿದ್ದೇನೆ ಇತ್ಯಾದಿ ಅನುಭವಬಲದಿಂದ ಚೇತನನಿಗೆ ಪ್ರವೃತ್ತಿಯನ್ನು ಒಪ್ಪಬೇಕು ಎಂದು ಅವನ ಶಂಕೆಯನ್ನು ದೂರಮಾಡುವುದಕ್ಕಾಗಿ ಪ್ರವೃತ್ತಿ ಶಬ್ದಕ್ಕೆ ಚೇತನ ಪ್ರವೃತ್ತಿ ಎಂದೇ ಅರ್ಥ ಹೇಳಬೇಕು. ಇನ್ನು ಎರಡನೆಯದಾಗಿ ''ಪಯೋಂಬುವಚ್ಚೇತಿ ತತ್ರಾಪಿ'' ಎಂಬ ಮೂರನೇ ಸೂತ್ರದಲ್ಲಿ ''ಪ್ರವೃತ್ತೇಶ್ಚ'' ಎಂಬ ಸೂತ್ರದಿಂದ ಪ್ರವೃತ್ತಿ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಪ್ರವೃತ್ತಿ ಶಬ್ದಕ್ಕೆ ಚೇತನಪ್ರವೃತ್ತಿ ಎಂದರ್ಥ ಮಾಡಿದರೆ ಮಾತ್ರ ಅನುವೃತ್ತಿ ಸಫಲವಾಗುತ್ತದೆ. ಮೂರನೆಯದಾಗಿ, ಪ್ರವೃತ್ತಿ ಶಬ್ದಕ್ಕೆ ಅಚೇತನ ಪ್ರವೃತ್ತಿ ಎಂದು ಅರ್ಥ ಹೇಳಿದರೆ ''ರಚನಾನುಪಪತ್ತೇಶ್ಚ'' ಎಂಬ ಪೂರ್ವಸೂತ್ರದಿಂದ ಪೌನರುಕ್ತಿ ಎಂಬ ದೋಷ ಬರುತ್ತದೆ. ಏಕೆಂದರೆ ಮೊದಲನೇ ಸೂತ್ರದಲ್ಲಿ ಅಚೇತನಕ್ಕೆ ಪ್ರವೃತ್ತಿ ಕೂಡುವುದಿಲ್ಲ ಎಂದೇ ಹೇಳಲಾಗಿದೆ.

**तव पूर्वसूत्रे निर्दिष्टस्यानुपपत्तेरित्यस्येहानुषङ्गः ।**

ನಿನ್ನ ಪ್ರಕಾರ ಪೂರ್ವಸೂತ್ರದಲ್ಲಿರುವ 'ಅನುಪಪತ್ತೇಃ' ಎಂಬ ಶಬ್ದವನ್ನು ಬುಧ್ಯಾ, ವಿವೇಕ ಮಾಡಿಕೊಂಡು ಏಕದೇಶವಾದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಇದು ಸ್ವರಸವಲ್ಲ.

**मम तु नानुमानम् । किन्तु चेतन एवेति पूर्वसूत्र एव प्रकृतस्य चेतनस्य ।**

ನಮ್ಮ ಪ್ರಕಾರ ಅನುಮಾನ (ಪ್ರಕೃತಿ) ಸ್ವತಃ ಪ್ರವೃತ್ತಿವುಳ್ಳದ್ದು ಅಲ್ಲ ಹೊರತು ಚೇತನವೇ ಎಂದು ಹಿಂದಿನ ಸೂತ್ರದಲ್ಲಿ ಪ್ರಕೃತ(ಪ್ರಸಕ್ತ)ವಾದ ಚೇತನ ಎಂಬ ಅಂಶವನ್ನು ಮಾತ್ರ ಸ್ವೀಕರಿಸಬೇಕು. ಐದು ಹೆಚ್ಚು ಸ್ವರಸ (ಹಾಗೂ ಲಾಘವ ಎಂಬ ಗುಣವೂ ಇದೆ)

**सांख्यशङ्काया अवश्यपरिहार्यत्वादेव हि त्वयापि ''ननु चेतनस्यापि न प्रवृत्तिः'' इति चोद्यपूर्वकं ''सत्यमेवम् । तथापि'' इत्यादिना सा सूत्राद्बहिरेव परिहृता ।**

ಹಿಂದೆ ಹೇಳಿದಂತೆ ಸಾಂಖ್ಯರು ಮಾಡುವ ಪ್ರಶ್ನೆಗೆ ಅವಶ್ಯವಾಗಿ ಉತ್ತರ ಕೊಡಲೇಬೇಕು. ಅದಕ್ಕಾಗಿ ನೀನೂ ಕೂಡ ''ನನು ಚೇತನಸ್ಯಾಪಿ ನ ಪ್ರವೃತ್ತಿರಿತಿ ಚೋದ್ಯಪೂರ್ವಕಂ'' ''ಸತ್ಯಮೇವಂ ತಥಾಪಿ'' ಎಂಬ ನಿನ್ನ ಭಾಷ್ಯದಲ್ಲಿ ಸೂತ್ರಾರೂಢವಾಗಿ ಅಲ್ಲದಿದ್ದರೂ ಸೂತ್ರಾತ್ ಬಹಿಃ ಈ ಪ್ರಶ್ನೆಗೆ ಉತ್ತರ ಕೊಟ್ಟಿದ್ದೀಯ. ಅದರ ಬದಲಾಗಿ ಸೂತ್ರಾರೂಢವಾಗಿಯೇ ಉತ್ತರ ಕೊಡುವುದು ಹೆಚ್ಚು ಸೂಕ್ತ.

**प्रकाशः –**

भाष्यादावदूषणे बीजमाह – **भाष्यकारेणेति** ।। ननु चार्वाकमततितुच्छत्वान्न दूष्यमित्यत आह – **किञ्चेति** ।।

ಚಾರ್ವಾಕಮತವು ಅತಿತುಚ್ಛವಾಗಿದೆಯಾದ್ದರಿಂದ ನಿರಾಕರಣೆಗೆ ಯೋಗ್ಯವಲ್ಲ ಎಂದರೆ ಅದಕ್ಕೆ ಉತ್ತರವನ್ನು 'ಕಿಂಚ' ಎಂಬ ಗ್ರಂಥದಿಂದ ಹೇಳುತ್ತಿದ್ದಾರೆ.

**प्रकाशः –** ''देहव्यतिरक्तात्मनस्सद्भावस्समर्थ्यत'' इति ''एके लोकायतिका'' इति च परभाष्योक्तेरिति भावः ।

ಪರರು (ಶಂಕರರು) ತಮ್ಮ ಭಾಷ್ಯದಲ್ಲಿ "ದೇಹವ್ಯತಿರಿಕ್ತಾತ್ಮನಃ ಸದ್ಭಾವಃ ಸಮರ್ಥ್ಯತೇ'' ದೇಹಕ್ಕಿಂತ ಅತಿರಿಕ್ತವಾದ ಆತ್ಮ ಇದೆ ಎಂಬುದನ್ನು ಸಮರ್ಥಿಸುತ್ತೇವೆ. "ಏಕೇ ಲೋಕಾಯತಿಕಾಃ'' ಎಂಬಲ್ಲಿ "ಏಕ ಆತ್ಮನಃ'' ಎಂಬ ಸೂತ್ರದಲ್ಲಿರುವ ಏಕೇ ಎಂಬ ಶಬ್ದಕ್ಕೆ ಲೋಕಾಯತಿಕರು (ಚಾರ್ವಾಕರು) ಎಂದರ್ಥ ಎಂದು ಹೇಳಿ ಚಾರ್ವಾಕರ ನಿರಾಕರಣೆಯನ್ನು ಮಾಡಿದ್ದಾರೆ.

**प्रकाशः –** एतच्चाद्वैतिमते । रामानुजमते तु ''उपासकश्चात्मा ज्ञातृत्वकर्तृत्वाद्याकारतयैव नानुसन्धेयः । किं त्वपहतपाप्मत्वाद्याकारतयापि'' इत्येवंपरतया व्याख्यानात् ।

"ಏಕೇ ಆತ್ಮನಃ ಶರೀರೇ ಭಾವಾತ್'' ಎಂಬ ಸೂತ್ರಕ್ಕೆ ಅದ್ವೈತಿಗಳು ಚಾರ್ವಾಕಮತ ನಿರಾಕರಣ-ರೂಪವಾಗಿ ಅರ್ಥ ಹೇಳುತ್ತಾರೆ ರಾಮಾನುಜಮತದಲ್ಲಿ.

"ಉಪಾಸಕಶ್ಚಾತ್ಮಾ ಜ್ಞಾತೃತ್ವಕರ್ತೃತ್ವಾದ್ಯಾಕಾರತಯೈವ ನಾನುಸಂಧೇಯಃ'' ಉಪಾಸಕನಾದ ಆತ್ಮನನ್ನು ಕೇವಲ ಜ್ಞಾತೃತ್ವ, ಕರ್ತೃತ್ವ ಮೊದಲಾದ ಆಕಾರವುಳ್ಳವನು ಎಂದಾಗಿ ಅಷ್ಟೇ ತಿಳಿಯದೆ, "ಕಿಂತು ಅಪಹತಪಾಪ್ಮತ್ವಾದ್ಯಾಕಾರತಯಾಪಿ'' ಎಲ್ಲಾ ಪಾಪಗಳಿಂದಲೂ ದೂರವಾದವನು ಎಂಬುದಾಗಿಯೂ ತಿಳಿಯಬೇಕು ಎಂಬುದಾಗಿ ವ್ಯಾಖ್ಯಾನ ಮಾಡಲಾಗಿದೆ.

**प्रकाशः –** अद्वैतमते दोषान्तरमाह – **किञ्चेति** ।।

ಅದ್ವೈತಮತದಲ್ಲಿ ಇನ್ನೊಂದು ದೋಷವನ್ನು ಹೇಳುತ್ತಿದ್ದಾರೆ 'ಕಿಂಚ' ಎಂಬ ಗ್ರಂಥದಿಂದ.

**प्रकाशः – उक्तमिति** ।। इतरव्यपदेशादित्यादौ ।।

ಚಿನ್ಮಾತ್ರಕ್ಕೆ ಕರ್ತೃತ್ವಾದಿಗಳು ಕೂಡುವುದಿಲ್ಲ ಎಂಬುದನ್ನು "ಇತರವ್ಯಪದೇಶಾತ್'' ಎಂಬ ಇದೇ ಮೊದಲಾದ ಸೂತ್ರಗಳಲ್ಲಿ ಹೇಳಲಾಗಿದೆ.

**प्रकाशः – कर्तृत्वेतरेति** ।। उक्तेषु चतुर्षु पक्षेष्वित्यर्थः ।

'ಕರ್ತೃತ್ವೇತರಪಕ್ಷೇಷು' ಎಂಬುದಕ್ಕೆ ಹಿಂದೆ ಹೇಳಿರುವ ನಾಲ್ಕು ಪಕ್ಷಗಳ ಮಧ್ಯದಲ್ಲಿ ಎಂದರ್ಥ.ಅಂದರೆ, ಭ್ರಾಂತತ್ವ, ಭ್ರಾಮಯಿತೃತ್ವ, ಭ್ರಮಾಧಿಷ್ಠಾನತ್ವ ಮತ್ತು ಕರ್ತೃತ್ವ ಎಂಬ ಈ ನಾಲ್ಕು ಪಕ್ಷಗಳಲ್ಲಿ ಸೂತ್ರಸ್ವಾರಸ್ಯ ಇಲ್ಲ ಎಂದರ್ಥ.

**ಪ್ರಕಾಶಃ –** ''प्रवृत्तेश्च'' इति सूत्रार्थं प्रत्याचष्टे ।। **यत्त्विति ।।**

''ಪ್ರವೃತ್ತೇಶ್ಚ'' ಎಂಬ ಸೂತ್ರಕ್ಕೆ ಪರರು ಮಾಡುವ ಅರ್ಥ ಸರಿಯಲ್ಲ ಎಂಬುದನ್ನು 'ಯತ್ತು' ಎಂಬುದರಿಂದ ಹೇಳುತ್ತಿದ್ದಾರೆ.

**ಪ್ರಕಾಶಃ –** रामानुजमते ''प्राज्ञाधिष्ठिताचेतनस्यैव कार्यारम्भप्रवृत्तेर्दर्शनात्'' इति व्याख्यानात्परैरित्युक्तिः ।

ರಾಮಾನುಜ ಮತದಲ್ಲಿ ''ಪ್ರವೃತ್ತೇಶ್ಚ'' ಎಂಬ ಸೂತ್ರಕ್ಕೆ ''ಪ್ರಾಜ್ಞಾಧಿಷ್ಠಿತಾಚೇತನಸ್ಯೈವ ಕಾರ್ಯಾರಂಭ ಪ್ರವೃತ್ತೇರ್ದರ್ಶನಾತ್'' (ಬುದ್ಧಿಪೂರ್ವಕವಾದ ಚೇತನನಿಂದ ಕೂಡಿದ ಅಚೇತನಕ್ಕೆ ಕಾರ್ಯವನ್ನು ಮಾಡುವುದರಲ್ಲಿ ಪ್ರವೃತ್ತಿಯು ಕಂಡಿರುವುದರಿಂದ) ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಹಾಗಾಗಿ ಚಂದ್ರಿಕಾದಲ್ಲಿ 'ಪರೈಃ' ಎಂದರೆ ಅದ್ವೈತಿಗಳಿಂದ ಎಂದು ತಿಳಿಯಬೇಕು.

**ಪ್ರಕಾಶಃ –** टीकोक्तमनुभवमाह – **अहमिति ।।**

ಟೀಕಾದಲ್ಲಿ ಹೇಳಿರುವ ಅನುಭವವನ್ನು ಹೇಳುತ್ತಿದ್ದಾರೆ ''ಅಹಂ''ಎಂಬ ವಾಕ್ಯದಿಂದ.

**ಪ್ರಕಾಶಃ – अनुषङ्गार्थमिति ।।** ''अपिपदं चेतनप्रवृत्तेराकर्षणार्थम्'' इति टीकोक्तेस्त्वयापि ''तत्रापीत्यस्य पर्योऽबुनोश्चैतन्याधिष्ठितयोरेव प्रवृत्तिरित्यनुमिमीमह'' इति भाषणादिति भावः ।।

ಅಪಿಪದವು 'ಚೇತನಪ್ರವೃತ್ತೇಃ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳುವುದಕ್ಕಾಗಿ ಎಂದು ಟೀಕಾದಲ್ಲಿ ಹೇಳಿರುವುದರಿಂದ. ನೀನೂ ಕೂಡ ನಿನ್ನ ಭಾಷ್ಯದಲ್ಲಿ 'ತತ್ರಾಪಿ' ಎಂಬಲ್ಲಿ ಚೈತನ್ಯನಿಂದ ಕೂಡಿದ ಪಯೋಂಬುಗಳಿಗೇ ಪ್ರವೃತ್ತಿ ಎಂಬುದಾಗಿ ಊಹಿಸಿಕೊಳ್ಳುತ್ತೇನೆ ಎಂದು ಹೇಳಿರುವುದರಿಂದ ಅನಷಂಗಾರ್ಥಂ ಎಂದಿದ್ದು ಸರಿಯಾಗಿದೆ ಎಂದರ್ಥ.

**ಪ್ರಕಾಶಃ – नानुमानमिति ।।** न प्रधानं स्वतः प्रवृत्तिमत् । किन्तु चेतन एव तथेत्यर्थसिद्धये प्रकृतस्येत्यर्थः ।। **चेतनस्येति ।।** अनुषङ्ग इत्यन्वयः । त्वयापि भाष्यकृतेत्यर्थः ।

ಪ್ರಧಾನವು ಸ್ವತಃ ಪ್ರವೃತ್ತಿ ಉಳ್ಳದ್ದಾಗಿಲ್ಲ ಹೊರತು ಚೇತನವೇ ಸ್ವತಃ ಪ್ರವೃತ್ತಿ ಉಳ್ಳದ್ದಾಗಿದೆ ಎಂಬ ವಿಷಯ ಸಿದ್ಧವಾಗುವಾಗ ಪ್ರಸಕ್ತವಾದ ಚೇತನ ಎಂದರ್ಥ. 'ಚೇತನಸ್ಯ' ಎಂಬ ಪದವನ್ನು 'ಅನುಷಂಗ' ಎಂಬ ಪದದೊಂದಿಗೆ ಅನ್ವಯ ಮಾಡಿಕೊಳ್ಳಬೇಕು. 'ತ್ವಯಾಪಿ' ಎಂದರೆ ಭಾಷ್ಯಕಾರನಾದ ನಿನ್ನಿಂದಲೂ ಎಂದರ್ಥ.

ಪುನರುಕ್ತಿ ದೋಷಗಳನ್ನು ಅದ್ವೈತಿಗಳಿಗೆ ಪರಿಹರಿಸಲಾಗದು

## तात्पर्यचन्द्रिका

**ननु कार्यरूपेण स्वतः परिणामो रचना । तदर्थासत्वरजस्तमसां साम्यावस्थातः स्वतः प्रच्युत्तिः प्रवृत्तिरित्यपौनरुक्तयमिति चेन्न ।**

(ಹಿಂದೆ ನಾವು ''ರಚನಾನುಪತ್ತೇಶ್ಚ'' ಮತ್ತು ''ಪ್ರವೃತ್ತೇಃ'' ಎಂಬ ಸೂತ್ರಗಳಿಗೆ ಪುನರುಕ್ತಿ ಎಂಬ ದೋಷ ಹೇಳಿದ್ದೇವೆ. ಅದನ್ನು ಅದ್ವೈತಿಯು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ)

ಆಕ್ಷೇಪ - ರಚನಾ' ಶಬ್ದಕ್ಕೂ 'ಪ್ರವೃತ್ತಿ' ಶಬ್ದಕ್ಕೂ ಅರ್ಥವ್ಯತ್ಯಾಸ ಇದೆ. 'ರಚನಾ' ಎಂದರೆ ಕಾರ್ಯರೂಪೇಣ = ಮಹದಾದಿಕಾರ್ಯರೂಪವಾಗಿ ಪರಿಣಾಮ ಹೊಂದುವುದು ಎಂದರ್ಥ.

ಈ ಮಹದಾದಿಕಾರ್ಯರೂಪವಾಗಿ ಪರಿಣಾಮ ಹೊಂದುವುದಕ್ಕಾಗಿ ಪ್ರಳಯಕಾಲದಲ್ಲಿ ಸತ್ವರಜಸ್ತಮೋಗುಣಗಳಲ್ಲಿ ಇದ್ದ ಸಾಮ್ಯಾವಸ್ಥೆಯಲ್ಲಿ ಉಂಟಾಗುವ ವ್ಯತ್ಯಾಸವೇ ಪ್ರವೃತ್ತಿ ಎಂದು ಕರೆಸಿಕೊಳ್ಳುತ್ತದೆ.

(ಸಾಂಖ್ಯರ ಪ್ರಕ್ರಿಯೆ ಹೀಗಿದೆ - ಪ್ರಳಯಕಾಲದಲ್ಲಿ ಸತ್ವರಜಸ್ತಮೋಗುಣಗಳಲ್ಲಿ ಸಾಮ್ಯಾವಸ್ಥೆ ಇರುತ್ತದೆ. ಸೃಷ್ಟಿಕಾಲ ಬಂದಾಗ ಈ ಸಾಮ್ಯಾವಸ್ಥೆಯಿಂದ ಸ್ವತಃ ಪ್ರಚ್ಯುತಿ (ವ್ಯತ್ಯಾಸ) ಉಂಟಾಗುತ್ತದೆ. ಇದೇ ಪ್ರವೃತ್ತಿ. ಅನಂತರ, ಪ್ರಚ್ಯುತಿಯನ್ನು ಹೊಂದಿದ ತ್ರಿಗುಣಗಳು ಮಹತ್ತತ್ವವೇ ಮೊದಲಾದ ಕಾರ್ಯರೂಪದಿಂದ ಪರಿಣಾಮ ಹೊಂದುತ್ತವೆ. ಇದೇ ರಚನಾ) ಹೀಗೆ ಅರ್ಥವ್ಯತ್ಯಾಸ ಇರುವುದರಿಂದ ಒಂದೊಂದು ಸೂತ್ರದಲ್ಲಿ ಒಂದೊಂದರ ಖಂಡನೆ ಮಾಡಿರುವುದರಿಂದ ಪೌನರುಕ್ತಿ ಇರುವುದಿಲ್ಲ.

**तथापि ''अङ्गित्वानुपपत्तेः'' इत्यनेन पुनरुक्तेः ।**

ಹಿಂದೆ ಹೇಳಿದಂತೆ ನೀವು ಪುನರುಕ್ತಿ ಪರಿಹಾರ ಮಾಡಿಕೊಂಡರೂ ''ಪ್ರವೃತ್ತೇಃ'' ಎಂಬ ಸೂತ್ರಕ್ಕೂ ''ಅಂಗಿತ್ವಾನುಪಪತ್ತೇಃ'' ಎಂಬ ಸೂತ್ರಕ್ಕೂ ಪುನರುಕ್ತಿ ಬಂದೇ ಬರುತ್ತದೆ.

**तस्यापि त्वया ''साम्यावस्थात्यागेनाङ्गाङ्गिभावानुपपत्तेः'' इति व्याख्यातत्वात्।**

''ಅಂಗಿತ್ವಾನುಪಪತ್ತೇಃ'' ಎಂಬ ಸೂತ್ರಕ್ಕೂ ನೀನು (ತ್ರಿಗುಣಗಳು) ಸಾಮ್ಯಾವಸ್ಥೆಯನ್ನು ಬಿಟ್ಟು ಅಂಗಾಗಿಭಾವವನ್ನು (ಗುಣಪ್ರಧಾನಭಾವವನ್ನು) ಹೊಂದುವುದು ಕೂಡುವುದಿಲ್ಲ ಎಂದೇ ವ್ಯಾಖ್ಯಾನ ಮಾಡಿದ್ದೀಯೆ.''ಪ್ರವೃತ್ತೇಶ್ಚ'' ಎಂಬ ಸೂತ್ರದಲ್ಲಿಯೂ ಇದೇ ವಿಷಯ ಹೇಳಿರುವುದರಿಂದ ಪುನರುಕ್ತಿ ಬರುತ್ತದೆ.

**यच्च यथा वत्सविवृद्ध्यर्थमचेतनं पयः स्वत एव प्रवर्तते लोकोपकारार्थं च अम्बु स्यन्दते । तथा प्रधानमपीति तृतीये शङ्कांशार्थ इति तन्न ।**

'ಕರ್ತೃತ್ವೇತರಪಕ್ಷೇಷು' ಎಂಬುದಕ್ಕೆ ಹಿಂದೆ ಹೇಳಿರುವ ನಾಲ್ಕು ಪಕ್ಷಗಳ ಮಧ್ಯದಲ್ಲಿ ಎಂದರ್ಥ.ಅಂದರೆ, ಭ್ರಾಂತತ್ವ, ಭ್ರಾಮಯಿತೃತ್ವ, ಭ್ರಮಾಧಿಷ್ಠಾನತ್ವ ಮತ್ತು ಕರ್ತೃತ್ವ ಎಂಬ ಈ ನಾಲ್ಕು ಪಕ್ಷಗಳಲ್ಲಿ ಸೂತ್ರಸ್ವಾರಸ್ಯ ಇಲ್ಲ ಎಂದರ್ಥ.

**प्रकाशः –** ''प्रवृत्तेश्च'' इति सूत्रार्थं प्रत्याचष्टे ।। **यत्त्विति ।।**

''ಪ್ರವೃತ್ತೇಶ್ಚ'' ಎಂಬ ಸೂತ್ರಕ್ಕೆ ಪರರು ಮಾಡುವ ಅರ್ಥ ಸರಿಯಲ್ಲ ಎಂಬುದನ್ನು 'ಯತ್ತು' ಎಂಬುದರಿಂದ ಹೇಳುತ್ತಿದ್ದಾರೆ.

**प्रकाशः –** रामानुजमते ''प्राज्ञाधिष्ठिताचेतनस्यैव कार्यारम्भप्रवृत्तेर्दर्शनात्'' इति व्याख्यानात्परैरित्युक्तिः ।

ರಾಮಾನುಜ ಮತದಲ್ಲಿ ''ಪ್ರವೃತ್ತೇಶ್ಚ'' ಎಂಬ ಸೂತ್ರಕ್ಕೆ ''ಪ್ರಾಜ್ಞಾಧಿಷ್ಠಿತಾಚೇತನಸ್ಯೈವ ಕಾರ್ಯಾರಂಭ ಪ್ರವೃತ್ತೇರ್ದರ್ಶನಾತ್'' (ಬುದ್ಧಿಪೂರ್ವಕವಾದ ಚೇತನನಿಂದ ಕೂಡಿದ ಅಚೇತನಕ್ಕೆ ಕಾರ್ಯವನ್ನು ಮಾಡುವುದರಲ್ಲಿ ಪ್ರವೃತ್ತಿಯು ಕಂಡಿರುವುದರಿಂದ) ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಹಾಗಾಗಿ ಚಂದ್ರಿಕಾದಲ್ಲಿ 'ಪರೈಃ' ಎಂದರೆ ಅದ್ವೈತಿಗಳಿಂದ ಎಂದು ತಿಳಿಯಬೇಕು.

**प्रकाशः –** टीकोक्तमनुभवमाह – **अहमिति ।।**

ಟೀಕಾದಲ್ಲಿ ಹೇಳಿರುವ ಅನುಭವವನ್ನು ಹೇಳುತ್ತಿದ್ದಾರೆ ''ಅಹಂ''ಎಂಬ ವಾಕ್ಯದಿಂದ.

**प्रकाशः – अनुषङ्गार्थमिति ।।** ''अपिपदं चेतनप्रवृत्तेराकर्षणार्थम्'' इति टीकोक्तेस्त्वयापि ''तत्रापीत्यस्य पयोऽम्बुनोश्चैतन्याधिष्ठितयोरेव प्रवृत्तिरित्यनुमिमीमह'' इति भाषणादिति भावः ।।

ಅಪಿಪದವು 'ಚೇತನಪ್ರವೃತ್ತೇಃ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳುವುದಕ್ಕಾಗಿ ಎಂದು ಟೀಕಾದಲ್ಲಿ ಹೇಳಿರುವುದರಿಂದ. ನೀನೂ ಕೂಡ ನಿನ್ನ ಭಾಷ್ಯದಲ್ಲಿ 'ತತ್ರಾಪಿ' ಎಂಬಲ್ಲಿ ಚೈತನ್ಯನಿಂದ ಕೂಡಿದ ಪಯೋಂಬುಗಳಿಗೇ ಪ್ರವೃತ್ತಿ ಎಂಬುದಾಗಿ ಊಹಿಸಿಕೊಳ್ಳುತ್ತೇನೆ ಎಂದು ಹೇಳಿರುವುದರಿಂದ ಅನಷಂಗಾರ್ಥಂ ಎಂದಿದ್ದು ಸರಿಯಾಗಿದೆ ಎಂದರ್ಥ.

**प्रकाशः – नानुमानमिति ।।** न प्रधानं स्वतः प्रवृत्तिमत् । किन्तु चेतन एव तथेत्यर्थसिद्धये प्रकृतस्येत्यर्थः ।। **चेतनस्येति ।।** अनुषङ्ग इत्यन्वयः । त्वयापि भाष्यकृतेत्यर्थः ।

ಪ್ರಧಾನವು ಸ್ವತಃ ಪ್ರವೃತ್ತಿ ಉಳ್ಳದ್ದಾಗಿಲ್ಲ ಹೊರತು ಚೇತನವೇ ಸ್ವತಃ ಪ್ರವೃತ್ತಿ ಉಳ್ಳದ್ದಾಗಿದೆ ಎಂಬ ವಿಷಯ ಸಿದ್ಧವಾಗುವಾಗ ಪ್ರಸಕ್ತವಾದ ಚೇತನ ಎಂದರ್ಥ. 'ಚೇತನಸ್ಯ' ಎಂಬ ಪದವನ್ನು 'ಅನುಷಂಗ' ಎಂಬ ಪದದೊಂದಿಗೆ ಅನ್ವಯ ಮಾಡಿಕೊಳ್ಳಬೇಕು. 'ತ್ವಯಾಪಿ' ಎಂದರೆ ಭಾಷ್ಯಕಾರನಾದ ನಿನ್ನಿಂದಲೂ ಎಂದರ್ಥ.

ಪುನರುಕ್ತಿ ದೋಷಗಳನ್ನು ಅದ್ವೈತಿಗಳಿಗೆ ಪರಿಹರಿಸಲಾಗದು

**तात्पर्यचन्द्रिका**

**ननु कार्यरूपेण स्वतः परिणामो रचना । तदर्थासत्वरजस्तमसां साम्यावस्थातः स्वतः प्रच्युतिः प्रवृत्तिरित्यपौनरुक्तयमिति चेन्न ।**

(ಹಿಂದೆ ನಾವು "ರಚನಾನುಪತ್ತೇಶ್ಚ" ಮತ್ತು "ಪ್ರವೃತ್ತೇಃ" ಎಂಬ ಸೂತ್ರಗಳಿಗೆ ಪುನರುಕ್ತಿ ಎಂಬ ದೋಷ ಹೇಳಿದ್ದೇವೆ. ಅದನ್ನು ಅದ್ವೈತಿಯು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ)

ಆಕ್ಷೇಪ - ರಚನಾ' ಶಬ್ದಕ್ಕೂ 'ಪ್ರವೃತ್ತಿ' ಶಬ್ದಕ್ಕೂ ಅರ್ಥವ್ಯತ್ಯಾಸ ಇದೆ. 'ರಚನಾ' ಎಂದರೆ ಕಾರ್ಯರೂಪೇಣ = ಮಹದಾದಿಕಾರ್ಯರೂಪವಾಗಿ ಪರಿಣಾಮ ಹೊಂದುವುದು ಎಂದರ್ಥ.

ಈ ಮಹದಾದಿಕಾರ್ಯರೂಪವಾಗಿ ಪರಿಣಾಮ ಹೊಂದುವುದಕ್ಕಾಗಿ ಪ್ರಳಯಕಾಲದಲ್ಲಿ ಸತ್ವರಜಸ್ತಮೋಗುಣಗಳಲ್ಲಿ ಇದ್ದ ಸಾಮ್ಯಾವಸ್ಥೆಯಲ್ಲಿ ಉಂಟಾಗುವ ವ್ಯತ್ಯಾಸವೇ ಪ್ರವೃತ್ತಿ ಎಂದು ಕರೆಸಿಕೊಳ್ಳುತ್ತದೆ.

(ಸಾಂಖ್ಯರ ಪ್ರಕ್ರಿಯೆ ಹೀಗಿದೆ - ಪ್ರಳಯಕಾಲದಲ್ಲಿ ಸತ್ವರಜಸ್ತಮೋಗುಣಗಳಲ್ಲಿ ಸಾಮ್ಯಾವಸ್ಥೆ ಇರುತ್ತದೆ. ಸೃಷ್ಟಿಕಾಲ ಬಂದಾಗ ಈ ಸಾಮ್ಯಾವಸ್ಥೆಯಿಂದ ಸ್ವತಃ ಪ್ರಚ್ಯುತಿ (ವ್ಯತ್ಯಾಸ) ಉಂಟಾಗುತ್ತದೆ. ಇದೇ ಪ್ರವೃತ್ತಿ. ಅನಂತರ, ಪ್ರಚ್ಯುತಿಯನ್ನು ಹೊಂದಿದ ತ್ರಿಗುಣಗಳು ಮಹತ್ತತ್ವವೇ ಮೊದಲಾದ ಕಾರ್ಯರೂಪದಿಂದ ಪರಿಣಾಮ ಹೊಂದುತ್ತವೆ. ಇದೇ ರಚನಾ) ಹೀಗೆ ಅರ್ಥವ್ಯತ್ಯಾಸ ಇರುವುದರಿಂದ ಒಂದೊಂದು ಸೂತ್ರದಲ್ಲಿ ಒಂದೊಂದರ ಖಂಡನೆ ಮಾಡಿರುವುದರಿಂದ ಪೌನರುಕ್ತಿ ಇರುವುದಿಲ್ಲ.

**तथापि "अङ्गित्वानुपपत्तेः" इत्यनेन पुनरुक्तेः ।**

ಹಿಂದೆ ಹೇಳಿದಂತೆ ನೀವು ಪುನರುಕ್ತಿ ಪರಿಹಾರ ಮಾಡಿಕೊಂಡರೂ "ಪ್ರವೃತ್ತೇಃ" ಎಂಬ ಸೂತ್ರಕ್ಕೂ "ಅಂಗಿತ್ವಾನುಪಪತ್ತೇಃ" ಎಂಬ ಸೂತ್ರಕ್ಕೂ ಪುನರುಕ್ತಿ ಬಂದೇ ಬರುತ್ತದೆ.

**तस्यापि त्वया "साम्यावस्थात्यागेनाङ्गाङ्गिभावानुपपत्तेः" इति व्याख्यातत्वात्।**

"ಅಂಗಿತ್ವಾನುಪಪತ್ತೇಃ" ಎಂಬ ಸೂತ್ರಕ್ಕೂ ನೀನು (ತ್ರಿಗುಣಗಳು) ಸಾಮ್ಯಾವಸ್ಥೆಯನ್ನು ಬಿಟ್ಟು ಅಂಗಾಗಿಭಾವವನ್ನು (ಗುಣಪ್ರಧಾನಭಾವವನ್ನು) ಹೊಂದುವುದು ಕೂಡುವುದಿಲ್ಲ ಎಂದೇ ವ್ಯಾಖ್ಯಾನ ಮಾಡಿದ್ದೀಯೆ."ಪ್ರವೃತ್ತೇಶ್ಚ" ಎಂಬ ಸೂತ್ರದಲ್ಲಿಯೂ ಇದೇ ವಿಷಯ ಹೇಳಿರುವುದರಿಂದ ಪುನರುಕ್ತಿ ಬರುತ್ತದೆ.

**यच्च यथा वत्सविवृद्ध्यर्थमचेतनं पयः स्वत एव प्रवर्तते लोकोपकारार्थं च अम्बु स्यन्दते । तथा प्रधानमपीति तृतीये शङ्कांशार्थ इति तन्न ।**

(''ಪಯೋಂಬುವಚ್ಚೇತ್ ತತ್ರಾಪಿ'' ಎಂಬ ಸೂತ್ರಕ್ಕೆ ಮಾಡಿರುವ ವ್ಯಾಖ್ಯಾನ ತಪ್ಪು ಎಂಬುದನ್ನು ಹೇಳುತ್ತಿದ್ದಾರೆ)

ಈ ಸೂತ್ರಕ್ಕೆ ಪೂರ್ವಪಕ್ಷವನ್ನು ಮಾಡಿಕೊಳ್ಳುತ್ತಾ, ಹೇಗೆ ಕರುವಿನ ಬೆಳವಣಿಗೆಗಾಗಿ ಹಸುವಿನ ಕೆಚ್ಚಲಲ್ಲಿರುವ ಹಾಲು ಅಚೇನತವಾಗಿದ್ದರೂ ಪ್ರವೃತ್ತವಾಗುತ್ತದೋ (ಸುರಿಯುತ್ತದೋ) ಮತ್ತು ಲೋಕೋಪಕಾರಕ್ಕಾಗಿ ಹೇಗೆ ನದಿಯ ನೀರು ಸ್ವತಃ ಹರಿಯುತ್ತದೋ ಹಾಗೇ ಪ್ರಧಾನವೂ ಕೂಡ ಸ್ವತಃ ಪ್ರವೃತ್ತಿ ಉಳ್ಳದ್ದಾಗುತ್ತದೆಂದು ಹೇಳಿರುವಿ. ಇದು ತಪ್ಪು.

**मम रीत्या ''एतेन ह्वाव पयो मण्डं भवति'' इति श्रुत्यनुसारिसौत्रपरिहारानुसारेण पयः परमप्रकृते चेतननिरपेक्षाचेतनस्य परिणामे दृष्टान्तः । अम्बु तु तादर्थ्येन प्रकृते प्रवृत्तिमात्रे दृष्टान्त इति दृष्टान्तद्वयसाफल्यसंभवे तत्त्यागायोगात्।**

ನಿನ್ನ ಪ್ರಕಾರ ಅರ್ಥವ್ಯತ್ಯಾಸ ಇಲ್ಲವಾದ್ದರಿಂದ ಸೂತ್ರದಲ್ಲಿ ಹಾಲು ಹಾಗೂ ನೀರಿನಂತೆ ಎಂದು ಎರಡು ದೃಷ್ಟಾಂತ ಕೊಟ್ಟಿರುವುದು ವ್ಯರ್ಥ. ನಮ್ಮ ಪ್ರಕಾರ ಎರಡು ದೃಷ್ಟಾಂತವು ಬೇರೆ ಬೇರೆ ವಿಷಯಕ್ಕೋಸ್ಕರವಾದ್ದರಿಂದ ಸಫಲ. ಅದು ಹೇಗೆಂದರೆ (ಹಾಲು ಸ್ವತಃ ಮೊಸರಾಗುವಂತೆ ಎಂಬ ದೃಷ್ಟಾಂತ) ಪ್ರಧಾನವಿಷಯವಾದ ಚೇತನನ ಅಪೇಕ್ಷೆ ಇಲ್ಲದೇ ಅಚೇತನಕ್ಕೆ ಪರಿಣಾಮ ಇದೆ ಎಂಬ ವಿಷಯದಲ್ಲಿ ಮೊದಲನೆಯ ದೃಷ್ಟಾಂತ. ಇದರ ಪರಿಹಾರವನ್ನು ಸೂತ್ರದಲ್ಲಿ ಮಾಡಿದ್ದಾರೆ. ಆ ಪರಿಹಾರವು ''ಏತೇನ ಹ ವಾವ ಪಯೋ ಮಂಡಂ ಭವತಿ'' (ಪರಮಾತ್ಮನಿಂದಲೇ ಹಾಲು ಮೊಸರಾಗಿ ಪರಿಣಾಮ ಹೊಂದುತ್ತದೆ) ಎಂಬ ಶ್ರುತಿಗೆ ಅನುಸಾರಿಯಾಗಿದೆ.

ಎರಡನೆಯ ನೀರಿನ ದೃಷ್ಟಾಂತವು ಪ್ರಧಾನವಿಷಯಕ್ಕೆ ಅನುಕೂಲವಾಗುವಂತೆ ಪ್ರಸಕ್ತವಾದ ಪ್ರವೃತ್ತಿಮಾತ್ರದಲ್ಲಿ ತಿಳಿಯಬೇಕು.

(ಅಚೇತನಕ್ಕೆ ಪರಿಣಾಮವಿದೆ ಎಂಬ ವಿಷಯದಲ್ಲಿ ಹಾಲಿನ ದೃಷ್ಟಾಂತ. ಅಚೇತನಕ್ಕೆ ಸ್ವತಃ ಪ್ರವೃತ್ತಿ ಇದೆ ಎಂಬ ವಿಷಯದಲ್ಲಿ ನೀರಿನ ದೃಷ್ಟಾಂತ ಎಂದು ತಿಳಿಯಬೇಕು)

ಹೀಗೆ ಎರಡು ದೃಷ್ಟಾಂತ ಹೇಳಿ ಪ್ರಯೋಜನ ತೋರಿಸಲು ಬರುವಾಗ ಅದನ್ನು ಕೈಬಿಟ್ಟು ಒಂದೇ ದೃಷ್ಟಾಂತ ಎಂದು ಹೇಳುವುದು ಸರಿಯಲ್ಲ.

**पयसो धेन्विच्छादिनैव प्रवृत्त्या स्वतःप्रवृत्तौ दृष्टान्तत्वायोगाच्च ।**

ಇನ್ನೂ ಒಂದು ಕಾರಣದಿಂದ ನಿಮ್ಮ ಪ್ರಕಾರ ದೃಷ್ಟಾಂತ ಸರಿಯಾಗುವುದಿಲ್ಲ. ಹಾಲಿನ ಪ್ರವೃತ್ತಿಯು (ಸುರಿಯುವಿಕೆಯು) ಹಸುವಿನ ಇಚ್ಛೆಯಿಂದಲೇ ಆಗುತ್ತದೆ ಹೊರತು ತಾನಾಗಿಯೇ ಆಗುವುದಿಲ್ಲ. ಆದ್ದರಿಂದ ನೀವು ಅಚೇತನವಸ್ತುವಿನ ಸ್ವತಃಪ್ರವೃತ್ತಿವಿಷಯದಲ್ಲಿ ಈ ದೃಷ್ಟಾಂತ ಹೇಳುವುದು ಕೂಡುವುದಿಲ್ಲ.

**प्रकाशः –**

''सत्वरजस्तमसां साम्यावस्थानात्प्रच्युतानामङ्गाङ्गिरूपापत्तिः प्रवृत्तिः'' इति परभाष्योक्तं हृदि कृत्वा ''अपौनरुक्त्यार्थं च'' इत्येतद्दृढीकर्तुं तन्मतेऽपौनरुक्त्यमाशङ्क्य निराह – **नन्विति** ।।

ಶಂಕರಭಾಷ್ಯದಲ್ಲಿ ಹೀಗಿದೆ - ಸತ್ವರಜಸ್ತಮೋಗುಣಗಳಲ್ಲಿ ಮೊದಲಿದ್ದ ಸಾಮ್ಯಾವಸ್ಥೆಯು ಪ್ರಚ್ಯುತವಾಗಿ ಅಂಗಾಂಗಿಭಾವವು (ಗುಣಪ್ರಧಾನಭಾವ) ಬಂದೊದಗಿತೋ ಅದೇ ಪ್ರವೃತ್ತಿ ಎಂದು. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಹಿಂದೆ 'ಅಪೌನರುಕ್ತ್ಯರ್ಥಂ ಚ' ಎಂಬುದಾಗಿ ಪುನರುಕ್ತಿ ಬರಬಾರದು ಎಂಬ ದೃಷ್ಟಿಯಿಂದ 'ಪ್ರವೃತ್ತಿ' ಶಬ್ದಕ್ಕೆ 'ಚೇತನಪ್ರವೃತ್ತಿ' ಎಂಬರ್ಥ ಹೇಳಬೇಕು ಎಂದಿದ್ದರೋ ಅದನ್ನು ಸ್ಪಷ್ಟಮಾಡುವುದಕ್ಕಾಗಿ ಅವನ ಮತದ ಪ್ರಕಾರ ಪುನರುಕ್ತಿ ಇಲ್ಲ ಎಂದು ಶಂಕೆ ಮಾಡಿಕೊಂಡು ನಿರಾಕರಿಸುತ್ತಿದ್ದಾರೆ 'ನನು' ಎಂಬ ಗ್ರಂಥದಿಂದ.

**प्रकाशः** – अङ्गाङ्गिभावो गुणानामन्योन्यं गुणप्रधानभावः । ''पयोऽम्बुवच्चेत्तत्रापि'' इत्येतदर्थं निराह – **यच्चेति** ।। परैरुक्तमिति वर्तते ।। **शङ्कांशेति** ।। परिहारार्थो न विरोधीति भावः ।

ಅಂಗಾಂಗಿಭಾವ ಎಂದರೆ ಗುಣಗಳಿಗೆ ಪರಸ್ಪರ ಉಂಟಾಗುವ ಗುಣಪ್ರಧಾನಭಾವ. (ಹೆಚ್ಚು ಕಡಿಮೆ ಎಂದರ್ಥ) 'ಪಯೋಂಬುವಚ್ಚೇತ್ ತತ್ರಾಪಿ'' ಎಂಬ ಸೂತ್ರಕ್ಕೆ ಪರರು ಹೇಳುವ ಅರ್ಥವನ್ನು ನಿರಾಕರಿಸುತ್ತಿದ್ದಾರೆ 'ಯಚ್ಚ' ಎಂಬ ಗ್ರಂಥದಿಂದ. 'ಪರರಿಂದ ಹೇಳಲ್ಪಟ್ಟ' ಎಂದು ಇಟ್ಟುಕೊಳ್ಳಬೇಕು. ಇಲ್ಲಿ ಅದ್ವೈತಿಗಳು ''ಪಯೋಂಬುವಚ್ಚೇತ್'' ಎಂಬ ಸೂತ್ರದಲ್ಲಿ ಏನು ಶಂಕಾ ಮಾಡಿಕೊಂಡಿದ್ದಾರೋ ಅದು ಸರಿಯಲ್ಲ ಎಂಬುದಷ್ಟೇ ಆಕ್ಷೇಪ, ಅವರು ಹೇಳಿರುವ ಪರಿಹಾರದಲ್ಲಿ ನಮ್ಮ ವಿರೋಧ ಇಲ್ಲ ಎಂದರ್ಥ.

**प्रकाशः** – तादर्थ्येन परिणामार्थेन । एतेन दध्यादिपरिणामप्रवृत्तये पयोवन्नारिकेलादिरसविशेषपरिणामप्रवृत्ताम्बुवच्चेतनानधिष्ठितं प्रधानं जगद्रूपपरिणामप्रवृत्तिनिमित्तमिति रामानुजमतार्थोऽपि प्रत्युक्तः ।

'ತಾದರ್ಥ್ಯೇನ' ಎಂಬ ಶಬ್ದಕ್ಕೆ ಪರಿಣಾಮಾರ್ಥೇನ ಎಂದರ್ಥ. ಪ್ರಧಾನಪ್ರಮೇಯವಾದ ಅಚೇತನಕ್ಕೆ ಸ್ವತಃ ಕೂಡಬೇಕಾದರೆ ಪ್ರವೃತ್ತಿ ಇರಬೇಕು. ಹಾಗಾಗಿ ಪರಿಣಾಮಕ್ಕೋಸ್ಕರ ಪ್ರಸಕ್ತವಾದದ್ದು ಪ್ರವೃತ್ತಿ.

ನಾವು ಶಂಕರಮತವನ್ನು ಖಂಡನೆ ಮಾಡಿದ್ದರಿಂದಲೇ ರಾಮಾನುಜಮತವನ್ನೂ ಖಂಡನೆ ಮಾಡಿದಂತಾಯಿತು. ರಾಮಾನುಜರು ಹೀಗೆ ಹೇಳುತ್ತಾರೆ - ಹಾಲು ಮೊಸರಾಗಿ ಪರಿಣಾಮ ಹೊಂದುವಂತೆ, ಎಳನೀರೇ ಮೊದಲಾದ ರೀತಿಯಿಂದ ತೆಂಗಿನ ಮರದ ಬುಡದಲ್ಲಿ ಹಾಕಿದ ನೀರು ಪರಿಣಾಮರೂಪವವಾದ ಪ್ರವೃತ್ತಿ ಹೊಂದುವಂತೆ ಚೇತನನಿಂದ ಅಧಿಷ್ಠಾನವಾಗದ ಪ್ರಧಾನವೂ ಜಗದ್‌ರೂಪವಾದ ಪರಿಣಾಮಪ್ರವೃತ್ತಿಗೆ ನಿಮಿತ್ತವಾಗುತ್ತದೆ ಎಂದು.

'ದೃಷ್ಟಾಂತದ್ವಯಸಾಫಲ್ಯಾಭಾವಾತ್' ಎರಡು ದೃಷ್ಟಾಂತ ಹೇಳಿರುವುದು ವ್ಯರ್ಥವಾಗುತ್ತದಾದ್ದರಿಂದ ರಾಮಾನುಜರ ವ್ಯಾಖ್ಯಾನವೂ ತಪ್ಪು.

### ಅದ್ವೈತಿಗಳ ನಾಕನೆಯ ಸೂತ್ರ ವ್ಯಾಖ್ಯಾನ ನಿರಾಕರಣೆ

## तात्पर्यचन्द्रिका

**यच्चोक्तं कार्योत्पादने प्रधानव्यतिरेकेणापेक्षणीयस्यानवस्थितेः प्रधानं न सहकार्यंतरापेक्षम् । ततश्च सदा कार्यं स्यादिति चतुर्थार्थ इति तन्न ।**

('ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷ್ಯತ್ವಾತ್' ಎಂಬ ನಾಕನೆಯ ಸೂತ್ರಕ್ಕೆ ಅದ್ವೈತಿಗಳು ಮಾಡಿರುವ ವ್ಯಾಖ್ಯಾನ ಸರಿಯಲ್ಲ ಎಂಬುದನ್ನು ಹೇಳುತ್ತಿದ್ದಾರೆ)

ಮಹದಾದಿಕಾರ್ಯದ ಉತ್ಪತ್ತಿಯಲ್ಲಿ ಪ್ರಧಾನವನ್ನು ಬಿಟ್ಟು ಬೇರೆ ಯಾವ ಅಪೇಕ್ಷಣೀಯವಾದ ವಸ್ತು ಇಲ್ಲವಾದ್ದರಿಂದ ಪ್ರಧಾನವು ಯಾವ ಸಹಕಾರಿಯನ್ನೂ ಅಪೇಕ್ಷಿಸುವುದಿಲ್ಲ. ಆದ್ದರಿಂದ ಯಾವಾಗಲೂ (ಪ್ರಳಯಕಾಲದಲ್ಲಿಯೂ) ಕಾರ್ಯವು ಹುಟ್ಟಬೇಕಾಗುತ್ತದೆ ಎಂದು ಅದ್ವೈತಿ ಏನು ಹೇಳಿದ್ದಾನೋ - ಇದು ಸರಿಯಲ್ಲ.

(ಪ್ರಧಾನ ಒಂದೇ ಕಾರ್ಯದ ಉತ್ಪತ್ತಿಯಲ್ಲಿ ಕಾರಣ ಎಂದು ಒಪ್ಪಿದರೆ ಪ್ರಧಾನವು ಸದಾ ಇರುವುದರಿಂದ ಕಾರ್ಯದ ಉತ್ಪತ್ತಿ ಸದಾ ಆಗಬೇಕಾಗುತ್ತದೆ. ಸಹಕಾರಿಯನ್ನು ಒಪ್ಪಿದರೆ ಆಗ ಆ ಸಹಕಾರಿ ಇಲ್ಲವಾದ್ದರಿಂದ ಕಾರ್ಯದ ಉತ್ಪತ್ತಿ ಆಗಲಿಲ್ಲ ಎಂದು ಹೇಳಬಹುದು. ಆದರೆ ಈಗ ಸಾಧ್ಯವಿಲ್ಲ ಎಂದರ್ಥ)

**मम रीत्या तृतीयसूत्रप्रकृतेश्वरस्य व्यतिरेकप्रतियोगित्वेन द्वितीयसूत्रप्रकृत-चेतनप्रवृत्तेश्चानवस्थितेरित्यनेनान्वयं स्वीकृत्य ''चेतनस्यापीशव्यतिरेकेण यदा न प्रवृत्तिस्तदा जडस्य नेति किमु वाच्यम्'' इति सुधोक्तमार्गेण कैमुत्यन्यायपरत्वसम्भवे बह्वध्याहारायोगात् ।**

ನಮ್ಮ ಪ್ರಕಾರ ಸೂತ್ರಾರ್ಥ ಸಾಧುವಾಗಿದೆ. ನಾವು 'ವ್ಯತಿರೇಕಾನವಸ್ಥಿತೇಃ' ಎನ್ನುವಲ್ಲಿ 'ವ್ಯತಿರೇಕ' (ಬಿಟ್ಟು) ಎಂಬುದಕ್ಕೆ ಪ್ರತಿಯೋಗಿ(ಯಾವುದನ್ನು) ಮೂರನೆಯ ಸೂತ್ರದಲ್ಲಿ 'ತತ್ರಾಪಿ' ಎನ್ನುವಲ್ಲಿ ಪ್ರಸಕ್ತನಾದ ಈಶ್ವರನನ್ನು ಇಟ್ಟುಕೊಂಡಿದ್ದೇವೆ. ಆದ್ದರಿಂದ ಈಶ್ವರನನ್ನು ಬಿಟ್ಟು ಎಂದರ್ಥವಾಗುತ್ತದೆ. ಎರಡನೆಯ ಸೂತ್ರದಲ್ಲಿ ಪ್ರಸಕ್ತವಾದ ಚೇತನಪ್ರವೃತ್ತಿಯನ್ನು 'ಅನವಸ್ಥಿತೇಃ' ಎಂಬ ಪದದೊಂದಿಗೆ ಅನ್ವಯ (ಸಂಬಂಧ) ಮಾಡಿಕೊಂಡಿದ್ದೇವೆ. ಆಗ, ಚೇತನಪ್ರವೃತ್ತಿ ಕೂಡದೇ ಇರುವುದರಿಂದ ಎಂದರ್ಥವಾಗುತ್ತದೆ. ಒಟ್ಟು ಸೂತ್ರಾರ್ಥ ಸುಧಾದಲ್ಲಿ ಹೇಳಿರುವಂತೆ ಹೀಗಾಗುತ್ತದೆ - ಚೇತನಪ್ರವೃತ್ತಿ ಈಶ್ವರನನ್ನು ಬಿಟ್ಟು ಆಗುವುದಿಲ್ಲವೆಂದ ಮೇಲೆ ಜಡವಾದ ಪ್ರಧಾನದ ಪ್ರವೃತ್ತಿಯು ಈಶ್ವರನನ್ನು ಬಿಟ್ಟು ಆಗುವುದಿಲ್ಲ ಎಂದು ಮತ್ತೆ ಹೇಳುವುದೇನಿದೆ ? ಎಂಬ ಕೈಮುತ್ಯ ನ್ಯಾಯವನ್ನು ಅನುಸರಿಸಿ ಅರ್ಥ

ಹೇಳಲಾಗಿದೆ. ಹೀಗೆ ಅರ್ಥ ಹೇಳಲು ಬರುವಾಗ ಅನೇಕ ಅಧ್ಯಾಹಾರ (ಊಹೆ) ಮಾಡಿಕೊಂಡು ಅರ್ಥೈಸುವುದು ಸರಿಯಲ್ಲ.

೧. (ಬಹು ಅಧ್ಯಾಹಾರವು ಹೀಗೆ - ಮೊದಲನೆಯದಾಗಿ 'ವ್ಯತಿರೇಕ' ಎಂಬ ಶಬ್ದದ ಪ್ರತಿಯೋಗಿಯಾದ ಪ್ರಧಾನದ ಅಧ್ಯಾಹಾರ. ಎರಡನೆಯದಾಗಿ 'ಅನವಸ್ಥಿತೇಃ' ಎಂಬಲ್ಲಿ ಯಾವುದರ ಅನವಸ್ಥಾನ ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಅಪೇಕ್ಷಣೀಯವಾದ ಬೇರೆ ವಸ್ತುವಿನ ಎಂದು ಅಪ್ರಕೃತವಾದದ್ದನ್ನೇ ಅಧ್ಯಾಹಾರ ಮಾಡಿದ್ದುರೆ. ಮೂರನೆಯದಾಗಿ ಅಪಾದ್ಯವನ್ನೇ ಅಧ್ಯಾಹಾರ ಮಾಡಿದ್ದಾರೆ. ಪ್ರಧಾನ ಒಂದೇ ಕಾರಣ ಎಂದರೆ ಸದಾಕಾಲ ಕಾರ್ಯದ ಉತ್ಪತ್ತಿ ಆಗಬೇಕಾಗುತ್ತದೆ ಎಂಬುದೇ ಆಪಾದ್ಯ)

೨. (ಕೈಮುತ್ಯನ್ಯಾಯ ಎಂದರೆ ದೊಡ್ಡ ಕಾರ್ಯವನ್ನೇ ಸಾಧಿಸಿದ ಮೇಲೆ ಸಣ್ಣ ಕಾರ್ಯ ಯಾವ ಲೆಕ್ಕ! ಸಮುದ್ರವನ್ನೇ ಲಂಘಿಸಿದ ಹನುಮಂತನಿಗೆ ಕೆರೆ ದಾಟುವುದು ಯಾವ ಲೆಕ್ಕ ಎಂಬಂತೆ)

**सांख्यमतेऽपि कर्मादेरपेक्षणीयस्य सत्त्वाच्च ।**

ನೀವು ಸಾಂಖ್ಯಮತವನ್ನು ಅನುವಾದ ಮಾಡಿದ್ದೂ ತಪ್ಪು. ಅವರೂ ಕೂಡ ಕಾರ್ಯದ ಉತ್ಪತ್ತಿಯಲ್ಲಿ ಪ್ರಧಾನ ಕರ್ಮ ಕಾಲ ಇತ್ಯಾದಿಯನ್ನು ಕಾರಣವೆಂದು ಒಪ್ಪುತ್ತಾರೆ. ಹಾಗಾಗಿ ಪ್ರಧಾನ ಒಂದೇ ಕಾರಣ ಎಂದು ಹೇಳಿದ್ದು ಸರಿಯಲ್ಲ.

**प्रकाशः –**

दृष्टान्तद्वयसाफल्याभावात् । ''व्यतिरेकानवस्थितेश्चानपेक्षत्वात्'' इत्येतदर्थं निराह – **यच्चोक्तमिति** ।। परैरित्यस्ति ।। **सुधोक्तेति** ।। टीकायां प्रवृत्तिमात्रस्यैव तथात्वोक्तेरिति भावः ।। **बहिति** ।। अयं च दोषो रामानुजमतेऽपि बोध्यः ।

ಎರಡು ದೃಷ್ಟಾಂತಗಳಿಗೆ ಸಾಫಲ್ಯ ಇಲ್ಲದ ಕಾರಣ 'ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷ್ಯತ್ವಾತ್' ಎಂಬ ಸೂತ್ರಕ್ಕೆ ಪರರು ಮಾಡಿರುವ ಅರ್ಥವನ್ನು ನಿರಾಕರಿಸುತ್ತಿದ್ದಾರೆ. 'ಪರೈಃ' ಎಂಬುದನ್ನು ಇಟ್ಟುಕೊಳ್ಳಬೇಕು. ಸುಧಾದಲ್ಲಿ ಹೇಳಿರುವಂತೆ ಕೈಮುತ್ಯನ್ಯಾಯಾನುಸಾರಿಯಾಗಿ ಅರ್ಥ ಹೇಳಿದ್ದಾರೆ. ಟೀಕಾದಲ್ಲಿ ಎಲ್ಲ ಪ್ರವೃತ್ತಿಗೂ ಈಶ್ವರ ಪ್ರೇರಣೆ ಬೇಕು ಎಂಬುದಾಗಿ ಅರ್ಥ ಹೇಳಿದ್ದಾರೆ. ಬಹಳ ಅಧ್ಯಾಹಾರ ಎಂಬ ದೋಷವನ್ನು ರಾಮಾನುಜ ಮತದಲ್ಲಿಯೂ ತಿಳಿಯಬೇಕು.

**प्रकाशः** – तन्मते ''सत्यसङ्कल्पेश्वराधिष्ठानानपेक्षपरिणामित्वे सर्गव्यतिरेकेण प्रतिसर्गावस्थयाऽनवस्थितिप्रसङ्गाच्च'' इत्यर्थवर्णनात् । प्रमेयदोषं चाह – **साङ्ख्येति**।। **कर्मेति** ।। अदृष्टदेशकालादेरित्यर्थः।

ಅವರ ಮತದಲ್ಲಿ ''ಸತ್ಯಸಂಕಲ್ಪನಾದ ಈಶ್ವರನ ಇರುವಿಕೆಯ ಅಪೇಕ್ಷೆ ಇಲ್ಲದೇ ಪರಿಣಾಮ ಆಗುತ್ತದೆ ಎಂದು ಒಪ್ಪಿದರೆ ಸರ್ಗ(ಸೃಷ್ಟಿ) ಕಾಲ ಬಿಟ್ಟು ಪ್ರತಿಸರ್ಗ (ಪ್ರಳಯ) ಕಾಲದಲ್ಲಿಯೂ ಕಾರ್ಯೋತ್ಪತ್ತಿ ಆಗಬೇಕಾದ್ದರಿಂದ ಪ್ರಳಯಕಾಲವೇ ಇಲ್ಲದಾಗುತ್ತದೆ. ಇಲ್ಲಿಯವರೆಗೆ ಬಹು ಅಧ್ಯಾಹಾರ ಎಂಬ

ಶಬ್ದದೋಷವನ್ನು ಹೇಳಿ ಈಗ ಪ್ರಮೇಯ (ಅರ್ಥ) ದೋಷ ಹೇಳುತ್ತಿದ್ದಾರೆ ಸಾಂಖ್ಯ ಎಂಬ ಗ್ರಂಥದಿಂದ. ಚಂದ್ರಿಕಾದಲ್ಲಿ ಕರ್ಮಾದಿ ಎಂದು ಹೇಳಿದ್ದಾರೆ. ಅಲ್ಲಿ ಆದಿಪದದಿಂದ ಅದೃಷ್ಟ, ದೇಶ, ಕಾಲ ಮೊದಲಾದವನ್ನು ಇಟ್ಟುಕೊಳ್ಳಬೇಕು ಎಂದರ್ಥ.

**प्रकाशः** – यत्तु भामत्यामेतदाशङ्क्य धर्मस्याधर्मप्रतिबन्धोपयोगकथनेन समाधानं तन्न । तथाप्यपेक्षाया अनिवृत्तेरिति भावः ।

ಭಾಮತಿಯಲ್ಲಿ ನಾವು ಹೇಳಿದ ದೋಷಕ್ಕೆ ಸಮಾಧಾನ ಹೇಳಿದ್ದಾನೆ. ಅದೇನೆಂದರೆ, ಮಹದಾದಿಕಾರ್ಯದ ಉತ್ಪತ್ತಿಯಲ್ಲಿ ಪ್ರಾಣಿಗಳ ಧರ್ಮ (ಪುಣ್ಯ) ಎಂಬ ಸಹಕಾರಿ ಇರುವಾಗ ಸಹಕಾರಿ ಇಲ್ಲ ಎಂದು ಹೇಗೆ ಹೇಳುತ್ತೀರಿ ? ಎಂದು ಪ್ರಶ್ನೆ ಮಾಡಿಕೊಂಡು. ಧರ್ಮ ಎಂಬುದು ಮಹದಾದಿಕಾರ್ಯದ ಉತ್ಪತ್ತಿಯಲ್ಲಿ ನೇರವಾಗಿ ಸಹಾಯ ಮಾಡುವುದಿಲ್ಲ. ಅದು ಕೇವಲ ಕಾರ್ಯೋತ್ಪತ್ತಿಯಲ್ಲಿ ಪ್ರತಿಬಂಧಕವಾದ ಅಧರ್ಮವನ್ನು ತೊಲಗಿಸುತ್ತದೆ. ಆದ್ದರಿಂದ ಪ್ರಧಾನಕ್ಕೆ ಸಹಕಾರ್ಯಂತರ ಇಲ್ಲ ಎಂದಿದ್ದು ಸರಿಯಾಗುತ್ತದೆ ಎಂದು. ಈ ಸಮಾಧಾನವು ಸರಿಯಲ್ಲ. ನೀವು ಹೇಳುವಂತೆ ಧರ್ಮ (ಅದೃಷ್ಟ) ನೇರವಾಗಿ ಸಹಕಾರಿಯಾಗದಿದ್ದರೂ ಪರಂಪರಯಾ ಸಹಕಾರಿ ಆಗುತ್ತದೆ. ಆದ್ದರಿಂದ ಸಹಕಾರಿ ಯಾವುದೂ ಇಲ್ಲ ಎಂದು ಹೇಳಿದ್ದು ಅಸಿದ್ಧವಾಗುತ್ತದೆ. ಬೇರೆ ಸಹಕಾರಿಯ ಅಪೇಕ್ಷೆ ಇದ್ದೇ ಇದೆ.

(ಅದ್ವೈತಿಗಳು ಸಾಂಖ್ಯಮತಕ್ಕೆ ಹೇಳಿದ ದೋಷ ಸರಿಯಲ್ಲ, ಸಾಂಖ್ಯನು ಆ ದೋಷವನ್ನು ಪರಿಹಾರ ಮಾಡಿಕೊಳ್ಳುತ್ತಾನೆ.)

### 'ಅನ್ಯತ್ರಾಭಾವಾಚ್ಚ' ಎಂಬ ಸೂತ್ರವ್ಯಾಖ್ಯಾನ ನಿರಾಕರಣೆ

## तात्पर्यचन्द्रिका

**यच्चोक्तं तृणादेः स्वत एव क्षीरभाववत् प्रधानस्यापीति न युक्तम् । धेनुशरीरादन्यत्र तृणादेस्तदभावदिति पञ्चमार्थ इति तन्न ।**

("ಅನ್ಯತ್ರಾಭಾವಾಚ್ಚ ನ ತೃಣಾದಿವತ್" ಎಂಬ ಸೂತ್ರಕ್ಕೆ ಅದ್ವೈತಿಗಳು ಮಾಡುವ ಅರ್ಥ ಸರಿಯಲ್ಲ ಎಂಬುದನ್ನು ಹೇಳುತ್ತಿದ್ದಾರೆ)

ಸಾಂಖ್ಯರು ಹೇಳುವಂತೆ ಹುಲ್ಲು ತಾನಾಗಿಯೇ ಹಸುವಿನ ಉದರದಲ್ಲಿ ಹಾಲಾಗಿ ಹೇಗೆ ಪರಿಣಾಮ ಹೊಂದುತ್ತದೋ ಹಾಗೇ ಪ್ರಧಾನವೂ ಕೂಡ ಸ್ವತಃ ಪರಿಣಾಮ ಹೊಂದುತ್ತದೆಂದು, ಅದು ಸರಿಯಲ್ಲ. ಏಕೆಂದರೆ, ಇದೇ ಹುಲ್ಲು ಎತ್ತಿನ ಹೊಟ್ಟೆಯಲ್ಲಿ ಹಾಲಾಗಿ ಪರಿಣಾಮ ಹೊಂದುವುದಿಲ್ಲ. ಆದ್ದರಿಂದ ಅದ್ವೈತಿಯ ವ್ಯಾಖ್ಯಾನ ಸರಿಯಲ್ಲ.

**मम रीत्याऽवश्यनिरसनीयसेश्वरसाङ्ख्यमतनिरासकत्वसम्भवे ''पयोऽम्बुवत्'' इति न्यायनिरस्ततृणादिदृष्टान्तान्तरनिरासकत्वायोगात् ।**

ನಮ್ಮ ಪ್ರಕಾರ, ನಿರೀಶ್ವರಸಾಂಖ್ಯರ ನಿರಾಕರಣೆ ಆದಮೇಲೆ ಅವಶ್ಯವಾಗಿ ನಿರಾಕರಣೆಗೆ ಯೋಗ್ಯರಾದ ಸೇಶ್ವರಸಾಂಖ್ಯರ ನಿರಾಕರಣಪರವಾಗಿ ಅರ್ಥ ಮಾಡಲು ಬರುವಾಗ ನೀವು ಹೇಳಿದಂತೆ

ಸೂತ್ರಾರ್ಥ ಮಾಡುವುದು ಸರಿಯಲ್ಲ. ಮತ್ತು "ಪಯೋಂಬುವಚ್ಚೇತ್" ಎಂಬ ಹಿಂದಿನ ಸೂತ್ರದಲ್ಲಿ ಹೇಳಿರುವ ನ್ಯಾಯದಿಂದಲೇ ತೃಣಾದಿದೃಷ್ಟಾಂತವೂ ನಿರಸ್ತವಾಗುವುದರಿಂದ ಅದನ್ನು ನಿರಾಕರಣೆ ಮಾಡಲು ಇನ್ನೊಂದು ಸೂತ್ರ ಹೊರಡುವುದು ಸರಿಯಲ್ಲ.

(ಹಾಲು ಹೇಗೆ ಸ್ವತಃ ಪರಿಣಾಮ ಹೊಂದುವುದಿಲ್ಲವೋ ಹಾಗೇ ತೃಣವೂ ಕೂಡ ಎಂದು ಹಿಂದಿನ ನ್ಯಾಯದಿಂದಲೇ ನಿರಸ್ತವಾಗಿದೆ ಎಂದರ್ಥ)

**यद्यपीह टीकायां ''व्यतिरेक'' इति तुरीयसूत्रमयस्कान्तादिदृष्टान्तान्तरनिरासार्थं प्रतिभाति तथाप्यस्मिन् पक्षेऽपरितोषादेव सुधायां ''यत्'' इत्यादिना कैमुत्यन्यायार्थत्वमिति पक्षान्तरमुक्तम् ।**

ಪ್ರಶ್ನೆ- ತೃಣದೃಷ್ಟಾಂತವನ್ನು ನಿರಾಕರಣೆ ಮಾಡಲು ಇನ್ನೊಂದು ಸೂತ್ರ ಹೊರಡಬೇಕಾಗಿಲ್ಲ ಅದು ಹಾಲಿನ ದೃಷ್ಟಾಂತವನ್ನು ನಿರಾಕರಣೆ ಮಾಡುವ ಸೂತ್ರದಿಂದಲೇ ನಿರಾಕೃತವಾಗಿದೆ ಎಂದು ಅದ್ವೈತಿಗಳಿಗೆ ಹೇಳಿದ ದೋಷ ನಮಗೂ ಬರುತ್ತದೆ. ಹೇಗೆಂದರೆ, ಟೀಕಾದಲ್ಲಿ "ವ್ಯತಿರೇಕಾನವಸ್ಥಿತೇಃ" ಎಂಬ ಸೂತ್ರದಲ್ಲಿ ಅಯಸ್ಕಾಂತದ ದೃಷ್ಟಾಂತವನ್ನು ಶಂಕಾ ಮಾಡಿಕೊಂಡು ಅದಕ್ಕೆ ಉತ್ತರವಾಗಿ ಸೂತ್ರವನ್ನು ವ್ಯಾಖ್ಯಾನಿಸಿದ್ದಾರೆ. ಈ ಅಯಸ್ಕಾಂತದೃಷ್ಟಾಂತವೂ ಪಯೋದೃಷ್ಟಾಂತನಿರಾಸದಿಂದಲೇ ನಿರಸ್ತವಾಗಿರುವುದರಿಂದ ಇದರ ನಿರಾಕರಣೆಗೆ ಬೇರೆ ಸೂತ್ರ ಹೇಳಬೇಕಾಗಿಲ್ಲ.

ಉತ್ತರ - ಟೀಕಾರಾಯರು ಟೀಕಾದಲ್ಲಿ "ವ್ಯತಿರೇಕಾನವಸ್ಥಿತೇಶ್ಚ" ಎಂಬ ಸೂತ್ರಕ್ಕೆ ಏನು ಅರ್ಥವನ್ನು ಹೇಳಿದ್ದಾರೋ, ಅದರಲ್ಲಿ ಸಂತೃಪ್ತಿಯನ್ನು ಹೊಂದದೆ ಸುಧಾದಲ್ಲಿ ಕೈಮುತ್ಯನ್ಯಾಯವನ್ನು ಅನುಸರಿಸಿ ಬೇರೆ ರೀತಿಯಾಗಿ ಅರ್ಥ ಹೇಳಿದ್ದಾರೆ. ಅದರಿಂದಲೇ ಈ ಪ್ರಶ್ನೆಗೆ ಉತ್ತರ ಹೇಳಿದಂತಾಗಿದೆ.

**किञ्च परमते पूर्वपादोक्तेन ''क्षीरवद्धि'' इत्यनेन विरोधः ।**

ಅದ್ವೈತಿಗಳ ಪ್ರಕಾರ ಇಲ್ಲಿ ಹೇಳಿದ, ಚೇತನನ ಅಪೇಕ್ಷೆ ಇಲ್ಲದೇ ಹಾಲು ಮೊದಲಾದವು ಸ್ವತಃ ಪರಿಣಾಮ ಹೊಂದುವುದಿಲ್ಲ ಎಂಬುದು ಹಿಂದಿನ ಪಾದದಲ್ಲಿ "ಉಪಸಂಹಾರದರ್ಶನಾನ್ನೇತಿ ಚೇನ್ನ ಕ್ಷೀರವದ್ಧಿ" ಎಂಬ ಸೂತ್ರದಲ್ಲಿ ಹೇಳಿರುವ ಅರ್ಥದಿಂದ ವಿರುದ್ಧವಾಗಿದೆ. ಅಲ್ಲಿ ಹಾಲು ಸ್ವತಃ ಪರಿಣಾಮ ಹೊಂದುತ್ತದೆ ಎಂದು ಸಿದ್ಧಾಂತಭಾಗದಲ್ಲಿ ಹೇಳಿದ್ದಾರೆ.

**तत्र लोकदृष्ट्या क्षीरं नैरपेक्ष्ये दृष्टान्तितम् । अत्र तु शास्त्रदृष्ट्या सापेक्षत्वोक्तिरिति चेन्न ।**

ಈ ಆಕ್ಷೇಪಕ್ಕೆ ಅದ್ವೈತಿಯು ಹೀಗೆ ಸಮಾಧಾನ ಹೇಳುತ್ತಾನೆ - ಹಿಂದೆ "ಕ್ಷೀರವದ್ಧಿ"ಎಂಬಲ್ಲಿ ಲೋಕದೃಷ್ಟಿಯನ್ನು ಅನುಸರಿಸಿ ನೈರಪೇಕ್ಷದಲ್ಲಿ ಹಾಲಿನ ದೃಷ್ಟಾಂತವನ್ನು ಹೇಳಿದ್ದೇವೆ. ಇಲ್ಲಿ ಶಾಸ್ತ್ರದೃಷ್ಟಿಯನ್ನು ಅನುಸರಿಸಿ ಅದೇ ಹಾಲಿನ ದೃಷ್ಟಾಂತವನ್ನು ಸಾಪೇಕ್ಷವಾಗಿ ಹೇಳಿದ್ದೇವೆ ಎಂದು. ಇದೂ ಸರಿಯಲ್ಲ. ಶಾಸ್ತ್ರದೃಷ್ಟಿಯಲ್ಲಿ ಹಾಲು ಚೇತನನನ್ನು ಅಪೇಕ್ಷಿಸದೇ ಪರಿಣಾಮ ಹೊಂದುವುದಿಲ್ಲ ಎಂದಾದರೆ ಆಗ ಹಿಂದಿನ ದೃಷ್ಟಾಂತದಲ್ಲಿ (ಹಾಲು ಚೇತನನ ಅಪೇಕ್ಷೆ ಇಲ್ಲದೇ ಪರಿಣಾಮ

ಶಬ್ದದೋಷವನ್ನು ಹೇಳಿ ಈಗ ಪ್ರಮೇಯ (ಅರ್ಥ) ದೋಷ ಹೇಳುತ್ತಿದ್ದಾರೆ ಸಾಂಖ್ಯ ಎಂಬ ಗ್ರಂಥದಿಂದ. ಚಂದ್ರಿಕಾದಲ್ಲಿ ಕರ್ಮಾದಿ ಎಂದು ಹೇಳಿದ್ದಾರೆ. ಅಲ್ಲಿ ಆದಿಪದದಿಂದ ಅದೃಷ್ಟ, ದೇಶ, ಕಾಲ ಮೊದಲಾದವನ್ನು ಇಟ್ಟುಕೊಳ್ಳಬೇಕು ಎಂದರ್ಥ.

**ಪ್ರಕಾಶಃ** – यत्तु भामत्यामेतदाशङ्क्य धर्मस्याधर्मप्रतिबन्धोपयोगकथनेन समाधानं तन्न । तथाप्यपेक्षाया अनिवृत्तेरिति भावः ।

ಭಾಮತಿಯಲ್ಲಿ ನಾವು ಹೇಳಿದ ದೋಷಕ್ಕೆ ಸಮಾಧಾನ ಹೇಳಿದ್ದಾನೆ. ಅದೇನೆಂದರೆ, ಮಹದಾದಿಕಾರ್ಯದ ಉತ್ಪತ್ತಿಯಲ್ಲಿ ಪ್ರಾಣಿಗಳ ಧರ್ಮ (ಪುಣ್ಯ) ಎಂಬ ಸಹಕಾರಿ ಇರುವಾಗ ಸಹಕಾರಿ ಇಲ್ಲ ಎಂದು ಹೇಗೆ ಹೇಳುತ್ತೀರಿ ? ಎಂದು ಪ್ರಶ್ನೆ ಮಾಡಿಕೊಂಡು. ಧರ್ಮ ಎಂಬುದು ಮಹದಾದಿಕಾರ್ಯದ ಉತ್ಪತ್ತಿಯಲ್ಲಿ ನೇರವಾಗಿ ಸಹಾಯ ಮಾಡುವುದಿಲ್ಲ. ಅದು ಕೇವಲ ಕಾರ್ಯೋತ್ಪತ್ತಿಯಲ್ಲಿ ಪ್ರತಿಬಂಧಕವಾದ ಅಧರ್ಮವನ್ನು ತೊಲಗಿಸುತ್ತದೆ. ಆದ್ದರಿಂದ ಪ್ರಧಾನಕ್ಕೆ ಸಹಕಾರ್ಯಂತರ ಇಲ್ಲ ಎಂದಿದ್ದು ಸರಿಯಾಗುತ್ತದೆ ಎಂದು. ಈ ಸಮಾಧಾನವು ಸರಿಯಲ್ಲ. ನೀವು ಹೇಳುವಂತೆ ಧರ್ಮ (ಅದೃಷ್ಟ) ನೇರವಾಗಿ ಸಹಕಾರಿಯಾಗದಿದ್ದರೂ ಪರಂಪರಯಾ ಸಹಕಾರಿ ಆಗುತ್ತದೆ. ಆದ್ದರಿಂದ ಸಹಕಾರಿ ಯಾವುದೂ ಇಲ್ಲ ಎಂದು ಹೇಳಿದ್ದು ಅಸಿದ್ಧವಾಗುತ್ತದೆ. ಬೇರೆ ಸಹಕಾರಿಯ ಅಪೇಕ್ಷೆ ಇದ್ದೇ ಇದೆ.

(ಅದ್ವೈತಿಗಳು ಸಾಂಖ್ಯಮತಕ್ಕೆ ಹೇಳಿದ ದೋಷ ಸರಿಯಲ್ಲ, ಸಾಂಖ್ಯನು ಆ ದೋಷವನ್ನು ಪರಿಹಾರ ಮಾಡಿಕೊಳ್ಳುತ್ತಾನೆ.)

### 'ಅನ್ಯತ್ರಾಭಾವಾಚ್ಚ' ಎಂಬ ಸೂತ್ರವ್ಯಾಖ್ಯಾನ ನಿರಾಕರಣೆ

## तात्पर्यचन्द्रिका

**यच्चोक्तं तृणादेः स्वत एव क्षीरभाववत् प्रधानस्यापीति न युक्तम् । धेनुशरीरादन्यत्र तृणादेस्तदभावदिति पञ्चमार्थ इति तन्न ।**

(''ಅನ್ಯತ್ರಾಭಾವಾಚ್ಚ ನ ತೃಣಾದಿವತ್'' ಎಂಬ ಸೂತ್ರಕ್ಕೆ ಅದ್ವೈತಿಗಳು ಮಾಡುವ ಅರ್ಥ ಸರಿಯಲ್ಲ ಎಂಬುದನ್ನು ಹೇಳುತ್ತಿದ್ದಾರೆ)

ಸಾಂಖ್ಯರು ಹೇಳುವಂತೆ ಹುಲ್ಲು ತಾನಾಗಿಯೇ ಹಸುವಿನ ಉದರದಲ್ಲಿ ಹಾಲಾಗಿ ಹೇಗೆ ಪರಿಣಾಮ ಹೊಂದುತ್ತದೋ ಹಾಗೇ ಪ್ರಧಾನವೂ ಕೂಡ ಸ್ವತಃ ಪರಿಣಾಮ ಹೊಂದುತ್ತದೆಂದು, ಅದು ಸರಿಯಲ್ಲ. ಏಕೆಂದರೆ, ಇದೇ ಹುಲ್ಲು ಎತ್ತಿನ ಹೊಟ್ಟೆಯಲ್ಲಿ ಹಾಲಾಗಿ ಪರಿಣಾಮ ಹೊಂದುವುದಿಲ್ಲ. ಆದ್ದರಿಂದ ಅದ್ವೈತಿಯ ವ್ಯಾಖ್ಯಾನ ಸರಿಯಲ್ಲ.

**मम रीत्याऽवश्यनिरसनीयसेश्वरसाङ्ख्यमतनिरासकत्वसम्भवे ''पयोऽम्बुवत्'' इति न्यायनिरस्ततृणादिदृष्टान्तान्तरनिरासकत्वायोगात् ।**

ನಮ್ಮ ಪ್ರಕಾರ, ನಿರೀಶ್ವರಸಾಂಖ್ಯರ ನಿರಾಕರಣೆ ಆದಮೇಲೆ ಅವಶ್ಯವಾಗಿ ನಿರಾಕರಣೆಗೆ ಯೋಗ್ಯರಾದ ಸೇಶ್ವರಸಾಂಖ್ಯರ ನಿರಾಕರಣಪರವಾಗಿ ಅರ್ಥ ಮಾಡಲು ಬರುವಾಗ ನೀವು ಹೇಳಿದಂತೆ

ಸೂತ್ರಾರ್ಥ ಮಾಡುವುದು ಸರಿಯಲ್ಲ. ಮತ್ತು "ಪಯೋಂಬುವಚ್ಚೇತ್" ಎಂಬ ಹಿಂದಿನ ಸೂತ್ರದಲ್ಲಿ ಹೇಳಿರುವ ನ್ಯಾಯದಿಂದಲೇ ತೃಣಾದಿದೃಷ್ಟಾಂತವೂ ನಿರಸ್ತವಾಗುವುದರಿಂದ ಅದನ್ನು ನಿರಾಕರಣೆ ಮಾಡಲು ಇನ್ನೊಂದು ಸೂತ್ರ ಹೊರಡುವುದು ಸರಿಯಲ್ಲ.

(ಹಾಲು ಹೇಗೆ ಸ್ವತಃ ಪರಿಣಾಮ ಹೊಂದುವುದಿಲ್ಲವೋ ಹಾಗೇ ತೃಣವೂ ಕೂಡ ಎಂದು ಹಿಂದಿನ ನ್ಯಾಯದಿಂದಲೇ ನಿರಸ್ತವಾಗಿದೆ ಎಂದರ್ಥ)

**यद्यपीह टीकायां ''व्यतिरेक'' इति तुरीयसूत्रमयस्कान्तादिदृष्टान्तान्तरनिरासार्थं प्रतिभाति तथाप्यस्मिन् पक्षेऽपरितोषादेव सुधायां ''यत्'' इत्यादिना कैमुत्यन्यायार्थत्वमिति पक्षान्तरमुक्तम् ।**

ಪ್ರಶ್ನೆ- ತೃಣದೃಷ್ಟಾಂತವನ್ನು ನಿರಾಕರಣೆ ಮಾಡಲು ಇನ್ನೊಂದು ಸೂತ್ರ ಹೊರಡಬೇಕಾಗಿಲ್ಲ ಅದು ಹಾಲಿನ ದೃಷ್ಟಾಂತವನ್ನು ನಿರಾಕರಣೆ ಮಾಡುವ ಸೂತ್ರದಿಂದಲೇ ನಿರಾಕೃತವಾಗಿದೆ ಎಂದು ಅದ್ವೈತಿಗಳಿಗೆ ಹೇಳಿದ ದೋಷ ನಮಗೂ ಬರುತ್ತದೆ. ಹೇಗೆಂದರೆ, ಟೀಕಾದಲ್ಲಿ "ವ್ಯತಿರೇಕಾನವಸ್ಥಿತೇಃ" ಎಂಬ ಸೂತ್ರದಲ್ಲಿ ಅಯಸ್ಕಾಂತದ ದೃಷ್ಟಾಂತವನ್ನು ಶಂಕಾ ಮಾಡಿಕೊಂಡು ಅದಕ್ಕೆ ಉತ್ತರವಾಗಿ ಸೂತ್ರವನ್ನು ವ್ಯಾಖ್ಯಾನಿಸಿದ್ದಾರೆ. ಈ ಅಯಸ್ಕಾಂತದೃಷ್ಟಾಂತವೂ ಪಯೋದೃಷ್ಟಾಂತನಿರಾಸದಿಂದಲೇ ನಿರಸ್ತವಾಗಿರುವುದರಿಂದ ಇದರ ನಿರಾಕರಣೆಗೆ ಬೇರೆ ಸೂತ್ರ ಹೇಳಬೇಕಾಗಿಲ್ಲ.

ಉತ್ತರ - ಟೀಕಾರಾಯರು ಟೀಕಾದಲ್ಲಿ "ವ್ಯತಿರೇಕಾನವಸ್ಥಿತೇಶ್ಚ" ಎಂಬ ಸೂತ್ರಕ್ಕೆ ಏನು ಅರ್ಥವನ್ನು ಹೇಳಿದ್ದಾರೋ, ಅದರಲ್ಲಿ ಸಂತೃಪ್ತಿಯನ್ನು ಹೊಂದದೆ ಸುಧಾದಲ್ಲಿ ಕೈಮುತ್ಯನ್ಯಾಯವನ್ನು ಅನುಸರಿಸಿ ಬೇರೆ ರೀತಿಯಾಗಿ ಅರ್ಥ ಹೇಳಿದ್ದಾರೆ. ಅದರಿಂದಲೇ ಈ ಪ್ರಶ್ನೆಗೆ ಉತ್ತರ ಹೇಳಿದಂತಾಗಿದೆ.

**किञ्च परमते पूर्वपादोक्तेन ''क्षीरवद्धि'' इत्यनेन विरोधः ।**

ಅದ್ವೈತಿಗಳ ಪ್ರಕಾರ ಇಲ್ಲಿ ಹೇಳಿದ, ಚೇತನನ ಅಪೇಕ್ಷೆ ಇಲ್ಲದೇ ಹಾಲು ಮೊದಲಾದವು ಸ್ವತಃ ಪರಿಣಾಮ ಹೊಂದುವುದಿಲ್ಲ ಎಂಬುದು ಹಿಂದಿನ ಪಾದದಲ್ಲಿ "ಉಪಸಂಹಾರದರ್ಶನಾನ್ನೇತಿ ಚೇನ್ನ ಕ್ಷೀರವದ್ಧಿ" ಎಂಬ ಸೂತ್ರದಲ್ಲಿ ಹೇಳಿರುವ ಅರ್ಥದಿಂದ ವಿರುದ್ಧವಾಗಿದೆ. ಅಲ್ಲಿ ಹಾಲು ಸ್ವತಃ ಪರಿಣಾಮ ಹೊಂದುತ್ತದೆ ಎಂದು ಸಿದ್ಧಾಂತಭಾಗದಲ್ಲಿ ಹೇಳಿದ್ದಾರೆ.

**तत्र लोकदृष्ट्या क्षीरं नैरपेक्ष्ये दृष्टान्तितम् । अत्र तु शास्त्रदृष्ट्या सापेक्षत्वोक्तिरिति चेन्न ।**

ಈ ಆಕ್ಷೇಪಕ್ಕೆ ಅದ್ವೈತಿಯು ಹೀಗೆ ಸಮಾಧಾನ ಹೇಳುತ್ತಾನೆ - ಹಿಂದೆ "ಕ್ಷೀರವದ್ಧಿ"ಎಂಬಲ್ಲಿ ಲೋಕದೃಷ್ಟಿಯನ್ನು ಅನುಸರಿಸಿ ನೈರಪೇಕ್ಷದಲ್ಲಿ ಹಾಲಿನ ದೃಷ್ಟಾಂತವನ್ನು ಹೇಳಿದ್ದೇವೆ. ಇಲ್ಲಿ ಶಾಸ್ತ್ರದೃಷ್ಟಿಯನ್ನು ಅನುಸರಿಸಿ ಅದೇ ಹಾಲಿನ ದೃಷ್ಟಾಂತವನ್ನು ಸಾಪೇಕ್ಷವಾಗಿ ಹೇಳಿದ್ದೇವೆ ಎಂದು. ಇದೂ ಸರಿಯಲ್ಲ. ಶಾಸ್ತ್ರದೃಷ್ಟಿಯಲ್ಲಿ ಹಾಲು ಚೇತನನನ್ನು ಅಪೇಕ್ಷಿಸದೇ ಪರಿಣಾಮ ಹೊಂದುವುದಿಲ್ಲ ಎಂದಾದರೆ ಆಗ ಹಿಂದಿನ ದೃಷ್ಟಾಂತದಲ್ಲಿ (ಹಾಲು ಚೇತನನ ಅಪೇಕ್ಷೆ ಇಲ್ಲದೇ ಪರಿಣಾಮ

ಹೊಂದುತ್ತದೆ ಎಂದು) ಸಾಧ್ಯವೈಕಲ್ಯ ಬರುತ್ತದೆ. ಏಕೆಂದರೆ ವಾಸ್ತವಿಕವಾಗಿ ಹಾಲಿನಲ್ಲಿ ಸ್ವತಃ ಪ್ರವೃತ್ತಿ ಇರುವುದಿಲ್ಲ.

**प्रकाशः –**

''अन्यत्राभावाच्च न तृणादिवत्'' इत्येतदर्थं प्रत्याह – **यच्चेति** ।। उभाभ्यामिति वर्तते । अन्यत्र अनडुहादौ ।। इति न्यायनिरस्तेति ।। तत्प्रपञ्चनमेतदित्यपि व्यर्थत्वादयुक्तमिति भावः ।।

"ಅನ್ಯತ್ರಾಭಾವಾಚ್ಚ ನ ತೃಣಾದಿವತ್'' ಎಂಬುದಕ್ಕೆ ಪರರು ಮಾಡಿರುವ ಅರ್ಥವನ್ನು ನಿರಾಕರಿಸುತ್ತಿದ್ದಾರೆ 'ಯಚ್ಚ 'ಎಂಬ ಗ್ರಂಥದಿಂದ. ಶಂಕರ ಹಾಗೂ ರಾಮಾನುಜ ಇಬ್ಬರಿಂದಲೂ ಏನು ಹೇಳಲ್ಪಟ್ಟಿದೆಯೋ ಎಂಬುದನ್ನು ವಿವಕ್ಷಿಸಬೇಕು. ಅನ್ಯತ್ರ ಅಂದರೆ ಎತ್ತು ಮೊದಲಾದವಡೆ ಎಂದರ್ಥ. ಹಿಂದೆ ಹೇಳಿದರ ವಿವರಣೆಯನ್ನು ಇಲ್ಲಿ ಮಾಡಲಾಗಿದೆ ಎಂದರೆ ಅದೂ ಕೂಡ ಪ್ರಯೋಜನವಿಲ್ಲವಾದ್ದರಿಂದ ವ್ಯರ್ಥ ಎಂದು ಅಭಿಪ್ರಾಯ.

**प्रकाशः – तुरीयेति** ।। प्रथमाधिकरणान्तिमसूत्रमित्यर्थः ।। **विरोध इति** ।। स्वतो दध्यादिभावेन परिणामे तत्र क्षीरस्य दृष्टान्तितत्वादिति भावः । ''उपसंहारदर्शनान्नेति चेत्क्षीरवद्धि'' इत्यत्र तु ''बाह्यनिमित्त-निरपेक्षमपि स्वाश्रयं कार्यं भवतीत्येतल्लोकदृष्ट्याऽभिहितम्'' इत्यादिपयोम्बुसूत्रपरभाष्योक्तमत्राशङ्क्य निराह – **तत्रेति** ।।

ನಾಕನೆಯ ಸೂತ್ರ ಎಂದರೆ ಪ್ರಥಮಾಧಿಕರಣದ ಅಂತಿಮ ಸೂತ್ರ ಎಂದರ್ಥ. ಮುಂದಿನ ಸೂತ್ರ ಬೇರೆ ಅಧಿಕರಣವಾಗುತ್ತದೆ. ಸ್ವತಃ ಮೊಸರಿನ ರೂಪದಲ್ಲಿ ಪರಿಣಾಮ ಹೊಂದುವ ಹಾಲಿನ ದೃಷ್ಟಾಂತವನ್ನು ಹೇಳಿರುವದರಿಂದ ಎಂದರ್ಥ. "ಉಪಸಂಹಾರದರ್ಶನಾನ್ನೇತಿಚೇತ್ ಕ್ಷೀರವದ್ಧಿ'' ಎಂಬ ಸೂತ್ರದಲ್ಲಿಯಾದರೋ ಹೊರಗಿನ ಯಾವುದೇ ಸಹಕಾರಿ ಇಲ್ಲದಿದ್ದರೂ ಸ್ವಾಶ್ರಯಕಾರ್ಯ ಆಗುತ್ತದೆಂಬುದನ್ನು ಲೋಕದೃಷ್ಟಿಯಿಂದ ಹೇಳಿದ್ದು (ವಾಸ್ತವಾಭಿಪ್ರಾಯದಿಂದಲ್ಲ) ಎಂಬುದಾಗಿ "ಪಯೋಂಬುವತ್'' ಎಂಬ ಸೂತ್ರಭಾಷ್ಯದಲ್ಲಿ ಏನು ಪರಿಹಾರ ಹೇಳಿದ್ದಾರೋ ಅದನ್ನು ಪ್ರಶ್ನೆ ಮಾಡಿಕೊಂಡು ನಿರಾಕರಿಸುತ್ತಿದ್ದಾರೆ 'ತತ್ರ' ಎಂಬ ಗ್ರಂಥದಿಂದ.

### 'ಅಭ್ಯುಪಗಮೇಪಿ' ಎಂಬ ಸೂತ್ರಾರ್ಥದ ನಿರಾಕರಣೆ

## तात्पर्यचन्द्रिका

**अत्रोक्तशास्त्रदृष्ट्या तत्र दृष्टान्तस्य तत्वतः साध्यवैकल्यापातात् । यच्चोक्तं प्रधानस्योक्तरीत्या प्रवृत्तिरेव न युक्ता । तदभ्युपगमेऽपि स्वाभाविकत्वात्प्रवृत्तेः सहकार्यपेक्षाभाववत्प्रयोजनापेक्षाभावप्रसङ्गादिति षष्ठार्थ इति तन्न ।**

''ಅಭ್ಯುಪಗಮೇಪ್ಯರ್ಥಾಭಾವಾತ್'' ಎಂಬ ಸೂತ್ರಕ್ಕೆ ಅದ್ವೈತಿಯು ಮಾಡಿರುವ ಅರ್ಥ ಸರಿಯಲ್ಲ. ಅವನ ಪ್ರಕಾರ, ಪ್ರಧಾನಕ್ಕೆ ಹಿಂದೆ ಹೇಳಿದಂತೆ ಪ್ರವೃತ್ತಿಯೇ ಕೂಡುವುದಿಲ್ಲ ಎಂಬುವುದನ್ನು ಹೇಗಾದರೂ ಒಪ್ಪಿಕೊಂಡರೂ ಪ್ರವೃತ್ತಿ ಎಂಬುದು ಸ್ವಾಭಾವಿಕವಾದ್ದರಿಂದ ಅದಕ್ಕೆ ಇನ್ನೊಂದು ಸಹಕಾರಿಯ ಅಪೇಕ್ಷೆ ಹೇಗೆ ಇಲ್ಲವೋ ಅದೇ ರೀತಿ ಪ್ರಯೋಜನದ ಅಪೇಕ್ಷೆಯೂ ಇಲ್ಲವಾದ್ದರಿಂದ, ಎಂಬುದು ಆರನೇ ಸೂತ್ರಕ್ಕೆ ಅರ್ಥ. ಇದು ತಪ್ಪು.

**अर्थाभावादित्यनेनार्थापेक्षाभावप्रसङ्गस्य लक्षणीयत्वात् ।**

ನಿನ್ನ ಪ್ರಕಾರ ಅರ್ಥ ಮಾಡಿದರೆ ಆಗ ಸೂತ್ರದಲ್ಲಿರುವ ''ಅರ್ಥಾಭಾವಾತ್'' ಎಂಬ ಶಬ್ದಕ್ಕೆ ''ಪ್ರಯೋಜನಾಪೇಕ್ಷಾಭಾವಪ್ರಸಂಗಾತ್'' ಎಂಬರ್ಥದಲ್ಲಿ ಲಕ್ಷಣವನ್ನು ಅಂಗೀರಕರಿಸಬೇಕಾಗುತ್ತದೆ. ಇದು ದೋಷ. (ಇಲ್ಲಿ 'ಅರ್ಥ' ಶಬ್ದಕ್ಕೆ 'ಪ್ರಯೋಜನಾಪೇಕ್ಷಾ' ಎಂಬರ್ಥದಲ್ಲಿ ಹಾಗೂ 'ಅಭಾವ' ಶಬ್ದಕ್ಕೆ 'ಅಭಾವಪ್ರಸಂಗಾತ್' ಎಂಬರ್ಥದಲ್ಲಿ ಲಕ್ಷಣಾ. ವಾಚ್ಯಾರ್ಥ ಅನುಪಪನ್ನವಾದಾಗ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕು. ಆದರೆ ಇಲ್ಲಿ ನಮ್ಮ ರೀತ್ಯಾ ವಾಚ್ಯಾರ್ಥವು ಉಪಪನ್ನವಾಗುತ್ತಿರುವಾಗ ಲಕ್ಷಣಾವನ್ನು ಆಶ್ರಯಿಸಿರುವುದು ಸರಿಯಲ್ಲ ಎಂದು ಅಭಿಪ್ರಾಯ)

**प्रवृत्तिमभ्युपगम्य प्रयोजनाभावेन पुनः प्रवृत्तिनिरासे च विरोधात् ।**

'ತದಭ್ಯುಪಗಮೇಽಪಿ' ಎಂಬುದಾಗಿ ಮೊದಲು ಪ್ರಧಾನಕ್ಕೆ ಪ್ರವೃತ್ತಿಯನ್ನು ಅಂಗೀಕರಿಸಿ ಅನಂತರ ಆ ಪ್ರವೃತ್ತಿಗೆ ಪ್ರಯೋಜನ ಇಲ್ಲವಾದ್ದರಿಂದ ಅದು ಕೂಡುವುದಿಲ್ಲ ಎಂದು ಹೇಳಿದರೆ ಪೂರ್ವವಚನದಿಂದ ವಿರೋಧ ಬರುತ್ತದೆ.

**अप्रेक्षावत्त्वापादेन च प्रधान इष्टापत्तेः ।**

ಪ್ರಯೋಜನವಿಲ್ಲವಾದ್ದರಿಂದ ಪ್ರವೃತ್ತಿ ಕೂಡುವುದಿಲ್ಲ ಎಂದರೆ ಹಿಂದೆ ಹೇಳಿದ ದೋಷ ಬರುತ್ತದೆ. ಅದಕ್ಕೆ ಪರಿಹಾರವಾಗಿ ಅದ್ವೈತಿಯು ಪ್ರವೃತ್ತ್ಯಭಾವವನ್ನು ಆಪಾದನೆ ಮಾಡದೆ ಅಪ್ರೇಕ್ಷಾವತ್ತ್ವ (ಪ್ರಯೋಜನವಿಲ್ಲದೇ ಪ್ರವೃತ್ತಿ ಮಾಡಿದರೆ ಆಗ ಅದಕ್ಕೆ ಪ್ರೇಕ್ಷಾ (ವಿವೇಕ) ಇಲ್ಲದಿರುವಿಕೆ (ಅವಿವೇಕಿತ್ವ)) ಎಂಬುದನ್ನು ಆಪಾದನೆ ಮಾಡುತ್ತೇನೆ ಎಂದರೆ ಆಗ ಅದು ಸಾಂಖ್ಯನಿಗೆ ಇಷ್ಟವೇ ಆಗಿದೆ. ಜಡವು ಪ್ರೇಕ್ಷಾರಹಿತವಾಗಿದೆ ಎಂಬುದು ಸಾಂಖ್ಯನಿಗೆ ಸಮ್ಮತ. ಆದ್ದರಿಂದ ನೀವು ಯಾವುದೇ ದೋಷವನ್ನು ಹೇಳಿದಂತೆ ಆಗಲಿಲ್ಲ ಎಂದು ಅಭಿಪ್ರಾಯ.

**अस्मन्मते तु चार्वाकं प्रत्यर्थाभावो नोपपाद्यः ।**

ನಮ್ಮ ಮತದಲ್ಲಿ ಈ ಸೂತ್ರವು ಚಾರ್ವಾಕನಿರಾಕರಣ ಪರವಾಗಿ ವ್ಯಾಖ್ಯಾನಿಸಲಾಗಿದೆ. ನಾವು ಚಾರ್ವಾಕನಿಗೆ ಪ್ರಯೋಜನ, ವಿಷಯ ಇಲ್ಲ ಎಂದು ಉಪಪಾದನೆ ಮಾಡಬೇಕಾಗಿಲ್ಲ.

**तदभ्युपगमेऽप्यर्थयोर्विषयप्रयोजनयोरभावादिति सूत्रार्थः ।**

ಅವನ ಅಂಗೀಕಾರದಲ್ಲೇ ಅರ್ಥಶಃ ವಿಷಯ ಪ್ರಯೋಜನಗಳು ಇಲ್ಲ ಎಂಬುದು ಸೂತ್ರಾರ್ಥ.

ರಚನಾನುಪಪತ್ತ್ಯಧಿಕರಣ-ಅನ್ಯಥಾನುಪಪತ್ತ್ಯಧಿಕರಣ (2-2-(1-5))

**प्रकाशः –**

''अभ्युपगमेऽप्यर्थाभावात्'' इत्येतदर्थं प्रत्याह – **यच्चेति** ।। परैरिति वर्तते। भामत्यां ''पुरुषार्थाभावप्रसङ्गात्'' इत्युक्त्वा ''अथवा पुरुषार्थाभावादिति योज्यम्'' इत्यन्योऽर्थो भाष्यस्य प्रकटितः । तत्राद्ये दोषमाह – **अर्थेति** ।। अन्त्य आह – **प्रवृत्तिमिति** ।। प्रयोजनाभावश्च तदीयभाष्ये विवृतः ।

''ಅಭ್ಯುಪಗಮೇऽಪ್ಯರ್ಥಾಭಾವಾತ್'' ಎಂಬ (ಅದ್ವೈತಿಗಳ) ಸೂತ್ರಾರ್ಥವನ್ನು ನಿರಾಕರಿಸುತ್ತಿದ್ದಾರೆ 'ಯಚ್ಚ' ಎಂಬ ಗ್ರಂಥದಿಂದ. ಅದ್ವೈತಿಗಳ ಪ್ರಕಾರ ಎಂದು ಇಟ್ಟುಕೊಳ್ಳಬೇಕು. ಭಾಮತಿಯಲ್ಲಿ ಭಾಷ್ಯಾರ್ಥವನ್ನು ಹೀಗೆ ಸ್ಪಷ್ಟಪಡಿಸಿದ್ದಾರೆ. 'ಅರ್ಥಾಭಾವಾತ್' ಎಂಬುದಕ್ಕೆ 'ಪುರುಷಾರ್ಥಾಭಾವಪ್ರಸಂಗಾತ್' ಪುರುಷಾರ್ಥ (ಪ್ರಯೋಜನ) ಇಲ್ಲದಿರುವಿಕೆ ಎಂಬ ಪ್ರಸಂಗ (ದೋಷ) ಬರುವುದರಿಂದ ಎಂದು ಒಂದು ಅರ್ಥ. 'ಪುರುಷಾರ್ಥಭಾವಾತ್' ಎಂದಷ್ಟೇ. ಪ್ರಯೋಜನ ಇಲ್ಲದಿರುವುದರಿಂದ ಎಂಬುದು ಇನ್ನೊಂದರ್ಥ. ಇವರಡರಲ್ಲಿ ಮೊದಲನೆ ಅರ್ಥವನ್ನು 'ಅರ್ಥ' ಎಂಬುದರಿಂದ ಹೇಳುತ್ತಿದ್ದಾರೆ. ಎರಡನೆಯ ಪಕ್ಷಕ್ಕೆ 'ಪ್ರವೃತ್ತಿ' ಎಂಬುದರಿಂದ ದೋಷ ಹೇಳುತ್ತಿದ್ದಾರೆ. ಪ್ರಯೋಜನಾಭಾವ ಎಂಬುದಕ್ಕೆ ಏನು ಅರ್ಥ ಎಂಬುದನ್ನು ಶಾಂಕರ ಭಾಷ್ಯದಲ್ಲಿ ವಿವರಿಸಲಾಗಿದೆ.

**प्रकाशः – प्रसङ्गस्य विपर्यये पर्यवसानावश्यंभावेन प्रवृत्त्यभावापादने विरोधः।**

ಪ್ರಸಂಗವು ವಿಪರ್ಯಯ (ವಿರುದ್ಧ)ದಲ್ಲಿ ಪರ್ಯವಸಾನ (ಸಮಾಪ್ತಿ) ಆಗಲೇಬೇಕಾದ್ದರಿಂದ ಪ್ರವೃತ್ತಿಯ ಅಭಾವವನ್ನು ಆಪಾದನೆ ಮಾಡಿದರೆ ಆಗ ಹಿಂದೆ ಮಾಡಿದ ಅಂಗೀಕಾರದಿಂದ ವಿರೋಧ.

ವಿಶೇಷವಿಚಾರ - ಪ್ರಸಂಗ ಶಬ್ದಕ್ಕೆ ಎಂದರ್ಥ. ಉದಾ: ಪರ್ವತದಲ್ಲಿ ಬೆಂಕಿ ಇಲ್ಲ ಎಂದರೆ ಧೂಮವೂ ಇರಬಾರದು. ಇದು ಪ್ರಸಂಗ. ಬೆಂಕಿ ಇಲ್ಲ ಎಂದರೆ ಇದು ಆಪಾದಕ. ಧೂಮವೂ ಇರಬಾರದು ಎಂದರೆ ಇದು ಆಪಾದ್ಯ. ಮುಂದೇನು ? ಎಂಬ ಪ್ರಶ್ನೆ ಬಂದರೆ, ಆಗ ಪರ್ವತದಲ್ಲಿ ಧೂಮ ಕಾಣಿಸುತ್ತಿರುವುದರಿಂದ ಬೆಂಕಿ ಇರಲೇಬೇಕು, ಇದು ವಿಪರ್ಯಯಪರ್ಯವಸಾನ. ಇದರಂತೆ ಇಲ್ಲಿಯೂ ಕೂಡ ಪ್ರವೃತ್ತಿ ಇದೆ ಎಂದರೆ ಪ್ರಯೋಜನ ಇರಲೇಬೇಕು. ಪ್ರಯೋಜನ ಇಲ್ಲ (ಸ್ವಭಾವಿಕವಾದ್ದರಿಂದ) ಹಾಗಾಗಿ ಪ್ರವೃತ್ತಿಯೂ ಇರಕೂಡದು.

**प्रकाशः – पक्षान्तरे त्विष्टतामाह – अप्रेक्षावत्त्वेति ।।**

ಪ್ರಯೋಜನಾಭಾವದಿಂದ ಪ್ರವೃತ್ತ್ಯಭಾವವನ್ನು ಹೇಳದೆ ಅಪ್ರೇಕ್ಷಾವತ್ವವನ್ನು ಹೇಳುತ್ತೇನೆ ಎಂದರೆ ಅದಕ್ಕೆ 'ಅಪ್ರೇಕ್ಷಾವತ್ವ' ಎಂಬುದರಿಂದ ದೋಷ ಹೇಳುತ್ತಿದ್ದಾರೆ.

**प्रकाशः** – एतेन यत्कैश्चिदुक्तं इदं सूत्रमन्यथानुमितौ चेत्यनन्तरं पठित्वा ''अनुमानेन प्रधानसिद्ध्युपगमेऽपि प्रधानेन प्रयोजनाभावान्न तदनुमातव्यमित्यर्थ'' इति तन्निरस्तम् । विरोधादिति ।

ಹಿಂದೆ ಹೇಳಿದ ದೋಷದಿಂದಲೇ ರಾಮಾನುಜರು ಈ ಸೂತ್ರಕ್ಕೆ ಏನು ಅರ್ಥ ಹೇಳಿದ್ದಾರೋ ಅದೂ ಸರಿಯಲ್ಲ ಎಂದು ಸಿದ್ಧವಾಗುವುದು. ಅವರ ಪ್ರಕಾರ ಈ ಸೂತ್ರವು "ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್" ಎಂಬ ಸೂತ್ರದ ನಂತರ ಬರುತ್ತದೆ (ಹಾಗೆ ಪಾಠ ಇಟ್ಟುಕೊಂಡಿದ್ದಾರೆ) ಅನುಮಾನದಿಂದ ಪ್ರಧಾನವು ಸಿದ್ಧವಾದರೂ ಕೂಡ ಪ್ರಧಾನದಿಂದ ಯಾವುದೇ ಪ್ರಯೋಜನ ಇಲ್ಲವಾದ್ದರಿಂದ ಅದನ್ನು ಅನುಮಾನದಿಂದ ತಿಳಿಯಬಾರದು ಎಂಬುದು ಸೂತ್ರಾರ್ಥ. ಈ ರೀತಿ ಅರ್ಥ ಹೇಳಿದಾಗಲೂ ವಿರೋಧ ಸ್ಪಷ್ಟವಾಗಿದೆ. ಮೊದಲು ಅನುಮಾನದಿಂದ ಪ್ರಧಾನಸಿದ್ಧಿಯನ್ನು ಒಪ್ಪಿ ನಂತರ ಪ್ರಯೋಜನ ಇಲ್ಲವಾದ್ದರಿಂದ ಅದನ್ನು ಅನುಮಾನದಿಂದ ತಿಳಿಯಬಾರದು ಎಂದರೆ ವಿರೋಧ.

### 'ಪುರುಷಾಶ್ಮವದಿತಿ' ಎಂಬ ಸೂತ್ರಾರ್ಥ ನಿರಾಕರಣೆ

## तात्पर्यचन्द्रिका

**यच्चोक्तं स्वतोऽसमर्थस्याप्यन्यसन्निधानेन प्रवृत्तावन्धपङ्गुपुरुषदृष्टान्तमयस्कान्ताश्मसूचीदृष्टान्तं चाशङ्क्य निरसितुं सप्तममिति तन्न ।**

"ಪುರುಷಾಶ್ಮವದಿತಿ ಚೇತ್ತಥಾಪಿ" ಎಂಬ ಸೂತ್ರಕ್ಕೆ ಅದ್ವೈತಿಗಳು ಮಾಡುವ ವ್ಯಾಖ್ಯಾನ ಸರಿಯಲ್ಲ.ಅವರ ಪ್ರಕಾರ, ಪ್ರಧಾನವು ಸ್ವತಂತ್ರವಾಗಿ ಪ್ರವೃತ್ತವಾಗಲು ಅಸಮರ್ಥವಾಗಿದ್ದರೂ ಇನ್ನೊಂದರ (ಪುರುಷನ) ಸನ್ನಿಧಾನದಿಂದ ಪ್ರವೃತ್ತವಾಗಬಹುದು. ಹೇಗೆಂದರೆ ಅದಕ್ಕೆ ಎರಡು ದೃಷ್ಟಾಂತ. ಮೊದಲನೆಯದು ಅಂಧಪಂಗು ದೃಷ್ಟಾಂತ. ಅಂಧನಿಗೂ ಕಣ್ಣು ಕಾಣುವುದಿಲ್ಲವಾದ್ದರಿಂದ ಸ್ವತಃ ಪ್ರವೃತ್ತಿಯಿಲ್ಲ, ಪಂಗುವಿಗೂ ಕಾಲಿಲ್ಲವಾದ್ದರಿಂದ ಸ್ವತಃ ಪ್ರವೃತ್ತಿಯಿಲ್ಲ. ಆದರೆ, ಇಬ್ಬರೂ ಪರಸ್ಪರ ಸನ್ನಿಧಾನದಿಂದ ಗಮನಾದಿ ಪ್ರವೃತ್ತಿಯನ್ನು ಮಾಡುತ್ತಾರೆ. ಅದೇ ರೀತಿ ಇನ್ನೊಂದು ದೃಷ್ಟಾಂತ ಅಯಸ್ಕಾಂತ ಸೂಜಿ, ಸೂಜಿಯನ್ನು ಹಾಗೇ ಇಟ್ಟಿದ್ದರೆ ಅದು ಅಲ್ಲೇ ಇರುತ್ತದೆ. ಆದರೆ, ಅಯಸ್ಕಾಂತಕಲ್ಲನ್ನು ಸಮೀಪದಲ್ಲಿ ತಂದರೆ ಆಗ ಅದರಲ್ಲಿ (ಸೂಜಿಯಲ್ಲಿ) ಚಲನೆ ಉಂಟಾಗುತ್ತದೆ. ಈ ಎರಡು ದೃಷ್ಟಾಂತಗಳಿಂದ ಸಾಂಖ್ಯನು ಪ್ರಧಾನಕ್ಕೆ ಪ್ರವೃತ್ತಿಯನ್ನು ಹೇಳಿದರೆ ಅದನ್ನು ನಿರಾಕರಣೆ ಮಾಡಲು ಈ ಏಳನೆಯ ಸೂತ್ರ ಹೊರಟಿದೆ. ಅದ್ವೈತಿಗಳ ಈ ವ್ಯಾಖ್ಯಾನವೇ ತಪ್ಪು.

('ಪುರುಷಾಶ್ಮವತ್' ಎಂಬಲ್ಲಿ ಪುರುಷ ಶಬ್ದದಿಂದ ಅಂಧಪಂಗುಪುರುಷ ದೃಷ್ಟಾಂತವನ್ನೂ, ಅಶ್ಮ ಶಬ್ದದಿಂದ ಅಯಸ್ಕಾಂತಸೂಜಿ ದೃಷ್ಟಾಂತವನ್ನು ಗ್ರಹಿಸಬೇಕು)

**मम रित्या ''अङ्गित्वानुपपत्तेः'' इत्युत्तरसूत्रानुगुणावश्यनिरसनीयपुरुषोपसर्जनप्रकृतिकर्तृत्वपक्षनिरासकत्वसम्भवे ''पयोऽम्बुवत्'' इत्यादिन्यायनिरस्तायस्कान्तादि दृष्टान्तनिरासकत्वायोगात् ।**

ನಮ್ಮ ಪ್ರಕಾರ ಅರ್ಥಮಾಡುವಾಗ ಈ ಸೂತ್ರವು ನಿರೀಶ್ವರಸಾಂಖ್ಯರಲ್ಲಿ ಒಬ್ಬರಾದ, ಪುರುಷನನ್ನು ಅಪ್ರಧಾನ ಪ್ರಕೃತಿಯ ಪ್ರಧಾನ (ಕರ್ತ್ರೀ) ಎಂದು ಹೇಳುವವರ ನಿರಾಕರಣೆಗಾಗಿ ಎಂದು ಹೇಳಲಾಗಿದೆ.

ಹೀಗೆ ಅರ್ಥೈಸಿದಾಗ ಅದು ಮುಂದಿರುವ 'ಅಂಗಿತ್ವಾನುಪಪತ್ತೇಃ' ಎನ್ನುವ ಸೂತ್ರಕ್ಕೆ ಅನುಕೂಲವಾದಿಯಾಗುತ್ತದೆ. ಅಲ್ಲಿ ಅನುಭವ ವಿರೋಧ ಬರುವುದರಿಂದ ಪುರುಷನಿಗೆ ಅಂಗತ್ವ (ಅಪ್ರಾಧಾನ್ಯ) ವನ್ನು ಹೇಳಬಾರದು ಎಂದು ಹೇಳಿರುವುದರಿಂದ. ಈ ಪುರುಷೋಪರ್ಜನ ಪ್ರಕೃತಿಕರ್ತೃತ್ವ ಪಕ್ಷವು ಅವಶ್ಯವಾಗಿ ನಿರಾಕರಣೀಯವಾಗಿದೆ. ನಿಮ್ಮ ರೀತ್ಯಾ ಇದು ಅಯಸ್ಕಾಂತವೇ ಮೊದಲಾದ ದೃಷ್ಟಾಂತನಿರಾಸಕ್ಕಾಗಿ ಎನ್ನುವುದು ಸರಿಯಲ್ಲ. ಏಕೆಂದರೆ, ಇಲ್ಲಿ ಹೇಳಿರುವ ದೃಷ್ಟಾಂತವು "ಪಯೋಂಬುವಚ್ಚೇತ್" ಎಂಬ ಸೂತ್ರದಿಂದಲೇ ನಿರಸ್ತವಾದಿಯಾಗಿದೆ. ಅಲ್ಲಿ ಹೇಗೆ ಈಶ್ವರನ ಅಪೇಕ್ಷೆಯನ್ನು ಹೇಳಿದ್ದಾರೋ ಅದನ್ನೇ ಇಲ್ಲಿಯೂ ಹೇಳಬಹುದು.

ಹಾಗಾಗಿ ನಿಮ್ಮ ಪ್ರಕಾರ ಸೂತ್ರಾರ್ಥ ಸರಿಯಾಗುವುದಿಲ್ಲ

**अष्टमे पौनरुक्तयम् ।**

'ಅಂಗಿತ್ವಾನುಪಪತ್ತೇಶ್ಚ' ಎಂಬ ಸೂತ್ರಾರ್ಥವೂ ಸರಿಯಲ್ಲ, ಪೌನರುಕ್ತಿ ಎಂಬ ದೋಷ ಬರುವುದರಿಂದ. ಈ ಸೂತ್ರಕ್ಕೆ ಅದ್ವೈತಿಗಳು, ಸಾಂಖ್ಯರು ಹೇಳುವ ಅಂಗಾಂಗಿಭಾವನಿರಾಕರಣಪರವಾಗಿ ಅರ್ಥಮಾಡಿದ್ದಾರೆ. ಅಂದರೆ, ಸತ್ವರಜಸ್ತಮೋಗುಣಗಳಿಗೆ ಪ್ರಳಯಕಾಲದಲ್ಲಿ ಸಾಮ್ಯಾವಸ್ಥೆ ಇರುತ್ತದೆ. ಸೃಷ್ಟಿಕಾಲದಲ್ಲಿ ಈ ಸಾಮ್ಯಾವಸ್ಥೆಯಿಂದ ಪ್ರಚ್ಯುತಿ ಉಂಟಾಗಿ ಅಂಗಾಂಗಿಭಾವ ಉಂಟಾಗುತ್ತದೆ. ಇದು ಸಾಂಖ್ಯರ ಅಭಿಪ್ರಾಯ. ಇದು ಸರಿಯಲ್ಲ ಎಂದು ಅದ್ವೈತಿಗಳ ವ್ಯಾಖ್ಯಾನ. ಇದೇ ಅರ್ಥವನ್ನು 'ಪ್ರವೃತ್ತೇಶ್ಚ' ಎಂಬ ಸೂತ್ರಕ್ಕೂ ಮಾಡಿರುವಿರಿ. ಆದ್ದರಿಂದ 'ಪ್ರವೃತ್ತೇಶ್ಚ' ಎಂಬ ಸೂತ್ರದಿಂದ ಪೌನರುಕ್ತಿ ಬರುತ್ತದೆಂದು ಭಾವ.

**यच्चोक्तमुक्तदोषपरिहारेणान्यथानुमितावपि प्रधानस्य ज्ञानशक्तिवियोगान्न रचयितृत्वमिति नवमार्थ इति तन्न ।**

"ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್" ಎಂಬ ಸೂತ್ರಕ್ಕೆ ಇಲ್ಲಿಯವರೆಗೆ ಎಂಟು ಸೂತ್ರಗಳಲ್ಲಿ ಏನು ದೋಷವನ್ನು ಹೇಳಿದ್ದೀವೋ ಅದೆಲ್ಲವನ್ನು ಹೇಗೋ ಅದ್ವೈತಿಗಳು ಪರಿಹರಿಸಿಕೊಂಡು ಅನ್ಯಥಾನುಮಿತಿಯನ್ನು ಅಂದರೆ ಪ್ರಧಾನಕ್ಕೆ ಸ್ವತಃಪ್ರವೃತ್ತಿ ಇದೆ ಎಂಬ ಅನುಮಿತಿಯನ್ನು ಮಾಡಿಕೊಂಡರೂ ಪ್ರಧಾನಕ್ಕೆ ಜ್ಞಾನ, ಶಕ್ತಿ ಇಲ್ಲದಿರುವುದರಿಂದ ರಜಯಿತೃತ್ವ ಕೂಡುವುದಿಲ್ಲ ಎಂಬುದಾಗಿ ಅರ್ಥವನ್ನು ಹೇಳಿದ್ದಾರೆ. ಇದು ಸರಿಯಲ್ಲ.

**मम रित्या "अन्यथ" इत्यनेन "अङ्गित्वानुपपत्तेः" इत्यव्यवहितप्रकृतादचेतन-प्राधान्यादन्यथात्वं विवक्षित्वाऽवश्यनिरसनीयप्रकृत्युप सर्जन पुरुषकर्तृत्वनिरासे सम्भवति व्यवहितप्रकृतादन्यथात्वं विवक्षित्वा बहुसूत्रोक्तदृढदोषाणामनुचितं परिहारं चाङ्गीकृत्य ज्ञशब्दस्य क्लेशेन ज्ञानार्थत्वञ्चोपेत्य "रचनानुपपत्तेः" इत्यनेनोक्तस्याचेतनत्वादरचयितृत्वस्य पुनरिहोक्तययोगात् ।**

ನಮ್ಮ ಪ್ರಕಾರ ಸೂತ್ರದಲ್ಲಿರುವ 'ಅನ್ಯಥಾ' ಎಂಬ ಶಬ್ದಕ್ಕೆ ಹಿಂದಿನ ಸೂತ್ರವಾದ 'ಅಂಗಿತ್ವಾನುಪಪತ್ತೇಶ್ಚ' ಎಂಬಲ್ಲಿ ಪ್ರಸಕ್ತವಾದ ಪುರುಷೋಪಸರ್ಜನ ಪ್ರಕೃತಿಕರ್ತೃತ್ವವಾದಕ್ಕಿಂತ ಭಿನ್ನವಾದ ಎಂಬ ಅರ್ಥವನ್ನು ಹೇಳಿದ್ದೇವೆ. ಹಿಂದಿನ ಸೂತ್ರದಲ್ಲಿ ಪ್ರಸಕ್ತವಾದಕ್ಕಿಂತ ಭಿನ್ನವಾದ ವಾದ ಎಂದರೆ ಪ್ರಕೃತ್ಯುಪಸರ್ಜನಪುರುಷಕರ್ತೃತ್ವವಾದ, ಅಂದರೆ ಪ್ರಕೃತಿ ಅಪ್ರಧಾನ, ಪುರುಷನೇ ಪ್ರಧಾನ ಎಂದು ಹೇಳುವ ವಾದ. ಅದನ್ನು ನಿರಾಕರಣೆ ಮಾಡಲು ಈ ಸೂತ್ರ ಹೊರಟಿದೆ. ಈ ಮತವು ಅವಶ್ಯವಾಗಿ ನಿರಸನೀಯವಾಗಿದೆ.

ನಮ್ಮ ಪ್ರಕಾರ 'ಅನ್ಯಥಾ' ಎಂದರೆ ಅವ್ಯವಹಿತಪೂರ್ವದಲ್ಲಿ ಪ್ರಸಕ್ತವಾದ 'ಅಂಗಿತ್ವಾನುಪಪತ್ತೇಃ' ಎಂಬುದಕ್ಕಿಂತ ಅನ್ಯಥಾ ಬೇರೆ ರೀತಿ ಎಂದರ್ಥ. ಆದರೆ, ನಿಮ್ಮ ರೀತ್ಯಾ ಅನ್ಯಥಾ ಶಬ್ದಕ್ಕೆ ಹಿಂದಿನ ಎಂಟು ಸೂತ್ರದಲ್ಲಿ ಪ್ರಸಕ್ತವಾದ ದೋಷಪರಿಹಾರಪೂರ್ವಕವಾಗಿ 'ಅನ್ಯಥಾ' ಎಂದರ್ಥ-ವಾಗುವುದರಿಂದ ವ್ಯವಹಿತ ಪರಾಮರ್ಶೆ ಮಾಡಿದಂತಾಗುವುದು.

ಇನ್ನು, ಹಿಂದಿನ ಎಂಟು ಸೂತ್ರಗಳಲ್ಲಿ ಪ್ರತ್ಯೇಕ ದೋಷವನ್ನು ಹೇಳಿದ ಮೇಲೆ ಅದನ್ನು ಪರಿಹಾರ ಮಾಡಿಕೊಂಡು ಎಂದು ಹೇಳುವುದು ಸರಿಯಲ್ಲ. ಸೂತ್ರೋಕ್ತವಾದ ದೃಢದೋಷಗಳು ದೋಷಗಳು ಪರಿಹಾರವಾಗಿರುತ್ತವೆಯಾದ್ದರಿಂದ. ನಿಮ್ಮ ಪ್ರಕಾರ ಸೂತ್ರದಲ್ಲಿರುವ 'ಜ್ಞ' ಶಬ್ದಕ್ಕೆ ಜ್ಞಾನವುಳ್ಳವನು ಎಂಬರ್ಥವೇ ಪ್ರಸಿದ್ಧವಾಗಿರುವುದು.

ಮತ್ತು ''ರಚನಾನುಪಪತ್ತೇಶ್ಚ'' ಎಂಬ ಸೂತ್ರದಿಂದ ಪೌನರುಕ್ತಿ ಎಂಬ ದೋಷವೂ ಬರುತ್ತದೆ. ಅಲ್ಲಿಯೂ ಕೂಡ ಅಚೇತನವಾಗಿದೆಯಾದ್ದರಿಂದ ರಚಯಿತೃತ್ವ ಕೂಡುವುದಿಲ್ಲ ಎಂದು ಹೇಳಿ ಇಲ್ಲಿಯೂ ಅದನ್ನೇ ಹೇಳಿದರೆ ಪುನರುಕ್ತಿ.

ಇಷ್ಟೆಲ್ಲಾ ದೋಷವಿರುವುದರಿಂದ ನಿಮ್ಮ ವ್ಯಾಖ್ಯಾನ ಸರಿಯಲ್ಲ.

**प्रकाशः —**

''पुरुषाश्मवदिति चेत्तथापि'' इत्येतदर्थं निराह – **यच्चेति** ।। उभाभ्यामित्यन्वेति। ''अन्यथानुमितौ च ज्ञशक्तिवियोगात्'' इत्येतदर्थं प्रत्याचष्टे।। **यच्चोक्तमिति** ।। उभाभ्यामित्यन्वेति । केषाञ्चिन्मते ''अभ्युपगमेऽपि'' इत्यस्य नवमत्वेऽपि वास्तवाभिप्रायमिदम् ।

''ಪುರುಷಾಶ್ಮವದಿತಿ ಚೇತ್ತಥಾಪಿ'' ಎಂಬ ಸೂತ್ರಕ್ಕೆ ಶಂಕರ ರಾಮಾನುಜರು ಮಾಡುವ ಅರ್ಥವನ್ನು ನಿರಾಕರಣೆ ಮಾಡುತ್ತಿದ್ದಾರೆ 'ಯಚ್ಚ' ಎಂಬ ವಾಕ್ಯಗಳಿಂದ. ಇಬ್ಬರಿಂದಲೂ ಹೇಳಲ್ಪಟ್ಟ ಎಂದು ಗ್ರಹಿಸಬೇಕು. ಇಬ್ಬರೂ ಎಂದರೆ ಶಂಕರರು ರಾಮಾನುಜರು. ''ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್'' ಎಂಬ ಸೂತ್ರಕ್ಕೆ ಇತರರು ಮಾಡುವ ಅರ್ಥವನ್ನು ನಿರಾಕರಿಸುತ್ತಿದ್ದಾರೆ 'ಯಚ್ಚೋಕ್ತಮ್' ಎಂಬ ಗ್ರಂಥದಿಂದ. ಇಲ್ಲಿಯೂ ಹಿಂದಿನಂತೆ ಇಬ್ಬರಿಂದಲೂ ಹೇಳಲ್ಪಟ್ಟ ಎಂದಿಟ್ಟುಕೊಳ್ಳಬೇಕು. ರಾಮಾನುಜರು ಸೂತ್ರಕ್ರಮದಲ್ಲಿ ವ್ಯತ್ಯಾಸ ಮಾಡಿಕೊಂಡು 'ಅಭ್ಯುಪಗಮೇಪ್ಯರ್ಥಾಭಾವಾತ್' ಎಂಬುದನ್ನು ಒಂಬತ್ತನೆಯ ಸೂತ್ರ ಎಂದು

ಪರಿಗಣಿಸಿದ್ದಾರೆ. ಆದ್ದರಿಂದ ಇಲ್ಲಿ ನೀವು 'ಅನ್ಯಥಾನುಮಿತೌ ..' ಎಂಬುದನ್ನು ಒಂಬತ್ತನೆಯ ಸೂತ್ರ ಎಂದು ಹೇಗೆ ಹೇಳಿದಿರಿ ಎಂದರೆ ನಾವು ಹೇಳಿರುವುದು ವಸ್ತುಸ್ಥಿತಿಗೆ ಅನುಸಾರವಾಗಿ ರಾಮಾನುಜರ ಪರಿಗಣನ ವಾಸ್ತವ ಆಗಿರುವುದಿಲ್ಲ ಎಂಬ ಅಭಿಪ್ರಾಯವಿದಿಂದ.

**प्रकाशः – अष्टमार्थस्तु पौनरुक्त्येन प्रागेव निरस्त इति भावः ।।**

'ಅಂಗಿತ್ವಾನುಪಪತ್ತೇಃ' ಎಂಬ ಸೂತ್ರಕ್ಕೆ ದೋಷ ಹೇಳಲಿಲ್ಲವಲ್ಲ ? ಎಂದರೆ ಅದನ್ನು ಪುನರುಕ್ತಿ ಎಂಬ ದೋಷವನ್ನು ಹೇಳಿ ಹಿಂದೆಯೇ ನಿರಾಕರಣೆ ಮಾಡಲಾಗಿದೆ ಎಂದು ಅಭಿಪ್ರಾಯ.

**प्रकाशः – दृढेति ।।** अत एव भामत्यां ''अङ्गितानुपपत्तिलक्षणो दोषस्तावद्भिश्शक्यः परिहर्तुमिति वक्ष्यामः । अभ्युपगम्याप्यस्यादोषत्वमुच्यत'' इत्युक्तमिति भावः ।।

ದೃಢದೋಷವನ್ನು ಹೇಳಿ ಅದನ್ನು ಪರಿಹರಿಸಿಕೊಂಡು ಎಂದು ಹೇಳುವುದು ಅನುಚಿತ ಎಂದು ನಾವು ಹೇಳಿದ್ದೇವೆ. ಅದನ್ನೇ ಭಾಮತೀಕಾರನೂ ಒಪ್ಪಿದ್ದಾನೆ. ಭಾಮತಿಯಲ್ಲಿ - 'ಅಂಗಿತ್ವಾನುಪಪತ್ತೇಃ' ಎಂಬ ಸೂತ್ರದಲ್ಲಿ ಏನು ದೋಷವನ್ನು ಹೇಳಿದ್ದೇವೋ ಅದನ್ನು ಪರಿಹರಿಸಿಕೊಳ್ಳಲು ಸಾಧ್ಯವಿಲ್ಲ. ಆದರೂ ಇದು ದೋಷ ಅಲ್ಲ ಎಂದು ಒಪ್ಪಿ ಇನ್ನೊಂದು ದೋಷ ಹೇಳುತ್ತಿದ್ದೇವೆ ಎಂದು ಹೇಳಿದ್ದಾನೆ.

**प्रकाशः – क्लेशेनेति ।।** ज्ञशब्दस्य ज्ञा अवबोधन इत्यस्मात् ''इगुपधज्ञाप्रीतिकरः क'' इति कर्तरि व्युत्पन्नत्वादिति भावः ।

'ಜ್ಞ' ಶಬ್ದಕ್ಕೆ ಜ್ಞಾನ ಎಂಬರ್ಥ ಕಷ್ಟಸಾಧ್ಯ ಎಂದು ಹೇಳಲಾಗಿದೆ. ಅದು ಹೇಗೆಂದರೆ, 'ಜ್ಞಾ ' ಧಾತುವಿಗೆ ಅವಬೋಧನ ಎಂದರ್ಥ. ಈ 'ಜ್ಞಾ' ಧಾತುವಿಗೆ ''ಇಗುಪಧಜ್ಞಾಪ್ರೀತಿಕರಃ ಕಃ' ಎಂಬ ಪ್ರತ್ಯಯ ಬಂದು ಜಾನಾತಿ ಇತಿ ಜ್ಞಃ ಯಾರು ತಿಳಿಯುತ್ತಾನೋ ಅವನು ಎಂಬುದಾಗಿ ಅರ್ಥವಾಗುತ್ತದೆ. ನೀವು 'ಜ್ಞ' ಶಬ್ದಕ್ಕೆ ಭಾವಾರ್ಥವನ್ನು ಇಟ್ಟುಕೊಂಡು ಜ್ಞಾನ ಎಂಬರ್ಥ ಹೇಳಿದ್ದೀರಿ. ಇದು ಅಸಮಂಜಸ ಎಂದರ್ಥ.

### 'ವಿಪ್ರತಿಷೇಧಾಚ್ಚ' ಎಂಬ ಸೂತ್ರಾರ್ಥ ನಿರಾಕರಣೆ

## तात्पर्यचन्द्रिका

**यच्चोक्तं क्वचित्सप्तेंद्रियाणि क्वचिदेकादशेति सांख्यैरुक्तत्वाद्विप्रतिषिद्धं सांख्यमतमिति दशमार्थ इति तन्न ।**

''ವಿಪ್ರತಿಷೇಧಾಚ್ಚಾಸಮಂಜಸಮ್'' ಎಂಬ ಸೂತ್ರಕ್ಕೆ ಅದ್ವೈತಿಗಳು ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ಸಾಂಖ್ಯರು ಕೆಲವು ಕಡೆ ಏಳು ಇಂದ್ರಿಯಗಳು ಎಂದು ಹೇಳಿದ್ದಾರೆ. ಇನ್ನು ಕೆಲವು ಕಡೆ ಹನ್ನೊಂದು ಇಂದ್ರಿಯಗಳು ಎಂದಿದ್ದಾರೆ. ಹಾಗಾಗಿ ಸಾಂಖ್ಯಮತ ವಿಪ್ರತಿಷಿದ್ಧ, ವಿರುದ್ಧವಾದದನ್ನು ಹೇಳುತ್ತಿದೆ. ಆದ್ದರಿಂದ ಸರಿಯಲ್ಲ ಎಂದು. ಈ ವ್ಯಾಖ್ಯಾನ ತಪ್ಪು.

**इन्द्रियसंख्याविरोधस्य ''सप्तगतेर्विशेषितत्वात्'' इति वक्ष्यमाणन्यायेन ''सप्त प्राणाः प्रभवन्ति । तस्मात् दशेमे पुरुषे प्राणा आत्मैकादश'' इत्यादि वेदान्तेष्विव परिहारसम्भवात् ।**

ಇಂದ್ರಿಯಸಂಖ್ಯಾವಿರೋಧ, ವೇದಾಂತಿಗಳಿಗೂ ಬರುತ್ತದೆ. ''ಸಪ್ತ ಪ್ರಾಣಾಃ ಪ್ರಭವಂತಿ । ತಸ್ಮಾತ್ ದಶಮೇ ಪುರುಷೇ ಪ್ರಾಣಾ ಆತ್ಮೈಕಾದಶ'' ಎಂಬ ವಾಕ್ಯದಲ್ಲಿ ಇಂದ್ರಿಯಗಳು ಏಳು, ಹನ್ನೊಂದು ಎಂದು ಹೇಳಿದ್ದಾರೆ. ಈ ವಿರೋಧವನ್ನು ಸೂತ್ರಕಾರರೇ ''ಸಪ್ತಗತೇರ್ವಿಶೇಷಿತತ್ವಾಚ್ಚ'' ಎಂಬ ಸೂತ್ರದಿಂದ ಮುಂದೆ ಪರಿಹಾರ ಮಾಡುತ್ತಾರೆ. ಈ ಪರಿಹಾರವನ್ನು ಸಾಂಖ್ಯನೂ ಹೇಳಬಹುದು. ಆದ್ದರಿಂದ ನೀವು ಹೇಳಿದ ದೋಷ ಸರಿಯಲ್ಲ.

**किञ्च सूत्रदशकस्यैकाधिकरणत्वे ''पुरुषाश्मव''दिति सूत्रस्य ''अभ्युपगमेऽपि'' इति सूत्रानन्तर्यमयुक्तम् ।**

ಅದ್ವೈತಿಗಳ ಪ್ರಕಾರ ಸೂತ್ರಕ್ರಮ ಸರಿಯಾಗುವುದಿಲ್ಲ. ಹತ್ತೂ ಸೂತ್ರಗಳನ್ನು ಸೇರಿಸಿ ಒಂದು ಅಧಿಕರಣ ಎಂದು ಹೇಳುತ್ತಾರೆ. ಹಾಗೆ ಹೇಳಿದರೆ 'ಪುರುಷಾಶ್ಮವದಿತಿ' ಎಂಬ ಸೂತ್ರವು ''ಅಭ್ಯುಪಗಮೇಽಪಿ....' ಎಂಬ ಸೂತ್ರದ ಅನಂತರ ಬರುವುದು ಅಯುಕ್ತವಾಗಿದೆ.

**न ह्यभ्युपगमेऽपीत्यनेनार्थाभाव उक्ते ''पुरुषाश्मवादि'' इत्यनेनान्धपंग्वादिदृष्टान्तशङ्कासङ्गतेति ।।९।।**

**रचनानुपपत्त्यधिकरणमारभ्य अन्यथानुमित्यधिकरणपर्यन्तमधिकरणपञ्चकम् ।।१-५।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् रचनानुपपत्त्यधिकरणमारभ्य अन्यथानुमित्यधिकरणपर्यन्तमधिकरणपञ्चकं सम्पूर्णम् ।।१-५।।**

ಏಕೆಂದರೆ ''ಅಭ್ಯುಪಗಮೇಽಪಿ'' ಎಂಬ ಸೂತ್ರದಲ್ಲಿ ಪ್ರಧಾನಪ್ರವೃತ್ತಿಗೆ ಪ್ರಯೋಜನವೇ ಇಲ್ಲ ಎಂದು ಹೇಳಿದ್ದೀರಿ. ಹಾಗೆ ಹೇಳಿದ ಮೇಲೆ ಪುನಃ ''ಪುರುಷಾಶ್ಮವದಿತಿ'' ಎಂಬ ಸೂತ್ರದಿಂದ ಅಂಧಪಂಗುದೃಷ್ಟಾಂತದಂತೆ ಎಂದು ಶಂಕಾ ಮಾಡಿಕೊಳ್ಳುವುದೇ ಕೂಡುವುದಿಲ್ಲ. ಅಂಧಪಂಗು ದೃಷ್ಟಾಂತದಲ್ಲಿ ಅಂಧಪಂಗುಗಳು ಯಾವುದೋ ಪ್ರಯೋಜನಕ್ಕಾಗಿಯೇ ಒಟ್ಟಿಗೆ ಸೇರುತ್ತಾರೆ. ಪ್ರಧಾನಪ್ರವೃತ್ತಿಗೆ ಪ್ರಯೋಜನವೇ ಇಲ್ಲ ಎಂದು ಹೇಳಿ ಪುನಃ ಪ್ರಯೋಜನದ ಅಪೇಕ್ಷೆ ಇರುವ ದೃಷ್ಟಾಂತಶಂಕಾ ಕೂಡುವುದಿಲ್ಲ ಎಂದರ್ಥ.

ಇಲ್ಲಿಗೆ 'ರಚನಾನುಪಪತ್ತಿ' ಅಧಿಕರಣದಿಂದ ಆರಂಭಿಸಿ 'ಅನ್ಯಥಾನುಪಪತ್ತಿ' ಅಧಿಕರಣದವರೆಗೆ ಐದು ಅಧಿಕರಣಗಳು ಸಮಾಪ್ತವಾದವು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ರಚನಾನುಪತ್ತ್ಯಧಿಕರಣದಿಂದ ಅನ್ಯಥಾನುಮಿತ್ಯಧಿಕರಣದ ತನಕ ಐದು ಅಧಿಕರಣಗಳು
ಸಂಪೂರ್ಣವಾಯಿತು

**प्रकाशः –**

''विप्रतिषेधाच्चासमञ्जसम्'' इत्येतत्परमते प्रत्याचष्टे ।। **यच्चेति** ।।

"ವಿಪ್ರತಿಷೇಧಾಚ್ಚಾಸಮಂಜಸಮ್" ಎಂಬ ಸೂತ್ರಕ್ಕೆ ಅದ್ವೈತಿಗಳ ಪ್ರಕಾರ ಅರ್ಥ ಹೇಳುವುದು ಸರಿಯಲ್ಲ ಎಂದು ನಿರಾಕರಿಸುತ್ತಿದ್ದಾರೆ 'ಯಚ್ಚ' ಎಂಬ ಗ್ರಂಥದಿಂದ.

**प्रकाशः – सङ्गतेति** ।। अत एव रामानुजमते तत्सूत्रमुत्कृष्यान्यत्र निवेशितमिति भावः ।।छ।। रचनानुपपत्त्यधिकरणमारभ्य अन्यथानुमित्यधिकरणपर्यन्तमधिकरण-पञ्चकम् ।।१-५।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे रचनानुपपत्त्यधिकरणमारभ्य अन्यथानुमित्यधिकरणपर्यन्तमधिकरणपञ्चकं**
**सम्पूर्णम् ।।१-५।।**

•

ಅದ್ವೈತಿಗಳಿಗೆ ನಾವು ಹೇಳಿದ ಅನುಪಪತ್ತಿ ತಮಗೂ ಬರುತ್ತದೆ ಎಂಬುದನ್ನು ಮನಗಂಡ ರಾಮಾನುಜರು 'ಅಭ್ಯುಪಗಮೇಽಪಿ' ಎಂಬ ಸೂತ್ರವನ್ನು ಕೊನೆಯಲ್ಲಿ ವಿವಕ್ಷಿಸಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ರಚನಾನುಪಪತ್ತ್ಯಧಿಕರಣದಿಂದ ಪ್ರಾರಂಭವಾಗಿ ಅನ್ಯಥಾನುಮಿತ್ಯಧಿಕರಣದ ತನಕ
ಐದು ಅಧಿಕರಣಗಳು ಮುಕ್ತಾಯವಾಯಿತು.

* * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ವೈಶೇಷಿಕಾಧಿಕರಣ

(೨-೨-೬)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ವೈಶೇಷಿಕಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – महद्दीर्घवद्वा ह्रस्वपरिमण्डलाभ्याम् ॥**

ವೈಶೇಷಿಕರು ತ್ರ್ಯಣುಕಾದಿಗಳಲ್ಲಿರುವ ಮಹತ್ವದೀರ್ಘತ್ವಗಳಿಂದ ಚತುರಣುಕಾದಿಗಳ ಮಹತ್ವದೀರ್ಘತ್ವ ಪರಿಮಾಣಗಳು ಹುಟ್ಟುತ್ತವೆನ್ನುತ್ತಾರೆ. ಹಾಗಾದರೆ ಪರಮಾಣುವಿನಲ್ಲಿರುವ ಅಣುತ್ವ ಹ್ರಸ್ವತ್ವಗಳ ಪರಿಮಾಣಗಳಿಂದ ದ್ವ್ಯಣುಕದಲ್ಲಿ ಪರಿಮಾಣವು ಹುಟ್ಟಬೇಕಾದೀತು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – महद्दीर्घवत्** वैशेषिकमते त्र्यणुकादिगतान्महत्त्वात् दीर्घत्वाच्च चतुरणुकादिगतपरिमाणमुत्पद्यते। **तथाह्रस्वपरिमण्डलाभ्यामपि** द्व्यणुकपरमाणूभयगत-ह्रस्वत्वपारिमाण्डल्य परिमाणाभ्यामपि त्र्यणुकद्व्यणुकगत परिमाणोत्पत्तिः स्यादित्यर्थः । अन्यथा महत्वदीर्घत्वाभ्यामपि कार्योत्पत्तिर्न स्यादिति **वाशब्दार्थः**। तस्माद् वैशेषिकमतमनुपपन्नमिति भावः ॥१॥

ಮಹದ್ದೀರ್ಘವತ್ = ವೈಶೇಷಿಕರ ಮತದಲ್ಲಿ ತ್ರ್ಯಣುಕಾದಿಗಳಲ್ಲಿರುವ ಮಹತ್ವದೀರ್ಘತ್ವಗಳಿಂದ ಚತುರಣುಕಾದಿಗಳಲ್ಲಿ ಪರಿಮಾಣುಗಳು ಹುಟ್ಟುತ್ತವೆ ಎಂದು ಹೇಳುವಂತೆ ಹ್ರಸ್ವಪರಿಮಂಡಲಾಭ್ಯಾಮ್ = ದ್ವ್ಯಣುಕ ಹಾಗೂ ಪರಿಮಾಣುಗಳಲ್ಲಿರುವ ಹ್ರಸ್ವತ್ವ, ಅಣುತ್ವ ಎಂಬ ಪರಿಮಾಣಗಳಿಂದ

ತ್ರ್ಯಣುಕ ಹಾಗೂ ದ್ವ್ಯಣುಕಗಳಲ್ಲಿಯೂ ಪರಿಮಾಣವು ಉತ್ಪತ್ತಿಯಾಗಲಿ. ಹೀಗೊಪ್ಪದಿದ್ದರೆ ಮಹತ್ವ ದೀರ್ಘತ್ವಗಳಿಂದಲೂ ಕಾರ್ಯವ್ಯುತ್ಪತ್ತಿಯು ಆಗದಿರಬೇಕಾದೀತು. ಆದ್ದರಿಂದ ವೈಶೇಷಿಕರ ಮತವು ಅನುಪಪನ್ನವಾಗಿದೆ.

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — परमाण्वारम्भवादमपाकरोति ।**

ಅನುವಾದ - ಪರಮಾಣುಗಳಿಂದಲೇ ಜಗತ್ತು ಹುಟ್ಟುತ್ತದೆ ಎಂದು ಹೇಳುವ ವೈಶೇಷಿಕರ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ.

ಪ್ರತಿಪದಾರ್ಥ-- ಈ ಅಧಿಕರಣದ ಪ್ರಮೇಯವು ಹೀಗಿದೆ - ಪರಮಾಣ್ವಾರಂಭವಾದಮ್- ಪರಮಾಣುಗಳಿಂದಲೇ ಜಗತ್ತು ಉತ್ಪನ್ನವಾಗುತ್ತದೆಂದು ಹೇಳುವ ವೈಶೇಷಿಕರ ವಾದವನ್ನು ಅಪಾಕರೋತಿ = ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ.

**भाष्यम् — ।। महद्दीर्घवद् वा ह्रस्वपरिमण्डलाभ्याम् ।।१।।**

**महत्त्वाद् दीर्घत्वाच्च यथा कार्यमुत्पद्यते, एवं ह्रस्वत्वात् पारिमाण्डल्याच्चोत्पद्येत ।**

ಅನುವಾದ - ತ್ರ್ಯಣುಕಾದಿಗಳಲ್ಲಿರುವ ಮಹತ್ವ ದೀರ್ಘತ್ವ ಮೊದಲಾವುಗಳಿಂದ ಕಾರ್ಯವು ಹುಟ್ಟುವುದು ಹೇಗೆ ಕಂಡಿದೆಯೋ ಅದರಂತೆ ಪರಮಾಣುವಿನಲ್ಲಿರುವ ಹ್ರಸ್ವತ್ವಪರಿಮಂಡಲತ್ವ ಮೊದಲಾದ ಧರ್ಮಗಳಿಂದಲೂ ಕಾರ್ಯವು ಹುಟ್ಟಬೇಕಾದೀತು.

ಪ್ರತಿಪದಾರ್ಥ:-ಮಹತ್ತ್ವಾತ್ = ಮಹತ್ವದಿಂದ, ಚ = ಮತ್ತು, ದೀರ್ಘತ್ವಾತ್ = ದೀರ್ಘತ್ವದಿಂದ, ಕಾರ್ಯಂ = ಕಾರ್ಯವು, ಯಥಾ = ಹೇಗೆ, ಉತ್ಪದ್ಯತೇ = ಹುಟ್ಟುತ್ತದೋ, ಏವಂ = ಅದರಂತೆ, ಹ್ರಸ್ವತ್ವಾತ್ = ಹ್ರಸ್ವತ್ವದಿಂದ, ಪಾರಿಮಾಂಡಲ್ಯಾತ್ = ಅಣುಪರಿಮಾಣದಿಂದ, ಉತ್ಪದ್ಯೇತ = ಕಾರ್ಯವು ಹುಟ್ಟಬೇಕಾದೀತು.

**भाष्यम् — वाशब्दादन्यथैतयोरपि न स्याद् विशेषकारणाभावात् ।।१।।**

ಅನುವಾದ - ಸೂತ್ರದಲ್ಲಿರುವ ವಾ ಶಬ್ದವು ಹ್ರಸ್ವತ್ವ ಮತ್ತು ಅಣುತ್ವಗಳಿಂದ ಕಾರ್ಯವು ಹುಟ್ಟದಿದ್ದರೆ ಮಹತ್ವ ಮತ್ತು ದೀರ್ಘತ್ವಗಳಿಂದಲೂ ಕಾರ್ಯವು ಹುಟ್ಟದೆ ಇರಬೇಕಾದೀತು ಎಂಬುದನ್ನು ತಿಳಿಸುತ್ತಿದೆ. ಏಕೆಂದರೆ ಮಹತ್ವ ಮತ್ತು ದೀರ್ಘತ್ವಗಳಿಂದ ಮಾತ್ರ ಕಾರ್ಯ ಹುಟ್ಟುತ್ತದೆ, ಅಣುತ್ವ ಮತ್ತು ಹ್ರಸ್ವತ್ವಗಳಿಂದ ಕಾರ್ಯವು ಹುಟ್ಟುವುದಿಲ್ಲವೆನ್ನಲು ವಿಶೇಷ-ಕಾರಣವಿರುವುದಿಲ್ಲ.

ಪ್ರತಿಪದಾರ್ಥ:-ವಾ ಶಬ್ದಾತ್ = ಸೂತ್ರದ 'ವಾ' ಶಬ್ದದಿಂದ ಇದನ್ನು ತಿಳಿಯಬೇಕು. ಅನ್ಯಥಾ = ಹ್ರಸ್ವತ್ವ ಅಣುತ್ವಗಳಿಂದ ಕಾರ್ಯ ಹುಟ್ಟದಿದ್ದರೆ, ಏತಯೋರಪಿ = ಮಹತ್ವ ದೀರ್ಘತ್ವಗಳಿಂದಲೂ, ನ ಸ್ಯಾತ್ = ಕಾರ್ಯ ಹುಟ್ಟದೆ ಇರಬೇಕಾದೀತು, ವಿಶೇಷಕಾರಣಾಭಾವಾತ್ = ಎರಡರಲ್ಲೂ ವ್ಯತ್ಯಾಸವೇನಿಲ್ಲ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अधिकरणप्रतिपाद्यमाह – परमाण्विति ।। अत्र हरेः सर्वगुणपूर्णत्वे वैशेषिकादिमतविरोधपरिहारादस्ति शास्त्रादिसङ्गतिः ।**

ವೈಶೇಷಿಕಾಧಿಕರಣದ ಪ್ರತಿಪಾದ್ಯಪ್ರಮೇಯವನ್ನು 'ಪರಮಾಣು' ಇತ್ಯಾದಿಯಾಗಿ ಭಾಷ್ಯದಲ್ಲಿ ಹೇಳುತ್ತಿದ್ದಾರೆ.

ಈ ಅಧಿಕರಣದಲ್ಲಿ ಶ್ರೀಹರಿಯ ಪರಿಪೂರ್ಣಗುಣತ್ವದ ವಿಷಯದಲ್ಲಿ ವೈಶೇಷಿಕರೇ ಮೊದಲಾದವರ ಸಮಯಗಳ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ವಿವರಣೆ - ಪ್ರಧಾನವಾಗಿ ಈಶ್ವರನೇ ಜಗತ್ತಿಗೆ ಮುಖ್ಯ ಕರ್ತೃವಾಗಿದ್ದಾನೆ. ಆದ್ದರಿಂದ ನಿರೀಶ್ವರಮತಗಳಿಗೆ ಹೇಳಲ್ಪಟ್ಟ ದೋಷವು ನಮಗೆ ಪ್ರಾಪ್ತವಾಗುವುದಿಲ್ಲ ಎಂಬುದಾಗಿ ವೈಶೇಷಿಕರ ಪ್ರಕಾರ ಪೂರ್ವಪಕ್ಷವು ಹುಟ್ಟುತ್ತಿದೆ. ಆದ್ದರಿಂದ ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿಯು ಇರುತ್ತದೆ. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – विष्णुरनन्तगुणपूर्ण इत्युक्तम् । तस्य च परमाण्वारम्भवाद-विरुद्धत्वेनाभावशङ्का स्यात् । अतोऽसौ पराकरणीय एव । ईश्वरस्यानन्तगुणत्वं विषयः । युक्तमयुक्तं वेति सन्देहः । मतविवादः सन्देहबीजम् ।**

ಮಹಾವಿಷ್ಣು ಅನಂತಗುಣಪರಿಪೂರ್ಣನಾಗಿದ್ದಾನೆಂದು ಹೇಳಲಾಯಿತು. ಈ ಪ್ರಮೇಯವು ಪರಮಾಣ್ವಾರಂಭವಾದಕ್ಕೆ ವಿರುದ್ಧವಾಗಿದೆ. ಆದ್ದರಿಂದ 'ವಿಷ್ಣುವನ್ನು ಅನಂತಗುಣ-ಪರಿಪೂರ್ಣನೆಂದು ಹೇಳಬಾರದು' ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಆದ್ದರಿಂದ ಈ ಪರಮಾಣ್ವಾರಂಭವಾದವನ್ನು ನಿರಾಕರಣೆ ಮಾಡಲೇಬೇಕು.

ಈಶ್ವರನ ಅನಂತಗುಣಪರಿಪೂರ್ಣತ್ವವು ಅಧಿಕರಣದ ವಿಷಯ. ಇದು ಈಶ್ವರನಲ್ಲಿ ಯುಕ್ತವೋ ಅಯುಕ್ತವೋ ? ಎಂಬುದು ಸಂದೇಹ. ಸಮಯಗಳಲ್ಲಿರುವ ವಿವಾದವು ಸಂದೇಹಬೀಜ.

ವಿವರಣೆ - ಪರಮಾಣ್ವಾರಂಭವಾದ - ಪರಮಾಣುವು ತನ್ನಲ್ಲಿ ಸಮವಾಯ- ಸಂಬಂಧವನ್ನು ಹೊಂದಿ ದ್ವ್ಯಣುಕ ಮೊದಲಾದ ಕಾರ್ಯಗಳಿಗೆ ಆರಂಭಕವಾಗಿದೆ. ಈ ವಿಷಯದಲ್ಲಿ 'ಈಶ್ವರನು ಕರ್ತೃ ಆಗಿದ್ದಾನೆ. ಕರ್ತೃತ್ವಕ್ಕೆ ಉಪಯುಕ್ತವಾದ ಜ್ಞಾನ, ಇಚ್ಛಾ ಮತ್ತು ಪ್ರಯತ್ನ ಮೊದಲಾದ ಧರ್ಮಗಳು ಅವನಲ್ಲಿವೆ. ಇದಕ್ಕಿಂತ ಬೇರೆಯಾದ ಆನಂತ್ಯ ಮೊದಲಾದ ಗುಣಗಳು ಅವನಲ್ಲಿರುವುದಿಲ್ಲ ಎಂಬುದಾಗಿ ಯಾವ ವಾದ ಇದೆಯೋ ಅದನ್ನೇ 'ಪರಮಾಣ್ವಾರಂಭವಾದ' ಎಂದು ಕರೆಯುತ್ತಾರೆ. ಈ ಮತದ ವಿರೋಧವು ಪ್ರಾಪ್ತವಾದರೆ ಪರಮಾತ್ಮನಲ್ಲಿ ಆನಂದಾದಿಗುಣಗಳೇ ಸಿದ್ಧವಾಗುವುದಿಲ್ಲ. ಎಂಬುದನ್ನು ಪರಮಾಣ್ವಾರಂಭವಾದವಿರುದ್ಧತ್ವೇನ ಎಂಬುದರಿಂದ ತಿಳಿಸಿದ್ದಾರೆ. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – न युक्तमिति पूर्वः पक्षः पक्षः । षट् खल्विमे भावपदार्था द्रव्यादयः । तत्र गुणाश्रयो द्रव्यं पृथिव्यप्तेजोवाय्वाकाशकालदिगात्ममनोभेदेन नवविधम् । तत्राऽकाशादिपञ्चकं नित्यमेव । भूतचतुष्टयं तु परमाणुरूपं नित्यमन्यदनित्यमेव।**

ಪರಮಾತ್ಮನಲ್ಲಿ ಅನಂತಗುಣಪರಿಪೂರ್ಣತ್ವವು ಯುಕ್ತವಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ಏಕೆಂದರೆ ಜಗತ್ತಿನಲ್ಲಿ ಒಟ್ಟು ಭಾವಪದಾರ್ಥಗಳು ಆರು ಮಾತ್ರ. ಅದರಲ್ಲಿ ಗುಣಕ್ಕೆ ಆಶ್ರಯವಾದ ದ್ರವ್ಯವು; ಪೃಥಿವೀ, ಅಪ್, ತೇಜಸ್ಸು, ಆಕಾಶ, ಕಾಲ, ದಿಕ್ಕು, ಆತ್ಮಾ, ಮನಸ್ಸು ಎಂಬುದಾಗಿ ಒಂಬತ್ತು ವಿಧ. ಈ ಒಂಬತ್ತರಲ್ಲಿ ಆಕಾಶ ಮೊದಲಾದ ಐದು ದ್ರವ್ಯಗಳು ನಿತ್ಯವಾಗಿವೆ. ಹಾಗೂ ಪೃಥಿವೀ, ಅಪ್, ತೇಜಸ್ಸು, ವಾಯು ಎಂಬ ಭೂತಚತುಷ್ಟಯಗಳು ಪರಮಾಣು ರೂಪದಲ್ಲಿ ಮಾತ್ರ ನಿತ್ಯ. ಬೇರೆ ರೂಪದಲ್ಲಿ ಅನಿತ್ಯ.

ವಿವರಣೆ - ತಾರ್ಕಿಕರು ಜಗತ್ತಿನಲ್ಲಿ ಏಳು ಪದಾರ್ಥಗಳನ್ನು ಮಾತ್ರ ಅಂಗೀಕರಿಸುತ್ತಾರೆ. 1) ದ್ರವ್ಯ, 2) ಗುಣ, 3) ಕರ್ಮ, 4) ಸಾಮಾನ್ಯ, 5) ವಿಶೇಷ, 6) ಸಮವಾಯ, ಎಂದು ಭಾವಪದಾರ್ಥಗಳು ಒಟ್ಟು ಆರು. ಈ ಆರು ಪದಾರ್ಥಗಳಲ್ಲಿ ಮೊದಲನೆಯದ್ದು ಇವುಗಳಲ್ಲಿ ಗುಣಾಶ್ರಯವಾದದ್ದು ದ್ರವ್ಯ ಎನಿಸುತ್ತದೆ. ಈ ದ್ರವ್ಯವು ಒಂಬತ್ತು ವಿಧ - 1) ಪೃಥಿವೀ, 2) ಅಪ್ 3) ತೇಜಸ್ಸು, 4) ವಾಯು, 5) ಆಕಾಶ, 6) ಕಾಲ, 7) ದಿಕ್, 8) ಆತ್ಮ, 9) ಮನಸ್ಸು ಎಂದು. ಇವುಗಳಲ್ಲಿ ಆಕಾಶ, ಕಾಲ ದಿಕ್, ಆತ್ಮ, ಮನಸ್ಸು ಎಂಬ ಐದು ದ್ರವ್ಯಗಳು ನಿತ್ಯವಾಗಿವೆ. ಪೃಥಿವೀ, ಅಪ್, ತೇಜಸ್ಸು, ವಾಯು ಎಂಬ ನಾಕು ಭೂತಪದಾರ್ಥಗಳು ಪರಮಾಣು ರೂಪದಲ್ಲಿ ನಿತ್ಯವಾಗಿವೆ. ದ್ವ್ಯಣುಕಾದಿ ರೂಪದಲ್ಲಿ ಇರುವವಗಳು ಅನಿತ್ಯವಾಗಿವೆ.

'ಗುಣಾಶ್ರಯತ್ವಮ್ ದ್ರವ್ಯಲಕ್ಷಣಂ' ಎಂದು ತಾರ್ಕಿಕರು ಹೇಳುತ್ತಾರೆ. ಇಲ್ಲಿ 'ಗುಣಾಶ್ರಯತ್ವಮ್' ಎಂಬ ಪದಕ್ಕೆ ಗುಣಾತ್ಯಂತಾಭಾವಾನಧಿಕರಣತ್ವಮ್ ಎಂದರ್ಥ. ಆದ್ದರಿಂದ ಯಾವುದೇ ಒಂದು ದ್ರವ್ಯ ಹುಟ್ಟಿದ ಪ್ರಥಮಕ್ಷಣದಲ್ಲಿ ಗುಣಗಳೇ ಇಲ್ಲದಿದ್ದರೂ ಕೂಡ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ. ಆಗಲೂ ಕೂಡ ಗುಣಾತ್ಯಂತಾತಾಭಾವಾನಧಿ- ಕರಣತ್ವವು ಇರುವುದರಿಂದ ಲಕ್ಷಣವು ಸಮನ್ವಯವಾಗುತ್ತದೆ.

**तत्वप्रकाशिका – कर्मान्यत्वे सति जातिमात्राश्रया गुणाः । रूपरसगन्धस्पर्शशब्दसङ्ख्यापरिमाणपृथक्त्वसंयोगविभागपरत्वापरत्वगुरुत्वद्रवत्व-**

**स्नेहसंस्कारबुद्धिसुखदुःखेच्छाद्वेषप्रयत्नधर्माधर्माः । ते चानित्याश्रिता अनित्या एव । नित्यद्रव्ये द्विविधाश्च । संयोगविभागयोरसमवायिकारणं कर्म । उत्क्षेपणमपक्षेपणमाकुञ्चनं प्रसारणं गमनमिति पञ्चविधमनित्यमेव ।**

'ಕರ್ಮಾನ್ಯತ್ವೇ ಸತಿ ಜಾತಿಮಾತ್ರಾಶ್ರಯತ್ವ'ವು ಗುಣದ ಲಕ್ಷಣ. ಗುಣಗಳು ಒಟ್ಟು ೨೪ ವಿಧ. ೧) ರೂಪ, ೨) ರಸ, ೩) ಗಂಧ, ೪) ಸ್ಪರ್ಶ, ೫) ಶಬ್ದ, ೬) ಸಂಖ್ಯಾ, ೭) ಪರಿಮಾಣ, ೮) ಪೃಥಕ್ತ್ವ, ೯) ಸಂಯೋಗ, ೧೦) ವಿಭಾಗ, ೧೧) ಪರತ್ವ, ೧೨) ಅಪರತ್ವ, ೧೩) ಗುರುತ್ವ, ೧೪) ದ್ರವತ್ವ, ೧೫) ಸ್ನೇಹ, ೧೬) ಸಂಸ್ಕಾರ, ೧೭) ಬುದ್ಧಿ, ೧೮) ಸುಖ, ೧೯) ದುಃಖ, ೨೦) ಇಚ್ಛಾ, ೨೧) ದ್ವೇಷ, ೨೨) ಪ್ರಯತ್ನ, ೨೩) ಧರ್ಮ, ೨೪) ಅಧರ್ಮ, ಎಂದು. ಈ ಗುಣಗಳು ಅನಿತ್ಯದಲ್ಲಿ ಇದ್ದರೆ ಅನಿತ್ಯವೇ ಆಗುತ್ತವೆ. ನಿತ್ಯದ್ರವ್ಯದಲ್ಲಿ ಇದ್ದರೆ ಎರಡು ವಿಧವೂ ಆಗುತ್ತವೆ. ಕೆಲವು ನಿತ್ಯ ಹಾಗೂ ಕೆಲವು ಅನಿತ್ಯ. ಸಂಯೋಗ ವಿಭಾಗಗಳಿಗೆ ಅಸಮವಾಯಿಕಾರಣವಾದದ್ದು ಕರ್ಮ ಎನಿಸುತ್ತದೆ. ಇದು ಐದು ವಿಧ. ೧) ಉತ್ಕ್ಷೇಪಣ. ೨) ಅಪಕ್ಷೇಪಣ, ೩) ಆಕುಂಚನ, ೪) ಪ್ರಸಾರಣ ೫) ಗಮನ ಎಂದು.

**तत्वप्रकाशिका – नित्यमेकमनेकसमवेतं सामान्यमनेकविधम् । नित्यः सम्बन्धः समवाय एक एव । नित्यद्रव्यवृत्तयोऽन्त्या विशेषाः । एतत्त्रयं नित्यमेव। तत्रानित्यं कारणत्रितयजन्यम् । यत्समवेतं कार्यमुत्पद्यते तत्समवायिकारणं परमाण्वादिद्रव्यमेव ।**

ನಿತ್ಯವಾಗಿದ್ದು ಒಂದೇ ಅನೇಕ ಪದಾರ್ಥಗಳಲ್ಲಿ ಸಮವಾಯಸಂಬಂಧೇನ ಇರುವುದು ಸಾಮಾನ್ಯದ ಲಕ್ಷಣ. ನಿತ್ಯಸಂಬಂಧವಾದ ಸಮವಾಯವು ಒಂದೇ ಆಗಿದೆ. ನಿತ್ಯದ್ರವ್ಯವೆನಿಸಿದ ಪರಮಾಣುಗಳಲ್ಲಿ ಇರುವ ಪರಮಾಣುಗಳಲ್ಲೂ ತಮ್ಮಲ್ಲೂ ವ್ಯಾವೃತ್ತಿಗಳನ್ನು ಉಂಟುಮಾಡುವ ವಿಶೇಷಗಳು ಅನಂತವಾಗಿವೆ. ಸಾಮಾನ್ಯ, ಸಮವಾಯ, ವಿಶೇಷ ಈ ಮೂರು ನಿತ್ಯಪದಾರ್ಥಗಳು.

ಅನಿತ್ಯಪದಾರ್ಥಗಳು ಮೂರು ಕಾರಣಗಳಿಂದ ಹುಟ್ಟುತ್ತವೆ. ಎಲ್ಲಿ ಸಮವಾಯಸಂಬಂಧೇನ ಇದ್ದುಕೊಂಡು ಕಾರ್ಯವು ಹುಟ್ಟುತ್ತದೋ ಆ ಪದಾರ್ಥ ಸಮವಾಯಿಕಾರಣ ಎನಿಸುತ್ತದೆ. ಪರಮಾಣು ಮೊದಲಾದ ದ್ರವ್ಯಗಳೇ ಸಮವಾಯಿಕಾರಣಗಳಾಗಿವೆ.

**तत्वप्रकाशिका – आदिसृष्टौ च परमाणवो द्व्यणुकादिक्रमेणावयविनमारभन्ते। समवायिकारणप्रत्यासन्नमवधृतसामर्थ्यमसमवायिकारणम् । प्रत्यासत्तिर्द्वेधा । कार्यैकार्थप्रत्यासत्तिः कारणैकार्थप्रत्यासत्तिश्चेति । तत्र कार्यद्रव्यस्यावयवसंयोग एव कार्यैकार्थप्रत्यासत्त्याऽसमवायिकारणं भवति ।**

ಸೃಷ್ಟಿಯ ಪ್ರಾರಂಭದಲ್ಲಿ ಪರಮಾಣುಗಳು ದ್ವ್ಯಣುಕ, ತ್ರ್ಯಣುಕ ಮೊದಲಾದ ಕ್ರಮದಿಂದ ಅವಯವಿಗಳನ್ನು ಹುಟ್ಟಿಸುತ್ತವೆ. ಸಮವಾಯಿಕಾರಣದಲ್ಲಿದ್ದು ಕಾರಣತ್ವಸಾಮರ್ಥ್ಯವುಳ್ಳ ಕಾರಣವನ್ನು ಅಸಮವಾಯಿಕಾರಣ ಎಂದು ಕರೆಯುತ್ತಾರೆ. 'ಕಾರ್ಯೈಕಪ್ರತ್ಯಾಸತ್ತಿ' 'ಕಾರಣೈಕಾರ್ಥಪ್ರತ್ಯಾಸತ್ತಿ' ಎಂಬುದಾಗಿ ಸಂಬಂಧವು ಎರಡುವಿಧ. ಇವೆರಡರಲ್ಲಿ ದ್ರವ್ಯರೂಪವಾದ ಕಾರ್ಯಕ್ಕೆ ಅವಯವಸಂಯೋಗವೇ ಕಾರ್ಯೈಕಾರ್ಥಪ್ರತ್ಯಾಸತ್ತಿ ರೂಪವಾಗಿ ಅಸಮವಾಯಿಕಾರಣವಾಗಿದೆ.

ವಿವರಣೆ - ಪ್ರತ್ಯಾಸತ್ತಿಯು ಎರಡು ವಿಧ - ಅಸಮವಾಯಿಕಾರಣಕ್ಕೆ ಸಮವಾಯಿಕಾರಣದಲ್ಲಿ ಇರುವಿಕೆಯು ಎರಡು ವಿಧ ಎಂಬುದು ಇದರ ಅಭಿಪ್ರಾಯ. 1. ತನ್ನ ಕಾರ್ಯದ ಜೊತೆ ಒಂದೇ ಪದಾರ್ಥದಲ್ಲಿ ಸಮವಾಯಸಂಬಂಧೇನ ಇರುವಿಕೆ, ಅಥವಾ ತನ್ನ ಕಾರ್ಯಕ್ಕೆ ಯಾವುದು ಕಾರಣವೋ ಅದರ ಜೊತೆ ಒಂದೇ ಅರ್ಥದಲ್ಲಿ ಇರುವಿಕೆ ಎಂದು.

ಕಾರ್ಯದಲ್ಲಿರುವ ರೂಪ ಮೊದಲಾದ ಗುಣಗಳಿಗೆ ಕಾರಣದಲ್ಲಿರುವ ರೂಪ ಮೊದಲಾದ ಗುಣಗಳು ಕಾರಣೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣಗಳಾಗಿವೆ. ತನ್ನ ಕಾರ್ಯಕ್ಕೆ ಯಾವುದು ಕಾರಣವೋ ಅದರ ಜೊತೆ ಒಂದೇ ಅರ್ಥದಲ್ಲಿ ಇದ್ದು ಕಾರಣವಾಗಿದೆ ಎಂದಭಿಪ್ರಾಯ. ಟೀಕೆಯಲ್ಲಿರುವ 'ಕಾರಣೈಕಾರ್ಥಪ್ರತ್ಯಾಸತ್ತ್ಯಾದಿನಾ' ಎಂಬಲ್ಲಿ ಆದಿಪದದಿಂದ ಕರ್ಮವನ್ನು ವಿವಕ್ಷಿಸಬೇಕು. ಕಾರ್ಯೈಕಾರ್ಥಪ್ರತ್ಯಾಸತ್ತಿಯಿಂದ ಕರ್ಮವು ಅಸಮವಾಯಿಕಾರಣವಾಗಿದೆ ಎಂದು. ಸಂಯೋಗಾದಿಕಾರ್ಯವನ್ನು ಕುರಿತು ಕಾರಣವೆನಿಸಿದ ಘಟಾದಿಗಳಲ್ಲಿರುವ ಕರ್ಮವು ತನ್ನ ಕಾರ್ಯವಾದ ಸಂಯೋಗಾದಿಗಳ ಜೊತೆ ಒಂದೇ ಅರ್ಥವಾದ ಘಟದಲ್ಲಿ ಪ್ರತ್ಯಾಸನ್ನವಾಗಿದೆ ಎಂದಭಿಪ್ರಾಯ.

ಗುರುತ್ವ, ದ್ರವತ್ವ, ವೇಗ, ಸಂಯೋಗ ಮೊದಲಾದ ಗುಣಗಳ ವಿಷಯದಲ್ಲಿ ಹೀಗೆ ತಿಳಿಯಬೇಕು. ಮುಂದಿನ ಪತನ, ಹರಿಯುವಿಕೆ ಮುಂತಾದವುಕ್ಕೆ ಹಿಂದಿನ ಪತನ, ಹರಿಯುವಿಕೆ ಮೊದಲಾದ ಕರ್ಮಗಳು ಕಾರ್ಯೈಕಾರ್ಥಪ್ರತ್ಯಾಸತ್ತಿಯಿಂದ ಕಾರಣವಾಗುತ್ತವೆ. ಇದನ್ನು ಆದಿಪದಿಂದ ಸಂಗ್ರಹಿಸಿದ್ದಾರೆ.

ಕಾರ್ಯದಲ್ಲಿರುವ ಕರ್ಮಕ್ಕೆ (ಅವಯವಿಯಲ್ಲಿರುವ ಕರ್ಮಕ್ಕೆ) ಸಮವಾಯಿಕಾರಣಗಳಾದ ಅವಯವದಲ್ಲಿರುವ ಗುರುತ್ವ ದ್ರವತ್ವ ಮೊದಲಾದವುಗಳು ಕಾರಣವಾಗುತ್ತವೆ. ಇದೂ ಕೂಡ ಕಾರಣೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣವೆಂದೇ ತಿಳಿಯಬೇಕು. ಇದರಂತೆ ಪರಿಮಾಣುವಿನಲ್ಲಿರುವ ಪರಿಮಾಣವು ದ್ವ್ಯಣುಕದಲ್ಲಿ ಇರುವ ಪರಿಮಾಣಕ್ಕೆ ಅಸಮವಾಯಿ ಕಾರಣವಾಗಿದೆ. ದ್ವ್ಯಣುಕದಲ್ಲಿರುವ ಪರಿಮಾಣವು ತ್ರ್ಯಣುಕದಲ್ಲಿರುವ ಪರಿಮಾಣಕ್ಕೆ ಅಸಮವಾಯಿಕಾರಣವಾಗಿದೆ.

**तत्वप्रकाशिका – कार्यगतगुणानां च कारणगतगुणाः कर्म च कारणैकार्थ-प्रत्यासत्त्यादिनाऽसमवायिकारणम् । कार्यगतगुणकर्मणश्च कारणगतगुणकर्मणी कार्यैकार्थप्रत्यासत्त्यादिनाऽसमवायिकारणम् । तत्र परिमाणं कारणगतं कार्यगतपरिमाणस्यासमवायिकारणं भवति ।**

ಕಾರ್ಯಗತವಾದ ಗುಣಗಳಿಗೆ ಕಾರಣದ ಗುಣಗಳು ಮತ್ತು ಕಾರ್ಯದಲ್ಲಿರುವ ಕ್ರಿಯೆಗಳಿಗೆ ಕಾರಣದಲ್ಲಿರುವ ಕ್ರಿಯೆಗಳು ಕಾರಣೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣಗಳಾಗುತ್ತವೆ. ಕಾರಣದಲ್ಲಿರುವ ಪರಿಮಾಣವು ಕಾರ್ಯದಲ್ಲಿರುವ ಪರಿಮಾಣಕ್ಕೆ ಅಸಮವಾಯಿ-ಕಾರಣವಾಗುತ್ತದೆಂದೂ ತಿಳಿಯಬೇಕು.

**तत्वप्रकाशिका – परमाणुद्व्यणुकगतं द्व्यणुकत्र्यणुकगतपरिमाणकारणं न भवति । किं तु सङ्ख्यादिनैव तज्जम् । एतदन्यत्कारणं निमित्तमीश्वरादृष्टकालादि। स चेश्वर आत्मविशेषः सङ्ख्यादिपञ्चगुणयुक्तः कर्तृत्वोपयोगिज्ञानेच्छाप्रयत्नशाली च। शिष्टषड्गुणायोग्य इति कथं तस्यानन्तगुणत्वं युक्तं स्यात् । अतो व्यर्थ एव पूर्वाध्याय इति प्राप्ते सिद्धान्तयत्सूत्रमुपन्यस्य व्याचष्टे – महदिति।।**

ಪರಮಾಣು ಹಾಗೂ ದ್ವ್ಯಣುಕದಲ್ಲಿರುವ ದ್ವಿತ್ವ ಹಾಗೂ ತ್ರಿತ್ವ ಎಂಬ ಸಂಖ್ಯೆಯೇ ದ್ವ್ಯಣುಕ ಹಾಗೂ ತ್ರ್ಯಣುಕದಲ್ಲಿರುವ ಪರಿಮಾಣಕ್ಕೆ ಕಾರಣವಾಗಿದೆ. ಸಮವಾಯಿಕಾರಣ ಮತ್ತು ಅಸಮವಾಯಿಕಾರಣಗಳಿಗಿಂತ ಭಿನ್ನವಾದ ಈಶ್ವರ, ಅದೃಷ್ಟ, ಕಾಲ ಇವುಗಳು ನಿಮಿತ್ತ-ಕಾರಣವಾಗಿವೆ.

ಆ ಈಶ್ವರನಾದರೋ ಆತ್ಮನ ವಿಶೇಷನಾಗಿದ್ದಾನೆ. ಇವನಲ್ಲಿ ಸಂಖ್ಯಾ, ಪರಿಮಾಣ ಪೃಥಕ್ತ್ವ, ಸಂಯೋಗ, ವಿಭಾಗ ಎಂಬ ಐದು ಗುಣಗಳಿವೆ. ಕರ್ತೃತ್ವಕ್ಕೆ ಉಪಯೋಗಿಯಾದ ಜ್ಞಾನ, ಇಚ್ಛಾ, ಪ್ರಯತ್ನಗಳು ಅವನಲ್ಲಿವೆ. ಇವುಗಳನ್ನು ಹೊರತಾಗಿ ಸಂಸ್ಕಾರ, ಸುಖ, ದುಃಖ, ದ್ವೇಷ, ಧರ್ಮ, ಅಧರ್ಮಗಳೆಂಬ ಆರು ಗುಣಗಳು ಈಶ್ವರನಲ್ಲಿ ಇರುವುದಿಲ್ಲ. ಆದ್ದರಿಂದ ಈಶ್ವರನನ್ನು ಅನಂತಗುಣಪರಿಪೂರ್ಣ ಎಂದು ಹೇಳುವುದು ಹೇಗೆ ಯುಕ್ತವಾಗುತ್ತದೆ? ಆದ್ದರಿಂದ ಪ್ರಥಮಾಧ್ಯಾಯ ಹೊರಟದ್ದೇ ವ್ಯರ್ಥವಾಗಿದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ಮಹತ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಈಶ್ವರನಲ್ಲಿ ತಾರ್ಕಿಕರು ಎಂಟು ಗುಣಗಳನ್ನು ಮಾತ್ರ ಒಪ್ಪುತ್ತಾರೆ. ಒಪ್ಪಿರುವ ಈ ಗುಣಗಳೂ ಕೂಡ ಈಶ್ವರನ ಸರ್ವೋತ್ತಮತ್ವಕ್ಕೆ ಉಪಪಾದಕವಲ್ಲ. ಮತ್ತು ತಾರ್ಕಿಕರ ಪ್ರಕಾರ ಹೇಳುವ ಗುಣಗಳು ಯಾವುದೂ ಕೂಡ ಶ್ರೇಷ್ಠತ್ವಕ್ಕೆ ಪೂರಕವಾಗಿರುವುದಿಲ್ಲ ಎಂಬುದನ್ನು ಗಮನಿಸಬೇಕು.

**तत्वप्रकाशिका – युक्तमेव हरेरनन्तगुणपूर्णत्वम् । वैशेषिकादीनामनुपपन्न-भाषित्वेन तत्कल्पनाया अप्रामाणिकत्वात् । यथा हि – यदुच्यते परिमाणं त्र्यणुकादिगतमसमवायिकारणं भवति न परमाण्वादिगतमिति तदसत् । यथा महत्त्वाद्दीर्घत्वाच्च त्र्यणुकादिगतात् कार्ये परिमाणमुत्पद्यते तथा ह्रस्वत्वाद् द्व्यणुकगतात् त्र्यणुकगतपरिमाणोत्पत्त्युपपत्तेः । परमाणुपरिमाणाच्च पारिमाण्डल्याद् द्व्यणुकगत-परिमाणोत्पत्तिसम्भवादिति भावः ।**

ಪರಮಾತ್ಮನು ಅನಂತಗುಣಪರಿಪೂರ್ಣನಾಗಿದ್ದಾನೆಂದು ಹೇಳಿದ್ದು ಯುಕ್ತವೇ ಆಗಿದೆ. ವೈಶೇಷಿಕಾದಿಕಗಳು ಅನುಪಪನ್ನಭಾಷಿಗಳಾಗಿರುವುದರಿಂದ ಅವರ ಕಲ್ಪನೆಗಳು ಅಪ್ರಾಮಾಣಿಕವಾಗಿದೆ. ಅದು ಹೀಗೆ - ತ್ರ್ಯಣುಕ ಮೊದಲಾದವುಗಳಲ್ಲಿರುವ ಪರಿಮಾಣವು ಅಸಮವಾಯಿ ಕಾರಣವಾಗುತ್ತದೆ. ಆದರೆ ಪರಮಾಣು ಹಾಗೂ ದ್ವ್ಯಣುಕದಲ್ಲಿರುವ ಪರಿಮಾಣವು ಅಸಮವಾಯಿಕಾರಣವಾಗುವುದಿಲ್ಲ ಎಂದು ಹೇಳಿದ್ದೇ ತಪ್ಪು. ಏಕೆಂದರೆ ತ್ರ್ಯಣುಕ ಮೊದಲಾದವುಗಳಲ್ಲಿರುವ ಮಹತ್ವ ಮತ್ತು ದೀರ್ಘತ್ವಗಳಿಂದಲೂ ಕಾರ್ಯದಲ್ಲಿ ಪರಿಮಾಣ ಹೇಗೆ ಹುಟ್ಟುತ್ತದೋ ಅದರಂತೆ ದ್ವ್ಯಣುಕದಲ್ಲಿರುವ ಹ್ರಸ್ವತ್ವದಿಂದ ತ್ರ್ಯಣುಕದಲ್ಲಿರುವ ಪರಿಮಾಣವು ಹುಟ್ಟಬಹುದು. ಪರಮಾಣುಪರಿಮಾಣವು ಪಾರಿಮಾಂಡಿಲ್ಯ ಎಂದು ಕರೆಸಿಕೊಳ್ಳುತ್ತದೆ. ಇಂಥ ಪಾರಿಮಾಂಡಿಲ್ಯದಿಂದ ದ್ವ್ಯಣುಕದಲ್ಲಿರುವ ಪರಿಮಾಣವೂ ಕೂಡ ಹುಟ್ಟಬಹುದು ಎಂಬುದು ಸೂತ್ರದ ಅಭಿಪ್ರಾಯ.

**तत्वप्रकाशिका – त्र्यणुकादिपरिमाणस्यारम्भकत्वेऽप्यस्य तन्मास्त्वित्यत आह – वाशब्दादिति ।। इति 'सूचितम्' इति शेषः । यदि ह्रस्वत्वादेर्नारम्भकत्वं तर्हि महत्वदीर्घत्वयोरपि तन्न स्यात् । कारणाविशेषाभावादित्यर्थः । न तावदसमवायिकारणलक्षणभावाभावाभ्यां विशेषः । ह्रस्वत्वादावपि तद्भावात् ।**

ತ್ರ್ಯಣುಕಾದಿಗಳಲ್ಲಿರುವ ಪರಿಮಾಣವು ಮತ್ತೊಂದಕ್ಕೆ ಆರಂಭಕವಾಗಲಿ, ಆದರೆ ಪರಮಾಣುಪರಿಮಾಣವು ಹಾಗೂ ದ್ವ್ಯಣುಕದಲ್ಲಿರುವ ಪರಿಮಾಣವು ಮತ್ತೊಂದಕ್ಕೆ ಆರಂಭಕವಾಗುವುದು ಬೇಡ ಎಂಬ ಪ್ರಶ್ನೆಗೆ 'ವಾಶಬ್ದಾತ್' ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಭಾಷ್ಯದಲ್ಲಿ 'ಇತಿ ಸೂಚಿತಮ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಪರಿಮಾಣುವಿನಲ್ಲಿರುವ ಹ್ರಸ್ವತ್ವಾದಿಗಳು ಆರಂಭಕ ಆಗದಿದ್ದರೆ ಮಹತ್ವ, ದೀರ್ಘತ್ವಗಳೂ ಕೂಡ ಆರಂಭಕ ಆಗದಿರಬೇಕಾದೀತು. ಏಕೆಂದರೆ ಒಂದಕ್ಕೆ ಆರಂಭಕತ್ವ ಒಪ್ಪಿ ಮತ್ತೊಂದಕ್ಕೆ ಆರಂಭಕತ್ವವನ್ನು ಒಪ್ಪದಿರಲು ಯಾವುದೇ ಕಾರಣವಿಲ್ಲ. ದೀರ್ಘತ್ವಾದಿಗಳಲ್ಲಿ ಅಸಮವಾಯಿಕಾರಣದ ಲಕ್ಷಣವಿದೆ. ಅಣುತ್ವ, ಹ್ರಸ್ವತ್ವಗಳಲ್ಲಿ ಅಸಮವಾಯಿಕಾರಣದ ಲಕ್ಷಣವಿಲ್ಲವೆಂಬ ವ್ಯತ್ಯಾಸವನ್ನು ಹೇಳಲು ಸಾಧ್ಯವಿಲ್ಲ. ಹ್ರಸ್ವತ್ವಾದಿಗಳಲ್ಲೂ ಕೂಡ ಅಸಮವಾಯಿಕಾರಣದ ಲಕ್ಷಣವು ಬಂದೇ ಬರುತ್ತದೆ.

**तत्वप्रकाशिका – अवर्जनीयप्रत्यासत्तिरेवेति चेन्न । महत्वेऽपि साम्यात्। पारिमाण्डल्यादेरारम्भकत्वे सर्वकार्याणामणुत्वप्रसङ्ग इति चेत् तत्किमिदमणुत्वं तच्छब्दवाच्यत्वं तदत्यन्तसदृशपरिमाणत्वं वा ? आद्ये नास्ति हानिः । द्वितीये महत्त्वस्याप्यनारम्भकत्वं स्यात् । न हि त्र्यणुकादिपरिमाणमत्यन्तसदृशं सङ्केतमात्रं त्वप्रामाणिकमिति ।**

ಅಸಮವಾಯಿಕಾರಣದ ಲಕ್ಷಣವು ಹ್ರಸ್ವತ್ವ, ಅಣುತ್ವಗಳಲ್ಲಿ ಇದ್ದರೂ ಕೂಡ ಅವರ್ಜನೀಯವಾಗಿದೆ ಎಂದು ಹೇಳಬಾರದು. ಇಂಥ ಅವರ್ಜನೀಯತ್ವವನ್ನು ಮಹತ್ವಾದಿಗಳಲ್ಲಿ ಸಮಾನವಾಗಿ ಹೇಳಬಹುದು.

ಪಾರಿಮಾಂಡಲ್ಯಾದಿಗಳಿಗೆ ಆರಂಭಕತ್ವವನ್ನು ಒಪ್ಪಿದರೆ ಸಕಲ ಕಾರ್ಯಗಳೂ ಅಣು ಆಗಬೇಕಲ್ಲವೆ? ಎಂದು ಪ್ರಶ್ನಿಸಿದರೆ ಅಣುತ್ವವೆಂದರೇನು? ಸಕಲಕಾರ್ಯಗಳು ಅಣು ಎಂಬ ಶಬ್ದದಿಂದ ವಾಚ್ಯವಾಗಬೇಕಾದೀತು ಎಂದೋ? ಅಥವಾ ಅಣುಪರಿಮಾಣಕ್ಕೆ ಅತ್ಯಂತ ಸದೃಶವಾದ ಪರಿಮಾಣವುಳ್ಳದ್ದಾಗಲಿ ಎಂದೋ?

ಮೊದಲನೆಯ ಪಕ್ಷದಲ್ಲಿ ಯಾವುದೇ ಹಾನಿಯಿಲ್ಲ. ಎರಡನೆಯ ಪಕ್ಷದಲ್ಲಿ ಮಹತ್ವಕ್ಕೂ ಕೂಡ ಆರಂಭಕತ್ವವು ಬಾರದಿರಬೇಕಾದೀತು. ಏಕೆಂದರೆ ತ್ರ್ಯಣುಕಾದಿ ಪರಿಮಾಣಗಳಲ್ಲಿಯೂ ಕೂಡ ಅತ್ಯಂತಸಾದೃಶ್ಯವು ಇರುವುದಿಲ್ಲ. ಹಾಗೇನಾದರೂ ಹೇಳಿದರೆ ಅದು ಕೇವಲ ಸಂಕೇತವಷ್ಟೇ, ಆ ವಿಷಯದಲ್ಲಿ ಯಾವುದೇ ಪ್ರಮಾಣ ಇರುವುದಿಲ್ಲ.

ವಿವರಣೆ - ಪಾರಿಮಾಂಡಲ್ಯಕ್ಕೆ ಆರಂಭಕತ್ವವನ್ನು ತಾರ್ಕಿಕರು ಒಪ್ಪದೆ ಇರಲು ಕಾರಣವಿದೆ. ಸ್ವಸದೃಶಕಾರ್ಯೋತ್ಪಾದಕತ್ವವು ಕಾರಣದಲ್ಲಿರುವುದರಿಂದ ಅಣುಪರಿಮಾಣದಿಂದ ಹುಟ್ಟಿದ ಕಾರ್ಯವೂ ಕೂಡ ಅಣುಪರಿಮಾಣವುಳ್ಳದ್ದೇ ಆಗಬೇಕಾಗುತ್ತದೆ. ಆಗ ಸಕಲ ಕಾರ್ಯಗಳೂ ಕೂಡ ಅಣುವಾಗಲಿ ಎಂಬ ಆಪತ್ತಿ ಬರುತ್ತದೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ. ಆದರೆ ಸಕಲ ಕಾರ್ಯಗಳು ಅಣುಪರಿಮಾಣವುಳ್ಳದ್ದಾಗಲಿ ಎಂಬುದಕ್ಕೆ ಅಣುಶಬ್ದದಿಂದ ವಾಚ್ಯವಾಗಲಿ ಎಂದು ಅಭಿಪ್ರಾಯವೋ ಅಥವಾ ತತ್‌ಸಮಾನಪರಿಮಾಣವುಳ್ಳದ್ದಾಗಲಿ ಎಂಬ ಅಭಿಪ್ರಾಯವೋ? ಎಂದು ಸಿದ್ಧಾಂತಿಗಳು ಪ್ರಶ್ನಿಸಿದರು. ಎರಡನೆಯ ಪಕ್ಷದಲ್ಲಿ ತ್ರ್ಯಣುಕಾದಿಪರಿಮಾಣಗಳಲ್ಲಿಯೂ ಕೂಡ ಈ ಆಪಾದನೆಯು ಸಮಾನವಾಗಿದೆ. "ಪರಮಾಣು ಹಾಗೂ ದ್ವ್ಯಣುಕದಲ್ಲಿರುವ ಪರಿಮಾಣವು ಅಣುಪರಿಮಾಣವುಳ್ಳದ್ದಾಗಿದೆ. ತ್ರ್ಯಣುಕಾದಿಗಳಲ್ಲಿರುವ ಪರಿಮಾಣವು ಮಹತ್ ಪರಿಮಾಣವುಳ್ಳದ್ದಾಗಿದೆ". ಎಂದು ಒಪ್ಪಿರುವುದರಿಂದ ತ್ರ್ಯಣುಕಾದಿಗಳಲ್ಲಿರುವ ಪರಿಮಾಣವು ಅಣುಪರಿಮಾಣಕ್ಕೆ ಸದೃಶವೇ ಆಯಿತೆಂದು ತಾರ್ಕಿಕರು ಹೇಳಿದರೆ ಇದು ಕೇವಲ ಸಂಕೇತ ಮಾತ್ರ ಎಂಬುದು ಸಿದ್ಧಾಂತಿಗಳ ಅಭಿಪ್ರಾಯ.

**तत्वप्रकाशिका – द्व्यणुकादिपरिमाणे कारणान्तराभावाच सङ्ख्यादेर्महत्त्वारम्भकत्वप्रसङ्गात् । संयोगस्य च द्रव्यनिमित्तत्वमेव किं न स्यात् । भिन्नतया प्रतीत्यभावादिति चेन्न । भिन्नतया प्रतीत्यभावेऽप्यपेक्षाबुद्धेरात्मगतद्वित्वनिमित्तत्वात्।**

ಪಾರಿಮಾಂಡಲ್ಯವು ಕಾರಣವಲ್ಲದಿದ್ದರೆ ದ್ವ್ಯಣುಕಾದಿಪರಿಮಾಣಕ್ಕೆ ಬೇರೆ ಕಾರಣವೇ ಇಲ್ಲವೆಂದಾಗಬೇಕಾದೀತು ಎಂಬ ಆಪತ್ತಿಯು ಬರುತ್ತದೆ. ಮತ್ತು ಪರಮಾಣುಗಳ ಸಂಖ್ಯೆಯೇ ಕಾರಣವಾಗುವುದಾದರೆ ತ್ರ್ಯಣುಕಾದಿಗಳಲ್ಲಿರುವ ಬಹುತ್ವಸಂಖ್ಯೆಯೇ ಚತುರಣುಕದಲ್ಲಿರುವ ಮಹತ್ವಕ್ಕೆ ಆರಂಭಕವಾಗುವ ಪ್ರಸಂಗ ಬರುತ್ತದೆ.

ಪರಮಾಣುಗಳ ಸಂಯೋಗವು ದ್ವ್ಯಣುಕ ಮೊದಲಾದವುಗಳಿಗೆ ಅಸಮವಾಯಿ ಕಾರಣವೆಂದು ವೈಶೇಷಿಕರು ಹೇಳುತ್ತಾರೆ. ಇದೂ ಕೂಡ ತಪ್ಪು. ಹೀಗೆ ಹೇಳಿದರೆ ಪರಮಾಣುಸಂಯೋಗವು ದ್ವ್ಯಣುಕವೆಂಬ ದ್ರವ್ಯದ ಆರಂಭಕ್ಕೆ ನಿಮಿತ್ತಕಾರಣ ಏಕಾಗಬಾರದು? ಎಂಬ ಪ್ರಶ್ನೆ ಬರುತ್ತದೆ. ಹಾಗೂ ನಿಮಿತ್ತಕಾರಣವಲ್ಲ ಎನ್ನಲು ಯಾವುದೇ ಪ್ರಮಾಣವಿಲ್ಲ.

ಪರಮಾಣುಸಂಯೋಗವು ಪ್ರತ್ಯೇಕವಾಗಿ ಪ್ರತೀತವಾಗುತ್ತಿಲ್ಲ. ಆದ್ದರಿಂದ ಅದು ನಿಮಿತ್ತಕಾರಣವಾಗುವುದಿಲ್ಲ ಎಂದು ಉತ್ತರಿಸಿದರೆ ಇಂಥ ಭಿನ್ನತ್ವೇನ ಪ್ರತೀತಿ ಇಲ್ಲದಿದ್ದರೂ ಆತ್ಮನಲ್ಲಿರುವ ಅಪೇಕ್ಷಾಬುದ್ಧಿಯು ಆತ್ಮನಲ್ಲಿರುವ ದ್ವಿತ್ವ ಸಂಖ್ಯೆಗೆ ನಿಮಿತ್ತಕಾರಣವೆಂದು ಒಪ್ಪಿದ್ದನ್ನೂ ಕೂಡ ಅಲ್ಲಗಳೆಯಬೇಕಾಗುತ್ತದೆ.

**तत्वप्रकाशिका – अभ्युपगम्य चेदमदितम् । किं तन्तूनां यथाकथञ्चित्संयोगः पटस्य कारणं विवक्षितो वा । नाद्यः अनभ्युपगमात् । द्वितीये कस्येति वाच्यम् । पटस्येति चेत् कस्तदा पटोऽवशिष्यते । अतोऽसमवायिकारणं नाम न किञ्चिदस्तीति सिद्धम् ।। ११ ।।**

ಅಸಮವಾಯಿಕಾರಣ ಎಂಬ ಪದಾರ್ಥವನ್ನು ಅಂಗೀಕಾರ ಮಾಡಿ ಇಲ್ಲಿಯ ತನಕ ಪ್ರತಿಬಂದಿಯನ್ನು ಹೇಳಿದ್ದು. ವಾಸ್ತವಿಕವಾಗಿ ಈ ಪದಾರ್ಥವೇ ಇಲ್ಲ. ಏಕೆಂದರೆ ಯಥಾಕಥಂಚಿತ್ ತಂತುಗಳ ಸಂಯೋಗವು ಪಟಕ್ಕೆ ಕಾರಣವೆಂದು ಹೇಳುತ್ತೀರೋ ? ಅಥವಾ ಓತಪ್ರೋತವಾಗಿ ಜೋಡಿಸಲ್ಪಟ್ಟ ತಂತುಸಂಯೋಗವು ಪಟಕ್ಕೆ ಕಾರಣವೆಂದು ಹೇಳುತ್ತಿರೋ ? ಮೊದಲನೆಯ ಪಕ್ಷವನ್ನು ತಾರ್ಕಿಕರೆ ಒಪ್ಪುವುದಿಲ್ಲ. ಎರಡನೆಯ ಪಕ್ಷದಲ್ಲಿ ಅಂಥ ತಂತುಗಳ ಸಂಯೋಗವು ಯಾವುದಕ್ಕೆ ಕಾರಣವೆಂದು ಹೇಳಬೇಕು. ಪಟಕ್ಕೆ ಎಂದು ಉತ್ತರಿಸಿದರೆ 'ಆ ತಂತುಸಂಯೋಗಕ್ಕಿಂತ ಅತಿರಿಕ್ತವಾದ ಪಟವೇ ಇರುವುದಿಲ್ಲ. ಅಂದ ಮೇಲೆ ಯಾವುದಕ್ಕೆ ಆ ತಂತುಸಂಯೋಗವು ಕಾರಣ?' ಎಂಬ ಪ್ರಶ್ನೆಗೆ ಉತ್ತರಿಸಬೇಕಾಗುತ್ತದೆ. ಆದ್ದರಿಂದ ಅಸಮವಾಯಿಕಾರಣವೆಂಬುದೇ ಇಲ್ಲವೆಂದು ಸಿದ್ಧವಾಯಿತು.

## ಬ್ರಹ್ಮಸೂತ್ರ

**सूत्रम् – उभयथाऽपि न कर्माऽतस्तदभावः ।।**

ಪ್ರತಿಯೊಂದು ಕಾರ್ಯಗಳ ಉತ್ಪತ್ತಿಗೆ ಈಶ್ವರೇಚ್ಛೆಯು ನಿಮಿತ್ತಕಾರಣವಾಗಿದೆ ಎಂದು ವೈಶೇಷಿಕರು ಹೇಳುತ್ತಾರೆ. ಇದು ಸರಿಯಲ್ಲ. ಈಶ್ವರನ ಇಚ್ಛೆಯು ನಿತ್ಯವು, ಅನಿತ್ಯವೋ? ಎರಡೂ ಪಕ್ಷಗಳಲ್ಲಿ ಪರಮಾಣುವಿನ ಕ್ರಿಯೆಯು ಹುಟ್ಟಲು ಸಾಧ್ಯವಿಲ್ಲ. ನಿತ್ಯವಾದರೆ ಪ್ರಳಯಕಾಲದಲ್ಲಿ ಇಚ್ಛೆ ಇದ್ದರೂ ಕಾರ್ಯವಿಲ್ಲ. ಅನಿತ್ಯವೆಂದರೆ ಆ ಇಚ್ಛೆಗೂ ಮತ್ತೊಂದು ಕಾರಣದ ಅಪೇಕ್ಷೆ ಇರುವುದರಿಂದ ಅನವಸ್ಥಾ ಬರುತ್ತದೆ. ಆದ್ದರಿಂದ ದ್ವ್ಯಣುಕಾದಿ ಕಾರ್ಯಪ್ರಪಂಚವೇ ಸೃಷ್ಟಿಯಾಗದಿರಬೇಕಾದೀತು.

## ಸೂತ್ರದೀಪಿಕಾ

**सूत्रदीपिका –** यतः **उभयथाऽपि** ईश्वरेच्छाया नित्यत्वानित्यत्वरूपपक्षद्वयेऽपि। **न** परमाणुषु **क्रियो**त्पत्तिसम्भवः । **अतस्तदभावः** तस्मिन् द्व्यणुकादिकार्याभावः स्यादित्यर्थः ।।२।।

ಯಾವ ಕಾರಣದಿಂದ ಉಭಯಥಾऽಪಿ = ಈಶ್ವರೇಚ್ಛೆಗೆ ನಿತ್ಯತ್ವ ಅನಿತ್ಯತ್ವ ಎಂಬೆರಡು ಪಕ್ಷಗಳನ್ನು ಒಪ್ಪಿದರೂ ಪರಮಾಣುಗಳಲ್ಲಿ, ನ ಕರ್ಮ = ಕ್ರಿಯೆಯ ಉತ್ಪತ್ತಿಯು ಅಸಂಭಾವಿತವೋ, ಅತಃ = ಆದ್ದರಿಂದ ತದಭಾವಃ = ದ್ವ್ಯಣುಕಾದಿಕಾರ್ಯಗಳ ಸೃಷ್ಟಿಯು ಉಂಟಾಗಲಾರದು. ಹೀಗೆ ತಾರ್ಕಿಕರ ನಿಮಿತ್ತಕಾರಣವನ್ನು ಮಾಡುವ ಸಮರ್ಥನೆಯು ಅಸಾಧುವಾಗಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। उभयथाऽपि न कर्मातस्तदभावः ।।२।।**

**ईश्वरेच्छाया नित्यत्वे तद्भावेऽपि परमाणुकर्माभावान्नेदानीमपि तत् स्यात् । अनित्यत्वे तत्कारणाभावात् । अतः परमाणुचेष्टाभावात् तत्कार्याभावः ।**

ಅನುವಾದ - ಈಶ್ವರ ಇಚ್ಛೆಯು ನಿತ್ಯ ಎಂದಾದರೆ ಪ್ರಳಯಕಾಲದಲ್ಲಿ ಈಶ್ವರನ ಇಚ್ಛೆಯಿದ್ದರೂ ಪರಮಾಣುವಿನ ಕ್ರಿಯೆ ಇರುವುದಿಲ್ಲ. ಆದ್ದರಿಂದ ಸೃಷ್ಟಿಕಾಲದಲ್ಲಿಯೂ ಪರಮಾಣುಗಳಲ್ಲಿ ಕ್ರಿಯೆಯು ಬರದೆ ಇರಬೇಕಾದೀತು. ಒಂದು ವೇಳೆ ಈಶ್ವರನ ಇಚ್ಛೆಯು ಅನಿತ್ಯವಾದರೆ ಅದಕ್ಕೂ ಒಂದು ಕಾರಣವನ್ನು ಹೇಳಬೇಕು. ಆದ್ದರಿಂದ ಪರಮಾಣುವಿನಲ್ಲಿ ಕಾರ್ಯವಿಲ್ಲವಾದ್ದರಿಂದ

ಪರಮಾಣುವಿನಿಂದ ದ್ವ್ಯಣುಕ ಅವುಗಳಿಂದ ತ್ರ್ಯಣುಕ ಇತ್ಯಾದಿ ಕಾರ್ಯಗಳೂ ಕೂಡ ಹುಟ್ಟದೆ ಇರಬೇಕಾದೀತು.

ಪ್ರತಿಪದಾರ್ಥ -- ಈಶ್ವರೇಚ್ಛಾಯಾಃ = ಈಶ್ವರ ಇಚ್ಛೆಯು, ನಿತ್ಯತ್ವೇ = ನಿತ್ಯವೆಂದು ಒಪ್ಪಿದರೆ, ತದ್ಭಾವೇಽಪಿ = ಪ್ರಳಯಕಾಲದಲ್ಲಿ ಈಶ್ವರ ಇಚ್ಛೆಯಿದ್ದರೂ, ಪರಮಾಣುಕರ್ಮಾಭಾವಾತ್ = ಪರಮಾಣುವಿನಲ್ಲಿ ಕ್ರಿಯೆಯು ಇಲ್ಲವಾದ್ದರಿಂದ, ಇದಾನೀಮಪಿ = ಸೃಷ್ಟಿಕಾಲದಲ್ಲಿಯೂ, ತತ್, ನ ಸ್ಯಾತ್ = ಪರಮಾಣುವಿನಲ್ಲಿ ಕ್ರಿಯೆಯು ಇಲ್ಲದಿರಬೇಕಾದೀತು. ಅನಿತ್ಯತ್ವೇ = ಈಶ್ವರನ ಇಚ್ಛೆಯು ಅನಿತ್ಯವೆಂದು ಒಪ್ಪಿದರೆ, ತತ್ಕಾರಣಾಭಾವಾತ್ = ಈಶ್ವರನ ಇಚ್ಛೆಗೆ ಉತ್ಪಾದಕವಾದ ಮತ್ತೊಂದು ಕಾರಣವಿಲ್ಲವಾದ್ದರಿಂದ ಇಚ್ಛೆಯೂ ಕೂಡ ಹುಟ್ಟುವುದಿಲ್ಲ. ಅತಃ = ಆದ್ದರಿಂದ, ಪರಮಾಣಚೇಷ್ಟಾಭಾವಾತ್ = ಪರಮಾಣುವಿನಲ್ಲಿ ಯಾವುದೇ ಕ್ರಿಯೆಯು ನಡೆಯದ ಕಾರಣ, ತತ್ಕಾರ್ಯಭಾವಃ = ದ್ವಿಣುಕ ತ್ರ್ಯಣುಕ ಮೊದಲಾದ ಕಾರ್ಯಗಳು ಹುಟ್ಟಲಾರವು.

**भाष्यम् – वैदिकेश्वरस्य तु वेदेनैव सर्वशक्तित्वोक्तेः सर्वमुपपद्यते । स्वत एव काले विशेषाङ्गीकृतेश्च ।।२।।**

ಅನುವಾದ - ವೇದದಿಂದ ಈಶ್ವರನನ್ನು ಸಾಧನೆ ಮಾಡಿ ಆ ವೇದದಿಂದಲೇ ಈಶ್ವರನಿಗೆ ವಿಲಕ್ಷಣವಾದ ಸರ್ವಶಕ್ತಿಯನ್ನು ಒಪ್ಪುವುದರಿಂದ ಪ್ರಳಯಕಾಲದಲ್ಲಿ ಈಶ್ವರನ ಇಚ್ಛೆಯಿದ್ದರೂ ಸೃಷ್ಟಿಯು ನಡೆಯುವುದಿಲ್ಲ. ಮತ್ತು ಸೃಷ್ಟಿಕಾಲ ಪ್ರಳಯಕಾಲವೆಂಬ ವಿಭಾಗವು ಸ್ವಾಭಾವಿಕವಾಗಿರುವುದರಿಂದ ಕಾಲವಿಶೇಷವು ಬಂದಾಗ ಮಾತ್ರ ಸೃಷ್ಟಿಪ್ರಕ್ರಿಯೆಯು ನಡೆಯುತ್ತದೆ.

ಪ್ರತಿಪದಾರ್ಥ -- ವೈದಿಕೇಶ್ವರಸ್ಯ ತು = ವೇದದಿಂದ ಸಿದ್ಧವಾಗುವ ಈಶ್ವರನಿಗೆ, ವೇದೇನೈವ = ವೇದದಿಂದಲೇ, ಸರ್ವಶಕ್ತಿತ್ವೋಕ್ತೇಃ = ವಿಲಕ್ಷಣವಾದ ಸರ್ವಶಕ್ತಿಯನ್ನು ಒಪ್ಪಿದ್ದರಿಂದ, ಸರ್ವಂ = ಪ್ರಳಯಕಾಲದಲ್ಲಿ ಇಚ್ಛೆಯಿದ್ದರೂ ಸೃಷ್ಟಿಯೂ ಆಗದಿರುವಿಕೆಯನ್ನು, ಉಪಪದ್ಯತೇ = ಕೂಡಿಸಬಹುದು. ಕಾಲೇ = ಕಾಲದಲ್ಲಿ, ಸ್ವತ ಏವ = ಸ್ವಾಭಾವಿಕವಾಗಿ, ವಿಶೇಷಾಂಗೀಕೃತೇಶ್ಚ = ಸೃಷ್ಟಿಕಾಲ, ಪ್ರಳಯಕಾಲ ಇತ್ಯಾದಿಯಾಗಿ ಭೇದವನ್ನು ಒಪ್ಪಿರುವುದರಿಂದ ಕಾಲವಿಶೇಷದಲ್ಲಿ ಸೃಷ್ಟಿಯು ನಡೆಯುತ್ತದೆಂದು ಕೂಡಿಸಬಹುದು.

## ತತ್ವಪ್ರಕಾಶಿಕಾ

**तत्वप्रकाशिका – एवमसमवायिकारणं निरस्य निमित्तकारणनिरासाय सूत्रमुपन्यस्य व्याचष्टे – उभयथेति ।। सर्वकार्याणामीश्वरेच्छानिमित्तं चेत् तत्र प्रष्टव्यम् । किमीश्वरेच्छा नित्याऽनित्या वेति ।**

ಹಿಂದಿನ ಸೂತ್ರದಲ್ಲಿ ತಾರ್ಕಿಕರ ಅಸಮವಾಯಿಕಾರಣವನ್ನು ನಿರಾಕರಣೆ ಮಾಡಿದ್ದಾಯಿತು. ಈಗ ನಿಮಿತ್ತಕಾರಣವನ್ನು ನಿರಾಕರಣೆ ಮಾಡುವುದಕ್ಕಾಗಿ 'ಉಭಯಥಾऽಪಿ' ಎಂದು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಸಕಲಕಾರ್ಯಗಳಿಗೆ ಈಶ್ವರನ ಇಚ್ಛೆಯು ನಿಮಿತ್ತಕಾರಣ ಎಂದು ತಾರ್ಕಿಕರು ಹೇಳುತ್ತಾರೆ. ಇವರನ್ನು ಕುರಿತು ನಾವು ಪ್ರಶ್ನಿಸುತ್ತೇವೆ. ಈಶ್ವರನ ಇಚ್ಛೆಯು ನಿತ್ಯವೋ ಅನಿತ್ಯವೋ ? ಎಂದು.

**तत्वप्रकाशिका – नाद्यः, सत्यामपीश्वरेच्छायां प्रलये परमाणुचेष्टाभावेनान्यदाऽपि तस्यास्तदभावापातात् । तथा च द्व्यणुकादिकार्याभावः स्यात् । सति कारणे कार्यानुत्पादे तस्य कारणत्वायोगात् ।**

ಮೊದಲನೆಯ ಪಕ್ಷ ತಪ್ಪು. ಈಶ್ವರನ ಇಚ್ಛೆ ಇದ್ದರೂ ಕೂಡ ಪ್ರಳಯಕಾಲದಲ್ಲಿ ಪರಮಾಣುಗಳಲ್ಲಿ ಚೇಷ್ಟೆಯು ಇರುವುದಿಲ್ಲ. ಆಗ ಈಶ್ವರನ ಇಚ್ಛೆಯು ಕಾರಣವಾಗದಿದ್ದರೆ ಬೇರೆ ಸಮಯದಲ್ಲೂ ಕೂಡ ಈಶ್ವರನ ಇಚ್ಛೆಯು ಕಾರಣವಾಗುವುದು ಬೇಡ. ಹೀಗೆ ಈಶ್ವರನ ಇಚ್ಛೆಯಿಂದ ಪರಮಾಣುಕ್ರಿಯೆ ಎಂಬುದೇ ಇಲ್ಲದೆ ಇರಬೇಕಾಗುತ್ತದೆ. ಇದರಿಂದ ದ್ವ್ಯಣುಕಾದಿಕಾರ್ಯಗಳೂ ಕೂಡ ಇಲ್ಲದೆ ಇರಬೇಕಾಗುತ್ತವೆ. ಕಾರಣವಿದ್ದಾಗಲೂ ಕಾರ್ಯವು ಉತ್ಪತ್ತಿ ಆಗದಿದ್ದರೆ ಆ ಕಾರಣಕ್ಕೆ ಕಾರಣತ್ವವೇ ಅಯುಕ್ತವಾಗುತ್ತದೆ.

**तत्वप्रकाशिका – न द्वितीयः । तथा सति तस्याः कार्यत्वेन निमित्तमपेक्षितं स्यात् । न च तदस्ति । तदुत्पत्तावीश्वरेच्छाया अनपेक्षायामन्यत्रापि तत्प्रसङ्गः । पूर्वेच्छा निमित्तमिति चेन्न । प्रमाणाभावात्। अतोऽनित्यत्वे तदभावेनेश्वरेच्छातः परमाणुकर्माभावान्न द्व्यणुकाद्युत्पत्तिः स्यात् ।**

ಎರಡನೆಯ ಪಕ್ಷವು ತಪ್ಪು. ಈಶ್ವರನ ಇಚ್ಛೆಯು ಅನಿತ್ಯವಾದರೆ ಅದೂ ಕೂಡ ಕಾರ್ಯವೇ ಆಯಿತು. ಆಗ ಅದಕ್ಕೆ ಮತ್ತೊಂದು ನಿಮಿತ್ತಕಾರಣವನ್ನು ಹೇಳಬೇಕಾಗುತ್ತದೆ. ಆದರೆ ಅದಕ್ಕೆ ಮತ್ತೊಂದು ನಿಮಿತ್ತಕಾರಣ ಇರುವುದಿಲ್ಲ. ಈಶ್ವರನ ಇಚ್ಛೆಯು ಉತ್ಪತ್ತಿಯಾಗಲು ಮತ್ತೊಂದು ನಿಮಿತ್ತಕಾರಣವು ಅನಾವಶ್ಯಕ ಎನ್ನುವುದಾದರೆ ಬೇರೆ ಕಡೆಯೂ ಹಾಗೆಯೇ ಹೇಳಬಹುದು. ಮುಂದಿನ ಈಶ್ವರನ ಇಚ್ಛೆಗೆ ಹಿಂದಿನ ಈಶ್ವರನ ಇಚ್ಛೆಯು ಕಾರಣವೆಂದು ಹೇಳಲು ಯಾವುದೇ ಪ್ರಮಾಣವಿರುವುದಿಲ್ಲ. ಒಂದುವೇಳೆ ಈಶ್ವರನ ಇಚ್ಛೆ ಅನಿತ್ಯವೆಂದು ಹೇಳಿದರೆ ಈಶ್ವರನಿಗೆ ಇಚ್ಛೆಯೇ ಇಲ್ಲವೆಂದಂತಾಯಿತು. ಆಗ ಈಶ್ವರನ ಇಚ್ಛೆಯಿಂದ ಪರಮಾಣುಗಳಲ್ಲಿ ಕರ್ಮವನ್ನು ಹೇಳಲು ಬರುವುದಿಲ್ಲ. ಇದರಿಂದ ದ್ವ್ಯಣುಕಾದಿ ಕಾರ್ಯಗಳು ಉತ್ಪನ್ನ ಆಗದೆ ಇರಬೇಕಾಗುತ್ತದೆ.

**तत्वप्रकाशिका – अतो द्वेधाऽपि दुष्टत्वान्नेश्वरेच्छा निमित्तमिति भावः । अत्र परिमाणाभिधानसन्निधापितं द्व्यणुकादिकं तदिति परामृशति । ईश्वरेच्छाया नित्यत्वनिमित्तत्वयोरभ्युपगमात् समं भवतामेतद्दूषणमित्यत आह – वैदिकेति ।।**

ಹೀಗೆ ಎರಡು ಪಕ್ಷಗಳೂ ಕೂಡ ದುಷ್ಟವಾಗಿರುವುದರಿಂದ ಈಶ್ವರನ ಇಚ್ಛೆಗೆ ನಿಮಿತ್ತವನ್ನು ಒಪ್ಪಲು ಬರುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ. ಸೂತ್ರದಲ್ಲಿ ಪರಿಮಾಣವನ್ನು ಹೇಳುವಾಗ ಸನ್ನಿಹಿತವಾದ ದ್ವ್ಯಣುಕಾದಿಕಾರ್ಯಗಳನ್ನು ತತ್ ಎಂಬ ಪದದಿಂದ ಪರಾಮರ್ಶ ಮಾಡಬೇಕು. ಈಶ್ವರನ ಇಚ್ಛೆಯು ನಿತ್ಯವಾಗಿದೆ. ಹಾಗೂ ಪ್ರತಿಯೊಂದು ಕಾರ್ಯಗಳಿಗೆ ನಿಮಿತ್ತವಾಗಿದೆ ಎಂದು ಒಪ್ಪಿರುವುದರಿಂದ ಸಿದ್ಧಾಂತಿಗಳಿಗೂ ಕೂಡ ಈ ದೋಷಗಳು ಸಮಾನವಲ್ಲವೆ ? ಎಂಬ ಪ್ರಶ್ನೆಗೆ 'ವೈದಿಕೇಶ್ವರಸ್ಯ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – नायमस्मत्पक्षे दोषः । सत्यामपीश्वरेच्छायां कार्यानुत्पादादेवः सर्वस्येश्वराचिन्त्यशक्तित एवोपपत्तेः । सा च 'पराऽस्य शक्तिर्विविधैव श्रूयते' इत्यादि श्रुतिसिद्धा ।**

ಸಿದ್ಧಾಂತಿಗಳ ಪಕ್ಷದಲ್ಲಿ ಯಾವುದೇ ದೋಷವಿಲ್ಲ. ಈಶ್ವರನ ಇಚ್ಛೆಯು ಇದ್ದರೂ ಕೂಡ ಕಾರ್ಯದ ಉತ್ಪತ್ತಿ ಆಗದಿರಬಹುದು. ಇದೆಕ್ಕೆಲ್ಲ ಈಶ್ವರನ ಅಚಿಂತ್ಯಶಕ್ತಿಯೇ ಕಾರಣವೆಂದು ನಾವು ಹೇಳುತ್ತೇವೆ. ಈಶ್ವರನಿಗೆ ಈ ಅಚಿಂತ್ಯಶಕ್ತಿಯು 'ಪರಾऽಸ್ಯಶಕ್ತಿರ್ವಿವಿಧೈವ ಶ್ರೂಯತೇ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ.

**तत्वप्रकाशिका – न च परपक्षे सममेतत् । तेनानुमानमात्रेणेश्वरमभ्युपगच्छता तस्याचिन्त्यशक्त्यनङ्गीकारादिति भावः । इतश्च नायं दोषोऽस्मत्पक्ष इत्याह – स्वत एवेति ।।**

ಪರಪಕ್ಷದಲ್ಲೂ ಕೂಡ ಈ ಸಮಾಧಾನವನ್ನು ಸಮಾನ ಎಂದು ಹೇಳಬಾರದು. ಅನುಮಾತ್ರದಿಂದ ಈಶ್ವರನನ್ನು ಸಾಧಿಸುವ (ವೈಶೇಷಿಕ) ಅವನು ಅಚಿಂತ್ಯ ಶಕ್ತಿಯನ್ನು ಈಶ್ವರನಲ್ಲಿ ಸರ್ವಥಾ ಒಪ್ಪಲಾರನು. ಮತ್ತೊಂದು ಕಾರಣದಿಂದಲೂ ಸಿದ್ಧಾಂತದಲ್ಲಿ ಈ ದೋಷವು ಬರುವುದಿಲ್ಲ ಎಂಬುದನ್ನು 'ಸ್ವತಃ ಏವ' ಇತ್ಯಾದಿ ಭಾಷ್ಯದಿಂದ ಹೇಳುತ್ತಿದ್ದಾರೆ.

**तत्वप्रकाशिका – नेश्वरेच्छामात्रं निमित्तं येन प्रलयेऽपि कार्योत्पत्तिप्रसङ्गः। किं तु कालोऽपि । न चास्ति प्रलये सोऽपीति वाच्यम् । कालविशेषस्य सृष्टिकालस्याभावात् ।**

ಈಶ್ವರನ ಇಚ್ಛೆಯಷ್ಟೇ ಜಗದುತ್ಪತ್ತಿಗೆ ನಿಮಿತ್ತಕಾರಣವಲ್ಲ. ಹಾಗೆ ನಾವು ಒಪ್ಪಿದ್ದಲ್ಲಿ ಪ್ರಳಯದಲ್ಲೂ ಕೂಡ ಸಕಲಕಾರ್ಯಗಳು ಉತ್ಪನ್ನವಾಗಲಿ ಎಂಬ ಅತಿಪ್ರಸಂಗವು ಬರುತ್ತಿತ್ತು. ಮತ್ತೇನೆಂದರೆ ಕಾಲವೂ ಕೂಡ ನಿಮಿತ್ತಕಾರಣವಾಗಿದೆ. ಪ್ರಳಯಕಾಲದಲ್ಲೂ ಕೂಡ ಕಾಲವು ಇದೆಯಲ್ಲವೆ? ಎಂದು ಪ್ರಶ್ನಿಸಬಾರದು. ಕೇವಲ ಕಾಲವು ಸೃಷ್ಟಿಗೆ ಕಾರಣವಲ್ಲ. ಕಾಲವಿಶೇಷವನ್ನು ಕಾರಣವೆನ್ನುತ್ತೇವೆ. ಕಾಲವಿಶೇಷವೆಂದರೆ ಸೃಷ್ಟಿಕಾಲವೆಂಬ ಕಾಲವಿಶೇಷ ಎಂದರ್ಥ. ಇದು ಪ್ರಳಯಕಾಲದಲ್ಲಿ ಇಲ್ಲದ್ದರಿಂದ ಅತಿಪ್ರಸಂಗವಿಲ್ಲ.

**तत्वप्रकाशिका – न चैतदन्यमतेऽपि समम् । अस्माभिः काले स्वाभाविक सृष्टिकालत्वादिविशेषाणामङ्गीकृतत्वेन तदुपपत्तेः ।**

ವೈಶೇಷಿಕರ ಮತದಲ್ಲೂ ಈ ಉತ್ತರವು ಸಮಾನವಲ್ಲ. ಏಕೆಂದರೆ ಕಾಲದಲ್ಲಿ ನಾವು ಸ್ವಾಭಾವಿಕವಾಗಿಯೇ ಸೃಷ್ಟಿಕಾಲತ್ವವೆಂಬ ವಿಶೇಷವನ್ನು ಅಂಗೀಕರಿಸಿದ್ದೇವೆ. ಆದ್ದರಿಂದ ಪ್ರಳಯಕಾಲದಲ್ಲಿ ಸಕಲಕಾರ್ಯಗಳು ಉತ್ಪನ್ನವಾಗಲಿ ಎಂಬ ಆಪಾದನೆಯನ್ನು ತತ್ವವಾದಿಗಳನ್ನು ಕುರಿತು ಮಾಡಲು ಸಾಧ್ಯವಿಲ್ಲ.

ವಿವರಣೆ - ಪ್ರಳಯಕಾಲದಲ್ಲೂ ಕೂಡ ಘಟಪಟಾದಿಗಳ ಸೃಷ್ಟಿ ಉಂಟಾಗಲಿ ಎಂಬ ಆಪತ್ತಿಯನ್ನು ಪರಿಹರಿಸಿಕೊಳ್ಳಲು ತಾರ್ಕಿಕರು ಈಶ್ವರೇಚ್ಛೆಯ ಜೊತೆ ಕಾಲವು ಕೂಡ ಕಾರಣವೆನ್ನುತ್ತಾರೆ. ಈಶ್ವರೇಚ್ಛೆ ಇದ್ದರೂ ಸೃಷ್ಟಿಕಾಲವಿಶೇಷ ಎಂಬ ಮತ್ತೊಂದು ನಿಮಿತ್ತಕಾರಣ ಇಲ್ಲದ ಕಾರಣ ಪ್ರಳಯಕಾಲದಲ್ಲಿ ಘಟಪಟಾದಿಗಳ ಸೃಷ್ಟಿಯಾಗಲಿ ಎಂಬ ಆಪತ್ತಿ ಬರುವುದಿಲ್ಲ ಎಂಬುದು ತಾರ್ಕಿಕರ ಸಮಾಧಾನ. ಆದರೆ 'ನ ಹಿ ಕಾಲ ವಿಶೇಷಸ್ತತ್ಪಕ್ಷೇ' ಎಂಬ ಅನುವ್ಯಾಖ್ಯಾನದ ಮಾತಿನಂತೆ ತಾರ್ಕಿಕರು ಕಾಲದಲ್ಲಿ ವಿಭಾಗವನ್ನು ಒಪ್ಪಿರುವುದಿಲ್ಲ. ಆದ್ದರಿಂದ ಅತಿಪ್ರಸಂಗವು ತಾರ್ಕಿಕರಿಗೆ ಬಂದೇ ಬರುತ್ತದೆ. ನಮ್ಮ ಮತದಲ್ಲಿ ಕಾಲದಲ್ಲಿ ಸ್ವಾಭಾವಿಕವಾಗಿಯೇ ಸೃಷ್ಟಿಕಾಲತ್ವಾದಿ ವಿಶೇಷಗಳನ್ನು ಒಪ್ಪಿರುವುದರಿಂದ ಪ್ರಳಯಕಾಲದಲ್ಲಿ ಘಟಾದ್ಯುತ್ಪತ್ತಿಪ್ರಸಂಗವು ಬರುವುದಿಲ್ಲ. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – परेण पुनः सृष्ट्याद्युपाधित एव कालविशेषस्याङ्गीकृतत्वात्। सृष्टिमन्तरेण सृष्टिकालानुपपत्तिः । सृष्टिकालमन्तरेण तदनुपपत्तिरित्यन्योन्याश्रय पातादिति भावः ।**

ತಾರ್ಕಿಕರು ಕಾಲದಲ್ಲಿ ಸೃಷ್ಟಿ ಮೊದಲಾದ ಉಪಾಧಿನಿಮಿತ್ತದಿಂದಲೇ ಕಾಲವಿಶೇಷವನ್ನು ಅಂಗೀಕರಿಸಿರುತ್ತಾರೆ. ಆದ್ದರಿಂದ ಸೃಷ್ಟಿಯಿಲ್ಲದೆ ಸೃಷ್ಟಿಕಾಲವೇ ಅನುಪಪನ್ನವಾಯಿತು. ಈಗ ಸೃಷ್ಟಿಗೋಸ್ಕರ ಸೃಷ್ಟಿಕಾಲತ್ವ ಎಂಬ ವಿಶೇಷವನ್ನು ಒಪ್ಪುತ್ತಿದ್ದಾರೆ. ಸೃಷ್ಟಿಯನ್ನು ಒಪ್ಪದೇ ಸೃಷ್ಟಿಕಾಲವು ಅನುಪಪನ್ನವಾಗುತ್ತದೆ. ಸೃಷ್ಟಿಕಾಲವು ಕೂಡದೆ ಸೃಷ್ಟಿಯು ಅನುಪಪನ್ನವಾಗುತ್ತದೆ. ಆದ್ದರಿಂದ ತಾರ್ಕಿಕರಿಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ.

ವಿವರಣೆ - ತಾರ್ಕಿಕರು ಕಾಲದಲ್ಲಿ ಸ್ವಾಭಾವಿಕವಿಶೇಷವನ್ನು ಒಪ್ಪದೇ ಔಪಾಧಿಕ ಭೇದವನ್ನು ಒಪ್ಪಿರುತ್ತಾರೆ. ಆದ್ದರಿಂದ ಸೃಷ್ಟಿಯಿಂದ ಸೃಷ್ಟಿಕಾಲ, ಸೃಷ್ಟಿಕಾಲದಿಂದ ಸೃಷ್ಟಿ ಎಂಬ ಅನ್ಯೋನ್ಯಾಶ್ರಯವು ಪರಿಪೂರ್ಣಚಂದ್ರಿಕಾ

ಬರುತ್ತದೆ. ತತ್ವವಾದಿಗಳು ಕಾಲದಲ್ಲಿಯೇ ಸ್ವಾಭಾವಿಕ ವಿಶೇಷವನ್ನು ಒಪ್ಪಿರುವುದರಿಂದ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿಲ್ಲ.

**ತत्वप्रकाशिका – ननु सत्यामपीश्वरेच्छायां सृष्टिकालाभावेन कार्योत्पादोपरमे सा मोघा स्यादिति चेत्तत्राप्याह – स्वत एवेति ।। नैष दोषः । तत्तत्काल एवेश्वरेच्छाया नित्याया अपि सृष्टिविषयत्वादिविशेषाविर्भावाभ्युपगमात् ।**

ಈಶ್ವರನ ಇಚ್ಛೆಯು ಇದ್ದರೂ ಕೂಡ ಸೃಷ್ಟಿಕಾಲವು ಇಲ್ಲದಿದ್ದಾಗ ಕಾರ್ಯವು ಉತ್ಪತ್ತಿ-ಯಾಗದಿದ್ದರೆ ಈಶ್ವರೇಚ್ಛೆಯು ವ್ಯರ್ಥವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ 'ಸ್ವತಃ ಏವ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಈಶ್ವರನ ಇಚ್ಛೆಯು ವ್ಯರ್ಥವಾಗುತ್ತದೆಂಬ ದೋಷಕ್ಕೆ ಅವಕಾಶವಿಲ್ಲ. ಈಶ್ವರನ ಇಚ್ಛೆಯು ನಿತ್ಯವಾಗಿದ್ದರೂ ಸೃಷ್ಟಿಕಾಲವು ಪ್ರಾಪ್ತವಾದಾಗ ಮಾತ್ರ ಸೃಷ್ಟಿಗೆ ಸ್ವಾಭಾವಿಕಕಾರಣವಾಗುತ್ತದೆ. ಈ ಇಚ್ಛೆಯು ಸ್ವಾಭಾವಿಕವಿಶೇಷವನ್ನು ಹೊಂದಿರುವುದರಿಂದ ಅನಿತ್ಯವಾಗುತ್ತದೆಂಬ ಆಕ್ಷೇಪಕ್ಕೂ ಅವಕಾಶವಿಲ್ಲ.

**तत्वप्रकाशिका – न चान्यमतेऽप्येतत्समानम् । अस्माभिस्तद्विशेषाणामनौपाधिकत्वाङ्गीकारात् परेण सृष्ट्याद्युपाधिनिबन्धनत्वाभ्युपगमात् । तथा चोक्तदोष इति भावः ।**

ತಾರ್ಕಿಕಮತದಲ್ಲಿ ಈ ಸಮಾಧಾನವನ್ನು ಸಮಾನವಾಗಿ ಹೇಳಲಾಗದು. ಏಕೆಂದರೆ ಈಶ್ವರನ ಇಚ್ಛಾವಿಶೇಷಗಳನ್ನು ನಾವು ಔಪಾಧಿಕವಲ್ಲವೆಂದು ಅಂಗೀಕರಿಸಿದ್ದೇವೆ. ಆದರೆ ತಾರ್ಕಿಕರು ಸೃಷ್ಟ್ಯಾದಿ ಈಶ್ವರೇಚ್ಛೆಯು ಉಪಾಧಿಗಳ ಅಧೀನವಾದ್ದರಿಂದ ಔಪಾಧಿಕವೆಂದು ಒಪ್ಪುತ್ತಾರೆ. ಆದ್ದರಿಂದ ಪ್ರಳಯಕಾಲದಲ್ಲೂ ಸೃಷ್ಟಿಯಾಗಲಿ ಎಂಬ ಅತಿಪ್ರಸಂಗವು ತಾರ್ಕಿಕರಿಗೆ ಮಾತ್ರ ಪ್ರಾಪ್ತವಾಯಿತು.

ವಿವರಣೆ - 'ಸೃಷ್ಟಿಯನ್ನು ಮಾಡುತ್ತೇನೆ' ಎಂಬ ಇಚ್ಛೆಯನ್ನು ಪರಮಾತ್ಮನು ಪ್ರಳಯಕಾಲದಲ್ಲೂ ಮಾಡುತ್ತಾನೆ. ಆದರೆ ಸೃಷ್ಟಿಕಾಲವು ಇಲ್ಲದ ಕಾರಣ ಸೃಷ್ಟಿಯಾಗುವುದಿಲ್ಲ ಎಂದು ಉತ್ತರಿಸಿದರೆ ಇಚ್ಛೆಯು ಸೃಷ್ಟಿಕಾಲದ ಅಧೀನವೆಂದು ಹೇಳಿದಂತಾಯಿತು. ಆದ್ದರಿಂದ 'ತತ್ಕಾಲಸೃಷ್ಟಿಮೇವಾತೋ ವಾಂಛತೀಶಃ ಸದೈವ ಹಿ। ಸ್ಯಾತ್ಕಾಲಃ ಸತ್ತದೇವೈತಿ ಕಾಲಸ್ಯ ಸ್ವಗತತ್ವತಃ ॥' ಸೃಷ್ಟಿಕಾಲದಲ್ಲಿಯೇ ಸೃಷ್ಟಿಯನ್ನು ಈಶ್ವರನು ಅಪೇಕ್ಷಿಸುತ್ತಾನೆ. ಎಂಬ ಅನುವ್ಯಾಖ್ಯಾನದ ಅಭಿಪ್ರಾಯಕ್ಕೆ ಅನುಗುಣವಾಗಿ 'ತತ್ತತ್ಕಾಲ ಏವ' ಇತ್ಯಾದಿಯಾಗಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ.

ತಾರ್ಕಿಕರು ಇಚ್ಛೆಯನ್ನು ಔಪಾಧಿಕವೆಂದು ಹೇಳಿರುವುದರಿಂದ ಸೃಷ್ಟಿಯಾದರೆ ಇಚ್ಛೆಗೆ ಸೃಷ್ಟಿವಿಷಯತ್ವವು ಸಿದ್ಧವಾಗುತ್ತದೆ. ಇಚ್ಛೆಗೆ ಸೃಷ್ಟಿವಿಷಯತ್ವವು ಸಿದ್ಧವಾದರೆ ಸೃಷ್ಟಿಯಾಗುತ್ತದೆಂಬ ಅನ್ಯೋನ್ಯಾಶ್ರಯದೋಷ ಬರುತ್ತದೆಂಬುದನ್ನು 'ಉಕ್ತಃ ದೋಷಃ' ಎಂಬುದರಿಂದ ತಿಳಿಯಬೇಕು.

'ಕಾಲವಿಶೇಷದಲ್ಲಿ ಸೃಷ್ಟಿ ಮಾಡುತ್ತೇನೆ' ಎಂಬ ಭಗವಂತನ ಇಚ್ಛೆಯು ನಿತ್ಯವೇ ಆಗಿದೆ. ಆದರೂ ಯಾವಾಗ ಸೃಷ್ಟಿಕಾಲವು ಬರುತ್ತದೋ ಆಗಲೇ 'ಸ್ರಕ್ಷ್ಯೇ' ಎಂಬುದಾಗಿ ಸೃಷ್ಟಿವಿಷಯತ್ವವು

ಆವಿರ್ಭಾವವಾಗುತ್ತದೆಂದು ಒಪ್ಪುತ್ತೇವೆ. ಉದಾಹರಣೆ 'ಮುಂದೆ ಬರುವ ಸೂರ್ಯಗ್ರಹಣದಲ್ಲಿ ಈ ಬ್ರಾಹ್ಮಣನಿಗೆ ಹಸುವನ್ನು ದಾನ ಮಾಡುತ್ತೇನೆ' ಎಂಬ ಇಚ್ಛೆಯು ಇದ್ದರೂ ಕೂಡ ಗ್ರಹಣ ಬಂದಾಗಲೇ 'ದಾನ ಮಾಡುವೆನು' ಎಂಬ ಇಚ್ಛೆಯು ಹೇಗೆ ಹುಟ್ಟುತ್ತದೋ ಅದರಂತೆ ಇಲ್ಲಿಯೂ ತಿಳಿಯಬೇಕು.

**ತತ್ವಪ್ರಕಾಶಿಕಾ – कालस्य निमित्तत्वमीश्वरेच्छानिमित्तत्वनिरासन्यायेन निरस्तमित्यभिप्रेत्य तद्दोषं वा स्वपक्षे परिहरति – स्वत एवेति ।।**

ಈಶ್ವರೇಚ್ಛೆಗೆ ನಿಮಿತ್ತತ್ವವನ್ನು ನಿರಾಕರಣೆ ಮಾಡಿದಂತೆ ಕಾಲಕ್ಕೂ ಕೂಡ ನಿಮಿತ್ತತ್ವವನ್ನೂ ನಿರಾಸಮಾಡಿದಂತಾಯಿತು. ಈ ಅಭಿಪ್ರಾಯದಿಂದ ಸ್ವಪಕ್ಷದಲ್ಲಿ ಬಂದ ದೋಷವನ್ನು ಪರಿಹರಿಸಲು 'ಸ್ವತ ಏವ' ಇತ್ಯಾದಿ ವಾಕ್ಯವು ಹೊರಟಿದೆ.

ವಿವರಣೆ - ತಾರ್ಕಿಕರ ಪ್ರಕಾರ ಈಶ್ವರೇಚ್ಛೆಯು ನಿಮಿತ್ತಕಾರಣವಾಗುವುದಿಲ್ಲ ಎಂಬುದನ್ನು ಇಲ್ಲಿಯತನಕ ನಿರಾಕರಣೆ ಮಾಡಿದ್ದಾಯಿತು. ಇದರಿಂದಲೇ ಕಾಲವೂ ಕೂಡ ನಿಮಿತ್ತಕಾರಣ-ವಾಗುವುದಿಲ್ಲ ಎಂಬುದನ್ನು ನಿರಾಕರಣೆ ಮಾಡಿದಂತಾಗುತ್ತದೆ. ಏಕೆಂದರೆ ಕಾಲವು ನಿತ್ಯವೋ? ಅನಿತ್ಯವೋ? ನಿತ್ಯವೆಂದರೆ ನಿರಂತರ ಕಾರ್ಯವು ಆಗುತ್ತಲೇ ಇರಲಿ. ಅನಿತ್ಯ ಎಂದರೆ ಕಾಲವೆಂಬ ನಿಮಿತ್ತ ಇಲ್ಲದಾಗ ಉತ್ಪತ್ತಿ ಆಗದಿರಬೇಕಾದೀತು. ಕಾಲವೂ ಕೂಡ ಕಾರ್ಯರೂಪವಾದ್ದರಿಂದ ತನ್ನ ಉತ್ಪತ್ತಿಗೆ ಮತ್ತೊಂದು ಕಾಲವನ್ನು ಅಪೇಕ್ಷಿಸಿದರೆ ಅನ್ಯೋನ್ಯಾಶ್ರಯದೋಷಬರುತ್ತದೆ. ಮತ್ತೊಂದು ಕಾಲವನ್ನು ಅಪೇಕ್ಷೆ ಪಡದಿದ್ದರೆ ಬೇರೆ ಕಾಲದಲ್ಲೂ ಕೂಡ ಕಾರ್ಯವೇಕೆ ನಿಮಿತ್ತಕಾರಣವಾಗಬೇಕು? ಇತ್ಯಾದಿ ದೋಷಗಳು ತಾರ್ಕಿಕರಿಗೆ ಪ್ರಾಪ್ತವಾಗುತ್ತವೆ. (ವಾಕ್ಯಾರ್ಥಮುಕ್ತಾವಳಿ)

**ತತ್ವಪ್ರಕಾಶಿಕಾ – नायं दोषोऽस्मत्पक्षेऽस्माभिः काले सृष्टिकालत्वादि-विशेषाङ्गीकारात् । तस्यैव निमित्तत्वात् । न चैवं परपक्षे । अस्माभिः कालविशेषाणां स्वाभाविकत्वोरीकारात् । परेण सृष्ट्याद्युपाधिनिबन्धनत्वाभ्युपगतेस्तत्र चोक्तं दूषणमिति भावः ।**

ಈ ದೋಷವು ನಮ್ಮ ಪಕ್ಷದಲ್ಲಿ ಬರುವುದಿಲ್ಲ. ಏಕೆಂದರೆ ಕಾಲದಲ್ಲೂ ಕೂಡ ಸೃಷ್ಟಿಕಾಲವಿಶೇಷತ್ವವನ್ನು ನಾವು ಅಂಗೀಕರಿಸಿರುತ್ತೇವೆ. ಕಾಲವಿಶೇಷವೇ ನಿಮಿತ್ತಕಾರಣ ಎಂಬುದು ನಮ್ಮ ಸಿದ್ಧಾಂತ. ಇದರಂತೆ ಪರಪಕ್ಷದಲ್ಲಿ ಉತ್ತರಿಸಲಾಗದು. ಏಕೆಂದರೆ ನಾವು ಕಾಲವಿಶೇಷವನ್ನು ಸ್ವಾಭಾವಿಕವೆಂದು ಅಂಗೀಕರಿಸಿರುತ್ತೇವೆ. ತಾರ್ಕಿಕರು ಸೃಷ್ಟ್ಯಾದ್ಯುಪಾಧಿಗಳ ಅಧೀನವಾಗಿ ಕಾಲವಿಶೇಷವನ್ನು ಒಪ್ಪಿರುತ್ತಾರೆ. ಆದ್ದರಿಂದ ಪರವಾದಿಗಳಿಗೆ ಅನ್ಯೋನ್ಯಾಶ್ರಯಾದಿದೋಷಗಳು ಪ್ರಾಪ್ತವಾಗುತ್ತವೆ.

**ತತ್ವಪ್ರಕಾಶಿಕಾ – अदृष्टस्य निमित्तत्वं वा पराकृत्य तं दोषं स्वपक्षे परिहरति – स्वत एवेति ।। नायमस्मत्पक्षे दोषो भवति । अस्माभिः सृष्ट्यादिकाले पूर्वं सत्येवादृष्टे समुद्बोधविशेषाङ्गीकारात् ।**

ಅದೃಷ್ಟವು ನಿಮಿತ್ತಕಾರಣ ಎಂಬುದನ್ನು ನಿರಾಕರಣೆ ಮಾಡಿ ಸಿದ್ಧಾಂತಪಕ್ಷದಲ್ಲಿ ಆ ದೋಷವನ್ನು 'ಸ್ವತಃ ಏವ' ಇತ್ಯಾದಿಯಾಗಿ ಪರಿಹರಿಸುತ್ತಿದ್ದಾರೆ. ಅದೃಷ್ಟವು ನಿಮಿತ್ತಕಾರಣವಾದರೆ ತಾರ್ಕಿಕರಿಗೆ ಬರುವ ದೋಷವು ನಮ್ಮ ಪಕ್ಷದಲ್ಲಿ ಸಮಾನವಲ್ಲ. ಏಕೆಂದರೆ ನಾವು ಸೃಷ್ಟ್ಯಾದಿಕಾಲದಲ್ಲಿ ಮೊದಲೇ ಇರುವ ಅದೃಷ್ಟವು ಉದ್ಬೋಧವಾಗುತ್ತದೆಂದು ಸಮುದ್ಭವದಲ್ಲಿ ವಿಶೇಷವನ್ನು ಅಂಗೀಕಾರ ಮಾಡಿದ್ದೇವೆ.

ವಿವರಣೆ - ಈಶ್ವರೇಚ್ಛೆಯು ನಿಮಿತ್ತಕಾರಣವೆಂದು ತಾರ್ಕಿಕರಿಗೆ ಹೇಳಲಾಗದೆಂದು ಸಮರ್ಥನೆ ಮಾಡಿದ್ದಾಯಿತು. ಕಾಲವಿಶೇಷವು ನಿಮಿತ್ತಕಾರಣವಾಗುವುದಿಲ್ಲವೆಂಬುದನ್ನು ಕೂಡ ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಅದೃಷ್ಟವು ನಿಮಿತ್ತಕಾರಣವಾಗುತ್ತದೆಂಬುದನ್ನು ನಿರಾಕರಣೆ ಮಾಡಿ ತಾರ್ಕಿಕರಿಗೆ ಇರುವ ದೋಷ ಸ್ವಪಕ್ಷದಲ್ಲಿ ಇಲ್ಲವೆಂದು ಸಮರ್ಥಿಸುತ್ತಿದ್ದಾರೆ. ಅದೃಷ್ಟವು ನಿಮಿತ್ತಕಾರಣವಾದರೆ ಪ್ರಳಯಕಾಲದಲ್ಲಿ ಅದೃಷ್ಟ ಇರುವುದರಿಂದ ಆಗಲೂ ಸೃಷ್ಟಿ ಆಗುತ್ತಲೇ ಇರಲಿ ಎಂಬ ಆಪತ್ತಿಯು ತಾರ್ಕಿಕರಿಗೆ ಬರುತ್ತದೆ. ಈ ಆಪತ್ತಿಯನ್ನು ಪರಿಹರಿಸಿಕೊಳ್ಳಲು ಅದೃಷ್ಟವು ಪ್ರಳಯಕಾಲದಲ್ಲಿ ಉದ್ಬುದ್ಧವಾಗಿಲ್ಲವೆಂದೇ ತಾರ್ಕಿಕರು ಉತ್ತರಿಸಬೇಕು. ಆದರೆ ಏಕೆ ಉದ್ಬೋಧವಾಗಲಿಲ್ಲ ? ಎಂದು ನಾವು ಪ್ರತಿಯಾಗಿ ಪ್ರಶ್ನಿಸಿದರೆ ಅವರಲ್ಲಿ ಪರಿಹಾರವಿಲ್ಲ.

**तत्वप्रकाशिका – न चैतदन्यमते सम्भवति । अस्माभिः काले स्वभाविकविशेषाङ्गीकारात् । परेण पुनः स्वतः काले सृष्टिकालत्वादि-विशेषानङ्गीकारेण कदोद्बोध इत्यस्य परिहाराभावात् । उपाध्युक्तौ सोऽपि कदेत्यस्य परिहाराभावादिति भावः ।। १२ ।।**

ತಾರ್ಕಿಕರ ಮತದಲ್ಲಿ ಇದು ಕೂಡುವುದಿಲ್ಲ. ಏಕೆಂದರೆ ನಾವು ಕಾಲದಲ್ಲಿ ಸ್ವಾಭಾವಿಕವಾದ ವಿಶೇಷವನ್ನು ಅಂಗೀಕಾರ ಮಾಡಿದ್ದೇವೆ. ತಾರ್ಕಿಕರು ಕಾಲದಲ್ಲಿ ಸೃಷ್ಟಿಕಾಲತ್ವಾದಿವಿಶೇಷವನ್ನು ಅಂಗೀಕಾರ ಮಾಡಿರುವುದಿಲ್ಲ. ಆದ್ದರಿಂದ ಅದೃಷ್ಟವು ಯಾವಾಗ ಉದ್ಬೋಧ ಆಗುತ್ತದೆ ಎಂಬುದಕ್ಕೆ ಅವರಲ್ಲಿ ಉತ್ತರವಿಲ್ಲ. ಕಾಲದಲ್ಲೊಂದು ಉಪಾಧಿಯನ್ನು ಹೇಳಿ ಅಂಥ ಕಾಲದಲ್ಲಿ ಅದೃಷ್ಟವು ಉದ್ಬೋಧವಾಗುತ್ತದೆಂದು ತಾರ್ಕಿಕರು ಉತ್ತರಿಸಬೇಕು. ಆದರೆ ಔಪಾಧಿಕವಾದ ಆ ಕಾಲವು ಯಾವಾಗ ಬರುತ್ತದೆ ? ಎಂಬ ಪ್ರಶ್ನೆಗೆ ಅವರಲ್ಲಿ ಪರಿಹಾರವಿಲ್ಲ.

ವಿವರಣೆ - ಕಾಲದಲ್ಲಿ ಔಪಾಧಿಕಭೇದವನ್ನು ಒಪ್ಪಿ ಅಂಥ ಕಾಲವಿಶೇಷವು ಪ್ರಳಯಕಾದಲ್ಲಿ ಇರುವುದರಿಂದ ಅದೃಷ್ಟವು ಉದ್ಬೋಧವಾಗಲಿಲ್ಲವೆಂದೇ ಅವರು ಉತ್ತರಿಸಬೇಕು. ಆದರೆ ಔಪಾಧಿಕ ಕಾಲವನ್ನು ಒಪ್ಪಿದರೆ ಅನ್ಯೋನ್ಯಾಶ್ರಯದೋಷಗಳು ಪ್ರಾಪ್ತವಾಗುತ್ತದೆಂದು ಈಗಾಗಲೇ ಹೇಳಿದ್ದರಿಂದ ಅದೃಷ್ಟವು ಉದ್ಬೋಧವಾಗುವುದಿಲ್ಲವೆಂಬುದಕ್ಕೂ ಅವರಲ್ಲಿ ಉತ್ತರವಿಲ್ಲ.

ಸಿದ್ಧಾಂತಿಗಳಾದ ನಮ್ಮ ಪಕ್ಷದಲ್ಲಿ ಈ ದೋಷವಿಲ್ಲ. ಏಕೆಂದರೆ ಕಾಲದಲ್ಲಿ ಸ್ವಾಭಾವಿಕ ಭೇದವನ್ನು ಒಪ್ಪಿರುವುದರಿಂದ ಸೃಷ್ಟಿಯ ಪ್ರಾರಂಭದಲ್ಲಿ ಯಾವ ಕಾಲವಿಶೇಷ ಇರುತ್ತದೋ ಅದು ಪ್ರಳಯಕಾಲದಲ್ಲಿ ಇಲ್ಲದ ಕಾರಣ ಸೃಷ್ಟಿಯ ಪ್ರಾರಂಭದಲ್ಲೇ ಅದೃಷ್ಟವು ಉದ್ಬೋಧವಾಗುತ್ತದೆ. ಪ್ರಳಯಕಾಲದಲ್ಲಿ ಅದೃಷ್ಟವು ಉದ್ಬೋಧವಾಗುವುದಿಲ್ಲವೆಂದು ನಾವು ಸುಲಭವಾಗಿ ಉತ್ತರಿಸುತ್ತೇವೆ.

ವೈಶೇಷಿಕಾಧಿಕರಣ (೨-೨-೬)

## ಬ್ರಹ್ಮಸೂತ್ರ

**सूत्रम् — समवायाभ्युपगमाच्च साम्यादनवस्थितेः ।।**

ತಾರ್ಕಿಕರು ಅವಯವ ಹಾಗೂ ಅವಯವಿಗಳಿಗೆ ಭೇದವನ್ನು ಒಪ್ಪಿ, ಸಮವಾಯಸಂಬಂಧವನ್ನು ಅಂಗೀಕರಿಸುತ್ತಾರೆ. ಇದೇ ಕಾರಣದಿಂದ ಸಮವಾಯ ಮತ್ತು ಸಮವಾಯಿಗಳಿಗೂ ಭೇದವನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ಸಮವಾಯ ಸಮವಾಯಿಗಳ ನಡುವೆ ಮತ್ತೊಂದು ಸಮವಾಯವನ್ನು ಒಪ್ಪುವ ಅವಶ್ಯಕತೆಯಿರುವುದರಿಂದ ಅನವಸ್ಥಾದೋಷವು ಬರುತ್ತದೆ.

## ಸೂತ್ರದೀಪಿಕಾ

**सूत्रदीपिका** — वैशेषिकैः अवयवावयव्यादीनां भिन्नत्वनिमित्तेन **समवायाभ्युपगमात्**। समवायसम्बन्धाङ्गीकारात्। **साम्यात्** समवाय्यसमवायिनोरपि भिन्नत्वसाम्यात् । तत्रापि समवायाभ्युपगमे **अनवस्थितेः** अनवस्थानाच्च तन्मतमयुक्तमित्यर्थः ।।३।।

ವೈಶೇಷಿಕರು ಅವಯವ ಮತ್ತು ಅವಯವಿಗಳಿಗೆ ಭೇದವನ್ನು ಒಪ್ಪಿರುವ ಕಾರಣ ಸಮವಾಯಾಭ್ಯುಗಮಾತ್ = ಸಮವಾಯಸಂಬಂಧವನ್ನು ಅಂಗೀಕರಿಸಿರುತ್ತಾರೆ. ಇದರಂತೆ ಸಾಮ್ಯಾತ್ = ಸಮವಾಯ ಮತ್ತು ಸಮವಾಯಿಗಳಿಗೂ ಭೇದವು ಸಮಾನವಾಗಿರುವುದರಿಂದ ಅಲ್ಲಿಯೂ ಸಮವಾಯಸಂಬಂಧವನ್ನು ಒಪ್ಪಬೇಕು. ಆವಾಗ ಅನವಸ್ಥಿತೇಃ = ಅನವಸ್ಥಾದೋಷವು ಬರುತ್ತದೆ. ಆದ್ದರಿಂದ ತಾರ್ಕಿಕರು ಸಮರ್ಥಿಸಿದ ಸಮವಾಯಕಾರಣತಾವಾದವು ಅಯುಕ್ತವಾಗಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् — ।। समवायाभ्युपगमाच्च साम्यादनवस्थितेः ।।३।।**

**कार्यकारणादीनां समवायसम्बन्धाङ्गीकारात् तस्य च भिन्नत्वसाम्यात् समवायान्तरापेक्षायामनवस्थितिः ।।३।।**

ಅನುವಾದ - ಕಾರ್ಯ-ಕಾರಣಗಳಿಗೆ, ಜಾತಿ-ವ್ಯಕ್ತಿಗಳಿಗೆ, ಅವಯವ-ಅವಯವಿಗಳಿಗೆ, ಸಮವಾಯ ಸಂಬಂಧಗಳನ್ನು ತಾರ್ಕಿಕರು ಒಪ್ಪುತ್ತಾರೆ. ಆ ಸಮವಾಯಸಂಬಂಧಗಳಾದರೂ ವಸ್ತುವಿಗಿಂತ ಭಿನ್ನವೇ ಆಗಿರುವುದರಿಂದ ಮತ್ತೊಂದು ಸಮವಾಯವನ್ನು ಅದಕ್ಕೆ ಹೇಳಬೇಕಾಗುತ್ತದೆ. ಹೀಗೆ ಹೇಳುತ್ತಾ ಹೊರಟರೆ ಅನವಸ್ಥಾ ದೋಷವು ಬರುತ್ತದೆ.

ಪ್ರತಿಪದಾರ್ಥ -- ವೈಶೇಷಿಕರ ಮತದಲ್ಲಿ ನಿಮಿತ್ತಕಾರಣವು ಯುಕ್ತವಾಗುವುದಿಲ್ಲವೆಂದು ಸಮರ್ಥಿಸಿ ಸಮವಾಯಕಾರಣವೂ ಕೂಡ ಯುಕ್ತವಾಗುವುದಿಲ್ಲವೆಂದು ನಿರಾಕರಿಸಲು ಮುಂದಿನ ಸೂತ್ರ ಹೊರಟಿದೆ. ಕಾರ್ಯಕಾರಣಾದೀನಾಂ = ಕಾರ್ಯ-ಕಾರಣಗಳಿಗೆ ಜಾತಿವ್ಯಕ್ತಿಗಳಿಗೆ ಅವಯವ-ಅವಯವಿಗಳಿಗೆ, ಸಮವಾಯಸಂಬಂಧಾಂಗೀಕಾರಾತ್ = ಸಮವಾಯ ಸಂಬಂಧವನ್ನು ಒಪ್ಪಿರುವುದರಿಂದ, ತಸ್ಯ ಚ = ಆ ಸಮವಾಯಕ್ಕೂ ಕೂಡ, ಭಿನ್ನತ್ವಸಾಮ್ಯತ್ವಾತ್ = ಕಾರ್ಯಕಾರಣಗಳಂತೆ ಪದಾರ್ಥದ ಜೊತೆಗೆ ಭೇದವೇ ಇರುವುದರಿಂದ, ಸಮವಾಯಾಂತರಾಪೇಕ್ಷಾಯಾಮ್ = ಮತ್ತೊಂದು ಸಮವಾಯ ಸಂಬಂಧದ ಅಪೇಕ್ಷೆ ಇದ್ದಲ್ಲಿ. ಅನವಸ್ಥಿತಿಃ = ಅನವಸ್ಥಾದೋಷವು ಬರುತ್ತದೆ.

**भाष्यम् — न च तत्प्रमाणम् । प्रथमसम्बन्धासिद्ध्यैव च तदसिद्धिः । स्वनिर्वाहकत्वे समवाय एव न स्यात् ।।३।।**

ಅನುವಾದ - ಸಮವಾಯಸಂಬಂಧಗಳ ಪರಂಪರೆಯನ್ನು ಒಪ್ಪಲು ಯಾವುದೇ ಪ್ರಮಾಣವಿಲ್ಲ. ಹಾಗೆ ಪ್ರಮಾಣವಿದ್ದಿದ್ದರೆ ಅನವಸ್ಥಾದೋಷವು ಬರುತ್ತಿರಲಿಲ್ಲ ಮೊದಲಿನ ಸಮವಾಯಸಂಬಂಧವೇ ಅಸಿದ್ಧವಾದ್ದರಿಂದ ಮುಂದಿನ ಸಮವಾಯದ ಪರಂಪರೆಯು ಅಸಿದ್ಧವಾಗುತ್ತದೆ. ಅವಯವ-ಅವಯವಿಗಳಿಗಿರುವ ಸಮವಾಯಸಂಬಂಧವು ಸ್ವನಿರ್ವಾಹಕವೆಂದು ಒಪ್ಪುವುದಾದರೆ ಸಮವಾಯವನ್ನು ಒಪ್ಪುವ ಅವಶ್ಯಕತೆಯೇ ಇರುವುದಿಲ್ಲ. ಅವಯವ ಅವಯವಿಗಳಿಗೆ ಸ್ವನಿರ್ವಾಹಕತ್ವವನ್ನು ಒಪ್ಪಿಯೇ ಸಮಸ್ಯೆಯನ್ನು ಪರಿಹರಿಸಬಹುದು.

ಪ್ರತಿಪದಾರ್ಥ -- ಪ್ರಾಮಾಣಿಕವಾದ್ದರಿಂದ ಸಮವಾಯ ಪರಂಪರೆಯನ್ನು ಒಪ್ಪಬಹುದು. ಆದ್ದರಿಂದ ಅನವಸ್ಥಾದೋಷ ಬರುವುದಿಲ್ಲವೆಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ತತ್ = ಸಮವಾಯದ ವಿಷಯದಲ್ಲಿ, ನಚ ಪ್ರಮಾಣಂ = ಬೀಜಾಂಕುರ ಪರಂಪರೆಯಂತೆ ಪ್ರಮಾಣವಿರುವುದಿಲ್ಲ. ಪ್ರಥಮಸಂಬಂಧಾಸಿದ್ಧ್ಯೈವ = ಅವಯವ ಅವಯವಿಗಳಿಗೆ ಇರುವ ಸಮವಾಯ ಸಂಬಂಧ ಅಸಿದ್ಧವಾದ್ದರಿಂದಲೇ, ತದಸಿದ್ಧಿಃ = ಉಳಿದ ಸಂಬಂಧಗಳು ಅಸಿದ್ಧವಾಗಿವೆ. ಸ್ವನಿರ್ವಾಹಕತ್ವೇ = ಅವಯವ-ಅವಯವಿಗಳಿಗಿರುವ ಸಮವಾಯವು ಸ್ವನಿರ್ವಾಹಕವೆಂದು ಒಪ್ಪಿದರೆ, ಸಮವಾಯಃ ಏವ = ಸಮವಾಯ ಸಂಬಂಧವೇ, ನಸ್ಯಾತ್ = ಬೇಕಾಗಿರುವುದಿಲ್ಲ.

## ತತ್ವಪ್ರಕಾಶಿಕಾ

**तत्वप्रकाशिका – एवं परपक्षे निमित्तकारणासम्भवं दर्शयित्वा समवायिकारणनिरासाय सूत्रमुपन्यस्य व्याचष्टे – समवायेति ।।**

ಹಿಂದಿನ ಸೂತ್ರದಲ್ಲಿ ತಾರ್ಕಿಕರ ಮತದಲ್ಲಿ ನಿಮಿತ್ತಕಾರಣವು ಅಸಂಭಾವಿತವಾಗಿದೆ ಎಂದು ತೋರಿಸಿದ್ದಾಯಿತು. ಪ್ರಕೃತ ಸಮವಾಯಿಕಾರಣವನ್ನು ನಿರಾಕರಣೆ ಮಾಡುವುದಕ್ಕಾಗಿ 'ಸಮವಾಯ ಅಭ್ಯುಪಗಮಾಚ್ಚ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಪದಾರ್ಥಗಳಿಗೆ ಸಮವಾಯಸಂಬಂಧವನ್ನು ಒಪ್ಪಬೇಕೆಂದು ತಾರ್ಕಿಕರು ಹೇಳುತ್ತಾರೆ. ಘಟವನ್ನು ಕುರಿತು ಕಪಾಲವು ಸಮವಾಯಿಕಾರಣವಾಗಿದೆ ಎಂಬುದು ಅವರ ಸಿದ್ಧಾಂತ. ಇದನ್ನು ಈ ಸೂತ್ರದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಸಮವಾಯಿಕಾರಣವು ಅಪ್ರಾಮಾಣಿಕವಾಗಿದೆ ಎಂಬುದು ಎರಡನೆಯ ಅಂಶ. ಸಮವಾಯವು ಸಿದ್ಧವಾದರಷ್ಟೇ ಸಮವಾಯಿಕಾರಣವು ಸಿದ್ಧವಾಗುತ್ತದೆ. ಆದರೆ ಸಮವಾಯವೇ ಸಿದ್ಧವಾಗುವುದಿಲ್ಲ.

1. ಗುಣ-ಗುಣಿಗಳಿಗೆ, 2. ಜಾತಿ-ವ್ಯಕ್ತಿಗಳಿಗೆ, 3. ಕ್ರಿಯಾ-ಕ್ರಿಯಾವತ್‌ಗಳಿಗೆ, 4. ಅವಯವ-ಅವಯವಿಗಳಿಗೆ, 5. ವಿಶೇಷ ಮತ್ತು ನಿತ್ಯದ್ರವ್ಯಗಳಿಗೆ ಹೀಗೆ ಐದು ಸ್ಥಳದಲ್ಲಿ ಸಮವಾಯ ಸಂಬಂಧವನ್ನು ತಾರ್ಕಿಕರು ಒಪ್ಪುತ್ತಾರೆ. ಆದರೆ ಈ ಐದು ಸ್ಥಳದಲ್ಲಿ ಸಮವಾಯಸಂಬಂಧವನ್ನು ಒಪ್ಪುವ ಆವಶ್ಯಕತೆಯಿಲ್ಲ ಸ್ವರೂಪಸಂಬಂಧದಿಂದಲೇ ನಿರ್ವಾಹ ಮಾಡಬಹುದು ಎಂಬುದು ಸಿದ್ಧಾಂತಿಗಳ ಅಭಿಪ್ರಾಯ.

**तत्वप्रकाशिका – अत्र कार्यकारणपदमवयवावयविविषयम् । आदिपदेनाऽनित्यगुणक्रियातद्वतां सङ्ग्रहः । अथवा कार्यकारणपदेनैवैषां सङ्ग्रहः । आदिपदेन नित्यगुणगुणिजातिव्यक्तिविशेषविशेषिणां प्रसङ्गाद् ग्रहणम् ।**

ಭಾಷ್ಯದಲ್ಲಿರುವ ಕಾರ್ಯಕಾರಣ ಎಂಬ ಪದಕ್ಕೆ ಅವಯವ ಮತ್ತು ಅವಯವಿಗಳೆಂದು ಅರ್ಥ. 'ಕಾರ್ಯಕಾರಣಾದೀನಾಂ ಎಂಬಲ್ಲಿರುವ ಆದಿಪದದಿಂದ ಅನಿತ್ಯವಾದ ಗುಣಕ್ರಿಯಾ ಅವುಗಳಿಗೆ ಆಶ್ರಯವಾದ ದ್ರವ್ಯ ಇವುಗಳನ್ನು ಸಂಗ್ರಹ ಮಾಡಬೇಕು. ಅಥವಾ ಕಾರ್ಯಕಾರಣಪದದಿಂದಲೇ ಇವುಗಳನ್ನು ಸಂಗ್ರಹಿಸಬಹುದು. ಆದಿಪದದಿಂದ ನಿತ್ಯವಾದ ಗುಣ-ಗುಣಿಗಳು ಜಾತಿ-ವ್ಯಕ್ತಿಗಳು, ವಿಶೇಷ ಮತ್ತು ನಿತ್ಯದ್ರವ್ಯಗಳನ್ನು ವಿವಕ್ಷಿಸಬೇಕು.

ವಿವರಣೆ - ಕಾರ್ಯಪದದಿಂದ ಅವಯವಿಯನ್ನು ಕಾರಣಪದದಿಂದ ಅವಯವವನ್ನು ಭಾಷ್ಯದಲ್ಲಿ ವಿವಕ್ಷಿಸಬೇಕು. ಅಥವಾ ಕಾರ್ಯಪದದಿಂದ ಅವಯವಿಯಲ್ಲಿರುವ ಅನಿತ್ಯವಾದ ಗುಣಕ್ರಿಯೆಗಳನ್ನು ಕಾರಣಪದದಿಂದ ಅವಯವದಲ್ಲಿರುವ ಗುಣಕ್ರಿಯಾವಸ್ತುಗಳನ್ನು ವಿವಕ್ಷಿಸಬೇಕು. (ವಾಕ್ಯಾರ್ಥವಿವರಣ)

ಅಸಮವಾಯಕಾರಣವನ್ನು ನಿರಾಕರಣೆ ಮಾಡುವ ಪ್ರಸಂಗದಲ್ಲಿ ನಿತ್ಯವಾದ ಗುಣ ಮತ್ತು ಗುಣಿಗಳನ್ನು ಸ್ವೀಕರಿಸುವುದು ಅಪ್ರಸ್ತುತವಾಗುತ್ತದೆ. ಆದ್ದರಿಂದ ಟೀಕೆಯಲ್ಲಿ 'ಅನಿತ್ಯಗುಣಕ್ರಿಯಾ ತದ್ವತಾಂ ಸಂಗ್ರಹಃ' ಎಂದು ಹೇಳಿರುತ್ತಾರೆ.

ಪರಿಪೂರ್ಣಚಂದ್ರಿಕಾ

**तत्वप्रकाशिका – परमाण्वादीनां द्रव्यादिकारणत्वं नोपपन्नम् । तेषां भिन्नत्वमभ्युपेत्य समवायाभ्युपगमात् । भिन्नयोरवयवावयवित्वादिविशेषणविशेष्य-भावोपपत्तये समवायोऽङ्गीकार्य एवातस्तदभ्युपगमे को दोष इति चेन्न ।**

ಪರಮಾಣು ಮೊದಲಾದವುಗಳಿಗೆ ದ್ರವ್ಯಾದಿಕಾರಣತ್ವವನ್ನು ಒಪ್ಪಿರುವುದು ಯುಕ್ತವಾಗುವುದಿಲ್ಲ. ಏಕೆಂದರೆ ಪರಮಾಣ್ವಾದಿಗಳಿಗಿಂತ ದ್ವ್ಯಣುಕಾದಿಗಳಲ್ಲಿ ಭೇದವನ್ನು ಒಪ್ಪಿ ಸಮವಾಯವನ್ನು ಒಪ್ಪಿರುವುದರಿಂದ ದ್ರವ್ಯಾದಿಕಾರಣತ್ವವು ಪರಮಾಣ್ವಾದಿಗಳಿಗೆ ಯುಕ್ತವಾಗುವುದಿಲ್ಲ. ಭಿನ್ನಪದಾರ್ಥಗಳಲ್ಲಿ ಅವಯವ-ಅವಯವಿತ್ವಾದಿ ವಿಶೇಷಣ-ವಿಶೇಷ್ಯಭಾವವನ್ನು ಕೂಡಿಸಲು ಸಮವಾಯವನ್ನು ಅಂಗೀಕರಿಸಬೇಕಲ್ಲವೆ? ಹಾಗೆ ಸಮವಾಯ-ಸಂಬಂಧವನ್ನು ಅಂಗೀಕರಿಸುವುದರಿಂದ ಬರುವ ದೋಷವಾದರೂ ಏನು ?

**तत्वप्रकाशिका – तथा सति समवायस्यापि समवायिभ्यां भिन्नत्वसाम्यान्मृद्घट-समवाय इत्यादिविशेषणविशेष्यभावोपपत्तये समवायान्तरापेक्षापातात् । तत्रापि भिन्नत्वसाम्यात् समवायस्य समवाय इत्यादिविशेषरविशेष्यभावोपपत्तये समवायान्तरापेक्षेत्यनवस्था स्यादिति भावः ।**

ಹಾಗಾದರೆ ಸಮವಾಯಕ್ಕೂ ಕೂಡ ಸಮವಾಯಿಗಳಿಂದ (ಅವಯವ ಮತ್ತು ಅವಯವಿಗಳಿಗೆ) ಭೇದವು ಸಮಾನವಾಗಿದೆ. ಈ ಭೇದಸಾಮ್ಯದಿಂದ ಮಣ್ಣು ಹಾಗೂ ಘಟಗಳಿಗೆ ಸಮವಾಯವಿದೆ ಎಂಬ ವಿಶೇಷಣವಿಶೇಷ್ಯಭಾವವನ್ನು ಕೂಡಿಸಲು ಮತ್ತೊಂದು ಸಮವಾಯವು ಬೇಕಾಗುತ್ತದೆ. ಈ ಸಮವಾಯ ಮತ್ತು ಸಮವಾಯಿಗಳಿಗೂ ಭೇದವು ಸಮಾನವಾದ್ದರಿಂದ 'ಸಮವಾಯದ ಸಮವಾಯ' ಇತ್ಯಾದಿ ವಿಶೇಷಣವಿಶೇಷ್ಯಭಾವವನ್ನು ಕೂಡಿಸಲು ಮತ್ತೊಂದು ಸಮವಾಯವು ಬೇಕಾಗುತ್ತದೆ. ಹೀಗೆ ಅನವಸ್ಥಾ ದೋಷವು ಪ್ರಾಪ್ತವಾಯಿತು.

ವಿವರಣೆ - 'ಭಿನ್ನತ್ವಸಾಮ್ಯಾತ್' ಎಂಬುದು ಉಪಲಕ್ಷಣವಾಗಿದೆ .'ಇಹ ಪ್ರತ್ಯಯಸಾಮ್ಯಾತ್' ಎಂಬುದನ್ನು ಕೂಡ ವಿವಕ್ಷಿಸಬೇಕು. ಆದ್ದರಿಂದ 'ಮೃದಿ ಘಟಃ ಇತ್ಯಾದಿ ಪ್ರತ್ಯಯಃ ಸಂಬಂಧಪೂರ್ವಕಃ ಭಿನ್ನತ್ವಾತ್' 'ಅಬಾಧಿತ ಪ್ರತ್ಯಯತ್ವಾಚ್ಚ ಇಹ ಕುಂಡೇ ಬದರಾಣಿ ಇತ್ಯಾದಿ ಪ್ರತ್ಯಯವತ್' ಇತ್ಯಾದಿಯಾಗಿ ತಾರ್ಕಿಕರು ಅಬಾಧಿತಪ್ರತ್ಯಯದಿಂದ ಹಾಗೂ ಭಿನ್ನತ್ವಹೇತುವಿನಿಂದ 'ಮೃದಿ ಘಟಃ' ಎಂಬ ಪ್ರತೀತಿಯು ಸಂಬಂಧಪೂರ್ವಕವಾಗಿದೆ. ಆ ಸಂಬಂಧವು ಸಮವಾಯವೇ ಆಗಿದೆ ಎಂದು ಪರ್ಯವಸಾನ ಮಾಡುತ್ತಾರೆ ಎಲ್ಲಿ ಭಿನ್ನತ್ವ ಇದೆಯೋ ಅಲ್ಲಿ ಸಂಬಂಧವಿದೆ ಎಂಬ ವ್ಯಾಪ್ತಿಗೆ ವ್ಯಭಿಚಾರದೋಷವನ್ನು ಹೇಳುತ್ತಿದ್ದಾರೆ. 'ಮೃದ್‌ಘಟಯೋಃ ಸಮವಾಯಃ' ಮಣ್ಣು ಮತ್ತು ಮಡಿಕೆಗಳಿಗೆ ಎಂಬ ಅಬಾಧಿತ ಪ್ರತ್ಯಯವಿದೆ. ಭೇದವೂ ಕೂಡ ಇದೆ. ಆದರೆ ಸಮವಾಯಕ್ಕೂ ಮೃದ್‌ಘಟಗಳಿಗೂ ಸಂಬಂಧ ಪೂರ್ವಕತ್ವವು ಇಲ್ಲದ ಕಾರಣ ಅನೈಕಾಂತಿಕದೋಷ ಬರುತ್ತದೆ. ಒಂದುವೇಳೆ ಮೃದ್‌ಘಟಗಳಿಗೂ ಸಮವಾಯಕ್ಕೂ ಮತ್ತೊಂದು ಸಮವಾಯವನ್ನು ಒಪ್ಪಿದರೆ 'ಸಮವಾಯೇ ಸಮವಾಯಃ' ಎಂಬ ಮತ್ತೊಂದು ಇಹಪ್ರತ್ಯಯವು ಬರುತ್ತದೆ. ಇವೆರಡಕ್ಕೆ ಭೇದವಿರುವುದರಿಂದ ಮತ್ತೊಂದು ಸಮವಾಯವನ್ನು ಒಪ್ಪಿದರೆ ಅನವಸ್ಥಾದೋಷ ಬರುತ್ತದೆ. (ವಾಕ್ಯಾರ್ಥವಿವರಣ)

ವೈಶೇಷಿಕಾಧಿಕರಣ (೨-೨-೬)

**तत्वप्रकाशिका – सन्त्वनन्ताः समवायाः प्रामाणिकत्वान्न दोष इत्यत आह – न चेति ।। तत्=तत्र समवायानन्त्ये । मूलक्षयाभावान्नानवस्थादूषणमित्यत आह– प्रथमेति ।। मूलभूतावयवावयव्यादिसम्बन्धस्यैव प्रमाणाभावेनासिद्धेस्तत्सिद्ध्यर्थ-मभ्युपगन्तव्यसम्बन्धानां सुतरामसिद्धिरित्यस्त्येव मूलक्षतिरिति भावः ।**

ಅನಂತಸಮವಾಯಗಳು ಇರಲಿ; ಅವು ಪ್ರಾಮಾಣಿಕವಾದ್ದರಿಂದ ದೋಷವಿಲ್ಲವೆಂಬ ಆಕ್ಷೇಪಕ್ಕೆ 'ನ ಚ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಭಾಷ್ಯದಲ್ಲಿರುವ ತತ್ ಎಂಬ ಪದಕ್ಕೆ ಸಮವಾಯದ ಆನಂತ್ಯ ವಿಷಯದಲ್ಲಿ ಎಂದರ್ಥ. ಮೂಲಕ್ಷಯವಿಲ್ಲದ ಕಾರಣ ಅನವಸ್ಥಾವು ದೋಷವಾಗುವುದಿಲ್ಲವಲ್ಲವೆ? ಎಂಬ ಆಕ್ಷೇಪಕ್ಕೆ 'ಪ್ರಥಮಸಂಬಂಧ' ಇತ್ಯಾದಿ ಭಾಷ್ಯದಲ್ಲಿ ಉತ್ತರಿಸುತ್ತಿದ್ದಾರೆ. ಮೂಲಭೂತವಾದ ಅವಯವ-ಅವಯವ್ಯಾದಿಗಳ ಸಂಬಂಧವಿಷಯದಲ್ಲೇ ಪ್ರಮಾಣ ಇಲ್ಲದಿರುವುದರಿಂದ ಆ ಸಂಬಂಧವೇ ಅಸಿದ್ಧವಾಗಿದೆ. ಅದರ ಸಿದ್ಧಿಗಾಗಿ ಒಪ್ಪಬೇಕಾದ ಬೇರೆ ಸಂಬಂಧಗಳೂ ಕೂಡ ಸುತರಾಂ ಅಸಿದ್ಧವಾಗಿದೆ. ಆದ್ದರಿಂದ ಮೂಲಕ್ಷತಿ ದೋಷವು ಇರುತ್ತದೆ.

ವಿವರಣೆ - ಬೀಜಾಂಕುರಪರಂಪರೆಯು ಪ್ರಾಮಾಣಿಕವಾದ್ದರಿಂದ ಅನವಸ್ಥಾವೆಂಬುದು ಇಲ್ಲಿ ದೋಷವಾಗುವುದಿಲ್ಲ. ಅದರಂತೆ ಸಮವಾಯದ ಆನಂತ್ಯವು ಕೂಡ ಪ್ರಾಮಾಣಿಕವಾದ್ದರಿಂದ ದೋಷವಾಗುವುದಿಲ್ಲ ಎಂಬುದು ತಾರ್ಕಿಕರ ಸಮರ್ಥನೆ ಆದರೆ ಅವಯವ-ಅವಯವಿಗಳಿಗೆ ಯಾವ ಸಮವಾಯಸಂಬಂಧವನ್ನು ತಾರ್ಕಿಕರು ಒಪ್ಪುತ್ತಾರೋ, ಇದರಲ್ಲೇ ಪ್ರಮಾಣವಿಲ್ಲ. ಮುಂದಿನ ಎಲ್ಲಾ ಸಮವಾಯಪರಂಪರೆಗೆ ಇದೇ ಮೂಲಭೂತವಾಗಿದೆ. ಇದೇ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಮೂಲಕ್ಷತಿ ಉಂಟಾಗುತ್ತದೆ. ಆದ್ದರಿಂದ ಮುಂದಿನ ಸಮವಾಯಪರಂಪರೆಯನ್ನು ಒಪ್ಪಿದರೆ ಅನವಸ್ಥಾದೋಷವು ಬಂದೇ ಬರುತ್ತದೆಂಬುದು ಅಭಿಪ್ರಾಯ.

**तत्वप्रकाशिका – माऽस्तु तर्हि समवायपरम्परा प्रथमसमवाय एव स्वनिर्वाहक इति तत्राह ।। स्वनिर्वाहकत्व इति ।। यदि समवायः स्वस्मिन् स्वयमेव विशेषणविशेष्यभावबुद्धिजनकस्तर्हि स एव न स्यात् द्रव्यस्यैव गुणगुण्यादिरूपेण स्वनिर्वाहकत्वोपपत्तौ तद्वैयर्थ्यादिति भावः ।**

ಹಾಗಾದರೆ ಸಮವಾಯ ಪರಂಪರೆಯನ್ನು ನಾವು ಒಪ್ಪುವುದಿಲ್ಲ. ಮೊದಲನೆಯ ಸಮವಾಯವೇ ಸ್ವನಿರ್ವಾಹಕವೆಂದು ಹೇಳುತ್ತೇವೆಂಬುದನ್ನು 'ಸ್ವನಿರ್ವಾಹಕತ್ವೇ' ಇತ್ಯಾದಿ ಭಾಷ್ಯದಿಂದ ನಿರಾಕರಿಸುತ್ತಿದ್ದಾರೆ. ಒಂದು ವೇಳೆ ಸಮವಾಯವು ತನ್ನಲ್ಲಿ ತಾನೇ ವಿಶೇಷಣ-ವಿಶೇಷ್ಯ ಭಾವಬುದ್ಧಿಯನ್ನು ಹುಟ್ಟಿಸುವುದಾದರೆ ಆಗ ದ್ರವ್ಯವೇ ತನ್ನಲ್ಲಿರುವ ಗುಣ ಮೊದಲಾದವುಗಳಿಗೆ ಗುಣಗುಣಿ ಮೊದಲಾದ ರೂಪದಿಂದ ವಿಶೇಷಣ-ವಿಶೇಷ್ಯಭಾವವನ್ನು ನಿರ್ವಹಣೆ ಮಾಡಬಹುದು. ಸಮವಾಯ ಸಂಬಂಧವನ್ನು ಒಪ್ಪುವ ಅವಶ್ಯಕತೆ ಇರುವುದಿಲ್ಲ.

ವಿವರಣೆ - ವಿಶೇಷ್ಯ-ವಿಶೇಷಣಭಾವದ ಜ್ಞಾನಕ್ಕೋಸ್ಕರ ಸಮವಾಯಸಂಬಂಧವನ್ನು ಅಂಗೀಕರಿಸಿದ್ದಾರೆ. 'ಮೃದ್‌ಘಟಯೋಃ ಸಮವಾಯಃ' ಎಂಬಲ್ಲಿಯೂ ವಿಶೇಷಣ ವಿಶೇಷ್ಯಭಾವವಿದೆ. ಇದಕ್ಕಾಗಿ ಮತ್ತೊಂದು ಸಮವಾಯವನ್ನು ಒಪ್ಪುವ ಅವಶ್ಯಕತೆಯಿಲ್ಲ. ಮೃತ್ ಹಾಗೂ ಘಟಗಳಿಗೆ ಯಾವ ಸಮವಾಯಸಂಬಂಧವಿದೆಯೋ ಅದೇ ಸಮವಾಯ ಸಂಬಂಧವೇ 'ಮೃದ್‌ಘಟಯೋಃ ಸಮವಾಯಃ' ಎಂಬ ವಿಶೇಷಣ-ವಿಶೇಷಭಾವವನ್ನು ಕೂಡ ನಿರ್ವಹಣೆ ಮಾಡುತ್ತದೆ. ಆದ್ದರಿಂದ ಮತ್ತೊಂದು ಸಮವಾಯವನ್ನು ಒಪ್ಪುವ ಆವಶ್ಯಕತೆಯಿಲ್ಲದ್ದರಿಂದ ಅನವಸ್ಥಾದೋಷವು ಬರುವುದಿಲ್ಲ.

ತಾರ್ಕಿಕರು ಹೀಗೆ ಸಮವಾಯಕ್ಕೆ ಸ್ವನಿರ್ವಾಹಕತ್ವವನ್ನು ಒಪ್ಪುವುದಾದರೆ ಸಮವಾಯವನ್ನು ಒಪ್ಪುವುದೇ ಬೇಡ, ಗುಣ ಹಾಗೂ ಗುಣಿಗಳೇ ಸ್ವತಃ ವಿಶೇಷಣ ವಿಶೇಷ್ಯಭಾವವನ್ನು ನಿರ್ವಹಣೆ ಮಾಡುತ್ತವೆ. ಅಪ್ರಾಮಾಣಿಕವಾದ ಸಮವಾಯವನ್ನೇಕೆ ಒಪ್ಪಬೇಕು ? ಎಂಬುದು ನಮ್ಮ ಅಭಿಪ್ರಾಯ. ಆದ್ದರಿಂದ ಗುಣಗುಣಿಗಳೆಂಬ ಸ್ವರೂಪವೇ ಸ್ವನಿರ್ವಾಹಕವಾದ್ದರಿಂದ ಸ್ವರೂಪಸಂಬಂಧವನ್ನು ಒಪ್ಪಿದರೆ ಸಾಕು, ಸಮವಾಯವನ್ನು ಒಪ್ಪುವ ಆವಶ್ಯಕತೆಯಿಲ್ಲ ಎಂದು ತಿಳಿಯಬೇಕು.

**तत्वप्रकाशिका – न च सम्बन्धत्वात्तस्य स्वनिर्वाहकत्वम् । संयोगेऽपि प्रसङ्गात् । न चैवमतिप्रसङ्गः । प्रमाणसदसद्भावेन व्यवस्थोपपत्तेः । न च समवाये प्रमाणमस्ति। रूपं नित्यसम्बन्धसम्बद्धं गुणत्वान्महत्त्ववदित्यत्र साध्यशून्यं निदर्शनम् । विशेषणविशेष्यभावत्वेन हेतुना तस्य सम्बन्धनिबन्धनत्वसाधने व्यभिचारः। विशेषणेऽतिप्रसङ्गः ।। १३ ।।**

ಗುಣ ಹಾಗೂ ಗುಣಿಗಳು ಸಂಬಂಧವೇ ಅಲ್ಲ. ಆದ್ದರಿಂದ ಅವುಗಳಿಗೆ ಸ್ವನಿರ್ವಾಹಕತ್ವವು ಬರುವುದಿಲ್ಲವೆಂದು ಹೇಳಬಾರದು. ಸಂಬಂಧವಾಗಿದೆ ಎಂಬುದರಿಂದಷ್ಟೇ ಸ್ವನಿರ್ವಾಹಕ ಆಗುವುದಾದರೆ ಸಂಯೋಗವೂ ಕೂಡ ಸಂಬಂಧವಾಗಿರುವುದರಿಂದ ಸ್ವನಿರ್ವಾಹಕವಾಗಲಿ. ಪ್ರಮಾಣವಿದ್ದಲ್ಲಿ ಸ್ವನಿರ್ವಾಹಕತ್ವವನ್ನು ಒಪ್ಪಿ ಪ್ರಮಾಣ ಇಲ್ಲದಿದ್ದಲ್ಲಿ ಸ್ವನಿರ್ವಾಹಕತ್ವ ಇಲ್ಲವೆಂದು ಉತ್ತರಿಸಬಹುದಾದ್ದರಿಂದ ಅತಿಪ್ರಸಂಗವೂ ಕೂಡ ಬರುವುದಿಲ್ಲ.

ಸಮವಾಯವಿಷಯದಲ್ಲಿ ಪ್ರಮಾಣವೇ ಇಲ್ಲ. 'ರೂಪಂ ನಿತ್ಯಸಂಬಂಧವತ್ ಗುಣತ್ವಾತ್ ಮಹತ್ವವತ್' ಮಹತ್ವವು ಗುಣವಾಗಿದೆ ನಿತ್ಯಸಂಬಂಧದಿಂದ ಕೂಡಿದೆ. ಅದರಂತೆ ರೂಪವೂ ಗುಣವಾಗಿರುವುದರಿಂದ ನಿತ್ಯಸಂಬಂಧದಿಂದ ಕೂಡಿದೆ ಎಂಬ ಅನುಮಾನವನ್ನು ಪ್ರಮಾಣವನ್ನಾಗಿ ಹೇಳಬೇಕು.

ಆದರೆ ಮಹತ್ವವೆಂಬ ದೃಷ್ಟಾಂತದಲ್ಲಿ ನಿತ್ಯಸಂಬಂಧವೇ ಇರುವುದಿಲ್ಲ. ಆದ್ದರಿಂದ ದೃಷ್ಟಾಂತಕ್ಕೆ ಸಾಧ್ಯವೈಕಲ್ಯ ದೋಷವು ಬರುತ್ತದೆ. ಮಹತ್ವ ಹಾಗೂ ಆಕಾಶಗಳಿಗೆ ವಿಶೇಷಣ ವಿಶೇಷ್ಯಭಾವ ಇರುವುದರಿಂದ ಅಲ್ಲೂ ಕೂಡ ಸಂಬಂಧವನ್ನು ಸಾಧಿಸುತ್ತೇವೆ ಎಂದು ಹೇಳಿದರೆ ಘಟಾಭಾವಕ್ಕೂ ಭೂತಳಕ್ಕೂ ವಿಶೇಷಣವಿಶೇಷ್ಯಭಾವ ಇರುವುದರಿಂದ ಮತ್ತೊಂದು ಸಂಬಂಧವನ್ನು

ಒಪ್ಪಬೇಕಾಗುತ್ತದೆ. ಅಪ್ರಯೋಜಕವಾದ ಹೇತುವಿನಿಂದ ಸಂಬಂಧವನ್ನು ಸಾಧನೆ ಮಾಡಿದರೆ ಅತಿಪ್ರಸಂಗ ಬರುತ್ತದೆ.

ವಿವರಣೆ - ಸಮವಾಯದ ವಿಷಯದಲ್ಲಿ ತಾರ್ಕಿಕರು ಅನುಮಾನವನ್ನೇ ಪ್ರಮಾಣವನ್ನಾಗಿ ಹೇಳಬೇಕು. 'ರೂಪಂ ನಿತ್ಯಸಂಬಂಧವತ್ ಗುಣತ್ವಾತ್ ಮಹತ್ವವತ್' ಎಂಬ ಅನುಮಾನದಲ್ಲಿ ನಿತ್ಯಸಂಬಂಧವೆಂದರೆ ಸಮವಾಯವೇ ಆಗಬೇಕೆಂಬುದು ಅವರ ಅಭಿಪ್ರಾಯ. ಆದರೆ ಮಹತ್ವವೆಂಬ ದೃಷ್ಟಾಂತದಲ್ಲಿ ಸಾಧ್ಯವೇ ಇರುವುದಿಲ್ಲ. ಮಹತ್ವವು ಆಕಾಶಾದಿಸ್ವರೂಪವಾಗಿರುವುದರಿಂದ ಅತಿರಿಕ್ತಸಂಬಂಧವು ಇಲ್ಲಿ ಅನಾವಶ್ಯಕ. ಒಂದುವೇಳೆ ಆಕಾಶ ಹಾಗೂ ಮಹತ್ವಗಳಿಗೂ ಸಮವಾಯ ಸಂಬಂಧಗಳನ್ನು ಸಾಧನೆ ಮಾಡಿದರೆ ವ್ಯಭಿಚಾರ ಬರುತ್ತದೆ. ಅದು ಹೀಗೆ - 'ಮಹತ್ವಂ, ವಿಶೇಷಣವಿಶೇಷ್ಯಭಾವನಿಯಾಮಕಸಂಬಂಧವತ್ ವಿಶೇಷಣ-ವಿಶೇಷ್ಯಭಾವತ್ವಾತ್, ಘಟಭೂತಲ ವಿಶೇಷಣವಿಶೇಷ್ಯಭಾವವತ್' 'ಘಟ ಹಾಗೂ ಭೂತಲಗಳಿಗೆ ವಿಶೇಷಣ ವಿಶೇಷ್ಯಭಾವಸಂಬಂಧವು ಇರುತ್ತದೆ. ನಿಯಾಮಕಸಂಬಂಧವೂ ಇದೆ. ಅದರಂತೆ ಆಕಾಶದಲ್ಲಿ ಮಹತ್ವವಿದೆ. 'ವಿಶೇಷಣವಿಶೇಷ್ಯ-ಭಾವತ್ವಾತ್' ಎಂಬ ಹೇತು ಇರುವುದರಿಂದ ನಿಯಾಮಕಸಂಬಂಧವೂ ಇರಲೇಬೇಕು. ಅದೇ ಸಮವಾಯಸಂಬಂಧ' ಎಂಬುದು ತಾರ್ಕಿಕರ ಅಭಿಪ್ರಾಯ.

ಇದು ಸರಿಯಲ್ಲ. ಈ ಅನುಮಾನಕ್ಕೆ 'ಘಟಾಭಾವವದ್‌ಭೂತಲಮ್' ಎಂಬಲ್ಲಿ ವ್ಯಭಿಚಾರ ಬರುತ್ತದೆ. ಘಟಾಭಾವಕ್ಕೂ ಭೂತಲಕ್ಕೂ ವಿಶೇಷಣವಿಶೇಷ್ಯಭಾವ ಇದೆ. ಆದರೆ ಇಲ್ಲಿ ಯಾವುದೇ ನಿಯಾಮಕಸಂಬಂಧವನ್ನು ತಾರ್ಕಿಕರು ಒಪ್ಪಿರುವುದಿಲ್ಲ. ಸ್ವರೂಪವನ್ನೇ ಸಂಬಂಧವೆನ್ನುತ್ತಾರೆ. ಆದ್ದರಿಂದ ಹೇತು ಬಂದು ಸಾಧ್ಯವು ಬಾರದ ಕಾರಣ ವ್ಯಭಿಚಾರವು ಪ್ರಾಪ್ತವಾಯಿತು. ಒಂದುವೇಳೆ ಭಾವಮಾತ್ರೇ ವಿಶೇಷಣ-ವಿಶೇಷ್ಯಭಾವತ್ವಾತ್ ಎಂಬುದಾಗಿ ಹೇತುವಿನಲ್ಲಿ ಭಾವತ್ವವನ್ನು ವಿಶೇಷಣವನ್ನಾಗಿ ನೀಡಿದರೆ ಆಗ 'ವಿಶೇಷಣೇ ಅತಿಪ್ರಸಂಗಃ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಈ ಪಕ್ಷದಲ್ಲೂ ಕೂಡ 'ಘಟಾದಿಕಂ ಜ್ಞಾತಂ' 'ಘಟಾದಿಕಮ್ ದೃಷ್ಟಂ' ಇತ್ಯಾದಿ ವಿಶೇಷಣ ವಿಶೇಷ್ಯಭಾವ ಇರುವಲ್ಲಿ ವ್ಯಭಿಚಾರದೋಷ ಬರುತ್ತದೆ. 'ಘಟಾದಿಕಂ ಜ್ಞಾತಂ' ಎಂಬಲ್ಲೂ ವಿಶೇಷಣ ವಿಶೇಷ್ಯಭಾವ ಇದೆ. ಆದರೆ ಯಾವುದೇ ನಿಯಾಮಕಸಂಬಂಧ ಇರುವುದಿಲ್ಲ ಎಂದು ತಾರ್ಕಿಕರೇ ಒಪ್ಪುತ್ತಾರೆ. ಹೀಗೆ ಹೇತು ಬಂದು ಸಾಧ್ಯ ಬಾರದ ಕಾರಣ 'ಘಟಾದಿಕಂ ಜ್ಞಾತಂ' ಇತ್ಯಾದಿ ಸ್ಥಳದಲ್ಲಿ ವ್ಯಭಿಚಾರವು ಬರುತ್ತದೆ. ಈ ವ್ಯಭಿಚಾರದ ಪರಿಹಾರಕ್ಕಾಗಿ ಮತ್ತೊಂದು ವಿಶೇಷಣವನ್ನು ನೀಡಿದರೆ 'ಘಟಾದಿಕಂ ಜ್ಞಾತಂ' ಇತ್ಯಾದಿ ಸ್ಥಳದಲ್ಲಿ ವ್ಯಭಿಚಾರದೋಷವನ್ನು ಪರಿಹರಿಸಲು ಸಾಧ್ಯವಾಗದ ಪ್ರಸಂಗ ಬರುತ್ತದೆ. ಲೋಕದಲ್ಲಿ ವ್ಯಭಿಚಾರವೆಂಬ ದೋಷವೇ ಇಲ್ಲದಂತಾಗುತ್ತದೆ.

## ಬ್ರಹ್ಮಸೂತ್ರ

**सूत्रम् — नित्यमेव च भावात् ।।**

ನಿಮಿತ್ತಕಾರಣವಾದ ಈಶ್ವರನ ಇಚ್ಛೆ ಸಮವಾಯಕಾರಣವೆನಿಸಿದ ಪರಮಾಣುಗಳು ನಿತ್ಯದಲ್ಲಿ ಇರುವುದರಿಂದ ಯಾವಾಗಲೂ ಕಾರ್ಯವು ಆಗುತ್ತಲೇ ಇರಬೇಕಾದೀತು. ಅಂದರೆ ಪ್ರಳಯಕಾಲವೇ ಇಲ್ಲದ ಪ್ರಸಂಗ ಬರುತ್ತದೆ.

## ಸೂತ್ರದೀಪಿಕಾ

**सूत्रदीपिका — दोषसमुच्चये चः । ईशेच्छापरमाण्वादिकारणानां सदात्वात् । वैशिषिकमते नित्यमेव सर्वदैव । भावात् कार्योत्पत्तिः स्यात् । न तु कदाचिदित्यर्थः ।।४।।**

ದೋಷಸಮುಚ್ಚಯಾತ್ = ದೋಷವನ್ನು ಸಮುಚ್ಚಯ ಮಾಡಲು 'ಚ' ಶಬ್ದವಿದೆ. ಈಶ್ವೇರೇಚ್ಛೆ ಪರಮಾಣು ಮೊದಲಾದ ಕಾರಣಗಳು ನಿತ್ಯವಾಗಿರುವುದರಿಂದ ವೈಶೇಷಿಕರ ಮತದಲ್ಲಿ, ನಿತ್ಯಮೇವ = ಯಾವಾಗಲೂ, ಭಾವಾತ್ = ಕಾರ್ಯೋತ್ಪತ್ತಿಯೇ ಆಗಬೇಕಾದೀತು ಹೊರತು ಸೃಷ್ಟಿಯ ಕಾಲದಲ್ಲಿ ಮಾತ್ರ ಕಾರ್ಯೋತ್ಪತ್ತಿ ಎಂಬ ವ್ಯವಸ್ಥೆ ತಪ್ಪಾಗಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। नित्यमेव च भावात् ।।४।।**

**नित्यत्वाच परमाणूनां समवायस्य च तस्यैव जनित्वाङ्गीकारान्नित्यमेव कार्यं स्यात् । अन्यथा न कदाचित् ।।४।।**

ಅನುವಾದ - ಪರಮಾಣು ಮತ್ತು ಸಮವಾಯ ಸಂಬಂಧಗಳು ನಿತ್ಯವಾಗಿವೆ ಎಂದು ವೈಶೇಷಿಕರು ಒಪ್ಪುತ್ತಾರೆ. ಹೀಗೆ ಒಪ್ಪಿದರೆ ಕಾರ್ಯವು ನಿತ್ಯವಾಗಬೇಕಾದೀತು. ಪ್ರಳಯವೇ ಇಲ್ಲವೆಂದು ಒಪ್ಪುವ ಪರಿಸ್ಥಿತಿ ಬರುತ್ತದೆ. ಸಕಲವಿಧವಾದ ಕಾರಣಗಳಿದ್ದರೂ ಕಾರ್ಯವು ಹುಟ್ಟುವುದಿಲ್ಲವೆಂದು ಹೇಳಿದರೆ ಸೃಷ್ಟಿಕಾಲದಲ್ಲಿಯೂ ಕೂಡ ಕಾರ್ಯವು ಹುಟ್ಟದೇ ಇರಬೇಕಾದೀತು.

ಪ್ರತಿಪದಾರ್ಥ -- ವೈಶೇಷಿಕರ ಪಕ್ಷದಲ್ಲಿ ಕಾರಣತ್ರಯವನ್ನು ನಿರಾಸಮಾಡುವ ಮೂಲಕ ಸೃಷ್ಟಿ ಪ್ರಕ್ರಿಯೆಯನ್ನು ನಿರಾಕರಣೆ ಮಾಡಿ ಪ್ರಳಯವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರ ಹೊರಟಿದೆ. ಪರಮಾಣೂನಾಂ = ಪರಮಾಣುಗಳು, ನಿತ್ಯತ್ವಾಚ್ಚ =

ನಿತ್ಯವಾಗಿರುವುದರಿಂದಲೂ, ಸಮವಾಯಸ್ಯ ಚ = ಸಮವಾಯಸಂಬಂಧಕ್ಕೂ ಕೂಡ ನಿತ್ಯತ್ವವನ್ನು ಹೇಳಿರುವುದರಿಂದ, ತಸ್ಯೈವ = ಆ ಸಂಬಂಧಕ್ಕೆ, ಜನಿತ್ವಾಂಗೀಕಾರಾತ್ = ಜನನವನ್ನು ಒಪ್ಪಿರುವುದರಿಂದ, ನಿತ್ಯಮೇವ = ನಿರಂತರವಾಗಿ, ಕಾರ್ಯಂ = ಕಾರ್ಯವು, ಸ್ಯಾತ್ = ಆಗಬೇಕಾದೀತು. ಅನ್ಯಥಾ = ಕಾರಣಗಳಿದ್ದರೂ ಕಾರ್ಯವು ಹುಟ್ಟುವುದಿಲ್ಲವೆಂದು ಹೇಳಿದರೆ, ನ ಕದಾಚಿತ್ = ಸೃಷ್ಟಿಯ ಕಾಲದಲ್ಲಿಯೂ ಕೂಡ ಕಾರ್ಯವು ಹುಟ್ಟದೆ ಇರಬೇಕಾದೀತು.

## ತತ್ವಪ್ರಕಾಶಿಕಾ

**ತತ್ವಪ್ರಕಾಶಿಕಾ – एवं परपक्षे कारणत्रयनिरासेन सृष्टिं निरस्य प्रलयनिरासार्थं सूत्रं पठित्वा व्याचष्टे ।। नित्यमिति ।।**

ವೈಶೇಷಿಕರ ಪಕ್ಷದಲ್ಲಿ ಸಮವಾಯಿಕಾರಣ, ಅಸಮವಾಯಿಕಾರಣ ಹಾಗೂ ನಿಮಿತ್ತ-ಕಾರಣಗಳನ್ನು ನಿರಾಕರಣೆ ಮಾಡಿದ್ದಾಯಿತು. ತನ್ಮೂಲಕವಾಗಿ ಅವರ ಸೃಷ್ಟಿಕ್ರಮವನ್ನು ನಿರಾಕರಿಸಿದ್ದಾಯಿತು. ಈಗ ಅವರು ಹೇಳುವ ಪ್ರಳಯವನ್ನು ನಿರಾಕರಣೆ ಮಾಡಲು 'ನಿತ್ಯಮೇವ ಚ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ.

**ತತ್ವಪ್ರಕಾಶಿಕಾ – परपक्षे कार्यं नित्यदा स्यान्न तु कदाचित्प्रलयः । समवायिकारणपरमाणूनां सदा सद्भावात् निमित्तस्य चेश्वरेच्छादेर्नित्यत्वात् । असमवायिकारणसंयोगाद्यभावान्नेति चेन्न । तदनुत्पत्तावपि कारणाभावात् ।**

ವೈಶೇಷಿಕರ ಪಕ್ಷದಲ್ಲಿ ಯಾವಾಗಲೂ ಕಾರ್ಯವೇ ಆಗುತ್ತಿರಲಿ ಪ್ರಳಯವೇ ಆಗುವುದು ಬೇಡವೆಂಬ ಅತಿಪ್ರಸಂಗ ಬರುತ್ತದೆ. ಏಕೆಂದರೆ ಕಾರ್ಯಕ್ಕೆ ಪ್ರಯೋಜಕವಾದ ಸಮವಾಯಿಕಾರಣ ಎನಿಸಿದ ಪರಮಾಣುಗಳು ಸದಾ ಇರುತ್ತವೆ. ನಿಮಿತ್ತಕಾರಣವಾದ ಈಶ್ವರೇಚ್ಛೆಯೂ ನಿತ್ಯವಾಗಿ ಇರುತ್ತದೆ. ಅಸಮವಾಯಿಕಾರಣವಾದ ಪರಮಾಣುಸಂಯೋಗ ಮೊದಲಾದವು ಪ್ರಳಯಕಾಲದಲ್ಲಿ ಇರುವುದಿಲ್ಲ. ಆದ್ದರಿಂದ ಕಾರ್ಯವು ಉತ್ಪತ್ತಿಯಾಗುವುದಿಲ್ಲವೆಂದು ಹೇಳಬಾರದು. ಪರಮಾಣು ಸಂಯೋಗವು ಹುಟ್ಟುವುದಿಲ್ಲವೆನ್ನಲೂ ಕೂಡ ಕಾರಣವಿಲ್ಲ.

ವಿವರಣೆ - ಕಾರಣವಿದ್ದಾಗ ಕಾರ್ಯವು ಆಗಲೇಬೇಕು. ಪರಮಾಣುಸಂಯೋಗವೇ ಸಮವಾಯಿಕಾರಣವಾಗಿದೆ. ಇದು ನಿರಂತರ ಇರುವುದರಿಂದ ಯಾವಾಗಲೂ ಸೃಷ್ಟಿಯೇ ಆಗಲಿ ಪ್ರಳಯವು ಆಗದೆ ಇರಲಿ. ಈಶ್ವರೇಚ್ಛೆ, ಕಾಲ, ಪರಮಾಣುಸಂಯೋಗ, ಮೊದಲಾದ ಕಾರಣಗಳನ್ನು ವೈಶೇಷಿಕರು ನಿತ್ಯವಾಗಿವೆಯೆಂದು ಹೇಳುತ್ತಾರೆ. ಇವು ನಿತ್ಯವಾಗಿದ್ದಾಗ ಪ್ರಳಯವಾಗಲು ಹೇಗೆ ಸಾಧ್ಯ ?

ಪರಿಪೂರ್ಣಚಂದ್ರಿಕಾ

ಅಸಮವಾಯಿಕಾರಣವೂ ಕೂಡ ಕಾರಣಕಲಾಪಗಳಲ್ಲಿ ಸೇರಿದೆ. ಪರಮಾಣುಗಳ ಸಂಯೋಗವೇ ಅಸಮವಾಯಿಕಾರಣವೆನಿಸಿದೆ. ಇದು ನಿರಂತರ ಇಲ್ಲದ್ದರಿಂದ ಸೃಷ್ಟಿ ಆಗುತ್ತಲೇ ಇರಲಿ ಎಂದು ಹೇಗೆ ಆಕ್ಷೇಪಿಸಿದಿರಿ? ಎಂದು ಪ್ರಶ್ನಿಸಿದರೆ 'ಅಸಮವಾಯಿಕಾರಣ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – तदसमवायिकारणकर्माद्यभावस्य चानुपपत्तेः । अदृष्टस्य च बाह्यसामग्रीसत्त्वे स्वाभावापराधेन कार्यनिरोधकत्वादर्शनात् । न चैवं वैयर्थ्यम्। सामग्रीसम्पत्तावुपयोगादिति भावः ।**

ಪರಮಾಣುಸಂಯೋಗಕ್ಕೆ ಅಸಮವಾಯಿಕಾರಣವಾದ ಕರ್ಮವು ಸಹ ಹುಟ್ಟದೆ ಇರಲು ಯಾವುದೇ ಕಾರಣವಿಲ್ಲ. ಇನ್ನು ಅದೃಷ್ಟ ಇಲ್ಲದ್ದರಿಂದ ಕರ್ಮವು ಹುಟ್ಟುವುದಿಲ್ಲ ಎನ್ನಬೇಕು. ಆದರೆ ಬಾಹ್ಯವಾದ ಸಾಮಗ್ರಿಗಳಿದ್ದಾಗ ಅದೃಷ್ಟವು ತಾನಿಲ್ಲದ್ದರಿಂದ ಕಾರ್ಯವನ್ನು ಹುಟ್ಟಿಸಿಲ್ಲ ಎನ್ನುವುದು ಎಲ್ಲಿಯೂ ಕಂಡಿಲ್ಲ. ಹಾಗಾದರೆ ಅದೃಷ್ಟವು ವ್ಯರ್ಥವಲ್ಲವೆ? ಎನ್ನಬಾರದು ಸಾಮಗ್ರಿಗಳನ್ನು ಕೂಡಿಸುವಲ್ಲಿ ಮಾತ್ರ ಅದೃಷ್ಟವು ಉಪಯೋಗವಾಗುತ್ತದೆ.

**तत्वप्रकाशिका – किं च तत्पक्षे पदार्थजनिरपि नित्या स्यात् । समवायस्य नित्यमेव भावाङ्गीकारात् । प्रागसतः सत्तासमवायस्यैव जनित्वाभ्युपगमादिति सूत्रस्यार्थान्तरम्। समवायिकारणादिसत्त्वेऽपि कार्योत्पत्त्युपरमे बाधकमाह – अन्यथेति ।। १४ ।।**

ವೈಶೇಷಿಕರ ಪಕ್ಷದಲ್ಲಿ ಪದಾರ್ಥದ ಉತ್ಪತ್ತಿಯು ಯಾವಾಗಲೂ ಆಗುತ್ತಲೇ ಇರಲಿ ಎಂಬ ಮತ್ತೊಂದು ದೋಷವಿದೆ. ಏಕೆಂದರೆ ಸಮವಾಯವನ್ನು ನಿತ್ಯವೆಂದು ಒಪ್ಪಿರುವುದರಿಂದ ಸಮವಾಯಿಕಾರಣವೂ ಕೂಡ ನಿತ್ಯವಾಗಿರುತ್ತದೆ. ಮೊದಲು ಇಲ್ಲದಿರುವ ವಸ್ತುವಿಗೆ ಸತ್ತಾಸಮವಾಯವೇ ಉತ್ಪತ್ತಿ ಎಂದು ಒಪ್ಪಿರುವುದರಿಂದ ಸಮವಾಯವು ಯಾವಾಗಲೂ ಇದೆ ಎಂದು ಹೇಳಿದಂತಾಯಿತು. ಇದು ಸೂತ್ರಕ್ಕೆ ಮತ್ತೊಂದು ಅರ್ಥ. ಸಮವಾಯಿಕಾರಣ ಮೊದಲಾದವುಗಳಿದ್ದು ಕಾರ್ಯವು ಉತ್ಪತ್ತಿಯಾಗದಿದ್ದರೆ ಬಾಧಕವನ್ನು ಅನ್ಯಥಾ ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿವರಣೆ - 1) ಸಮವಾಯಸಂಬಂಧವು ನಿರಂತರವಾಗಿರುವುದರಿಂದ ಕಾರ್ಯೋತ್ಪತ್ತಿಯೂ ನಿರಂತರವಾಗಿರಲಿ. ನಿತ್ಯಮೇವ - ಯಾವಾಗಲೂ ಭಾವಾತ್ - ಕಾರ್ಯೋತ್ಪತ್ತಿಯು ಆಗುತ್ತಲೇ ಇರಲಿ.

2) ಸಮವಾಯವನ್ನು ನಿತ್ಯವೆಂದು ಒಪ್ಪಿರುವುದರಿಂದ ಭಾವಾತ್- ಅಂಗೀಕರಿಸಿರುವುದರಿಂದ ಮೊದಲು ಇಲ್ಲದಿರುವ ವಸ್ತುವಿಗೆ ಸತ್ತಾಸಮವಾಯವನ್ನೇ ಉತ್ಪತ್ತಿ ಎಂದು ಅಂಗೀಕರಿಸಿರುವುದರಿಂದ ಪದಾರ್ಥದ ಉತ್ಪತ್ತಿ ನಿರಂತರ ಆಗುತ್ತಲೇ ಇರಲಿ.

## ಬ್ರಹ್ಮಸೂತ್ರ

**सूत्रम् – रूपादिमत्त्वाच्च विपर्ययो दर्शनात् ।।**

ಪಾರ್ಥಿವಪರಮಾಣು, ಜಲೀಯಪರಮಾಣು, ತೈಜಸಪರಮಾಣು ಇವುಗಳಲ್ಲಿ ರೂಪಾದಿಗಳಿರುವುದರಿಂದ ಇವುಗಳೂ ಕೂಡ ಅನಿತ್ಯವಾಗಬೇಕಾದೀತು. ಏಕೆಂದರೆ ಯಾವುದು ರೂಪಾದಿಗಳುಳ್ಳದ್ದೋ ಅದು ಅನಿತ್ಯವಾಗಿರುತ್ತದೆ ಎಂಬ ವ್ಯಾಪ್ತಿಯು ಘಟಪಟಾದಿಗಳಲ್ಲಿ ಕಂಡಿರುತ್ತದೆ.

## ಸೂತ್ರದೀಪಿಕಾ

**सूत्रदीपिका** – किञ्च वैशिषिकमते पार्थिवाप्यतैजसपरमाणूनां **रूपादिमत्त्वात्। विपर्ययः** नित्यत्वविपरीतानित्यत्वं स्यात् । कुत? **दर्शनात्** यद्रूपादिमत् तदनित्यमिति व्याप्तेः घटादौ दृष्टत्वादित्यर्थः ।।५।।

ಮತ್ತು ವೈಶೇಷಿಕರಮತದಲ್ಲಿ ಪಾರ್ಥಿವಪರಮಾಣು, ಜಲೀಯಪರಮಾಣು, ತೈಜಸಪರಮಾಣುಗಳಿಗೆ ರೂಪರಸಾದಿಗಳಿರುವುದರಿಂದ, ರೂಪಾದಿಮತ್ತ್ವಾಚ್ಚ = ರೂಪಾದಿಗಳಿರುವುದರಿಂದಲೂ, ವಿಪರ್ಯಯಃ = ನಿತ್ಯತ್ವಕ್ಕೆ ವಿಪರೀತವಾದ ಅನಿತ್ಯತ್ವವು ಬರಬೇಕಾದೀತು. ಏಕೆಂದರೆ ದರ್ಶನಾತ್ = ಯಾವುದು ರೂಪಾದಿವುಳ್ಳದ್ದೋ, ಅದು ಅನಿತ್ಯವಾಗಿದೆ ಎಂಬ ವ್ಯಾಪ್ತಿಯು ಘಟಾದಿಗಳಲ್ಲಿ ಕಂಡಿರುತ್ತದೆ. ಆದ್ದರಿಂದ ಪರಮಾಣ್ವಾದಿಗಳು ನಿತ್ಯವಾಗಿವೆ ಎಂಬ ತಾರ್ಕಿಕರ ನಿಲುವು ತಪ್ಪಾಗಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। रूपादिमत्त्वाच्च विपर्ययो दर्शनात् ।।५।।**

**रूपादिमत्त्वाच्च परमाणूनामनित्यत्वं, तथा दृष्टत्वाल्लोके ।।५।।**

ಅನುವಾದ - ಪರಮಾಣುಗಳಲ್ಲಿ ರೂಪ, ರಸ, ಗಂಧ, ಸ್ಪರ್ಶ ಮೊದಲಾದ ಗುಣಗಳಿವೆ ಯಾವ ವಸ್ತುವಿನಲ್ಲಿ ರೂಪಾದಿಮತ್ವವಿರುತ್ತದೋ ಅದಕ್ಕೆ ನಾಶವಿರುವುದು ಲೋಕದಲ್ಲಿ ಕಂಡಿದೆ. ಪರಮಾಣುಗಳಲ್ಲಿ ಈ ರೂಪರಸಾದಿಗಳು ಇರುವುದರಿಂದ ನಾಶವಾಗುತ್ತದೆ ಎಂದು ಒಪ್ಪಲೇಬೇಕು.

ಪ್ರತಿಪದಾರ್ಥ -- ಇಲ್ಲಿಯ ತನಕ ಪರಮಾಣುಗಳಿಗೆ ನಿತ್ಯತ್ವವನ್ನು ಒಪ್ಪಿ ಪರಮಾಣುವಿನಿಂದ ಸೃಷ್ಟಿ ಆಗುತ್ತದೆಂಬ ಪ್ರಕ್ರಿಯೆಯನ್ನು ನಿರಾಕರಣೆ ಮಾಡಲಾಯಿತು. ಈಗ ಪರಮಾಣುವಿಗೆ

ನಿತ್ಯತ್ವವನ್ನೇ ನಿರಾಕರಿಸುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ- ರೂಪಾದಿಮತ್ವಾಚ್ಚ = ಭೌತಿಕವಾದ ರೂಪ, ರಸ, ಗಂಧ, ಸ್ಪರ್ಶಗಳು ಇರುವುದರಿಂದ, ಪರಮಾಣೂನಾಂ = ಪರಮಾಣುಗಳಿಗೆ, ಅನಿತ್ಯತ್ವಂ = ಅನಿತ್ಯತ್ವವನ್ನು ಒಪ್ಪಬೇಕು. ತಥಾ = ರೂಪಾದಿಗಳು ಇದ್ದಲ್ಲಿ ಅನಿತ್ಯತ್ವ ಇರುವುದು, ಲೋಕೇ = ಲೋಕದಲ್ಲಿ, ದೃಷ್ಟತ್ವಾತ್ = ಕಂಡಿರುವುದರಿಂದ.

## ತತ್ವಪ್ರಕಾಶಿಕಾ

**तत्वप्रकाशिका – एवं परमाणूनां नित्यत्वमभ्युपेत्य तदारम्भवादो दूषितः । इदानीं तन्नित्यत्वमपि पराकुर्वत्सूत्रमुपन्यस्य व्याचष्टे – रूपादीति।। पार्थिवादिपरमाणूनां रूपादिमत्त्वहेतुना प्रकृतनित्यत्वविपर्ययो भवति । यद्रूपादिमत् तस्य घटादेरनित्यत्वदर्शनादित्यर्थः ।। १९ ।।**

ಇಲ್ಲಿಯ ತನಕ ಪರಮಾಣುವನ್ನು ನಿತ್ಯವೆಂದು ಅಂಗೀಕರಿಸಿ ವೈಶೇಷಿಕರ ಪರಮಾಣ್ವಾರಂಭ-ವಾದವನ್ನು ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಪರಮಾಣುಗಳ ನಿತ್ಯತ್ವವನ್ನೇ ನಿರಾಕರಣೆ ಮಾಡುವ ಸೂತ್ರವನ್ನು 'ರೂಪಾದಿಮತ್ವಾತ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಪಾರ್ಥಿವಾದಿ ಪರಮಾಣುಗಳಿಗೆ ರೂಪಾದಿಮತ್ವಹೇತುವಿನಿಂದ ನಿತ್ಯತ್ವಕ್ಕೆ ವಿರುದ್ಧವಾದ ಅನಿತ್ಯತ್ವವನ್ನು ಹೇಳಿದಂತಾಗುತ್ತದೆ. ಎಲ್ಲಿ ರೂಪಾದಿಮತ್ವ ಇದೆಯೋ ಅಂಥ ಘಟಾದಿಗಳಿಗೆ ಅನಿತ್ಯತ್ವವು ಕಂಡಿದೆ.

ವಿವರಣೆ - ಪಾರ್ಥಿವಪರಮಾಣು, ಜಲೀಯಪರಮಾಣು, ತೈಜಸಪರಮಾಣು ಇವುಗಳಲ್ಲಿ ರೂಪವತ್ವವಿದೆ. ವಾಯವೀಯಪರಮಾಣುವಿನಲ್ಲಿ ಸ್ಪರ್ಶವತ್ವವಿದೆ. ಆದ್ದರಿಂದ ರೂಪವತ್ವ ಹಾಗೂ ಸ್ಪರ್ಶವತ್ವ ಎಂಬ ಹೇತುವಿನಿಂದ ಅನಿತ್ಯತ್ವವನ್ನು ಸಾಧಿಸುತ್ತಿದ್ದಾರೆ. ಸೂತ್ರದಲ್ಲಿರುವ ಆದಿಪದದಿಂದ ಸ್ಪರ್ಶವತ್ವವೆಂಬ ಹೇತುವನ್ನು ವಿವಕ್ಷಿಸಬೇಕು. 'ಯತ್ರಯತ್ರ ರೂಪಾದಿಮತ್ವಂ ತತ್ರತತ್ರ ಅನಿತ್ಯತ್ವಮ್' ಎಂಬ ವ್ಯಾಪ್ತಿಯು ಘಟಾದಿಗಳಲ್ಲಿ ಕಂಡಿರುವುದರಿಂದ ಪರಮಾಣುವಿನಲ್ಲೂ ರೂಪವತ್ವಾದಿಗಳು ಇರುವುದರಿಂದ ಅನಿತ್ಯತ್ವವನ್ನು ಒಪ್ಪಬೇಕೆಂಬುದು ಸೂತ್ರದ ಅಭಿಪ್ರಾಯ. ಹಾಗಾದರೆ ಪರಮಾತ್ಮನಲ್ಲೂ ಅನಿತ್ಯತ್ವವನ್ನು ಒಪ್ಪಬೇಕಾಗುತ್ತದಲ್ಲವೆ? ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ರೂಪಾದಿಗಳಲ್ಲಿ ಭೌತಿಕತ್ವವನ್ನು ವಿಶೇಷಣವನ್ನಾಗಿ ನೀಡಬೇಕು. ಆಗ ಭೌತಿಕತ್ವವು ಈಶ್ವರನಲ್ಲಿಲ್ಲದ ಕಾರಣ ವ್ಯಭಿಚಾರಕ್ಕೆ ಅವಕಾಶವಿಲ್ಲ.

## ಬ್ರಹ್ಮಸೂತ್ರ

**सूत्रम् – रूपादिमत्त्वाच्च विपर्ययो दर्शनात् ।।**

ಪಾರ್ಥಿವಪರಮಾಣು, ಜಲೀಯಪರಮಾಣು, ತೈಜಸಪರಮಾಣು ಇವುಗಳಲ್ಲಿ ರೂಪಾದಿಗಳಿರುವುದರಿಂದ ಇವುಗಳೂ ಕೂಡ ಅನಿತ್ಯವಾಗಬೇಕಾದೀತು. ಏಕೆಂದರೆ ಯಾವುದು ರೂಪಾದಿಗಳುಳ್ಳದ್ದೋ ಅದು ಅನಿತ್ಯವಾಗಿರುತ್ತದೆ ಎಂಬ ವ್ಯಾಪ್ತಿಯು ಘಟಪಟಾದಿಗಳಲ್ಲಿ ಕಂಡಿರುತ್ತದೆ.

## ಸೂತ್ರದೀಪಿಕಾ

**सूत्रदीपिका –** किञ्च वैशिषिकमते पार्थिवाप्यतैजसपरमाणूनां **रूपादिमत्त्वात्। विपर्ययः** नित्यत्वविपरीतानित्यत्वं स्यात् । कुत? **दर्शनात्** पद्रूपादिमत् तदनित्यमिति व्याप्तेः घटादौ दृष्टत्वादित्यर्थः ।।५।।

ಮತ್ತು ವೈಶೇಷಿಕರಮತದಲ್ಲಿ ಪಾರ್ಥಿವಪರಮಾಣು, ಜಲೀಯಪರಮಾಣು, ತೈಜಸಪರಮಾಣುಗಳಿಗೆ ರೂಪರಸಾದಿಗಳಿರುವುದರಿಂದ, ರೂಪಾದಿಮತ್ತ್ವಾಚ್ಚ = ರೂಪಾದಿಗಳಿರುವುದರಿಂದಲೂ, ವಿಪರ್ಯಯಃ = ನಿತ್ಯತ್ವಕ್ಕೆ ವಿಪರೀತವಾದ ಅನಿತ್ಯತ್ವವು ಬರಬೇಕಾದೀತು. ಏಕೆಂದರೆ ದರ್ಶನಾತ್ = ಯಾವುದು ರೂಪಾದಿವುಳ್ಳದ್ದೋ, ಅದು ಅನಿತ್ಯವಾಗಿದೆ ಎಂಬ ವ್ಯಾಪ್ತಿಯು ಘಟಾದಿಗಳಲ್ಲಿ ಕಂಡಿರುತ್ತದೆ. ಆದ್ದರಿಂದ ಪರಮಾಣ್ವಾದಿಗಳು ನಿತ್ಯವಾಗಿವೆ ಎಂಬ ತಾರ್ಕಿಕರ ನಿಲುವು ತಪ್ಪಾಗಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। रूपादिमत्त्वाच्च विपर्ययो दर्शनात् ।।५।।**

**रूपादिमत्त्वाच्च परमाणूनामनित्यत्वं, तथा दृष्टत्वाल्लोके ।।५।।**

ಅನುವಾದ - ಪರಮಾಣುಗಳಲ್ಲಿ ರೂಪ, ರಸ, ಗಂಧ, ಸ್ಪರ್ಶ ಮೊದಲಾದ ಗುಣಗಳಿವೆ ಯಾವ ವಸ್ತುವಿನಲ್ಲಿ ರೂಪಾದಿಮತ್ತ್ವವಿರುತ್ತದೋ ಅದಕ್ಕೆ ನಾಶವಿರುವುದು ಲೋಕದಲ್ಲಿ ಕಂಡಿದೆ. ಪರಮಾಣುಗಳಲ್ಲಿ ಈ ರೂಪರಸಾದಿಗಳು ಇರುವುದರಿಂದ ನಾಶವಾಗುತ್ತದೆ ಎಂದು ಒಪ್ಪಲೇಬೇಕು.

ಪ್ರತಿಪದಾರ್ಥ -- ಇಲ್ಲಿಯ ತನಕ ಪರಮಾಣುಗಳಿಗೆ ನಿತ್ಯತ್ವವನ್ನು ಒಪ್ಪಿ ಪರಮಾಣುವಿನಿಂದ ಸೃಷ್ಟಿ ಆಗುತ್ತದೆಂಬ ಪ್ರಕ್ರಿಯೆಯನ್ನು ನಿರಾಕರಣೆ ಮಾಡಲಾಯಿತು. ಈಗ ಪರಮಾಣುವಿಗೆ

ನಿತ್ಯತ್ವವನ್ನೇ ನಿರಾಕರಿಸುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ- ರೂಪಾದಿಮತ್ವಾಚ್ಚ = ಭೌತಿಕವಾದ ರೂಪ, ರಸ, ಗಂಧ, ಸ್ಪರ್ಶಗಳು ಇರುವುದರಿಂದ, ಪರಮಾಣೂನಾಂ = ಪರಮಾಣುಗಳಿಗೆ, ಅನಿತ್ಯತ್ವಂ = ಅನಿತ್ಯತ್ವವನ್ನು ಒಪ್ಪಬೇಕು. ತಥಾ = ರೂಪಾದಿಗಳು ಇದ್ದಲ್ಲಿ ಅನಿತ್ಯತ್ವ ಇರುವುದು, ಲೋಕೇ = ಲೋಕದಲ್ಲಿ, ದೃಷ್ಟತ್ವಾತ್ = ಕಂಡಿರುವುದರಿಂದ.

## ತತ್ವಪ್ರಕಾಶಿಕಾ

**तत्वप्रकाशिका – एवं परमाणूनां नित्यत्वमभ्युपेत्य तदारम्भवादो दूषितः । इदानीं तन्नित्यत्वमपि पराकुर्वत्सूत्रमुपन्यस्य व्याचष्टे – रूपादीति।। पार्थिवादिपरमाणूनां रूपादिमत्त्वहेतुना प्रकृतनित्यत्वविपर्ययो भवति । यद्रूपादिमत् तस्य घटादेरनित्यत्वदर्शनादित्यर्थः ।। १५ ।।**

ಇಲ್ಲಿಯ ತನಕ ಪರಮಾಣುವನ್ನು ನಿತ್ಯವೆಂದು ಅಂಗೀಕರಿಸಿ ವೈಶೇಷಿಕರ ಪರಮಾಣ್ವಾರಂಭ-ವಾದವನ್ನು ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಪರಮಾಣುಗಳ ನಿತ್ಯತ್ವವನ್ನೇ ನಿರಾಕರಣೆ ಮಾಡುವ ಸೂತ್ರವನ್ನು 'ರೂಪಾದಿಮತ್ವಾತ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಪಾರ್ಥಿವಾದಿ ಪರಮಾಣುಗಳಿಗೆ ರೂಪಾದಿಮತ್ವಹೇತುವಿನಿಂದ ನಿತ್ಯತ್ವಕ್ಕೆ ವಿರುದ್ಧವಾದ ಅನಿತ್ಯತ್ವವನ್ನು ಹೇಳಿದಂತಾಗುತ್ತದೆ. ಎಲ್ಲಿ ರೂಪಾದಿಮತ್ವ ಇದೆಯೋ ಅಂಥ ಘಟಾದಿಗಳಿಗೆ ಅನಿತ್ಯತ್ವವು ಕಂಡಿದೆ.

ವಿವರಣೆ - ಪಾರ್ಥಿವಪರಮಾಣು, ಜಲೀಯಪರಮಾಣು, ತೈಜಸಪರಮಾಣು ಇವುಗಳಲ್ಲಿ ರೂಪವತ್ವವಿದೆ. ವಾಯವೀಯಪರಮಾಣುವಿನಲ್ಲಿ ಸ್ಪರ್ಶವತ್ವವಿದೆ. ಆದ್ದರಿಂದ ರೂಪವತ್ವ ಹಾಗೂ ಸ್ಪರ್ಶವತ್ವ ಎಂಬ ಹೇತುವಿನಿಂದ ಅನಿತ್ಯತ್ವವನ್ನು ಸಾಧಿಸುತ್ತಿದ್ದಾರೆ. ಸೂತ್ರದಲ್ಲಿರುವ ಆದಿಪದದಿಂದ ಸ್ಪರ್ಶವತ್ವವೆಂಬ ಹೇತುವನ್ನು ವಿವಕ್ಷಿಸಬೇಕು. 'ಯತ್ರಯತ್ರ ರೂಪಾದಿಮತ್ವಂ ತತ್ರತತ್ರ ಅನಿತ್ಯತ್ವಮ್' ಎಂಬ ವ್ಯಾಪ್ತಿಯು ಘಟಾದಿಗಳಲ್ಲಿ ಕಂಡಿರುವುದರಿಂದ ಪರಮಾಣುವಿನಲ್ಲೂ ರೂಪವತ್ವಾದಿಗಳು ಇರುವುದರಿಂದ ಅನಿತ್ಯತ್ವವನ್ನು ಒಪ್ಪಬೇಕೆಂಬುದು ಸೂತ್ರದ ಅಭಿಪ್ರಾಯ. ಹಾಗಾದರೆ ಪರಮಾತ್ಮನಲ್ಲೂ ಅನಿತ್ಯತ್ವವನ್ನು ಒಪ್ಪಬೇಕಾಗುತ್ತದಲ್ಲವೆ? ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ರೂಪಾದಿಗಳಲ್ಲಿ ಭೌತಿಕತ್ವವನ್ನು ವಿಶೇಷಣವನ್ನಾಗಿ ನೀಡಬೇಕು. ಆಗ ಭೌತಿಕತ್ವವು ಈಶ್ವರನಲ್ಲಿಲ್ಲದ ಕಾರಣ ವ್ಯಭಿಚಾರಕ್ಕೆ ಅವಕಾಶವಿಲ್ಲ.

## ಬ್ರಹ್ಮಸೂತ್ರ

**सूत्रम् – उभयथा च दोषात् ।।**

ಪರಮಾಣುಗಳು ನಿತ್ಯವಾದ ಪಕ್ಷದಲ್ಲಿ ಅನಿತ್ಯವಾದ ಪಕ್ಷದಲ್ಲಿ ದೋಷವು ಸಮಾನವಾಗಿರುವುದರಿಂದ ವೈಶೇಷಿಕರ ಮತವು ಅಸಮಂಜಸವಾಗಿದೆ.

## ಸೂತ್ರದೀಪಿಕಾ

**सूत्रदीपिका** – वैशेषिकमते **उभयथा** च परमाणुनित्यत्वानित्यत्वरूपपक्षद्वयेऽपि । दोषात् तद्वत् सर्वनित्यत्वकारणाभावनिमित्तकतदुत्पत्त्यभावस्य दोषस्य सत्त्वात् न तत्पक्षो युक्त इत्यर्थः ।।६।।

ವೈಶೇಷಿಕರ ಮತದಲ್ಲಿ ಉಭಯಥಾ ಚ = ಪರಮಾಣುಗಳ ನಿತ್ಯತ್ವ, ಅನಿತ್ಯತ್ವವೆಂಬ ಎರಡೂ ಪಕ್ಷಗಳಲ್ಲಿಯೂ, ದೋಷಾತ್ = ದೋಷವಿರುವುದರಿಂದ ವೈಶೇಷಿಕಮತವು ಅಸಾಧುವಾಗಿದೆ. ಅಂದರೆ ನಿತ್ಯವೆಂದು ಹೇಳಿದರೆ ಘಟಾದಿ ವಸ್ತುಗಳೂ ಕೂಡ ನಿತ್ಯವಾಗಬೇಕಾದೀತು. ಘಟವು ಹೇಗೆ ಸಾವಯವವಾಗಿದೆಯೋ, ಅದರಂತೆ ಪರಮಾಣವೂ ಕೂಡ ಸಾವಯವ ಆಗಬೇಕಾದೀತು. ಪರಮಾಣುಗಳು ಅನಿತ್ಯವೆಂದು ಹೇಳಿದರೆ ಪರಮಾಣು ನಾಶವಾದ ಮೇಲೆ ಪುನಃ ಅದೇ ಪರಮಾಣು ಹುಟ್ಟಲು ಕಾರಣವಿಲ್ಲದ್ದರಿಂದ ಪರಮಾಣುವನ್ನು ಅವಲಂಬಿಸಿದ ಕಾರ್ಯಪ್ರಪಂಚವವೇ ಇಲ್ಲವೆಂದಾಗಬೇಕಾದೀತು ಎಂದಭಿಪ್ರಾಯ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। उभयथा च दोषात् ।।६।।**

**नित्यत्वे परमाणूनां तद्वत् सर्वनित्यत्वं स्यात् । विशेषप्रमाणाभावात्।**
**अनित्यत्वे कारणाभावात् तदुत्पत्त्यभावः ।।६।।**

ಅನುವಾದ - ಪರಮಾಣುಗಳು ರೂಪ ರಸಗಳುಳ್ಳದ್ದಾಗಿವೆ. ಆದರೂ ನಿತ್ಯವಾಗುವುದಾದರೆ ಘಟಪಟಾದಿಗಳೂ ಕೂಡ ನಿತ್ಯವೇ ಆಗಬೇಕಾದೀತು. ಪರಮಾಣುಗಳು ಮಾತ್ರ ನಿತ್ಯವಾಗಿವೆ ಎನ್ನಲು ವಿಶೇಷ ಪ್ರಮಾಣ ಇರುವುದಿಲ್ಲ. ಹಾಗೇನಾದರು ಪರಮಾಣುಗಳಿಗೆ ಅನಿತ್ಯತ್ವವನ್ನು ಒಪ್ಪಿದರೆ ಆ ಪರಮಾಣುಗಳಿಗೆ ಕಾರಣವೇ ಇಲ್ಲದ್ದರಿಂದ ಪರಮಾಣುಗಳ ಉತ್ಪತ್ತಿಯೇ ಅಸಂಭಾವಿತವಾಗುತ್ತದೆ.

ಪ್ರತಿಪದಾರ್ಥ -- ಪರಮಾಣೂನಾಂ = ಪರಮಾಣುಗಳಿಗೆ, ನಿತ್ಯತ್ವೇ = ನಿತ್ಯತ್ವವನ್ನು ಒಪ್ಪಿದರೆ, ತದ್ವತ್ = ಪರಮಾಣುಗಳ ದೃಷ್ಟಾಂತದಂತೆ, ಸರ್ವನಿತ್ಯತ್ವಂ= ಘಟಪಟಾದಿಗಳಿಗೂ ನಿತ್ಯತ್ವವು, ಸ್ಯಾತ್ = ಬರಬೇಕಾದೀತು. ವಿಶೇಷಪ್ರಮಾಣಾಭಾವಾತ್ =ಪರಮಾಣುಗಳಿಗೆ ನಿತ್ಯತ್ವವಿದೆ. ಆದರೆ ಘಟಪಟಾದಿಗಳಿಗೆ ನಿತ್ಯತ್ವ ಇಲ್ಲವೆನ್ನಲು ಯಾವುದೇ ವಿಶೇಷ ಪ್ರಮಾಣ ಇರುವುದಿಲ್ಲ. ಅನಿತ್ಯತ್ವೇ = ಪರಮಾಣುಗಳಿಗೆ ಅನಿತ್ಯತ್ವವನ್ನು ಒಪ್ಪಿದರೆ, ಕಾರಣಾಭಾವಾತ್ = ಅನಿತ್ಯತ್ವಕ್ಕೆ ಕಾರಣವಿಲ್ಲದಿರುವುದರಿಂದ, ತದುತ್ಪತ್ತ್ಯಭಾವಃ = ಪರಮಾಣುಗಳ ಉತ್ಪತ್ತಿಯೇ ಇಲ್ಲದಿರಬೇಕಾದೀತು.

## ತತ್ವಪ್ರಕಾಶಿಕಾ

**तत्वप्रकाशिका – ननु रूपादिमत्त्वेऽपि परमाणूनां नित्यत्वं किं न स्यात् अस्तु वाऽनित्यत्वं किं बाधकमित्यशङ्कां परिहरत्सूत्रमुपन्यस्य व्याचष्टे – उभयथा चेति ॥**

ರೂಪಾದಿಗಳಿದ್ದರೂ ಪರಮಾಣುವಿನಲ್ಲಿ ನಿತ್ಯತ್ವವನ್ನು ಏಕೆ ಒಪ್ಪಬಾರದು ? ಅಥವಾ ಆ ಪರಮಾಣುಗಳು ಅನಿತ್ಯವೇ ಆದರೆ ಏನು ಬಾಧಕ ? ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ಉಭಯಥಾಚ ದೋಷಾತ್' ಎಂಬ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಪರಮಾಣವಃ ಅನಿತ್ಯಾಃ ರೂಪಾದಿಮತ್ವಾತ್ ಘಟವತ್, ಯತ್ ರೂಪಾದಿಮತ್ ತದ್ ಅನಿತ್ಯಮ್' ಎಂಬ ಅನುಮಾನದಿಂದ ಹಿಂದಿನ ಸೂತ್ರದಲ್ಲಿ ಪರಮಾಣುಗಳಿಗೆ ಅನಿತ್ಯತ್ವವನ್ನು ಸಾಧನೆ ಮಾಡಲಾಯಿತು. ಈ ಅನುಮಾನದಲ್ಲಿ 'ರೂಪಾದಿಮತ್ವ' ಎಂಬ ಹೇತುವಿರಲಿ ಅನಿತ್ಯತ್ವವು ಇರುವುದು ಬೇಡ ಎಂಬ ಅಪ್ರಯೋಜಕಾಶಂಕೆಯನ್ನು ಈ ಸೂತ್ರದಲ್ಲಿ ಪರಿಹರಿಸುತ್ತಿದ್ದಾರೆ. ಮತ್ತು 'ಯದಿ ಪರಮಾಣವಃ ರೂಪಾದಿಮಂತಃ ಭವೇಯುಃ ತರ್ಹಿ ಅನಿತ್ಯಾಃ ಸ್ಯುಃ' ಎಂಬ ತರ್ಕಕ್ಕೆ ಇಷ್ಟಾಪತ್ತಿಯನ್ನು ಆಕ್ಷೇಪಿಸುತ್ತಿದ್ದಾರೆ.

ಪರಮಾಣುಗಳು ಸಾದಿಯೇ ಆಗಲಿ ಆದರೂ ಇವುಗಳಿಂದ ದ್ವ್ಯಣುಕಾದಿಕಾರ್ಯಗಳು ಉತ್ಪನ್ನವಾಗುವುದಿಲ್ಲ ಎಂದು ಆಪಾದಿಸಲಾಗದು. ಪರಮಾಣುಗಳು ಕಾರಣಾಂತರಗಳಿಂದ ಉತ್ಪನ್ನವಾಗುತ್ತವೆ. ಇಂಥ ಪರಮಾಣುಗಳಿಂದ ದ್ವ್ಯಣುಕಾದಿಕಾರ್ಯಗಳು ಉತ್ಪನ್ನವಾಗುತ್ತವೆ. ಹೀಗೆ ಹೇಳಬಹುದಲ್ಲವೆ? ಎಂಬ ಆಶಂಕೆಗೆ 'ನನು' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – यदि रूपादिमतामपि परमाणूनां नानित्यत्वं तर्हि तद्वद्घटादेरपि किं न स्यात्। न चावयदित्वाविविशेषः । रूपादिमत्त्वादेव तत्सिद्धेः ।**

ಒಂದುವೇಳೆ ರೂಪಾದಿಗಳು ಇದ್ದರೂ ಕೂಡ ಪರಮಾಣುಗಳಲ್ಲಿ ಅನಿತ್ಯತ್ವ ಇಲ್ಲವೆಂದರೆ ಆಗ ರೂಪಾದಿಗಳುಳ್ಳ ಘಟ ಮೊದಲಾದವುಗಳು ಅನಿತ್ಯ ಏಕಾಗಬೇಕು? ಎಂಬ ಆಪತ್ತಿ

ಬರುತ್ತದೆ. ಘಟಾದಿಗಳು ಅವಯವವುಳ್ಳದ್ದರಿಂದ ಅನಿತ್ಯವಾಗುತ್ತವೆ. ಪರಮಾಣುಗಳಿಗೆ ಅವಯವ ಇಲ್ಲದ್ದರಿಂದ ಅನಿತ್ಯವಾಗುವುದಿಲ್ಲ ಎಂದು ತಾರ್ಕಿಕರು ಉತ್ತರಿಸಬೇಕು.

ವಿವರಣೆ- ಪರಮಾಣುಗಳು ನಿರವಯವಗಳಾದ್ದರಿಂದ ರೂಪಾದಿಗಳಿದ್ದರೂ ಅನಿತ್ಯವಾಗುವುದಿಲ್ಲ. ಘಟಾದಿಗಳು ಸಾವಯವಾದ್ದರಿಂದ ರೂಪಾದಿಗಳಿರುವುದರಿಂದ ಅನಿತ್ಯವಾಗುತ್ತವೆಯೆಂಬ ಆಶಂಕೆಯನ್ನು 'ನ ಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – अस्त्वनित्यत्वं परमाणूनां किं बाधकमित्युक्तमेवेति चेन्न। तथा सति परपक्षे तत्समवायिकारणाभावेन तदुत्पत्त्यभावान्न द्व्यणुकादिकार्योत्पत्तिरिति भावः ।।१३।।**

ಹಾಗಾದಲ್ಲಿ ರೂಪಾದಿಮತ್ವ ಹೇತುವಿನಿಂದ ಪರಮಾಣುಗಳಲ್ಲೂ ಅವಯವಿತ್ವವನ್ನು ಸಾಧಿಸುತ್ತೇವೆ. ಪರಮಾಣುಗಳಲ್ಲಿ ಅನಿತ್ಯತ್ವವಿರಲಿ ಏನು ಬಾಧಕ ? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ಪರಮಾಣುಗಳಿಗೆ ಸಮವಾಯ ಕಾರಣ ಇಲ್ಲದ್ದರಿಂದ ಪರಮಾಣುಗಳ ಉತ್ಪತ್ತಿಯನ್ನೇ ವೈಶೇಷಿಕರಿಂದ ಸಮರ್ಥಿಸಲಾಗದು. ಪರಮಾಣುಗಳೇ ಇಲ್ಲದ್ದರಿಂದ ದ್ವ್ಯಣುಕಾದಿ ಕಾರ್ಯಗಳ ಉತ್ಪತ್ತಿಯೂ ಕೂಡ ಆಗದೇ ಇರಬೇಕಾದೀತು.

ವಿವರಣೆ - ಪರಮಾಣು ಅನಿತ್ಯವಾಗಲಿ ಆದರಿಂದೇನು ಹಾನಿ? ಎಂದರೆ 'ತಥಾಸತಿ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

## ಬ್ರಹ್ಮಸೂತ್ರ

**सूत्रम् – अपरिग्रहाच्चात्यन्तमनपेक्षा ।।**

ಶ್ರುತಿ-ಸ್ಮೃತಿಗಳಿಂದ ವೈಶೇಷಿಕರ ಮತವು ಸ್ವೀಕೃತವಾಗದ ಕಾರಣ ಶ್ರುತಿ-ಸ್ಮೃತಿಗಳಿಗೆ ವಿರುದ್ಧವೂ ಆಗಿರದ ಕಾರಣ ಈ ವಾದದಲ್ಲಿ ಅನಾದರ ಮಾಡಬೇಕು.

## ಸೂತ್ರದೀಪಿಕಾ

**सूत्रदीपिका – अपरिग्रहात्** वैशिषिकमतस्य श्रुत्यादिपरिग्रहशून्यत्वात् तद्विरुद्धत्वाच्च । तत्रात्यन्तमनपेक्षा अनादरः कार्य इत्यर्थः ।।७।।

ಅಪರಿಗ್ರಹಾಚ್ಚ= ವೈಶೇಷಿಕರ ಮತವು ಶ್ರುತಿ-ಸ್ಮೃತಿಗಳಿಂದ ಸ್ವೀಕೃತವಾಗದ ಕಾರಣ ಶ್ರುತಿ-ಸ್ಮೃತಿಗಳಿಗೆ ವಿರುದ್ಧವೇ ಆಗಿರುವುದರಿಂದ ಅತ್ಯಂತಮನಪೇಕ್ಷಾ= ಅನಾದರವನ್ನು ಮಾಡಬೇಕು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ವೈಶೇಷಿಕಾಧಿಕರಣವು ಮುಗಿಯಿತು.
ಪರಿಪೂರ್ಣಚಂದ್ರಿಕಾ

## ಬ್ರಹ್ಮಸೂತ್ರಭಾಷ್ಯ

**भाष्यम् – ।। अपरिग्रहाच्चात्यन्तमनपेक्षा ।।७।।**

**श्रुतिस्मृत्यपरिगृहीतत्वाच्चातिशयेनानपेक्षता ।**

**आन्वीक्षिकीं तर्कविद्यामनुरक्तो निरर्थकाम् ।**

**इति च मोक्षधर्मे ।।७।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये वैशेषिकाधिकरणम् ।। ६ ।।**

ಅನುವಾದ - ವೈಶೇಷಿಕರ ಮತವು ಶ್ರುತಿ ಸ್ಮೃತಿಗಳಿಂದ ಪರಿಗ್ರಹಿತವಾಗಿಲ್ಲ. ಆದ್ದರಿಂದ ಸಜ್ಜನರಿಂದ ಅತಿಶಯವಾಗಿ ತಿರಸ್ಕಾರಾರ್ಹವಾಗಿದೆ. ಮಹಾಭಾರತದ ಮೋಕ್ಷಧರ್ಮ ಪರ್ವದಲ್ಲಿ ಹೀಗೆ ಹೇಳಲಾಗಿದೆ - ನಿರರ್ಥಕವಾದ ಆನ್ವೀಷಿಕೀ ಎಂಬ ತರ್ಕವಿದ್ಯೆಯಲ್ಲಿ ನಾನು ಆಸಕ್ತನಾಗಿದ್ದೆನು ಎಂದು.

ಪ್ರತಿಪದಾರ್ಥ -- ಅಪ್ರಾಮಾಣಿಕವಾದ ವೈಷೇಶಿಕಮತವನ್ನು ತಿರಸ್ಕಾರ ಮಾಡಬೇಕು ಎಂದು ಸಮರ್ಥಿಸಲು ಮುಂದಿನ ಸೂತ್ರ ಹೊರಟಿದೆ. ಶ್ರುತಿಸ್ಮೃತ್ಯಪರಿಗೃಹೀತತ್ವಾತ್ = ಶ್ರುತಿಸ್ಮೃತಿಗಳಿಗೆ ಅನುಕೂಲವಾಗದ ವಿರುದ್ಧವೇ ಆಗಿರುವ ಪರಮಾಣ್ವಾರಂಭವಾದವು ಅತಿಶಯೇನ ಬಹಳವಾಗಿ, ಅನಪೇಕ್ಷಿತಃ = ತಿರಸ್ಕಾರಕ್ಕೆ ಅರ್ಹವಾಗಿದೆ.

ನಿರರ್ಥಕಾಂ = ಅಪ್ರಯೋಜಕವಾದ, ಆನ್ವೀಕ್ಷಿಕಿಂ = ಆನ್ವೀಕ್ಷಿಕೀ ಎಂದು ಕರೆಸಿಕೊಳ್ಳುವ, ತರ್ಕವಿದ್ಯಾಮ್ = ತರ್ಕವಿದ್ಯೆಯಲ್ಲಿ, ಅಹಂ = ನಾನು, ಅನುರಕ್ತಃ = ಆಸಕ್ತವಾಗಿದ್ದನು. ಇತಿ ಚ = ಹೀಗೆ, ಮೋಕ್ಷಧರ್ಮೇ = ಮಹಾಭಾರತ ಮೋಕ್ಷಧರ್ಮಪರ್ವದಲ್ಲಿ ಹೇಳಲಾಗಿದೆ.

ಇಲ್ಲಿಗೆ ವೈಶೇಷಿಕಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – एवं प्रपञ्चेन दूषितं परमाण्वारम्भवादमप्रामाणिकत्वेनापि दूषयत्सूत्रं पठित्वा व्याचष्टे – अपरिग्रहाच्चेति ।। न केवलं श्रुत्याद्यपरिगृहीतत्वं तस्य तद्विरूद्धत्वं चेति भावेनाह – आन्वीक्षिकीमिति ।।**

ಇಲ್ಲಿಯ ತನಕ ವಿಸ್ತಾರವಾಗಿ ಪರಮಾಣ್ವಾರಂಭವಾದವನ್ನು ದೂಷಣೆ ಮಾಡಿದ್ದಾಯಿತು. ಈಗ ಇದು ಅಪ್ರಾಮಾಣಿಕವಾಗಿದೆ ಎಂದು ದೂಷಣೆ ಮಾಡುವ ಸೂತ್ರವನ್ನು 'ಅಪರಿಗ್ರಹಾಚ್ಚ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವೈಶೇಷಿಕಮತವು ಶ್ರುತಿಸ್ಮೃತಿಗಳಿಗೆ ಅನುಗುಣವಾಗಿಲ್ಲ ಎಂದಷ್ಟೇ ಅಲ್ಲ, ಶ್ರುತಿಸ್ಮೃತಿಗಳಿಗೆ ವಿರುದ್ಧವೂ ಆಗಿದೆ ಎಂಬ ಅಭಿಪ್ರಾಯದಿಂದ 'ಅನ್ವೀಕ್ಷಿಕೀ' ಎಂಬ ಭಾಷ್ಯದ ವಾಕ್ಯವು ಹೊರಟಿದೆ.

**तत्वप्रकाशिका – 'अहमासं पण्डितको हैतुको वेदनिन्दकः । आन्वीक्षिकीम्' इत्यादि सृगालवाक्यम्। अतः परमाण्वारम्भवादस्यानुपपन्नत्वेनाविरोधकत्वाद्युक्तम् पूर्वाध्यायोक्तमीश्वरस्य अनन्तगुणत्वमिति सिद्धम् ।। १७ ।।**

'ಅಹಮಾಸಂ ಪಂಡಿತಕೋ ಹೈತುಕೋ ವೇದನಿಂದಕಃ ಅನ್ವೀಕ್ಷಿಕೀಂ' ನಾನು ಕೇವಲ ಯುಕ್ತಿಯನ್ನು ಸಮರ್ಥಿಸುವ ವೇದವನ್ನು ನಿಂದನೆ ಮಾಡುವ ಪಂಡಿತನಾಗಿದ್ದೇನೆ. ವ್ಯರ್ಥವಾದ ಅನ್ವೀಕ್ಷೀವಿದ್ಯೆಯಲ್ಲಿ ಆಸಕ್ತನಾಗಿದ್ದೇನೆ ಎಂಬುದಾಗಿ ನರಿಯ ರೂಪದಲ್ಲಿರುವ ದೇವೇಂದ್ರನು ಹೇಳುತ್ತಾನೆ. ಆದ್ದರಿಂದ ಪರಮಾಣ್ವಾರಂಭವಾದವು ಅತ್ಯಂತ ಅನುಪಪನ್ನವಾಗಿದೆ. ಈ ವಾದದ ವಿರೋಧವು ವಿಷ್ಣುವಿನ ಗುಣಪೂರ್ಣತ್ವದ ಪ್ರಮೇಯಕ್ಕೆ ಸರ್ವಥಾ ಬರುವುದಿಲ್ಲ. ಆದ್ದರಿಂದ ಹಿಂದಿನ ಅಧ್ಯಾಯದಲ್ಲಿ ಹೇಳಿದ ಈಶ್ವರನ ಅನಂತಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ.

ವಿವರಣೆ - 'ಶ್ರುತ್ಯಾದಿ' ಎಂಬಲ್ಲಿರುವ ಆದಿಪದದಿಂದ ಸ್ಮೃತಿ ಮತ್ತು ಪುರಾಣಗಳನ್ನು ವಿವಕ್ಷಿಸಬೇಕು. 'ತದ್‌ವಿರುದ್ಧಂ ಚ' ಎಂದು ಟೀಕೆಯಲ್ಲಿ ಹೇಳಿದ್ದರಿಂದ ಸೂತ್ರದಲ್ಲಿರುವ 'ಚ' ಶಬ್ದದಿಂದ ಅನುಕ್ತವಾದದ್ದನ್ನು ಸಮುಚ್ಚಯ ಮಾಡಬೇಕು.

ತರ್ಕವಿದ್ಯೆಯಲ್ಲಿ ಅತ್ಯಂತ ಅನುರಾಗವನ್ನು ತೋರಿದ್ದರಿಂದ ದೇವೇಂದ್ರನಿಗೆ ಒಮ್ಮೆ ನರಿಜನ್ಮ ಬರುತ್ತದೆ. ಆಗ ಪಶ್ಚಾತ್ತಾಪ ಬುದ್ಧಿಯಿಂದ ದೇವೇಂದ್ರನು ಪಶ್ಚಾತ್ತಾಪದಿಂದ ಹೇಳಿದ ಮಾತನ್ನು 'ಅಹಮಾಸಂ' ಇತ್ಯಾದಿಯಾಗಿ ಉಲ್ಲೇಖ ಮಾಡಿದ್ದಾರೆ.

ಈ ಅಧಿಕರಣದಲ್ಲಿ ಒಟ್ಟು ಏಳು ಸೂತ್ರಗಳಿವೆ. ಈ ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸ್ವರಸವಾಗಿದೆ. ಸೃಷ್ಟಿಸಂಹಾರಗಳಲ್ಲಿ ಸೃಷ್ಟಿಯು ಪ್ರಾಥಮಿಕವಾದ್ದರಿಂದ ಮೊದಲಿನ ಮೂರು ಸೂತ್ರಗಳಲ್ಲಿ ಸೃಷ್ಟಿಯ ಬಗ್ಗೆ ನಿರೂಪಣೆ ಮಾಡಿ ನಾಕನೇ ಸೂತ್ರದಲ್ಲಿ ಸಂಹಾರದ ಬಗ್ಗೆ ಹೇಳಲಾಯಿತು. ಐದನೇ ಸೂತ್ರದಲ್ಲಿ ಸಮವಾಯಕಾರಣವೆನಿಸಿದ ಪರಮಾಣುಗಳ ನಿತ್ಯತ್ವವನ್ನು ಆರನೆಯ ಸೂತ್ರದಲ್ಲಿ ತನ್ನಿರಾಸಕವಾದ ಅನುಮಾನಕ್ಕೆ ಅಪ್ರಯೋಜಕತ್ವಾದಿ ಶಂಕೆಯ ಪರಿಹಾರವನ್ನು ಏಳನೆಯ ಸೂತ್ರದಲ್ಲಿ ವೈಶೇಷಿಕಾದಿ ಮತಕ್ಕೆ ಅಪ್ರಾಮಾಣಿಕತ್ವವನ್ನು ನಿರೂಪಣೆ ಮಾಡಿದರು. ಹೀಗೆ ಸೂತ್ರಕ್ರಮ ವಿನ್ಯಾಸವು ಸ್ವರಸವಾಗಿದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ವೈಶೇಷಿಕಾಧಿಕರಣ ಮುಗಿಯಿತು

ವೈಶೇಷಿಕಾಧಿಕರಣ

(೨-೨-೬)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## वैशेषिकाधिकरणम्

### ತಾರ್ಕಿಕರು ಹೇಳುವ ಸೃಷ್ಟಿಯ ನಿರಾಕರಣೆ

**।। महद्दीर्घवद्वा ह्रस्वपरिमंडलाभ्याम् ।। कारणैकार्थप्रत्यासत्त्यादिनेति।। कार्यगतरूपादिगुणानां कारणगतरूपादयो गुणाः कारणैकार्थप्रत्यासत्त्याऽसमवायिकारणानि ।**

''ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಮ್''

(ವೈಶೇಷಿಕಾಧಿಕರಣ ಟೀಕಾದಲ್ಲಿರುವ ಒಂದು ವಾಕ್ಯವನ್ನು ವಿವರಣೆ ಮಾಡುತ್ತಿದ್ದಾರೆ) ಅಸಮವಾಯಿಕಾರಣದ ಲಕ್ಷಣ, ಕಾರ್ಯೇಣ = ಕಾರ್ಯದೊಂದಿಗೆ ಅಥವಾ ಕಾರಣೇನ = ಕಾರಣದೊಂದಿಗೆ, ಸಹ = ಒಟ್ಟಿಗೆ, ಏಕಸ್ಮಿನ್ = ಒಂದೇ ಅರ್ಥೇ = ವಸ್ತುವಿನಲ್ಲಿ, ವಿದ್ಯಮಾಂಸತ್ = ಇದ್ದುಕೊಂಡು ಕಾರಣಂ = ಕಾರಣವಾಗುವುದೋ ಅದು ಅಸಮವಾಯಿಕಾರಣ.

ಕಾರಣೇನ ಸಹ ಏಕಸ್ಮಿನ್ ಅರ್ಥೇ ಎಂಬುದನ್ನೇ ಕಾರಣೈಕಾರ್ಥಪ್ರತ್ಯಾಸತ್ತಿ ಎಂದೂ ಕಾರ್ಯೇಣಸಹ ಏಕಸ್ಮಿನ್ ಅರ್ಥೇ ಎಂಬುದನ್ನೇ ಕಾರ್ಯೈಕಾರ್ಥಪ್ರತ್ಯಾಸತ್ತಿ ಎಂದು ಕರೆಯುತ್ತಾರೆ.

ಕಾರ್ಯದಲ್ಲಿರುವ ರೂಪಾದಿಗುಣಗಳಿಗೆ ಕಾರಣದಲ್ಲಿರುವ ರೂಪಾದಿಗುಣಗಳು ಕಾರಣೈಕಾರ್ಥ-ಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣ. ಉದಾಹರಣೆಗೆ ಇಲ್ಲಿ ಕಾರ್ಯ ಎಂದರೆ ಪಟ, ಪಟದಲ್ಲಿರುವ ರೂಪಾದಿಗಳಿಗೆ ಪಟಕ್ಕೆ ಕಾರಣವಾದ ತಂತುಗಳಲ್ಲಿರುವ ರೂಪಾದಿಗಳು ಕಾರಣ. ರೂಪಕ್ಕೆ ಸಮವಾಯಿಕಾರಣ ಪಟ ಆ ಪಟವು ತಂತುವಿನಲ್ಲಿದೆ. ಅದೇ ತಂತುವಿನಲ್ಲಿ ರೂಪವೂ ಇದೆ. ಹೀಗೆ ತಂತುರೂಪವು ಪಟರೂಪಕ್ಕೆ ಅಸಮವಾಯಿಕಾರಣ.

**कर्मत्वादिपदोपात्तया कार्यैकार्थप्रत्यासत्त्येति द्रष्टव्यम् ।।**

ಕರ್ಮವಾದರೋ ಆದಿಪದದಿಂದ ಹೇಳಲ್ಪಟ್ಟ ಕಾರ್ಯೈಕಾರ್ಥಪ್ರತ್ಯಾಸತ್ತಿಯಿಂದ ಎಂದು ತಿಳಿಯಬೇಕು.

ಕಾರ್ಯದಲ್ಲಿರುವ ಗುಣಗಳಿಗೆ ಕಾರಣದಲ್ಲಿರುವ ಗುಣಗಳು ಕಾರಣೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣ ಎಂದು ಹೇಳಲಾಯಿತು. ಕಾರ್ಯದಲ್ಲಿರುವ ಗುಣಗಳಿಗೆ ಕಾರಣದಲ್ಲಿರುವ ಕರ್ಮವು ಕಾರ್ಯೈಕಾರ್ಥಪ್ರತ್ಯಾಸತ್ತಿಯಿಂದ ಅಸಮವಾಯಿಕಾರಣ ಎಂದು ತಿಳಿಯಬೇಕು.

ಉದಾ: ಕಾರ್ಯ ಎಂದರೆ ಮಾವಿನ ಹಣ್ಣು ಎಂದಿಟ್ಟುಕೊಂಡರೆ ಅಲ್ಲಿರುವ ಗುಣ ಎಂದರೆ ಸಂಯೋಗ. ಅದಕ್ಕೆ ಕಾರಣದಲ್ಲಿರುವ ಕರ್ಮ ಅಂದರೆ ಪತನ. ಅದು ಅಸಮವಾಯಿಕಾರಣ. ಗುಣವಾದ ಸಂಯೋಗ ಇರುವುದೂ ಹಣ್ಣಿನಲ್ಲೇ. ಪತನ ಎಂಬ ಕರ್ಮ ಇರುವುದೂ ಹಣ್ಣಿನಲ್ಲೇ. ಹಾಗಾಗಿ ಕಾರ್ಯೈಕಾರ್ಥಪ್ರತ್ಯಾಸತ್ತಿ.

**ಶಿಷ್ಟಷಡ್ಗುಣಾಯೋಗ್ಯ ಇತಿ ।। ಕರ್ತೃತ್ವಾರ್ಥಂ ಜ್ಞಾನೇಚ್ಛಾಪ್ರಯತ್ನಾನಾಮಾವಶ್ಯಕತ್ವೇ ತದಿತರಗುಣೇಷು ಸಙ್ಖ್ಯಾದಿಪಞ್ಚಕಾತಿರಿಕ್ತಷಡ್ಗುಣಾಯೋಗ್ಯ ಇತ್ಯರ್ಥಃ ।।**

ತಾರ್ಕಿಕರು ಈಶ್ವರನಿಗೆ ಎಂಟು ಗುಣಗಳನ್ನು ಮಾತ್ರ ಒಪ್ಪುತ್ತಾರೆ. ಈಶ್ವರನಿಗೆ ಕರ್ತೃತ್ವ ಬರಬೇಕಾದರೆ ಜ್ಞಾನ, ಇಚ್ಛಾ,ಪ್ರಯತ್ನ ಈ ಮೂರು ಗುಣಗಳು ಬೇಕೇ ಬೇಕು. ಅದಲ್ಲದೇ ಎಲ್ಲಾ ದ್ರವ್ಯಗಳಲ್ಲಿಯೂ ಸಾಮಾನ್ಯವಾದ ಸಂಖ್ಯಾ, ಸಂಯೋಗ, ವಿಭಾಗ, ಪೃಥಕ್ತ್ವ, ಪರಿಮಾಣ ಎಂಬ ಐದು ಗುಣಗಳೂ ಈಶ್ವರನಿಗೆ ಇವೆ. ಇನ್ನುಳಿದ ಆತ್ಮಯೋಗ್ಯವಾದ ಆರು ಗುಣಗಳು ಈಶ್ವರನಲ್ಲಿಲ್ಲ ಎಂದರ್ಥ. (ಸಂಸ್ಕಾರ, ಸುಖ, ದುಃಖ, ದ್ವೇಷ, ಧರ್ಮ ಹಾಗೂ ಅಧರ್ಮ ಇವೇ ಆರು ಗುಣಗಳು. ಇವು ಜೀವನಲ್ಲಿದ್ದರೂ ಈಶ್ವರನಲ್ಲಿಲ್ಲ. ಈಶ್ವರನ ಜ್ಞಾನ ನಿತ್ಯ. ಆದ್ದರಿಂದ ಈ ಆರು ಗುಣಗಳು ಇರಲಿಕ್ಕಿಲ್ಲ. ಜ್ಞಾನ ನಿತ್ಯ ಆದ್ದರಿಂದ ಸಂಸ್ಕಾರ ಬರಲು ಸಾಧ್ಯವಿಲ್ಲ. ಏಕೆಂದರೆ, ಅನುಭವನಾಶದಿಂದ ಸಂಸ್ಕಾರ ಬರುವುದು. ಇನ್ನು ಸುಖಾದಿಗಳು ಮಿಥ್ಯಾಜ್ಞಾನದಿಂದ ಬರುವಂತಹವುಗಳು. ಇವನ ಜ್ಞಾನ ನಿತ್ಯವಾದ್ದರಿಂದ ಮಿಥ್ಯಾ ಅಲ್ಲ. ಮಿಥ್ಯಾಜ್ಞಾನ ಇಲ್ಲ ಎಂದಮೇಲೆ ರಾಗದ್ವೇಷಾದಿಗಳೂ ಇರುವುದಿಲ್ಲ. ಅದಿಲ್ಲದಿದ್ದಮೇಲೆ ಅದರಿಂದಾಗುವ ಧರ್ಮಾಧರ್ಮಗಳೂ ಇವುವುದಿಲ್ಲ. ಅದಿಲ್ಲದಮೇಲೆ ಸುಖ ದುಃಖವೂ ಇರುವುದಿಲ್ಲ.)

**ಸಙ್ಕೇತಮಾತ್ರಮಿತಿ ।। ಪರಮಾಣುದ್ವ್ಯಣುಕಗತಪರಿಮಾಣಮೇವಾಣು । ತ್ರ್ಯಣುಕಾದಿಪರಿಮಾಣಂ ತು ಮಹದಿತಿ ಸಙ್ಕೇತೋಽಪ್ರಾಮಾಣಿಕಃ ।**

ವೈಶೇಷಿಕನು ಹೇಳುವಂತೆ ಪರಮಾಣು ಹಾಗೂ ದ್ವ್ಯಣುಕದಲ್ಲಿರುವ ಪರಿಮಾಣ 'ಅಣು'. ತ್ರ್ಯಣುಕ ಮೊದಲಾದವುಗಳಲ್ಲಿರುವ ಪರಿಮಾಣ. ದ್ವ್ಯಣುಕದಲ್ಲಿರುವ ಪರಿಮಾಣ ತ್ರ್ಯಣುಕದಲ್ಲಿರುವ ಪರಿಮಾಣಕ್ಕೆ ಅಸಮವಾಯಿಕರಣವಾಗುವುದಿಲ್ಲ, ಆದರೆ. ತ್ರ್ಯಣುಕದಲ್ಲಿರುವ ಪರಿಮಾಣವು ಚತುರಣುಕಾದಿಗಳ ಪರಿಮಾಣಕ್ಕೆ ಅಸಮವಾಯಿಕಾರಣವಾಗುತ್ತದೆ. ವಿಜಾತೀಯ ಪರಿಮಾಣವಾದ್ದರಿಂದ.

ಇದು ಸರಿಯಲ್ಲ. ಏಕೆಂದರೆ, ಪರಿಮಾಣವನ್ನು 'ಅಣು' 'ಮಹತ್' ಎಂದೆಲ್ಲಾ ಹೇಳಿರುವುದು ಕೇವಲ ಸಂಕೇತಮಾತ್ರ. ಇದು ಅಪ್ರಾಮಾಣಿಕ (ಏಕೆಂದರೆ, ಅವಯವ ಅವಯವಿಪರಂಪರೆಗೆ ವಿಶ್ರಾಂತಿಯನ್ನು ಹೇಳಲಾಗುವುದಿಲ್ಲ.)

**त्र्यणुकवत्र्यणुकेऽप्यापेक्षिकाणुत्वस्य त्र्यणुकवद्व्यणुके चापेक्षिकमहत्त्वस्य सम्भवादिति भावः ।।**

ನೀನು ಹೇಳುವಂತೆ ಪರಮಾಣು ದ್ವ್ಯಣುಕದಲ್ಲಿ ಅಣುಪರಿಮಾಣವಿದೆ. ತ್ರ್ಯಣುಕಾದಿಗಳಲ್ಲಿ ಮಹತ್‌ಪರಿಮಾಣವಿದೆ. ಇದೆಲ್ಲಾ ಕೇವಲ ಹೆಸರು ಮಾತ್ರ, ವಾಸ್ತವ ಅಲ್ಲ.ಏಕೆಂದರೆ ತ್ರ್ಯಣುಕದಲ್ಲಿರುವ ಪರಿಮಾಣವೂ ಚತುರಣುಕದಲ್ಲಿರುವ ಪರಿಮಾಣವು ತ್ರ್ಯಣುಕದಲ್ಲಿರುವಂತೆ 'ಮಹತ್' ಆಗಬಹುದು. (ಆದ್ದರಿಂದ ಈ ಪರಮಾಣ ಅಪೇಕ್ಷಿಸಲಾಗಿದೆ. ನೀನು ಹೇಳುವ ಹಾಗೆ ನಿಯತವಾಗಿಲ್ಲ.)

**सङ्ख्यादेर्महत्वारम्भकत्वप्रसङ्गादिति ।। त्र्यणुकपरिमाणे परमाण्वादिसङ्ख्यायाः कारणत्वे चतुरणुकारम्भकानेकत्र्यणुकगतबहुत्वसङ्ख्याप्रचययोश्चतुरणुकगतमहत्त्वारम्भकत्वप्रसङ्गादित्यर्थः ।**

ಟೀಕಾದಲ್ಲಿರುವ 'ಸಂಖ್ಯಾದೇರ್ಮಹತ್ವಾರಂಭಕತ್ವಪ್ರಸಂಗಾತ್' ಎಂಬುದಕ್ಕೆ ಹೀಗೆ ಅರ್ಥ. ವೈಶೇಷಿಕರು ದ್ವ್ಯಣುಕ ಪರಿಮಾಣಕ್ಕೆ ಪರಮಾಣುವಿನ ದ್ವಿತ್ವಸಂಖ್ಯೆಯನ್ನೇ ಅಸಮವಾಯಿಕರಣ ಎಂದು ಒಪ್ಪುತ್ತಾರೆ.ಅದೇ ರೀತಿ ದ್ವ್ಯಣುಕದಲ್ಲಿರುವ ತ್ರಿತ್ವಸಂಖ್ಯೆಯೇ ತ್ರ್ಯಣುಕದಲ್ಲಿರುವ ಪರಿಮಾಣಕ್ಕೆ ಅಸಮವಾಯಿಕಾರಣ ಎನ್ನುತ್ತಾರೆ. ಹೀಗೆ ಹೇಳಿದರೆ ಆಗ ಅನೇಕ ತ್ರ್ಯಣುಕದಲ್ಲಿರುವ ಬಹುತ್ವಸಂಖ್ಯೆಯೇ ಚತುರಣುಕದಲ್ಲಿರುವ ಮಹತ್‌ಪರಿಮಾಣಕ್ಕೆ ಕಾರಣವಾಗಲಿ ಎಂದು ಹೇಳಬೇಕಾಗುತ್ತದೆ.

(ಪ್ರಚಯ ಎಂದರೆ ಪ್ರಶಿಥಿಲಾವಯವಸಂಯೋಗ.ಅಂದರೆ ಅವಯವಗಳ ಶಿಥಿಲವಾದ ಸಂಯೋಗ ಹತ್ತಿ ಉಂಡೆಯಲ್ಲಿದೆ. ಹತ್ತಿ ಉಂಡೆಯಲ್ಲಿ ಅವಯವಗಳ ಶಿಥಿಲಸಂಯೋಗವಿದೆ. ಅದು ದೊಡ್ಡದಾಗಿ ಕಂಡರೂ ಭಾರ ಇರುವುದಿಲ್ಲ. ಅವರು ಸಂಖ್ಯಾದಂತೆ ಪ್ರಚಯವನ್ನೂ ಅಸಮವಾಯಿಕರಣ ಎಂಬು ಒಪ್ಪುತ್ತಾರೆ)

**''तदभाव'' इति सूत्रस्थतच्छब्दस्याप्रकृतपरत्वाशङ्कां निरस्यति – परिमाणाभिधानसन्निधापितमिति ।।**

''ಉಭಯಥಾಪಿ ನ ಕರ್ಮಾತಸ್ತದಭಾವಃ'' ಎಂಬ ಸೂತ್ರದಲ್ಲಿರುವ 'ತತ್' ಶಬ್ದಕ್ಕೆ ಅಪ್ರಸಕ್ತವಾದದನ್ನು ಪರಾಮರ್ಶೆ ಮಾಡುತ್ತಿದ್ದಾರೆ ಎಂಬ ಶಂಕಾವನ್ನು ನಿರಾಕರಣೆ ಮಾಡುತ್ತಿದ್ದಾರೆ 'ಪರಿಮಾಣಾಭಿಧಾನಃ' ಎಂಬ ವಾಕ್ಯದಿಂದ. ('ತದಬಾವ' ಎಂಬಲ್ಲಿ 'ತತ್' ಶಬ್ದಕ್ಕೆ ದ್ವ್ಯಣುಕಾದಿಕಾರ್ಯ ಎಂದರ್ಥ. ಪ್ರಕೃತವಾಗಿದೆ ಎಂದರೆ ಹಿಂದಿನ ಸೂತ್ರದಲ್ಲಿ (ಮಹದ್ದೀರ್ಘವದ್ವಾ

ಹ್ರಸ್ವಪರಿಮಂಡಲಾಭ್ಯಾಮ್) ಹ್ರಸ್ವ, ಮಹತ್ ಎಂದೆಲ್ಲಾ ಪರಿಮಾಣದ ಪ್ರಸಕ್ತಿ ಬಂದಿದೆ. ಆದರಿಂದಲೇ ಈ ಪರಿಮಾಣಕ್ಕೆ ಆಶ್ರಯವಾದ ದ್ವ್ಯಣುಕಾದಿಗಳೂ ಪ್ರಸಕ್ತವಾದವು. ಹಾಗಾಗಿ ಅಪ್ರಸಕ್ತಪರಾಮರ್ಶ ಎಂಬ ದೋಷ ಬರುವುದಿಲ್ಲ)

**तदिति भाष्यप्रतीकोपादानम् । तस्य व्याख्या तत्रेति । स्वपदस्य व्याख्या समवायेति ।।**

''ಸಮವಾಯಾಭ್ಯುಪಗಮಾಚ್ಚ'' ಎಂಬ ಸೂತ್ರಭಾಷ್ಯದಲ್ಲಿ ''ನ ಚ ತತ್ಪ್ರಮಾಣಮ್'' ಎಂಬ ವಾಕ್ಯದಲ್ಲಿ 'ತತ್' ಪದ ಇದೆ. ಅದನ್ನು ಪ್ರತೀಕವಾಗಿರಿಸಿಕೊಂಡು ಟೀಕಾದಲ್ಲಿ 'ತತ್' ಎಂದು ವ್ಯಾಖ್ಯಾನ ಮಾಡಿದ್ದಾರೆ. ತಾವು ಹೇಳಿದ 'ತತ್ರ' ಎಂಬ ಪದಕ್ಕೆ ಪುನಃ 'ಸಮಾವಾನಂತ್ಯೇ' ಎಂದು ಅರ್ಥ ಹೇಳಿದ್ದಾರೆ ಎಂದರ್ಥ.

**तस्येति ।। रूपिरूपादिनिष्ठविशेषणविशेष्यभावस्येत्यर्थः ।।**

ಇದೇ ಸೂತ್ರದ ಟೀಕಾದಲ್ಲಿರುವ 'ತಸ್ಯ' ಎಂಬ ಶಬ್ದಕ್ಕೆ ''ರೂಪಿರೂಪಾದಿನಿಷ್ಠವಿಶೇಷಣವಿಶೇಷ್ಯ-ಭಾವಸ್ಯ'' ಎಂದರ್ಥ.

**विशेषणेऽतिप्रसङ्ग इति ।। घटाभावभूतलयोर्विशेषणविशेष्यभावे व्यभिचारनिरासाय भावमात्रनिष्ठत्वेन विशेषणे रूपादावपि विशेषणविशेष्यभावस्याभाववदेव सम्बन्धं विनाप्युपपत्त्या प्रयोजकत्वादप्रयोजकेन च साधनेऽतिप्रसङ्ग इत्यर्थः ।**

ತಾರ್ಕಿಕರು ಸಮವಾಯವನ್ನು ಸಾಧನೆ ಮಾಡಲು ಹೇಳುವ ಅನುಮಾನ ಹೀಗಿದೆ - ರೂಪವು (ಪಕ್ಷ) ನಿತ್ಯಸಂಬಂಧಸಂಬದ್ಧವಾಗಿದೆ (ಸಾಧ್ಯ) ಗುಣವಾದ್ದರಿಂದ (ಹೇತು) ಮಹತ್ವದಂತೆ (ದೃಷ್ಟಾಂತ) ಈ ಅನುಮಾನಕ್ಕೆ ನಾವು ದೃಷ್ಟಾಂತಸಾಧ್ಯಶೂನ್ಯ ಎಂದು ಹೇಳುತ್ತೇವೆ. ಮಹತ್ವದಲ್ಲಿ ಗುಣತ್ವ ಇದ್ದರೂ ನಿತ್ಯಸಂಬಂಧದ ಸಂಬಂಧ ಇಲ್ಲ.

ಇದಕ್ಕೆ ಉತ್ತರವಾಗಿ ಅವರು ಮಹತ್ವದಲ್ಲಿ ನಿತ್ಯಸಂಬಂಧಸಂಬಂಧತ್ವವನ್ನು ಸಾಧಿಸಲು ಈ ಕೆಳಗಿನ ಅನುಮಾನವನ್ನು ಹೇಳುತ್ತಾರೆ - ಮಹತ್ವಾಕಾಶದಲ್ಲಿರುವ ವಿಶೇಷಣವಿಶೇಷ್ಯಭಾವವು ಸಂಬಂಧ-ನಿಮಿತ್ತಕವಾಗಿದೆ. ವಿಶೇಷಣವಿಶೇಷ್ಯಭಾವವಾದ್ದರಿಂದ ಘಟಭೂತಲಗಳಂತೆ ಎಂದು. ಈ ಅನುಮಾನಕ್ಕೆ ನಾವು 'ಘಟಾಭಾವವತ್ ಭೂತಲಂ' (ಭೂತಲವು ಘಟಾಭಾವವುಳ್ಳದ್ದಾಗಿದೆ) ಎಂಬಲ್ಲಿ ವ್ಯಭಿಚಾರ ಬರುತ್ತದೆ ಎಂದು ಆಕ್ಷೇಪಿಸುತ್ತೇವೆ. ಏಕೆಂದರೆ, 'ಘಟಾಭಾವವತ್ ಭೂತಲಂ' ಎಂಬಲ್ಲಿ ಹೇತುವಾದ ವಿಶೇಷಣವಿಶೇಷ್ಯಭಾವವಿದೆ, ಆದರೆ, ಸಾಧ್ಯವಾದ ಸಂಬಂಧನಿಮಿತ್ತತ್ವ ಇಲ್ಲ. ಘಟಾಭಾವ ಭೂತಲಗಳಿಗೆ ತಾರ್ಕಿಕರು ಸ್ವರೂಪಸಂಬಂಧ ಮಾತ್ರ ಹೇಳಿದ್ದಾರೆ. ಅತಿರಿಕ್ತ ಸಂಬಂಧ ಒಪ್ಪಿಲ್ಲ. ಈ ವ್ಯಭಿಚಾರನಿವಾರಣೆಗೆ ಪುನಃ ಅವರು ಹೇತುವಿಗೆ 'ಭಾವತ್ವೇ ಸತಿ' ಎಂದು ವಿಶೇಷಣ ಕೊಟ್ಟರೆ ಆಗ ವ್ಯಭಿಚಾರವೇನೋ ಪರಿಹಾರವಾಗಬಹುದು, ಆದರೆ, ಅತಿಪ್ರಸಂಗ ಎಂಬ ದೋಷ ಬರುತ್ತದೆ. ಹೇಗೆಂದರೆ 'ಘಟಾಭಾವವತ್ ಭೂತಲಂ' ಎಂಬಲ್ಲಿ ವಿಶೇಷಣವಿಶೇಷ್ಯಭಾವವು ಸಂಬಂಧವಿಲ್ಲದೇ

ಕೂಡುವುದಾದರೆ ರೂಪಾದಿಸ್ಥಳದಲ್ಲಿಯೂ ಈ ವಿಶೇಷಣವಿಶೇಷ್ಯಭಾವವು ಸಂಬಂಧವಿಲ್ಲದೆ ಕೂಡಿಸಲು ಬರುವಾಗ ನೀವು ಹೇಳಿದ ವಿಶೇಷಣವಿಶೇಷ್ಯಭಾವತ್ವಾತ್ ಎಂಬ ಹೇತುವು ಅಪ್ರಯೋಜಕ ಎಂದಾಯಿತು.

(ಅಪ್ರಯೋಜಕಶಂಕಾ ಎಂದರೆ, ಹೇತು ಇರಲಿ (ಪಕ್ಷದಲ್ಲಿ) ಸಾಧ್ಯ ಇರುವುದು ಬೇಡ ಎಂಬುದು. ಅಂದರೆ, ಹೇತುವು ಸಾಧ್ಯಸಾಧಕ ಅಲ್ಲ ಎಂದು ಭಾವ)

ಹೇತುವು ಅಪ್ರಯೋಜಕವಾದರೂ ಸಾಧ್ಯಸಾಧಕ ಎಂದು ವಾದಿಸುವುದಾದರೆ ಬೇರೆಕಡೆಯೂ ಅಪ್ರಯೋಜಕವಾದ ಹೇತುವು ಸಾಧ್ಯಸಾಧಕ ಎಂದು ಒಪ್ಪಬೇಕಾಗುತ್ತದೆ ಎಂದು ನಿನಗೇ ಅತಿಪ್ರಸಂಗ ಬಂದೊದಗುತ್ತದೆ.

**यद्वा संयुक्तानिष्ठत्वविशेषितेन विशेषणविशेष्यभावत्वेन भावनिष्ठतद्दृष्टान्तेन सम्बन्धाभावसाधनसम्भवादतिप्रसङ्ग इत्यर्थः ।।**

(ಹಿಂದಿನ ಪಂಕ್ತಿಯಲ್ಲಿ ತಾರ್ಕಿಕರ ಅನುಮಾನಕ್ಕೆ ಅತಿಪ್ರಸಂಗ ಎಂಬ ದೋಷವನ್ನು ಹೇಳಿ ಈಗ ಪ್ರತಿಪಕ್ಷಾನುಮಾನವನ್ನು ಹೇಳುತ್ತಿದ್ದಾರೆ)

ಅಥವಾ, ನಿನ್ನ ಅನುಮಾನಕ್ಕೆ ಪ್ರತಿಯಾಗಿ ನಾವು ಸಂಬಂಧದ ಅಭಾವವನ್ನು ಸಾಧನೆ ಮಾಡಲು ಈ ಅನುಮಾನ ಹೇಳುತ್ತೇವೆ - ಗುಣಗುಣಿಗಳಿಗಿರುವ ವಿಶೇಷಣವಿಶೇಷ್ಯಭಾವವು ಸಂಬಂಧನಿಮಿತ್ತಕ-ವಾಗಿಲ್ಲ. ಸಂಯುಕ್ತನಿಷ್ಠವಾಗದ ವಿಶೇಷಣವಿಶೇಷ್ಯಭಾವವಾದ್ದರಿಂದ. 'ಘಟಾಭಾವವತ್ ಭೂತಲಂ' ಎನ್ನುವಲ್ಲಿರುವಂತೆ. ಇಲ್ಲಿ ಸಂಯುಕ್ತಾನಿಷ್ಠತ್ವ ಎಂಬ ವಿಶೇಷಣ ಹೇಳದೇ ಹೋದರೆ 'ದಂಡೀ ದೇವದತ್ತಃ'ಎನ್ನುವಲ್ಲಿ ವಿಶೇಷಣವಿಶೇಷ್ಯಭಾವವಿದ್ದರೂ ಸಂಯುಕ್ತ ಅನಿಷ್ಠವಾದ ವಿಶೇಷಣವಿಶೇಷ್ಯ-ಭಾವವಿಲ್ಲ ಸಂಯೋಗ ಇರುವುದರಿಂದ.

(ಸಂಯುಕ್ತಾನಿಷ್ಠ ಎಂದರೆ ಸಂಯೋಗಸಂಬಂಧವಿಲ್ಲದೇ ಎಂದರ್ಥ) ಗುಣಗುಣಿಗಳಿಗಿರುವ ವಿಶೇಷಣವಿಶೇಷ್ಯಭಾವ ಹೇಗೆಂದರೆ, 'ರೂಪೀ ಘಟಃ' ಇತ್ಯಾದಿ ಘಟವು ರೂಪವುಳ್ಳದ್ದಾಗಿದೆ . ಇಲ್ಲಿ ಘಟವು ವಿಶೇಷ್ಯ, ರೂಪವು ವಿಶೇಷಣ.)

**सृगालवाक्यमिति ।। सृगालरूपेणेंद्रेण तर्कविद्यानुरागस्य सृगालजन्म-हेतुतोक्तेत्यर्थः।**

ಟೀಕಾದಲ್ಲಿರುವ ಸೃಗಾಲವಾಕ್ಯ ಎಂಬ ಪದಕ್ಕೆ ಸೃಗಾಲರೂಪದಿಂದ ಇಂದ್ರನು ಶುಷ್ಕತರ್ಕದಲ್ಲೇ ಅನುರಕ್ತರಾದವರಿಗೆ ಸೃಗಾಲಜನ್ಮ ಬರುತ್ತದೆ ಎಂಬುದನ್ನು ಸೂಚಿಸುತ್ತಿದ್ದಾನೆ ಎಂದರ್ಥ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**महद्दीर्घवद्वा ।।** सङ्गतिचिन्ताप्रकारपूर्वपक्षाद्यनुक्तिबीजं प्रागेव व्यक्तम् । अस्पष्टानि कानिचिट्टीकावाक्यानि व्यनक्ति ।।

ಈ ಅಧಿಕರಣದಲ್ಲಿ ಸಂಗತಿ, ತದರ್ಥಚಿಂತಾ, ಪೂರ್ವಪಕ್ಷ ಇದೆಲ್ಲವನ್ನೂ ಏಕೆ ಹೇಳಿಲ್ಲಾ ಎಂಬ ಪ್ರಶ್ನೆ ಬಂದರೆ, ಹಿಂದೆಯೇ ಅದಕ್ಕೆ ಉತ್ತರವನ್ನು ಕೊಟ್ಟಿದ್ದಾರೆ. ಇಲ್ಲಿ ಅಸ್ಪಷ್ಟವಾದ ಕೇಲವು ಟೀಕಾವಾಕ್ಯಗಳಿಗೆ ಅರ್ಥವನ್ನು ಹೇಳುತ್ತಿದ್ದಾರೆ.

**प्रकाशः – कारणेति ।।**

## तात्पर्यचन्द्रिका

**अत्र यदुक्तं परैः । महदित्येकं सूत्रमेकमधिकरणम् । उभयथेत्याद्यपरिग्रहादित्यन्तं सूत्रषट्कमधिकरणान्तरमिति तन्न ।**

ಅದ್ವೈತಿಗಳ ಪ್ರಕಾರ "ಮಹದ್ದೀರ್ಘವದ್ವಾ" ಎಂಬ ಒಂದು ಸೂತ್ರವೇ ಪ್ರತ್ಯೇಕ ಅಧಿಕರಣ. "ಉಭಯಥಾಪಿ ನ' ಎಂಬುದರಿಂದ. "ಅಪರಿಗ್ರಹಾಚ್ಚ..' ಎಂಬಲ್ಲಿಯತನಕ ಆರು ಸೂತ್ರಗಳು ಒಂದು ಅಧಿಕರಣ. ಇದು ತಪ್ಪು.

**उभयोरपि तार्किकप्रक्रियानिरासकत्वात् ।**

ಏಕೆಂದರೆ ಈ ಎರಡೂ ಅಧಿಕರಣಗಳು ತಾರ್ಕಿಕಪ್ರಕ್ರಿಯೆಯನ್ನು ನಿರಾಕರಿಸುವುದಕ್ಕಾಗಿ ಹೊರಟಿವೆ.

**विज्ञानशून्यवादयोरिव चेहावान्तरप्रमेयभेदस्यादूषणात् ।**

ಪ್ರಶ್ನೆ - ಅದ್ವೈತಿಯು ನಮಗೆ ಹೀಗೆ ಕೇಳಬಹುದು - ನೀವು ಬೌದ್ಧರ ನಿರಾಕರಣೆ ಮಾಡುವಾಗ ವಿಜ್ಞಾನವಾದ, ಶೂನ್ಯವಾದ, ವೈಭಾಷಿಕ, ಸೌತ್ರಾಂತಿಕ ಹೀಗೆ ಒಬ್ಬೊಬ್ಬರ ನಿರಾಕರಣೆಗೆ ಒಂದೊಂದು ಅಧಿಕರಣ ಮಾಡಿದ ಹಾಗೇ ನಾವೂ ಕೂಡ ವೈಶೇಷಿಕರ ನಿರಾಕರಣೆ ಮತ್ತು ತಾರ್ಕಿಕರ ನಿರಾಕರಣೆಗೆ ಬೇರೆ ಬೇರೆ ಅಧಿಕರಣಗಳನ್ನು ಮಾಡುತ್ತೇವೆ ಎಂದು.

ಉತ್ತರ - ಈ ಆಕ್ಷೇಪ ಸರಿಯಲ್ಲ. ವಿಜ್ಞಾನವಾದಿಗಳೇ ಮೊದಲಾದವರೆಲ್ಲರೂ ಬೌದ್ಧರೇ ಆದರೂ ಅವರಲ್ಲಿ ಅವಾಂತರಪ್ರಮೇಯಭೇದ ಬಹಳವಾಗಿದೆ. ಆದ್ದರಿಂದ ನಾವು ಬೇರೆ ಅಧಿಕರಣಗಳನ್ನು ಮಾಡಿರುವುದು ಕೂಡುತ್ತದೆ. ಆದರೆ, ವೈಶೇಷಿಕ ಹಾಗೂ ತಾರ್ಕಿಕರ ನಡುವೆ ಅಂತಹ ಪ್ರಮೇಯಭೇದವಿಲ್ಲ. ಆದ್ದರಿಂದ ನೀವು 'ಪೃಥಕ್' ಅಧಿಕರಣ ಮಾಡಿ ನಿರಾಕರಣೆ ಮಾಡುವುದು

ಸರಿಯಲ್ಲ. ಸೂತ್ರಕಾರರೂ ಕೂಡ ವಿಜ್ಞಾನವಾದಿಗಳನ್ನು ಬೇರೆ ಬೇರೆ ಸೂತ್ರಗಳಿಂದ ಖಂಡನೆ ಮಾಡಿದ್ದಾರೆ. ಆದರೆ, ವೈಶೇಷಿಕತಾರ್ಕಿಕರ ನಿರಾಕರಣೆಯನ್ನು ಹಾಗೆ ಮಾಡಿಲ್ಲ.

**साङ्ख्याधिकरणानामिवैकाधिकरणत्वस्यैवन्याय्यत्वात् ।**

ನೀವು ಸಾಂಖ್ಯರ ನಿರಾಕರಣೆ ಮಾಡುವಾಗ ಹತ್ತು ಸೂತ್ರಗಳನ್ನು ಸೇರಿಸಿ ಒಂದೇ ಅಧಿಕರಣವನ್ನು ಮಾಡಿ ಸ್ಥೂಲವಾಗಿ ನಿರಾಕರಣೆ ಮಾಡಿದಂತೆ ಇಲ್ಲಿಯೂ ಒಂದೇ ಅಧಿಕರಣವನ್ನು ಮಾಡಿ ನಿರಾಕರಣೆ ಮಾಡುವುದು ಉಚಿತವಾಗಿದೆ.

(ಇಲ್ಲಿ ಅವಾಂತರಭೇದವಿವಕ್ಷಾ ಮಾಡುವುದಾದರೆ ಸಾಂಖ್ಯರಲ್ಲೂ ಮಾಡಬೇಕಾಗಿತ್ತು)

**यच्चोक्तं महद्दीर्घं च त्र्यणुकादिकं विजातीयाद्ध्रस्वादिरूपाद्व्यणुकादित इव चेतनाद्ब्रह्मणोऽचेतनं जगज्जायत इति स्वपक्षदोषोद्धारार्थमाद्याधिकरणमिति तन्न ।**

ನಮ್ಮ ಆಕ್ಷೇಪಕ್ಕೆ ಅದ್ವೈತಿಗಳು ಹೀಗೆ ಹೇಳುತ್ತಾರೆ. 'ಮಹದ್ದೀರ್ಘವದ್ವಾ....' ಎಂಬ ಸೂತ್ರ ತಾರ್ಕಿಕರ ನಿರಾಕರಣೆಗೆ ಹೊರಟಿರುವುದಲ್ಲ ಹೊರತು ಅವರಿಗೆ ಪ್ರಸಿದ್ಧವಾದ ಒಂದು ದೃಷ್ಟಾಂತವನ್ನು ಹೇಳಿ ತಮ್ಮ ಪಕ್ಷದಲ್ಲಿ ಬರುವ ದೋಷವನ್ನು ಪರಿಹಾರ ಮಾಡಿಕೊಳ್ಳುವುದಕ್ಕಾಗಿ ಹೊರಟಿದೆ ಎಂದು. ಅದ್ವೈತಿಗಳು ಬ್ರಹ್ಮನು ಜಗತ್ತಿಗೆ ಉಪಾದಾನಕಾರಣ ಎಂದು ಹೇಳುತ್ತಾರೆ. ಆಗ ಪ್ರಶ್ನೆ ಬರುತ್ತದೆ. ಬ್ರಹ್ಮನು ಚೇತನ, ಜಗತ್ತು ಅಚೇತನ, ಚೇತನನಾದ ಬ್ರಹ್ಮನು ಅಚೇತನವಾದ ಘಟಕ್ಕೆ ಉಪಾದಾನಕಾರಣವಾಗಲು ಹೇಗೆ ಸಾಧ್ಯ ? ಎಂದರೆ, ಅದಕ್ಕೆ ಉತ್ತರವಾಗಿ ಅವರು, ತಾರ್ಕಿಕರು ಹೇಗೆ ಹ್ರಸ್ವತ್ವ ಮತ್ತು ಪಾರಿಮಾಂಡಲ್ಯದಿಂದ ಕೂಡಿದ ದ್ವ್ಯಣುತ್ವದಿಂದ ಮಹತ್ವ ಮತ್ತು ದೀರ್ಘತ್ವವುಳ್ಳ ತ್ರ್ಯಣುಕ ಹುಟ್ಟುತ್ತದೆ ಎಂದು ಹೇಳಿ ವಿಜಾತೀಯವಾದ ಎರಡು ವಸ್ತುಗಳಿಗೆ ಉಪಾದಾನ-ಉಪಾದೇಯಭಾವವನ್ನು ಹೇಳಿದ್ದಾರೋ ಅದೇ ರೀತಿ ನಾವೂ ಕೂಡ ವಿಜಾತೀಯವಾದ ಬ್ರಹ್ಮ ಜಗತ್ತುಗಳಿಗೆ ಉಪಾದಾನೋಪಾದೇಯಭಾವ ಹೇಳುತ್ತೇವೆ ಎಂದು ಸ್ವಪಕ್ಷದೋಷ ನಿರಾಕರಣೆಗಾಗಿ ಈ ಅಧಿಕರಣ ಹೊರಟಿದೆ ಎನ್ನುತ್ತಾರೆ. ಆದರೆ ಇದು ತಪ್ಪು.

**पादासङ्गतेः । पुनरुक्तेश्च । आद्ये पादे स्वपक्षदोषोद्धारः । द्वितीये तु परपक्षदूषणमिति हि ते मतम् । उक्तं च ''न विलक्षणत्वात्'' इत्यत्र विजातीयादपि जन्म ।**

ಹೀಗೆ ಸ್ವಪಕ್ಷದೋಷಪರಿಹಾರಕ್ಕಾಗಿ ಎಂದರೆ ಪಾದಸಂಗತಿ ಬರುವುದಿಲ್ಲ. ಪುನರುಕ್ತಿ ಎಂಬ ದೋಷವೂ ಬರುತ್ತದೆ. ನೀನೇ ಹೇಳಿರುವಂತೆ ಮೊದಲನೇ ಪಾದದಲ್ಲಿ ಸ್ವಪಕ್ಷದೋಷಪರಿಹಾರ, ಎರಡನೇ ಪಾದದಲ್ಲಿ ಪರಪಕ್ಷದೂಷಣ. ಇಲ್ಲಿಯೂ ಸ್ವಪಕ್ಷದೋಷೋದ್ಧಾರವನ್ನೇ ಮಾಡಿದರೆ ಆಗ ಪಾದಸಂಗತಿ ಇಲ್ಲ. 'ನ ವಿಲಕ್ಷಣತ್ವಾತ್..' ಎಂಬ ಅಧಿಕರಣದಲ್ಲಿ ಹಿಂದೆಯೇ ವಿಜಾತೀಯದಿಂದಲೂ ಉತ್ಪತ್ತಿಯನ್ನು ನೀನು ಹೇಳಿದ್ದೀಯೆ. ಅದನ್ನೇ ಪುನಃ ಈ ಅಧಿಕರಣದಿಂದಲೂ ಹೇಳಿದರೆ ಪುನರುಕ್ತಿಯಾಗುತ್ತದೆ.

**नहि तत्र साक्षाच्चेतनाचेतनयोरुपादानोपादेयभावे वृश्चिकगोमयादिदृष्टान्तेषु सर्वलौकिकपरीक्षकसंमतेषूक्तेष्वपि विजातीयमात्रयोस्तद्भावे परमात्रसिद्धं दृष्टान्तान्तरमात्रं वक्तुमधिकरणान्तरं युक्तम् ।**

'ನ ವಿಲಕ್ಷಣತ್ವಾತ್' ಅಧಿಕರಣದಲ್ಲಿ ನೀನು ಚೇತನ ಹಾಗೂ ಅಚೇನಗಳಿಗೆ ಉಪಾದಾನ ಉಪಾದೇಯ ಭಾವವು ಸಾಕ್ಷಾತ್ತಾಗಿದೆ ಎಂಬುದಾಗಿ ಹೇಳುವುದಕ್ಕಾಗಿ 'ವೃಶ್ಚಿಕಗೋಮಯ' ದೃಷ್ಟಾಂತವನ್ನು ಕೊಟ್ಟಿರುವಿ. ಹೇಗೆ ಗೋಮಯವು ಅಚೇತನನಾದ್ದರಿಂದ ಚೇತನವಾದ ವೃಶ್ಚಿಕ ಹುಟ್ಟುತ್ತದೋ ಹಾಗೆ ಎಂದು. ಈ ದೃಷ್ಟಾಂತವು ಎಲ್ಲಾ ಲೌಕಿಕರಿಗೂ ಪರೀಕ್ಷಕರಿಗೂ ಸಮ್ಮತವಾಗಿದೆ. ಅದನ್ನು ಹೇಳಿದ ಮೇಲೆಯೂ ಇಲ್ಲಿ ಕೇವಲ ವಿಜಾತೀಯತ್ವಮಾತ್ರ ಸಾಮ್ಯವಿರುವ ಹಾಗೂ ತಾರ್ಕಿಕರಿಗೆ ಮಾತ್ರ ಸಮ್ಮತವಾದ ಇನ್ನೊಂದು ದೃಷ್ಟಾಂತವನ್ನು ಹೇಳುವುದಕ್ಕಾಗಿ ಬೇರೆ ಅಧಿಕರಣ ಮಾಡುವುದು ಸರಿಯಲ್ಲ.

(ವೃಶ್ಚಿಕ ಗೋಮಯಗಳಿಗೆ ಸರ್ವಸಮ್ಮತವಾದ ಚೇತನ-ಅಚೇತನಭಾವವು ಹಾಗೂ ಉಪಾದಾನೋಪಾದೇಯಭಾವವು ಸಾಕ್ಷಾತ್ತಾಗಿದೆ. ಆದರೆ, ದ್ವ್ಯಣುಕ ತ್ರ್ಯಣುಕಗಳಿಗೆ ವೈಜಾತ್ಯ ಇದ್ದರೂ ಉಪಾದಾನೋಪಾದೇಯಭಾವ ಸಾಕ್ಷಾತ್ತಾಗಿ ಇಲ್ಲ. ಅಂದರೆ, ತಾರ್ಕಿಕರು ದ್ವ್ಯಣುಕವನ್ನು ತ್ರ್ಯಣುಕಕ್ಕೆ ಸಮವಾಯಿಕರಣ ಎನ್ನುತ್ತಾರೆ ಹೊರತು ಪರಿಣಾಮ್ಯುಪಾದಾನ ಎಂದು ಹೇಳುವುದಿಲ್ಲ)

**प्रकाशः –**

**महदित्येकमिति** ।। महदित्यादिसूत्रमित्यर्थः । ननु यथा बौद्धप्रक्रियानिरासकत्वा-विशेषेऽपि ''न भावः नासतः'' इत्यनयोस्त्वन्मते भेदस्तथा ममापीत्यत आह – **विज्ञानेति** ।।

'ಮಹದಿತ್ಯೇಕಮಿತಿ' 'ಮಹದ್ದೀರ್ಘವದ್ವಾ ಇತ್ಯರ್ಥಃ' ಇದೇ ಮೊದಲಾದ ಆರು ಸೂತ್ರಗಳು ಎಂದರ್ಥ. ನೀವು ಬೌದ್ಧರನ್ನು ನಿರಾಕರಣೆ ಮಾಡುವಾಗ ಎಲ್ಲರೂ ಬೌದ್ಧರೇ ಆದರೂ 'ನ ಭಾವಃ ಅನುಪಲಬ್ಧೇಃ' ಎಂಬುದರಿಂದ ವಿಜ್ಞಾನವಾದಿಗಳ ಹಾಗೂ ''ನಾಸತೋ ದೃಷ್ಟತ್ವಾತ್'' ಎಂಬ ಅಧಿಕರಣದಿಂದ ಶೂನ್ಯವಾದಿಗಳ ನಿರಾಕರಣೆ ಮಾಡಿರುವಂತೆ ನಾವೂ, ಇಬ್ಬರೂ ನೈಯಾಯಿಕರೇ ಆದರೂ ವೈಶೇಷಿಕ ಹಾಗೂ ತಾರ್ಕಿಕರ ನಿರಾಕರಣೆ ಬೇರೆ ಬೇರೆ ಮಾಡುತ್ತೇವೆ ಎಂಬ ಪ್ರಶ್ನೆ ಮಾಡಿದರೆ ಅದಕ್ಕೆ ಉತ್ತರವಾಗಿ ವ್ಯಾಸರಾಜರು 'ವಿಜ್ಞಾನ' ಎಂಬುದರಿಂದ ಉತ್ತರ ಕೊಡುತ್ತಿದ್ದಾರೆ.

**प्रकाशः – अस्य स्वपक्षदोषोद्धारार्थत्वात्सार्थक्यमित्यतस्सूत्रप्रमेयं चानूद्य निराह – यच्चोक्तमिति ।।**

"ಮಹದ್ದೀರ್ಘವದ್ವಾ..." ಎಂಬ ಸೂತ್ರವು ಎಂಬುದು ವೈಶೇಷಿಕರ ನಿರಾಕರಣೆಗೆ ಹೊರಟಿರುವುದಲ್ಲ ಹೊರತು ಸ್ವಪಕ್ಷದಲ್ಲಿ ಬರುವ ದೋಷ ಪರಿಹಾರಕ್ಕಾಗಿ, ಹಾಗಾಗಿ ಸೂತ್ರವು ಸಾರ್ಥಕ ಎಂದರೆ ಸೂತ್ರದ ವಿಷಯವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಾರೆ 'ಯಚ್ಚೋಕ್ತಂ' ಎಂಬ ಗ್ರಂಥದಿಂದ.

**प्रकाशः – पादासङ्गतिं व्यनक्ति ।। आद्य इति ।।**

ಪಾದಸಂಗತಿ ಇಲ್ಲ ಎಂಬುದನ್ನು ವಿವರಿಸುತ್ತಿದ್ದಾರೆ 'ಆದ್ಯ' ಎಂಬ ವಾಕ್ಯದಿಂದ.

**प्रकाशः – नन्वेतदाशङ्क्योक्तं कल्पतरौ ''यदि प्रधानगुणानन्वयाज्जगन्न तत्प्रकृतिकं तर्हि ब्रह्मविशेषगुणानन्वयान्न तदुपादानमित्यवान्तरसङ्गतिलोभादत्र लिखित इति'' इति चेन्न ।**

ಈ ಪಾದಸಂಗತಿ ಇಲ್ಲ ಎಂದು ಆಕ್ಷೇಪವನ್ನು ಮಾಡಿಕೊಂಡು ಕಲ್ಪತರುವಿನಲ್ಲಿ ಉತ್ತರ ಕೊಟ್ಟಿದ್ದಾರೆ. ಪ್ರಧಾನದಲ್ಲಿರುವ ಗುಣಗಳು (ಸೂಕ್ಷ್ಮತ್ವ ಇತ್ಯಾದಿ) ಜಗತ್ತಿನಲ್ಲಿ ಬರುವುದಿಲ್ಲವಾದ್ದರಿಂದ ಪ್ರಧಾನವು ಜಗತ್ತಿಗೆ ಉಪಾದಾನಕಾರಣವಲ್ಲ ಎನ್ನುವುದಾದರೆ ಬ್ರಹ್ಮನಲ್ಲಿರುವ ವಿಶೇಷಗುಣಗಳೂ (ಜ್ಞಾನ, ಆನಂದ) ಜಗತ್ತಿನಲ್ಲಿ ಇಲ್ಲವಾದ್ದರಿಂದ ಬ್ರಹ್ಮನೂ ಜಗತ್ತಿಗೆ ಕಾರಣ (ಉಪಾದಾನ) ವಾಗಲಾರನು ಎಂಬ ಪ್ರಶ್ನೆ ಬಂದರೆ ಅದಕ್ಕೆ ಉತ್ತರವಾಗಿ ಈ ಅಧಿಕರಣ ಹೊರಟಿದೆ.( ಸಾಂಖ್ಯರ ನಿರಾಕರಣೆ ಮಾಡಿದ ಕೂಡಲೇ ಸಾಂಖ್ಯರಿಗೆ ಹೇಳಿದ ದೋಷ ನಿಮಗೂ ಬರುತ್ತದೆ ಎಂಬ ಪ್ರಶ್ನೆ ಬರುವುದರಿಂದ ಇಲ್ಲಿ ಪಾದಸಂಗತಿ ಇಲ್ಲದಿದ್ದರೂ (ಪ್ರಾಸಂಗಿಕವಾದ) ಅವಾಂತರ ಸಂಗತಿ ಇದೆ ಎಂದರ್ಥ) ಈ ಉತ್ತರ ಸರಿಯಲ್ಲ.

**प्रकाशः – तथात्वे पादादिसङ्गत्यभावशङ्का क्वापि नोदियात् । सर्वत्राप्येवं सम्भवात् ।**

ನೀವು ಹೀಗೆ ಪ್ರಸಂಗಸಂಗತಿಯನ್ನು ಹೇಳುವುದಾದರೆ ಎಲ್ಲಿಯೂ ಕೂಡ 'ಪಾದಸಂಗತಿ ಇಲ್ಲ' ಎಂಬ ಪ್ರಶ್ನೆ ಮಾಡುವಂತೆಯೇ ಇಲ್ಲ. ಎಲ್ಲ ಕಡೆಯೂ ಕೂಡ ಏನಾದರೊಂದು ಪ್ರಾಸಂಗಿಕವಾದ ಅವಾಂತರ ಸಂಗತಿಯನ್ನು ಹೇಳಬಹುದು.

**प्रकाशः – निर्गुणब्रह्मोपादानकत्वपक्षे चैवं शङ्कानुदयात् । विवर्तोपादानतापक्षे सर्वथैव शङ्कानुत्थितिश्चेति भावः । पुनरुक्तेश्चेत्येतद्व्यनक्ति ।। उक्तं चेति ।। परसिद्धदृष्टान्तोक्तयर्थमिदमित्यत आह – न हीति ।।**

ಬ್ರಹ್ಮನು ನಿರ್ಗುಣ ಎಂದು ಹೇಳುವ ನಿಮ್ಮ ಮತದಲ್ಲಿ ಈ ಪ್ರಶ್ನೆ (ಬ್ರಹ್ಮನ ಗುಣಗಳು ಜಗತ್ತಿನಲ್ಲಿ ಬರುತ್ತಿಲ್ಲ) ಹುಟ್ಟುವುದೇ ಇಲ್ಲ. ಏಕೆಂದರೆ ಬ್ರಹ್ಮ ನಿರ್ಗುಣ. ವಿವರ್ತೋಪಾದಾನ ಪಕ್ಷದಲ್ಲಿಯಂತೂ ಈ ಪ್ರಶ್ನೆ ಸರ್ವಥಾ ಬರುವುದೇ ಇಲ್ಲ. (ಪರಿಣಾಮ್ಯುಪಾದಾನ, ವಿವರ್ತೋಪಾದಾನ ಎಂದು ಎರಡು ವಿಧ. ಮಣ್ಣು ಮಡಿಕೆಯಾಗುವುದು ಪರಿಣಾಮ್ಯುಪಾದಾನ, ಶುಕ್ತಿಯು ರಜತಾಕಾರೇಣ ತೋರುವುದು ವಿವರ್ತೋಪಾದಾನ) ಪುನರುಕ್ತಿ ಎಂದು ಹೇಳಿದ ದೋಷವನ್ನು ವಿವರಿಸುತ್ತಿದ್ದಾರೆ 'ಉಕ್ತಂ ಚ' ಎಂಬ

ವಾಕ್ಯದಿಂದ. ಪರವಾದಿಗಳಾದ ತಾರ್ಕಿಕರಿಗೆ ಸಮ್ಮತವಾದ ದೃಷ್ಟಾಂತವನ್ನು ಹೇಳುವುದಕ್ಕಾಗಿ ಸೂತ್ರ ಹೊರಟಿದೆ ಎಂದರೆ ಅದಕ್ಕೆ ಉತ್ತರವನ್ನು ಹೇಳುತ್ತಿದ್ದಾರೆ 'ನಹಿ' ಎಂಬ ವಾಕ್ಯಗಳಿಂದ.

### ತಾರ್ಕಿಕರ ಕಾರ್ಯಕಾರಣಭಾವ ವ್ಯವಸ್ಥೆಯೇ ತಪ್ಪು

## तात्पर्यचन्द्रिका

**किञ्च महतो दीर्घस्य च त्र्यणुकादिकस्य विजातीयाद्ध्रस्वाद्व्द्यणुकादुत्पत्तावपि परिमण्डलात्परमाणुतोऽनुत्पत्तेस्सूत्रे परिमण्डलशब्दो व्यर्थः स्यात् ।**

''ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ'' ನಿಮ್ಮ ಪ್ರಕಾರ ಸೂತ್ರಾರ್ಥವು ಸರಿಯಲ್ಲ. ಮಹತ್ತಾದ, ದೀರ್ಘವಾದ (ಮಹತ್ವ ದೀರ್ಘವುಳ್ಳ) ತ್ರ್ಯಣುಕವು ತನಗಿಂತ ವಿಜಾತೀಯವಾದ ಹ್ರಸ್ವತ್ವವುಳ್ಳ ದ್ವ್ಯಣುಕದಿಂದ ಹುಟ್ಟುತ್ತದೆ ಹೇಗೋ ಎಂದು ಹೇಳುವುದು ಸರಿಯಾದರೂ ಮಹತ್ ದೀರ್ಘವಾದ ತ್ರ್ಯಣುಕವು ಪರಿಮಂಡಲದಿಂದ (ಪರಮಾಣುವಿನಿಂದ) ಹುಟ್ಟುವುದಿಲ್ಲವಾದ್ದರಿಂದ ಸೂತ್ರದಲ್ಲಿ ಪರಿಮಂಡಲಪದವು ವ್ಯರ್ಥ.

(ಸೂತ್ರದಲ್ಲಿ ಹ್ರಸ್ವಶಬ್ದಕ್ಕೂ ಮಹತ್‌ದೀರ್ಘವತ್ ಶಬ್ದಕ್ಕೂ ಅನ್ವಯ ಹೇಳಬಹುದೇ ಹೊರತು ಪರಿಮಂಡಲ ಶಬ್ದಕ್ಕೂ ಮಹತ್‌ದೀರ್ಘವತ್ ಶಬ್ದಕ್ಕೂ ಹೇಳಲು ಸಾಧ್ಯವಿಲ್ಲ ಎಂದರ್ಥ)

**ननु सौत्रो वाशब्दश्चार्थस्सन्न परिमण्डलभूतव्यणुकसमुच्चयार्थः । तथा च परिमण्डलादपरिमण्डलवदिति दृष्टान्तान्तरार्थस्स इति चेत्तर्हि कार्यकारणयोर्वैजात्य-स्फोरणाय ह्रस्वप्रतियोगित्वेन महद्दीर्घपदमिव परिमण्डलप्रतियोगित्वेनापरिमण्डलपदं प्रयुज्य महद्दीर्घापरिमण्डलवद्ध्रस्व परिमण्डलाभ्यामिति सूत्रणीयम्।**

ಆಕ್ಷೇಪ - ''ಮಹದ್ದೀರ್ಘವದ್ವಾ..'' ಎಂಬ ಸೂತ್ರದಲ್ಲಿರುವ 'ವಾ' ಶಬ್ದಕ್ಕೆ 'ಚ' ಎಂದರ್ಥ. ಅಂದರೆ, ಅನುಕ್ತಸಮುಚ್ಚಯ. ಹೀಗೆ 'ವಾ' ಶಬ್ದದಿಂದ ಅಪಾರಿಮಂಡಲವಾದ ದ್ವ್ಯಣುಕವನ್ನು ಗ್ರಹಿಸಬೇಕು. ಆಗ ಪಾರಿಮಂಡಲದಿಂದ (ಪರಮಾಣುವಿನಿಂದ) ಅಪರಿಮಂಡಲದ (ದ್ವ್ಯಣುಕದ) ಉತ್ಪತ್ತಿ ಹೇಗೋ ಹಾಗೆ ಎಂಬ ಇನ್ನೊಂದು ದೃಷ್ಟಾಂತ ದೊರೆಯುತ್ತದೆ. ಆಗ ಪರಿಮಂಡಲ ಶಬ್ದ ಸಾರ್ಥಕ.

ಸಮಾಧಾನ - ನೀವು ಹೀಗೆ ಅರ್ಥ ಹೇಳುವುದಾದರೆ ಆಗ ಸೂತ್ರವು ''ಮಹದ್ದೀರ್ಘಪರಿಮಂಡಲವತ್ ಹ್ರಸ್ವಪರಿಮಂಡಲಾಭ್ಯಾಂ'' ಎಂದಿರಬೇಕಾಗುತ್ತದೆ. ಹ್ರಸ್ವಕ್ಕೆ ವಿರೋಧಿ (ಪ್ರತಿಯೋಗಿ) ಯಾದ ಮಹದ್‌ದೀರ್ಘಪದವನ್ನು ಹೇಗೆ ಹೇಳಲಾಗಿದೆಯೋ ಹಾಗೇ ಪರಿಮಂಡಲ ಪದಕ್ಕೆ ವಿರೋಧಿಯಾದ ಅಪರಿಮಂಡಲ ಪದವನ್ನೂ ಹೇಳಬೇಕು. ಆಗ ಸೂತ್ರಭೇದ ಎಂಬ ದೋಷ ಬರುತ್ತದೆ. ಸೂತ್ರದಲ್ಲಿ ಹ್ರಸ್ವ, ಮಹದ್‌ದೀರ್ಘ ಎಂದೆಲ್ಲಾ ಹೇಳಿರುವುದು ಕಾರ್ಯಕಾರಣಗಳು ವಿಜಾತೀಯ ಎಂದು ತಿಳಿಸುವುದಕ್ಕಾಗಿ.

**यथान्यासपक्षे हि समासैकदेशस्य ह्रस्वस्य महद्दीर्घान्वयः । परिमण्डलस्य तु वाशब्दसमुच्चितापरिमण्डलान्वय इति क्लिष्टम् ।**

ಸೂತ್ರಭೇದ ಮಾಡುವುದು ಬೇಡ. ಹೇಗಿದೆಯೋ ಹಾಗೇ ಇರಲಿ ಎಂದರೆ ಆಗ ''ಹ್ರಸ್ವಪರಿಮಂಡಲಾಭ್ಯಾಂ'' ಎಂಬ ಸಮಸ್ತಪದದ ಅವಯವವಾದ 'ಹ್ರಸ್ವ' ಪದಕ್ಕೆ 'ಮಹತ್ ದೀರ್ಘವತ್' ಎಂಬಲ್ಲಿ ಅನ್ವಯ. 'ಪರಿಮಂಡಲ' ಪದಕ್ಕೆ 'ವಾ' ಶಬ್ದದಿಂದ ಸಮುಚ್ಚಿತವಾದ 'ಅಪರಿಮಂಡಲ' ಪದದಲ್ಲಿ ಅನ್ವಯ. ಇದು ಕ್ಲಿಷ್ಟವಾದ ಕಲ್ಪನೆ.

('ರಾಮಶ್ಚ ಸುಂದರಃ' ಎನ್ನುವಲ್ಲಿ ಸುಂದರ ಶಬ್ದವು ರಾಮ ಶಬ್ದದೊಡನೆ ಅನ್ವಯ ಹೊಂದುವುದಿಲ್ಲ ಹೊರತು 'ಚ' ಶಬ್ದದಿಂದ ಗ್ರಹಿಸಲ್ಪಟ್ಟ ಕೃಷ್ಣ ಶಬ್ದದೊಡನೆ ಮಾತ್ರ ಅನ್ವಯ ಹೊಂದುತ್ತದೆ ಎಂದಾಗ ಹೇಗೆ ಅದು ಅಸಮಂಜಸವೋ ಹಾಗೇ ಇಲ್ಲಿಯೂ ಕೂಡ)

**किञ्च परीत्या विजातीयं तन्तुपटादि परित्यज्याविजातीयस्य विलक्षणमात्रस्य परमाणुद्व्यणुकादेर्दृष्टान्तीकरणम युक्तम् ।**

ನಿಮ್ಮ ಪ್ರಕಾರ ವಿಜಾತೀಯವಾದ ತಂತು (ನೂಲು) ಪಟ (ಬಟ್ಟೆ) ಗಳಿಗೆ ಹೇಗೆ ಕಾರ್ಯಕಾರಣ ಭಾವವಿದೆಯೋ ಹಾಗೆಯೇ ಬ್ರಹ್ಮ ಜಗತ್ತುಗಳಿಗೆ ಕಾರ್ಯಕಾರಣ ಭಾವವಿದೆ ಎಂದು ಸುಲಭವಾಗಿ ಹೇಳಲು ಬರುವಾಗ ಅದನ್ನು ಬಿಟ್ಟು ವಿಜಾತೀಯವಲ್ಲದ ಕೇವಲ ವಿಸದೃಶಗಳಾದ ಪರಮಾಣು-ದ್ವ್ಯಣುಕಾದಿಗಳನ್ನು ದೃಷ್ಟಾಂತವಾಗಿ ಸ್ವೀಕರಿಸಿರುವುದು ಸರಿಯಲ್ಲ.

(ತಂತುವಿನಲ್ಲಿ ತಂತುತ್ವ ಜಾತಿ ಇದೆ. ಪಟದಲ್ಲಿ ಪಟತ್ವ ಜಾತಿ ಇದೆ. ಹಾಗಾಗಿ ಎರಡೂ ವಿಜಾತೀಯ. ಆದರೆ, ಪರಮಾಣುದ್ವ್ಯಣುಕ ಎರಡರಲ್ಲೂ ಪೃಥಿವೀತ್ವ ಎಂಬ ಒಂದೇ ಜಾತಿ ಇರುವುದರಿಂದ ಅವು ವಿಜಾತೀಯ ಅಲ್ಲ. ಪರಿಮಾಣ ಬೇರೆಯಾದ್ದರಿಂದ ಕೇವಲ ವಿಸದೃಶ ಎಂದೆನ್ನಬೇಕು)

**नहि परमाणुत्वादिकं जातिः ।**

ಪರಮಾಣುದ್ವ್ಯಣುಕಗಳೂ ವಿಜಾತೀಯಗಳೇ ಆಗಿವೆ. ಏಕೆಂದರೆ, ಪರಮಾಣುವಿನಲ್ಲಿ ಪರಮಾಣುತ್ವ ಜಾತಿ ಇದೆ. ದ್ವ್ಯಣುಕದಲ್ಲಿ ದ್ವ್ಯಣುಕತ್ವ ಜಾತಿ ಇದೆ. ಆದ್ದರಿಂದ ನಿಮ್ಮ ಆಕ್ಷೇಪಕ್ಕೆ ಅವಕಾಶವಿಲ್ಲ ಎಂದರೆ ಹಾಗೆನ್ನಬಾರದು.

**पृथिवीत्वादिना सङ्करात् ।**

ಪರಮಾಣುತ್ವವನ್ನು ಜಾತಿ ಎಂದು ಹೇಳಲಾಗುವುದಿಲ್ಲ. 'ಸಂಕರ' ಎಂಬ ಪ್ರತಿಬಂಧಕವಿರುವುದರಿಂದ.

(ಯಾವುದೇ ಧರ್ಮವನ್ನು 'ಜಾತಿ' ಎಂದು ಒಪ್ಪಬೇಕಾದರೆ ಆ ಜಾತಿಗೆ ಯಾವುದು ಬಾಧಕವೋ ಅದಿರಬಾರದು. ಜಾತಿಬಾಧಕಗಳನ್ನು ಹೀಗೆ ಪರಿಗಣಿಸಲಾಗಿದೆ - ವ್ಯಕ್ತಿಯ ಅಭೇದ, ತುಲ್ಯತ್ವ, ಸಂಕರ, ಅನವಸ್ಥಿತಿ, ರೂಪಹಾನಿ, ಅಸಂಬಂಧ ಎಂಬುದಾಗಿ. ಇದರಲ್ಲಿ ಯಾವುದಿದ್ದರೂ ಅದು

ಜಾತಿಯಾಗುವುದಿಲ್ಲ. ಪ್ರಕೃತದಲ್ಲಿ ಪರಮಾಣುತ್ವವನ್ನು ಜಾತಿ ಎಂದು ಒಪ್ಪಲು ಸಾಧ್ಯವಿಲ್ಲ 'ಸಂಕರ' ಎಂಬ ಬಾಧಕ ಇರುವುದರಿಂದ. ಸಂಕರ ಎಂದರೆ - ಪರಸ್ಪರ ಅತ್ಯಂತಾಭಾವಸಮಾನಾಧಿಕರಣವಾದ ಧರ್ಮಗಳಿಗೆ ಏಕತ್ರ ಸಮಾವೇಶ. ಉದಾ: ಪರಮಾಣುತ್ವವು ಪೃಥಿವೀತ್ವವನ್ನು ಬಿಟ್ಟು ಜಲಪರಮಾಣುವಿನಲ್ಲಿದೆ. ಹಾಗೇ ಪೃಥಿವೀತ್ವವು ಪರಮಾಣುತ್ವವನ್ನು ಬಿಟ್ಟು ಘಟದಲ್ಲಿದೆ. ಈ ಎರಡೂ ಧರ್ಮಗಳು ಪಾರ್ಥಿವ ಪರಮಾಣುವಿನಲ್ಲಿ ಒಟ್ಟಿಗೆ ಇವೆ. ಹಾಗಾಗಿ ಜಾತಿಯಾಗಲು ಸಾಧ್ಯವಿಲ್ಲ.)

**यद्यपि परमाणुद्व्यणुकादि-परिमाणानि तार्किकमते विजातीयानि तथापि न तेषामुपादानोपादेयत्वम् ।**

ತಾರ್ಕಿಕರು ಪರಮಾಣು ದ್ವ್ಯಣುಕ. ಇವುಗಳಿಗೆ ಇರುವ ಪರಿಮಾಣವು ಬೇರೆ ಬೇರೆ ಎಂದು ಒಪ್ಪಿದರೂ ಇವುಗಳಿಗೆ ಉಪಾದಾನ ಉಪಾದೇಯಭಾವವನ್ನು ಒಪ್ಪಿಲ್ಲ. ಪರಮಾಣುವಿನ ಪರಿಮಾಣವು ದ್ವ್ಯಣುಕ ಪರಿಮಾಣಕ್ಕೆ ಕಾರಣ ಎಂದು ಅವರು ಒಪ್ಪಿಲ್ಲ, ಹೊರತು ಪರಮಾಣುಸಂಖ್ಯಾವೇ ಕಾರಣ ಎಂದೆನ್ನುತ್ತಾರೆ. ಹಾಗಾಗಿ ವೈಜಾತ್ಯ ಇದ್ದರೂ ಕಾರ್ಯಕಾರಣಭಾವ ಇರುವುದಿಲ್ಲ.

**किञ्चायं दृष्टान्तो विवर्तप्रतिकूलः ।**

ಬ್ರಹ್ಮನು ಜಗತ್ತಿಗೆ ವಿವರ್ತ ಉಪಾದಾನ ಎನ್ನುವ ಪಕ್ಷದಲ್ಲಿ ಈ ದೃಷ್ಟಾಂತ ಪ್ರತಿಕೂಲವೇ ಆಗಿದೆ. ಏಕೆಂದರೆ, ತಾರ್ಕಿಕರು ಪರಮಾಣುವಿನಲ್ಲಿ ದ್ವ್ಯಣುಕವು ಆರೋಪಿತ, ದ್ವ್ಯಣುಕದಲ್ಲಿ ತ್ರ್ಯಣುಕ ಆರೋಪಿತ ಎಂದು ಸರ್ವಥಾ ಒಪ್ಪಿಲ್ಲ.

**अपि च तव चेतनाद्ब्रह्मणोऽचेतनं जगदिति दार्ष्टान्तिकोऽध्याहार्यः ।**

ನಿಮ್ಮ ಪ್ರಕಾರ ಹ್ರಸ್ವದಿಂದ ಮಹತ್ವದೀರ್ಘ ಹೇಗೆ ಹುಟ್ಟುತ್ತದೋ ಪರಿಮಂಡಲದಿಂದ ಅಪರಿಮಂಡಲ ಹೇಗೆ ಹುಟ್ಟುತ್ತದೋ ಹಾಗೇ ಚೇತನನಾದ ಬ್ರಹ್ಮನಿಂದ ಅಚೇತನವಾದ ಜಗತ್ತು ಹುಟ್ಟುತ್ತದೆ ಎಂದು ಹೇಳುವಾಗ ದಾರ್ಷ್ಟಾಂತಿಕವಾದ ಚೇತನನಿಂದ ಅಚೇತನ ಹುಟ್ಟುತ್ತದೆ ಎಂಬಂಶ ಹೇಗೆ ಪ್ರಾಪ್ತವಾಯಿತು ? ಎಂದರೆ ಅಧ್ಯಾಹಾರ ಎಂದು ಉತ್ತರ ಕೊಡಬೇಕು. ಇದು ಗೌರವ.

**मम तु न ।**

ನಮ್ಮ ಮತದಲ್ಲಿ ದಾರ್ಷ್ಟಾಂತಿಕ ಅಧ್ಯಾಹಾರ ಮಾಡಬೇಕಾಗಿಲ್ಲ. ಮಹದ್ದೀರ್ಘವಾದ ತ್ರ್ಯಣುಕದಿಂದ ಹೇಗೆ ಚತುರಣಕವು ಹುಟ್ಟುತ್ತದೋ ಹಾಗೇ ಹ್ರಸ್ವಪರಿಮಂಡಲದಿಂದಲೂ ಮಹತ್ ದೀರ್ಘವಾದದ್ದು ಹುಟ್ಟಬೇಕು ಎಂಬುದಾಗಿ ಎಲ್ಲವೂ ಸೂತ್ರದಲ್ಲೇ ಇದೆ.

**प्रकाशः –**

सूत्रार्थं च निराह – **किञ्चेति** ।। भामत्युक्तमाशङ्कते ।। **नन्विति** ।। **पृथिवीत्वादिनेति** ।। परमाणुत्वं विना पृथिवीत्वं घटादौ पृथिवीत्वं विना परमाणुत्वमाप्यपरमाणौ द्वयमपि पृथिवीपरमाणौ सङ्कीर्णमिति भावः ।। **मम तु नेति** ।। स प्रकारष्टीकादौ व्यक्त इति भावः ।।

ನಿಮ್ಮ ಪ್ರಕಾರ ಸೂತ್ರಾರ್ಥವೂ ಕೂಡುವುದಿಲ್ಲ ಎಂದು ತೋರಿಸುತ್ತಾರೆ 'ಕಿಂಚ' ಎಂಬುದರಿಂದ. (ಅಧಿಕರಣರಚನೆಯೂ ಸರಿಯಲ್ಲ, ಸೂತ್ರಾರ್ಥವೂ ಸರಿಯಲ್ಲ ಎಂದರ್ಥ) ಭಾಮತಿಯಲ್ಲಿ ಹೇಳುವ ಶಂಕೆಯನ್ನು ಮಾಡುತ್ತಿದ್ದಾರೆ 'ನನು' ಎಂಬುದರಿಂದ. (ಪರಮಾಣುತ್ವ ಜಾತಿಯನ್ನು ಒಪ್ಪಿದರೆ 'ಸಾಂಕರ್ಯ' ಹೇಗೆ ಬರುತ್ತದೆ ಎಂಬುದನ್ನು ಚಂದ್ರಿಕಾದಲ್ಲಿ ವಿವರಿಸಲಾಗಿದೆ) ನಮ್ಮ ಪ್ರಕಾರ ಅಧ್ಯಾಹಾರ ಏಕೆ ಇಲ್ಲ ಎಂಬುದನ್ನು ಟೀಕಾದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

ರಾಮಾನುಜರ ಸೂತ್ರವ್ಯಾಖ್ಯಾನ ನಿರಾಕರಣೆ

**तात्पर्यचन्द्रिका**

**केचित्तु परिमण्डलात्परमाणुतो ह्रस्वस्य व्यणुकस्य तस्माच्च महद्दीर्घस्य त्र्यणुकादेर्जन्म तावदयुक्तम् ।**

ರಾಮಾನುಜರು ಹೀಗೆ ಹೇಳುತ್ತಾರೆ. ಪರಿಮಂಡಲವಾದ (ಪಾರಿಮಾಂಡಲ್ಯ ಎಂಬ ಪರಿಮಾಣವುಳ್ಳ) ಪರಮಾಣುವಿನಿಂದ ಹ್ರಸ್ವವಾದ ದ್ವ್ಯಣುಕದ ಜನ್ಮ ಅದರಿಂದ ಮಹತ್ ದೀರ್ಘವಾದ ತ್ರ್ಯಣುಕಾದಿಗಳ ಜನ್ಮ ಎಂಬುದು ಕೂಡುವುದಿಲ್ಲ.

**अणोरण्वन्तरसंयोगस्य व्याप्यवृत्तित्वे तत्कार्यपरिमाणाधिक्यायोगात् । एकदेशवृत्तित्वे चाणोर्निरंशत्वहानेः ।**

ಒಂದು ಪರಮಾಣುವಿಗೂ ಇನ್ನೊಂದು ಪರಮಾಣುವಿಗೂ ಆಗುವ ಸಂಯೋಗ ವ್ಯಾಪ್ಯವೃತ್ತಿಯೋ ಅಥವಾ ಅವ್ಯಾಪ್ಯವೃತ್ತಿಯೋ. ವ್ಯಾಪ್ಯವೃತ್ತಿ ಎಂದರೆ ಆಗ ಆ ಸಂಯೋಗದಿಂದ ಹುಟ್ಟುವ ಕಾರ್ಯವಸ್ತುವಿನ ಪರಿಮಾಣವು ಅಧಿಕವಾಗಲು ಸಾಧ್ಯವಿಲ್ಲ. ಅವ್ಯಾಪ್ಯವೃತ್ತಿ (ಏಕದೇಶವೃತ್ತಿ) ಎಂದರೆ ನೀವು (ತಾರ್ಕಿಕರು) ಒಪ್ಪಿರುವ 'ಅಣುವು ನಿರಂಶ' (ನಿರವಯವ) ಎಂಬ ಪ್ರಮೇಯಕ್ಕೆ ಹಾನಿಯಾಗುತ್ತದೆ.

(ವ್ಯಾಪ್ಯವೃತ್ತಿ ಎಂದರೆ ಎಲ್ಲಾ ದೇಶದಲ್ಲೂ ವ್ಯಾಪಿಸಿ ಸಂಯೋಗ ಆಗುವುದು. ಅವ್ಯಾಪ್ಯವೃತ್ತಿ ಎಂದರೆ ಒಂದು ಭಾಗದಲ್ಲಿ ಮಾತ್ರ ಸಂಯೋಗ ಆಗುವುದು. ಸಂಯೋಗವೆಲ್ಲವೂ ಅವ್ಯಾಪ್ಯವೃತ್ತಿಯೇ ಆಗಿರುತ್ತದಾದ್ದರಿಂದ ವ್ಯಾಪ್ಯವೃತ್ತಿಸಂಯೋಗಕ್ಕೆ ವ್ಯತಿರೇಕದೃಷ್ಟಾಂತವನ್ನು ಮಾತ್ರ ಹೇಳಬಹುದು)

**सूत्रे वाशब्दस्तु चार्थः ।**

ಸೂತ್ರದಲ್ಲಿರುವ 'ವಾ' ಶಬ್ದಕ್ಕೆ 'ಚ' ಎಂದರ್ಥ. ಅಂದರೆ ಸಮುಚ್ಚಯ ಎಂದರ್ಥ.

**तथा च परमाणुभ्यो व्यणुकादिक्रमेण जगदुत्पत्तिवद्वैशेषिकाभ्युपगतं गगननित्यत्वादिकमन्यदप्यसमञ्जसमिति सूत्रार्थ इत्याहुः ।**

ರಾಮಾನುಜರ ಪ್ರಕಾರ ಈ ಸೂತ್ರದ ಅರ್ಥ ಹೀಗಾಗುತ್ತದೆ. ಪರಮಾಣುವಿನಿಂದ ದ್ವ್ಯಣುಕ, ದ್ವ್ಯಣುಕದಿಂದ ತ್ರ್ಯಣುಕ ಎಂಬುದಾಗಿ ವೈಶೇಷಿಕರು ಒಪ್ಪಿರುವ ಜಗದುತ್ಪತ್ತ್ಯಧಿಕರಣವು ಹೇಗೆ ಸಮಂಜಸವೋ ಹಾಗೇ ಅವರು ಒಪ್ಪಿರುವ ಆಕಾಶನಿತ್ಯತ್ವವೇ ಮೊದಲಾದ ಪ್ರಮೇಯಜಾತವೂ ಅಸಮಂಜಸ.

**तन्न ।**

ಈ ರೀತಿ ಅರ್ಥ ಹೇಳುವುದು ಸರಿಯಲ್ಲ.

**पञ्चमीनिर्दिष्टे ह्रस्वशब्दे षष्ठ्यन्तताया आवृत्तेश्च कल्प्यत्वात् ।**

ಸೂತ್ರದಲ್ಲಿ (ಹ್ರಸ್ವಪರಿಮಂಡಲಾಭ್ಯಾಂ) ಎಂಬಲ್ಲಿ ಹ್ರಸ್ವಪದವು ಪಂಚಮೀವಿಭಕ್ತಿಯಲ್ಲಿದೆ. ನಿಮ್ಮ ಪ್ರಕಾರ ಅರ್ಥ ಹೇಳುವಾಗ ಈ ಹ್ರಸ್ವಶಬ್ದವನ್ನು ಷಷ್ಠೀವಿಭಕ್ತಿಯನ್ನಾಗಿ ಪರಿವರ್ತಿಸಿ ಅರ್ಥ ಹೇಳಬೇಕು ಮತ್ತು ಹ್ರಸ್ವಶಬ್ದದ ಆವೃತ್ತಿಯನ್ನೂ ಮಾಡಿಕೊಳ್ಳಬೇಕು.

(ಪರಮಾಣುವಿನಿಂದ ಹ್ರಸ್ವದ ಜನ್ಮ. ಅದರಿಂದ ತ್ರ್ಯಣುಕದ ಜನ್ಮ ಎಂದಾಗ ಈ ಎರಡು ದೋಷಗಳು ಸ್ಪಷ್ಟವಾಗಿದೆ)

**किञ्च व्याप्यवृत्तित्वाव्याप्यवृत्तित्वविकल्पः किं व्यणुकसंयोगविषयः परमाणुसंयोगमात्रविषयो वा । नाद्यः । व्यणुकस्य सांशत्वेन तत्संयोगस्यैकदेशवृत्तित्वसम्भवात् । द्वितीये परिमण्डलाद्ध्रस्ववद्वेत्येव सूत्रणीयम् । अन्यत्तु निरर्थकम्।**

ಇನ್ನೊಂದು ದೋಷ ಏನೆಂದರೆ, ನೀವು ಹಿಂದೆ ಮಾಡಿರುವ ವ್ಯಾಪ್ಯವೃತ್ತಿಯೋ ಅವ್ಯಾಪ್ಯವೃತ್ತಿಯೋ ಎಂಬ ವಿಕಲ್ಪ ದ್ವ್ಯಣುಕಸಂಯೋಗವನ್ನು ಕುರಿತದ್ದೋ ಅಥವಾ ಕೇವಲ ಪರಮಾಣುಸಂಯೋಗವನ್ನು ಕುರಿತದ್ದೋ ? ದ್ವ್ಯಣುಕ ಸಂಯೋಗವನ್ನು ಕುರಿತು ಹೇಳಿದ್ದೇವೆ ಎಂದರೆ ಅದು ಸರಿಯಲ್ಲ, ಏಕೆಂದರೆ ದ್ವ್ಯಣುಕವು ಸಾವಯವವಾದ್ದರಿಂದ ಅದಕ್ಕೆ ಏಕದೇಶಸಂಯೋಗ ಕೂಡುತ್ತದೆ. ಹಾಗಾದರೆ ಪರಮಣುಸಂಯೋಗವನ್ನು ಮಾತ್ರ ಇಟ್ಟುಕೊಂಡು ಹೇಳಿದ್ದು ಎಂದರೆ ಆಗ ಸೂತ್ರದಲ್ಲಿ 'ಪರಿಮಂಡಲಾತ್ ಹ್ರಸ್ವವತ್' ಎಂಬುದಷ್ಟೇ ಸಾಕು, ಉಳಿದ ಅಂಶವೆಲ್ಲಾ ವ್ಯರ್ಥ.

**किञ्च गगननित्यत्वाभावस्येवाणुभ्यो जगजन्माभावस्यापि परं प्रति साध्यत्वाद्दृष्टान्तो न युक्तः ।**

**प्रकाशः –**

सूत्रार्थं च निराह – **किञ्चेति** ।। भामत्युक्तमाशङ्कते ।। **नन्विति** ।। **पृथिवीत्वादिनेति** ।। परमाणुत्वं विना पृथिवीत्वं घटादौ पृथिवीत्वं विना परमाणुत्वमाप्यपरमाणौ द्वयमपि पृथिवीपरमाणौ सङ्कीर्णमिति भावः ।। **मम तु नेति** ।। स प्रकारष्टीकादौ व्यक्त इति भावः ।।

ನಿಮ್ಮ ಪ್ರಕಾರ ಸೂತ್ರಾರ್ಥವೂ ಕೂಡುವುದಿಲ್ಲ ಎಂದು ತೋರಿಸುತ್ತಾರೆ 'ಕಿಂಚ' ಎಂಬುದರಿಂದ. (ಅಧಿಕರಣರಚನೆಯೂ ಸರಿಯಲ್ಲ, ಸೂತ್ರಾರ್ಥವೂ ಸರಿಯಲ್ಲ ಎಂದರ್ಥ) ಭಾಮತಿಯಲ್ಲಿ ಹೇಳುವ ಶಂಕೆಯನ್ನು ಮಾಡುತ್ತಿದ್ದಾರೆ 'ನನು' ಎಂಬುದರಿಂದ. (ಪರಮಾಣುತ್ವ ಜಾತಿಯನ್ನು ಒಪ್ಪಿದರೆ 'ಸಾಂಕರ್ಯ' ಹೇಗೆ ಬರುತ್ತದೆ ಎಂಬುದನ್ನು ಚಂದ್ರಿಕಾದಲ್ಲಿ ವಿವರಿಸಲಾಗಿದೆ) ನಮ್ಮ ಪ್ರಕಾರ ಅಧ್ಯಾಹಾರ ಏಕೆ ಇಲ್ಲ ಎಂಬುದನ್ನು ಟೀಕಾದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

### ರಾಮಾನುಜರ ಸೂತ್ರವ್ಯಾಖ್ಯಾನ ನಿರಾಕರಣೆ

**तात्पर्यचन्द्रिका**

**केचित्तु परिमण्डलात्परमाणुतो ह्रस्वस्य व्यणुकस्य तस्माच्च महद्दीर्घस्य त्र्यणुकादेर्जन्म तावदयुक्तम् ।**

ರಾಮಾನುಜರು ಹೀಗೆ ಹೇಳುತ್ತಾರೆ. ಪರಿಮಂಡಲವಾದ (ಪಾರಿಮಾಂಡಲ್ಯ ಎಂಬ ಪರಿಮಾಣವುಳ್ಳ) ಪರಮಾಣುವಿನಿಂದ ಹ್ರಸ್ವವಾದ ದ್ವ್ಯಣುಕದ ಜನ್ಮ ಅದರಿಂದ ಮಹತ್ ದೀರ್ಘವಾದ ತ್ರ್ಯಣುಕಾದಿಗಳ ಜನ್ಮ ಎಂಬುದು ಕೂಡುವುದಿಲ್ಲ.

**अणोरण्वन्तरसंयोगस्य व्याप्यवृत्तित्वे तत्कार्यपरिमाणाधिक्यायोगात् । एकदेशवृत्तित्वे चाणोर्निरंशत्वहानेः ।**

ಒಂದು ಪರಮಾಣುವಿಗೂ ಇನ್ನೊಂದು ಪರಮಾಣುವಿಗೂ ಆಗುವ ಸಂಯೋಗ ವ್ಯಾಪ್ಯವೃತ್ತಿಯೋ ಅಥವಾ ಅವ್ಯಾಪ್ಯವೃತ್ತಿಯೋ. ವ್ಯಾಪ್ಯವೃತ್ತಿ ಎಂದರೆ ಆಗ ಆ ಸಂಯೋಗದಿಂದ ಹುಟ್ಟುವ ಕಾರ್ಯವಸ್ತುವಿನ ಪರಿಮಾಣವು ಅಧಿಕವಾಗಲು ಸಾಧ್ಯವಿಲ್ಲ. ಅವ್ಯಾಪ್ಯವೃತ್ತಿ (ಏಕದೇಶವೃತ್ತಿ) ಎಂದರೆ ನೀವು (ತಾರ್ಕಿಕರು) ಒಪ್ಪಿರುವ 'ಅಣುವು ನಿರಂಶ' (ನಿರವಯವ) ಎಂಬ ಪ್ರಮೇಯಕ್ಕೆ ಹಾನಿಯಾಗುತ್ತದೆ.

(ವ್ಯಾಪ್ಯವೃತ್ತಿ ಎಂದರೆ ಎಲ್ಲಾ ದೇಶದಲ್ಲೂ ವ್ಯಾಪಿಸಿ ಸಂಯೋಗ ಆಗುವುದು. ಅವ್ಯಾಪ್ಯವೃತ್ತಿ ಎಂದರೆ ಒಂದು ಜಾಗದಲ್ಲಿ ಮಾತ್ರ ಸಂಯೋಗ ಆಗುವುದು. ಸಂಯೋಗವೆಲ್ಲವೂ ಅವ್ಯಾಪ್ಯವೃತ್ತಿಯೇ ಆಗಿರುತ್ತದಾದ್ದರಿಂದ ವ್ಯಾಪ್ಯವೃತ್ತಿಸಂಯೋಗಕ್ಕೆ ವ್ಯತಿರೇಕದೃಷ್ಟಾಂತವನ್ನು ಮಾತ್ರ ಹೇಳಬಹುದು)

**सूत्रे वाशब्दस्तु चार्थः ।**

ಸೂತ್ರದಲ್ಲಿರುವ 'ವಾ' ಶಬ್ದಕ್ಕೆ 'ಚ' ಎಂದರ್ಥ. ಅಂದರೆ ಸಮುಚ್ಚಯ ಎಂದರ್ಥ.

**तथा च परमाणुभ्यो व्यणुकादिक्रमेण जगदुत्पत्तिवद्वैशेषिकाभ्युपगतं गगननित्यत्वादिकमन्यदप्यसमञ्जसमिति सूत्रार्थ इत्याहुः ।**

ರಾಮಾನುಜರ ಪ್ರಕಾರ ಈ ಸೂತ್ರದ ಅರ್ಥ ಹೀಗಾಗುತ್ತದೆ. ಪರಮಾಣುವಿನಿಂದ ದ್ವ್ಯಣುಕ, ದ್ವ್ಯಣುಕದಿಂದ ತ್ರ್ಯಣುಕ ಎಂಬುದಾಗಿ ವೈಶೇಷಿಕರು ಒಪ್ಪಿರುವ ಜಗದುತ್ಪತ್ತ್ಯಧಿಕರಣವು ಹೇಗೆ ಸಮಂಜಸವೋ ಹಾಗೇ ಅವರು ಒಪ್ಪಿರುವ ಆಕಾಶನಿತ್ಯತ್ವವೇ ಮೊದಲಾದ ಪ್ರಮೇಯಜಾತವೂ ಅಸಮಂಜಸ.

**तन्न ।**

ಈ ರೀತಿ ಅರ್ಥ ಹೇಳುವುದು ಸರಿಯಲ್ಲ.

**पञ्चमीनिर्दिष्टे ह्रस्वशब्दे षष्ठ्यन्तताया आवृत्तेश्च कल्प्यत्वात् ।**

ಸೂತ್ರದಲ್ಲಿ (ಹ್ರಸ್ವಪರಿಮಂಡಲಾಭ್ಯಾಂ) ಎಂಬಲ್ಲಿ ಹ್ರಸ್ವಪದವು ಪಂಚಮೀವಿಭಕ್ತಿಯಲ್ಲಿದೆ. ನಿಮ್ಮ ಪ್ರಕಾರ ಅರ್ಥ ಹೇಳುವಾಗ ಈ ಹ್ರಸ್ವಶಬ್ದವನ್ನು ಷಷ್ಠೀವಿಭಕ್ತಿಯನ್ನಾಗಿ ಪರಿವರ್ತಿಸಿ ಅರ್ಥ ಹೇಳಬೇಕು ಮತ್ತು ಹ್ರಸ್ವಶಬ್ದದ ಆವೃತ್ತಿಯನ್ನೂ ಮಾಡಿಕೊಳ್ಳಬೇಕು.

(ಪರಮಾಣುವಿನಿಂದ ಹ್ರಸ್ವದ ಜನ್ಮ. ಅದರಿಂದ ತ್ರ್ಯಣುಕದ ಜನ್ಮ ಎಂದಾಗ ಈ ಎರಡು ದೋಷಗಳು ಸ್ಪಷ್ಟವಾಗಿದೆ)

**किञ्च व्याप्यवृत्तित्वाव्याप्यवृत्तित्वविकल्पः किं व्यणुकसंयोगविषयः परमाणुसंयोगमात्रविषयो वा । नाद्यः । व्यणुकस्य सांशत्वेन तत्संयोगस्यैकदेशवृत्तित्वसम्भवात् । द्वितीये परिमण्डलाद्ध्रस्ववद्वेत्येव सूत्रणीयम् । अन्यत्तु निरर्थकम्।**

ಇನ್ನೊಂದು ದೋಷ ಏನೆಂದರೆ, ನೀವು ಹಿಂದೆ ಮಾಡಿರುವ ವ್ಯಾಪ್ಯವೃತ್ತಿಯೋ ಅವ್ಯಾಪ್ಯವೃತ್ತಿಯೋ ಎಂಬ ವಿಕಲ್ಪ ದ್ವ್ಯಣುಕಸಂಯೋಗವನ್ನು ಕುರಿತದ್ದೋ ಅಥವಾ ಕೇವಲ ಪರಮಾಣುಸಂಯೋಗವನ್ನು ಕುರಿತದ್ದೋ ? ದ್ವ್ಯಣುಕ ಸಂಯೋಗವನ್ನು ಕುರಿತು ಹೇಳಿದ್ದೇವೆ ಎಂದರೆ ಅದು ಸರಿಯಲ್ಲ, ಏಕೆಂದರೆ ದ್ವ್ಯಣುಕವು ಸಾವಯವವಾದ್ದರಿಂದ ಅದಕ್ಕೆ ಏಕದೇಶಸಂಯೋಗ ಕೂಡುತ್ತದೆ. ಹಾಗಾದರೆ ಪರಮಣುಸಂಯೋಗವನ್ನು ಮಾತ್ರ ಇಟ್ಟುಕೊಂಡು ಹೇಳಿದ್ದು ಎಂದರೆ ಆಗ ಸೂತ್ರದಲ್ಲಿ 'ಪರಿಮಂಡಲಾತ್ ಹ್ರಸ್ವವತ್' ಎಂಬುದಷ್ಟೇ ಸಾಕು, ಉಳಿದ ಅಂಶವೆಲ್ಲಾ ವ್ಯರ್ಥ.

**किञ्च गगननित्यत्वाभावस्येवाणुभ्यो जगज्जन्माभावस्यापि परं प्रति साध्यत्वाद्दृष्टान्तो न युक्तः ।**

ಇನ್ನೊಂದು ದೋಷ ಏನೆಂದರೆ, ನೀವು ವೈಶೇಷಿಕರಿಗೆ ಅಣುವಿನಿಂದ ದ್ವ್ಯಣುಕ, ಈ ಕ್ರಮದಿಂದ ಜಗತ್ತಿನ ಉತ್ಪತ್ತಿಯು ಹೇಗೆ ಕೂಡುವುದಿಲ್ಲವೋ ಹಾಗೇ ನೀವು ಹೇಳಿದ ಆಕಾಶನಿತ್ಯತ್ವವೇ ಮೊದಲಾದುದು ಕೂಡುವುದಿಲ್ಲ ಎಂದು ಆರೋಪ ಮಾಡುತ್ತಿದ್ದೀರಿ. ಇಲ್ಲಿ ದೃಷ್ಟಾಂತವಾಗಿ ಹೇಳಿರುವ ಅಣುವಿನಿಂದ ಜಗತ್ತಿನ ಜನ್ಮದ ಅಭಾವ ಎಂಬುದು ವೈಶೇಷಿಕನಿಗೆ ಸಿದ್ಧವಲ್ಲ. ಅದನ್ನು ನೀವು ಅವನಿಗೆ ಸಾಧನೆ ಮಾಡಬೇಕು. ನಂತರ, ಆ ದೃಷ್ಟಾಂತದಿಂದ ಗಗನ ನಿತ್ಯತ್ವವನ್ನು ನಿರಾಕರಿಸಬೇಕು. ಹೀಗೆ (ಸಿದ್ಧವಲ್ಲದ) ದೃಷ್ಟಾಂತವನ್ನು ಹೇಳುವುದು ಸರಿಯಲ್ಲ.

**अपि च मदीयाह्रस्वपरिमण्डलपरिमाणयोः कार्यपरिमाणोत्पादकत्वे महद्दीर्घपरिमाणप्रतिबन्दीरूपा युक्तिः सूत्रारूढा ।**

ಇನ್ನೊಂದು ದೋಷ ಏನೆಂದರೆ ನಾವು ಈ ಸೂತ್ರದಲ್ಲಿ ಹೇಳಿರುವ ಯುಕ್ತಿಯು ಸೂತ್ರಾರೂಢವಾಗಿದೆ (ಸೂತ್ರಕಾರರು ಸೂಚಿಸಿದ್ದಾರೆ). ನಾವು ಹೇಳುವ ಯುಕ್ತಿ ಪ್ರತಿಬಂದೀರೂಪವಾಗಿದೆ. ಅದೇನೆಂದರೆ, ನೀವು (ತಾರ್ಕಿಕರು) ತ್ರ್ಯಣುಕದಿಂದ ಚತುರಣುಕಪರಿಮಾಣ ಹೇಗೆ ಹುಟ್ಟುತ್ತದೇ ಎಂದು ಹೇಳುತ್ತೀರೋ ಹಾಗೇ ಪರಮಾಣುಪರಿಮಾಣದಿಂದ ದ್ವ್ಯಣುಕಪರಿಮಾಣ, ದ್ವ್ಯಣುಕ ಪರಿಮಾಣದಿಂದ ತ್ರ್ಯಣುಕಪರಿಮಾಣ ಹುಟ್ಟಬೇಕು. ಇದು ಹುಟ್ಟುವುದಿಲ್ಲ ಎಂದರೆ, ಅದೂ ಹುಟ್ಟಲಾರದು ಎಂದು. ಈ ಯುಕ್ತಿಯು ಸೂತ್ರದಲ್ಲಿ ದೃಷ್ಟಾಂತ ಹೇಳಿರುವ ಮೂಲಕ ಸೂಚಿತವಾಗಿದೆ.

**संयोगस्य व्याप्यवृत्तित्वमित्यादिका त्वदीया तु न ।**

ಆದರೆ ನೀವು ಹೇಳುವ ಯುಕ್ತಿಯು ಸೂತ್ರಾರೂಢವಾಗಿಲ್ಲ. ನೀವು ಹೇಳುವ ಪರಮಾಣುಸಂಯೋಗವು ವ್ಯಾಪ್ಯವೃತ್ತಿಯೋ, ಅವ್ಯಾಪ್ಯವೃತ್ತಿಯೋ ಎರಡೂ ಕೂಡುವುದಿಲ್ಲ ಎಂಬ ಯುಕ್ತಿಯು ಸೂತ್ರದಿಂದ ಎಲ್ಲಿಯೂ ಸೂಚಿತವಾಗಿಲ್ಲ.

**मम पक्षे सूत्रे त्वप्रत्ययायोगस्तु ''प्रचयविशेषाच्च महत्'' इति कणादसूत्रानुसारेण ।**

ಪ್ರಶ್ನೆ- ನಿಮ್ಮ ಪ್ರಕಾರ ಇದು ಶಬ್ದದೋಷ. ಸೂತ್ರದಲ್ಲಿರುವ ಮಹತ್, ದೀರ್ಘ, ಹ್ರಸ್ವ, ಪರಿಮಂಡಲ ಎಂಬ ನಾಲ್ಕು ಶಬ್ದಗಳು ದ್ರವ್ಯವಾಚಕಗಳಾಗಿವೆ. ಆದರೆ, ನೀವು ಈ ನಾಲ್ಕು ಶಬ್ದಗಳಿಗೆ ಪರಿಮಾಣ ಪರವಾಗಿ ಅರ್ಥಮಾಡಿದ್ದೀರಿ. ಅಂದರೆ, ಮಹತ್ ಶಬ್ದಕ್ಕೆ ಮಹತ್ ಪರಿಮಾಣ ಎಂಬುದಾಗಿ. ಆಗ ಸೂತ್ರವೂ ''ಮಹತ್ವ ದೀರ್ಘವತ್ ಹ್ರಸ್ವಪರಿಮಂಡಲವತ್ವಾಭ್ಯಾಂ'' ಎಂಬುದಾಗಿ ಇರಬೇಕು. ಅಥವಾ ಭಾವಪ್ರಧಾನನಿರ್ದೇಶ ಎನ್ನಬೇಕು. ಇದು ಗೌರವ.

ಉತ್ತರ - ಸೂತ್ರಕಾರರು ಸೂತ್ರದಲ್ಲಿ 'ತ್ವ' ಪ್ರತ್ಯಯ ಇಲ್ಲದೇ ಪ್ರಯೋಗ ಮಾಡಿರುವುದು ವೈಶೇಷಿಕ ಸೂತ್ರಗಳನ್ನು ಬರೆದಿರುವ ಕಣಾದರನ್ನು ಅನುಸರಿಸಿ. ಕಣಾದರು ಒಂದು ಸೂತ್ರದಲ್ಲಿ 'ಪ್ರಚಯವಿಶೇಷಾಚ್ಚ ಮಹತ್' ಎಂಬುದಾಗಿ ಹೇಳಿದ್ದಾರೆ. ಇಲ್ಲಿ 'ಮಹತ್' ಶಬ್ದಕ್ಕೆ ಮಹತ್ವ ಎಂದರ್ಥ. ಅವರೇ ಹಾಗೆ ಹೇಳಿರುವುದರಿಂದ ಅವರ ಖಂಡನೆ ಹೊರಟಿರುವ ಸೂತ್ರದಲ್ಲಿ ಅವರ ಪ್ರಯೋಗವನ್ನ

ಅನುಸರಿಸಿ ಪ್ರಯೋಗ ಮಾಡಿರುವುದು ತಪ್ಪಲ್ಲ. ಹಾಗಾಗಿ ಸೂತ್ರದಲ್ಲಿರುವ ಪದಗಳು ಭಾವಪ್ರಧಾನನಿರ್ದೇಶ ಎಂದಿಟ್ಟುಕೊಳ್ಳಬೇಕು.

**प्रकाशः –**

**केचित्त्विति ।। ''असमञ्जसमिति वर्तते । वाशब्दश्चार्थे ।**

'ಅಸಮಂಜಸಮ್' ಎಂಬುದನ್ನು (ಹಿಂದಿನಿಂದ) ಇಲ್ಲಿಯೂ ಇಟ್ಟುಕೊಳ್ಳಬೇಕು. (ಕೇಚಿತ್‌ಕಾರರ ಮತವೂ ಅಸಮಂಜಸ ಎಂದರ್ಥ) 'ವಾ' ಶಬ್ದದಂತೆ ಅರ್ಥ ಹೇಳಬೇಕು. ಅಂದರೆ ಸಮುಚ್ಚಯ ಎಂದರ್ಥ.

**प्रकाशः –** ह्रस्वपरिमण्डलाभ्यां द्व्यणुकपरमाणुभ्यां महद्दीर्घवत्त्र्यणुकोत्पत्तिवादवदन्यच्च तदभ्युपगतं सर्वमसमञ्जसम् । परमाणुभ्यो द्व्यणुकादिक्रमेण जगदुत्पत्तिवादवदन्यदसमञ्जसम्'' इति तदीयभाष्यं हृदि कृत्वाऽर्थमनुवदति ।। **परिमण्डलादिति ।।**

ರಾಮಾನುಜರ ಭಾಷ್ಯದಲ್ಲಿ ಹೀಗಿದೆ. ಹ್ರಸ್ವಪರಿಮಂಡಲ ಶಬ್ದಗಳಿಗೆ ದ್ವ್ಯಣುಕ ಪರಮಾಣು ಎಂದರ್ಥ. ಇವುಗಳಿಂದ ಮಹತ್‌ದೀರ್ಘ ಶಬ್ದಕ್ಕೆ ತ್ರ್ಯಣುಕ ಎಂದರ್ಥ. ಅಂದರೆ, ದ್ವ್ಯಣುಕ ಪರಮಾಣುಗಳಿಂದ ತ್ರ್ಯಣುಕದ ಉತ್ಪತ್ತಿಯು ಹೇಗೆ ಸರಿಯಲ್ಲವೋ ಹಾಗೇ ವೈಶೇಷಿಕರು ಹೇಳುವ ಯಾವ ಪ್ರಮೇಯವೂ ಸರಿಯಲ್ಲ. ಪರಮಾಣುಗಳಿಂದ ದ್ವ್ಯಣುಕಾದಿಕ್ರಮದಿಂದ ಜಗತ್ತಿನ ಉತ್ಪತ್ತಿ ಹೇಗೆ ಕೂಡುವುದಿಲ್ಲವೋ ಹಾಗೇ ಉಳಿದೆಲ್ಲಾ ಪ್ರಮೇಯವೂ ಕೂಡುವುದಿಲ್ಲ.

ಈ ಭಾಷ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ಅವರ ಅಭಿಪ್ರಾಯವನ್ನು ಅನುವಾದ ಮಾಡುತ್ತಿದ್ದಾರೆ 'ಪರಿಮಂಡಲಾತ್' ಎಂಬ ವಾಕ್ಯದಿಂದ.

**प्रकाशः –** यद्यपि तद्भाष्यव्याख्याने श्रुतप्रकाशे ''सूत्रे ह्रस्वपरिमण्डलशब्दाभ्यां कारणद्वयमुक्तम् । महद्दीर्घशब्दोऽणुह्रस्वस्य द्व्यणुकस्याप्युपलक्षणम् । द्व्यणुकपरमाणुभ्यां त्र्यणुकद्व्यणुकादिकार्यवदन्यच्चासमञ्जसमित्यर्थ'' इत्येवोक्तम् । तथापि ''परमाणुभ्यो द्व्यणुकादिक्रमेण'' इत्यादिभाष्यपर्यालोचनयैवमेव सूत्रस्यार्थो युक्त इति भावेन परमाणुतो ह्रस्वस्येति, तस्माच्चेति, ह्रस्वशब्दस्य षष्ठ्यन्तत्वं पञ्चम्यन्तत्वमावृत्तिं चाश्रित्यार्थोऽनूदित इति ज्ञेयम् ।

ಪ್ರಶ್ನೆ - ನೀವು ಮಾಡಿರುವ ಅನುವಾದ ಸರಿಯಲ್ಲ, ಏಕೆಂದರೆ, ಭಾಷ್ಯವ್ಯಾಖ್ಯಾನವಾದ ಶ್ರುತಪ್ರಕಾಶದಲ್ಲಿ ಬೇರೆ ರೀತಿ ಹೇಳಿದ್ದಾರೆ. ಅದೇನೆಂದರೆ, ಸೂತ್ರದಲ್ಲಿರುವ 'ಹ್ರಸ್ವಪರಿಮಂಡಲಾಭ್ಯಾಂ' ಎಂಬ ಪದದಿಂದ ಎರಡು ಕಾರಣಗಳನ್ನು ಹೇಳುತ್ತಿದ್ದಾರೆ. ಇನ್ನು 'ಮಹತ್‌ದೀರ್ಘ' ಎಂಬ ಸೂತ್ರದಲ್ಲಿರುವ ಶಬ್ದ, ಅಣು ಹಾಗೂ ಹ್ರಸ್ವವಾದ ದ್ವ್ಯಣುಕಕ್ಕೂ ಉಪಲಕ್ಷಣ (ಮಹತ್‌ದೀರ್ಘ ಶಬ್ದದಿಂದ ದ್ವ್ಯಣುಕವನ್ನೂ ಇಟ್ಟುಕೊಳ್ಳಬೇಕು). ಆಗ ದ್ವ್ಯಣುಕ ಪರಮಾಣುಗಳಿಂದ ತ್ರ್ಯಣುಕದ್ವ್ಯಣುಕಾದಿ ಕಾರ್ಯವು ಹೇಗೆ

ಅನುಪಪನ್ನವೋ ಹಾಗೇ ಉಳಿದದ್ದೂ ಅಸಮಂಜಸ ಎಂದು ಹೇಳಲಾಗಿದೆ (ಹೀಗೆ ಹೇಳಿದಾಗ ನಾವು ಹೇಳಿರುವ, ಹ್ರಸ್ವ ಶಬ್ದಕ್ಕೆ ವಿಭಕ್ತಿವಿಪರಿಣಾಮ, ಆವೃತ್ತಿ ಇತ್ಯಾದಿ ದೋಷಗಳು ಬರುವುದಿಲ್ಲ ಎಂದು ಭಾವ)

ಉತ್ತರ - ಶ್ರುತಪ್ರಕಾಶದ ಪ್ರಕಾರ ಸರಿಯಾದರೂ ಭಾಷ್ಯವನ್ನೇ ನೋಡಿದಾಗ ಅಲ್ಲಿರುವ 'ಪರಮಾಣುಭ್ಯೋ ದ್ವ್ಯಣುಕಾದಿಕ್ರಮೇಣ' ಎಂಬ ಭಾಗದಿಂದ ನಾವು ಹೇಳಿರುವ ಅರ್ಥವೇ ತೋರುತ್ತಿದೆ. ಆಗ ಪರಮಾಣುವಿನಿಂದ ಹ್ರಸ್ವದ (ಜನ್ಮ) ಆದರಿಂದ (ತ್ರ್ಯಣುಕದ ಜನ್ಮ) ಎಂಬ ಅರ್ಥ ಬರುವುದರಿಂದ ಹ್ರಸ್ವ ಶಬ್ದವು ಮೊದಲು ಷಷ್ಠ್ಯಂತವಾಗಿ ನಂತರ ಪಂಚಮ್ಯಂತವಾಗಿದೆ ಹಾಗೂ ಆವೃತ್ತಿಯನ್ನೂ ಇಟ್ಟುಕೊಳ್ಳಬೇಕು. ಆದ್ದರಿಂದ ನಮ್ಮ ಅನುವಾದ ಭಾಷ್ಯಾನುಸಾರಿಯಾಗಿದೆ ಎಂದು ತಿಳಿಯಬೇಕು.

**प्रकाशः – श्रुतप्रकाशोक्तमाह –गगननित्यत्वादिकमिति ।।**

ಶ್ರುತಪ್ರಕಾಶದಲ್ಲಿರುವುದನ್ನು ಹೇಳುತ್ತಿದ್ದಾರೆ 'ಗಗನನಿತ್ಯತ್ವ' ಎಂಬ ವಾಕ್ಯದಿಂದ.

**प्रकाशः – षष्ठ्यन्तताया इति** ।। महद्दीर्घशब्दस्य द्व्यणुकोपलक्षकत्वेऽपि लक्षणादोषो व्यक्तः । त्र्यणुकव्द्यणुकवद्वेति निर्देशापाताच्चेति व्यक्तम् । महादीर्घवदिति वाच्ये महद्दीर्घवदिति क्लिष्टं च ।

ಶ್ರುತಪ್ರಕಾಶರೀತ್ಯಾ ಮಹತ್‌ದೀರ್ಘಶಬ್ದ ದ್ವ್ಯಣುಕಕ್ಕೂ ಉಪಲಕ್ಷಣ ಎಂದು ಇಟ್ಟುಕೊಂಡರೂ ಲಕ್ಷಣಾವೃತ್ತಿಯ ಅಂಗೀಕಾರ ಎಂಬ ದೋಷ ಇದ್ದೇ ಇದೆ. ಸೂತ್ರದಲ್ಲಿ ಮಹತ್‌ದೀರ್ಘ ಶಬ್ದವು ದ್ವ್ಯಣುಕಕ್ಕೂ ಉಪಲಕ್ಷಣ ಎಂದಾದರೆ 'ತ್ರ್ಯಣುಕದ್ವ್ಯಣುಕವತ್' ಎಂದೇ ಸೂತ್ರ ನಿರ್ದೇಶ ಮಾಡಬಹುದಾಗಿತ್ತು ಎಂಬ ದೋಷವೂ ಸ್ಪಷ್ಟವಾಗಿದೆ. ಮಹತ್‌ದೀರ್ಘ ಶಬ್ದದಲ್ಲಿ ನೀವು ಹೇಳುವ ಪ್ರಕಾರ ಕರ್ಮಧಾರಯಸಮಾಸ. 'ಮಹಚ್ಚ ತತ್ ದೀರ್ಘಂ ಚ' ಎಂಬುದಾಗಿ. ಆಗ ಮಹಾದೀರ್ಘಂ ಎಂದಾಗಬೇಕಾಗುತ್ತದೆ. 'ಮಹಾಪುರುಷ' ಎಂಬಲ್ಲಿಯಂತೆ. ಆದರೆ ಸೂತ್ರದಲ್ಲಿ 'ಮಹತ್ ದೀರ್ಘ' ಎಂದಿದೆ. ಆದ್ದರಿಂದ ಇಲ್ಲಿ ದ್ವಂದ್ವಸಮಾಸ ಎಂದು ತಿಳಿದುಬರುತ್ತದೆ. ಇಲ್ಲಿ ಕರ್ಮಧಾರಯ ಸಮಾಸವಾದರೂ ಸೌತ್ರತ್ವಾತ್ ಸಾಧುತ್ವವನ್ನು ಇಟ್ಟುಕೊಂಡು. ನಮ್ಮ ರೀತ್ಯಾ ಸ್ವರಸವಾಗಿ ಕೂಡಿಸಲು ಬರುವಾಗ ಕ್ಲಿಷ್ಟಕಲ್ಪನೆ ಅನಾವಶ್ಯಕ.

(ಆನ್-ಮಹತಃ ಸಮಾನಾಧಿಕರಣಜಾತೀಯಯೋಃ (೬.೩.೪೬) ಎಂಬ ಸೂತ್ರದಿಂದ ಸಮಾನಾಧಿಕರಣತತ್ಪುರುಷ (ಕರ್ಮಧಾರಯ) ಸಮಾಸದಲ್ಲಿ ಮಹತ್ ಶಬ್ದಕ್ಕೆ ಆಕಾರಾದೇಶ ಬರುತ್ತದೆ.

**प्रकाशः** – दोषान्तरं चाह – **किञ्चेति** ।। न केवलं निरर्थकमयुक्तं चेदं सूत्रमित्याह – **किञ्चेति** ।। **मदीयेति** ।। युक्तिरित्यन्वयः । परिमाणपरत्वे महत्त्वदीर्घत्वेत्यादिनिर्देशस्स्यादित्यतस्सुधोक्तमेव समाधिमाह – **मम पक्ष इति** ।।

ಇನ್ನೊಂದು ದೋಷವನ್ನು ಹೇಳುತ್ತಿದ್ದಾರೆ 'ಕಿಂಚ' ಎಂಬ ವಾಕ್ಯದಿಂದ. ನಿಮ್ಮ ಪ್ರಕಾರ ಈ ಸೂತ್ರದಲ್ಲಿರುವ 'ಮಹತ್‌ದೀರ್ಘವತ್' ಎಂಬ ಅಂಶ ವ್ಯರ್ಥ. ಅಷ್ಟೇ ಅಲ್ಲ ಅಯುಕ್ತವೂ ಆಗಿದೆ. ಅದನ್ನು

ಇಟ್ಟುಕೊಂಡರೆ ಸೂತ್ರಾರ್ಥ ಸರಿಯಾಗುವುದಿಲ್ಲ ಎಂದರ್ಥ ಮೂಲದಲ್ಲಿರುವ 'ಮದೀಯಾ' ಎಂಬ ಶಬ್ದವನ್ನು 'ಯುಕ್ತಿಃ' ಎಂಬ ಪದದೊಂದಿಗೆ ಅನ್ವಯ ಮಾಡಿಕೊಳ್ಳಬೇಕು. (ಸಿದ್ಧಾಂತಿಗಳಾದ) ನಿಮ್ಮ ಪ್ರಕಾರ ಸೂತ್ರದಲ್ಲಿರುವ 'ಮಹತ್‌ದೀರ್ಘ' ಮೊದಲಾದ ಶಬ್ದಗಳು ಪರಿಮಾಣಪರವಾಗಿದೆಯಾದ್ದರಿಂದ ಸೂತ್ರದಲ್ಲಿ 'ಮಹತ್‌ದೀರ್ಘವತ್' ಎಂದಿರಬೇಕಾಗಿತ್ತು ಎಂದ ಆಕ್ಷೇಪ ಮಾಡಿದರೆ ಅದಕ್ಕೆ ಸುಧಾದಲ್ಲಿ ಹೇಳಿರುವ ಪರಿಹಾರವನ್ನೇ ವ್ಯಾಸರಾಜರೂ ಹೇಳುತ್ತಿದ್ದಾರೆ 'ಮಮ ಪಕ್ಷೇ' ಎಂಬ ಗ್ರಂಥದಿಂದ.

**प्रकाशः** – ''कारणबहुत्वात्कारणमहत्त्वात्प्रचयविशेषाच्च महत्'' इति कणादसूत्रेत्यर्थः ।

ಕಣಾದರು ಹೇಳಿರುವ ಪೂರ್ಣ ಸೂತ್ರ ಹೀಗಿದೆ - ''ಕಾರಣಬಹುತ್ವಾತ್ಕಾರಣಮಹತ್ತ್ವಾತ್ಪ್ರಚಯ-ವಿಶೇಷಾಚ್ಚ ಮಹತ್''

### ಭಾಮತಿಯಲ್ಲಿ ಮಾಡಿದ ವ್ಯಾಖ್ಯಾನವೂ ಅಯುಕ್ತ

## तात्पर्यचन्द्रिका

**यच्चोक्तं परैः अणुष्वाद्यकर्मणो हेत्वभ्युपगमेऽनभ्युपगमे च न कर्मेति वा कर्महेतोरदृष्टस्याणुगतत्व आत्मगतत्वे च न कर्मेति वा सृष्टिकाले संयोगोत्पत्त्यर्थं संहारकाले विभागोत्पत्त्यर्थं च न कर्मेति वा द्वितीयेऽधिकरण आद्यसूत्रस्य त्रेधार्थ इति तन्न ।**

''ಉಭಯಥಾಪಿ ನ ಕರ್ಮಾತಸ್ತದಭಾವಃ'' ಎಂಬ ಸೂತ್ರಕ್ಕೆ ಪರರು ಏನು ಅರ್ಥ ಹೇಳಿದ್ದಾರೋ ಅದು ತಪ್ಪು. ಅಣುವಿನಲ್ಲಿ ಉಂಟಾಗುವ ಮೊದಲ ಕರ್ಮಕ್ಕೆ ಕಾರಣವಿದೆ ಎಂದಾಗಲೀ, ಇಲ್ಲ ಎಂದಾಗಲೀ ಒಪ್ಪಿಕೊಂಡರೂ ಕರ್ಮ ಕೂಡುವುದಿಲ್ಲ (ಇದು ಮೊದಲನೇ ಅರ್ಥ). ಅಥವಾ ಅಣುವಿನಲ್ಲಿ ಆಗುವ ಕರ್ಮಕ್ಕೆ ಅದೃಷ್ಟವನ್ನು ಹೇತು ಎಂದು ಹೇಳಿದರೆ ಆ ಅದೃಷ್ಟವು ಅಣುವಿನಲ್ಲಿದೆಯೋ ಅಥವಾ ಆತ್ಮನಲ್ಲಿದೆಯೋ? ಎಂಬ ವಿಕಲ್ಪ ಕೂಡುವುದಿಲ್ಲವಾದ್ದರಿಂದ ಕರ್ಮ ಕೂಡುವುದಿಲ್ಲ (ಇದು ಎರಡನೇ ಅರ್ಥ) ಅಥವಾ ಅಣುವಿನಲ್ಲಿ ಉಂಟಾಗುವ ಕರ್ಮ ಸೃಷ್ಟಿಕಾಲದಲ್ಲಿ ಸಂಯೋಗಕ್ಕೋಸ್ಕರವೋ ಅಥವಾ ಪ್ರಳಯಕಾಲದಲ್ಲಿ ವಿಭಾಗಕ್ಕೋಸ್ಕರವೋ ? ಎಂಬ ವಿಕಲ್ಪ ಕೂಡುವುದಿಲ್ಲವಾದ್ದರಿಂದ ಅಣುವಿನಲ್ಲಿ ಕರ್ಮ ಕೂಡುವುದಿಲ್ಲ (ಇದು ಮೂರನೇ ಅರ್ಥ) ಈ ಮೂರೂ ಅರ್ಥ ಸರಿಯಲ್ಲ. ಈ ಸೂತ್ರವು ಪರರೀತ್ಯಾ ಎರಡನೇ ಅಧಿಕರಣದ ಮೊದಲ ಸೂತ್ರ.

**आद्येऽनभ्युपगमपक्षस्य द्वितीये परमाणुगतत्वपक्षस्य चात्यन्तासम्भवित्वात् ।**

ಮೊದಲನೇ ಪಕ್ಷವನ್ನು ಗಮನಿಸಿದಾಗ ಅಲ್ಲಿ ಪರಮಾಣುಕರ್ಮಕ್ಕೆ ಕಾರಣವಿಲ್ಲ ಎಂಬ ವಿಕಲ್ಪ ಅತ್ಯಂತ ಅಸಂಭಾವಿತ. (ಹಾಗಾಗಿ ಅಣುವಿನಲ್ಲಿ ಉಂಟಾಗುವ ಕರ್ಮಕ್ಕೆ ಕಾರಣವಿದೆ ಎಂಬ ಪಕ್ಷ ಗ್ರಾಹ್ಯವಾಗುತ್ತದೆ)

**द्वितीयेऽदृष्टस्याचेतनस्य चेतनानधिष्ठितस्याप्रवृत्तेरिति त्वदुक्तस्य हेतोरसिद्धेः ।**

ಅಣುವಿನಲ್ಲಿರುವ ಕರ್ಮಕ್ಕೆ ಅದೃಷ್ಟವನ್ನು ಕಾರಣ ಎಂದು ಒಪ್ಪಿ ಅದು ಅಣುವಿನಲ್ಲಿದೆಯೋ, ಆತ್ಮನಲ್ಲಿದೆಯೋ ಎಂಬ ಪಕ್ಷವೂ ಸರಿಯಲ್ಲ. ಏಕೆಂದರೆ, ಅದೃಷ್ಟ ಜಡ. ಜಡವಾದ ವಸ್ತುವು ಚೇತನನಿಂದ ಅಧಿಷ್ಠಿತವಾಗದೇ ಇದ್ದರೆ ಅದು ಕಾರ್ಯೋತ್ಪತ್ತಿಗೆ ನಿಮಿತ್ತ ಆಗುವುದಿಲ್ಲ. ಈ ಅದೃಷ್ಟವು ಚೇತನ ಅನಧಿಷ್ಠಿತ ಎಂದು ನೀನು ಹೇಳುವ 'ಅಪ್ರವೃತ್ತೇಃ' ಎಂಬ ಹೇತುವು ಅಸಿದ್ಧ.

**अदृष्टमीश्वराधिष्ठितमिति हि तन्मतम् ।**

ಅದೃಷ್ಟವು ಈಶ್ವರಾಧಿಷ್ಠಿತ ಎಂಬುದಾಗಿ ತಾರ್ಕಿಕರು ಒಪ್ಪಿದ್ದಾರೆ. (ಹಾಗಾಗಿ ಅದೃಷ್ಟಚೇತನ ಅನಧಿಷ್ಠಿತ ಎಂಬುದು ಅಸಿದ್ಧ) ಅಧಿಷ್ಠಿತ ಶಬ್ದಕ್ಕೆ ಪ್ರೇರಿತ ಎಂದರ್ಥ.

**तृतीये उभयार्थकर्माभाव इति सूत्रणीयम् ।**

ಮೂರನೇ ಯೋಜನಾಪ್ರಕಾರ ಸೂತ್ರವು "ಉಭಯಾರ್ಥಕರ್ಮಾಭಾವಃ" ಎಂದಿರಬೇಕಾಗಿತ್ತು. ಸಂಯೋಗಕ್ಕಾಗಲೀ, ವಿಭಾಗಕ್ಕಾಗಲೀ ಕರ್ಮ ಕೂಡುವುದಿಲ್ಲ ಎಂದು ಅರ್ಥ ಹೇಳುವುದರಿಂದ. ('ಉಭಯಥಾ' ಎಂಬ ಶಬ್ದಕ್ಕೆ 'ಉಭಯಾರ್ಥ' ಎಂಬ ಅರ್ಥ ಹೇಳುವುದು ಕ್ಲಿಷ್ಟ ಎಂದು ಭಾವ)

**मम मत इव सूत्रे हेत्वसूचनान्न्यूनता च ।**

ನಿಮ್ಮ ಪ್ರಕಾರ ಸೂತ್ರದಲ್ಲಿ ಹೇತು ಸೂಚಿತವಾಗಿಲ್ಲ. ನಮ್ಮ ಪ್ರಕಾರ ಅರ್ಥ ಹೇಳಿದರೆ ಹೇತುವು ಸೂತ್ರದಲ್ಲಿ ಸೂಚಿತವಾಗಿದೆ. (ನೀವು ಹೇಳುವ ಹೇತು ಏನೆಂದರೆ, ಪರಮಾಣು ಕರ್ಮಕ್ಕೆ ಅದೃಷ್ಟವನ್ನು ಕಾರಣ ಎಂದು ಹೇಳಿದರೆ ಅದೃಷ್ಟವು ಚೇತನ ಅನಧಿಷ್ಠಿತವಾಗಿದೆ ಆದ್ದರಿಂದ ಅದಕ್ಕೆ ಕಾರಣತ್ವ ಕೂಡುವುದಿಲ್ಲ ಎಂಬ ಹೇತುವು ಸೂತ್ರದಲ್ಲಿ ಎಲ್ಲಿಯೂ ಸೂಚಿತವಾಗಿಲ್ಲ)

**तस्मान्मम रीत्या समवाय्यसमवायिकारणनिरासकसूत्रयोर्मध्यस्थमिदं सूत्रमवश्यनिरसनीयस्य सर्वव्यवस्थापकत्वेन पराभिप्रेतस्येश्वरेच्छानिमित्तत्वस्य निरासकम् ।**

ಹಾಗಾಗಿ (ನಿಮ್ಮ ಸೂತ್ರಾರ್ಥ ಸರಿಯಲ್ಲವಾದ್ದರಿಂದ) ನಾವು ಹೇಳುವಂತೆ ಈ ಸೂತ್ರವು "ಮಹತ್ ದೀರ್ಘವತ್" ಎಂಬ ಅಸಮವಾಯಿಕರಣ ನಿರಾಸಕ ಸೂತ್ರ, ಹಾಗೂ "ಸಮವಾಯಾಭ್ಯುಪಗಮಾತ್" ಎಂಬ ಸಮವಾಯಿಕಾರಣನಿರಾಸಕ ಸೂತ್ರದ ಮಧ್ಯದಲ್ಲಿ ಇರುವುದರಿಂದ ನಿಮತ್ತಕಾರಣನಿರಾಸಕ ಎಂದು ಹೇಳಬೇಕು. ಈ ನಿಮಿತ್ತಕಾರಣವು ಅವಶ್ಯ ನಿರಸನೀಯವಾಗಿದೆ. ಅವರು ಹೇಳುವ ನಿಮಿತ್ತಕಾರಣ ಸರ್ವಕಾರ್ಯವ್ಯವಸ್ಥಾಪಕವಾದ ಈಶ್ವರನ ಇಚ್ಛಾ. (ಈ ಇಚ್ಛೆಯು ಸಿಸೃಕ್ಷಾರೂಪವಾಗಿದೆ)

**प्रकाशः –**

''उभयथापि न कर्मातस्तदभाव'' इति सूत्रार्थं त्रेधा भामत्युक्तमनूद्य निराह – **यच्चेति ।।**

''ಉಭಯಥಾಪಿ ನ ಕರ್ಮ'' ಎಂಬ ಸೂತ್ರಕ್ಕೆ ಭಾಮತೀಗ್ರಂಥದಲ್ಲಿ ಹೇಳಿರುವ ಮೂರು ಅರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ 'ಯಚ್ಚ' ಎಂಬ ಗ್ರಂಥದಿಂದ.

**प्रकाशः** – हेत्वभ्युपगमे कुतो न कर्मेत्यत आह – **कर्महेतोरिति ।।**

ಪರಮಾಣು ಕರ್ಮಕ್ಕೆ ಕಾರಣ ಒಪ್ಪದಿರುವುದು ಅತ್ಯಂತ ಅಸಂಭಾವತ ಎಂದಾದರೆ ಆಗ ಕಾರಣ ಒಪ್ಪಿದರೆ ಆಗಲೂ ಕರ್ಮ ಕೂಡುವುದಿಲ್ಲ ಎಂಬುದು ಹೇಗೆ ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಉತ್ತರವನ್ನು 'ಕರ್ಮಹೇತೋಃ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – ''उभयथापि तस्याचेतनस्य चेतनानधिष्ठितस्याप्रवृत्तेः'' इति भामत्युक्त एव हेतुरस्मिन्पक्षे तृतीयपक्षे च ध्येयः ।।

ಭಾಮತಿಯಲ್ಲಿ ಎರಡನೇ, ಮೂರನೇ ಪಕ್ಷದಲ್ಲಿ ಕರ್ಮ ಕೂಡುವುದಿಲ್ಲ ಎಂಬುದಕ್ಕೆ ಹೇತುವನ್ನು ಹೇಳಿದ್ದಾರೆ. ಪರಮಾಣು ಕರ್ಮಕ್ಕೆ ಅದೃಷ್ಟವನ್ನು ಕಾರಣ ಎಂದು ಹೇಳಲು ಬರುವುದಿಲ್ಲ. ಏಕೆಂದರೆ, ಅದೃಷ್ಟ ಅಚೇತನ. ಅಚೇತನವು ಚೇತನ ಅನಧಿಷ್ಠಿತವಾದರೆ (ಅಪ್ರೇರಿತವಾದರೆ) ಆಗ ಅದಕ್ಕೆ ಪ್ರವೃತ್ತಿ ಕೂಡುವುದಿಲ್ಲ.

ಮೂರನೇ ಪಕ್ಷದಲ್ಲಿಯೂ ಇದೇ ಹೇತು ಸಂಯೋಗಕ್ಕಾಗಲೀ, ವಿಭಾಗಕ್ಕಾಗಲೀ ಕರ್ಮ ಒಪ್ಪಲು ಸಾಧ್ಯವಿಲ್ಲ. ಒಂದು ವೇಳೆ ಒಪ್ಪಿದರೂ ಅದು ಸಕಾರಣವೋ, ನಿಷ್ಕಾರಣವೋ ನಿಷ್ಕಾರಣ ಎಂಬುದು ಅಸಾಧ್ಯ ಕಾರ್ಯ ಎಂದ ಮೇಲೆ ಕಾರಣ ಇರಲೇಬೇಕು. ಸಕಾರಣವಾದರೆ ಏನು ಕಾರಣ. ಅದೃಷ್ಟ ಎಂದರೆ, ಆ ಅದೃಷ್ಟವು ಅಣುವಿನಲ್ಲಿದೆಯೋ, ಆತ್ಮನಲ್ಲಿದೆಯೋ. ಅಣುವಿನಲ್ಲಿದೆ ಎಂಬುದು ಅಪ್ರಸಿದ್ಧ. ಆತ್ಮನಲ್ಲಿದೆ ಎಂದರೂ ಅದು ಚೇತನ ಅನಧಿಷ್ಠಿತವಾಗಿದೆ ಆದ್ದರಿಂದ ಅದಕ್ಕೆ ಪ್ರವೃತ್ತಿ ಕೂಡುವುದಿಲ್ಲ. (ಅದೃಷ್ಟವು ಜೀವನಲ್ಲಿದ್ದರೂ ಜೀವ ಆ ಅದೃಷ್ಟಕ್ಕೆ ಪ್ರೇರಕನಲ್ಲ. ಹಾಗಾಗಿ ಜೀವನಲ್ಲಿದ್ದರೂ ಅದು ಚೇತನ ಅನಧಿಷ್ಠಿತವಾಗಿದೆ. 'ಅಧಿಷ್ಠಿತ' ಶಬ್ದಕ್ಕೆ 'ಪ್ರೇರಿತ' ಎಂದರ್ಥ)

**प्रकाशः** – **त्रेधेति** ।। ''सूत्रमादौ त्रेधा योजयति'' इति कल्पतरूक्तेरिति भावः ।

'ಸೂತ್ರಕ್ಕೆ ಮೊದಲು ಮೂರು ರೀತಿಯಿಂದ ಅರ್ಥಯೋಜನೆ ಮಾಡಲಾಗಿದೆ' ಎಂದು ಕಲ್ಪತರುವಿನಲ್ಲಿ ಹೇಳಿದ್ದಾರೆ. ಅದರಂತೆ ಇಲ್ಲಿ ವ್ಯಾಸರಾಜರೂ ಹೇಳಿದ್ದಾರೆ ಎಂದರ್ಥ.

**प्रकाशः** – अतः कर्माभावात् । तदभावः द्व्यणुकादिक्रमेण कार्याभावः । इति शेषार्थो न विरुद्ध इति नानूदितः ।।

ಸೂತ್ರದಲ್ಲಿರುವ 'ಅತಃ' ಎಂಬ ಶಬ್ದಕ್ಕೆ ಕರ್ಮವಿಲ್ಲವಾದ್ದರಿಂದ ಎಂದರ್ಥ. 'ತದಭಾವ' ಎಂಬ ಶಬ್ದಕ್ಕೆ ದ್ವ್ಯಣುಕಾದಿಕಾರ್ಯಗಳು ಕೂಡುವುದಿಲ್ಲ ಎಂದರ್ಥ. ಈ ಸೂತ್ರಶೇಷಾರ್ಥವನ್ನು ವ್ಯಾಸರಾಜರು ಅನುವಾದ ಮಾಡಿ ಖಂಡನೆ ಏಕೆ ಮಾಡಿಲ್ಲ ಎಂದರೆ ಸೂತ್ರಶೇಷಾರ್ಥವು ನಮಗೆ ವಿರುದ್ಧವಲ್ಲ (ನಮ್ಮ ಮತಕ್ಕೆ ವಿರುದ್ಧವಾದ ಅಂಶವನ್ನು ಮಾತ್ರ ಅನುವಾದ ಮಾಡಿ ಖಂಡನೆ ಮಾಡುತ್ತೇವೆ ಎಂದು ಹಿಂದೆ ಪ್ರತಿಜ್ಞೆ ಮಾಡಿರುವುದರಿಂದ ಎಂದು ತಿಳಿಯಬೇಕು)

ಮುಂದಿನ ಸೂತ್ರಗಳಿಗೂ ಪರರ ವ್ಯಾಖ್ಯಾನ ಅಯುಕ್ತ

## तात्पर्यचन्द्रिका

**द्वितीयचतुर्थषष्ठानां परकीयाव्याख्यानविरुद्धा ।**

ಈ ಅಧಿಕರಣದ ಎರಡನೇ, ನಾಲ್ಕನೇ ಹಾಗೂ ಆರನೇ ಸೂತ್ರಗಳಿಗೆ ಪರಕೀಯರ ವ್ಯಾಖ್ಯಾನ ನಮಗೆ ವಿರುದ್ಧವಲ್ಲ.

(ದ್ವಿತೀಯ, ಚತುರ್ಥ, ಷಷ್ಠ ಇದು ಅದ್ವೈತರೀತ್ಯಾ ಸೂತ್ರಸಂಖ್ಯೆ ಹೇಳಿದ್ದು ನಮ್ಮ ಪ್ರಕಾರ ಅಲ್ಲ)

**यत्तु अणवः प्रवृत्तिस्वभावा वा निवृत्तिस्वभावा वोभयस्वभावा वाऽनुभयस्वभावा वा । नाद्यद्वितीयौ । नित्यं प्रवृत्तेर्निवृत्तेर्वा भावप्रसङ्गात् । तृतीये विरोधः । चतुर्थे निमित्तवशात्प्रवृत्तिनिवृत्ती वाच्ये । निमित्तं चादृष्टं नित्यं संनिहितमिति नित्यं प्रवृत्त्यादेर्भावप्रसङ्गादिति तृतीयार्थ इति तन्न ।**

''ನಿತ್ಯಮೇವ ಚ ಭಾವಾತ್'' ಎಂಬ ಸೂತ್ರಕ್ಕೆ ಅದ್ವೈತಿಗಳು ಹೇಗೆ ಅರ್ಥ ಹೇಳಿದ್ದಾರೆ. ಅಣುಗಳು ಪ್ರವೃತ್ತಿಸ್ವಭಾವವುಳ್ಳವುಗಳೋ. ನಿವೃತ್ತಿಸ್ವಭಾವವುಳ್ಳವುಗಳೋ ಅಥವಾ ಉಭಯಸ್ವಭಾವವುಳ್ಳವುಗಳೋ ಅಥವಾ ಎರಡೂ ಸ್ವಭಾವ ಇಲ್ಲದವುಗಳೋ ? ಎಂದು ನಾಲ್ಕು ವಿಕಲ್ಪ. ಮೊದಲನೇ ಹಾಗೂ ಎರಡನೇ ವಿಕಲ್ಪ ಸರಿಯಲ್ಲ. ಅಣುಗಳಿಗೆ ಪ್ರವೃತ್ತಿಸ್ವಭಾವ ಒಪ್ಪಿದರೆ ನಿತ್ಯದಲ್ಲೂ ಸೃಷ್ಟಿ ಪ್ರವೃತ್ತಿಯೇ (ಸೃಷ್ಟಿಯೇ) ಇರಬೇಕು ಅಥವಾ ನಿವೃತ್ತಿ ಸ್ವಭಾವವನ್ನು ಒಪ್ಪಿದರೆ ನಿತ್ಯದಲ್ಲೂ ನಿವೃತ್ತಿಯೇ (ಪ್ರಳಯವೇ) ಇರಬೇಕು. ಮೂರನೆಯ ವಿಕಲ್ಪವೂ ಸರಿಯಲ್ಲ. ಏಕೆಂದರೆ, ವಿರೋಧ ಬರುತ್ತದೆ. ಅಣುಗಳಿಗೆ ಪರಸ್ಪರ ವಿರುದ್ಧವಾದ ಪ್ರವೃತ್ತಿ ನಿವೃತ್ತಿ ಸ್ವಭಾವವನ್ನು ಒಪ್ಪಿದರೆ ವಿರೋಧ.(ಪ್ರವೃತ್ತಿ ಇದ್ದರೆ ನಿವೃತ್ತಿ ಇರಲಾರದು, ನಿವೃತ್ತಿ ಇದ್ದರೆ ಪ್ರವೃತ್ತಿ ಇರಲಾರದು) ನಾಲ್ಕನೇ ಪಕ್ಷದಲ್ಲಿ ಇನ್ನಾವುದಾದರೊಂದು ನಿಮಿತ್ತ (ಉಪಾಧಿ) ದಿಂದ ಅಣುಗಳಲ್ಲಿ ಪ್ರವೃತ್ತಿ, ನಿವೃತ್ತಿಯನ್ನು ಹೇಳಬೇಕು. (ಸ್ವಭಾವವಲ್ಲವಾದ್ದರಿಂದ). ಆ ನಿಮಿತ್ತ ಯಾವುದು ಎಂದರೆ, ಅದೃಷ್ಟ ಎನ್ನಬೇಕು. ಆ ಅದೃಷ್ಟವು ನಿತ್ಯವೂ ಆಗಿರುವುದರಿಂದ ಯಾವಾಗಲೂ ಪ್ರವೃತ್ತಿ ನಿವೃತ್ತಿಗಳಾಗಬೇಕಾಗುತ್ತದೆ.

ಹೀಗೆ ತೃತೀಯಸೂತ್ರಕ್ಕೆ ಅರ್ಥ ಹೇಳುತ್ತಾರೆ. ಇದು ಸರಿಯಲ್ಲ.

**सूत्रे उभयथा चेत्यादाविव विकल्पसूचकाभावात् ।**

"ನಿತ್ಯಮೇವ ಚ ಭಾವಾತ್" ಎಂಬ ಸೂತ್ರದಲ್ಲಿ "ಉಭಯಥಾ ಚ..." ಮೊದಲಾದ ಸೂತ್ರಗಳಲ್ಲಿರುವಂತೆ ವಿಕಲ್ಪಸೂಚಕವಾದ ಶಬ್ದವಿಲ್ಲ. (ಉಭಯಥಾ, ವಾ, ಅಥವಾ ಇತ್ಯಾದಿ ಶಬ್ದಗಳು ವಿಕಲ್ಪ ಸೂಚಕಗಳು)

**अस्य विकल्पस्य स्वाङ्गीकृतब्रह्माविद्यादिकारणेष्वपि साम्याच्च ।**

ಇಲ್ಲಿ ಮಾಡಿರುವ ವಿಕಲ್ಪಗಳನ್ನು ನೀವು ಅಂಗೀಕರಿಸುವ ಬ್ರಹ್ಮ, ಅವಿದ್ಯಾ ಮೊದಲಾದ ಸ್ಥಳಗಳಲ್ಲಿಯೂ ಮಾಡಬಹುದು. ಅವರಿಗೆ ಹೇಳಿದ ದೋಷ ನಿಮಗೂ ಬರುತ್ತದೆ.

(ಬ್ರಹ್ಮನು ಪ್ರವೃತ್ತಿಸ್ವಭಾವನೋ, ನಿವೃತ್ತಿಸ್ವಭಾವನೋ ಎಂಬುದಾಗಿ ಎಂದರ್ಥ)

**आद्यसूत्रे मया तार्किकं प्रत्युक्तदोषस्य मम मतेऽप्राप्तिस्तु ''स्वत एव काले विशेषाङ्गीकृतेश्च'' इति भाष्य एव दर्शिता ।**

ಅದ್ವೈತಿಯು ನಮ್ಮನ್ನು ಕುರಿತು ಹೀಗೆ ಪ್ರಶ್ನೆ ಮಾಡಬಹುದು - ನೀವು "ಉಭಯಥಾಪಿ ನ ಕರ್ಮ" ಎಂಬ ಮೊದಲ ಸೂತ್ರದಲ್ಲಿ (ಅದ್ವೈತರೀತ್ಯಾ) ತಾರ್ಕಿಕರಿಗೆ, ಈಶ್ವರನ ಇಚ್ಛೆ ನಿತ್ಯವೋ, ಅನಿತ್ಯವೋ ಎಂದು ವಿಕಲ್ಪಮಾಡಿ ಖಂಡನೆ ಮಾಡಿದ್ದೀರಿ. ಆ ದೋಷ ನಿಮಗೂ ಬರುತ್ತದೆ. ನೀವೂ ಈಶ್ವರೇಚ್ಛಾವನ್ನು ಒಪ್ಪುವುದರಿಂದ.

ಇದಕ್ಕೆ ಉತ್ತರವನ್ನು ಭಾಷ್ಯದಲ್ಲೇ ಆಚಾರ್ಯರು "ಸ್ವತ ಏವ ಕಾಲೇ" ಎಂಬ ವಾಕ್ಯದಲ್ಲಿ ಹೇಳಿದ್ದಾರೆ. ನಾವು ಈಶ್ವರನ ಇಚ್ಛಾವನ್ನು ನಿತ್ಯ ಎಂದು ಒಪ್ಪಿದರೂ ಸದಾ ಸೃಷ್ಟಿಪ್ರಸಂಗವೆಂಬ ದೋಷ ಇಲ್ಲ. ಸೃಷ್ಟಿಕಾಲದಲ್ಲಿ ಮಾತ್ರ ಈಶ್ವರೇಚ್ಛೆಯು ಅಭಿವ್ಯಕ್ತವಾಗುವುದರಿಂದ. ಹಾಗಂದ ಮಾತ್ರಕ್ಕೆ ಅನ್ಯೋನ್ಯಾಶ್ರಯ ಎನ್ನಬಾರದು. ಕಾಲದಲ್ಲೇ ನಾವು ಸೃಷ್ಟಿಕಾಲ, ಪ್ರಳಯಕಾಲ ಎಂಬ ಸ್ವಾಭಾವಿಕವಿಶೇಷವನ್ನು ಒಪ್ಪಿರುವುದರಿಂದ.

**किञ्च मम रीत्या भाष्योक्तमार्गेण सत्तासमवायो जनिरिति तार्किकैः स्वीकृतत्वात्समवायस्य च नित्यमेव भावात्सर्वं नित्यजातं स्यात् । तथा च सृष्टिप्रलयानुपपत्तिरिति पूर्वसूत्रप्रकृतसमवायस्येहान्वयसम्भवे प्रवृत्तेर्निवृत्तेर्वेत्यध्याहारो भावादित्यस्य प्रसङ्गहेतुता च न युक्ता ।**

ನಮ್ಮ ಪ್ರಕಾರ ಭಾಷ್ಯದಲ್ಲಿ ಹೇಳಿರುವಂತೆ ಹೀಗೆ ಅರ್ಥ - ತಾರ್ಕಿಕರು ಸತ್ತಾಸಮವಾಯವೇ ಹುಟ್ಟು ಎಂದಿದ್ದಾರೆ. ಆದರೆ, ಸಮವಾಯವು ನಿತ್ಯವಾದದ್ದರಿಂದ ಯಾವಾಗಲೂ ಇದೆ. ಹಾಗಾಗಿ ಎಲ್ಲವೂ

ಎಲ್ಲಾ ಕಾಲದಲ್ಲೂ ಇರಬೇಕು. ಸೃಷ್ಟಿ, ಪ್ರಳಯ ಇದ್ಯಾವುದೂ ಆಗದೇ ಹೋಗಬೇಕು. ಹೀಗೆ ಅರ್ಥ ಹೇಳುವಾಗ ಹಿಂದಿನ ಸೂತ್ರದಲ್ಲಿ ಪ್ರಸಕ್ತವಾದ 'ಸಮವಾಯ' ಎಂಬ ಪದವನ್ನು ಇಲ್ಲಿ ಅನುವೃತ್ತಿ ಮಾಡಿಕೊಳ್ಳಲಾಗಿದೆ. ಇದು ಸರಳ. ನೀವು ಹೇಳುವ ಪ್ರವೃತ್ತಿ, ನಿವೃತ್ತಿ ಎಂಬ ವಿಕಲ್ಪಗಳು ಹಿಂದೆ ಪ್ರಸಕ್ತವಾಗದೇ ಇರುವುದರಿಂದ ಅಧ್ಯಾಹಾರ ಮಾಡಿಕೊಳ್ಳಬೇಕು. ಅದಲ್ಲದೇ ಸೂತ್ರದಲ್ಲಿರುವ 'ಭಾವಾತ್' ಎಂಬ ಶಬ್ದಕ್ಕೆ (ಹೇತುವಿಗೆ) 'ಭಾವಪ್ರಸಂಗಾತ್' ಎಂದು ಅರ್ಥ ಮಾಡಬೇಕು. ಇದು ಸರಿಯಲ್ಲ.

**यच्चोक्तं वायवीयादिपरमाणवो रूपादिहीनास्तैजसादयस्तु तद्युक्ता इति परामाणुषु गुणोपचयापचयौ स्तो न वा । आद्ये तेषु परिमाणोपचयापचयावपि स्याताम् । तयोस्ताभ्यां व्याप्तेः । द्वितीये तैजसाद्यणुकार्येषु रूपादि न दृश्येतेति पञ्चमार्थ इति तन्न ।**

''ಉಭಯಥಾ ಚ ದೋಷಾತ್'' ಎಂಬ ಸೂತ್ರಕ್ಕೆ ಅದ್ವೈತಿಗಳು ಮಾಡುವ ಅರ್ಥ ಸರಿಯಲ್ಲ. ವಾಯವೀಯ ಪರಮಾಣುಗಳು ರೂಪರಹಿತವಾದವು. ತೈಜಸಾದಿ ಪರಮಾಣುಗಳು ರೂಪಾದಿ-ಗಳುಳ್ಳವುಗಳು. ಹೀಗೆ ಪರಮಾಣುಗಳಲ್ಲಿ ಗುಣಗಳ ಅಪಚಯ (ಕಮ್ಮಿಯಾಗುವಿಕೆ) ಉಪಚಯ (ಹೆಚ್ಚಾಗುವಿಕೆ) ಇದೆಯೋ ಇಲ್ಲವೋ ಎಂದು ವಿಕಲ್ಪ. ಇದೆ ಎಂದರೆ ಆಗ ಪರಮಾಣುಗಳ ಪರಿಮಾಣದಲ್ಲಿಯೂ ಉಪಚಯ ಅಪಚಯವಾಗಬೇಕು. ಏಕೆಂದರೆ, ಎಲ್ಲಿ ಗುಣಗಳ ಉಪಚಯಾಪಚಯಗಳಿವೆಯೋ ಅಲ್ಲಿ ಪರಿಮಾಣದ ಉಪಚಯಾಪಚಯ ಕಂಡಿದೆ. ಗುಣಗಳ ಉಪಚಯಾಪಚಯವಿದ್ದರೂ ಪರಿಮಾಣದಲ್ಲಿ ಉಪಚಯಾಪಚಯ ಇಲ್ಲ ಎಂದರೆ ಆಗ ವಾಯವೀಯ ಪರಮಾಣುಗಳಲ್ಲಿ ಇಲ್ಲದಿರುವ ರೂಪ, ರಸ ಮೊದಲಾದವುಗಳು ತೈಜಸಾದಿ ಪರಮಾಣುಗಳಲ್ಲಿ ಇದ್ದರೂ ತೈಜಸಾದಿ ಪರಮಾಣುಕಾರ್ಯದಲ್ಲಿ ರೂಪಾದಿಗಳು ಕಾಣಸಬಾರದು. (ರೂಪಾದಿಗಳು ತೋರಿದರೆ ಆಗ ಪರಿಮಾಣದಲ್ಲಿ ವ್ಯತ್ಯಾಸ ಒಪ್ಪಿದಂತಾಗುತ್ತದೆ)

**तन्मत ईश्वरादपि जीवे त्वन्मते चात्मनोऽप्यन्तःकरणे आकाशादपि पृथिव्यादौ च गुणाधिक्येऽपि परिमाणाधिक्यादृष्टेः ।। केचित्तु अणूनां रूपादिमत्त्वे पूर्वसूत्रेणानित्यत्वदोष उक्तः । अत्र तु रूपादिराहित्ये तत्तत्कार्ये रूपादिर्न स्यादिति दोष उच्यत इत्याहुः । तत्र अन्यथा च दोषादिति सूत्रणीयम् ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् वैशेषिकाधिकरणं सम्पूर्णम् ।।६।।**

ಪರಿಪೂರ್ಣಚಂದ್ರಿಕಾ

ಅದ್ವೈತಮತದಲ್ಲಿ ಈಶ್ವರನಿಗಿಂತ ಹೆಚ್ಚು ಗುಣ ಜೀವನದಲ್ಲಿದೆ. ನಿಮ್ಮ ಮತದಲ್ಲಿ ಆತ್ಮನಿಗಿಂತ ಹೆಚ್ಚು ಗುಣ ಅಂತಃಕರಣದಲ್ಲಿದೆ. ಆಕಾಶಕ್ಕಿಂತ ಹೆಚ್ಚು ಗುಣ ಪೃಥಿವಿಯಲ್ಲಿದೆ. ಆದರೂ ಈ ಎಲ್ಲಾ ಸ್ಥಳಗಳಲ್ಲಿ ಪರಿಮಾಣದಲ್ಲಿ ಆಧಿಕ್ಯ ಕಂಡಿಲ್ಲ.

ರಾಮಾನುಜರು ಹೀಗೆ ಹೇಳುತ್ತಾರೆ - ಅಣುಗಳು ರೂಪವುಳ್ಳವುಗಳು ಎಂದು ಹೇಳಿದರೆ ಪೂರ್ವಸೂತ್ರದಲ್ಲಿ ಅನಿತ್ಯತ್ವದೋಷ ಹೇಳಲಾಗಿದೆ. ಈ ಸೂತ್ರದಲ್ಲಿ ರೂಪಾದಿರಹಿತವಾದ ಆಯಾ ಕಾರ್ಯಗಳಲ್ಲಿ ರೂಪಾದಿಗಳು ಇಲ್ಲದಿರಬೇಕಾದೀತು ಎಂಬ ದೋಷವನ್ನು ಹೇಳಲಾಗಿದೆ ಎಂದು. ಇದು ತಪ್ಪು ಹಾಗಾದರೆ ರಾಮಾನುಜರ ಪ್ರಕಾರ 'ಅನ್ಯಥಾ ಚ ದೋಷಾತ್' ಎಂದು ಸೂತ್ರವಿರಬೇಕಿತ್ತು. 'ಉಭಯಥಾ' ಎಂಬ ಶಬ್ದದ ಜಾಗದಲ್ಲಿ 'ಅನ್ಯಥಾ' ಎಂದು ಇರಬೇಕಾಗಿತ್ತು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ವೈಶೇಷಿಕಾಧಿಕರಣವು ಸಂಪೂರ್ಣವಾಯಿತು

**प्रकाशः –**

**इति हि तन्मतमिति ।। एतेन निमित्तकारणतामात्रेणेश्वरस्याधिष्ठातृत्वं "पत्युः" इत्यत्र निराकरिष्यत इति भामत्युक्तं प्रत्युक्तम् ।**

ಅದೃಷ್ಟವು ಈಶ್ವರಾಧಿಷ್ಠಿತ (ಈಶ್ವರನಿಂದ ಪ್ರೇರಿತ) ಎಂದು ತಾರ್ಕಿಕರ ಮತ. ಆದ್ದರಿಂದ ನಿಮ್ಮ ಹೇತುವಿಗೆ ಅಸಿದ್ಧಿ. ನಾವು ಹೀಗೆ ದೋಷ ಹೇಳಿದ್ದರಿಂದಲೇ, ಭಾಮತಿಯಲ್ಲಿ ತಾರ್ಕಿಕರು ಹೇಳುವ ನಿಮಿತ್ತಮಾತ್ರದಿಂದ ಈಶ್ವರನು ಅದೃಷ್ಟಪ್ರೇರಕ ಎಂಬ ಮತವನ್ನು ಪತ್ಯುರಧಿಕರಣದಲ್ಲಿ ನಿರಾಕರಿಸುತ್ತೇವೆ ಎಂದು ಏನು ಹೇಳಲಾಗಿದೆ ಅದೂ ನಿರಾಕರಿಸಿದಂತಾಯಿತು.

**प्रकाशः –** आपाद्यदोषत्वेऽपि तन्मताननुसारित्वेनान्यतरासिद्धेरवर्जनीयत्वात्।

ನೀವು ಹೇಳಿರುವ ಹೇತು ಅದು ಸಿದ್ಧವಲ್ಲ ಹೊರತು ಸಾಧ್ಯ. ಹೀಗೆ ನೀವು ಕಷ್ಟಪಟ್ಟು ಅವನಿಗೆ ಹೇತುವನ್ನು ಸಾಧನೆ ಮಾಡಿದರೂ ಕೂಡ ಅದು ಅವನ ಮತಕ್ಕೆ ಅನುಸಾರಿಯಲ್ಲ. ಆದ್ದರಿಂದ 'ಅನ್ಯತರಾಸಿದ್ಧಿ' ಎಂಬ ದೋಷ ಬಂದೇ ಬರುತ್ತದೆ. (ಅದ್ವೈತಿಗಳು ಹೇಳಿರುವ ಹೇತು - ಅದೃಷ್ಟವು ಚೇತನ ಅನಧಿಷ್ಠಿತವಾಗಿದೆ. ಆದ್ದರಿಂದ ಅದಕ್ಕೆ ಪ್ರವೃತ್ತಿ ಕೂಡುವುದಿಲ್ಲ ಎಂದು. ಇದು ತಾರ್ಕಿಕನಿಗೆ ಸಮ್ಮತವಲ್ಲ ಅವನು ಅದೃಷ್ಟವು ಈಶ್ವರಾಧಿಷ್ಠಿತ ಎಂದು ಒಪ್ಪುತ್ತಾನೆ. ಆದ್ದರಿಂದ ಅದ್ವೈತಿಯು ಇದನ್ನು (ಈಶ್ವರನಿಗೆ ನಿಮಿತ್ತಕಾರಣತ್ವೇನ ಅಧಿಷ್ಠಾತೃತ್ವವನ್ನು) ತಾರ್ಕಿಕನಿಗೆ ನಿರಾಕರಿಸಬೇಕು. ಆಗ ಹೇತು ಸಿದ್ಧವಾಗುತ್ತದೆ. ಆದರೆ, ಆಗ ತನ್ಮತಾನನುಸಾರಿತ್ವ (ಅವನ ಮತಕ್ಕೆ ವಿರುದ್ಧ) ಎಂಬ ದೋಷ ಬರುತ್ತದೆ. ತನ್ಮತಾನನುಸಾರಿತ್ವ ಬೇಡ ಎಂದರೆ ಆಗ ಅದ್ವೈತಿ ಹೇಳುವ ಹೇತುವು ಅಸಿದ್ಧವಾಗುತ್ತದೆ)

**प्रकाशः** – एतेन ''परमाणुगतं कर्म स्वगतादृष्टकारितमात्मगतादृष्टकारितं वा । उभयथापि न सम्भवति । क्षेत्रज्ञपुण्यपापानुष्ठानजन्यस्यादृष्टस्य परमाणुगतत्वासम्भवात्'' इति केषाञ्चिदर्थोऽपि निरस्तः । परमाणुगतत्वपक्षस्यात्यन्तासम्भावितत्वेन विकल्पकोटेरेवानुत्थितेः ॥

ಹಿಂದೆ ಮಾಡಿರುವ ನಿರಾಕರಣೆಯಿಂದಲೇ ಇನ್ನೊಬ್ಬರು ಹೇಳುವ ಮತವೂ ನಿರಾಕೃತವಾಗುತ್ತದೆ. ಅದೇನೆಂದರೆ, ಪರಮಾಣುವಿನಲ್ಲಿರುವ ಕರ್ಮ ಅದು ಪರಮಾಣವಿನಲ್ಲೇ ಇರುವ ಅದೃಷ್ಟನಿಂದ ಉಂಟಾಗಿದೆಯೋ ಅಥವಾ ಆತ್ಮನಲ್ಲಿರುವ ಅದೃಷ್ಟದಿಂದ ಉಂಟಾಗಿದೆಯೋ, ಎರಡೂ ರೀತಿಯಿಂದಲೂ ಸಾಧ್ಯವಿಲ್ಲ. ಕ್ಷೇತ್ರಜ್ಞನಾದ ಆತ್ಮನ ಪುಣ್ಯಪಾಪದ ಅನುಷ್ಠಾನದಿಂದ ಹುಟ್ಟುವ ಅದೃಷ್ಟವು ಪರಮಾಣುವಿನಲ್ಲಿರುವುದು ಸಾಧ್ಯವಿಲ್ಲ ಎಂದು. ಈ ರೀತಿ ಅರ್ಥ ಹೇಳುವುದೂ ತಪ್ಪು. ಏಕೆಂದರೆ, ನೀವು ಮಾಡಿರುವ ವಿಕಲ್ಪದಲ್ಲಿ ಮೊದಲನೆಯದಾದ ಅದೃಷ್ಟವು ಪರಮಾಣುಗತ ಎಂಬುದು ಅತ್ಯಂತ ಅಸಂಭಾವಿತವಾದ್ದರಿಂದ ಈ ವಿಕಲ್ಪವೇ ಮೊಟ್ಟಮೊದಲು ಮಾಡಲು ಸಾಧ್ಯವಿಲ್ಲ.

(ದೇವದತ್ತನನ್ನು ನೋಡಿ, ಇವನು ದೇವದತ್ತನೋ, ಯಜ್ಞದತ್ತನೋ ಎಂದು ವಿಕಲ್ಪ ಮಾಡಬಹುದೇ ಹೊರತು ಇವನು ದೇವದತ್ತನೋ, ಕತ್ತೆಯೋ ಎಂದು ವಿಕಲ್ಪ ಮಾಡುವುದು ಸರಿಯಲ್ಲ. ಕತ್ತೆ ಎಂಬ ವಿಕಲ್ಪ ಅತ್ಯಂತ ಅಸಂಭಾವಿತ. ದೇವದತ್ತ ಮನುಷ್ಯ ಎಂದು ಪ್ರತ್ಯಕ್ಷಸಿದ್ಧವಾಗಿರುವುದರಿಂದ.)

**प्रकाशः – मम मत इवेति** ॥ ईश्वरेच्छाया अनित्यत्वे नित्यत्वे चोभयथापीत्युक्तया नित्यत्वपक्षे प्रलये कर्मानुत्पादेन कार्यव्यभिचाररूपहेतोरनित्यत्वे भगवदिच्छारूपकारणाभावरूपस्य हेतोः परमाणुकर्म नेत्युक्तसाध्ये सूचनमस्ति ।

ನಮ್ಮ ಮತದಲ್ಲಿ ಹೇತುವು ಸೂತ್ರದಲ್ಲಿ ಸೂಚಿತವಾಗಿದೆ. ಈಶ್ವರನ ಇಚ್ಛೆಯು ನಿತ್ಯವೋ ಅಥವಾ ಅನಿತ್ಯವೋ ? ಎಂಬ ವಿಕಲ್ಪವು ಸೂತ್ರದಲ್ಲಿ 'ಉಭಯಥಾ' ಎಂಬ ಶಬ್ದದಿಂದ ಹೇಳಲ್ಪಟ್ಟಿದೆ. ಆದರಿಂದಲೇ ನಿತ್ಯ ಎಂಬ ಪಕ್ಷದಲ್ಲಿ ಪ್ರಳಯದಲ್ಲಿ ಪರಮಾಣುಕರ್ಮ ಇಲ್ಲವಾದ್ದರಿಂದ ಕಾರ್ಯವ್ಯಭಿಚಾರ ಅನಿತ್ಯ ಎಂಬ ಪಕ್ಷದಲ್ಲಿ ಭಗವಂತನ ಇಚ್ಛೆಯೆಂಬ ಕಾರಣ ಇಲ್ಲದಿರುವುದರಿಂದ ಪರಮಾಣು ಕರ್ಮ ಆಗದ್ದೇ ಹೋಗಲಿ ಎಂಬ ಎರಡೂ ಹೇತುಗಳು ಸೂತ್ರದಲ್ಲಿ "ನ ಕರ್ಮ" ಎಂಬ ಪದದಿಂದ ಸೂಚಿತವಾಗಿವೆ.

**प्रकाशः** – न त्वन्मते । बहिरेव हेतोरुक्तत्वादिति भावः ॥ **निरासकमिति** ॥ निरासप्रकारष्टीकादौ व्यक्त इति भावः ॥ **द्वितीयेति** ॥ परारीत्यैतत् । ''समवायाभ्युपगमाच्च साम्यादनवस्थितेः। रूपादिमत्त्वाच्च विपर्ययोदर्शनात् । अपरिग्रहाच्चात्यन्तमनपेक्ष'' इति सूत्रत्रयव्याख्येत्यर्थः ।

ಆದರೆ ನಿಮ್ಮ ಮತದಲ್ಲಿ ಹೇತುವು ಸೂತ್ರದಿಂದ ಸೂಚಿತವಾಗಿಲ್ಲ. ಸೂತ್ರವನ್ನು ಬಿಟ್ಟೇ ಹೇತುವನ್ನು ಅಧ್ಯಾಹಾರ ಮಾಡಿದ್ದೀರಿ. ಈ ಸೂತ್ರವು ನಮ್ಮ ಪ್ರಕಾರ ತಾರ್ಕಿಕರು ಹೇಳುವ ನಿಮಿತ್ತಕಾರಣನಿರಾಕರಣೆಗಾಗಿ ಹೊರಟಿದೆ. ಈ ನಿರಾಕರಣೆಯು ಹೇಗೆ ಎಂಬುದು ಟೀಕಾದಲ್ಲೇ ಸ್ಪಷ್ಟವಾಗಿ ನಿರೂಪಿತವಾಗಿದೆ. ಇಲ್ಲಿ

ದ್ವಿತೀಯ ಸೂತ್ರ ಅದ್ವೈತಿಗಳ ಪ್ರಕಾರ ಎಂದು ತಿಳಿಯಬೇಕು. ಎರಡನೇ, ನಾಕನೇ, ಆರನೇ ಸೂತ್ರಗಳು ನಮಗೆ ವಿರುದ್ಧವಲ್ಲ ಎಂದು ಹೇಳಿದರು. ಆ ಸೂತ್ರಗಳು ಯಾವುದೆಂದರೆ ಕ್ರಮವಾಗಿ 'ಸಮವಾಯಾಭ್ಯುಪಗಮಾಚ್ಚ', 'ಸಾಮ್ಯಾದನವಸ್ಥಿತೇಃ', 'ರೂಪಾದಿಮತ್ತ್ವಾಚ್ಚ', 'ವಿಪರ್ಯಯೋದರ್ಶನಾತ್', 'ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ' ಎಂಬುದಾಗಿ.

**प्रकाशः** – ''नित्यमेव च भावात्'' इत्यस्यार्थं परभाष्योक्तमनूद्य प्रत्याह – **यत्त्विति** ।। प्रमेयास्वारस्यं चाह – **अस्य विकल्पस्येति** ।। आद्यसूत्र इति ।। ''उभयथापि न कर्मातस्तदभाव'' इत्यत्र ।

''ನಿತ್ಯಮೇವ ಚ ಭಾವಾತ್'' ಎಂಬ ಸೂತ್ರಕ್ಕೆ ಪರರು ಹೇಳುವ ಅರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ 'ನಿತ್ಯಮೇವ' ಎಂಬ ವಾಕ್ಯಗಳಿಂದ. ಈ ಸೂತ್ರಕ್ಕೆ ಪರರೀತ್ಯಾ ಶಬ್ದದೋಷ ಹೇಳಿ ಈಗ ಪ್ರಮೇಯದೋಷವನ್ನು ಹೇಳುತ್ತಿದ್ದಾರೆ 'ಅಸ್ಯ ' ಎಂಬ ಗ್ರಂಥದಿಂದ. ''ಉಭಯಥಾಪಿ...' ಎಂಬ ಮೊದಲನೇ ಸೂತ್ರದಲ್ಲಿ ನಾವು ತಾರ್ಕಿಕರಿಗೆ ಹೇಳಿದ ದೋಷ ನಮಗೆ ಬರುವುದಿಲ್ಲ ಎಂಬುದು ಭಾಷ್ಯದಲ್ಲೇ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

**प्रकाशः** – तथा च तवैव स्वव्याहतिर्नास्मत्पक्ष इति भावः ।। **नित्यजातमिति** ।। नित्यं जनिमदित्यर्थः ।। **अध्याहार इति** ।। एतेन समवायस्य नित्यसम्बन्धत्वे सम्बन्धिनो जगतो नित्यमेव भावात्सम्बन्धिजगन्नित्यत्वं स्यादिति केषाञ्चिदर्थोऽपि निरस्तम् ।

ಹಾಗಾಗಿ ನಿಮಗೇ ಸ್ವವ್ಯಾಹತಿ ಬರುತ್ತದೇ ಹೊರತು ನಮಗೆ ಬರುವುದಿಲ್ಲ. (ಸ್ವವ್ಯಾಹತಿ - ಪರರಿಗೆ ಹೇಳುವ ದೋಷ ನಮಗೂ ಬರುವುದು) 'ನಿತ್ಯಜಾತಂ' ಶಬ್ದಕ್ಕೆ ನಿತ್ಯದಲ್ಲೂ ಹುಟ್ಟುಳ್ಳದ್ದು ಎಂದರ್ಥ.

ಅದ್ವೈತಿಗಳಿಗೆ ನಾವು ಹೇಳಿರುವ 'ಅಧ್ಯಾಹಾರ' ಎಂಬ ದೋಷ ರಾಮಾನುಜರಿಗೂ ಬರುತ್ತದೆ. ಅವರು ಹೀಗೆ ಅರ್ಥ ಹೇಳುತ್ತಾರೆ. ಸಮವಾಯವು ನಿತ್ಯಸಂಬಂಧವಾದರೆ ಆಗ ಸಂಬಂಧಿ (ಸಂಬಂಧವುಳ್ಳದ್ದು) ಯಾದ ಜಗತ್ತು ಕೂಡ ನಿತ್ಯವಾಗಬೇಕಾಗುತ್ತದೆ.

**प्रकाशः** – अनेकाध्याहारात् । भावादित्यस्य भावप्रसङ्गादित्यर्थस्यायोगादापाद्यदोषस्य क्लेशेनोपपादनीयत्वाच्चेति ।

ನೀವು ಅರ್ಥ ಹೇಳುವ ಪ್ರಕಾರವೂ ಅನೇಕ ಅಧ್ಯಾಹಾರ ಎಂಬ ದೋಷ ಬರುತ್ತದೆ. ನಿಮ್ಮ ಪ್ರಕಾರವೂ ಸೂತ್ರದಲ್ಲಿರುವ 'ಭಾವಾತ್' ಎಂಬ ಪದಕ್ಕೆ 'ಭಾವಪ್ರಸಂಗಾತ್' ಎಂದೇ ಅರ್ಥ ಹೇಳಬೇಕು. ಇದು ಅಯುಕ್ತ. ನೀವು ತಾರ್ಕಿಕರಿಗೆ ಹೇಳುವ ದೋಷ ಆಪಾದ್ಯದೋಷ. ಅಂದರೆ, ತಾರ್ಕಿಕರು ಸಮವಾಯಸಂಬಂಧವನ್ನು ನಿತ್ಯ ಎಂದು ಒಪ್ಪಿದರೂ ಸಂಬಂಧಿಯನ್ನು ನಿತ್ಯ ಎಂದು ಒಪ್ಪುವುದಿಲ್ಲ. ಹಾಗಾಗಿ ನೀವು ಅದನ್ನು ಮೊದಲು ಸಾಧನೆ ಮಾಡಿ ಆಮೇಲೆ ದೋಷಾರೋಪಣೆ ಮಾಡಬೇಕು, ಇದು ಕಷ್ಟಸಾಧ್ಯ.

**प्रकाशः** – ''उभयथा च दोषात्'' इत्येतदर्थं परभाष्याद्युक्तमनूद्य निराह – यच्चेति ।।

''ಉಭಯಥಾ ಚ ದೋಷಾತ್'' ಎಂಬ ಸೂತ್ರಕ್ಕೆ ಅದ್ವೈತಿಗಳು ತಮ್ಮ ಭಾಷ್ಯದಲ್ಲಿ ಮಾಡಿದ ಅರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚ' ಎಂಬ ಗ್ರಂಥದಿಂದ.

**प्रकाशः** – पृथिव्यादिभूतचतुष्टये हि रूपादिस्पर्शान्तैर्गुणैः पूर्वपूर्वभूतस्याधिक्यमुत्तरोत्तरस्य न्यूनत्वम् ।

ಪೃಥಿವೀ, ಅಪ್, ತೇಜಸ್ ಹಾಗೂ ವಾಯು ಈ ನಾಲ್ಕು ಭೂತಗಳಲ್ಲಿ ಪೂರ್ವಪೂರ್ವಕ್ಕೆ ಆದಿಕ್ಯ ಹಾಗೂ ಉತ್ತರೋತ್ತರ ಭೂತಗಳಿಗೆ ನ್ಯೂನತ್ವ ಇದೆ. ಅದಕ್ಕೆ ಕಾರಣ ಪೃಥಿವೀಯಲ್ಲಿ ರೂಪ, ರಸ, ಗಂಧ, ಸ್ಪರ್ಶ ಎಂಬ ನಾಲ್ಕು ಗುಣಗಳಿವೆ. ಆಪ್ (ಜಲ) ದಲ್ಲಿ ರೂಪ, ರಸ, ಸ್ಪರ್ಶ ಈ ಮೂರು ಗುಣಗಳು ಮಾತ್ರ ಇವೆ. ತೇಜಸ್ಸಿನಲ್ಲಿ ಕೇವಲ ರೂಪ ಮತ್ತು ಸ್ಪರ್ಶ ಇದೆ. ವಾಯುವಿನಲ್ಲಿ ಇರುವುದು ಸ್ಪರ್ಶ ಮಾತ್ರ.

**प्रकाशः** – तेनैव गुणाधिक्येन पृथिव्यादिपूर्वपूर्वभूतस्य परिमाणतः स्थूलत्वमुत्तरोत्तरभूतस्य च न्यूनगुणकत्वेन परिमाणतस्सूक्ष्मसूक्ष्मतरत्वादिकमुपलब्धम्

ಈ ಗುಣಾಧಿಕ್ಯದಿಂದಲೇ ಪೃಥಿವಿ ಮೊದಲಾದ ಪೂರ್ವಪೂರ್ವಭೂತಗಳಲ್ಲಿ ಪರಿಮಾಣದಿಂದ ಸ್ಥೂಲತ್ವ ಹಾಗೂ ಮುಂದು ಮುಂದಿನ ಭೂತಗಳಲ್ಲಿ ಕಡಿಮೆ ಗುಣಗಳಿರುವುದರಿಂದ ಪರಿಮಾಣದಿಂದಲೂ ಸೂಕ್ಷ್ಮ ಹಾಗೂ ಅತಿಸೂಕ್ಷ್ಮತ್ವವು ಪ್ರಾಪ್ತವಾಗುವುದು.

**प्रकाशः** – इति पृथिव्यादिपरमाणुष्वपि क्वचिद्रूपरसगन्धस्पर्शाः । आप्याणुषु रूपरसस्पर्शाः । तैजसाणुषु रूपस्पर्शौ । वायवीयाणुषु स्पर्श एवेति गुणाधिक्यन्यूनत्वे विद्येते न वा ।

ಇದೇ ರೀತಿಯಾಗಿ ಪೃಥಿವಿಯೇ ಮೊದಲಾದ ಪರಮಾಣುಗಳಲ್ಲಿಯೂ ಗುಣಗಳ ಆಧಿಕ್ಯ ನ್ಯೂನತ್ವ ಇದೆಯೇ ಇಲ್ಲವೇ.

**प्रकाशः** – आद्ये पार्थिवाणुषु परिमाणाधिक्यं आप्याणुषु पृथिवीपरमाणुतो न्यूनपरिमाणत्वं ततोऽपि तैजसाणुषु न्यूनपरिमाणत्वं ततोऽपि वायवीयाणुष्वित्येवं पूर्वपूर्वभूतपरमाणूनां परिमाणाधिक्यशब्दितपरिमाणोपचयः, उत्तरोत्तरभूतपरमाणुषु न्यूनपरिमाणत्वशब्दितपरिमाणापचयश्च स्यादित्यर्थः ।

ಪಾರ್ಥಿವಾದಿಪರಮಾಣುಗಳಲ್ಲಿಯೂ ಗುಣಾಧಿಕ್ಯ ನ್ಯೂನತಾ ಇದೆ ಎಂದರೆ ಆಗ, ಪಾರ್ಥಿವ ಪರಮಾಣುಗಳು ಹೆಚ್ಚು ಪರಿಮಾಣವುಳ್ಳವುಗಳು, ಇದಕ್ಕೆ ಹೋಲಿಸಿದಾಗ ಜಲಪರಮಾಣುಗಳಲ್ಲಿ ಕಡಿಮೆಪರಿಮಾಣ, ಅದಕ್ಕಿಂತಲೂ ತೈಜಸಪರಮಾಣುಗಳಲ್ಲಿ ಪರಿಮಾಣನ್ಯೂನತೆ, ಅದಕ್ಕಿಂತಲೂ ವಾಯುಪರಮಾಣುಗಳಲ್ಲಿ ನ್ಯೂನಪರಿಮಾಣವು ಬರಬೇಕಾಗುತ್ತದೆ. ಪೂರ್ವಪೂರ್ವ ಪರಮಾಣುಗಳಲ್ಲಿ

ಪರಿಮಾಣಾಧಿಕ್ಯ ಎಂದು ಕರೆಯಿಸಿಕೊಳ್ಳುವ ಪರಿಮಾಣದ ಉಪಚಯ ಹಾಗೂ ಉತ್ತರೋತ್ತರ ಪರಮಾಣುಗಳಲ್ಲಿ ನ್ಯೂನಪರಿಮಾಣ ಎಂದು ಕರೆಯಿಸಿಕೊಳ್ಳುವ ಪರಿಮಾಣದ ಅಪಚಯ ಬರಬೇಕಾಗುತ್ತದ ಎಂದರ್ಥ.

**ಪ್ರಕಾಶಃ** – ततोः रूपादिगुणोपचयापचययोः । ताभ्यां परिमाणोपचयापचयाभ्याम्। व्याप्तेरित्यर्थः ।

ಮೂಲದಲ್ಲಿರುವ 'ತತೋ' ಎಂಬ ಶಬ್ದಕ್ಕೆ ರೂಪಾದಿಗುಣಗಳ ಉಪಚಯಅಪಚಯಗಳಿಗೆ ಎಂದರ್ಥ. 'ತಾಭ್ಯಾಂ' ಎಂಬ ಪದಕ್ಕೆ ಪರಿಮಾಣದ ಉಪಚಯ ಅಪಚಯದೊಂದಿಗೆ ಎಂದರ್ಥ. ಇವೆರಡಕ್ಕೂ ವ್ಯಾಪ್ತಿ ಇರುವುದರಿಂದ ಎಂದರ್ಥ.

**ಪ್ರಕಾಶಃ** – पृथिव्यादिभूतचतुष्टये दर्शनादिति भावः । तन्मते वैशेषिकमते । जीवेश्वरयोर्विभुत्वेन तुल्यपरिमाणत्वादिति भावः ।।

ಈ ವ್ಯಾಪ್ತಿ ಎಲ್ಲಿ ಸಿದ್ಧವಾಗಿದೆ ಎಂದರೆ ಪೃಥಿವಿಯೇ ಮೊದಲಾದ ಸ್ಥೂಲಭೂತಗಳಲ್ಲಿ ನಿಶ್ಚಯವಾಗಿದೆ ಎಂದರ್ಥ. 'ತನ್ಮತೇ' ಎಂಬ ಶಬ್ದಕ್ಕೆ ವೈಶೇಷಿಕರ ಮತದಲ್ಲಿ ಎಂದರ್ಥ. ಅವರ ಪ್ರಕಾರ ಜೀವ ಹಾಗೂ ಈಶ್ವರ ಇಬ್ಬರೂ ವಿಭುಪರಿಮಾಣವುಳ್ಳವರು. ಆದ್ದರಿಂದ ಇಬ್ಬರಿಗೂ ಸಮಾನಪರಿಮಾಣವಿರುವುದರಿಂದ ಎಂದರ್ಥ. (ಹಾಗಾಗಿ ನೀವು ಹೇಳುವ ವ್ಯಾಪ್ತಿಗೆ ವ್ಯಭಿಚಾರ ಬಂದಿತು ಜೀವನಿಗಿಂತಲೂ ಈಶ್ವರನಿಗೆ ಕಡಿಮ ಗುಣಗಳಿದ್ದರೂ ಪರಿಮಾಣದಲ್ಲಿ ಯಾವುದೇ ವ್ಯತ್ಯಾಸ ಇಲ್ಲದಿರುವುದರಿಂದ)

**ಪ್ರಕಾಶಃ** – **त्वन्मते चेति** ।। आत्मनो निर्गुणात् ज्ञानानन्दादिगुणात्मकाद्वा ''कामः सङ्कल्पो विचिकित्साश्रीह्रीर्भीर्धीरित्येतत्सर्वं मन एव'' इति श्रुत्या कामाद्यनेकगुणकस्य मनसो मध्यमपरिमाणत्वेनापरिच्छिन्नात्मापेक्षया परिमाणाधिक्य ाभावादित्यर्थः ।

ನಿಮ್ಮ ಮತದ ಪ್ರಕಾರವೂ ವ್ಯಭಿಚಾರ ಬರುತ್ತದೆ. ನೀವು ಆತ್ಮನನ್ನು ನಿರ್ಗುಣ ಎನ್ನುತ್ತೀರಿ ಅಥವಾ ಜ್ಞಾನ ಆನಂದಸ್ವರೂಪ ಎನ್ನುತ್ತೀರಿ. ಅಂತಹ ಆತ್ಮನಿಗಿಂತಲೂ 'ಕಾಮಃ ಸಂಕಲ್ಪಃ' ಎಂಬ ಶ್ರುತಿಯಿಂದ ಮನಸ್ಸಿಗೆ ಕಾಮ, ಸಂಕಲ್ಪ, ವಿಚಿಕಿತ್ಸಾ, ಶ್ರೀ, ಹ್ರೀ, ಭೀಃ, ಧೀ ಎಂಬ ಅನೇಕ ಗುಣಗಳಿವೆ ಎಂದು ತಿಳಿಯುತ್ತಿದೆ. ಆದರೂ ಈ ಮನಸ್ಸಿಗೆ ನೀವು ಮಧ್ಯಪರಿಮಾಣವನ್ನು ಹೇಳಿದ್ದೀರಿ. ಆದರೆ, ಆತ್ಮನಿಗೆ ಅಪರಿಚ್ಛಿನ್ನಪರಿಮಾಣವನ್ನು ಹೇಳಿದ್ದೀರಿ. ಇದು ವ್ಯಾಪ್ತಿಗೆ ವಿರುದ್ಧ. ಆತ್ಮನಿಗಿಂತಲೂ ಅಧಿಕಗುಣಗಳುಳ್ಳ ಮನಸ್ಸಿಗೇ ಅಧಿಕಪರಿಮಾಣವನ್ನು ಹೇಳಬೇಕಾಗಿತ್ತು. ಆದರೆ, ಹಾಗೆ ಹೇಳಿಲ್ಲ ಹಾಗಾಗಿ ವ್ಯಭಿಚಾರ.

**ಪ್ರಕಾಶಃ** – मतद्वयेऽपि व्यभिचारस्थलमाह – **आकाशादपीति** ।। शब्दमात्रगुणकादिति भावः ।।

ಇಬ್ಬರ (ವೈಶೇಷಿಕ, ಅದ್ವೈತಿ) ಮತರೀತ್ಯಾ ವ್ಯಭಿಚಾರಸ್ಥಳವನ್ನು ಹೇಳುತ್ತಿದ್ದಾರೆ ಆಕಾಶ ಎಂಬುದಾಗಿ. ಆಕಾಶದಲ್ಲಿರುವ ಗುಣ ಒಂದೇ, ಅದು ಶಬ್ದ. ಆದರೂ ಆಕಾಶದ ಪರಿಮಾಣ ಪೃಥಿವ್ಯಾದಿಗಳಿಗಿಂತ ಅಧಿಕವಾದದ್ದು ಎಂದು ಭಾವ.

ವೈಶೇಷಿಕಾಧಿಕರಣ (2-2-6)

**प्रकाशः – केचित्त्विति ।।** अणूनां रूपादिमत्त्वे तद्राहित्ये चोभयथा च दोषादिति सूत्रार्थः कथं पक्षद्वये दोष इत्यतस्तद्भाष्योक्तमाह – **रूपादिमत्त्व इति।।**

ರಾಮಾನುಜಭಾಷ್ಯದಲ್ಲಿ ಹೇಳಿರುವುದನ್ನು ಅನುವಾದ ಮಾಡುತ್ತಿದ್ದಾರೆ 'ಕೇಚಿತ್' ಎಂಬುದರಿಂದ. ಅಣುಗಳಿಗೆ ರೂಪಾದಿಗಳಿವೆ ಎಂದರೂ ರೂಪಾದಿಗಳು ಇಲ್ಲ ಎಂದರೂ ದೋಷ ಬರುತ್ತದೆ ಎಂದು ರಾಮಾನುಜರು ಈ ಸೂತ್ರಕ್ಕೆ ಅರ್ಥ ಹೇಳಿದ್ದಾರೆ.

**प्रकाशः – अन्यथा चेति ।।** रूपादिमत्त्वे पूर्वत्रैव दोषोक्तेरन्यथा रूपादिराहित्ये दोषादित्येव सूत्रव्याख्यानसम्भवादिति भावः ।

ಅಣುಗಳಿಗೆ ರೂಪಾದಿಗಳಿವೆ ಎಂಬ ವಿಕಲ್ಪಕ್ಕೆ ಹಿಂದಿನ ಸೂತ್ರದಿಂದಲೇ ದೋಷವನ್ನು ಹೇಳಿ ಆಗಿದೆ. ಆದ್ದರಿಂದ ಈ ಸೂತ್ರದಲ್ಲಿ 'ಉಭಯಥಾ' ಎಂಬ ಶಬ್ದದ ಜಾಗದಲ್ಲಿ 'ಅನ್ಯಥಾ' ಎಂದಿದ್ದರೆ ಸಾಕಾಗುತ್ತಿತ್ತು. ಅನ್ಯಥಾ ಎಂದರೆ ರೂಪಾದಿಗಳು ಇಲ್ಲ ಎಂಬ ಪಕ್ಷದಲ್ಲಿ ಎಂದು ಸ್ಪಷ್ಟವಾಗುತ್ತದೆ ಆದ್ದರಿಂದ ಎಂದರ್ಥ.

**प्रकाशः –** ननु श्रुतप्रकाश एवैतदाशङ्क्य समाहितं ''अन्यथा चेति नोक्तम् । अपि तूभयथेत्युक्तम् । अत्र शिरोन्तरं नास्तीत्यभिप्राय'' इतीति चेन्न ।

ಪ್ರಶ್ನೆ- ನೀವು ಹೇಳುವ ಆಕ್ಷೇಪವನ್ನು ರಾಮಾನುಜಭಾಷ್ಯವ್ಯಾಖ್ಯಾನವಾದ ಶ್ರುತಪ್ರಕಾಶದಲ್ಲಿ ಮಾಡಿಕೊಂಡು ಉತ್ತರವನ್ನು ಕೊಟ್ಟಿದ್ದಾರೆ. ಸೂತ್ರದಲ್ಲಿ ಅನ್ಯಥಾ ಎನ್ನದೇ ಉಭಯಥಾ ಎಂದಿದ್ದಾರೆ. ಇದರ ಪ್ರಯೋಜನವೇನು ? ಎಂದು ಪ್ರಶ್ನೆ ಮಾಡಿಕೊಂಡು ಶಿರೋಂತರ (ಕೋಟ್ಯಂತರ) ಅಂದರೆ ಬೇರೆ ವಿಕಲ್ಪವಿಲ್ಲ ಎಂಬುದನ್ನು ಸೂಚನೆ ಮಾಡಿಕೊಡುವುದಕ್ಕಾಗಿ ಎಂದು ಉತ್ತರ ಕೊಟ್ಟಿದ್ದಾರೆ. (ರೂಪಾದಿಗಳು ಇವೆ ಅಥವಾ ಇಲ್ಲ ಈ ಎರಡು ಪಕ್ಷಕ್ಕಿಂತ ಅತಿರಿಕ್ತವಾದ ಪಕ್ಷ ಇಲ್ಲ ಎಂಬುದನ್ನು ಸೂಚಿಸುವುದಕ್ಕಾಗಿ ಸೂತ್ರಕಾರರು 'ಅನ್ಯಥಾ' ಎಂದು ಹೇಳದೇ 'ಉಭಯಥಾ' ಎಂದಿದ್ದಾರೆ.)

**प्रकाशः –** कोट्यन्तराभावस्य स्फुटत्वेन तस्यासूचनीयत्वात् । सूचनेन फलातिशयाभावाच्च ।। शब्दप्रतिपत्त्योर्गौरवाच्चेति भावः ।। वैशेषिकाधिकरणम्।।६।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**

**चन्द्रिकाप्रकाशे वैशेषिकाधिकरणं सम्पूर्णम् ।।६।।**

ಮತ್ತೊಂದು ಪ್ರಕಾರ ಸ್ಪಷ್ಟವಾಗಿರುವುದರಿಂದ ಇಲ್ಲ ಎಂದು ಸೂಚನೆ ಮಾಡುವ ಅವಶ್ಯಕತೆ ಇಲ್ಲ. ಒಂದು ವೇಳೆ ಸೂಚನೆ ಮಾಡಿದರೂ ಅದರಿಂದ ವಿಶೇಷ ಪ್ರಯೋಜನ ಏನೂ ಇಲ್ಲ. ಅದರಿಂದ ಶಬ್ದಗೌರವ ಹಾಗೂ ಪ್ರತಿಪತ್ತಿ (ಅರ್ಥ) ಗೌರವಗಳೆರಡೂ ಬರುತ್ತವೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ವೈಶೇಷಿಕಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ಸಮುದಾಯಾಧಿಕರಣ

(೨-೨-೭)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಸಮುದಾಯಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – समुदाय उभयहेतुकेऽपि तदप्राप्तिः ॥**

ಪರಮಾಣುಗಳ ಸಮುದಾಯವೇ ಘಟ-ಪಟಾದಿ ಪದಾರ್ಥಗಳೆಂದು ಬೌದ್ಧರು ಹೇಳುತ್ತಾರೆ. ಒಂದೇ ಅಣುವಿನಿಂದ ಸಮುದಾಯವು ಹುಟ್ಟುತ್ತದೆ ಎಂಬ ಮಾತು ವ್ಯಾಹತ. ಅನೇಕ ಅಣುಗಳಿಂದ ಸಮುದಾಯವು ಹುಟ್ಟುತ್ತದೆಂದರೆ ವಿರಳವಾದ ಅಣುಗಳಿಂದ ಸಮುದಾಯ ಹುಟ್ಟುತ್ತದೋ, ಮಿಲಿತವಾದ ಅಣುಗಳಿಂದ ಸಮುದಾಯ ಹುಟ್ಟುತ್ತದೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ವಿರಳವಾದ ಪರಮಾಣುಗಳಿಂದ ಸಮುದಾಯ ಹುಟ್ಟುವುದಾದರೆ, ಪ್ರಳಯಕಾಲದಲ್ಲಿಯೂ ಘಟ-ಪಟಾದಿ ವಸ್ತುಗಳು ಹುಟ್ಟಬೇಕಾದೀತು. ಮಿಲಿತವಾದ ಪರಮಾಣುಗಳಿಂದ ಸಮುದಾಯ ಹುಟ್ಟುತ್ತದೆ ಎಂದರೆ ಮಿಲಿತವಾಗಬೇಕಾದರೆ ಸಮುದಾಯವಿರಬೇಕು. ಸಮುದಾಯಕ್ಕಾಗಿ ಮಿಲಿತ ಅಣುಗಳು ಬೇಕು. ಹೀಗೆ ಅನ್ಯೋನ್ಯಾಶ್ರಯ ಬರುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – यतः **समुदाये** परमाणुसमुदायेऽनेकत्वसङ्ख्यारूपे मिलितानेकपरमाणुनिमित्तकेऽङ्गीकृते सत्यपि विरलानेकहेतुके वाऽङ्गीकृते सति। **तदप्राप्तिः** तस्य समुदायस्य विरलानेकहेतुकस्याप्राप्तिः अनुपपत्तिः । कुतः अन्योन्याश्रयादिदोषादिति शेषः । तदुपपादितं टीकायाम् । अतः परमाणुपुञ्ज एव घटावयवीति बौद्धपक्षोऽपि न क्षम इत्यर्थः ।।१।।

ಯಾವ ಕಾರಣದಿಂದ ಸಮುದಾಯೇ = ಪರಮಾಣು ಸಮುದಾಯದಲ್ಲಿ ಅನೇಕತ್ವಸಂಖ್ಯೆಯನ್ನು ಒಪ್ಪಿದರೆ, ಅನೇಕ ಪರಮಾಣುಗಳು ಮಿಲಿತವಾಗಿ ಸಮುದಾಯಕ್ಕೆ ಕಾರಣವಾಗುತ್ತವೋ, ವಿರಲವಾಗಿ ಸಮುದಾಯಕ್ಕೆ ಕಾರಣವಾಗುತ್ತವೋ ? ಎರಡು ಪಕ್ಷದಲ್ಲಿಯೂ, ತದಪ್ರಾಪ್ತಿಃ = ಸಮುದಾಯವೇ ಅನುಪಪನ್ನವಾಗುತ್ತದೆ ಏಕೆಂದರೆ, ಅನ್ಯೋನ್ಯಾಶ್ರಯದೋಷ ಬರುತ್ತದೆ. ಇದನ್ನು ಟೀಕೆಯಲ್ಲಿ ಉಪಪಾದನೆ ಮಾಡಿದ್ದಾರೆ. ಆದ್ದರಿಂದ ಪರಮಾಣುಗಳ ಸಮುದಾಯವೇ ಘಟ-ಪಟ ಮೊದಲಾದ ಪದಾರ್ಥಗಳೆಂಬ ಬೌದ್ಧರ ಪಕ್ಷವು ಸಹಿಸಲು ಅಸಾಧ್ಯವಾಗಿದೆ.

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ
# ಬ್ರಹ್ಮಸೂತ್ರಭಾಷ್ಯ

**भाष्यम् – परमाणुपुञ्जवादिमतमपाकरोति ।**

**।। समुदाय उभयहेतुकेऽपि तदप्राप्तिः ।।१।।**

**समुदायस्यैकहेतुकत्वं न युज्यते ।**

**उभयहेतुकेऽपि अन्योन्याश्रयत्वात् तदप्राप्तिः । अन्यथा सर्वदा समुदायसत्त्वं स्यात् ।।१।।**

ಅನುವಾದ - ಪರಮಾಣುಗಳ ಸಮೂಹವೇ ಘಟಪಟಾದಿ ಕಾರ್ಯಪ್ರಪಂಚವಾಗಿದೆ ಎಂದು ಹೇಳುವ ಕೆಲವು ಬೌದ್ಧರ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ಒಂದೇ ವಸ್ತುವು ಸಮುದಾಯಕ್ಕೆ ಕಾರಣವಾಗಲು ಸಾಧ್ಯವಿಲ್ಲ. ಅನೇಕ ವಸ್ತುಗಳನ್ನು ಕಾರಣವೆಂದರೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ವಿರಳವಾದ ಅನೇಕ ವಸ್ತುಗಳು ಸಮುದಾಯಕ್ಕೆ ಕಾರಣವೆಂದು ಹೇಳಿದರೆ ನಿರಂತರವಾಗಿ ಸಮುದಾಯವು ಇರಬೇಕಾದೀತು.

ಪ್ರತಿಪದಾರ್ಥ -- ವೈಭಾಷಿಕ ಸೌತ್ರಾಂತಿಕ ಮಾಧ್ಯಮಿಕ ಯೋಗಾಚಾರ ಎಂಬ ನಾಲ್ಕುಪಂಗಡವನ್ನು ಹೊಂದಿರುವ ಬೌದ್ಧರ ಮತದಲ್ಲಿ ಪರಮಾಣುಸಮುದಾಯವೇ ಘಟಪಟಾದಿಕಾರ್ಯವೆಂದು ಹೇಳುವ ವೈಭಾಷಿಕರ ಮತವನ್ನು ಮೊದಲು ನಿರಾಕರಣೆ ಮಾಡುತ್ತಿದ್ದಾರೆ. ಪರಮಾಣುಪುಂಜವಾದಿಮತಮ್ = ಪರಮಾಣು ಗುಂಪಿನಿಂದ ಕಾರ್ಯಪ್ರಪಂಚವೆಂದು ಹೇಳುವ ವೈಭಾಷಿಕರ ಮತವನ್ನು, ಅಪಾಕರೋತಿ = ಸೂತ್ರಕಾರರು ನಿರಾಕಣೆ ಮಾಡುತ್ತಿದ್ದಾರೆ.

ಸಮುದಾಯಸ್ಯ = ಪರಮಾಣು ಸಮುದಾಯಕ್ಕೆ, ಏಕಹೇತುಕತ್ವಮ್ = ಒಂದೇ ಪರಮಾಣುವು ಕಾರಣವಾಗಿದೆ ಎಂಬುದು, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಉಭಯಹೇತುಕೇಽಪಿ = ಒಂದೇ ಪರಮಾಣು ಅಥವಾ ಅನೇಕ ಪರಮಾಣುಗಳು ಕಾರಣವೆಂದು ಹೇಳಿದರೂ, ಅನ್ಯೋನ್ಯಾಶ್ರಯತ್ವಾತ್ = ಅನ್ಯೋನ್ಯಾಶ್ರಯದೋಷವು

ಬರುತ್ತದೆ. ಆದ್ದರಿಂದ ತದಪ್ರಾಪ್ತಿಃ = ಸಮುದಾಯವು ಯುಕ್ತವೇ ಆಗುವುದಿಲ್ಲ. ಅನ್ಯಥಾ = ವಿರಳವಾದ ವಸ್ತುಗಳು ಕಾರಣವೆಂದು ಹೇಳಿದರೆ, ಸರ್ವದಾ = ನಿರಂತರವಾಗಿ, ಸಮುದಾಯಸತ್ವಂ = ಸಮುದಾಯದ ಇರುವಿಕೆಯು, ಸ್ಯಾತ್ = ಒಪ್ಪಬೇಕಾದೀತು.

## ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ
# ತತ್ವಪ್ರಕಾಶಿಕಾ

**तत्वप्रकाशिका –**

**।। अधिकरणार्थं दर्शयति ।। परमाणुपुञ्जेति ।। द्विविधसमयिनां मध्ये हैतुकनिरासानन्तरं पाषण्डिनां निराकरणं प्राप्तम् । पाषण्डिनोऽपि द्विविधाः । अवैदिका वैदिकाश्च । तत्रावैदिकानामतिविरोधिनां निराकरणं प्रथमप्राप्तम् । तत्र बौद्धजैनानां मध्ये बौद्धस्यैव प्राथमिकत्वादादौ तन्निराक्रिया युक्ता ।**

ಸಮುದಾಯಾಧಿಕರಣದ ಪ್ರಮೇಯವನ್ನು 'ಪರಮಾಣುಪುಂಜ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

ಹೈತುಕ ಹಾಗೂ ಪಾಷಂಡಿ ಎಂಬುದಾಗಿ ಸಮಯಗಳು ಎರಡುವಿಧ. ಇವರಿಬ್ಬರ ನಡುವೆ ಹೈತುಕಮತವನ್ನು ಇಲ್ಲಿಯತನಕ ನಿರಾಕರಣೆ ಮಾಡಿದ್ದಾಯಿತು. ಈಗ ಪಾಷಂಡಿಗಳ ನಿರಾಕರಣೆಯು ಸಂಗತವಾಗಿದೆ. ಪಾಷಂಡಿಗಳೂ ಕೂಡ ಎರಡು ವಿಧ - ೧) ಅವೈದಿಕರು ೨) ವೈದಿಕರು ಎಂದು. ಅವೈದಿಕರು ನಮ್ಮ ಸಿದ್ಧಾಂತಕ್ಕೆ ಅತ್ಯಂತ ವಿರೋಧಿಗಳಾದ್ದರಿಂದ ಅವರ ನಿರಾಕರಣೆಯು ಮೊದಲು ಪ್ರಾಪ್ತವಾಗಿದೆ. ಅದರಲ್ಲೂ ಬೌದ್ಧ ಜೈನರ ನಡುವೆ ಬೌದ್ಧರೇ ಮೊದಲು ಪ್ರಾಪ್ತರಾಗಿದ್ದಾರೆ. ಆದ್ದರಿಂದ ಇವರ ನಿರಾಕರಣೆಯನ್ನು ಮಾಡುವುದೇ ಈಗ ಸಂಗತವಾಗಿದೆ.

ವಿವರಣೆ - 1) ಗೌತಮ 2) ಕಾಣಾದ 3) ಸಾಂಖ್ಯ 4) ಯೋಗ ಎಂಬುದಾಗಿ ಹೈತುಕರು ನಾಕುವಿಧ. ಈ ಎಲ್ಲರ ಮತಗಳನ್ನು ಇಲ್ಲಿಯತನಕ ನಿರಾಕರಣೆ ಮಾಡಿದ್ದಾಯಿತು. ಇವರೆಲ್ಲರೂ ಹೈತುಕರ ಪಂಗಡದಲ್ಲಿ ಸೇರುತ್ತಾರೆ. ಮುಂದೆ ಪಾಷಂಡಿಗಳ ನಿರಾಕರಣೆಯನ್ನು ಮಾಡಲು ಹೊರಟಿದ್ದಾರೆ.

'ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ' ಎಂಬ ಮಾತಿನಂತೆ ಜಿನನೇ ಮೊದಲು ಹುಟ್ಟಿದನು. ಬುದ್ಧನು ಅನಂತರ ಹುಟ್ಟಿದವನು. ಆದರೂ ಕೂಡ ಶಿಶುರೂಪದಿಂದ ಬುದ್ಧನು ವೇದನಿಂದಾತ್ಮಕವಾದ ಪಾಷಂಡಮತವನ್ನು ಸ್ಥಾಪನೆ ಮಾಡಿದನು. ಆದರಲ್ಲಿ ಕೆಲವನ್ನು ಅಂಗೀಕರಿಸಿ ಪುನಃ ಜಿನನು ವೇದನಿಂದಾತ್ಮಕವಾದ ಮತ್ತೊಂದು ಮತವನ್ನು ಸ್ಥಾಪನೆ ಮಾಡಿದನು. ಆದ್ದರಿಂದ ಬುದ್ಧನನ್ನು ಇಲ್ಲಿ ಪ್ರಾಥಮಿಕನೆಂದು ಅಂಗೀಕರಿಸಲಾಗಿದೆ.

**तत्वप्रकाशिका – बौद्धानां बहुविधत्वेऽपि परमाणुकारणताभ्युपगन्तृनिराकरणासङ्गत्या वैभाषिकसौत्रान्तिकमतमत्र निषिध्यत इति भावः ।**

ಬೌದ್ಧರು ಬಹುವಿಧರಾಗಿದ್ದಾರೆ. ಆದರೂ ಕೂಡ ಪರಮಾಣುಕಾರಣತ್ವವನ್ನು ಒಪ್ಪುವ ವೈಶೇಷಿಕರ ನಿರಾಕರಣೆಯನ್ನು ಈಗಾಗಲೇ ಮಾಡಿದ್ದರಿಂದ ಪ್ರಸಂಗಸಂಗತಿಯಿಂದ ಮೊದಲು ವೈಭಾಷಿಕ ಮತ್ತು ಸೌತ್ರಾಂತಿಕ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ.

ವಿವರಣೆ - ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ, ಯೋಗಾಚಾರ ಇತ್ಯಾದಿಯಾಗಿ ಬೌದ್ಧಮತವು ಬಹುವಿಧವಾಗಿದೆ. 'ಬಹುವಿಧತ್ವೇऽಪಿ' ಎಂಬ ಟೀಕಾವಾಕ್ಯದಲ್ಲಿರುವ 'ಅಪಿ'ಶಬ್ದದಿಂದ 'ಮಾಧ್ಯಮಿಕ ಮತಗಳ ಅತಿವಿರೋಧವಿದ್ದರೂ' ಎಂಬುದನ್ನು ವಿವಕ್ಷಿಸಬೇಕು.

ಈಅಧಿಕರಣದಲ್ಲಿ ವಿಷ್ಣುವಿನ ಜಗಜ್ಜನ್ಮಾದಿಕರಣವಿಷಯದಲ್ಲಿ ಬೌದ್ಧಮತ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ಶ್ರೀಹರಿಯು ಜಗಜ್ಜನ್ಮಾದಿಕಾರಣನೆಂದು ಹೇಳಲಾಯಿತು. ಈ ಪ್ರಮೇಯಕ್ಕೆ ಬೌದ್ಧಮತದ ವಿರೋಧವು ಬರುವುದರಿಂದ ಇದು ಶ್ರೀಹರಿಯಲ್ಲಿ ಕೂಡದಿರಬೇಕಾದೀತು ಎಂಬ ಆಪತ್ತಿ ಬರುತ್ತದೆ. ಆದ್ದರಿಂದ ಬೌದ್ಧಮತವನ್ನು ನಿರಾಕರಣೆ ಮಾಡಲೇಬೇಕು.

ಈಶ್ವರನ ಜಗಜ್ಜನ್ಮಾದಿಕಾರಣತ್ವವು ಅಧಿಕರಣದ ವಿಷಯ. ಇದು ಈಶ್ವರನಲ್ಲಿ ಯುಕ್ತವೋ ಅಯುಕ್ತವೋ ? ಎಂದು ಸಂದೇಹ. ಮತಗಳಲ್ಲಿರುವ ವಿವಾದವು ಸಂದೇಹಕ್ಕೆ ಕಾರಣ.

1) ಸೌತ್ರಾಂತಿಕರು - ಪರಮಾಣುಪುಂಜವಾದಿಗಳು. ಪರಮಾಣುಪುಂಜವೇ ಘಟ. ಆದರೂ ಕ್ಷಣಿಕವಾಗಿದೆ ಮತ್ತು ಪ್ರತ್ಯಕ್ಷಸಿದ್ಧವಾಗಿದೆ ಎನ್ನುತ್ತಾರೆ.

2) ವೈಭಾಷಿಕರು - ಪರಮಾಣುಪುಂಜರೂಪವಾದ ಈ ಘಟಪಟಾದಿಗಳು ಪ್ರತ್ಯಕ್ಷ ಸಿದ್ಧವಲ್ಲ. ಅನುಮಾನದಿಂದ ಸಿದ್ಧವಾಗುತ್ತದೆಂದು ವೈಭಾಷಿಕರು ಹೇಳುತ್ತಾರೆ. ಆದ್ದರಿಂದ ಸೌತ್ರಾಂತಿಕರಿಗಿಂತ ವೈಭಾಷಿಕರು ಅತ್ಯಂತ ವಿರೋಧಿಗಳು.

3) ಯೋಗಾಚಾರರು - ಜ್ಞಾನಕ್ಕಿಂತ ಅತಿರಿಕ್ತವಾದ ಬಾಹ್ಯಪದಾರ್ಥವೇ ಇರುವುದಿಲ್ಲ ಎನ್ನುತ್ತಾರೆ. ಇವರು ಸೌತ್ರಾಂತಿಕರು ಮತ್ತು ವೈಭಾಷಿಕರಿಗಿಂತ ಅತ್ಯಂತ ವಿರೋಧಿಗಳು. ಸಕಲ ಘಟ-ಪಟಾದಿ ಪದಾರ್ಥಗಳೆಲ್ಲವೂ ಶೂನ್ಯವಾಗಿವೆ ಎನ್ನುತ್ತಾರೆ.

4) ಮಾಧ್ಯಮಿಕರು - ಇವರು ಹಿಂದಿನ ಮೂರು ಮತಗಳಿಗಿಂತ ಅತ್ಯಂತ ವಿಭಿನ್ನರು.

ಈ ಕ್ರಮದಲ್ಲಿಯೇ ಬೌದ್ಧಮತವನ್ನು ನಿರಾಕರಣೆ ಮಾಡಬೇಕು. ಮೊದಲು ಮಾಧ್ಯಮಿಕರನ್ನು, ಅನಂತರ ಯೋಗಾಚಾರರನ್ನು, ತದನಂತರ ವೈಭಾಷಿಕರನ್ನು ಕೊನೆಯಲ್ಲಿ ಸೌತ್ರಾಂತಿಕರನ್ನು ಕ್ರಮವಾಗಿ ನಿರಾಕರಣೆ ಮಾಡಬೇಕು. ಆದರೆ ಪ್ರಾರಂಭದಲ್ಲೇ ವೈಭಾಷಿಕರನ್ನು ಹಾಗೂ ಸೌತ್ರಾಂತಿಕರನ್ನು ನಿರಾಕರಣೆ ಮಾಡುತ್ತಿದ್ದಾರೆ. ಇದು ಅಸಂಗತವಲ್ಲವೆ?

ಈ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಈಗಾಗಲೇ ಹಿಂದಿನ ಅಧಿಕರಣದಲ್ಲಿ ಪರಮಾಣ್ವಾರಂಭವಾದವನ್ನು ನಿರಾಕರಣೆ ಮಾಡಿದ್ದರಿಂದ ಪರಮಾಣುಪುಂಜವನ್ನೇ ಘಟವೆಂದು ಹೇಳುವ ವೈಭಾಷಿಕರ ಮತ ಹಾಗೂ ಸೌತ್ರಾಂತಿಕಮತವು ಬುದ್ಧಿಯಲ್ಲಿ ಉಪಸ್ಥಿತವಾಗುತ್ತದೆ. ಆದ್ದರಿಂದ ಇವರನ್ನೇ ಇಲ್ಲಿ ಪ್ರಸಂಗಸಂಗತಿಯಿಂದ ನಿರಾಕರಣೆ ಮಾಡಿದ್ದಾರೆ.(ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – न युक्तमिति पूर्वपक्षः । रूपविज्ञानवेदनासंज्ञासंस्काररूपेणावस्थितं खलु जगत्परमार्थसत्, तदशेषं परमाणुसमुदायमात्रं न त्ववयवी नाम कश्चिदस्ति । परमाणुसमुदाय एव घटादिबुद्ध्युपपत्तौ परमाणुपरिणामस्य तदारब्धस्य वाऽवयविनोऽभ्युपगमस्य व्यर्थत्वात् ।**

ಈಶ್ವರನಿಗೆ ಜಗತ್ಕಾರಣತ್ವವು ಯುಕ್ತವಲ್ಲವೆಂಬುದು ಅಧಿಕರಣದ ಪೂರ್ವಪಕ್ಷ. ರೂಪಸ್ಕಂಧ ವಿಜ್ಞಾನಸ್ಕಂಧ, ವೇದನಾಸ್ಕಂಧ, ಸಂಜ್ಞಾಸ್ಕಂಧ, ಸಂಸ್ಕಾರಸ್ಕಂಧ ಈ ಐದು ರೂಪಗಳಿಂದ ಇರುವ ಜಗತ್ತು ಪಾರಮಾರ್ಥಿಕವಾಗಿ ಸತ್ಯವಾಗಿದೆ. ಇವೆಲ್ಲವೂ ಪರಮಾಣುರೂಪವೇ ಹೊರತು ಪ್ರತ್ಯೇಕವಾಗಿ ಅವಯವಿ ಎಂಬುದೇ ಇಲ್ಲ. ಪರಮಾಣುಸಮುದಾಯವೇ 'ಇದು ಘಟ' ಎಂಬ ಬುದ್ಧಿಗೆ ವಿಷಯವಾಗಿದೆ. ಪರಮಾಣುಗಳಿಗಿಂತ ಬೇರೆಯಾದ ಪರಿಣಾಮವನ್ನಾಗಲಿ ಪರಮಾಣು-ಗಳಿಂದ ಆರಬ್ಧವಾದ ಅವಯವಿಯನ್ನಾಗಲಿ ಅಂಗೀಕಾರಮಾಡುವುದು ವ್ಯರ್ಥವಾಗಿದೆ.

ವಿವರಣೆ - 1) ರೂಪಸ್ಕಂಧ - ರೂಪ, ರಸ, ಗಂಧ, ಸ್ಪರ್ಶ, ಶಬ್ದರೂಪವಾದ ಐದು ಪರಿಮಾಣಗಳೇ ರೂಪಸ್ಕಂಧ.

2) ವಿಜ್ಞಾನಸ್ಕಂಧ - ಅಹಂ ಎಂಬ ಅಭಿಮಾನಾರೂಢವಾದ ನಿರ್ವಿಕಲ್ಪಕಜ್ಞಾನವು ವಿಜ್ಞಾನಸ್ಕಂಧ.

3) ವೇದನಾಸ್ಕಂಧ - ದುಃಖವು ವೇದನಾಸ್ಕಂಧವೆನಿಸುತ್ತದೆ. ಸುಖವು ದುಃಖಾಭಾವ ರೂಪವಾಗಿದೆ. ಸುಖವೂ ಕೂಡ ವೇದನಾಸ್ಕಂಧವೆಂದು ಕೆಲವರು ಹೇಳುತ್ತಾರೆ.

4) ಸಂಜ್ಞಾಸ್ಕಂಧ - ಕುಂಡಲವಿರುವ ಹಸು ಹೋಗುತ್ತದೆ. ಇತ್ಯಾದಿ ವಿಶೇಷಣ ಸಹಿತ ಜ್ಞಾನವು ಸಂಜ್ಞಾಸ್ಕಂಧ.

5) ಸಂಸ್ಕಾರಸ್ಕಂಧ - ರಾಗ, ದ್ವೇಷ, ಮೋಹ, ಮೊದಲಾದ ಸ್ವರೂಪವುಳ್ಳ ಸಮನಂತರಪ್ರತ್ಯಯ, ಇವುಗಳ ವಾಸನೆ ಅಥವಾ ಸ್ಮೃತಿ ಇವುಗಳು ಸಂಸ್ಕಾರಸ್ಕಂಧ.

ಹೀಗೆ ಐದು ಸ್ಕಂಧಗಳೇ ಜಗದ್ರೂಪವಾಗಿ ಕಾಣಿಸುತ್ತಿವೆ.

**तत्वप्रकाशिका – विद्यमानं च सर्वं क्षणिकमेव । एतदेव हि पदार्थानां सत्त्वम् यत्कालतः क्षणिकत्वं देशतः परमाणुत्वं । तच्चैतत्कार्यं कालकर्मनिमित्तेन भवति अतः किमीश्वरेण । न च तदनभ्युपगमे मानविरोधः । आगमप्रामाण्यानभ्युपगमात् । अतो न लक्षणं युक्तमित्येवं प्राप्ते सिद्धान्तयत्सूत्रमुपन्यस्य व्याचष्टे – समुदाय इति ।।**

ಇರುವ ಸಕಲಪದಾರ್ಥಗಳು ಕ್ಷಣಿಕವೇ ಆಗಿವೆ. ಪದಾರ್ಥಗಳಿಗೆ ಕಾಲತಃ ಸತ್ವವೆಂದರೆ ಕ್ಷಣಿಕತ್ವ. ದೇಶದಿಂದ ಪದಾರ್ಥಗಳು ಪರಮಾಣುರೂಪಗಳಾಗಿವೆ. ಈ ಕಾರ್ಯವು ಕಾಲ, ಕರ್ಮ ಎಂಬ ನಿಮಿತ್ತದಿಂದ ಉಂಟಾಗುತ್ತದೆ. ಈಶ್ವರನನ್ನು ಒಪ್ಪುವ ಅವಶ್ಯಕತೆಯಿಲ್ಲ. ಈಶ್ವರನನ್ನು ಒಪ್ಪದಿದ್ದರೆ ಯಾವುದೇ ಪ್ರಮಾಣಗಳ ವಿರೋಧಕ್ಕೂ ಅವಕಾಶವು ಇಲ್ಲ. ಏಕೆಂದರೆ ಆಗಮಪ್ರಾಮಾಣ್ಯವನ್ನು ನಾವು ಅಂಗೀಕಾರ ಮಾಡಿರುವುದಿಲ್ಲ. ಆದ್ದರಿಂದ ಜಗತ್ಕಾರಣತ್ವವು ಈಶ್ವರನ ಲಕ್ಷಣವಾಗಲು ಸಾಧ್ಯವಿಲ್ಲ. ಇಷ್ಟು ಈ ಅಧಿಕರಣದ ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ಸಮುದಾಯ ಉಭಯಹೇತುಕೇಽಪಿ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಪರಮಾಣುಗಳಿಗಿಂತ ಅತಿರಿಕ್ತವಾದ ಪರಿಣಾಮವೇ ಇಲ್ಲ. ಪರಮಾಣುರೂಪಗತವಾದ ಪದಾರ್ಥಗಳೆಲ್ಲವೂ ಕಾಲದಿಂದ ಕ್ಷಣಿಕವಾಗಿವೆ. ದೇಶದಿಂದ ಪರಮಾಣುರೂಪವಾಗಿವೆ. ಒಂದು ವೇಳೆ ಪರಮಾಣುಗಳು ಸ್ಥಾಯಿಯಾದರೆ ಒಂದೇ ಘಟದಿಂದ ಮನೆಯೆಲ್ಲವೂ ತುಂಬಿಕೊಳ್ಳಬೇಕಾಗುತ್ತದೆ. ಏಕೆಂದರೆ ಪರಮಾಣು ಸತ್ತಾಗಿದೆ ಎಂದರೆ ಅರ್ಥಕ್ರಿಯಾಕಾರಿಯಾಗಿದೆ ಎಂದರ್ಥ. ಆದರೆ ಪದಾರ್ಥವು ಕ್ಷಣಿಕ ಎಂದು ಹೇಳಿದಾಗ ಎರಡನೆಯ ಕ್ಷಣದಲ್ಲಿ ವಸ್ತುವೇ ಇಲ್ಲದ್ದರಿಂದ ಅರ್ಥಕ್ರಿಯಾಕಾರಿ ಆಗಲು ಹೇಗೆ ಸಾಧ್ಯ ? ಆದ್ದರಿಂದ ಒಂದು ಕ್ಷಣಿಕವಾದ ಘಟಪದಾರ್ಥವು ಮುಂದಿನ ಕ್ಷಣದಲ್ಲಿ ಹುಟ್ಟುವ ಕ್ಷಣಿಕವಾದ ಘಟರೂಪಪದಾರ್ಥಕ್ಕೆ ಆರಂಭಕವೆಂದೇ ಹೇಳಬೇಕು. ಇದನ್ನೇ ಅರ್ಥಕ್ರಿಯಾಕಾರಿತ್ವವೆಂದು ಕೂಡಿಸಬಹುದು.

ಯಾವುದು ಸತ್ಯಪದಾರ್ಥವೊ ಅದು ಕ್ಷಣಿಕವಾಗಿರುತ್ತದೆ. ಕ್ಷಣಿಕವಲ್ಲದಿದ್ದರೆ ಅದು ಸತ್ಯಪದಾರ್ಥ ಆಗಲು ಸಾಧ್ಯವಿಲ್ಲ. ಅದರಂತೆ ಯಾವುದು ಸತ್ಯಪದಾರ್ಥವೋ ಅದು ಪರಮಾಣು-ಪರಿಮಾಣವುಳ್ಳದ್ದಾಗಿರುತ್ತದೆ. ಇಲ್ಲದಿದ್ದರೆ ಪರಮಾಣುಪರಿಮಾಣವುಳ್ಳದ್ದಾಗಲೂ ಸಾಧ್ಯವಿಲ್ಲ. ಆದ್ದರಿಂದ ಘಟರೂಪಕಾರ್ಯವು ಕಾಲ ಹಾಗೂ ಕರ್ಮಗಳೆಂಬ ನಿಮಿತ್ತದಿಂದ ವ್ಯಾಪ್ತವಾಗಿದೆ. ಕಾಲಕರ್ಮಗಳಿಂದಲೇ ಎಲ್ಲವನ್ನು ಕೂಡಿಸಲು ಬರುತ್ತಿರುವಾಗ ಈಶ್ವರನು ಅನಾವಶ್ಯಕ ಎಂಬುದು ಬೌದ್ಧರ ಅಭಿಪ್ರಾಯ. (ವಾಕ್ಯಾರ್ಥಮಂಜರೀ)

**ತत्वप्रकाशिका – न विष्णोर्जगत्कारणत्वमयुक्तम् । बौद्धानामनुपपन्न-भाषित्वेन तत्कल्पनाया दुष्टत्वात् । तथाहि । कालकर्मादिनिमित्तेन क्षणिकः परमाणुनिमित्तकः समुदायो भवति न त्ववयवी कश्चिदस्तीति यदुक्तं तत्र प्रष्टव्यम् । किमयं समुदाय एकपरमाणुहेतुकोऽनेकपरमाणुहेतुको वेति ।**

ವಿಷ್ಣುವಿನ ಜಗತ್ಕಾರಣತ್ವವು ಅಯುಕ್ತವಲ್ಲ. ಬೌದ್ಧರು ಅನುಪಪನ್ನಭಾಷಿಗಳಾದ್ದರಿಂದ ಅವರ ಕಲ್ಪನೆ ದುಷ್ಟವಾಗಿದೆ. ಅದು ಹೀಗೆ - ಕಾಲ, ಕರ್ಮ, ಇವುಗಳ ನಿಮಿತ್ತದಿಂದ ಪರಮಾಣು-ನಿಮಿತ್ತವಾದ ಕ್ಷಣಿಕವಾದ ಸಮುದಾಯವು ಉಂಟಾಗುತ್ತದೆ. ಪ್ರತ್ಯೇಕವಾದ ಅವಯವಿಯೇ ಇಲ್ಲ ಎಂದು ಪೂರ್ವಪಕ್ಷಿಗಳು ಹೇಳಿದರು. ಇವರನ್ನು ಕುರಿತು ನಾವು ಪ್ರಶ್ನಿಸುತ್ತೇವೆ. ಈ

ಸಮುದಾಯವು ಒಂದೇ ಪರಮಾಣುವಿನಿಂದ ಉಂಟಾಗಿದೆಯೋ ಅಥವಾ ಅನೇಕ ಪರಮಾಣುಗಳಿಂದ ಉಂಟಾಗಿದೆಯೋ ? ಎಂದು.

ವಿವರಣೆ - ಸೂತ್ರದಲ್ಲಿರುವ 'ಅಪಿ'ಶಬ್ದವು ಒಂದೇ ಪರಮಾಣುವಿನಿಂದ ಸಮುದಾಯವು ಉತ್ಪನ್ನವಾಗಿದೆ ಎಂಬುದನ್ನು ಸಮುಚ್ಚಯ ಮಾಡುತ್ತಿದೆ. ಆದ್ದರಿಂದಲೇ ಭಾಷ್ಯದಲ್ಲಿ 'ಸಮುದಾಯಸ್ಯ ಏಕ ಹೇತುಕತ್ವಮ್' ಎಂದು ಹೇಳಿದ್ದಾರೆ.

**तत्वप्रकाशिका – आद्यस्तावदनुपपन्नः एकस्मात् समुदाय इत्यस्य व्याहतेः । द्वितीयोऽपि किं मिलितानेकहेतुको वा विरलानेकहेतुको वा । नाद्यः । मिलितानेकतः समुदायः समुदाये सति मिलितत्वमित्यन्योन्याश्रयतया समुदायानुपपत्तेः ।**

ಸಮುದಾಯವು ಒಂದೇ ಪರಮಾಣುವಿನಿಂದ ಉಂಟಾಗಿದೆ ಎಂದು ಹೇಳಿದರೆ ವ್ಯಾಹತಿದೋಷ ಬರುತ್ತದೆ. ಎರಡನೆಯ ಪಕ್ಷದಲ್ಲೂ ಕೂಡ ಮಿಲಿತವಾದ ಅನೇಕ ಪರಮಾಣುಗಳಿಂದ ಸಮುದಾಯ ಉಂಟಾಗಿದೆಯೋ ಅಥವಾ ವಿರಳವಾದ ಅನೇಕ ಪರಮಾಣುಗಳಿಂದ ಸಮುದಾಯವು ಉಂಟಾಗಿದೆಯೋ? ಮೊದಲನೆಯ ಪಕ್ಷವು ತಪ್ಪು. ಮಿಲಿತವಾದ ಅನೇಕ ಪರಮಾಣುಗಳಿಂದ ಸಮುದಾಯವು ಉಂಟಾಗಿದೆ ಎಂದು ಹೇಳಿದರೆ ಸಮುದಾಯವು ಮೊದಲು ಸಿದ್ಧವಾದರೆ ಮಿಲಿತತ್ವವು ಸಿದ್ಧವಾಗುತ್ತದೆ. ಮಿಲಿತತ್ವವು ಸಿದ್ಧವಾದರೆ ಸಮುದಾಯವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ ದೋಷವು ಬರುವುದರಿಂದ ಸಮುದಾಯವೇ ಅನುಪಪನ್ನವಾಯಿತು.

ವಿವರಣೆ - ಸೂತ್ರದಲ್ಲಿರುವ ಉಭಯಹೇತುಕ ಎಂಬುದಕ್ಕೆ 'ಸಮುದಿತವಾದ ಅನೇಕ ಪರಮಾಣುಹೇತುಕವಾದರೆ' ಅಥವಾ 'ವಿರಳವಾದ ಅನೇಕ ಪರಮಾಣುಹೇತುಕವಾದರೆ' ಎಂಬ ಅರ್ಥದ್ವಯಗಳನ್ನು ವಿವಕ್ಷಿಸಬೇಕು. ಪ್ರಥಮಪಕ್ಷದಲ್ಲಿ ಅನ್ಯೋನ್ಯಾಶ್ರಯದೋಷ ಬರುತ್ತದೆ. ಎರಡನೆಯ ಪಕ್ಷದಲ್ಲಿ ವಿರಳವಾದ ಅನೇಕ ಪರಮಾಣುಗಳು ನಿರಂತರ ಇರುವುದರಿಂದ ಸಮುದಾಯವೂ ನಿರಂತರ ಇರಬೇಕಾದೀತು. ಆಗ ಪ್ರಳಯವೇ ಅಪ್ರಾಪ್ತವಾಗುತ್ತದೆ. ಈ ಎರಡು ಅರ್ಥಗಳನ್ನು ವಿವಕ್ಷಿಸಿ 'ಉಭಯ ಹೇತುಕೇಽಪಿ' ಇತ್ಯಾದಿ ಭಾಷ್ಯವು ಹೊರಟಿದೆ. ಇದನ್ನು ಟೀಕೆಯಲ್ಲಿ ವಿಕಲ್ಪಮುಖದಲ್ಲಿ 'ಕಿಮಯಂ' ಇತ್ಯಾದಿಯಾಗಿ ಪ್ರಶ್ನಿಸಿದ್ದಾರೆ.

ಸಮುದಾಯ ಎಂದರೆ ಪರಮಾಣುಗಳ ಸಂಯೋಗವೋ ? ಅಥವಾ ಅನೇಕತ್ವಸಂಖ್ಯೆಯೋ? ಅಥವಾ ಒಂದೇ ಪ್ರದೇಶದಲ್ಲಿ ಇರುವಿಕೆಯೋ ? ಅಥವಾ ಪರಮಾಣುಗಳಿಂದ ಆರಬ್ಧವಾದ ದ್ರವ್ಯಾಂತರವೋ? ಈ ನಾಕು ಪಕ್ಷಗಳಲ್ಲೂ ಕೂಡ ವ್ಯಾಹತಿಯು ಇದ್ದೇ ಇದೆ. ಇದನ್ನು ಟೀಕೆಯಲ್ಲಿ 'ವ್ಯಾಹತೇಃ' ಎಂಬುದರಿಂದ ಹೇಳಿದ್ದಾರೆ.

ಸಮುದಾಯವು ಮೊದಲು ಸಿದ್ಧವಾದರೆ ಅನೇಕ ಪರಮಾಣುಗಳಿಗೆ ಸಮುದಿತತ್ವವು ಸಿದ್ಧವಾಗುತ್ತದೆ. ಸಮುದಿತತ್ವವು ಸಿದ್ಧವಾದರೆ ಅದರಿಂದ ಸಮುದಾಯವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೆ.

**तत्वप्रकाशिका – नोत्तरः । अमिलितपरमाणूनां सदा सद्भावेन समुदायस्यापि सदातनत्वापत्त्या प्रलयाभ्युपगमविरोधापातादिति भावः । अत्रातिपीडायामनवस्थापि द्रष्टव्या ।।१८।।**

ವಿರಳವಾದ ಅನೇಕ ಪರಮಾಣುವಿನಿಂದ ಸಮುದಾಯವು ಉಂಟಾಗಿದೆ ಎಂಬ ಎರಡನೆಯಪಕ್ಷವೂ ಕೂಡ ತಪ್ಪು. ಏಕೇದರೆ ಮಿಲಿತವಲ್ಲದ ಪರಮಾಣುಗಳು ನಿರಂತರವಾಗಿ ಇದ್ದೇ ಇರುವುದರಿಂದ ಸಮುದಾಯವು ಕೂಡ ಯಾವಾಗಲೂ ಇದೆ ಎಂದು ಹೇಳಿದಂತಾಯಿತು. ಆಗ ಪ್ರಳಯವನ್ನು ಒಪ್ಪಿದ್ದು ವಿರುದ್ಧವಾಗುತ್ತದೆ. ಸಮುದಾಯಕ್ಕೆ ಕಾರಣವಾದ ಪರಮಾಣುಗಳ ಮೇಲನವು ಮತ್ತೊಂದು ಎಂದು ಹೇಳಿದರೆ ಒಂದು ಸಮುದಾಯದಿಂದ ಇನ್ನೊಂದು ಸಮುದಾಯ. ಆ ಸಮುದಾಯದಿಂದ ಇನ್ನೊಂದು ಸಮುದಾಯ, ಹೀಗೆ ಅತಿಪೀಡನ ಮಾಡಿದರೆ ಅನವಸ್ಥಾದೋಷವು ಬರುತ್ತದೆ.

ವಿವರಣೆ - ಮಿಲಿತವಾದ ಅನೇಕ ಪರಮಾಣುಗಳಿಂದ ಸಮುದಾಯ, ಆ ಪರಮಾಣುಗಳ ಮಿಲನವು ಬೇರೆ ಸಮುದಾಯದಿಂದ ಉಂಟಾಗುತ್ತದೆ. ಆದ್ದರಿಂದ ಅನ್ಯೋನ್ಯಾಶ್ರಯದೋಷವು ಬರುವುದಿಲ್ಲ ಎಂದು ಉತ್ತರಿಸಿದರೆ ಅನವಸ್ಥಾದೋಷವು ಬರುತ್ತದೆ. ಯಾವ ಪರಮಾಣುಗಳ ಮೇಲನದಿಂದ ಸಮುದಾಯ ಉಂಟಾಗುತ್ತದೋ ಆ ಸಮುದಾಯಕ್ಕೆ ಕಾರಣವಾದ ಪರಮಾಣುಗಳ ಮೇಲನ ಮತ್ತೊಂದು ಸಮುದಾಯದಿಂದ ಉಂಟಾಗಿದೆ. ಆ ಸಮುದಾಯಕ್ಕೆ ಕಾರಣವಾದ ಪರಮಾಣುಗಳ ಮೇಲನವು ಮತ್ತೊಂದು ಸಮುದಾಯದಿಂದ ಉಂಟಾಗಿದೆ ಎಂದು ಹೇಳಿದರೆ ಅತಿಪೀಡನವಾಗುತ್ತದೆ.

## ಬ್ರಹ್ಮಸೂತ್ರ

## सूत्रम् – इतरेतरप्रत्ययत्वादिति चेन्नोत्पत्तिमात्रनिमित्तत्वात् ।।

ಅನೇಕ ಪರಮಾಣುಗಳಿಂದ ಸಮುದಾಯವು ಹುಟ್ಟುತ್ತದೆ. ಆದರೆ ಪ್ರಳಯಕಾಲದಲ್ಲಿ ಬೇರೆ ಬೇರೆ ಕಡೆಯಿರುವ ಪರಮಾಣುಗಳಿಂದ ಅಪೇಕ್ಷಾಬುದ್ಧಿಯು ಹುಟ್ಟುವುದಿಲ್ಲ. ಆದ್ದರಿಂದ ಅನೇಕತ್ವವೆಂಬ ಸಮುದಾಯವೂ ಕೂಡ ಆ ಸಂದರ್ಭದಲ್ಲಿ ಇರುವುದಿಲ್ಲ. ಹೀಗಿರುವಾಗ ಪ್ರಳಯಕಾಲದಲ್ಲಿ ಘಟ-ಪಟಾದಿ ಕಾರ್ಯಗಳು ಉಂಟಾಗಲಿ ಎಂದು ಹೇಗೆ ಆಕ್ಷೇಪಿಸುತ್ತೀರಿ? ಬೌದ್ಧರ ಈ ವಾದವು ಅಸಾಧುವಾಗಿದೆ. ಏಕೆಂದರೆ ಬೌದ್ಧಮತದಲ್ಲಿ ಎಲ್ಲವೂ ಕ್ಷಣಿಕವಾದ್ದರಿಂದ ಪರಮಾಣುಗಳೂ ಕೂಡ ಕ್ಷಣಿಕವೇ ಆಗಿವೆ. ಮೊದಲು ಅಣುಗಳ ಜ್ಞಾನವು ಬಂದು ಅನಂತರ ಅಪೇಕ್ಷಾಬುದ್ಧಿಯಿಂದ ಸಮುದಾಯಬುದ್ಧಿಯು ಬರಬೇಕಾದರೆ ಹಿಂದಿನ ಕ್ಷಣಗಳ ಅಣುಗಳೇ ಇರುವುದಿಲ್ಲ. ಅಪೇಕ್ಷಾಬುದ್ಧಿ ಬರುವ ಸಮಯದಲ್ಲಿ ಹಿಂದಿನ ಕ್ಷಣದ ಅಣುಗಳು ನಾಶವಾಗಿರುವುದರಿಂದ ಇವರ ಈ ಪರಿಹಾರವು ತಪ್ಪಾಗುತ್ತದೆ. ಮತ್ತು ವಿರಳವಾದ ಅಣುಗಳು ಸಮುದಾಯದ ಉತ್ಪತ್ತಿಗೆ ಮಾತ್ರ ಕಾರಣವಾಗುತ್ತವೆ ಹೊರತು, ಘಟ-ಪಟಾದಿ ವ್ಯವಹಾರಗಳಿಗೆ ಕಾರಣವಾಗುವುದಿಲ್ಲ.

## ಸೂತ್ರದೀಪಿಕಾ

**सूत्रदीपिका** – ननु परमाणुपुञ्जस्य सदा सत्त्वेऽपि नास्मत्पक्षे प्रलयानुपपत्तिः। कुतः? तद्व्यवहारादेरितरेतरप्रत्ययत्वात् । इदमिदं चेति परमाणुपरस्परापेक्ष-बुद्धिनिमित्तकत्वात् । तथा च तादृशबुद्ध्यभावकाले समुदायव्यवहारादेरसत्त्वात् प्रलयोपपत्तिरिति चेन्न । कुतः? **उत्पत्तिमात्रनिमित्तत्वात्** परमाणूनां स्वसमुदायोत्पत्तिमात्र-निमित्तत्वात् । न तेभ्योऽपेक्षाबुद्ध्यादेरप्युत्पत्तिः सम्भवतीति **मात्रशब्दार्थः** । तथाच तन्निमित्तकव्यवहारादिः क्षणिकमते न कदाऽपि सम्भवतीत्यर्थः ।।२।।

ಪರಮಾಣುಗಳ ಪುಂಜವು ಯಾವಾಗಲೂ ಇರುತ್ತವೆ. ಆದರೂ ಪ್ರಳಯವೇ ಇಲ್ಲವೆಂಬ ಅನುಪಪತ್ತಿಯು ನಮ್ಮ ಪಕ್ಷದಲ್ಲಿ ಬರುವುದಿಲ್ಲ. ಏಕೆಂದರೆ ಇತರೇತರ ಪ್ರತ್ಯಯತ್ವಾತ್ = ಪರಸ್ಪರ, ಇದಮಿದಂ ಚ ಎಂಬುದಾಗಿ ಪರಮಾಣುಗಳ ಪರಸ್ಪರ ಅಪೇಕ್ಷಾಬುದ್ಧಿಯಿಂದ ಸಮುದಾಯದ ವ್ಯವಹಾರವು ನಡೆಯುತ್ತದೆ. ಆದ್ದರಿಂದ ಯಾವ ಕಾಲದಲ್ಲಿ ಅಂಥ ಅಪೇಕ್ಷಾಬುದ್ಧಿ ಇರುವುದಿಲ್ಲವೋ, ಅಂಥ ಪ್ರಳಯಕಾಲದಲ್ಲಿ ಸಮುದಾಯದ ವ್ಯವಹಾರವೂ ಕೂಡ ಇರುವುದಿಲ್ಲ. ಆದ್ದರಿಂದ ಪ್ರಳಯವು ಯುಕ್ತವಾಗುತ್ತದೆ. ಇತಿ ಚೇನ್ನ = ಇವರ ಈ ಉತ್ತರವು ಅಸಾಧುವಾಗಿದೆ. ಏಕೆಂದರೆ ಉತ್ಪತ್ತಿಮಾತ್ರನಿಮಿತ್ತತ್ವಾತ್ = ಪರಮಾಣುಗಳು ಸಮುದಾಯದ ಉತ್ಪತ್ತಿಗೆ ಮಾತ್ರ ನಿಮಿತ್ತವಾಗುತ್ತದೆ ಹೊರತು, ಅಪೇಕ್ಷಾಬುದ್ಧಿ ಉತ್ಪತ್ತಿಗೆ ಕಾರಣವಾಗುವುದಿಲ್ಲ. ಆದ್ದರಿಂದ ಅಪೇಕ್ಷಾಬುದ್ಧಿಯ ಕಾರಣದಿಂದ ವ್ಯವಹಾರಾದಿಗಳನ್ನು ಕ್ಷಣಿಕಮತದಲ್ಲಿ ಕೂಡಿಸಲು ಸಾಧ್ಯವಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। इतरेतरप्रत्ययत्वादिति चेन्नोत्पत्तिमात्रनिमित्तत्वात् ।।२।।**

**सर्वदा विद्यमानोऽपि समुदायः परस्परापेक्षया व्यवह्रियत इति चेन्न । एकं कार्यमुत्पाद्य तस्य विनष्टत्वात् परस्परप्रत्ययस्तदपेक्षया व्यवहार इति न युज्यते ।**

ಅನುವಾದ - ಪರಮಾಣುಗಳ ಸಮುದಾಯವು ನಿರಂತರವಾಗಿ ಇರುವುದು ಸತ್ಯ; ಆದರೂ ಕೂಡ 'ಇದು ಘಟ' 'ಇದು ಪಟ' ಇತ್ಯಾದಿಯಾಗಿ ವ್ಯವಹಾರವು ಯುಕ್ತವಾಗಬೇಕಾದರೆ ಒಂದು ಅಣುವಿನ ಜೊತೆ ಮತ್ತೊಂದು ಅಣು ಕಾಣಿಸಿ ಕೊಳ್ಳಬೇಕು. ಈ ಸಮರ್ಥನೆಯೂ ಕೂಡ ತಪ್ಪು. ಏಕೆಂದರೆ ಒಂದು ಅಣುವು ಮತ್ತೊಂದು ಕಾರ್ಯವನ್ನು ಹುಟ್ಟಿಸಿ ನಾಶವಾಗುತ್ತದೆ ಎಂಬುದು ಬೌದ್ಧಮತ. ಆದ್ದರಿಂದ ಜ್ಞಾನವು ಬರಬೇಕಾದರೆ ಒಂದರ ಜೊತೆ ಮತ್ತೊಂದು ಇರಬೇಕೆಂಬ ಕಲ್ಪನೆಯೇ ಇವರ ಮತದಲ್ಲಿ ಯುಕ್ತವಾಗುವುದಿಲ್ಲ.

ಪ್ರತಿಪದಾರ್ಥ -- ಹೀಗೆ ಹೇಳಿದ ಪ್ರಮೇಯವನ್ನು ಆಕ್ಷೇಪಮಾಡಿ ಮುಂದಿನ ಸೂತ್ರದಿಂದ ಉತ್ತರಿಸುತ್ತಿದ್ದಾರೆ. ಸರ್ವದಾ = ಯಾವಾಗಲೂ, ಸಮದಾಯಃ = ಪರಮಾಣುಗಳ ಸಮುದಾಯವು, ವಿದ್ಯಮಾನೋऽಪಿ = ಇರುವುದಾದರೂ, ಪರಸ್ಪರಾಪೇಕ್ಷಯಾ = ಒಂದರ ಜೊತೆ ಮತ್ತೊಂದು ಸೇರಿದಾಗ ಮಾತ್ರ, ವ್ಯವಹ್ರಿಯತೇ = 'ಘಟ' 'ಪಟ' ಮೊದಲಾದ ವ್ಯವಹಾರಗಳು ಯುಕ್ತವಾಗುತ್ತವೆ. ಇತಿ ಚೇನ್ನ = ಹೀಗೆ ಆಕ್ಷೇಪ ಮಾಡಬಾರದು. ಏಕಂ = ಒಂದುವಸ್ತುವಿನ, ಕಾರ್ಯಂ = ಕಾರ್ಯವನ್ನು, ಉತ್ಪಾದ್ಯ = ಹುಟ್ಟಿಸಿ, ತಸ್ಯ = ಆ ಸಮುದಾಯವು, ವಿನಷ್ಟತ್ವಾತ್ = ನಾಶವನ್ನು ಹೊಂದುವುದರಿಂದ, ಪರಸ್ಪರಪ್ರತ್ಯಯಃ = ಘಟಪಟಜ್ಞಾನಾದಿಗಳು ತದಪೇಕ್ಷಯಾ = ಒಂದರ ಜೊತೆ ಮತ್ತೊಂದು ಸೇರಿದಾಗ, ವ್ಯವಹಾರಃ = ಘಟಪಟ ಮೊದಲಾದ ವ್ಯವಹಾರವು, ಇತಿ = ಹೀಗೆ ಹೇಳುವುದು, ನ ಯುಜ್ಯತೇ = ಕೂಡುವುದೇ ಇಲ್ಲ.

**भाष्यम् – कारणे सति कार्यं भवत्येवेति हि तस्य नियमः ।।२।।**

ಅನುವಾದ - ಕಾರಣವಿದ್ದರೆ ಕಾರ್ಯವು ಆಗಿಯೇ ತೀರುತ್ತದೆ ಎಂಬುದು ಬೌದ್ಧರ ನಿಯಮ.

ಪ್ರತಿಪದಾರ್ಥ -- ಕಾರಣೇ = ಕಾರಣವು, ಸತಿ = ಇದ್ದ ಮೇಲೆ, ಕಾರ್ಯಂ = ಕಾರ್ಯವು, ಭವತ್ಯೇವ = ಆಗಿಯೇ ತೀರುತ್ತದೆ, ಇತಿ ಹಿ = ಹೀಗೆ, ತಸ್ಯ = ಬೌದ್ಧರ, ನಿಯಮಃ = ನಿಯಮವಿದೆ.

## ತತ್ವಪ್ರಕಾಶಿಕಾ

**तत्वप्रकाशिका – उक्तमाक्षिप्य समादधत्सूत्रमुपन्यस्याक्षेपांशं तावद् व्याचष्टे ।। इतरेति ।।**

ಪರಮಾಣುಸಮುದಾಯವು ಘಟಾದಿಕಾರ್ಯರೂಪವಾಗುವುದಿಲ್ಲ ಎಂಬುದನ್ನು ಆಕ್ಷೇಪ ಮಾಡಿ ಸಮಾಧಾನ ನೀಡುವ ಸೂತ್ರವನ್ನು 'ಇತರ' ಇತ್ಯಾದಿಯಾಗಿ ಪಠಿಸಿ ಆಕ್ಷೇಪಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – यदुक्तं समुदायस्य विरलानेकहेतुकत्वे सदातनत्वं स्यादिति तदङ्गीक्रियत एव। न चैवं प्रलयानुपपत्तिः । सदातनत्वेऽपि समुदायस्य वित्तिव्यवहाराभावेन प्रलयोपपत्तेः ।**

ಸಮುದಾಯವು ವಿರಳವಾದ ಅನೇಕ ಪರಮಾಣುಗಳಿಂದ ಉಂಟಾಗಿದೆ ಎಂದು ಹೇಳಿದರೆ ನಿತ್ಯವಾಗಬೇಕಾದೀತು ಎಂದು ಆಪತ್ತಿ ಮಾಡಿದರೆ ಬೌದ್ಧರು ಅದನ್ನು ಇಷ್ಟಾಪತ್ತಿ ಎನ್ನುತ್ತಾರೆ. ಅಂದಮಾತ್ರಕ್ಕೆ ಪ್ರಳಯವು ಅನುಪಪನ್ನವಾಗುವುದಿಲ್ಲ. ಕಾರ್ಯವು ನಿತ್ಯವಾದರೂ ಕೂಡ

ಸಮುದಾಯವು ಅಪೇಕ್ಷಾಬುದ್ಧಿ ಹಾಗೂ ವ್ಯವಹಾರಗಳಿಲ್ಲದಿರುವುದರಿಂದ ಪ್ರಳಯವು ಉಪಪನ್ನವಾಗುತ್ತದೆ.

ವಿವರಣೆ - ಸಮುದಾಯವೆಂದರೆ ಪರಮಾಣುಗಳ ಸಂಯೋಗವಲ್ಲ. ಹಾಗೆ ನಾವು ಅಂಗೀಕರಿಸಿಲ್ಲ. ದ್ರವ್ಯಾಂತರವೂ ಅಲ್ಲ. ಹಾಗಾದಲ್ಲಿ ಅದೇ ಅವಯವಿಯಾಗಬೇಕಾಗುತ್ತದೆ. ಕಿಂತು ಅನೇಕ ಸಂಖ್ಯಾರೂಪವನ್ನೇ ಸಮುದಾಯ ಎನ್ನುತ್ತೇವೆ. ವಿರಳವಾದ ಪರಮಾಣುಗಳಲ್ಲೂ ಇದು ನಿರಂತರ ಇರುತ್ತದೆ. ಅನೇಕತ್ವಸಂಖ್ಯೆಯು ಅಪೇಕ್ಷಾಬುದ್ಧಿಯಿಂದ ವ್ಯಂಗ್ಯವಾದ್ದರಿಂದ ಅದರ ಪ್ರತೀತಿ ಮತ್ತು ವ್ಯವಹಾರಗಳು ಇದ್ದಾಗ ಮಾತ್ರ ಸೃಷ್ಟಿ. ಇಲ್ಲದಿದ್ದರೆ ಪ್ರಳಯ ಎಂಬುದು ಪೂರ್ವಪಕ್ಷಕಾರರ ಸಮರ್ಥನೆ.

**ತತ್ವಪ್ರकाशिका – न च विद्यमानत्वे व्यवहारभावोऽपि कुत इति वाच्यम् । व्यवहारादेरिदं चेदं चेति परमाणुपरस्परापेक्षानिबन्धनत्वात् । परस्परापेक्षा च परमाणूनां सामीप्यापेक्षा । न चास्ति प्रलये तत्सामीप्यमतो नोक्तदोष इति भावः।**

ಸಮುದಾಯರೂಪವಾದ ಕಾರ್ಯವು ಇದ್ದರೂ ಕೂಡ ವ್ಯವಹಾರವು ಏಕೆ ಕೂಡುವುದಿಲ್ಲವೆಂದು ಪ್ರಶ್ನಿಸಬಾರದು ? ವ್ಯವಹಾರಾದಿಗಳು ಯಾವಾಗ ಕೂಡುತ್ತದೆ ಎಂದರೆ 'ಇದು' ಮತ್ತು 'ಇದು' ಎಂದು ಪರಮಾಣುಗಳಿಗೆ ಪರಸ್ಪರ ಅಪೇಕ್ಷಾಬುದ್ಧಿಯು ಉಂಟಾದಾಗ ಮಾತ್ರ ಪರಸ್ಪರ ಅಪೇಕ್ಷಾಬುದ್ಧಿಯಾದರೂ ಪರಮಾಣುಗಳ ಸಾಮೀಪ್ಯವಿದ್ದಾಗ ಯುಕ್ತವಾಗುತ್ತದೆ. ಪ್ರಳಯಕಾಲದಲ್ಲಿ ಪರಮಾಣುಗಳಿಗೆ ಸಾಮೀಪ್ಯವಿಲ್ಲದ್ದರಿಂದ ವ್ಯವಹಾರ ಮೊದಲಾದವುಗಳು ಯುಕ್ತವಾಗುವುದಿಲ್ಲ. ಈ ಆಕ್ಷೇಪಕ್ಕೆ ಪರಿಹಾರವನ್ನು 'ನ' ಇತ್ಯಾದಿಯಾದ ಭಾಷ್ಯದಲ್ಲಿ ಹೇಳುತ್ತಿದ್ದಾರೆ.

**तत्वप्रकाशिका – परिहारांशं व्याचष्टे ।। नेति ।। वित्तिव्यवहारयोः कादाचित्कतया समदायस्य सदातनत्वेऽपि न दोष इति न युक्तम् । तथा सति कदाऽपि समुदाये वित्तिव्यवहाराभावापातात् ।**

ಸಮುದಾಯವು ನಿರಂತರ ಇದ್ದರೂ ಅಪೇಕ್ಷಾಬುದ್ಧಿ ಹಾಗೂ ವ್ಯವಹಾರಗಳು ಕೆಲವೊಮ್ಮೆ ಮಾತ್ರ ಇರುತ್ತವೆ. ಆದ್ದರಿಂದ ಸಮುದಾಯವು ನಿತ್ಯವಾದರೂ ಕೂಡ ದೋಷವಿಲ್ಲ ಎಂಬ ಸಮರ್ಥನೆಯು ಅಯುಕ್ತವಾಗಿದೆ. ಹಾಗಾದರೆ ಸಮುದಾಯದಲ್ಲಿ ಅಪೇಕ್ಷಾಬುದ್ಧಿ ಹಾಗೂ ವ್ಯವಹಾರಗಳೇ ಇಲ್ಲದೆ ಇರಬೇಕಾಗುತ್ತದೆ.

ವಿವರಣೆ - ಮಿಲಿತವಾದ ಪರಮಾಣುಗಳು ಅನೇಕತ್ವಸಂಖ್ಯಾವಿಶಿಷ್ಟವಾದ ಪರಮಾಣುಗಳನ್ನು ಹುಟ್ಟಿಸುತ್ತವೆ. ಇದನ್ನು ಪುರುಷನು ನೋಡುತ್ತಾನೆ ಎಂದು ಸಮುದಾಯವಾದಿಗಳು ಹೇಳುತ್ತಿದ್ದಾರೆ. ಆದರೆ 'ಜ್ಞಾನವೇ ಪುರುಷ' ಎಂಬುದು ಸೌಗತರ ಮತ. ಹೀಗಿರುವಾಗ ಪುರುಷನಿಂದ ತಿಳಿಯಲ್ಪಡುತ್ತದೆ ಎಂಬುದು ಹೇಗೆ ಸರಿ?

ಉತ್ತರ ಹೀಗಿದೆ - ಜ್ಞಾನವು ಎರಡುವಿಧ - 1) ಪ್ರವೃತ್ತಿಜ್ಞಾನ. 2) ಆಲಯಜ್ಞಾನ. ಆಲಯಜ್ಞಾನವೇ ಪುರುಷ ಎಂದು ಕರೆಸಿಕೊಳ್ಳುತ್ತದೆ. ಪ್ರವೃತ್ತಿಜ್ಞಾನವು ಸಮುದಾಯರೂಪವಾದ ಜ್ಞಾನ ಎನಿಸಿಕೊಳ್ಳುತ್ತದೆ. ಆದ್ದರಿಂದ 'ಪುರುಷನಿಗೆ ಜ್ಞಾನ ಬರುತ್ತದೆ' ಎಂದು ವ್ಯವಹರಿಸಲು ವಿರೋಧವಿಲ್ಲ.

**तत्वप्रकाशिका – विरला हि परमाणवो मिलितपरमाणूनुत्पादयन्ति । ते च पुरुषेण दृश्यन्ते । ते चैकैकं कार्यमुत्पाद्य नश्यन्त्येव । तेऽप्येवं । तथा च कथं द्रष्टुः परस्परापेक्षा ततो व्यवहारादि कथं घटेत । तस्मान्यत्र दर्शनमन्यत्र परस्परापेक्षाऽन्यत्र व्यवहारादीति युज्यते । पुरुषस्यापि तथात्वमिति भावः ।**

ವಿರಳವಾದ ಪರಮಾಣುಗಳು ಮಿಲಿತವಾದ ಪರಮಾಣುಗಳಿಗೆ ಉತ್ಪಾದಕವಾಗಿವೆ. ಅವುಗಳನ್ನು ಪುರುಷನು ನೋಡುತ್ತಾನೆ. ಮಿಲಿತವಾದ ಪರಮಾಣುಗಳು ಒಂದೊಂದೇ ಘಟಾದಿಕಾರ್ಯಗಳನ್ನು ಹುಟ್ಟಿಸಿ ನಾಶವಾಗುತ್ತವೆ. ಪುರುಷನೂ ಕೂಡ ಘಟಪಟಾದಿ ಕಾರ್ಯಗಳಂತೆ ಕ್ಷಣಿಕನಾಗಿರುವುದರಿಂದ ನಾಶವಾಗುತ್ತಾನೆ. ಆದ್ದರಿಂದ ಹುಟ್ಟಿದ ವಸ್ತುವನ್ನು ನೋಡಿದ ಮೇಲೆ ದ್ರಷ್ಟುವಾದ ಪುರುಷನಿಗೆ ಅಪೇಕ್ಷಾಬುದ್ಧಿ ಬರಲು ಹೇಗೆ ಸಾಧ್ಯ ? ಇದರಿಂದ ವ್ಯವಹಾರಾದಿಗಳು ಕೂಡ ಹೇಗೆ ಕೂಡುತ್ತವೆ ? ಆದ್ದರಿಂದ ನೋಡುವವನು ಒಬ್ಬನು. ಪರಸ್ಪರ ಅಪೇಕ್ಷೆ ಇರುವುದು ಮತ್ತೊಬ್ಬನಿಗೆ; ವ್ಯವಹಾರ ಮಾಡುವವನು ಇನ್ನೊಬ್ಬನು. ವ್ಯವಹಾರಕ್ಕೆ ವಿಷಯವಾದ ವಸ್ತುಗಳು ಮಾತ್ರ ಬೇರೆ. ಇವೆಲ್ಲವೂ ಕೂಡ ಹೇಗೆ ಯುಕ್ತವಾಗುತ್ತವೆ.

**तत्वप्रकाशिका – अथ विरलपरमाणुभ्यो जाता मिलितपरमाणवः स्थायिनः अतो युक्तो व्यवहार इत्यत आह – कारणे सतीति ।। यदि परमाणवः स्थायिनस्तर्हि ते प्रतिक्षणं कार्यमुत्पादयेयुः । कारणे सति कार्यं भवत्येवेति । तन्नियमात् तथा चाल्पतरकालेऽप्यकस्माद् घटात्कुलालशालापूर्तिप्रसङ्ग इति भावः ।**

ವಿರಲಪರಮಾಣುಗಳಿಂದ ಸ್ಥಾಯಿಯಾದ ಮಿಲಿತಪರಮಾಣುಗಳು ಉತ್ಪನ್ನವಾಗಿವೆ. ಆದ್ದರಿಂದ ವ್ಯವಹಾರ ಮಾಡಬಹುದಲ್ಲವೆ ? ಎಂಬ ಪ್ರಶ್ನೆಗೆ 'ಕಾರಣೇ ಸತಿ' ಇತ್ಯಾದಿಯಾಗಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಒಂದುವೇಳೆ ಪರಮಾಣುಗಳು ಸ್ಥಾಯಿಯಾದರೆ ಆಗ ಅವುಗಳು ಪ್ರತಿಕ್ಷಣವು ಕಾರ್ಯವನ್ನು ಹುಟ್ಟಿಸುತ್ತಲೇ ಇರಬೇಕಾಗುತ್ತದೆ. ಕಾರಣವಿದ್ದಾಗ ಕಾರ್ಯವು ಆಗಲೇಬೇಕೆಂಬ ನಿಯಮವಿದೆ. ಆಗ ಅಲ್ಪಕಾಲದಲ್ಲಿ ಆಕಸ್ಮಿಕವಾಗಿ ಕುಲಾಲನ ಶಾಲೆಯು ಘಟಗಳಿಂದ ಪೂರ್ಣವಾಗುವ ಪರಿಸ್ಥಿತಿ ಬರುತ್ತದೆ.

**तत्वप्रकाशिका – यद्यप्यत्र क्षणिकत्वहानिरेव वाच्या तथापि सैव तदभ्युपगमकारणप्रदर्शनेनोक्ता वेदितव्या ।। १९ ।।**

ವಾಸ್ತವಿಕವಾಗಿ ಇಲ್ಲಿ 'ಕ್ಷಣಿಕತ್ವವೇ ಹಾನಿಯಾಗುತ್ತದೆ' ಎಂದು ಹೇಳಬೇಕು. ಆದರೂ ಸ್ಥಾಯಿತ್ವವನ್ನು ಒಪ್ಪಿದಾಗ ಪ್ರತಿಕ್ಷಣವು ಕಾರ್ಯದ ಉತ್ಪತ್ತಿ ಇಲ್ಲದಿರುವುದರಿಂದ ಆ ನಿಯಮಕ್ಕೆ ಭಂಗ ಬಂದು ಕ್ಷಣಿಕತ್ವವೇ ನಾಶವಾಗುತ್ತದೆಂಬುದನ್ನು ತೋರಿಸಲು ಈ ಕ್ರಮವನ್ನು ಅನುಸರಿಸಲಾಗಿದೆ.

## ಬ್ರಹ್ಮಸೂತ್ರ

**सूत्रम् – उत्तरोत्पादे च पूर्वनिरोधात् ।।**

ಮುಂದಿನ ಅಣುಸಮುದಾಯವು ಹುಟ್ಟುವಾಗ, ಹಿಂದಿನ ಅಣುಸಮುದಾಯವು ನಾಶವಾಗಿರುತ್ತದೆ. ಹೀಗೆ ಒಪ್ಪುವ ಬೌದ್ಧರಿಗೆ ವಿರಳವಾದ ಅಣುಗಳಿಂದ ಸಮುದಿತವಾದ ಅಣುಗಳು ಹುಟ್ಟುತ್ತವೆ ಎಂದು ಹೇಳಲು ಹೇಗೆ ಸಾಧ್ಯ ?

## ಸೂತ್ರದೀಪಿಕಾ

**सूत्रदीपिका –** चोऽवधारणे समुच्चये च । नेत्यनुवर्तते। सामर्थ्यादिति शेषः । तथाच न केवलं क्षणिकमते समुदायव्यवहारानुपपत्तिः । किन्तु विशेषकार्योत्पत्तिश्च न युक्ता । कुतः? **उत्तरोत्पादे** न कारणस्य सदृशकार्यजननसामर्थ्यात् तेन कारणं प्रथमं स्वसदृशमुत्पाद्य पश्चाद् विसदृशकार्यमुत्पद्यताम् । को दोष इत्यतोऽप्याह – **उत्तर** इति । तथाच उत्तरस्य स्वसदृशकार्योत्पादे उत्पत्तौ सत्यामेव । **पूर्वनिरोधात्** पूर्वस्य कारणस्य नाशात्। पुनर्विसदृशकार्यजनकत्वासम्भव इत्यर्थः ।।३।।

'ಚ' ಶಬ್ದವು ಅವಧಾರಣಾರ್ಥದಲ್ಲಿ ಇರುತ್ತದೆ. ಅಥವಾ ಸಮುಚ್ಚಯಾರ್ಥದಲ್ಲಿಯೂ ವಿವಕ್ಷಿಸಬಹುದು. 'ನ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಸಾಮರ್ಥ್ಯಾತ್ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಆದ್ದರಿಂದ ಕ್ಷಣಿಕಮತದಲ್ಲಷ್ಟೇ ಸಮುದಾಯವ್ಯವಹಾರವು ಅನುಪಪನ್ನವಾಗಲಿ ಎಂಬುದು ಆಕ್ಷೇಪವಲ್ಲ. ಹೊರತಾಗಿ ವಿಶೇಷಕಾರ್ಯೋತ್ಪತ್ತಿಯೂ ಕೂಡ ಅಯುಕ್ತವಾಗಿದೆ. ಏಕೆಂದರೆ ಉತ್ತರೋತ್ಪಾದೇ ಚ = ಕಾರಣಕ್ಕೆ ಸದೃಶಕಾರ್ಯಜನನದಲ್ಲಿ ಶಕ್ತಿಯಿರುವುದರಿಂದ ಕಾರಣವು ಮೊದಲು ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸಿ, ಅನಂತರ ವಿಸದೃಶಕಾರ್ಯವನ್ನು ಹುಟ್ಟಿಸಲಿ ಏನು ದೋಷ ? ಎಂದು ಆಕ್ಷೇಪ ಮಾಡಿದರೆ, ಉತ್ತರೋತ್ಪಾದೇ ಚ = ತನಗೆ ಸದೃಶವಾದ ಕಾರ್ಯವನ್ನು ಉತ್ಪಾದನೆ ಮಾಡಿದ ಮೇಲೆ, ಪೂರ್ವನಿರೋಧಾತ್ = ಕಾರಣವು ನಾಶವಾಗುವುದರಿಂದ ವಿಸದೃಶಕಾರ್ಯವನ್ನು ವಿವಕ್ಷಿಸುವುದರಲ್ಲಿ ಸಾಮರ್ಥ್ಯವಿರುವುದಿಲ್ಲ.

ಪರಿಪೂರ್ಣಚಂದ್ರಿಕಾ

## ಬ್ರಹ್ಮಸೂತ್ರಭಾಷ್ಯ

**भाष्यम् – ।। उत्तरोत्पादे च पूर्वनिरोधात् ।।३।।**

**कार्योत्पत्तावेव कारणस्य विनाशाच्च न विशेषकार्योत्पत्तिः ।।३।।**

ಅನುವಾದ - ಕಾರಣವು ಕಾರ್ಯವನ್ನು ಹುಟ್ಟಿಸಿದ ಕೂಡಲೇ ನಾಶವನ್ನು ಹೊಂದುತ್ತದೆ. ಹೀಗಿರುವಾಗ ವಿರಳವಾದ ಅಣುಗಳು ಹುಟ್ಟಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಕಾರಣವು ಸದೃಶವಾದ ಕಾರ್ಯವನ್ನು ಹುಟ್ಟಿಸಲು ಸಮರ್ಥವಾದರೂ ಅನಂತರ ವೈಸಾದೃಶ್ಯವನ್ನು ಹುಟ್ಟಿಸುತ್ತದೆ. ಹೀಗೆ ಹೇಳುವ ಅವರ ಮತವನ್ನು ನಿರಾಕರಣೆಮಾಡುತ್ತಿದ್ದಾರೆ. ಕಾರ್ಯೋತ್ಪತ್ತಾವೇವ = ಕಾರಣವಾದುದು ಕಾರ್ಯವನ್ನು ಹುಟ್ಟಿಸಿದ ಕೂಡಲೆ, ಕಾರಣಸ್ಯ = ಕಾರಣವನ್ನು, ವಿನಾಶಾಚ್ಚ = ನಾಶವನ್ನು ಹೊಂದುವುದರಿಂದ, ನ ವಿಶೇಷಕಾರ್ಯೋತ್ಪತ್ತಿಃ = ಕಾರ್ಯದಲ್ಲಿ ವಿಶೇಷವನ್ನು ತಂದುಕೊಡುವ ಕಾರಣವಿಲ್ಲವೆಂದು ಹೇಳಿದಂತಾಗುತ್ತದೆ.

## ತತ್ವಪ್ರಕಾಶಿಕಾ

**तत्वप्रकाशिका – एवं विरलपरमाणुभ्यो मिलितपरमाणूत्पत्तिमभ्युपेत्य व्यवहाराद्यसम्भवो दर्शितः । अथ विशेषकार्योत्पत्तिमपि निराकुर्वत्सूत्रमुपन्यस्य व्याचष्टे – उत्तरेति।।**

ವಿರಳಪರಮಾಣುಗಳಿಂದ ಮಿಲಿತಪರಮಾಣುಗಳು ಉತ್ಪನ್ನವಾಗುತ್ತವೆಂದು ಅಂಗೀಕಾರಮಾಡಿ ವ್ಯವಹಾರ ಮುಂತಾದವುಗಳು ಅಸಂಭಾವಿತವಾಗುತ್ತವೆಂದು ತೋರಿಸಿದ್ದಾಯಿತು. ಈಗ ವಿಶೇಷಕಾರ್ಯದ ಉತ್ಪತ್ತಿಯನ್ನು ಕೂಡ ನಿರಾಕರಣೆ ಮಾಡುವ ಸೂತ್ರವನ್ನು 'ಉತ್ತರೋತ್ಪಾದೇ ಚ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – न क्षणिकमते विशेषकार्योत्पत्तिश्च युक्ता । कारणस्य स्वसदृशकार्यजनन एव सामर्थ्यात् । अन्यथा घटात्पटोत्पत्तिप्रसङ्गात् ।**

ಕ್ಷಣಿಕಮತದಲ್ಲಿ ವಿಶೇಷಕಾರ್ಯೋತ್ಪತ್ತಿಯೂ ಕೂಡ ಅನುಪಪನ್ನವಾಗಿದೆ. ಏಕೆಂದರೆ ಕಾರಣವು ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸುವುದರಲ್ಲಿ ಸಮರ್ಥವಾಗಿರುತ್ತದೆ. ಒಂದು ವೇಳೆ ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸದಿದ್ದರೆ ಘಟದಿಂದ ಪಟವು ಉತ್ಪತ್ತಿಯಾಗುವ ಪ್ರಸಂಗ ಬರುತ್ತದೆ.

**तत्वप्रकाशिका – न च वाच्यं सदृशकार्योपजननसमर्थमपि कारणं कार्यमुत्पाद्य पश्चाद्वैसादृश्यमुत्पादयतीति । न चातिप्रसङ्गः । अदृष्टाधीनत्वादिति । सदृशमेकं कार्यमुत्पाद्यैव कारणस्य विनष्टत्वात् । अन्यथा क्षणिकत्वविरोध इति भावः ।।२०।।**

ಸದೃಶವಾದ ಕಾರ್ಯವನ್ನು ಹುಟ್ಟಿಸಲು ಸಮರ್ಥವಾಗಿದ್ದರೂ ಕೂಡ ಕಾರಣವು ಸದೃಶಕಾರ್ಯವನ್ನು ಹುಟ್ಟಿಸಿ ಅನಂತರ ಅದೃಷ್ಟದ ಅಧೀನವಾಗಿ ವಿಸದೃಶವಾದ ಕಾರ್ಯವನ್ನು ಹುಟ್ಟಿಸುತ್ತದೆ. ಹೀಗೆ ಹೇಳಿದ್ದರಿಂದ 'ಘಟದಿಂದ ಪಟವು ಹುಟ್ಟಲಿ' ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಏಕೆಂದರೆ ಇದು ಅದೃಷ್ಟದ ಅಧೀನವಾಗಿದೆ.

ಈ ವಾದವು ತಪ್ಪು. ಸದೃಶವಾದ ಒಂದು ಕಾರ್ಯವನ್ನು ಹುಟ್ಟಿಸಿ ಕಾರಣವು ನಾಶವಾಗಿದೆ. ಪುನಃ ಮತ್ತೊಂದು ವಿಸದೃಶಕಾರ್ಯವನ್ನು ಹುಟ್ಟಿಸಲು ಆ ಕಾರಣವೇ ಇರುವುದಿಲ್ಲ. ಒಂದು ವೇಳೆ ಕಾರಣವು ನಾಶವಾಗದಿದ್ದರೆ ಕ್ಷಣಿಕತ್ವಕ್ಕೆ ವಿರೋಧ ಬರುತ್ತದೆ.

ವಿವರಣೆ - ಸದೃಶವಾದ ಒಂದು ಕಾರ್ಯವನ್ನು ಹುಟ್ಟಿಸಿ ಕಾರಣವು ನಾಶವಾಗುತ್ತದೆ. ಹೀಗೆ ಸ್ವಸದೃಶವಾದ ಕಾರ್ಯವನ್ನು ಹುಟ್ಟಿಸಿದ ಮೊದಲನೆಯ ಕಾರಣಚಕ್ರವು ಕ್ಷಣಿಕವಾದ್ದರಿಂದ ನಾಶವಾಗಿದೆ. ಪುನಃ ಅದೇ ಕಾರ್ಯದಲ್ಲಿ ವಿಸದೃಶಕಾರ್ಯಜನಕತ್ವವು ಕೂಡುವುದಿಲ್ಲ. ಮುಂದಿನ ವೈಸಾದೃಶ್ಯವನ್ನು ಹುಟ್ಟಿಸಲು ಅಧಿಕರಣವಾದ ಮೊದಲಿನ ಕಾರ್ಯವೂ ಕೂಡ ಕ್ಷಣಿಕವಾದ್ದರಿಂದ ಅದೂ ನಾಶವಾಗಿರುವುದರಿಂದ ಅದರಲ್ಲೂ ಕೂಡ ವೈಸಾದೃಶ್ಯಜನಕತ್ವವು ಅನುಪಪನ್ನವಾಗುತ್ತದೆ. ಹೀಗೆ ಸೂತ್ರಾರ್ಥವನ್ನು ಸೂಚನೆ ಮಾಡಿದಂತಾಯಿತು. (ಗುರ್ವರ್ಥದೀಪಿಕಾ)

## ಬ್ರಹ್ಮಸೂತ್ರ

**सूत्रम् – असति प्रतिज्ञोपरोधो यौगपद्यमन्यथा ।।४।।**

ಕಾರಣವು ನಾಶವಾದ ಮೇಲೆ ಕಾರ್ಯವು ಹುಟ್ಟುವುದಾದರೆ, ಈ ವಸ್ತುವು ಇದರದ್ದೇ ಕಾರ್ಯ ಎಂಬ ಪ್ರತಿಜ್ಞೆ ತಪ್ಪಾಗುತ್ತದೆ. ಕಾರಣವಿದ್ದಾಗಲೂ ಕೂಡ ಕಾರ್ಯವು ಹುಟ್ಟುತ್ತದೆ ಎಂದು ಹೇಳಿದರೆ ಮುಂದಿನ ಎಲ್ಲಾ ಸ್ಥಳಗಳಲ್ಲಿಯೂ ಕೂಡ ಕಾರ್ಯವು ಹುಟ್ಟುತ್ತಲೇ ಇರಬೇಕು. ಆವಾಗ ಎಲ್ಲಾ ಕಾರ್ಯಗಳು ಒಂದೇ ಸ್ಥಳದಲ್ಲಿ ಇರಬೇಕು. ಅಥವಾ ಹಿಂದಿನ ವಸ್ತುಗಳು ನಾಶವಾದರೆ ಅವುಗಳ ಜೊತೆಯಲ್ಲಿಯೇ ಮುಂದಿನ ಕಾರ್ಯಗಳೆಲ್ಲವೂ ಹುಟ್ಟಬೇಕಾದೀತು.

## ಸೂತ್ರದೀಪಿಕಾ

**सूत्रदीपिका –** क्षणिकमते न प्रतिक्षणं कार्योत्पत्तिर्युज्यते । कुतः? **असति** कारणे कार्यमुत्पद्यत इत्यङ्गीकारे **प्रतिज्ञोपरोधः** तस्य तत्कार्यत्वमिति प्रतिज्ञायाः सिद्धान्तव्यवहारस्योपरोधो हानिः स्यात् । अन्यथा कारणे सति कार्यमुत्पद्यत इत्यङ्गीकारे **यौगपद्यं** कारणेन सह कार्याणामेकदावस्थानं प्रसज्ते इत्यर्थः ।।४।।

ಕ್ಷಣಿಕಮತದಲ್ಲಿ ಪ್ರತಿಕ್ಷಣದಲ್ಲಿಯೂ ಕಾರ್ಯೋತ್ಪತ್ತಿ ಇರುತ್ತದೆಂದು ಹೇಳುತ್ತಾರೆ. ಇದೂ ಕೂಡ ತಪ್ಪು. ಏಕೆಂದರೆ ಅಸತಿ = ಕಾರಣವು ಇಲ್ಲದಿರುವಾಗ ಕಾರ್ಯವು ಹುಟ್ಟುತ್ತದೆಂದು ಹೇಳಿದರೆ ಪ್ರತಿಜ್ಞೋಪರೋಧಃ = ಈ ಕಾರ್ಯವು ಈ ಕಾರಣದ ಕಾರ್ಯ ಎಂಬ ಸಿದ್ಧಾಂತ ವ್ಯವಹಾರವು ನಾಶವಾಗಬೇಕಾದೀತು. ಅನ್ಯಥಾ = ಕಾರಣವಿದ್ದಾಗಲೇ ಕಾರ್ಯದ ವುತ್ಪತ್ತಿ ಆಗುತ್ತದೆಂದು ಹೇಳಿದರೆ, ಯೌಗಪದ್ಯಂ = ಕಾರಣದ ಜೊತೆಗೆ ಕಾರ್ಯವು ಇರುತ್ತದಾದ್ದರಿಂದ ಏಕಕಾಲದಲ್ಲಿಯೇ ಎಲ್ಲಾ ಕಾರಣಗಳು ಇರಬೇಕಾದ ಪ್ರಸಂಗ ಬರುತ್ತದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। असति प्रतिज्ञोपरोधो यौगपद्यमन्यथा ।।४।।**

**कारणे विनष्टे कार्यमुत्पद्यते चेत् तत्कार्यमिति प्रतिज्ञाहानिः । तत्काले कारणमस्ति चेद् विनाशकारणाभावाद् यौगपद्यं सर्वकार्याणाम् ।।४।।**

ಅನುವಾದ - ಎಲ್ಲವೂ ಕ್ಷಣಿಕವಾದ್ದರಿಂದ ಕಾರಣವು ನಾಶವಾದ ಮೇಲೆ ಕಾರ್ಯವು ಹುಟ್ಟುತ್ತದೆ ಎಂದು ಬೌದ್ಧರು ಹೇಳುತ್ತಾರೆ. ಇದು ತಪ್ಪು. ಹಾಗೆ ಹೇಳಿದರೆ ಕಾರ್ಯಹುಟ್ಟುವ ಸಮಯದಲ್ಲೂ ಕಾರಣವಿದೆ ಎಂದು ಹೇಳಿದರೆ ಹಿಂದಿನ ವಸ್ತುವಿನ ನಾಶಕ್ಕೆ ಕಾರಣವೇ ಇಲ್ಲವಾದ್ದರಿಂದ ಒಂದೇ ಕಾಲದಲ್ಲಿ ಎಲ್ಲಾ ಕಾರ್ಯಗಳು ಇರಬೇಕಾದ ಪರಿಸ್ಥಿತಿ ಬರುತ್ತದೆ.

ಪ್ರತಿಪದಾರ್ಥ -- ವಿಸದೃಶಕಾರ್ಯೋತ್ಪತ್ತಿಯನ್ನು ನಿರಾಕರಣೆ ಮಾಡಿ ಪ್ರತಿಕ್ಷಣವು ಕಾರ್ಯವು ಹುಟ್ಟುತ್ತದೆಂಬವಾದವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರ ಹೊರಟಿದೆ. ಕಾರಣೇ = ಕಾರಣವು, ವಿನಷ್ಟೇ = ನಾಶವಾಗುತ್ತಿರಲು, ಕಾರ್ಯಂ = ಕಾರ್ಯವು, ಉತ್ಪದ್ಯತೇ = ಹುಟ್ಟುತ್ತದೆ, ಚೇತ್ = ಹೀಗೆ ಹೇಳುವದು ತಪ್ಪು. ತತ್ ಕಾರ್ಯಮ್ = ಅದು ಕಾರಣದ ಕಾರ್ಯವು, ಇತಿ = ಎಂಬ, ಪ್ರತಿಜ್ಞಾಹಾನಿಃ = ಪ್ರತಿಜ್ಞೆಗೆ ಹಾನಿ ಬರುತ್ತಿದೆ. ತತ್ಕಾಲೇ = ಕಾರ್ಯದ ಕಾಲದಲ್ಲಿ, ಕಾರಣಮಸ್ತಿ ಚೇದ್ = ಕಾರಣವು ಇರುವುದಾದರೆ, ವಿನಾಶಕಾರಣಾಭಾವಾತ್ = ಆ ಕಾರಣವು ನಾಶವಾಗಲು ಬೇರೆ ಕಾರಣವಿಲ್ಲದ್ದರಿಂದ, ಸರ್ವಕಾರ್ಯಾಣಾಮ್ = ಎಲ್ಲಾ ಕಾರಣಗಳಿಗೂ, ಯೌಗಪದ್ಯಂ = ಒಟ್ಟಿಗೆ ಇರುವಿಕೆಯು ಬರಬೇಕಾದೀತು.

## ತತ್ವಪ್ರಕಾಶಿಕಾ

**तत्वप्रकाशिका – एवं विसदृशकार्योत्पत्तिनिरासेन व्यवहारादिकं पराकृत्येदानीं प्रतिक्षणोत्पत्तिमेव च निराकुर्वत्सूत्रमुपन्यस्य व्याचष्टे ।। असतीति ।।**

ಹೀಗೆ ವಿಸದೃಶಕಾರ್ಯವು ಉತ್ಪತ್ತಿಯಾಗುತ್ತದೆಂಬುದನ್ನು ನಿರಾಕರಣೆ ಮಾಡಿದಂತಾಯಿತು. ತನ್ಮೂಲಕವಾಗಿ ವ್ಯವಹಾರಾದಿಗಳನ್ನು ನಿರಾಕರಣೆ ಮಾಡಿ ಪ್ರಕೃತ ಪ್ರತಿಕ್ಷಣವು ಕಾರ್ಯದ

ಉತ್ಪತ್ತಿಯನ್ನು ಹೇಳುವ ವಾದವನ್ನು ನಿರಾಕರಣೆ ಮಾಡುವುದಕ್ಕಾಗಿ 'ಅಸತಿ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ವಿರಳಪರಮಾಣುಗಳಿಂದ ಮಿಲಿತಪರಮಾಣುಗಳು ಉತ್ಪನ್ನವಾಗಲಾರವು' ಎಂದು ಹಿಂದಿನ ಸೂತ್ರದಲ್ಲಿ ಸಮರ್ಥಿಸಿದ್ದಾಯಿತು. ಹಾಗಾದರೆ ಸಮುದಾಯವೇ ಅಸಂಭಾವಿತವಾದ್ದರಿಂದ ಅಪೇಕ್ಷಾಬುದ್ಧ್ಯಾದಿಗಳು ಅಸಂಭಾವಿತವಾಗುತ್ತವೆ.

**ತತ್ವಪ್ರಕಾಶಿಕಾ – न प्रतिक्षणं कार्योत्पत्तिर्युक्ता । तथा हि । किं कारणे विनष्टे कार्यमुत्पद्यते विद्यमाने वा । नाद्यः । यस्मिन् विनष्टे यदुत्पद्यते तस्य तत्कार्यत्वेऽतिप्रसङ्गात् । न द्वितीयः । एकस्मिन् क्षणे स्वयमात्मानं लब्ध्वा कार्योत्पत्तिक्षणेऽपि तस्यावस्थाने कारणस्य द्विक्षणकत्वप्रसङ्गात् ।**

ಪ್ರತಿಕ್ಷಣವು ಕಾರ್ಯವು ಉತ್ಪನ್ನವಾಗುವುದಿಲ್ಲ. ಏಕೆಂದರೆ ಕಾರಣ ನಾಶವಾದಾಗ ಕಾರ್ಯವು ಹುಟ್ಟುತ್ತದೋ ಅಥವಾ ಕಾರಣವಿದ್ದಾಗ ಕಾರ್ಯವು ಹುಟ್ಟುತ್ತದೋ ? ಮೊದಲನೆಯ ಪಕ್ಷ ತಪ್ಪು. ಯಾವುದು ನಾಶವಾದಾಗ ಯಾವುದು ಹುಟ್ಟುತ್ತದೋ ಅದು ಅದರ ಕಾರ್ಯವಾಗಲು ಸಾಧ್ಯವಿಲ್ಲ. ಹಾಗೆ ಹೇಳುವುದಾದರೆ ಘಟ ನಾಶವಾದ ಮೇಲೆ ಹುಟ್ಟಿದ ಪಟಕ್ಕೆ ಘಟವು ಕಾರಣವಾಗಬೇಕಾಗುತ್ತದೆಂಬ ಅತಿಪ್ರಸಂಗ ಬರುತ್ತದೆ. ಎರಡನೆಯ ಪಕ್ಷವು ತಪ್ಪು. ಒಂದು ಕ್ಷಣದಲ್ಲಿ ತನ್ನ ಸ್ವರೂಪವನ್ನು ಪಡೆದು ಕಾರ್ಯದ ಉತ್ಪತ್ತಿಕ್ಷಣದಲ್ಲೂ ಕಾರಣವಿರುವುದಾದರೆ ಎರಡು ಕ್ಷಣದಲ್ಲಿ ಇರಬೇಕಾದ ಪ್ರಸಂಗ ಬರುತ್ತದೆ.

**ತತ್ವಪ್ರಕಾಶಿಕಾ – क्षणिकस्य च द्विक्षणावस्थाने तदुत्तरत्र विनाशकारणाभावा त्पुनस्तस्मात्कार्योत्पत्तयः स्युः । तेभ्यश्च तथेति सर्वकार्याणां यौगपद्यं स्यात् ।**

ಕ್ಷಣಿಕವಾದದ್ದು ಎರಡು ಕ್ಷಣದಲ್ಲಿ ಇರುವುದಾದರೆ ಮುಂದೆಯೂ ಕೂಡ ಅದರ ನಾಶಕ್ಕೆ ಕಾರಣವಿಲ್ಲದೆ ಇರುವುದರಿಂದ ಪುನಃ ಅದರಿಂದ ಅನೇಕ ಕಾರ್ಯಗಳು ಹುಟ್ಟಬೇಕಾಗುತ್ತದೆ. ಆ ಕಾರ್ಯಗಳು ಒಂದೇ ಕಾಲದಲ್ಲಿ ಇರಬೇಕಾಗುತ್ತದೆ.

**ತತ್ವಪ್ರಕಾಶಿಕಾ – तथा यस्मिन् क्षणे कारणं तस्मिन्नेव कार्यावस्थानप्रसङ्गात् तत्कार्याणां चैवमिति सर्वकार्याणां यौगपद्यं प्रसज्येत । न च क्षणार्धे समुत्पन्नं क्षणार्धे कार्यमुत्पादयतीति युक्तम् । क्षणस्य पूर्वमध्यापरकला विकलत्वाभिलापादिति भावः ।। २१ ।।**

ಅದರಂತೆ ಯಾವ ಕ್ಷಣದಲ್ಲಿ ಕಾರಣವು ಇರುತ್ತದೋ ಅದೇಕ್ಷಣದಲ್ಲಿ ಕಾರ್ಯವೂ ಕೂಡ ಇರಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಆ ಎಲ್ಲಾ ಕಾರ್ಯಗಳು ಒಂದೇ ಕಾಲದಲ್ಲಿ ಇರಬೇಕಾದೀತು.

ಕ್ಷಣಾರ್ಧದಲ್ಲಿಹುಟ್ಟಿ ಕಾರ್ಯವನ್ನು ಹುಟ್ಟಿಸುತ್ತದೆಂಬುದು ಅಯುಕ್ತ. ಕ್ಷಣಕ್ಕೆ ಪೂರ್ವ,ಮಧ್ಯ ಅಪರ ಎಂಬ ಮೂರು ಭಾಗಗಳು ಸರ್ವಥಾ ಇರುವುದಿಲ್ಲ.

**ವಿವರಣೆ** - ಕಾರಣ ಇದ್ದಾಗ ಕಾರ್ಯವು ಹುಟ್ಟುತ್ತದ ಎಂಬುದಕ್ಕೆ ಏನರ್ಥ. ಒಂದುಕ್ಷಣದಲ್ಲಿ ಸ್ವತಃ ತಾನಿದ್ದು ಕಾರ್ಯೋತ್ಪತ್ತಿಕ್ಷಣದಲ್ಲೂ ಕಾರಣವು ಇರುತ್ತದೆ ಎಂದರ್ಥವೋ ಅಥವಾ ಕಾರ್ಯವು ಕಾರಣಸತ್ತಾಸಮಾನಕಾಲೀನಸಮಸತ್ತಾಕವಾಗಿದೆಯೋ ? ಎಂಬ ವಿಕಲ್ಪವನ್ನು ಮಾಡಿ ಮೊದಲನೆಯ ಪಕ್ಷಕ್ಕೆ ಉತ್ತರವನ್ನು ನೀಡಲು ಸಮಗ್ರ ಭಾಷ್ಯವನ್ನು 'ಯಸ್ಮಿನ್‌ಕ್ಷಣೇ' ಇತ್ಯಾದಿ ಟೀಕಾವಾಕ್ಯದಿಂದ ಯೋಜನೆ ಮಾಡುತ್ತಿದ್ದಾರೆ.

ಸ್ಥೂಲಕಾಲಾವಚ್ಛೇದೇನ ಯುಗಪದವಸ್ಥಾನವು ಯುಕ್ತವಾಗುತ್ತದೆ. ಆದ್ದರಿಂದ ಸ್ವಲ್ಪವೇ ಕಾಲದಲ್ಲಿ ಕುಂಭಾರನ ಶಾಲೆಯು ಪೂರ್ತಿಯಾಗುವ ಪ್ರಸಂಗ ಬರುತ್ತದೆ ಎಂಬುದು 'ಯಸ್ಮಿನ್‌ಕ್ಷಣೇ' ಇತ್ಯಾದಿ ವಾಕ್ಯದ ಅಭಿಪ್ರಾಯ.

ಕ್ಷಣದಲ್ಲಿ ದ್ವೈತಿಗಳು ಭಾಗವನ್ನು ಅಂಗೀಕರಿಸುತ್ತಾರೆ. ಬೇರೆ ಮತದಲ್ಲಿ ಇದಿಲ್ಲ. ಈ ಕಾರಣದಿಂದಲೇ ವಾಯುಸ್ತುತಿಯಲ್ಲಿ ಹೇಳಿದಂತೆ ಕ್ಷಣದಲ್ಲಿ ಬೆಟ್ಟವನ್ನು ಹೋಗಿ, ಕಿತ್ತು, ತಂದಿದ್ದು ಕೂಡಿಸಲು ಸಾಧ್ಯ.

## ಬ್ರಹ್ಮಸೂತ್ರ

**सूत्रम् – प्रतिसङ्ख्याऽप्रतिसङ्ख्यानिरोधाप्राप्तिरविच्छेदात् ।।**

ವಿನಾಶವು ಎರಡು ವಿಧ. ಬುದ್ಧಿಪೂರ್ವಕವಾದ ನಾಶವನ್ನು ಪ್ರತಿಸಂಖ್ಯಾನಿರೋಧವೆಂದು, ಬುದ್ಧಿಪೂರ್ವಕವಲ್ಲದ ನಾಶವನ್ನು ಅಪ್ರತಿಸಂಖ್ಯಾನಿರೋಧವೆಂದು ಕರೆಯಲಾಗುತ್ತದೆ. ಈ ಎರಡುವಿಧ ನಾಶಗಳು ಬೌದ್ಧರ ಪಕ್ಷದಲ್ಲಿ ಅಯುಕ್ತವಾಗುತ್ತದೆ. ಏಕೆಂದರೆ ಕಾರಣವಿದ್ದಾಗ ಕಾರ್ಯವುಂಟಾಗಲೇಬೇಕು. ಇಂಥ ಕಾರಣವು ಯಾವಾಗಲೂ ಇರುವುದರಿಂದ ಪ್ರತೀಕ್ಷಣದಲ್ಲಿಯೂ ಕಾರ್ಯನಾಶವಾಗುವುದು ಹೇಗೆ ಸಾಧ್ಯ ? ಪ್ರತಿಸಂಖ್ಯಾನಿರೋಧವು ಅಸಾಧುವಾಗಿದೆ. ಕೊನೇ ಕ್ಷಣದಲ್ಲಿ ಕಾಣುವ ವಸ್ತು ಸತ್ತಾದ ಮೇಲೆ ಅದರಿಂದ ಪ್ರತಿರೂಪವು ಹುಟ್ಟಬೇಕು. ಹೀಗಿರುವಾಗ ಪ್ರತಿಸಂಖ್ಯಾನಿರೋಧವು ಹೇಗೆ ಯುಕ್ತವಾಗುತ್ತದೆ ?

## ಸೂತ್ರದೀಪಿಕಾ

**सूत्रदीपिका –** एवं क्षणिकमते **प्रतिसङ्ख्याऽप्रतिसङ्ख्यानिरोधाप्राप्तिः** प्रतिसङ्ख्याऽ-प्रतिसङ्ख्यानिरोधयोः प्रतिक्षणविनाशसन्तानविनाशयोः अप्राप्तिः अनुपपत्तिः । कुतः? **अविच्छेदात्** । तद्रीत्या कार्योत्पत्तावकार्याणां चाविच्छिन्नत्वादित्यर्थः ।।९।।

ಇದರಂತೆ ಕ್ಷಣಿಕಮತದಲ್ಲಿ ಪ್ರತಿಸಂಖ್ಯಾನಿರೋಧ, ಅಪ್ರತಿಸಂಖ್ಯಾನಿರೋಧ = ಪ್ರತಿಕ್ಷಣ ವಿನಾಶ, ಸಂತಾನವಿನಾಶಗಳ ಅಪ್ರಾಪ್ತಿಃ = ಅನುಪಪತ್ತಿಯು ಏಕೆಂದರೆ ಅವಿಚ್ಛೇದಾತ್ =

ಆದರಂತೆ ಕಾರ್ಯೋತ್ಪತ್ತಿಯು ಆಗುತ್ತಲೇ ಇರಬೇಕಾದ್ದರಿಂದ ಕ್ಷಣಿಕವಾದದಲ್ಲಿ ಸೃಷ್ಟಿಯ ಕ್ರಮವು ಅಸಾಧುವಾಗಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। प्रतिसङ्ख्याऽप्रतिसङ्ख्यानिरोधाप्राप्तिरविच्छेदात् ।।९।।**

**कारणे सति कार्यं भवत्येवेति नियमान्निस्सन्तानः ससन्तानश्च विनाशो न युज्यते ।।९।।**

ಅನುವಾದ - ಕಾರಣವಿದ್ದರೆ ಕಾರ್ಯವು ಆಗಲೇ ಬೇಕು. ಹೀಗೆ ನಿಯಮ ವಿರುವುದರಿಂದ ಸಂತಾನವಿಲ್ಲದ ನಾಶ ಎಂಬ ಕಲ್ಪನೆಯು ತಪ್ಪಾಗುತ್ತದೆ.

ಪ್ರತಿಪದಾರ್ಥ -- ಇಲ್ಲಿಯ ತನಕ ಕ್ಷಣಿಕವಾದದಲ್ಲಿ ಕಾರ್ಯದ ಉತ್ಪತ್ತಿಕ್ರಿಯೆಯನ್ನು ನಿರಾಕರಣೆ ಮಾಡಿ ಕಾರ್ಯನಾಶವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರ ಹೊರಟಿದೆ. ಕಾರಣೇ ಸತಿ = ಕಾರ್ಯವು ಇದ್ದ ಮೇಲೆ, ಕಾರ್ಯಂ = ಕಾರ್ಯವು, ಭವತ್ಯೇವ = ಆಗಲೇ ಬೇಕು. ಇತಿ = ಹೀಗೆ, ನಿಯಮಾತ್ = ನಿಯಮವಿರುವುದರಿಂದ, ನಿಸ್ಸಂತಾನಶ್ಚ = ಸಂತಾನವಿಲ್ಲದ, ವಿನಾಶಃ = ವಿನಾಶವು, ನ ಯುಜ್ಯತೇ = ಕೂಡುವುದಿಲ್ಲ.

## ತತ್ವಪ್ರಕಾಶಿಕಾ

**तत्वप्रकाशिका – एवं क्षणिकवादे कार्योत्पादं पराकृत्य विनाशं च पराकुर्वत्सूत्रं पठित्वा व्याचष्टे – प्रतिसंङ्ख्येति ।।**

ಇಲ್ಲಿಯ ತನಕ ಕ್ಷಣಿಕವಾದದಲ್ಲಿ ಕಾರ್ಯದ ಉತ್ಪತ್ತಿಯನ್ನು ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಕಾರ್ಯದ ನಾಶವನ್ನು ನಿರಾಕರಣೆ ಮಾಡುವ ಸೂತ್ರವನ್ನು ಪ್ರತಿಸಂಖ್ಯಾ ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – सन्तानमन्तरेण यः प्रतिक्षणं विनाशः यश्च सन्तानेन सह क्षणिकमते तयोरनुपपत्तिः । तथा हि प्रतिक्षणं कारणं कार्यं निर्वर्त्य नश्यतीति वक्तव्यम्। तत्र स्वकार्यवियोगकाले कारणं सदेवेति कार्यमुत्पादयेत्। कारणे सति कार्यं भवत्येवेति नियमाभ्युपगमात् । तदुत्पत्त्यनन्तरं चैवमिति कथं प्रतिक्षणं नाशो युज्येत ।**

ಸಂತಾನವಿಲ್ಲದೆ ಯಾವುದು ಪ್ರತಿಕ್ಷಣವು ನಾಶವಾಗುತ್ತದೋ ಯಾವುದು ಸಂತಾನದ ಜೊತೆ ನಾಶವಾಗುತ್ತದೋ ಇವೆರಡೂ ಕ್ಷಣಿಕಮತದಲ್ಲಿ ಅನುಪಪನ್ನವಾಗುತ್ತವೆ. ಅದು ಹೀಗೆ -

ಪ್ರತಿಯೊಂದು ಕ್ಷಣದಲ್ಲೂ ಕಾರಣವು ಕಾರ್ಯವನ್ನು ಹುಟ್ಟಿಸಿ ನಾಶವಾಗುತ್ತದೆಂದು ಹೇಳಬೇಕು. ಹೀಗೆ ಹೇಳಿದಾಗ ತನ್ನ ಕಾರ್ಯವು ವಿಯೋಗವಾಗುವ ಕಾಲದಲ್ಲೂ ಕಾರಣವು ಇರಲೇಬೇಕು. ಏಕೆಂದರೆ ಕ್ಷಣಿಕಪದಾರ್ಥಕ್ಕೆ ಉತ್ಪತ್ತಿಕಾಲವೇ ವಿಯೋಗಕಾಲವಾಗಿದೆ. ಆದ್ದರಿಂದ ಆಗಲೂ ಕಾರ್ಯವನ್ನು ಹುಟ್ಟಿಸಬೇಕಾಗುತ್ತದೆ. ಕಾರಣವಿದ್ದಾಗ ಕಾರ್ಯವು ಆಗಲೇಬೇಕೆಂಬ ನಿಯಮವನ್ನು ಅಂಗೀಕಾರ ಮಾಡಿರುವುದರಿಂದ ಕಾರ್ಯವು ಉತ್ಪತ್ತಿಯಾದ ಮೇಲೆ ಪುನಃ ಇದೇ ರೀತಿಯಲ್ಲಿ ಕಾರ್ಯವು ಉತ್ಪತ್ತಿಯಾಗ ಬೇಕಾಗುತ್ತದೆ. ಆದ್ದರಿಂದ ಪ್ರತಿಕ್ಷಣದಲ್ಲಿ ನಾಶವನ್ನು ಹೇಳುವುದು ಹೇಗೆ ಸಮಂಜಸವಾಗುತ್ತದೆ ?

ವಿವರಣೆ - ವಿರಲಪರಮಾಣುಗಳು ನಿಬಿಡವಾಗಿ ಸಮುದಾಯವಾಗುತ್ತವೆ. ಆಗ ಕಾರ್ಯಸ್ವರೂಪವನ್ನು ತಾಳುತ್ತವೆ. ಇದೇ ಸಮುದಾಯರೂಪವಾದ ಕಾರ್ಯಜನಕತ್ವವಾಗಿದೆ. ಇವುಗಳೇ ಪ್ರತಿಕ್ಷಣದಲ್ಲಿ ವಿರಳಭಾವವಾಗುತ್ತವೆ. ಪುನಃ ಸಮುದಾಯರೂಪವನ್ನು ತಾಳುತ್ತವೆ. ಈ ಪರಮಾಣುಗಳ ವಿರಳವಾಗುವಿಕೆಯೇ ನಾಶ, ಒಟ್ಟಿಗೆ ಸೇರುವಿಕೆಯೇ ಕಾರ್ಯದ ಉತ್ಪತ್ತಿ ಇದು ಬೌದ್ಧರ ಹೃದಯ.

ಇದು ತಪ್ಪು. ಇದೇ ಪರಮಾಣುಗಳು ನಾಶ ಮಾಡುವುದಕ್ಕಾಗಿ ತಮ್ಮ ಕಾರ್ಯದ ವಿಯೋಗಕಾಲದಲ್ಲಿ ಸತ್ವಭಾವವನ್ನು ಹೊಂದಿರುತ್ತವೆಂದು ಹೇಳಬೇಕು. ಇಲ್ಲದಿದ್ದರೆ ಕಾರ್ಯಕಾರಣಭಾವವೇ ಅಯುಕ್ತವಾಗುತ್ತದೆ. ಕಾರಣಕ್ಕೆ ನಿಬಿಡಪುಂಜೀಭಾವವೆಂಬ ಕಾರ್ಯ ಜನಕತ್ವದ ನಿಯಮವಿದೆ. ಆದ್ದರಿಂದ ಪುನಃ ಪುನಃ ಮತ್ತಷ್ಟು ನಿಬಿಡತ್ವವನ್ನೇ ಹೊಂದಬೇಕಾಗುತ್ತದೆ. ವಿರಳಭಾವವನ್ನು ಹೊಂದಲು ಅವಕಾಶವೇ ಇರುವುದಿಲ್ಲ. ಆದ್ದರಿಂದ ಸಂತಾನರಹಿತವಾಗಿ ನಾಶವಾಗಲು ಸಾಧ್ಯವಿಲ್ಲ. (ಗುರ್ವರ್ಥದೀಪಿಕಾ)

**तत्वप्रकाशिका – नाप्यन्यः । सतो हि घटस्यात्यन्तिको नाशः । अतोऽसौ सत्वात्कार्यमुत्पादयेदेव। कारणे सति कार्यं भवत्येवेति नियमात् । तत्कार्यं चैवमिति कथं सन्तानोच्छेदावसर इति भावः ।**

ಸಂತಾನಸಹಿತವಾಗಿ ಸಂತಾನಿಯು ನಾಶವಾಗುತ್ತದೆಂಬ ಮತ್ತೊಂದು ಪಕ್ಷವು ಕೂಡುವುದಿಲ್ಲ. ಆದ್ದರಿಂದ ಆತ್ಯಂತಿಕಘಟನಾಶವು ದಂಡಾದಿಗಳಿಂದ ಆಗುತ್ತದೆಂದು ಹೇಳಬೇಕು. ಆದರೆ ಘಟವು ಸತ್ವವಾಗಿದೆ ಎಂದು ಹೇಳಿದರೆ ಕಾರ್ಯವನ್ನು ಹುಟ್ಟಿಸಲೇಬೇಕು. ಕಾರಣವಿದ್ದಾಗ ಕಾರ್ಯವು ಆಗಲೇಬೇಕೆಂಬ ನಿಯಮವಿದೆ. ಆ ಕಾರ್ಯವೂ ಕೂಡ ಹೀಗೆ ಕಾರ್ಯವನ್ನು ಹುಟ್ಟಿಸಬೇಕು. ಹೀಗಿರುವಾಗ ಸಂತಾನಪರಂಪರೆಗೆ ಉಚ್ಛೇದ ಬರಲು ಅವಕಾಶವೇ ಇಲ್ಲ ಎಂದಭಿಪ್ರಾಯ.

ವಿವರಣೆ - ಪ್ರಥಮ ಕ್ಷಣದಲ್ಲಿ ಹುಟ್ಟಿ, ದ್ವಿತೀಯಕ್ಷಣದಲ್ಲಿ ತಾನು ಸಂತಾನವನ್ನು ಹುಟ್ಟಿಸಿ, ತೃತೀಯಕ್ಷಣದಲ್ಲಿ ಸಂತಾನದ ಜೊತೆ ತಾನು ನಾಶವಾಗುತ್ತದೆಂದು ಹೇಳಬೇಕು. ಇದನ್ನೇ ಆತ್ಯಂತಿಕನಾಶವೆಂದು ಟೀಕೆಯಲ್ಲಿ ಹೇಳಿದ್ದಾರೆ. (ವಾಕ್ಯಾರ್ಥವಿವರಣ)

**तत्वप्रकाशिका – सन्तानो नित्य एवेति चेन्न । प्रलयानुपपत्तेः । विविक्ततया प्रलयोपपत्तिरिति निरस्तम् । सन्तानस्य नित्यत्वे क्षणिकत्वविरोधः । अवास्तवत्वान्नासौ क्षणिका इति चेन्न । सन्तानिनामपि तथात्वापातात् । न हि सन्ति सन्तानिनो न सन्तान इति युक्तम् ।**

ಸಂತಾನವು ನಿತ್ಯವೇ ಆಗಿದೆ ಎನ್ನಬಾರದು. ಹಾಗಾದಲ್ಲಿ ಪ್ರಳಯವು ಅನುಪಪನ್ನವಾಗುತ್ತದೆ. ವಿರಳವಾದಾಗ ಪ್ರಳಯವನ್ನು ಕೂಡಿಸಬಹುದಲ್ಲವೆ ? ಎಂಬುದನ್ನು ಈಗಾಗಲೇ ನಿರಾಕರಿಸಿದ್ದಾಗಿದೆ. ಸಂತಾನವು ನಿತ್ಯವಾದರೆ ಕ್ಷಣಿಕತ್ವದ ವಿರೋಧವು ಬರುತ್ತದೆ. ಅವಾಸ್ತವವಾದ್ದರಿಂದ ಕ್ಷಣಿಕವಲ್ಲ ಎಂದು ಹೇಳಿದರೆ ಸಂತಾನಿಗಳೂ ಕೂಡ ಅವಾಸ್ತವವಾಗುತ್ತವೆ. ಸಂತಾನಿಗಳು ಇರುತ್ತವೆ, ಸಂತಾನವು ಇರುವುದಿಲ್ಲ ಎನ್ನುವುದು ಯುಕ್ತವಲ್ಲ.

ವಿವರಣೆ - ವಿರಲಪರಮಾಣುಗಳಿಂದ ನಿಬಿಡಪರಮಾಣುಗಳು ಹುಟ್ಟುವುದಿಲ್ಲ. ನಿಬಿಡಪರಮಾಣುಗಳಿಂದ ನಿಬಿಡಪರಮಾಣುಗಳೇ ಹುಟ್ಟುತ್ತವೆ. ಆದ್ದರಿಂದ ಪ್ರಳಯವೇ ಇಲ್ಲವೆಂದಾಗುತ್ತದೆಂಬುದು ಅಭಿಪ್ರಾಯ.

**तत्वप्रकाशिका – एतेन समुदायस्यावास्तवत्वं परास्तम् ।**

ಸಂತಾನವು ನಿತ್ಯವಾದರೆ ಕ್ಷಣಿಕತ್ವದಿಂದ ವಿರೋಧ ಬರುತ್ತದೆ. ಆದ್ದರಿಂದ ಸಂತಾನವನ್ನು ಅವಾಸ್ತವವೆಂದು ಅವರು ಉತ್ತರಿಸಬೇಕು. ಆಗ ಸಂತಾನಿಯು ಕೂಡ ಅವಾಸ್ತವವೇ ಆಗಬೇಕಾಗುತ್ತದೆ.

**तत्वप्रकाशिका – समुदायोऽपि समुदायिमात्रं तदतिरिक्तो वा । नाद्यः विरोधात् । द्वितीये स एवावयवी । अवास्तवत्वे घटादिबुद्धीनां निरालम्बनत्वापातात्। परमाणव एवालम्बनमिति चेन्न । तेषामनेकत्वादतीन्द्रियत्वाच्चेति ।। २२ ।।**

ಸಮುದಾಯವು ಸಮುದಾಯಿಸ್ವರೂಪವೋ ಅಥವಾ ಅತಿರಿಕ್ತವೋ? ಸಮುದಾಯಿಸ್ವರೂಪ ಎಂದರೆ ವಿರೋಧ. ಅತಿರಿಕ್ತ ಎಂದರೆ ಸಮುದಾಯವೇ ಅವಯವಿ ಎಂದಂತಾಯಿತು. ಇದನ್ನು ಅವಾಸ್ತವವೆಂದರೆ ಘಟ ಮೊದಲಾದ ಬುದ್ಧಿಗೆ ವಿಷಯವೇ ಇಲ್ಲ ಎಂದಾಗುತ್ತದೆ. ಪರಮಾಣುಗಳೇ ವಿಷಯವಾಗುತ್ತವೆಂದು ಹೇಳಲಾಗದು. ಪರಮಾಣುಗಳು ಅನೇಕವಾಗಿವೆ. ಹಾಗೂ ಅತೀಂದ್ರಿಯವಾಗಿವೆ. ಆದ್ದರಿಂದ ಪರಮಾಣುಗಳು ವಿಷಯವಾಗುವುದಿಲ್ಲ.

## ಬ್ರಹ್ಮಸೂತ್ರ

**सूत्रम् – उभयथा च दोषात् ।।**

ಕಾರಣವಿದ್ದಾಗ ಕಾರ್ಯವಾಗಲೇ ಬೇಕು ಎಂಬ ನಿಯಮವನ್ನು ಒಪ್ಪಿದರೂ ಅಥವಾ ಒಪ್ಪದೇ ಇದ್ದರೂ ದೋಷವಿರುವ ಕಾರಣ ಬೌದ್ಧರ ಪಕ್ಷವು ಅಯುಕ್ತವಾಗಿದೆ.

## ಸೂತ್ರದೀಪಿಕಾ

**सूत्रदीपिका –** उभयथा कारणे सति कार्यं भवत्येवेति नियमपक्षे तदभावपक्षे च । दोषसत्त्वात् कार्यकारणविशेषकार्यानुत्पत्त्याख्यदोषात् । नान्यतर-पक्षावलम्बेनार्थापत्त्या क्षणिकपक्षो युक्त इत्यर्थः ।।६।।

ಉಭಯಥಾ = ಕಾರಣವಿದ್ದಾಗ ಕಾರ್ಯವಾಗಲೇ ಬೇಕು ಎಂಬ ನಿಯಮವನ್ನು ಒಪ್ಪಿದಲ್ಲಿ, ಅಥವಾ ಒಪ್ಪದಿದ್ದಲ್ಲಿ, ದೋಷಾತ್ = ಕಾರ್ಯಕಾರಣವಿಶೇಷಕಾರ್ಯನುತ್ಪತ್ತಿ ಎಂಬ ದೋಷವು ಬರುತ್ತದೆ. ಆದ್ದರಿಂದ ಒಂದು ಪಕ್ಷವನ್ನು ಅವಲಂಬಿಸಿ, ಅರ್ಥಾಪತ್ತಿಯಿಂದ ಕ್ಷಣಿಕತ್ವಪಕ್ಷವನ್ನು ಹೇಳುವುದು ಅಯುಕ್ತವಾಗುತ್ತದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। उभयथा च दोषात् ।।६।।**

**कारणे सति कार्यं भवत्येवेति नियमे सर्वदा कार्यभावान्न कार्यकारणविशेषः । अनियमे कार्यानुत्पत्तिः ।।६।।**

ಅನುವಾದ - ಕಾರಣವಿದ್ದ ಮೇಲೆ ಕಾರ್ಯವು ಆಗಲೇಬೇಕೆಂಬ ನಿಯಮವನ್ನು ಒಪ್ಪಿದರೆ ಯಾವಾಗಲೂ ಕಾರ್ಯವು ಆಗುವುದರಿಂದ ಕಾರ್ಯಕಾರಣಗಳ ಪೂರ್ವಾಪರಿಭಾವವು ಅಯುಕ್ತವಾಗುತ್ತದೆ. ನಿಯಮವಿಲ್ಲವೆಂದು ಹೇಳಿದರೆ ಕಾರ್ಯದ ಉತ್ಪತ್ತಿಯೇ ಆಗದಿರಬೇಕಾದೀತು.

ಪ್ರತಿಪದಾರ್ಥ -- ಕ್ಷಣಿಕತ್ವವನ್ನು ಒಪ್ಪಲೇ ಬೇಕೆಂಬ ಅಭಿಪ್ರಾಯವನ್ನು ಖಂಡನೆ ಮಾಡಲು ಮುಂದಿನಸೂತ್ರ ಹೊರಟಿದೆ. ಕಾರಣೇ ಸತಿ = ಕಾರ್ಯ ಇದ್ದಮೇಲೆ, ಕಾರ್ಯಂ = ಕಾರ್ಯವು, ಭವತ್ಯೇವ = ಆಗಲೇ ಬೇಕು. ಇತಿ = ಹೀಗೆ, ನಿಯಮೇ = ನಿಯಮ ಇರುವುದರಿಂದ, ಸರ್ವದಾ = ಯಾವಾಗಲೂ, ಕಾರ್ಯಭಾವಾತ್ = ಕಾರ್ಯವು ಇರುವುದರಿಂದ, ನ ಕಾರ್ಯಕಾರಣವಿಶೇಷಃ = ಕಾರ್ಯ ಹಾಗೂ ಕಾರಣವೆಂಬ ವ್ಯತ್ಯಾಸವೇ ಸರಿಯಲ್ಲ, ಅನಿಯಮೇ = ಈ ನಿಯಮವು ಇಲ್ಲವೆಂದು ಒಪ್ಪಿದರೆ, ಕಾರ್ಯಅನುತ್ಪತ್ತಿಃ = ಕಾರ್ಯದ ಉತ್ಪತ್ತಿಯೇ ಯಾವಾಗಲೂ ಆಗದಿರಬೇಕಾದೀತು.

## ತತ್ವಪ್ರಕಾಶಿಕಾ

**ತत्वप्रकाशिका – तथापि न सतां भावानां क्षणिकता शक्या निषेद्धुम् । अर्थक्रियाकारित्वं खलु सत्त्वं नाम । न च तत्क्षणिकतामन्तरेणोपपन्नम् । यद्याद्यक्षणे घटो घटान्तरमुत्पाद्य न स्वयं नश्यति तदा घटान्तरमपि तथेत्यनन्तकार्यापत्तिः । अतोऽर्थक्रियाकारित्वसत्त्वसिद्ध्यै क्षणिकत्वमेष्टव्यं भावानामित्याशङ्कां परिहरत्सूत्रमुपन्यस्य व्याचष्टे – उभयथेति ।।**

ಆದರೂ ಕೂಡ ಸತ್ಯಭೂತವಾದ ಭಾವಪದಾರ್ಥಗಳಿಗೆ ಕ್ಷಣಿಕತ್ವವನ್ನು ನಿಷೇಧ ಮಾಡಲು ಸಾಧ್ಯವಿಲ್ಲ. ಸತ್ವವೆಂದರೆ ಅರ್ಥಕ್ರಿಯಾಕಾರಿತ್ವ ಎಂದರ್ಥ. ಕ್ಷಣಿಕತ್ವವಿಲ್ಲದೆ ಈ ಅರ್ಥಕ್ರಿಯಾಕಾರಿತ್ವವು ಯುಕ್ತವಾಗುವುದಿಲ್ಲ. ಒಂದುವೇಳೆ ಪ್ರಥಮಕ್ಷಣದಲ್ಲಿ ಘಟವು ಮತ್ತೊಂದು ಘಟವನ್ನು ಹುಟ್ಟಿಸಿ ನಾಶವಾಗದಿದ್ದರೆ ಆಗ ಘಟಾಂತರವೂ ಕೂಡ ಮತ್ತೊಂದು ಘಟವನ್ನು ಹುಟ್ಟಿಸಿ ನಾಶವಾಗದೆ ಇರುವುದರಿಂದ ಅನಂತ ಕಾರ್ಯಗಳು ಹಾಗೆಯೇ ಉಳಿಯುವ ಪ್ರಸಂಗ ಬರುತ್ತದೆ. ಆದ್ದರಿಂದ ಅರ್ಥಕ್ರಿಯಾಕಾರಿತ್ವದ ಸಿದ್ಧಗೋಸ್ಕರವೇ ಭಾವಪದಾರ್ಥಗಳಿಗೆ ಕ್ಷಣಿಕತ್ವವನ್ನು ಅಂಗೀಕಾರ ಮಾಡಬೇಕು.

ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಉಭಯಥಾ ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಜಗತ್ತು ಕ್ಷಣಿಕವಾಗಿದೆ' ಎಂಬ ವಿಷಯದಲ್ಲಿ ಅರ್ಥಾಪತ್ತಿಯನ್ನು 'ತಥಾಪಿ' ಇತ್ಯಾದಿಯಾಗಿ ಆಶಂಕಿಸುತ್ತಿದ್ದಾರೆ.

ಬೌದ್ಧರು ಹೇಳುವ ಅರ್ಥಕ್ರಿಯಾಕಾರಿತ್ವವೆಂದರೆ ಕುರ್ವದ್ರೂಪವೆಂದು ವಿವಕ್ಷಿಸಬೇಕು.

**तत्वप्रकाशिका – अर्थक्रियाकारित्वं सत्त्वं तदन्यथानुपपत्त्या क्षणिकत्वं भावानामिति वदन् प्रष्टव्यो जायते । कारणे सति कार्यं भवत्येवेति नियमोऽस्ति न वेति । यद्यस्ति तदा कार्यस्यापि यावत्कारणभावित्वाभावेनासत्त्वापत्त्या न कदापि ततः कार्योत्पत्तिः स्यात् तथा च क्षणिकता व्याहन्यत इति भावः ।**

ಅರ್ಥಕ್ರಿಯಾಕಾರಿತ್ವವೇ ಸತ್ವವೆನಿಸುತ್ತದೆ. ಇದರ ಅನ್ಯಥಾನುಪಪತ್ತಿಯಿಂದ ಭಾವಪದಾರ್ಥ-ಗಳಿಗೆ ಕ್ಷಣಿಕತ್ವವನ್ನು ಹೇಳುವ ಬೌದ್ಧರನ್ನು ಕುರಿತು ಪ್ರಶ್ನಿಸುತ್ತೇವೆ. ಕಾರಣವಿದ್ದಾಗ ಕಾರ್ಯವು ಇದ್ದೇ ಇರುತ್ತದೆ ಎಂಬ ನಿಯಮವನ್ನು ಒಪ್ಪುತ್ತೀಯೋ ಇಲ್ಲವೋ ? ಒಪ್ಪುವುದಾದರೆ ಆಗ ಕಾರ್ಯವೂ ಕೂಡ ಕಾರಣ ಇರುವಾಗಲೆಲ್ಲಾ ಇದ್ದೇ ಇರುತ್ತದೆಂದು ಹೇಳಿದಂತಾಯಿತು. ಆಗ

ಅವುಗಳಿಗೆ ಕಾರ್ಯಕಾರಣಭಾವವು ಕೂಡುವುದಿಲ್ಲ. ಹಸುವಿನ ಎಡಕೊಂಬು ಹಾಗೂ ಬಲ ಕೊಂಬುಗಳಿಗೆ ಹೇಗೆ ಕಾರ್ಯಕಾರಣಭಾವ ಇಲ್ಲವೋ ಅದರಂತೆ. ಒಂದು ವೇಳೆ ಈ ನಿಯಮವನ್ನು ಒಪ್ಪದಿದ್ದರೆ ಆಗ ಕಾರಣ ಇರುವ ಕಾಲದಲ್ಲೇ ಅರ್ಥಕ್ರಿಯಾಕಾರಿತ್ವವು ಇಲ್ಲ ಎಂದು ಹೇಳಿದಂತಾಗುವುದರಿಂದ ಅದು 'ಅಸತ್' ಆಗುತ್ತದೆ. ಆಗ ಯಾವಾಗಲೂ ಕೂಡ ಅದರಿಂದ ಉತ್ಪತ್ತಿಯೇ ಆಗದಿರುವ ಪರಿಸ್ಥಿತಿ ಬರುತ್ತದೆ. ಆದ್ದರಿಂದ ವಸ್ತುಗಳ ಕ್ಷಣಿಕತ್ವವು ವ್ಯಾಹತವಾಗಬೇಕಾಗುತ್ತದೆ.

**तत्वप्रकाशिका – न च वाच्यं कथं तर्हि घटादिसत्त्वव्यवस्थेति । जलाहरणादियोग्यतयैव तदुपपत्तेः ॥२३॥**

ಹಾಗಾದರೆ ಘಟಾದಿಗಳ ಸತ್ವವ್ಯವಸ್ಥೆ ಹೇಗೆ ? ಎಂದು ಪ್ರಶ್ನಿಸಬಾರದು. ಜಲಾಹರಣಕ್ರಿಯೆಯೇ ಮೊದಲಾದ ಯೋಗ್ಯತೆ ಇರುವುದರಿಂದಲೇ ಘಟಾದಿಗಳ ಸತ್ವವ್ಯವಸ್ಥೆಯು ಯುಕ್ತವಾಗುತ್ತದೆ.

ವಿವರಣೆ - ಕುರ್ವದ್‌ರೂಪತ್ವ ಎಂಬ ಅರ್ಥಕ್ರಿಯಾಕಾರಿತ್ವವನ್ನು ಖಂಡನೆ ಮಾಡಿ ಅದನ್ನು ಅಂಗೀಕಾರ ಮಾಡದಿದ್ದರೆ 'ಜಲಾಹರಣಾದಿ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಆದ್ದರಿಂದ ಜಲಾಹರಣಾದಿಕಾರ್ಯದ ಸಮರ್ಥನೆಯೇ ಅರ್ಥಕ್ರಿಯಾಕಾರಿತ್ವ ಎಂದು ಹೇಳಿದಂತಾಯಿತು. ಇದರಿಂದಲೇ ಘಟಾದಿಗಳಲ್ಲಿ ಸತ್ವವು ಸಿದ್ಧವಾಗುತ್ತದೆ. ಆದ್ದರಿಂದ 'ಕುರ್ವದ್‌ರೂಪತ್ವ' ಎಂಬ ಅರ್ಥಕ್ರಿಯಾಕಾರಿತ್ವದಿಂದ ಘಟಾದಿಗಳ ಸತ್ವವು ಸಿದ್ಧವಾಗುವುದಿಲ್ಲ. ಕಾರ್ಯವು ಕಾರಣಸತ್ತಾಸಮಾನಕಾಲೀನ ಸತ್ತಾಕವಾಗಿರುತ್ತದೆ. ಆದ್ದರಿಂದ ಯಾವಾಗ ಕಾರಣವಿರುತ್ತದೋ ಆಗಲೇ ಕಾರ್ಯವೂ ಕೂಡ ಇರಬೇಕು. ಎಂಬುದು 'ಯಾವತ್‌ಕಾರಣಭಾವಿತ್ವ' ಎಂಬುದರ ಅಭಿಪ್ರಾಯವಾಗಿದೆ. (ವಾಕ್ಯಾರ್ಥವಿವರಣ)

## ಬ್ರಹ್ಮಸೂತ್ರ

**सूत्रम् – आकाशे चाविशेषात् ॥**

ಮೊದಲು ಇದ್ದ ದೀಪಜ್ವಾಲೆಯು ಚಿಕ್ಕದಾಗಿದೆ. ಈಗಿರುವ ಜ್ವಾಲೆಯು ದೊಡ್ಡದಾಗಿದೆ. ಆದ್ದರಿಂದ ದೀಪಜ್ವಾಲೆಯನ್ನು ಕ್ಷಣಿಕವೆಂದು ಹೇಳಬಹುದು. ಆದರೆ ಆಕಾಶವು ಯಾವಾಗಲೂ ಒಂದೇ ರೀತಿಯಾಗಿರುವುದರಿಂದ ಯಾವುದೇ ವಿಶೇಷವಿರುವುದಿಲ್ಲ. ಹೀಗಿರುವಾಗ ಕ್ಷಣಿಕವಾದ ದೀಪವನ್ನು ಉದಾಹರಣೆಯನ್ನಾಗಿಟ್ಟುಕೊಂಡು ಎಲ್ಲವನ್ನು ಕ್ಷಣಿಕವೆಂದು ಹೇಳುವಂತೆ ಆಕಾಶದ ದೃಷ್ಟಾಂತವನ್ನಿಟ್ಟುಕೊಂಡು, ಎಲ್ಲವನ್ನು ನಿತ್ಯವೆಂದು ಏಕೆ ಹೇಳಬಾರದು ?

## ಸೂತ್ರದೀಪಿಕಾ

**सूत्रदीपिका – चोऽप्यर्थे** ॥ दीपदृष्टान्तेन सत्त्वहेतुना जगति क्षणिकत्वसाधने आकाशदृष्टान्तेनाक्षणिकत्वस्यापि साधनापातः । ननु दृष्टान्ते साध्यवैकल्यमित्यत

**उक्तं आकाशेचाऽविशेषादिति । क्षणिकत्वसाधकत्वेन परोक्तपरिमाणविशेषा-दर्शनादित्यर्थः । तथाच सत्प्रतिपक्षोऽयं हेतुरिति न तेन क्षणिकत्वसिद्धिरिति भावः ।।७।।**

ಚಶಬ್ದವು ಅಪ್ಯರ್ಥದಲ್ಲಿದೆ. ದೀಪದ ದೃಷ್ಟಾಂತದಿಂದ ಮತ್ತು ಸತ್ವಹೇತುವಿನಿಂದ ಜಗತ್ತಿನಲ್ಲಿ ಕ್ಷಣಿಕತ್ವವನ್ನು ಸಾಧನೆ ಮಾಡಿದರೆ, ಆಕಾಶದೃಷ್ಟಾಂತದಿಂದ ಅಕ್ಷಣಿಕವಾದದ್ದನ್ನೂ ಕೂಡ ಸಾಧನೆ ಮಾಡಬೇಕಾಗುತ್ತದೆ. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಆಕಾಶೇऽವಿಶೇಷಾತ್ = ಕ್ಷಣಿಕತ್ವಕ್ಕೆ ಸಾಧಕವಾಗಿ ಪರರು ಹೇಳಿದ ಪರಿಮಾಣದ ವಿಶೇಷವು ಕಾಣಿಸುತ್ತಿಲ್ಲ. ಆದ್ದರಿಂದ ಈ ಹೇತುವು ಸತ್ಪ್ರತಿಪಕ್ಷವಾಗಿದೆ. ಇದರಿಂದ ಕ್ಷಣಿಕತ್ವದಸಿದ್ಧಿಯು ಉಂಟಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् — ।। आकाशे चाविशेषात् ।।७।।**

**दीपादिषु विशेषदर्शनात् क्षणिकत्वेन अन्यत्रापि क्षणिकत्वमनुमीयते चेदाकाशदिष्वविशेषदर्शनादन्यत्रापि तदनुमीयेत ।।७।।**

ಅನುವಾದ - ದೀಪದ ಜ್ವಾಲೆ ದೀರ್ಘಕಾಲದಲ್ಲಿ ಇದ್ದಂತೆ ಕಂಡರೂ ಪ್ರತಿಕ್ಷಣವೂ ಬೇರೆ ಬೇರೆಯಾಗಿರುತ್ತದೆ. ಅದೇ ರೀತಿಯಾಗಿ ಪ್ರತಿಯೊಂದು ವಸ್ತುಗಳು ನಿರಂತರವಾಗಿ ಇವೆ ಎಂದು ಕಂಡರೂ ಕ್ಷಣಿಕವಾಗಿರುತ್ತವೆ. ಹೀಗೆ ಬೌದ್ಧರು ಸಾಧನೆ ಮಾಡುತ್ತಾರೆ ಇದು ತಪ್ಪು. ಅನೇಕ ದಿನಗಳು ಕಳೆದರೂ ಆಕಾಶದಲ್ಲಿ ಯಾವ ವಿಶೇಷವು ಕಾಣಿಸುತ್ತಿಲ್ಲ. ಈ ದೃಷ್ಟಾಂತದಿಂದ ಬೇರೆ ಕಡೆಯಲ್ಲಿಯೂ ಕೂಡ ಸಕಲವಸ್ತುಗಳು ಸ್ಥಿರವಾಗಿವೆ ಎಂದು ಅನುಮಾನದಿಂದ ಸಾಧನೆ ಮಾಡಬಹುದು.

ಪ್ರತಿಪದಾರ್ಥ -- ಸತ್ಯವಾದ ಪದಾರ್ಥಗಳೆಲ್ಲವೂ ಕ್ಷಣಿಕವೆಂಬ ವಾದವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರ ಹೊರಟಿದೆ. ದೀಪಾದಿಷು = ದೀಪಾದಿಗಳಲ್ಲಿ, ವಿಶೇಷದರ್ಶನಾತ್ = ಪೂರ್ವೋತ್ತರಕ್ಷಣಗಳಲ್ಲಿ ಪರಿಮಾಣದಲ್ಲಿ ವಿಶೇಷವು ಕಾಣಿಸುತ್ತಿರುವುದರಿಂದ, ಕ್ಷಣಿಕತ್ವೇನ = ಕ್ಷಣಿಕತ್ವವಿರುವುದು ಅನುಭವ ಸಿದ್ಧವಾಗಿದೆ. ಅನ್ಯತ್ರಾಪಿ = ಘಟಪಟಾದಿಗಳಲ್ಲಿ, ಕ್ಷಣಿಕತ್ವಮ್ = ಕ್ಷಣಿಕತ್ವವನ್ನು, ಅನುಮೀಯತೇ = ಅನುಮಾನ ಮಾಡುತ್ತೇವೆ. ಚೇತ್ = ಹೀಗೆ ಆಕ್ಷೇಪ ಮಾಡಿದರೆ, ಆಕಾಶಾದಿಷು = ಆಕಾಶಾದಿಗಳಲ್ಲಿ, ಅವಿಶೇಷಾದರ್ಶನಾತ್ = ಯಾವುದೇ ವಿಶೇಷವು ಕಾಣಿಸದ ಕಾರಣ, ಅನ್ಯತ್ರಾಪಿ = ಘಟಪಟಾದಿಗಳಲ್ಲಿ, ತದನುಮೀಯತೇ = ಸ್ಥಿರತ್ವವನ್ನು ಅನುಮಾನ ಮಾಡಬಹುದು.

## ತತ್ವಪ್ರಕಾಶಿಕಾ

**तत्वप्रकाशिका – मा भूदर्थापत्त्या क्षणिकत्वसिद्धिः 'यत्सत्तत्क्षणिकं, यथा दीपादि । सन्तश्चामी भावाः' इत्यनुमानेन सेत्स्यति । न च साध्यविकलता दृष्टान्तस्य । यद्विरुद्धधर्माधिकरणं तन्नाना, यथा घटपटौ, तथा चायं दीपः पूर्वोत्तरक्षणस्थोऽपि विरुद्धधर्माधिकरणं परिमाणविशेषदर्शनात् इत्याशङ्कां परिहरत्सूत्रमुपन्यस्य व्याचष्टे – आकाशे चेति ॥**

ಅರ್ಥಾಪತ್ತಿಪ್ರಮಾಣದಿಂದ ಕ್ಷಣಿಕತ್ವದ ಸಿದ್ಧಿ ಆಗುವುದು ಬೇಡ. ಆದರೆ ಯಾವುದು ಸತ್ಯವಾಗಿದೆಯೋ ಅದು ಕ್ಷಣಿಕವಾಗಿದೆ ದೀಪದಂತೆ. ಜಗತ್ತಿನಲ್ಲಿರುವ ಪದಾರ್ಥಗಳೆಲ್ಲವೂ ಸತ್ಯವಾದ್ದರಿಂದ ಕ್ಷಣಿಕವಾಗಿವೆ. ಹೀಗೆ ಅನುಮಾನದ ಮೂಲಕ ಕ್ಷಣಿಕತ್ವವು ಸಿದ್ಧವಾಗುತ್ತದೆ. ದೀಪವೆಂಬ ದೃಷ್ಟಾಂತದಲ್ಲಿ ಕ್ಷಣಿಕತ್ವವಿಲ್ಲವೆಂದು ಸಾಧ್ಯವೈಕಲ್ಯ ಬರುವುದಿಲ್ಲ. ಏಕೆಂದರೆ ಯಾವುವು ವಿರುದ್ಧಧರ್ಮಕ್ಕೆ ಅಧಿಕರಣವಾದವುಗಳೋ ಅವು ವಿಭಿನ್ನವಾಗಿರುತ್ತವೆ. ಉದಾಹರಣೆ - ಘಟಪಟಗಳು. ಆದ್ದರಿಂದ ಈ ದೀಪವೂ ಕೂಡ ಹಿಂದಿನ ಮುಂದಿನ ಕ್ಷಣದಲ್ಲಿ ವಿರುದ್ಧಧರ್ಮಕ್ಕೆ ಅಧಿಕರಣವಾಗಿದೆ. ಪರಿಮಾಣದಲ್ಲಿ ವ್ಯತ್ಯಾಸ ಕಾಣಿಸುತ್ತಿರುವುದರಿಂದ. ಈ ಆಕ್ಷೇಪವನ್ನು ಪರಿಹರಿಸಲು 'ಆಕಾಶೇಚೈತತ್' ಇತ್ಯಾದಿ ಭಾಷ್ಯದಿಂದ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಜಗತ್, ಕ್ಷಣಿಕಂ, ಸತ್ವಾತ್, ದೀಪವತ್, ಯತ್ ಸತ್ ತತ್‌ಕ್ಷಣಿಕಮ್', ಈ ಅನುಮಾನದಿಂದ ಜಗತ್ತಿನಲ್ಲಿ ಕ್ಷಣಿಕತ್ವವನ್ನು ಸಾಧನೆ ಮಾಡುತ್ತಿದ್ದಾರೆ. ದೃಷ್ಟಾಂತವೆನಿಸಿದ ದೀಪದಲ್ಲಿ ಕ್ಷಣಿಕತ್ವ ಇಲ್ಲವೆಂದು ಹೇಳಲಾಗದು. ದೀಪ ಹಚ್ಚುವಾಗ ಇರುವ ಬೆಳಕಿನಿಂದ ಮುಂದಿನ ಕ್ಷಣದಲ್ಲಿರುವ ಬೆಳಕಿನಲ್ಲಿ ಅಭಿವೃದ್ಧಿಯು ಕಾಣಿಸುತ್ತಿದೆ. ಹೀಗೆ ಪರಿಣಾಮವಿಶೇಷದಿಂದ ಪ್ರತಿಕ್ಷಣದ ದೀಪವು ಬೇರೆಬೇರೆಯೇ ಆಗಿರುತ್ತದೆ ಎಂಬುದು ಬೌದ್ಧರ ಅಭಿಪ್ರಾಯ.

**तत्वप्रकाशिका – न चोक्तानुमानेन भावानां क्षणिकत्वसिद्धिः । यत्सत् तदक्षणिकम् । यथा आकाशमित्यन्यत्राकाशदृष्टान्तेनाक्षणिकत्वस्यापि साधयितुं शक्यत्वात् । न चाकाशे साध्याभावः । विशेषदर्शनाभावेन क्षणिकत्वसाधकाभावादिति भावः।**

ಪೂರ್ವಪಕ್ಷಕಾರರು ಹೇಳಿದ ಅನುಮಾನದಿಂದ ಜಗತ್ತಿನಲ್ಲಿರುವ ಭಾವಪದಾರ್ಥಗಳಿಗೆ ಕ್ಷಣಿಕತ್ವವು ಸಿದ್ಧವಾಗುವುದಿಲ್ಲ. ಏಕೆಂದರೆ 'ಯತ್ ಸತ್ ತತ್ ಅಕ್ಷಣಿಕಂ' 'ಯಾವುದು ಸತ್ಯವಾಗಿದೆಯೋ ಅದು ಕ್ಷಣಿಕವಾಗಿರುವುದಿಲ್ಲ' ಆಕಾಶದಂತೆ' ಎಂಬ ವ್ಯಾಪ್ತಿಯನ್ನು

ಹೇಳಬಹುದಾದ್ದರಿಂದ ಆಕಾಶವೆಂಬ ದೃಷ್ಟಾಂತದಿಂದ ಜಗತ್ತಿನಲ್ಲಿ ಅಕ್ಷಣಿಕತ್ವವನ್ನು ಸುಲಭವಾಗಿ ಸಾಧಿಸಬಹುದು. ಆಕಾಶದಲ್ಲಿ 'ಅಕ್ಷಣಿಕತ್ವ' ಇಲ್ಲವೆಂದು ಸಾಧ್ಯವೈಕಲ್ಯ ಹೇಳಲಾಗದು. ಯಾವುದೇ ವಿಶೇಷ ಪ್ರಮಾಣವಿಲ್ಲದ ಕಾರಣ ಕ್ಷಣಿಕತ್ವಸಾಧಕವಾದ ಪ್ರಮಾಣವು ಇರುವುದಿಲ್ಲ.

ವಿವರಣೆ - 'ಜಗತ್ ಕ್ಷಣಿಕಂ ಸತ್ವಾತ್ ದೀಪವತ್' ಎಂಬುದಾಗಿ ಬೌದ್ಧರು ಅನುಮಾನವನ್ನು ಮಾಡಿದರೆ ಸಿದ್ಧಾಂತಿಗಳಾದ ನಾವು 'ಜಗತ್ ಅಕ್ಷಣಿಕಂ ಸತ್ವಾತ್, ಆಕಾಶವತ್' ಎಂಬುದಾಗಿ ಪ್ರತಿಪಕ್ಷಾನುಮಾನವನ್ನು ಮಾಡುತ್ತಿದ್ದೇವೆ. ಬೌದ್ಧರು ಯಾವ ಹೇತುವನ್ನು ಹೇಳಿದರೋ ಅದೇ ಹೇತುವಿನಿಂದ ಅವರು ಹೇಳಿದ ಸಾಧ್ಯದ ಅಭಾವವನ್ನು ಸಾಧನೆ ಮಾಡುತ್ತಿರುವುದುರಿಂದ ಅವರ ಹೇತು ಸತ್‌ಪ್ರತಿಪಕ್ಷಿತವಾಯಿತು ಎಂಬುದು ಇದರ ಅಭಿಪ್ರಾಯ.

**तत्वप्रकाशिका – अथ हेत्वन्तरेण तत्र क्षणिकत्वसिद्धिरिति चेन्न । पञ्चस्कन्धातिरिक्तत्वेन तत्र तदनभ्युपगमात् । न चोत्पत्त्यनन्तरमेव मुसलाहतघटे व्यभिचारः । तत्रापि पूर्वमध्यापरकलाविकलकालवृत्तित्वाभावात् ।**

ಸತ್ವಾತ್ ಎಂಬ ಹೇತುವಿಗಿಂತ ಭಿನ್ನವಾದ ಹೇತುವಿನಿಂದ ಕ್ಷಣಿಕತ್ವವನ್ನು ಸಾಧನೆ ಮಾಡುತ್ತೇವೆ ಎಂದೂ ಸಹ ಹೇಳಲಾಗದು. ಪಂಚಸ್ಕಂಧಗಳಿಗಿಂತ ಭಿನ್ನವಾಗಿರುವುದರಿಂದ ಕ್ಷಣಿಕತ್ವವನ್ನು ಅಲ್ಲಿ ಹೇಳಲಾಗದು. ಮತ್ತು ಯಾವುದು ಸತ್ಯವಾಗಿದೆಯೋ ಅದು ಅಕ್ಷಣಿಕವಾಗಿದೆ ಎಂಬ ವ್ಯಾಪ್ತಿಗೆ ವನಕೆಯಿಂದ ಹೊಡೆದು ನಾಶ ಮಾಡಲ್ಪಟ್ಟ ಘಟದಲ್ಲಿ ವ್ಯಭಿಚಾರ ಬರುತ್ತದಲ್ಲವೆ? ಎನ್ನ ಬಾರದು. ಏಕೆಂದರೆ ಅಲ್ಲೂ ಕೂಡ ಅಕ್ಷಣಿಕತ್ವವನ್ನು ಒಪ್ಪುತ್ತೇವೆ. ಪೂರ್ವ, ಮಧ್ಯ, ಅಪರ, ಎಂಬ ಮೂರು ಕಲೆಗಳಿಂದ ರಹಿತವಾದ ಕಾಲದಲ್ಲಿ ಇದು ಇರಲು ಸಾಧ್ಯವಿಲ್ಲ. ಹೀಗೆ ಅನೇಕ ಕ್ಷಣದಲ್ಲಿರುವುದರಿಂದ ವನಕೆಯಿಂದ ಹೊಡೆಯಲ್ಪಟ್ಟ ಘಟವೂ ಕೂಡ ಅಕ್ಷಣಿಕವೇ ಆಗಿದೆ.

ವಿವರಣೆ - ಘಟವು ಉತ್ಪತ್ತಿಯಾದ ಕೂಡಲೆ ವನಕೆಯಿಂದ ನಷ್ಟವಾಗಿದೆ. ಆ ಘಟದಲ್ಲಿ ಕ್ಷಣಿಕತ್ವ ಇರುತ್ತದೆಂದು ಸಿದ್ಧಾಂತಿಗಳೂ ಕೂಡ ಒಪ್ಪಬೇಕು. ಆಗ 'ಜಗತ್ ಅಕ್ಷಣಿಕಂ ಸತ್ವಾತ್' ಎಂಬ ಪ್ರಮಾಣಕ್ಕೆ ಇಲ್ಲಿ ವ್ಯಭಿಚಾರ ಬರುತ್ತದಲ್ಲವೆ ? ಎಂಬುದು ಪೂರ್ವಪಕ್ಷಿಗಳ ಆಕ್ಷೇಪ ಆದರೆ ಘಟದಲ್ಲೂ ಕೂಡ ಕ್ಷಣಿಕತ್ವ ಇಲ್ಲವೆಂಬುದೇ ನಮ್ಮ ಅಭಿಪ್ರಾಯ. ಏಕೆಂದರೆ ಮೂವತ್ತು ಫಳಗಳು ಸೇರಿದರೆ ಒಂದು ಕ್ಷಣ. ಇದಕ್ಕೆ ಪೂರ್ವ ಮಧ್ಯ ಅಪರ ಎಂಬ ಮೂರು ಭಾಗಗಳಿವೆ.

**तत्वप्रकाशिका – आकाशे न सत्त्वमिति चेत् । किमिदं सत्त्वं यदाकाशे न सम्प्रतिपन्नम् । अर्थक्रियाकारित्वं चेत्तर्हि त्वदनुमानेऽसिद्धिः साधनविकलता च निदर्शनस्य । अथ स्वरूपेण विद्यमानता भावरूपता वा साऽऽकाशे न नास्ति ।।२४।।**

ಆಕಾಶದಲ್ಲಿ ಸತ್ವವೆಂಬ ಹೇತುವಿಲ್ಲ ಎಂದು ಹೇಳಲಾಗದು. ಏಕೆಂದರೆ ಆಕಾಶದಲ್ಲಿ ಸಂಪ್ರತಿಪನ್ನವಾಗದ ಸತ್ವ ಎಂದರೆ ಏನು ? ಎಂಬ ಪ್ರಶ್ನೆಗೆ ಉತ್ತರಿಸಬೇಕು.

ಅರ್ಥಕ್ರಿಯಾಕಾರಿತ್ವವನ್ನೇ ಸತ್ವ ಎಂದು ಹೇಳಿದರೆ ನಿಮ್ಮ ಅನುಮಾನದಲ್ಲಿ ಅಸಿದ್ಧಿದೋಷ ಬರುತ್ತದೆ. ದೃಷ್ಟಾಂತದಲ್ಲಿ ಸಾಧನವೈಕಲ್ಯದೋಷವೂ ಕೂಡ ಬರುತ್ತದೆ. ಸ್ವರೂಪದಿಂದ ಇರುವಿಕೆಯನ್ನು ಅಥವಾ ಭಾವರೂಪದಿಂದ ಇರುವಿಕೆಯನ್ನು ಸತ್ವ ಎಂದು ಹೇಳಿದರೆ ಇದು ಆಕಾಶದಲ್ಲಿ ಇಲ್ಲವೆಂದು ಹೇಳಲಾಗದು.

ವಿವರಣೆ - 'ಜಗತ್ ಅಕ್ಷಣಿಕಂ ಸತ್ವಾತ್ ಆಕಾಶವತ್' ಎಂಬುದಾಗಿ ಸಿದ್ಧಾಂತಿಗಳು ಮಾಡಿದ ಅನುಮಾನಪ್ರಯೋಗದಲ್ಲಿ ಸಾಧನವೈಕಲ್ಯವನ್ನು ಪೂರ್ವಪಕ್ಷಕಾರನು ಆಕ್ಷೇಪಿಸುತ್ತಿದ್ದಾನೆ. ಆದರೆ ಸತ್ವಶಬ್ದಕ್ಕೆ ಅರ್ಥಕ್ರಿಯಾಕಾರಿತ್ವ ಎಂಬ ಅರ್ಥವನ್ನು ಪೂರ್ವಪಕ್ಷಕಾರನು ವಿವಕ್ಷಿಸಿದರೆ ಅವನು ಪ್ರಯೋಗಿಸಿದ 'ಜಗತ್ ಕ್ಷಣಿಕಂ ಸತ್ವಾತ್' ಎಂಬ ಅನುಮಾನದಲ್ಲೂ ಅರ್ಥಕ್ರಿಯಾಕಾರಿತ್ವವನ್ನು ಸತ್ವ ಎಂದು ಹೇಳಿದಂತಾಯಿತು. ಇದನ್ನು ಅವನು ಪಕ್ಷದಲ್ಲಿ ಒಪ್ಪದ ಕಾರಣ ಅಸಿದ್ಧಿದೋಷ ಬರುತ್ತದೆ. ಅಷ್ಟೇ ಅಲ್ಲದೆ ದೃಷ್ಟಾಂತವಾದ ದೀಪದಲ್ಲೂ ಸಹ ಇದು ಇಲ್ಲದ ಕಾರಣ ಸಾಧನವೈಕಲ್ಯವು ಬರುತ್ತದೆ. ಆದ್ದರಿಂದ ಸ್ವರೂಪೇಣ ವಿದ್ಯಮಾನತ್ವವನ್ನೇ ಸತ್ವವೆನ್ನಬೇಕು. ಅಥವಾ ಭಾವರೂಪತ್ವವನ್ನು ಸತ್ವವೆನ್ನಬೇಕು. ಇಂಥ ಹೇತು ದೃಷ್ಟಾಂತವಾದ ಆಕಾಶದಲ್ಲಿ ಇದ್ದೇ ಇರುತ್ತದೆ. ಆದ್ದರಿಂದ ನಮ್ಮ ಅನುಮಾನದಲ್ಲಿ ಸಾಧನವೈಕಲ್ಯವನ್ನು ಪೂರ್ವಪಕ್ಷಕಾರನು ಹೇಳಲು ಸಮರ್ಥನಾಗುವುದಿಲ್ಲ.

## ಬ್ರಹ್ಮಸೂತ್ರ

**सूत्रम् – अनुस्मृतेश्च ॥**

'ತದೇವೇದಂ' ಎಂಬುದಾಗಿ ಪ್ರತ್ಯಭಿಜ್ಞಾವಿರುವುದರಿಂದ ಬೌದ್ಧರ ಅನುಮಾನ ಪ್ರಮಾಣದಿಂದ ಎಲ್ಲವೂ ಕ್ಷಣಿಕವಾಗಿದೆ ಎಂದು ಸಾಧಿಸಲಾಗದು.

## ಸೂತ್ರದೀಪಿಕಾ

**सूत्रदीपिका –** तदेवेदमिति प्रत्यभिज्ञानाच्च तद्विरोधात् न सत्त्वहेतुना क्षणिकत्वसाधनं युक्तमित्यर्थः ॥८॥

'ತದೇವೇದಂ' ಎಂಬ ಪ್ರತ್ಯಭಿಜ್ಞಾವಿರೋಧ ಬರುವುದರಿಂದ ಸತ್ವವೆಂಬ ಹೇತುವು ಕ್ಷಣಿಕತ್ವಕ್ಕೆ ಸಾಧಕ ಎಂದು ಹೇಳುವುದು ಅತ್ಯಂತ ಅಸಮಂಜಸವಾಗಿದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಸಮುದಾಯಾಧಿಕರಣವು ಮುಗಿಯಿತು.

ಸಮುದಾಯಾಧಿಕರಣ (೨-೨-೭)

## ಬ್ರಹ್ಮಸೂತ್ರಭಾಷ್ಯ

**भाष्यम् – ।। अनुस्मृतेश्च ।।८।।**

**तदेवेदमिति प्रत्यभिज्ञानाच्च । प्रत्यभिज्ञाया भ्रान्तित्वे विशेषदर्शनस्यापि भ्रान्तित्वम् ।।८।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये समुदायाधिकरणम् ।। ७ ।।**

ಅನುವಾದ - 'ತದೇವ ಇದಂ' ಅದೇ ಇದು ಎಂಬ ಪ್ರತ್ಯಭಿಜ್ಞಾನ ಬರುತ್ತಿರುವುದರಿಂದ ಸಕಲವಸ್ತುಗಳು ಸ್ಥಾಯಿಯಾಗಿವೆ. ಈ ಪ್ರತ್ಯಭಿಜ್ಞೆಯನ್ನು ಭ್ರಾಂತಿಯೆಂದು ಒಪ್ಪಿದರೆ ದೀಪಾದಿಗಳಲ್ಲಿರುವ ಪರಿಮಾಣದ ತಾರತಮ್ಯವೂ ಕೂಡ ಭ್ರಾಂತಿಯೆಂದು ಒಪ್ಪಬೇಕಾದೀತು.

ಪ್ರತಿಪದಾರ್ಥ -- ತದೇವೇದಮಿತಿ = ಅದೇ ಇದು ಎಂಬ, ಪ್ರತ್ಯಭಿಜ್ಞಾನಾಚ್ಚ = ಪ್ರತ್ಯಭಿಜ್ಞಾನ ಇರುವುದರಿಂದ ಘಟಪಟಾದಿಗಳು ಕ್ಷಣಿಕವಾಗುವುದಿಲ್ಲ. ಪ್ರತ್ಯಭಿಜ್ಞಾಯಾಃ = ಈ ಪ್ರತ್ಯಭಿಜ್ಞೆಯನ್ನು, ಭ್ರಾಂತಿತ್ವೇ = ಭ್ರಾಂತಿಯೆಂದು ಕರೆದರೆ, ವಿಶೇಷದರ್ಶನಸ್ಯಾಪಿ = ದೀಪಾದಿಗಳಲ್ಲಿರುವ ಪರಿಮಾಣದ ತಾರತಮ್ಯವನ್ನು ಕೂಡ, ಭ್ರಾಂತಿತ್ವಮ್ = ಭ್ರಾಂತಿ ಎಂದು ಒಪ್ಪಬೇಕಾದೀತು.

ಇಲ್ಲಿಗೆ ಸಮುದಾಯಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

* * * *

## ತತ್ವಪ್ರಕಾಶಿಕಾ

**तत्वप्रकाशिका – एवं प्रतिपक्षेणानुमानं निरस्य बाधेनापि पराकुर्वत्सूत्रं पठित्वा व्याचष्टे – अनुस्मृतेश्चेति ।।**

ಹೀಗೆ ಪ್ರತಿಪಕ್ಷಾನುಮಾನದಿಂದ ಕ್ಷಣಿಕತ್ವ ಅನುಮಾನವನ್ನು ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಬಾಧ ಎಂಬ ದೋಷವನ್ನು ಹೇಳುವ ಮೂಲಕವೂ ಪೂರ್ವಪಕ್ಷಕಾರನ ಅನುಮಾನವನ್ನು ದೂಷಣೆ ಮಾಡುವ ಸೂತ್ರವನ್ನು 'ಅನುಸ್ಮೃತೇಶ್ಚ' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – परिलूनपुनर्जातकुन्तलकलापप्रत्यभिज्ञावद्भ्रमोऽयमित्यत आह – प्रत्यभिज्ञाया इति ।। किं प्रत्यभिज्ञाया बाधितत्वेन भ्रान्तित्वं कल्प्यते**

**बाधकमन्तरेण वा । नाद्यः । तदभावात् । द्वितीये दीपादिविशेषदर्शनस्य भ्रमत्वप्रसङ्ग इति भावः ।**

ಘಟಾದಿಗಳ ವಿಷಯದಲ್ಲಿ ಬರುವ ಪ್ರತ್ಯಭಿಜ್ಞೆಯು ಭ್ರಮವಾಗಿದೆ. ಕತ್ತರಿಸಿದ ಬಳಿಕ ಬೇರೆ ಕೂದಲು ಹುಟ್ಟುತ್ತದೆ. ಆದರೆ 'ಅದೇ ಕೂದಲು' ಎಂಬ ಪ್ರತ್ಯಭಿಜ್ಞೆ ಬಂದರೆ ಇದು ಹೇಗೆ ಭ್ರಾಂತಿಯೋ, ಅದರಂತೆ ಘಟಪ್ರತ್ಯಭಿಜ್ಞೆಯೂ ಕೂಡ ಭ್ರಾಂತಿಯಾಗಿದೆ. ಈ ಆಕ್ಷೇಪಕ್ಕೆ 'ಪ್ರತ್ಯಭಿಜ್ಞಾಯಾಃ' ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಬಾಧಕವಿರುವುದರಿಂದ ಪ್ರತ್ಯಭಿಜ್ಞೆಯನ್ನು ಭ್ರಾಂತಿ ಎನ್ನುತ್ತೀರೋ? ಬಾಧಕವಿಲ್ಲದೆ ಭ್ರಾಂತಿ ಎನ್ನುತ್ತೀರೋ? ಮೊದಲನೆಯ ಪಕ್ಷ ತಪ್ಪು. ಅಂಥ ಬಾಧಕಗಳು ಯಾವುದೂ ಇಲ್ಲ. ಎರಡನೆಯ ಪಕ್ಷದಲ್ಲಿ ದೀಪದಲ್ಲಿ ಕಾಣಸುವ ವಿಶೇಷದರ್ಶನವೂ ಕೂಡ ಭ್ರಾಂತಿಯಾಗಬೇಕಾಗುತ್ತದೆ.

ವಿವರಣೆ - 'ಅದೇ ಘಟ ಇದು' ಎಂಬುದಾಗಿ ಪ್ರತ್ಯಭಿಜ್ಞೆಯು ಬರುವುದರಿಂದ ಘಟಾದಿ ಪದಾರ್ಥಗಳು ಕ್ಷಣಿಕವಲ್ಲವೆಂದು ಹೇಳಬೇಕು. ಒಂದುವೇಳೆ ಕ್ಷಣಿಕವೆಂದು ಹೇಳಿದರೆ ಈ ಪ್ರತ್ಯಭಿಜ್ಞೆಯಿಂದ ಬಾಧದೋಷವು ಬರುತ್ತದೆ ಎಂದು ಸಿದ್ಧಾಂತಿಗಳಾದ ನಾವು ಹೇಳಿದರೆ ಪೂರ್ವಪಕ್ಷಕಾರರು ಪ್ರತ್ಯಭಿಜ್ಞೆಯನ್ನೇ ಭ್ರಾಂತಿ ಎನ್ನುತ್ತಾರೆ. ಇಂಥವರನ್ನು ಕುರಿತು ಪ್ರಕೃತ ಪ್ರಶ್ನಿಸುತ್ತಿದ್ದಾರೆ.

ಬಾಧಕವಿಲ್ಲದಿದ್ದರೂ ಪ್ರತ್ಯಭಿಜ್ಞೆಯನ್ನು ಭ್ರಾಂತಿ ಎನ್ನುವುದಾದರೆ ದೀಪಾದಿ ವಿಶೇಷದರ್ಶನವೂ ಕೂಡ ಭ್ರಾಂತಿ ಎನ್ನಬೇಕಾದೀತು.

**तत्वप्रकाशिका – विरुद्धधर्माध्यासो बाधकमिति चेन्न । तस्य कालादिभेदेनोपपत्तेः । न हि तादृशोऽन्यत्वमस्मत्सम्मतम् । अन्यथैकक्षणेऽपि भावभेदप्रसङ्गात् । एतेन प्रदीपोऽपि व्याख्यातः । घटोऽयं निरन्तरोत्तरक्षणवृत्तिध्वंसप्रतियोगी घटत्वान्मूसलाहतैकक्षणवृत्तिघटवदिति चोक्तरीत्या परास्तम् ।**

ವಿರುದ್ಧಧರ್ಮದ ಅಧ್ಯಾಸವೇ ಬಾಧಕವೆಂದು ಹೇಳಬಾರದು. ಆ ವಿರುದ್ಧಧರ್ಮವನ್ನು ಕಾಲಾದಿಭೇದದಿಂದಲೇ ಕೂಡಿಸಲು ಬರುತ್ತದೆ. ಕಾಲಭೇದದಿಂದ ವಿರುದ್ಧಧರ್ಮ ತೋರುವಲ್ಲಿ ಭೇದವನ್ನು ನಾವು ಒಪ್ಪಿರುವುದಿಲ್ಲ. ಇಲ್ಲದಿದ್ದರೆ ಒಂದೇ ಕ್ಷಣದಲ್ಲೂ ಕೂಡ ಪದಾರ್ಥದಲ್ಲಿ ಭೇದವನ್ನು ಒಪ್ಪಬೇಕಾಗುತ್ತದೆ. ಹೀಗೆ ಹೇಳಿದ್ದರಿಂದ ಪ್ರದೀಪದ ಬಗ್ಗೆ ವ್ಯಾಖ್ಯಾನ ಮಾಡಿದಂತಾಯಿತು.

'ಅಯಂ ಘಟಃ ನಿರಂತರೋತ್ತರಕ್ಷಣಧ್ವಂಸಪ್ರತಿಯೋಗೀ ಘಟತ್ವಾತ್ ಮುಸಲಾಹತೈಕ ಕ್ಷಣವೃತ್ತಿಘಟವತ್' 'ಒನಕೆಯಿಂದ ನಾಶ ಮಾಡಲ್ಪಟ್ಟ ಘಟದಲ್ಲಿ ಘಟತ್ವವಿದೆ. ಇದು ಉತ್ತರಕ್ಷಣವೃತ್ತಿಯಾದ ಧ್ವಂಸಕ್ಕೆ ಪ್ರತಿಯೋಗಿಯಾಗಿದೆ. ಅದರಂತೆ ಈ ಘಟವೂ ಕೂಡ ಘಟವಾಗಿರುವುದರಿಂದ ಮುಂದಿನ ಕ್ಷಣದಲ್ಲಿ ಹುಟ್ಟಿದ ಧ್ವಂಸಕ್ಕೆ ಪ್ರತಿಯೋಗಿ ಆಗಿರಲೇಬೇಕು' ಎಂಬ ಪೂರ್ವಪಕ್ಷಕಾರರ ಅನುಮಾನವನ್ನೂ ಕೂಡ ಈಗ ನಿರಾಕರಣೆ ಮಾಡಿದಂತಾಯಿತು.

ವಿವರಣೆ - ದೃಷ್ಟಾಂತವಾದ ದೀಪದಲ್ಲಿ ವಿರುದ್ಧಧರ್ಮವಿದೆ. ದೀಪವು ಮೊದಲು ಸಣ್ಣದಾಗಿರುತ್ತದೆ ಅನಂತರ ದೊಡ್ಡದಾಗುತ್ತದೆ. ಹೀಗೆ ಉಚ್ಚತ್ವ, ನೀಚತ್ವವೆಂಬ ವಿರುದ್ಧಧರ್ಮಗಳು ತೋರುತ್ತಿರುವುದು ಸ್ಥಾಯಿತ್ವಕ್ಕೆ ಬಾಧಕವಾಗುತ್ತದೆ.

ಬೌದ್ಧರ ಈ ಅಭಿಪ್ರಾಯ ತಪ್ಪು. ಏಕೆಂದರೆ ದೀಪವು ಪ್ರತಿಕ್ಷಣದಲ್ಲಿ ಪರಿಣಾಮವನ್ನು ಹೊಂದುತ್ತದೆ. ಹೊರತು ನಾಶವನ್ನು ಹೊಂದುವುದಿಲ್ಲ. ಆದ್ದರಿಂದ ಒಂದೇ ದೀಪದಲ್ಲಿ ಕಾಲಭೇದದಿಂದ ವಿರುದ್ಧ ಧರ್ಮವನ್ನು ಒಪ್ಪಿದರೆ ಸಾಕು, ಪ್ರತಿಕ್ಷಣದಲ್ಲಿಯೂ ಧ್ವಂಸ ಮತ್ತು ಉತ್ಪತ್ತಿಗಳನ್ನು ಒಪ್ಪಿದರೆ ಕಲ್ಪನಾಗೌರವ ಬರುತ್ತದೆ. ಹೀಗೆ ಒಪ್ಪದಿದ್ದರೆ ಒಂದೇ ಘಟವು ಒಬ್ಬನಿಂದ ಜ್ಞಾತವಾಗುತ್ತದೆ. ಮತ್ತೊಬ್ಬನಿಂದ ಅಜ್ಞಾತವಾಗುತ್ತದೆ. ಆಗ ಜ್ಞಾತತ್ವ, ಅಜ್ಞಾತತ್ವ ಎಂಬ ವಿರುದ್ಧ ಧರ್ಮಕ್ಕೆ ಅಧಿಕರಣವಾದ್ದರಿಂದ ಒಂದೇ ಕ್ಷಣದಲ್ಲಿರುವ ಘಟವೂ ಕೂಡ ಭಿನ್ನ ಭಿನ್ನ ಎಂದು ಒಪ್ಪಬೇಕಾದ ಪರಿಸ್ಥಿತಿ ಬರುತ್ತದೆ. ವಿರುದ್ಧಧರ್ಮಾಧಿಕರಣತ್ವವನ್ನು ಕಾಲಭೇದದಿಂದಲೇ ಉಪಪಾದನೆ ಮಾಡಬಹುದಾದ್ದರಿಂದ ವಸ್ತುವಿನಲ್ಲಿ ಭೇದವನ್ನು ಒಪ್ಪಬೇಕಾಗಿಲ್ಲ. ಹಾಗಾಗಿ 'ಸೋಽಯಂ' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿ ಎಂದು ಒಪ್ಪಬೇಕಾಗಿಲ್ಲ ಎಂಬುದು ಸಿದ್ಧವಾಯಿತು.

**तत्वप्रकाशिका – घट इति च किं परमाणवः पक्षीक्रियन्ते समुदायो वा । नाद्यः। दृष्टान्ताभावात्। न द्वितीयः । तस्यावस्तुत्वात् । अतो वैभाषिकादिमतस्य अनुपपन्नत्वेनाविरोधकत्वाद्युक्तम् ईश्वरस्याशेषजगत्कारणत्वलक्षणमिति सिद्धम्।।२५।।**

'ಅಯಂ ಘಟಃ' ಇತ್ಯಾದಿ ಅನುಮಾನದಲ್ಲಿ ಪಕ್ಷೀಭೂತವಾದ ಘಟವು ಅನೇಕ ಪರಮಾಣುಗಳ ಸ್ವರೂಪವೋ, ಅಥವಾ ಸಮುದಾಯರೂಪವೋ, ಪರಮಾಣುಗಳೇ ಪಕ್ಷವೆಂದರೆ ದೃಷ್ಟಾಂತವೇ ಸಿಗುವುದಿಲ್ಲ. ಸಮುದಾಯವನ್ನು ಪಕ್ಷವೆಂದರೆ ಅದು ಒಂದು ವಸ್ತುವೇ ಅಲ್ಲ. ಹೀಗೆ ವೈಭಾಷಿಕ ಮೊದಲಾದವರ ಮತವು ಅತ್ಯಂತ ಅನುಪಪನ್ನವೇ ಆಗಿದೆ. ಇಂಥ ಮತದ ವಿರೋಧವು ನಮಗೆ ಬರುವುದಿಲ್ಲ. ಆದ್ದರಿಂದ ಈಶ್ವರನಿಗೆ ಹೇಳಲ್ಪಟ್ಟ ಅಶೇಷ ಜಗಜ್ಜನ್ಮಾದಿಕಾರಣತ್ವಲಕ್ಷಣವು ನಿರ್ದುಷ್ಟವೆಂದು ಸಿದ್ಧವಾಯಿತು.

ವಿವರಣೆ - ಪರಮಾಣುಗಳನ್ನು ಪಕ್ಷವೆಂದು ಹೇಳಿದರೆ ವನಕೆಯಿಂದ ಹೊಡೆಯಲ್ಪಟ್ಟ ವಸ್ತುವು ಘಟವೇ ಅಲ್ಲ. ಏಕೆಂದರೆ ಪರಮಾಣುಗಳಲ್ಲಿ ಘಟತ್ವವೆಂಬ ಹೇತುವಿಲ್ಲ. ಮತ್ತು ಪೂರ್ವಾಪರಕಲಾರಹಿತವಾದ ಕಾಲದಲ್ಲಿರುವಿಕೆ ಎಂಬ ಕ್ಷಣಿಕಸ್ವರೂಪವಾದ ಸಾಧ್ಯವೂ ಕೂಡ ಇರುವುದಿಲ್ಲ. ಆದ್ದರಿಂದ ಸಾಧ್ಯಾಸಿದ್ಧಿದೋಷವು ಬರುತ್ತದೆ. ಹೀಗೆ ವೈಭಾಷಿಕರು ಹೇಳುವುದೆಲ್ಲವೂ ಅನುಪಪನ್ನವೇ ಆಗಿದೆ.

ಇಲ್ಲಿಗೆ ತತ್ತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಸಮುದಾಯಾಧಿಕರಣ ಮುಗಿಯಿತು.

ಸಮುದಾಯಾಧಿಕರಣ

(೨-೨-೭)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## समुदायाधिकरणम्

**समुदाय उभयहेतुकेऽपि तदप्राप्तिः ।। रूपविज्ञानवेदनासंज्ञासंस्काररूपेणेति ।। विषयेन्द्रियाद्यात्मना स्थिता रूपरसगन्धस्पर्शशब्दात्मकाः परमाणवो रूपस्कन्धः । निर्विकल्पकं ज्ञानं विज्ञानस्कन्धः । दुःखं वेदनास्कन्धः । सुखं तु दुःखाभाव एव । सुखमपि वेदनास्कन्ध इति केचित् । कुण्डली गौर्गच्छतीत्यादि-सविकल्पकज्ञानं संज्ञास्कन्धः । तेषां वासना संस्कारस्कन्धः इति द्रष्टव्यम् ।।**

'' ಸಮುದಾಯ ಉಭಯಹೇತುಕೇऽಪಿ ತದಪ್ರಾಪ್ತಿಃ''

(ಟೀಕಾದಲ್ಲಿರುವ 'ರೂಪವಿಜ್ಞಾನ..ಎಂಬ ವಾಕ್ಯವನ್ನು ವಿವರಿಸುತ್ತಿದ್ದಾರೆ.)

ವಿಷಯ ಇಂದ್ರಿಯವೇ ಮೊದಲಾದ ರೂಪದಿಂದ ಇರುವ ರೂಪರಸಗಂಧಸ್ಪರ್ಶಶಬ್ದಾತ್ಮಕವಾದ ಪರಮಾಣುಗಳೇ ರೂಪಸ್ಕಂಧ ಎಂದು ಕರೆಸಿಕೊಳ್ಳುತ್ತದೆ. ನಿರ್ವಿಕಲ್ಪಕ (ನಿಷ್ಪ್ರಕಾರಕ) ಜ್ಞಾನ ವಿಜ್ಞಾನಸ್ಕಂಧ, ದುಃಖ ವೇದನಾಸ್ಕಂಧ, ಸುಖ ಎಂಬುದು ಪ್ರತ್ಯೇಕ ವಸ್ತುವಲ್ಲ ದುಃಖಾಭಾವವೇ ಸುಖ. ಕೆಲವರು ಸುಖವನ್ನೂ ವೇದನಾಸ್ಕಂಧ ಎಂದು ಕರೆಯುತ್ತಾರೆ. ಕುಂಡಲೀ, ಗೌಃ, ಗಚ್ಛತಿ ಇದೇ ಮೊದಲಾದ ಸವಿಕಲ್ಪಕ (ಸಪ್ರಕಾರಕ) ಜ್ಞಾನವು ಸಂಜ್ಞಾಸ್ಕಂಧ, ಈ ವಿಜ್ಞಾನಾದಿ ಸ್ಕಂಧಗಳು ವಾಸನಾ ಅದೇ ಸಂಸ್ಕಾರಸ್ಕಂಧ. ಹೀಗೆ ಬೌದ್ಧರ ಪ್ರಕ್ರಿಯೆಯನ್ನು ತಿಳಿಯಬೇಕು.

**अतिपीडायामनवस्थेति ।। अन्योन्याश्रयपरिहाराय मेलनस्य मेलनान्तरेण वा सामीप्येन वा विशिष्टानेकहेतुकत्वेऽनवस्थेत्यर्थः ।।**

ಟೀಕಾದಲ್ಲಿರುವ 'ಅತಿಪೀಡಾಯಾಂ' ಎಂಬ ಪದಕ್ಕೆ ಹೀಗೆ ಅರ್ಥ. ನಾವು ಹೇಳುವ ಅನ್ಯೋನ್ಯಾಶ್ರಯವನ್ನು ಪರಿಹಾರ ಮಾಡಿಕೊಳ್ಳಲು ಪರಮಾಣುಗಳ ಮೇಲನವು ಸಮುದಾಯಾಶ್ರಿತವಲ್ಲ ಕಿಂತು ಇನ್ನೊಂದು ಮೇಲಾನಾಶ್ರಿತ ಎಂದಾಗಲೀ ಅಥವಾ ಪರಮಾಣುಗಳ

ಸಾಮೀಪ್ಯದಿಂದ ಎಂದಾಗಲೀ ವಿಶಿಷ್ಟಾನೇಕ ಹೇತುಕತ್ವವನ್ನು ಹೇಳಿದರ ಆಗ ಅನವಸ್ಥಾ. (ಪರಮಾಣು ಸಮುದಾಯವು ಮೇಲನಾಶ್ರಿತ. ಆ ಮೇಲನವು ಇನ್ನೊಂದು ಮೇಲನಾಶ್ರಿತ. ಅದು ಇನ್ನೊಂದು ಹೀಗೆ ಅನವಸ್ಥಾ)

**तदङ्गीक्रियत एवेति ।। अनेकत्वसंख्यारूपस्य समुदायस्य विरलेष्वपि परमाणुषु सत्त्वेन तस्य सदातनत्वादिति भावः ।।**

''ಇತರೇತರಪ್ರತ್ಯಯತ್ವಾತ್'' ಎಂಬ ಮುಂದಿನ ಸೂತ್ರಭಾಷ್ಯಟೀಕಾದಲ್ಲಿರುವ 'ತದಂಗೀಕ್ರಿಯತೇ ಏವ' ಎಂಬ ಪದಕ್ಕೆ ಹೀಗೆ ಅರ್ಥ - ಪರಮಾಣು ಸಮುದಾಯವು ವಿರಳವಾದ ಅನೇಕ ಪರಮಾಣುಕಾರಣಕ ಎಂದರೆ ಆಗ ಅಂತಹ ಸಮುದಾಯ (ಅನೇಕತ್ವ ಸಂಖ್ಯಾರೂಪದ) ವಿರಳವಾದ ಪರಮಾಣುಗಳಲ್ಲಿ ಯಾವಾಗಲೂ ಇರುವುದರಿಂದ ಆ ಸಮುದಾಯವು ಹೋಗಬೇಕಾಗುತ್ತದೆ.

**व्यवहारादेरिदं चेदं चेतीति ।। अनेकत्वसंख्याया अपेक्षाबुद्धिव्यंग्यत्वेन तत्प्रतीतिव्यवहारयोरिदं चेदं चेत्यपेक्षाबुद्ध्यधीनत्वादित्यर्थः ।।**

ಅನೇಕತ್ವಸಂಖ್ಯಾ ಎಂಬುದು ಅಪೇಕ್ಷಾಬುದ್ಧಿಯಿಂದ ವ್ಯಂಗ್ಯವಾಗಿದೆ (ತಿಳಿಯಲ್ಪಡುತ್ತದೆ). ಹಾಗಾಗಿ ಈ ಅನೇಕತ್ವಸಂಖ್ಯೆಯ ಪ್ರತೀತಿ (ಜ್ಞಾನ) ಹಾಗೂ ವ್ಯವಹಾರ ಇದು ಅಪೇಕ್ಷಾಬುದ್ಧಿಯ ಅಧೀನ ಎಂದಾಯಿತು. ಅಪೇಕ್ಷಾ ಬುದ್ಧಿ ಎಂದರೆ 'ಇದು', 'ಇದು' ಎಂಬ ಬುದ್ಧಿ.

(ಸಂಖ್ಯೆಯು ಅಪೇಕ್ಷಾಬುದ್ಧಿಯ ಅಧೀನ ಎಂದರೆ ಸಂಖ್ಯೆಯ ಜ್ಞಾನ ಹಾಗೂ ವ್ಯವಹಾರ ಅಪೇಕ್ಷಾಬುದ್ಧಿಯಿಂದ ಉಂಟಾಗುತ್ತದೆ ಎಂದರ್ಥ. ಕೈಯಲ್ಲಿರುವ ಬೆರಳುಗಳೆಷ್ಟು ಎಂದು ಮಗುವಿಗೆ ಹೇಳಿಕೊಡುವಾಗ ಇದು ಒಂದು, ಇದು ಒಂದು ಎಂಬುದಾಗಿ ಪ್ರತ್ಯೇಕ ಬೆರಳುಗಳನ್ನು ಎಣಿಸಿ ಕೊನೆಗೆ ಐದು ಎಂದು ಹೇಳಿಕೊಡುತ್ತೇವೆ. ಐದು ಎಂಬ ಸಂಖ್ಯೆಯ ಜ್ಞಾನ 'ಇದು', 'ಇದು' ಎಂಬುದರಿಂದ ಹುಟ್ಟಿದೆ. ಅದೇ ಅಪೇಕ್ಷಾಬುದ್ಧಿ. ಎಲ್ಲ ಕಡೆಯಲ್ಲೂ ಸಂಖ್ಯಾಜ್ಞಾನವು ಅಪೇಕ್ಷಾಬುದ್ಧಿಯಿಂದಲೇ ಹುಟ್ಟುತ್ತದೆ ಎಂದು ಮತ.)

**सामीप्यापेक्षेति ।। विप्रकृष्ट इदं चेदं चेत्यपेक्षाबुद्धेरदर्शनादिति भावः ।**

ದೂರ ದೂರ ಇರುವ ವಸ್ತುಗಳಲ್ಲಿ 'ಇದು', 'ಇದು' ಎಂಬ ಅಪೇಕ್ಷಾಬುದ್ಧಿ ಬರಲು ಸಾಧ್ಯವಿಲ್ಲ ಹಾಗೆ ಎಲ್ಲೂ ಕಂಡಿಲ್ಲ.

**पुरुषस्यापि तथात्वमिति ।। विषयवदात्मनोऽपि क्षणिकत्वेन परमाणुदर्शनमपेक्षाबुद्धिः समुदायव्यवहार इत्येतेषामेकविषयकत्वमिवैकाधिकरणत्वमपि न युक्तमित्यर्थः ।।**

ಬೌದ್ಧರ ಪ್ರಕಾರ ವಿಷಯಗಳು ಹೇಗೆ ಕ್ಷಣಿಕವೋ ಹಾಗೇ ಆತ್ಮನೂ ಕ್ಷಣಿಕ. ಆದ್ದರಿಂದ ಪರಮಾಣುಗಳನ್ನು ನೋಡುವ ಆತ್ಮ (ವ್ಯಕ್ತಿ) ಬೇರೆ, ಅಪೇಕ್ಷಾಬುದ್ಧಿ ಬರುವ ವ್ಯಕ್ತಿ ಬೇರೆ.

ಸಮುದಾಯ ಎಂಬ ವ್ಯವಹಾರ ಮಾಡುವ ವ್ಯಕ್ತಿಯೇ ಬೇರೆ. ಹಾಗಾಗಿ ಏಕಾಧಿಕರಣತ್ವ ಒಬ್ಬನೇ ವ್ಯಕ್ತಿಯಿಂದ ಎಲ್ಲವೂ ವಿಷಯೀಕರಿಸುವಿಕೆ ಎಂಬುದು ಇಲ್ಲ.

**विशेषकार्योत्पत्तिमपि निराकुर्वत्सूत्रमिति ।। यद्यपि ''इति चेत्कार्यसम्भूतिमात्रव्यापृतिकारणम् । नतु कार्यविशेषेषु व्यापृतं कारणं भवेतथ'' इत्यनुव्याख्याने ''कारणानि खलु स्वसदृशकार्यजननव्यापाराणि नतु विसदृशकार्यजनने व्यापृतानि'' इति सुधायां च विसदृशकार्यरूपविशेष-कार्योत्पत्तिरपि द्वितीयसूत्र एव निरस्ता ।**

'ಉತ್ತರೋತ್ಪಾದೇ ಚ ಪೂರ್ವನಿರೋಧಾತ್' ಎಂಬುದಕ್ಕೆ ಅವತಾರಿಕೆ ಕೊಡುವಾಗ ಟೀಕಾದಲ್ಲಿ ವಿಶೇಷಕಾರ್ಯದ ಉತ್ಪತ್ತಿಯನ್ನು ನಿರಾಕರಣೆ ಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಿದ್ದಾರೆ ಎಂದು ಹೇಳಲಾಗಿದೆ.

ಪ್ರಶ್ನೆ - ತೃತೀಯಸೂತ್ರವನ್ನು ಟೀಕಾಕಾರರು ವಿಶೇಷಕಾರ್ಯೋತ್ಪತ್ತಿ ನಿರಾಕರಣಪರವಾಗಿ ಅರ್ಥ ಹೇಳಿರುವುದು ಅನುವ್ಯಾಖ್ಯಾನ ಸುಧಾಗಳಿಗೆ ವಿರುದ್ಧವಾಗಿದೆ.

ಏಕೆಂದರೆ ''ಇತಿ ಚೇತ್ಕಾರ್ಯಸಂಭೂತಿಮಾತ್ರವ್ಯಾಪೃತಿಕಾರಣಮ್ ನ ತು ಕಾರ್ಯವಿಶೇಷೇಷು ವ್ಯಾಪೃತಂ ಕಾರಣಂ ಭವೇತ್'' ಎಂಬ ಅನುವ್ಯಾಖ್ಯಾನದಲ್ಲಿ ಹಾಗೂ ''ಕಾರಣಾನಿ ಖಲು ಸ್ವಸದೃಶಕಾರ್ಯಜನನವ್ಯಾಪಾರಾಣಿ ನತು ವಿಸದೃಶಕಾರ್ಯಜನನೇ ವ್ಯಾಪೃತಾನಿ'' ಎಂಬ ಸುಧಾದಲ್ಲಿಯೂ ವಿಲಕ್ಷಣಕಾರ್ಯವೆಂಬ ವಿಶೇಷಕಾರ್ಯದ ಉತ್ಪತ್ತಿ ನಿರಾಕರಣೆಯನ್ನು ಎರಡನೇ ಸೂತ್ರದಲ್ಲೇ ಮಾಡಲಾಗಿದೆ.

**सूत्रे मात्रशब्देनापेक्षाबुद्ध्यादेरिव वैसादृश्यस्यापि व्यावर्तितत्वादित्युक्त्वा**

**उत्तरोत्पत्तिमात्रेण विनाशात्पूर्ववस्तुनः ।**
**न संस्कारार्पकत्वं च युज्यते कस्यचित्कचित् ।।**

**इत्यनुव्याख्याने ''अथ मतम् । कारणक्षणाः कार्येषु संस्कारानर्पयन्ति । अतः पूर्वपूर्वात्मसंस्कारयोगिनामुत्तरोत्तरेषामात्मनामनुमानादिव्यवहार इत्येतन्निराकरणाय सूत्रमुत्तरोत्पादे च'' इत्यादि सुधायां च तृतीयसूत्रं बौद्धमते संस्कारनिरासार्थमि-त्युक्तम् । तथापीह ''एकं कार्यमुत्पाद्य तस्य नष्टत्वात्परस्परप्रत्ययस्तदपेक्षया व्यवहार इति न युज्यत'' इति ।**

ಎರಡನೆಯ ಸೂತ್ರದಲ್ಲಿರುವ 'ಮಾತ್ರ' ಶಬ್ದದಿಂದ ಅಪೇಕ್ಷಾಬುದ್ಧಿ ಕೂಡುವುದಿಲ್ಲ ಎಂದು ಹೇಳಿರುವಂತೆ, ವೈಸಾದೃಶ್ಯ (ವಿಲಕ್ಷಣಕಾರ್ಯದ ಉತ್ಪತ್ತಿ) ಎಂಬುದೂ ಕೂಡುವುದಿಲ್ಲ ಎಂದು ಹೇಳಲಾಗಿದೆ.

ಹಾಗಾದರೆ ಮೂರನೆಯ ಸೂತ್ರದ ವಿಷಯ ಏನೆಂದರೆ,

''ಉತ್ತರೋತ್ಪತ್ತಿಮಾತ್ರೇಣ ವಿನಾಶಾತ್ಪೂರ್ವವಸ್ತುನಃ ।
ನ ಸಂಸ್ಕಾರಾರ್ಪಕತ್ವಂ ಚ ಯುಜ್ಯತೇ ಕಸ್ಯಚಿತ್ ಕ್ವಚಿತ್ ॥

ಎಂಬ ಅನುವ್ಯಾಖ್ಯಾನದಲ್ಲಿ ಹಾಗೂ ''ಅಥ ಮತಮ್ । ಕಾರಣಕ್ಷಣಾಃ ಕಾರ್ಯೇಷು ಸಂಸ್ಕಾರಾನಪರ್ಯಂತಿ । ಅತಃ ಪೂರ್ವಪೂರ್ವಾತ್ಮಸಂಸ್ಕಾರಯೋಗಿನಾಮುತ್ತರೋತ್ತರೇಷಾಮಾತ್ಮನಾಮನುಮಾನಾದಿವ್ಯವಹಾರ ಇತ್ಯೇತನ್ನಿರಾಕರಣಾಯ ಸೂತ್ರಮುತ್ತರೋತ್ಪಾದೇ ಚ'' ಎಂಬ ಸುಧಾದಲ್ಲಿಯೂ ಕೂಡ ಬೌದ್ಧಮತ ಪ್ರಕಾರ ಸಂಸ್ಕಾರ ನಿರಾಕರಣೆಗಾಗಿ ಹೊರಟಿದೆ.

('ಇತಿ ಚೇತ್...' ಎಂಬ ಅನುವ್ಯಾಖ್ಯಾನಕ್ಕೆ 'ಕಾರಣವು ಕಾರ್ಯದ ಉತ್ಪತ್ತಿಯಾಗುವವರೆಗೆ ಮಾತ್ರ ವ್ಯಾಪಾರಯುಕ್ತವಾಗಿದ್ದು ಕಾರ್ಯದಲ್ಲಿರುವ ವಿಶೇಷಗಳ ಉತ್ಪತ್ತಿಯಲ್ಲಿ ವ್ಯಾಪಾರವುಳ್ಳದ್ದಾಗುವುದಿಲ್ಲ ಎಂದರ್ಥ)

''ಕರಣಾನಿ..' ಎಂಬ ಸುಧಾವಾಕ್ಯಕ್ಕೆ ಕಾರಣಗಳು ತನಗೆ ಸದೃಶವಾದ (ಹೋಲುವ) ಕಾರ್ಯವನ್ನು ಹುಟ್ಟಿಸುವಲ್ಲಿ ಮಾತ್ರ ಸಮರ್ಥವಾಗಿರುತ್ತದೆ ಹೊರತು, ಕಾರ್ಯದಲ್ಲಿ ಯಾವುದಾದರೂ ವೈಸಾದೃಶ್ಯವನ್ನು ಹುಟ್ಟಿಸುವಲ್ಲಿ ವ್ಯಾಪಾರಹೀನವಾಗುತ್ತದೆ. 'ಉತ್ತರೋತ್ಪತ್ತಿ ...' ಎಂಬ ಅನುವ್ಯಾಖ್ಯಾನಕ್ಕೆ ಪೂರ್ವವಸ್ತುವು ಮುಂದಿನ ವಸ್ತುವನ್ನು ಹುಟ್ಟಿಸಿ ತಾನು ನಾಶವಾಗುತ್ತದೆ. ಪೂರ್ವವಸ್ತುವು ಮುಂದಿನ ವಸ್ತುವಿನಲ್ಲಿ ಸಂಸ್ಕಾರವನ್ನು ಹುಟ್ಟಿಸುವುದಿಲ್ಲ. ವಸ್ತುವು ಕ್ಷಣಿಕವಾದ್ದರಿಂದ ಇದಕ್ಕೆ ವಿರುದ್ಧವಾಗಿ ಎಲ್ಲಿಯೂ ಕಂಡಿಲ್ಲ ಎಂದರ್ಥ.

'ಅಥ ಮತಮ್..'' ಎಂಬ ಸುಧಾವಾಕ್ಯಕ್ಕೆ ಬೌದ್ಧರು ಹೀಗೆ ಪರಿಹಾರ ಹೇಳುತ್ತಾರೆ - ಕಾರಣವು ಕಾರ್ಯದಲ್ಲಿ ಸಂಸ್ಕಾರವನ್ನು ಹುಟ್ಟಿಸುತ್ತದೆ. ಆದ್ದರಿಂದ ಹಿಂದಿನ ಹಿಂದಿನ ಆತ್ಮರ ಸಂಸ್ಕಾರದಿಂದ ಕೂಡಿದ ಮುಂದಿನ ಮುಂದಿನ ಆತ್ಮರು ಅನುಮಾನಾದಿ ವ್ಯವಹಾರಕ್ಕೆ ವಿಷಯರಾಗುತ್ತಾರೆ ಎಂದು ಇದನ್ನು ನಿರಾಕರಣೆ ಮಾಡುವುದಕ್ಕಾಗಿ 'ಉತ್ತರೋತ್ಪಾದೇ' ಎಂಬ ಸೂತ್ರ ಹೊರಟಿದೆ ಎಂದು.

**द्वितीयसूत्रभाष्ये तट्टीकायां च विरलपरमाणुकार्याणां मिलितपरमाणूनां क्षणिकत्वेनापेक्षाबुद्ध्यादिविषयत्वादिकमेव द्वितीयसूत्रे निरस्तम् । सूत्रे मात्रशब्देनापेक्षाबुद्धिरेव व्यावर्तितेत्युक्त्वा (त्वं न युक्तमिति द्वितीयसूत्रार्थः । तत्र मात्रशब्दश्चापेक्षाबुद्ध्यादेरेव व्यावर्तक इति विवक्षितम् ।) ''न विशेषकार्योत्पत्तिः'' इत्यादि तृतीयसूत्रभाष्ये तट्टीकायां च विसदृशकार्यरूपविशेषकार्योत्पत्तिरेव तृतीयसूत्रे निरस्तेति सूत्रद्वयं प्रकारान्तरेण व्याख्यातमिति द्रष्टव्यम् ।।**

ಉತ್ತರ - ಟೀಕಾರೀತ್ಯಾ ದ್ವಿತೀಯ ಸೂತ್ರದಲ್ಲಿ ವಿರಳಪರಮಾಣುಕಾರ್ಯವಾದ ಮಿಲಿತ-ಪರಮಾಣುಗಳು ಕ್ಷಣಿಕವಾದ್ದರಿಂದ ಅಪೇಕ್ಷಾಬುದ್ಧಿ ವ್ಯವಹಾರ ಕೂಡುವುದಿಲ್ಲ ಎಂಬುದಷ್ಟೇ

ನಿರಾಕರಣೆ ಮಾಡಲಾಗಿದೆ. ದ್ವಿತೀಯ ಸೂತ್ರದಲ್ಲಿರುವ 'ಮಾತ್ರ' ಶಬ್ದದಿಂದ ಕೇವಲ ಅಪೇಕ್ಷಾಬುದ್ಧಿಯ ವ್ಯಾವೃತ್ತಿ ಮಾಡಲಾಗಿದೆ.

ಮೂರನೆಯ ಸೂತ್ರದಲ್ಲಿ ವಿಶೇಷಕಾರ್ಯದ ಉತ್ಪತ್ತಿಯನ್ನು ನಿರಾಕರಣೆ ಮಾಡಲಾಗಿದೆ. ಹೀಗೆ ಟೀಕಾದಲ್ಲಿ ಈ ಎರಡು ಸೂತ್ರಗಳನ್ನು ಒಂದು ದೃಷ್ಟಿಯಿಂದ ವ್ಯಾಖ್ಯಾನಿಸಲಾಗಿದೆ. ಸುಧಾದಲ್ಲಿ ಬೇರೊಂದು ದೃಷ್ಟಿಯಿಂದ ವ್ಯಾಖ್ಯಾನಿಸಲಾಗಿದೆ. ಹಾಗಾಗಿ ಸುಧಾ ಟೀಕಾಗಳಿಗೆ ಯಾವುದೇ ವಿರೋಧ ಇಲ್ಲ.

**अन्यथा क्षणिकत्वविरोध इति ।। यदि तु स्वतस्सदृशकार्यजनका अप्यणवोऽदृष्टसहकृता आदावेव विसदृशानुत्पादयेयुः तर्हि स्वतः सदृशजनकोऽपि घटोऽदृष्टसहकृतः कदाचित्पटमुत्पादयेदिति भावः ।**

'ಅನ್ಯಥಾ ಕ್ಷಣಿಕತ್ವವಿರೋಧಃ' ಎಂಬ ಟೀಕಾವಾಕ್ಯಕ್ಕೆ ಹೀಗೆ ಅರ್ಥ - ಪರಮಾಣುಗಳು ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸಿ ನಷ್ಟವಾಗುವುದರಿಂದ ಕಾರ್ಯದಲ್ಲಿ ವೈಸಾದೃಶ್ಯವನ್ನು ಹುಟ್ಟಿಸಲು ಸಾಧ್ಯವಿಲ್ಲ. ಒಂದು ವೇಳೆ ಕಾರ್ಯವನ್ನು ಹುಟ್ಟಿಸಿದ ನಂತರ ಕ್ಷಣದಲ್ಲಿ ವೈಸಾದೃಶ್ಯವನ್ನು ಹುಟ್ಟಿಸುತ್ತದೆ ಎಂದರೆ ಕ್ಷಣಿಕತ್ವಕ್ಕೆ ವಿರೋಧ ಬರುತ್ತದೆ. ಇದನ್ನು ಪರಿಹರಿಸಿಕೊಳ್ಳಲು ಬೌದ್ಧರು ಹೀಗೆ ಹೇಳಬಹುದು. ಅಣುಗಳು ಸ್ವಸದೃಶಕಾರ್ಯವನ್ನು ಹುಟ್ಟಿಸಿದರೂ ಅದೃಷ್ಟದ ಸಹಕಾರದಿಂದ ಮೊದಲನೇ ಕ್ಷಣದಲ್ಲೇ ವಿಸದೃಶಕಾರ್ಯವನ್ನೇ ಹುಟ್ಟಿಸುತ್ತವೆ. ಹಾಗಾಗಿ ಕ್ಷಣಿಕತ್ವಕ್ಕೆ ವಿರೋಧವಿಲ್ಲ ಎಂದು. ಇದು ಸರಿಯಲ್ಲ. ಹೀಗೆ ಹೇಳುವುದಾದರೆ ಸ್ವತಃ ಘಟವು ತನಗೆ ಸದೃಶವಾದ ಇನ್ನೊಂದು ಘಟವನ್ನು ಹುಟ್ಟಿಸುವ ಸಾಮರ್ಥ್ಯವಿದ್ದರೂ ಅದೃಷ್ಟದ ಸಹಾಯದಿಂದ ಯಾವಾಗಲಾದರೂ ತನಗೆ ವಿಸದೃಶವಾದ ಪಟವನ್ನು ಹುಟ್ಟಿಸಬೇಕಾಗುತ್ತದೆ. ಆದ್ದರಿಂದ ಅದೃಷ್ಟವಶಾತ್ ವಿಸದೃಶಕಾರ್ಯದ ಉತ್ಪತ್ತಿಯನ್ನು ಹೇಳಬಾರದು.

**पूर्वमविच्छेदेनोत्पत्तिर्यौगपद्यमित्यभिप्रेत्योक्तम् । इदानीं सहावस्थानं यौगपद्यमित्यभिप्रेत्याह – तथा यस्मिन् क्षण इति ।।**

''ಅಸತಿ ಪ್ರತಿಜ್ಞೋಪರೋಧೌ ಯೋಗಪದ್ಯಮನ್ಯಥಾ'' ಎಂಬ ಸೂತ್ರದಲ್ಲಿರುವ 'ಯೋಗಪದ್ಯ' ಎಂಬ ಶಬ್ದಕ್ಕೆ ಟೀಕಾದಲ್ಲಿ ಮೊದಲು ವಿಚ್ಛೇದ (ವಿರಾಮ)ವಿಲ್ಲದ ಉತ್ಪತ್ತಿ ಎಂದು ಅರ್ಥ ಹೇಳಿದ್ದಾರೆ. ಈಗ ಎಲ್ಲಾ ಕಾರ್ಯವೂ ಒಟ್ಟಿಗೆ ಇರುವುದು ಎಂಬ ಅರ್ಥವನ್ನು ಹೇಳುತ್ತಿದ್ದಾರೆ. 'ತಥಾ ಯಸ್ಮಿನ್ ಕ್ಷಣ' ಎಂಬ ವಾಕ್ಯದಿಂದ.

**यः प्रतिक्षणं विनाश इत्यादि ।। यद्यपि बुद्धिपूर्वकाबुद्धिपूर्वकविनाशौ प्रतिसंख्याप्रतिसंख्यानिरोधाविति बौद्धानां परिभाषा । उक्तं हि ''बुद्धिपूर्वविनाशो हि प्रतिसंख्यानिरोधधीः । अबुद्धिपूर्वकस्तेषां निरोधोऽप्रतिसंख्यय'' इति ।**

ಪ್ರಶ್ನೆ- ಬೌದ್ಧರು ಪ್ರತಿಸಂಖ್ಯಾನಿರೋಧ ಅಪ್ರತಿಸಂಖ್ಯಾನಿರೋಧ ಎಂಬ ಶಬ್ದಕ್ಕೆ ತಮ್ಮ ಗ್ರಂಥದಲ್ಲಿ ಬುದ್ಧಿಪೂರ್ವಕ ವಿನಾಶ, ಅಬುದ್ಧಿಪೂರ್ವಕವಿನಾಶ ಎಂಬ ಅರ್ಥ ಹೇಳಿದ್ದಾರೆ. ಅವರ ಗ್ರಂಥ ಹೀಗಿದೆ- ''ಬುದ್ಧಿಪೂರ್ವವಿನಾಶೋ ಹಿ ಪ್ರತಿಸಂಖ್ಯಾನಿರೋಧಧೀಃ। ಅಬುದ್ಧಿಪೂರ್ವಕಸ್ತೇಷಾಂ ನಿರೋಧೋಽ-ಪ್ರತಿಸಂಖ್ಯಯಾ ಇತಿ''. ಆದ್ದರಿಂದ ಟೀಕಾದಲ್ಲಿ ಪ್ರತಿಸಂಖ್ಯಾನಿರೋಧ ಎಂಬುದಕ್ಕೆ ಸಸಂತಾನ ವಿನಾಶ ಎಂದು ಹಾಗೂ ಅಪ್ರತಿಸಂಖ್ಯಾನಿರೋಧ ಎಂಬುದಕ್ಕೆ ನಿಃಸಂತಾನ ವಿನಾಶ ಎಂದು ಹೇಗೆ ಅರ್ಥ ಹೇಳಿದ್ದಾರೆ?

**तथापि प्रतिक्षणविनाशस्याबुद्धिपूर्वकत्वात्सन्तानेन सह विनाशस्य तु प्रायेण बुद्धिपूर्वकत्वात्प्रतिक्षणविनाशसन्तानविनाशावप्रतिसंख्याप्रतिसंख्यानिरोधशब्दार्थत्वे नोक्तावित्यविरोधः ।।**

ಉತ್ತರ - ನಿಜ, ಬೌದ್ಧರು ಹಾಗೇ ಹೇಳಿದ್ದಾರೆ, ಆದರೆ ಪ್ರತಿಕ್ಷಣವಿನಾಶ ಎಂಬುದು ಅಬುದ್ಧಿಪೂರ್ವಕವಾಗಿಯೇ ಇರುತ್ತದೆ. ಹಾಗೂ ಸಂತಾನದಿಂದ ಸಹಿತವಾದ ವಿನಾಶವು ಪ್ರಾಯಃ ಬುದ್ಧಿಪೂರ್ವಕವಾಗಿಯೇ ಇರುತ್ತದೆ ಎಂಬ ದೃಷ್ಟಿಯಿಂದ ಬುದ್ಧಿಪೂರ್ವಕವಿನಾಶ ಹಾಗೂ ಪ್ರತಿಕ್ಷಣವಿನಾಶ ಎಂಬುದು ಪ್ರತಿಸಂಖ್ಯಾನಿರೋಧ ಅಪ್ರತಿಸಂಖ್ಯಾನಿರೋಧ ಶಬ್ದಾರ್ಥ ಎಂದು ಪರಿಗಣಿಸಿ ಹಾಗೇ ಹೇಳಿದ್ದಾರೆ.

(ಪ್ರತಿಸಂಖ್ಯಾನಿರೋಧ ಎಂದರೆ ಬುದ್ಧಿಪೂರ್ವಕವಿನಾಶ ಎಂದರ್ಥ. ಒನಕೆಯನ್ನು ತೆಗೆದುಕೊಂಡು ಘಟವನ್ನು ಹೊಡೆದರೆ ಆಗ ಆ ಘಟದ ನಾಶ ಬುದ್ಧಿಪೂರ್ವಕ, ಇದೇ ಪ್ರತಿಸಂಖ್ಯಾನಿರೋಧ, ಹಾಗೇ ಘಟವನ್ನು ನಾಶ ಮಾಡಿದಾಗ ಮುಂದಿನ ಅದರ ಎಲ್ಲಾ ಸಂತಾನವೂ ನಾಶವಾಗುವುದೆಂದು ಅದು ಸಸಂತಾನನಾಶ (ಸಂತಾನದಿಂದ ಕೂಡಿದ ನಾಶ)

ಅಪ್ರತಿಸಂಖ್ಯಾನಿರೋಧ ಎಂದರೆ ಅಬುದ್ಧಿಪೂರ್ವಕವಿನಾಶ. ಅಂದರೆ ಘಟವನ್ನು ಹಾಗೇ ಬಿಟ್ಟರೆ ಪ್ರತಿಕ್ಷಣದಲ್ಲೂ ಅದು ತನ್ನಂತೆಯೇ ಇರುವ ಇನ್ನೊಂದು ಘಟವನ್ನು ಹುಟ್ಟಿಸಿ ಸ್ವತಃ ನಾಶವಾಗುತ್ತದೆ. ಆಗ ಅದರ ಸಂತಾನ ಉಳಿದಿರುತ್ತದೆ. ಹಾಗಾಗಿ ಇದು ನಿಸ್ಸಂತಾನವಿನಾಶ (ಸಂತಾನನಾಶವಿಲ್ಲದ ನಾಶ)

ಈ ಅರ್ಥವನ್ನು ಗ್ರಹಿಸಿಯೇ ಟೀಕಾಕಾರರು ಬುದ್ಧಿಪೂರ್ವಕ ಅಬುದ್ಧಿಪೂರ್ವಕ ಎನ್ನದೇ ನಿಸ್ಸಾಂತಾನವಿನಾಶ ಪ್ರತಿಕ್ಷಣವಿನಾಶ ಎಂದಿದ್ದಾರೆ)

**स्वकार्यवियोगकाल इति ।। कार्योत्पत्तिक्षणे कारणं तावत्सदेव । क्षणिकस्य चोत्पत्तिकाल एव वियोगकाल इति वियोगकालेऽपि कारणं सदेवेति भावः ।।**

ಕಾರ್ಯದ ಉತ್ಪತ್ತಿಯಾಗುವಾಗ ಕಾರಣ ಇರಲೇಬೇಕು. (ಇಲ್ಲದೇ ಹೋದಲ್ಲಿ ಆ ಕಾರ್ಯವು ಈ ಕಾರಣದಿಂದ ಹುಟ್ಟಿದೆ ಎನ್ನುವುದೇ ತಪ್ಪಾಗುತ್ತದೆ) ಕ್ಷಣಿಕವಾದ್ದಕ್ಕೆ ಉತ್ಪತ್ತಿಕಾಲವೇ ವಿಯೋಗವಾದ್ದರಿಂದ ವಿಯೋಗಕಾಲದಲ್ಲೂ ಕಾರಣ ಇದ್ದೇ ಇದೆ. (ಆಗಲೂ ಕಾರ್ಯದ ಉತ್ಪತ್ತಿಯಾಗಬೇಕು, ಕಾರಣ ಇರುವುದರಿಂದ)

**त्वदनुमानेऽसिद्धिरित्यादि ।। अर्थक्रियाकारित्वं कदाचित्कार्यकरत्वं चेद्गगनेऽपि तस्य सत्त्वात्तत्र तन्नेति वदता त्वया प्रतिक्षणं कार्यकरत्वमिति वक्तव्यम् । तच्च पक्षे प्रपञ्चे दृष्टान्ते दीपे च नेत्यसिध्यादीत्यर्थः ।।**

("ತ್ವದನುಮತೇಽಸಿದ್ಧಿರಿತ್ಯಾದಿಃ" ಎಂಬ ಟೀಕಾ ವಾಕ್ಯದ ಅರ್ಥ ಹೇಳುತ್ತಿದ್ದಾರೆ) ಬೌದ್ಧರು ಯಾವುದು ಸತ್ ಆಗಿದೆಯೋ ಅದು ಕ್ಷಣಿಕ ದೀಪದಂತೆ ಎಂದು ಅನುಮಾನಪ್ರಯೋಗ ಮಾಡುತ್ತಾರೆ. ಆದರೆ ಅವರು ಹೇಳುವ ಸತ್ವ ಏನೆಂದು ಕೇಳಬೇಕು. ಆಗ ಅರ್ಥಕ್ರಿಯಾಕಾರಿತ್ವ ಎಂದರೆ, ಯಾವಾಗಲಾದರೂ ಕಾರ್ಯಕರತ್ವ ಎಂದೋ? ಅಥವಾ ಯಾವಾಗಲೂ (ಪ್ರತಿಕ್ಷಣ) ಕಾರ್ಯಕರತ್ವ ಎಂದರ್ಥವೋ ? ಎಂದು ವಿಕಲ್ಪ ಮಾಡಬೇಕು. ಯಾವಾಗಲಾದರೂ ಕಾರ್ಯಕರತ್ವ ಎಂದು ಹೇಳಲು ಬರುವುದಿಲ್ಲ. ಏಕೆಂದರೆ, ಆಕಾಶದಲ್ಲಿಯೂ ಅದು ಇರುವುದರಿಂದ ವ್ಯಭಿಚಾರ. ಹಾಗಾಗಿ ಪ್ರತಿಕ್ಷಣ ಕಾರ್ಯೋತ್ಪತ್ತಿ ಎಂದು ಹೇಳಬೇಕು. ಹಾಗೆ ಹೇಳಿದರೆ ಅಂತಹ ಅರ್ಥಕ್ರಿಯಾಕಾರಿತ್ವವು ಪಕ್ಷದಲ್ಲಿಯಾಗಲೀ ದೃಷ್ಟಾಂತದಲ್ಲಿಯಾಗಲೀ ಇಲ್ಲವೆಂದು ನಾವು ಹಿಂದಿನ ಸೂತ್ರದಲ್ಲಿಯೇ ಸಮರ್ಥನೆ ಮಾಡಿದ್ದೇವೆ ಎಂದರ್ಥ.

**साऽऽकाशेन नास्तीति ।। किं त्वस्त्येव । ततश्च मदीयहेतौ त्वदुक्तं साधनवैकल्यं नेति शेषः ।।**

ಸತ್ವ ಎಂದರೆ ಅರ್ಥಕ್ರಿಯಾಕಾರಿತ್ವ ಎಂದು ಹೇಳದೆ ಸ್ವರೂಪೇಣ ವಿದ್ಯಮಾನತ್ವ ಅಥವಾ ಭಾವರೂಪತ್ವ ಎಂದು ಹೇಳುತ್ತೇವೆಂದರೆ ಇಂತಹ ಸತ್ವವು ನಾವು ದೃಷ್ಟಾಂತವಾಗಿ ಹೇಳಿರುವ ಆಕಾಶದಲ್ಲಿಯೂ ಇದೆ. ಆದ್ದರಿಂದ ನೀವು ನಮ್ಮ ದೃಷ್ಟಾಂತಕ್ಕೆ ಹೇಳಿದ ಸಾಧನವೈಕಲ್ಯ ಪರಿಹೃತವಾಯಿತು ಎಂದರ್ಥ.

**कालादिभेदेनोपपत्तेरित्यादि ।। चूतफलादौ श्यामत्वाश्यामत्वादिः कालादिभेदेनोपपन्नः ।**

"ಅನುಸ್ಮೃತೇಶ್ಚ" ಎಂಬ ಟೀಕಾದಲ್ಲಿರುವ 'ಕಾಲಾದಿಭೇದೇನ ಉಪಪತ್ತೇಃ' ಎಂಬುದಕ್ಕೆ ಹೀಗೆ ಅರ್ಥ- ಮಾವಿನ ಹಣ್ಣಿನಲ್ಲಿ ಶ್ಯಾಮತ್ವ ಹಾಗೂ ಅಶ್ಯಾಮತ್ವವು ಕಾಲಭೇದದಿಂದ ಹೇಗೆ ಕೂಡುತ್ತದೋ ಹಾಗೆ ಪ್ರತ್ಯಭಿಜ್ಞೆಯಲ್ಲಿ ವಿರುದ್ಧಧರ್ಮಾಧ್ಯಾಸವು ಕಾಲಾದಿಭೇದದಿಂದ ಉಪಪನ್ನವಾಗುತ್ತದೆ ಎಂದರ್ಥ.

(ಹೀಗಾಗಿ ಪ್ರತ್ಯಭಿಜ್ಞೆಯು ಭ್ರಮಾ ಎನ್ನುವುದಕ್ಕೆ ವಿರುದ್ಧಧರ್ಮಾಧ್ಯಾಸವು ಬಾಧಕವಾಗಲು ಸಾಧ್ಯವಿಲ್ಲ)

**यद्यपि तार्किकाणां तत्रापि भेदः । तथापि तदेवेदमिति प्रत्यभिज्ञानान्न भेदोऽस्मत्संमत इत्यर्थः ।।**

ತಾರ್ಕಿಕರು ಪ್ರತ್ಯಭಿಜ್ಞೆಯಲ್ಲಿ ಭೇದವನ್ನು ಒಪ್ಪುತ್ತಾರೆ. ಆದರೆ, ಪ್ರತ್ಯಭಿಜ್ಞಾ ಬರುವಾಗ 'ಅದೇ ಇದು' ಎಂಬ ಪ್ರತೀತಿ ಬರುವುದರಿಂದ ಭೇದವು ನಿಮಗೆ ಸಮ್ಮತವಲ್ಲ ಎಂದರ್ಥ.

(ವ್ಯಕ್ತಿಯಲ್ಲಿ ಕೆಲವು ಧರ್ಮಗಳು ಬೇರೆ ಬೇರೆಯಾಗಿದ್ದರೂ ವ್ಯಕ್ತಿ ಬೇರೆ ಅಲ್ಲ. ಧರ್ಮಗಳು ಭಿನ್ನ ಎಂಬುದನ್ನು ಕಾಲಭೇದೇನ ಕೂಡಿಸಬಹುದು ಎಂದರ್ಥ)

**अन्यथैकक्षणेऽपीति ।। अभेदे प्रमितेऽपि भेदश्चेदेकक्षणवर्तिनोर्घटपटयोर्भेददर्शनात्तद्दृष्टान्तेनैकक्षणवर्तिनोऽपि घटस्य स्वस्माद्भेदः स्यादित्यर्थः ।**

ಪ್ರತ್ಯಭಿಜ್ಞಾದಲ್ಲಿ ಅಭೇದವು ಪ್ರಮಿತವಾದರೂ ಭೇದವನ್ನು ಹೇಳುವುದಾದರೆ ಒಂದೇ ಕ್ಷಣದಲ್ಲಿರುವ ಘಟ ಪಟಗಳಿಗಿರುವ ಭೇದವನ್ನು ದೃಷ್ಟಾಂತವಾಗಿ ಇಟ್ಟುಕೊಂಡು ಒಂದೇ ಕ್ಷಣದಲ್ಲಿರುವ ಘಟಕ್ಕೆ ತನ್ನಿಂದಲೇ ಭೇದವನ್ನು ಹೇಳಬೇಕಾಗುತ್ತದೆ ಎಂದರ್ಥ.

**यद्वा एकक्षणवर्तिनोऽपि घटस्य पुरुषभेदेन ज्ञातत्वाज्ञातत्वयोर्दृष्टे भेदः स्यादित्यर्थः ।।**

ಇನ್ನೊಂದು ರೀತಿಯಿಂದ ಅತಿಪ್ರಸಂಗ ಹೇಳಬಹುದು. ಒಂದೇ ಕ್ಷಣದಲ್ಲಿರುವ ಘಟಕ್ಕೆ ಅಭೇದ ತಿಳಿದಿದ್ದರೂ ಒಬ್ಬ ಪುರುಷ ಘಟ ಎಂದು ತಿಳಿದಿದ್ದಾನೆ ಇನ್ನೊಬ್ಬ ತಿಳಿದಿಲ್ಲ ಹೀಗೆ ಪುರುಷವ್ಯತ್ಯಾಸದಿಂದ ಒಂದೇ ಘಟಕ್ಕೆ ಭೇದವನ್ನು ಹೇಳಬೇಕಾಗುತ್ತದೆ ಎಂದರ್ಥ.

(ಪ್ರತ್ಯಭಿಜ್ಞಾದಲ್ಲಿ, ಹಿಂದೆ ಹಳದಿಬಣ್ಣವುಳ್ಳದ್ದಾಗಿ ತಿಳಿಯಲ್ಪಟ್ಟ ಮಾವಿನ ಹಣ್ಣು ಈಗ ಕಪ್ಪು ಬಣ್ಣವುಳ್ಳದ್ದಾಗಿ ತಿಳಿಯಲ್ಪಟ್ಟಾಗ ವಿರುದ್ಧಧರ್ಮಗಳಿರುವುದರಿಂದ ಆ ಮಾವಿನ ಹಣ್ಣೇ ಬೇರೆ ಇದೇ ಬೇರೆ ಎಂದು ಭೇದವನ್ನು ಹೇಳುವುದಾದರೆ ಘಟವನ್ನು ಒಬ್ಬ ತಿಳಿದಿದ್ದಾನೆ ಮತ್ತೊಬ್ಬ ತಿಳಿದಿಲ್ಲ ಹೀಗೆ ಜ್ಞಾತತ್ವ ಅಜ್ಞಾತತ್ವ ಎಂಬ ವಿರುದ್ಧಧರ್ಮಗಳಿರುವುದರಿಂದ ಒಂದೇ ಘಟಕ್ಕೆ ಭೇದವನ್ನು ಹೇಳಬೇಕಾಗುತ್ತದೆ ಎಂದರ್ಥ)

**एतेन प्रदीपोऽपि व्याख्यात इति ।। बालयुवशरीरवद्दीपेऽप्यत्यन्तभेदाभावेऽपि कालभेदेन परिमाणभेद इति भावः ।।**

ಹಿಂದೆ ಹೇಳಿದ್ದರಿಂದ ನೀವು ಹೇಳುವ ಪ್ರದೀಪದೃಷ್ಟಾಂತವನ್ನೂ ವ್ಯಾಖ್ಯಾನಿಸಿದಂತಾಯಿತು. ಪ್ರದೀಪದಲ್ಲಿಯೂ ಅಭೇದವೇ ಇರುವುದು ಹೊರತು ಕ್ಷಣಿಕತ್ವವಲ್ಲ. ಹಾಗಾದರೆ ಪ್ರದೀಪ ಒಂದು ಕ್ಷಣ ದೊಡ್ಡದಾಗಿದ್ದು ಇನ್ನೊಂದು ಕ್ಷಣ ಚಿಕ್ಕದಾಗಿರುತ್ತದೆ ಎಂದರೆ ಈ ಪರಿಮಾಣದಲ್ಲಿರುವ ಭೇದ ಕಾಲಭೇದದಿಂದ ಕೂಡುತ್ತದೆ. ಪರಿಮಾಣ ಬೇರೆಯಾದ ಮಾತ್ರಕ್ಕೆ ವಸ್ತು ಬೇರೆಯಾಗಬೇಕಾಗಿಲ್ಲ. ಅದೇ ವಸ್ತು ಆ ಕಾಲದಲ್ಲಿ ದೊಡ್ಡದಾಗಿತ್ತು ಈಗ ಚಿಕ್ಕದಾಗಿದೆ ಎಂದು ಕಾಲವ್ಯತ್ಯಾಸದಿಂದ ಕೂಡಿಸಬಹುದು. ಹೇಗೆ ಒಂದೇ ಶರೀರ ಬಾಲ, ಯುವಕ ಇತ್ಯಾದಿ ಅವಸ್ಥೆಯನ್ನು ಹೊಂದುತ್ತದೋ ಹಾಗೆ.

**दृष्टान्ताभावादिति ।। मुसलाहतैकक्षणवर्तिपरमाण्वात्मकघटरूपदृष्टान्तस्वरूपे तत्र साध्यसाधनयोश्च मम विप्रतिपत्तेरित्यर्थः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् समुदायाधिकरणं सम्पूर्णम् ।।७।।**

ನೀವು ಘಟಃ ಎಂದು ಪಕ್ಷ ಮಾಡಿದ್ದೀರಿ. (ಅನುಮಾನದಲ್ಲಿ) ಅಲ್ಲಿ ಘಟ ಎಂದರೆ ಪರಮಾಣುಗಳೋ ಅಥವಾ ಸಮುದಾಯವೋ ? ಪರಮಾಣುಗಳು ಎಂದು ಹೇಳಲು ಬರುವುದಿಲ್ಲ ಏಕೆಂದರೆ, ಹಾಗೆ ಹೇಳಿದಾಗ ದೃಷ್ಟಾಂತವೇ ಇಲ್ಲ. ಮುಸಲಾಹತ ಘಟ (ಒನಕೆಯಿಂದ ಹೊಡೆಯಲ್ಪಟ್ಟ ಘಟ) ವನ್ನು ಪಕ್ಷ ಮಾಡುತ್ತೇವೆ ಎಂದರೆ ಮುಸಲಾಹತವಾದ ಏಕಕ್ಷಣವರ್ತಿಯಾದ ಘಟದಲ್ಲಿ ನನಗೆ ಸಾಧ್ಯ ಸಾಧನಗಳು ಇವೆ ಎಂಬ ವಿಷಯದಲ್ಲಿ ಸಮ್ಮತಿ ಇಲ್ಲ ಎಂದರ್ಥ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಸಮುದಾಯಾಧಿಕರಣವು ಸಂಪೂರ್ಣವಾಯಿತು

## ಶ್ರೀರಾಘವೇಂದ್ರತೀರ್ಥವಿರಚಿತ

# ಪ್ರಕಾಶ

**प्रकाशः –**

**समुदाये** ।। टीकाक्षरार्थान् व्यनक्ति ।। **रूपेति** ।। ननु सुखमप्यन्यदस्तीत्यतः ''दुःखाभावं सुखं चाहुः'' इत्याद्यनुव्याख्यानोक्तमाह – **सुखं त्विति** ।।

ಟೀಕಾಕ್ಷರಾರ್ಥವನ್ನು ಹೇಳುತ್ತಿದ್ದಾರೆ. ಪಂಚಸ್ಕಂಧಗಳಲ್ಲಿ ಸುಖವನ್ನು ಹೇಳಿಲ್ಲ. ಅದೂ ಇದೆಯಲ್ಲಾ ಎಂದರೆ ಅದಕ್ಕೆ ದುಃಖಾಭಾವವನ್ನೇ ಸುಖ ಎಂದು ಬೌದ್ಧರು ಹೇಳುತ್ತಾರೆ ಎಂಬ ಅನುವ್ಯಾಖ್ಯಾನದಲ್ಲಿ ಹೇಳಿರುವುದನ್ನು ಹೇಳುತ್ತಿದ್ದಾರೆ 'ಸುಖಂ ತು' ಎಂಬ ವಾಕ್ಯದಿಂದ.

**प्रकाशः** – ''चशब्देन केचित्सुखमपि वेदनास्कन्धेऽतर्भावयन्तीति सूचयति'' इति सुधोक्तेराह – **सुखमपीति** ।। एतेन ''सुखदुःखे वेदनास्कन्ध'' इति तत्वनिर्णयटीकाविरोधः प्रत्युक्तः ।

ಅನುವ್ಯಾಖ್ಯಾನದಲ್ಲಿ 'ಚ' ಶಬ್ದ ಇರುವುದರಿಂದ ಆಚಾರ್ಯರು ಕೆಲವು ಬೌದ್ಧರು ಸುಖವನ್ನೂ ವೇದನಾಸ್ಕಂಧವೆಂದು ಹೇಳಿದ್ದಾರೆ ಎನ್ನುವುದನ್ನು ಸೂಚಿಸುತ್ತಿದ್ದಾರೆ ಎಂದು ಸುಧಾದಲ್ಲಿ ಹೇಳಿರುವಂತೆ ಹೇಳುತ್ತಿದ್ದಾರೆ 'ಸುಖಮಪಿ' ಎಂಬ ವಾಕ್ಯದಿಂದ. ಟೀಕಾರಾಯರು ವಿಷ್ಣುತತ್ವನಿರ್ಣಯಟೀಕೆಯಲ್ಲಿ ಸುಖದುಃಖ ಎರಡೂ ವೇದನಾಸ್ಕಂಧ ಎಂದು ಹೇಳಿದ್ದಾರೆ. ಸುಧಾರೀತ್ಯಾ ಇಟ್ಟುಕೊಂಡಾಗ ಆ ವಾಕ್ಯಕ್ಕೆ ವಿರೋಧವಿಲ್ಲ.

**प्रकाशः** – कुण्डलीति द्रव्यविकल्पः । भाष्यटीकयोरनुव्याख्यानसुधाविरोधमाशङ्क्य वर्णकान्तरत्वेन समाधिमाह – यद्यपीत्यादिना इति द्रष्टव्यमित्यन्तेन ।।

ಕುಂಡಲೀ ಎಂಬುದು ದ್ರವ್ಯವಿಕಲ್ಪ. ಕುಂಡಲೀ ಎಂದರೆ ಸರ್ಪ (ಗೌಃ ಎಂಬುದು ಜಾತಿವಿಕಲ್ಪ, ಗಚ್ಛತಿ ಎಂಬುದು ಕ್ರಿಯಾವಿಕಲ್ಪ ಎಂದೂ ತಿಳಿಯಬೇಕು) ಭಾಷ್ಯಟೀಕಾಗಳಿಗೂ ಅನುವ್ಯಾಖ್ಯಾನ ಸುಧಾಗಳಿಗೂ ತೋರುವ ವಿರೋಧವನ್ನು ಪ್ರಶ್ನಿಸಿಕೊಂಡು ಉತ್ತರವನ್ನು ಹೇಳುತ್ತಿದ್ದಾರೆ 'ಯದ್ಯಪಿ' ಎಂದು ಆರಂಭಿಸಿ 'ದ್ರಷ್ಟವ್ಯಂ' ಎಂಬಲ್ಲಿಯವರೆಗೆ.

**प्रकाशः** – ''यः प्रतिक्षणं विनाश'' इत्यादिटीकार्थं ''प्रतिसंख्याप्रतिसंख्य'' इति सूत्राक्षरारूढं कर्तुं परमतानुवादत्वं च व्यञ्जयितुं शङ्कोत्तरे आह – **यद्यपीत्यादिनाऽविरोध इत्यन्तेन** ।।

'ಯಃ ಪ್ರತಿಕ್ಷಣಂ ವಿನಾಶಃ' ಎಂಬ ಟೀಕಾದ ಅರ್ಥವನ್ನು 'ಪ್ರತಿಸಂಖ್ಯಾಪ್ರತಿಸಂಖ್ಯ' ಎಂಬ ಸೂತ್ರಕ್ಕೆ ಅನುಗುಣವಾಗಿ ತೋರಿಸಲು ಟೀಕಾದಲ್ಲಿ ಬೌದ್ಧಮತದ ಅನುವಾದವನ್ನು ಮಾಡುತ್ತಿದ್ದಾರೆ ಎಂಬುದನ್ನು ಕೂಡ ಸೂಚಿಸುತ್ತಾ ಶಂಕಾ ಸಮಾಧಾನಗಳನ್ನು ಹೇಳುತ್ತಿದ್ದಾರೆ 'ಯದ್ಯಪಿ' ಇಂದ ಆರಂಭಿಸಿ 'ಅವಿರೋಧ' ಎನ್ನುವಲ್ಲಿಯವರೆಗೆ.

**प्रकाशः** – अप्रतिसंख्याप्रतिसंख्यानिरोधशब्दार्थत्वेनोक्ताविततीति ।। एतेन भाष्ये सन्तानविनाशस्य प्रतिक्षणविनाश-पूर्वकत्वमभिप्रेत्य सौत्रपदयोर्व्यत्यासेन निस्सन्तानससन्तानेत्यर्थोक्तिः । टीकापि तथैव प्रवृत्तेति सूचितम् ।

ಪ್ರತಿಸಂಖ್ಯಾನಿರೋಧ ಎಂದರೆ ಬುದ್ಧಿಪೂರ್ವಕವಿನಾಶ. ಅದೇ ಸಸಂತಾನವಿನಾಶ. ಅಪ್ರತಿಸಂಖ್ಯಾನಿರೋಧ ಎಂದರೆ ಅಬುದ್ಧಿಪೂರ್ವಕವಿನಾಶ ಅದೇ ನಿಃಸಂತಾನವಿನಾಶ. ಆದರೆ, ಭಾಷ್ಯದಲ್ಲಿ ಸೂತ್ರಪದಗಳಿಗೆ ಅರ್ಥ ಹೇಳುವಾಗ ವ್ಯತ್ಯಾಸವಾಗಿ ಯಾಕೆ ಹೇಳಿದ್ದಾರೆ ಎಂದರೆ ಸಸಂತಾನವಿನಾಶ ಎಂಬುದು ನಿಃಸಂತಾನವಿನಾಶ-

ಪೂರ್ವಕವಾಗಿರುತ್ತದೆ ಎಂಬ ಅಭಿಪ್ರಾಯದಿಂದ ಎಂದು ತಿಳಿಯಬೇಕು. ಮೊದಲು ನಿಃಸಂತಾನವಿನಾಶ ಇರುತ್ತದೆ ಆಮೇಲೆ ಪ್ರಹಾರದಿಂದ ಸಸಂತಾನವಿನಾಶ ಆಗುತ್ತದೆ.

**प्रकाशः** – एतेन ''विनाशद्वयस्वरूपं च, ''बुद्धिपूर्वविनाशो हि प्रतिसंख्यानिरोधदीः'' इत्यादितत्वनिर्णयटीकाविरोधोऽपि प्रत्युक्तः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे समुदायाधिकरणं सम्पूर्णम् ।।७।।**

ಹೀಗೆ ವ್ಯಾಖ್ಯಾನ ಮಾಡುವುದರಿಂದಲೇ 'ವಿನಾಶದ್ವಯಸ್ವರೂಪಂ ಚ' ಮತ್ತು 'ಬುದ್ಧಿಪೂರ್ವಕವಿನಾಶೋ ಹಿ ಪ್ರತಿಸಂಖ್ಯಾನಿರೋಧದೀಃ' ಎಂಬ ತತ್ವನಿರ್ಣಯಟೀಕಾ ವಿರೋಧವೂ ಪರಿಹೃತವಾಯಿತು ಎಂದು ತಿಳಿಯಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಸಮುದಾಯಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಅಸದಧಿಕರಣ

(೨-೨-೮)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

# ಅಸದಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ
## ಬ್ರಹ್ಮಮೀಮಾಂಸಾಶಾಸ್ತ್ರ

**ಸೂತ್ರಮ್ – नासतोऽदृष्टत्वात् ।।**

ಶೂನ್ಯಕ್ಕೆ ಜಗತ್ಕರ್ತೃತ್ವವು ಕೂಡುವುದಿಲ್ಲ. ಈ ವಿಷಯದಲ್ಲಿ ಯಾವುದೇ ಪ್ರಮಾಣವು ಇರುವುದಿಲ್ಲ. ಏಕೆಂದರೆ ಜಗತ್ತಿನಲ್ಲಿ ಎಲ್ಲಿಯೂ ಕೂಡ ಶೂನ್ಯಕ್ಕೆ ಕಾರಣತ್ವವಿರುವುದು ಪ್ರತ್ಯಕ್ಷವಾಗಿ ಕಂಡಿರುವುದಿಲ್ಲ. ಆದ್ದರಿಂದಲೇ ಅನುಮಾನವು ಆಧಾರವಲ್ಲ, ಆಗಮವೂ ಕೂಡ ಎಲ್ಲಿಯೂ ಇರುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ
## ಸೂತ್ರದೀಪಿಕಾ

**ಸೂತ್ರದೀಪಿಕಾ – असतः** शून्यस्य । **न** जगत्कर्तृत्वं युक्तम् । कुतः ? प्रमाणाभावादिति शेषः । तत्कुतः ? **अदृष्टत्वात्** । क्वाप्यसतः कारणत्वादर्शनात् । अत एवानुमानागमयोरप्यभावादित्यर्थः ।।१।।

ಅಸತಃ = ಶೂನ್ಯಕ್ಕೆ, ನ = ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ಯಾವುದೇ ಪ್ರಮಾಣಗಳು ಇರುವುದಿಲ್ಲ. ಪ್ರಮಾಣವೇಕೆ ಇರುವುದಿಲ್ಲ ಎಂದರೆ, ಅದೃಷ್ಟತ್ವಾತ್ = ಶೂನ್ಯಕ್ಕೆ ಕಾರಣತ್ವವಿರುವುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ. ಆದ್ದರಿಂದಲೇ ಅನುಮಾನವು ಪ್ರಮಾಣವಾಗುವುದಿಲ್ಲ. ಆಗಮವೂ ಕೂಡ ಇರುವುದಿಲ್ಲ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – शून्यवादमपाकरोति –**

**।। नासतोऽदृष्टत्वात् ।।१।।**

**अदृष्टत्वान्नासतः कारणत्वं युज्यते ।।१।।**

ಅನುವಾದ - ಶೂನ್ಯವೇ ಜಗತ್ತಿಗೆ ಕಾರಣವೆಂದು ಹೇಳುವ ಮಾಧ್ಯಮಿಕವಾದವನ್ನು ಈ ಅಧಿಕರಣದಲ್ಲಿನಿರಾಕರಣೆಮಾಡುತ್ತಿದ್ದಾರೆ. ಅಸತ್ತಿಗೆಕಾರಣತ್ವವು ಎಲ್ಲೂಕೂಡಕಂಡಿರುವುದಿಲ್ಲ. ಆದ್ದರಿಂದ ಶೂನ್ಯವು ಜಗತ್ತಿಗೆ ಕಾರಣ ಎನ್ನುವುದು ಅಯುಕ್ತವಾಗಿದೆ.

ಪ್ರತಿಪದಾರ್ಥ -- ಬೌದ್ಧರ ಏಕದೇಶಿಗಳಾದ ಮಾಧ್ಯಮಿಕ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ಶೂನ್ಯವಾದಮ್ = ಶೂನ್ಯವೇ ಜಗತ್ತಿಗೆ ಕಾರಣವೆನ್ನುವ ವಾದವನ್ನು, ಅಪಾಕರೋತಿ = ಸೂತ್ರಕಾರರು ನಿರಾಕರಿಸುತ್ತಿದ್ದಾರೆ. ಅಸತಃ = ಶೂನ್ಯಕ್ಕೆ, ಕಾರಣತ್ವಂ = ಕಾರಣತ್ವವು, ಅದೃಷ್ಟತ್ವಾತ್ = ಎಲ್ಲಿಯೂ ಕಂಡಿಲ್ಲವಾದ್ದರಿಂದ, ನಯುಜ್ಯತೇ = ಯುಕ್ತವಲ್ಲ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका –**

**अधिकरणार्थं दर्शयति ।। शून्येति ।। अत्र हरेर्जगत्कारणत्वे शून्यमतविरोधपरिहारादस्ति शास्त्रादिसङ्गतिः ।**

ಅಸದಧಿಕರಣದ ಪ್ರಮೇಯವನ್ನು 'ಶೂನ್ಯವಾದ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಈ ಅಧಿಕರಣದಲ್ಲಿ ಶ್ರೀಹರಿಯ ಜಗತ್ಕಾರಣತ್ವವಿಷಯದಲ್ಲಿ ಶೂನ್ಯಮತವಿರೋಧವನ್ನು ಪರಿಹರಿಸುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ವಿವರಣೆ - ಶೂನ್ಯಮತವಿರೋಧವನ್ನು ಈ ಅಧಿಕರಣದಲ್ಲಿ ಪರಿಹಾರ ಮಾಡುತ್ತಿರುವುದರಿಂದ ಬ್ರಹ್ಮಮೀಮಾಂಸಿಶಾಸ್ತ್ರಕ್ಕೆ ಸಂಗತವಾಗಿದೆ. ಆದ್ದರಿಂದ ಶಾಸ್ತ್ರಸಂಗತಿ ಇರುತ್ತದೆ. ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಅವಿರೋಧಾಧ್ಯಾಯದಿಂದ ಸಂಗತವಾಗಿದೆ. ಸಮಯವಿರೋಧವನ್ನು ಪರಿಹರಿಸುತ್ತಿರುವುದರಿಂದ ಪಾದದಲ್ಲಿ ಅಂತರ್ಭಾವ ಸಂಗತಿಯನ್ನು ಹೊಂದಿದೆ.

ಪಂಚಸ್ಕಂದಾತ್ಮವಾದ ಪ್ರಪಂಚಕ್ಕೆ ಸತ್ವವೇ ಇಲ್ಲ. ಹೀಗಿರುವಾಗ ಕ್ಷಣಿಕತ್ವಾದಿವಿಚಾರವು ಹೇಗೆ ಯುಕ್ತವಾಗುತ್ತದೆ ? ಎಂಬುದಾಗಿ ಪೂರ್ವಪಕ್ಷವು ಹುಟ್ಟುತ್ತಿರುವುದರಿಂದ ಅಧಿಕರಣ ಸಂಗತಿಯು ಇರುತ್ತದೆ. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – जगत्कारणमीश्वर इत्युक्तम् । तत्र शून्यसमयविरोधेऽभावबुद्धिः स्यादित्यतोऽसौ निराकर्तव्य एव । परमेश्वरस्य जगत्कारणत्वं विषयः । युक्तमयुक्तं वेति सन्देहः । मतविमतिः सन्देहबीजम् ।**

ಜಗತ್ಕಾರಣನಾದವನು ಈಶ್ವರನೆಂದು ಹೇಳಲಾಯಿತು. ಈ ವಿಷಯದಲ್ಲಿ ಶೂನ್ಯಮತದ ವಿರೋಧವು ಪ್ರಾಪ್ತವಾದರೆ ಜಗತ್ಕಾರಣತ್ವವು ಈಶ್ವರನಲ್ಲಿ ಯುಕ್ತವಾಗುವುದಿಲ್ಲ ಎಂಬ ಬುದ್ಧಿಯು ಪ್ರಾಪ್ತವಾಗುತ್ತದೆ. ಆದ್ದರಿಂದ ಇದನ್ನು ನಿರಾಕರಣೆ ಮಾಡಲೇ ಬೇಕು.

ಪರಮೇಶ್ವರನ ಜಗತ್ಕಾರಣತ್ವವು ಈ ಅಧಿಕರಣದ ವಿಷಯ. ಈ ಜಗತ್ಕಾರಣತ್ವವು ಪರಮೇಶ್ವರನಿಗೆ ಯುಕ್ತವೋ ಅಯುಕ್ತವೋ ? ಎಂಬುದು ಸಂದೇಹ. ಮತಗಳಲ್ಲಿರುವ ವಿವಾದವು ಸಂದೇಹಬೀಜ.

**तत्वप्रकाशिका – न युक्तमिति पूर्वः पक्षः । एकं शून्यमेव खल्वन्तत्रयविरहितं परमार्थतो विद्यमानं तस्मादेवैतदशेषं जगदुदेति । न च तस्यासङ्गस्य जगत्कारणत्वानुपपत्तिः। संवृतिसम्बन्धेनोपपत्तेः ।**

ವಿಷ್ಣುವಿನಲ್ಲಿ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು. ಅಧಿಕರಣದ ಪೂರ್ವಪಕ್ಷ. ಶೂನ್ಯವೆಂಬ ಒಂದೇ ತತ್ವವು ದೇಶತಃ, ಕಾಲತಃ, ವಸ್ತುತಃ ಕೊನೆ ಇಲ್ಲದ್ದಾಗಿದೆ ಮತ್ತು ಪಾರಮಾರ್ಥಿಕವಾಗಿ ಸತ್ಯವಾಗಿದೆ. ಇಂಥ ಶೂನ್ಯದಿಂದಲೇ ಸಮಸ್ತ ಜಗತ್ತು ಹುಟ್ಟುತ್ತದೆ.

ಆ ಶೂನ್ಯವು ಅಸಂಗವಾಗಿರುವುದರಿಂದ ಜಗತ್ಕಾರಣತ್ವವು ಅನುಪಪನ್ನವಾಗುತ್ತದಲ್ಲವೆ ಎನ್ನಬಾರದು. ಸಂವೃತಿಯ ಸಂಬಂಧ ಇರುವುದರಿಂದ ಜಗತ್ಕಾರಣತ್ವವನ್ನು ಹೊಂದುತ್ತದೆ.

ವಿವರಣೆ - ಯಾವುದೇ ಧರ್ಮಗಳಿಲ್ಲದ್ದು ಗುಣದೋಷಗಳಿಂದ ರಹಿತವಾದದ್ದು ವಾಕ್ ಮತ್ತು ಮನಸ್ಸುಗಳಿಗೆ ಅಗೋಚರವಾದದ್ದು ನಿರ್ವಿಶೇಷವಾದ ಒಂದೇ ಒಂದು ತತ್ವವೆಂದರೆ ಅದೇ ಶೂನ್ಯ ಎಂಬುದಾಗಿ ಶೂನ್ಯವಾದಿಗಳು ಹೇಳುತ್ತಾರೆ. ಪಾರಮಾರ್ಥಿಕವಾಗಿ ಸತ್ಯಭೂತವಾದ ವಸ್ತುವೆಂದರೆ ಶೂನ್ಯಮಾತ್ರ. ಬೇರೆ ಎಲ್ಲವೂ ಕೂಡ ಮಿಥ್ಯಾಭೂತವಾಗಿದೆ ಎಂಬುದು ಇವರ ಅಭಿಪ್ರಾಯ. ಇಂಥ ಶೂನ್ಯವು ಅಸಂಗವಾಗಿದ್ದರೂ ಸಂವೃತಿಯು ಸಂಬಂಧವನ್ನು ಹೊಂದಿದೆ. 'ಸಂವ್ರೀಯತೇ ಅನೇನ ಸಂಭೃತಿಃ' ಎಂಬ ನಿಷ್ಪತ್ತಿಯಂತೆ ಯಾವುದರಿಂದ ಮುಚ್ಚಲ್ಪಟ್ಟದೆಯೋ ಅಂಥ ಅವಿದ್ಯೆಯು ಸಂವೃತಿಯೆಂದು ಕರೆಸಿಕೊಳ್ಳುತ್ತದೆ. ಇಂಥ ಅವಿದ್ಯೆಯಿಂದ ಸಂಬಂಧವನ್ನು ಹೊಂದಿರುವ ಕಾರಣ ಶೂನ್ಯವು ಜಗದುತ್ಪತ್ತಿಗೆ ಕಾರಣವಾಗುತ್ತದೆ. ಈ ಶೂನ್ಯವು ದೇಶತಃ ಕಾಲತಃ ಹಾಗೂ ವಸ್ತುತಃ ಅಪರಿಮಿತವಾಗಿದೆ. ಇಷ್ಟು ಶೂನ್ಯವಾದಿಗಳ ಅಭಿಪ್ರಾಯ.

**तत्वप्रकाशिका – न च श्रुतिविरोधः । तत्प्रामाण्यानभ्युपगमात् । अतः शून्यादेव जगदुदयसम्भवादीश्वरेणोपयोगाभावात्सुतरामयुक्तं लक्षणमिति प्राप्ते सिद्धान्तयत्सूत्रमुपन्यस्य व्याचष्टे – नेति ।।**

'ಯತೋ ವಾ ಇಮಾನಿ ಜಾಯತೇ' ಇತ್ಯಾದಿ ಶ್ರುತಿ ವಿರೋಧಕ್ಕೂ ಅವಕಾಶವಿಲ್ಲ. ಆಶ್ರುತಿಗಳಿಗೆ ಪ್ರಾಮಾಣ್ಯವನ್ನೇ ನಾವು ಒಪ್ಪುವುದಿಲ್ಲ. ಆದ್ದರಿಂದ ಶೂನ್ಯದಿಂದಲೇ ಜಗತ್ತಿನ ಉತ್ಪತ್ತಿಯು ಸಂಭಾವಿತವಾಗುತ್ತದೆ. ಈಶ್ವರನ ಅವಶ್ಯಕತೆ ಇರುವುದೇ ಇಲ್ಲ. ಆದ್ದರಿಂದ ಈಶ್ವರನ ಜಗತ್ಕಾರಣತ್ವಲಕ್ಷಣವು ಅಯುಕ್ತವಾಗಿದೆ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ನಾಸತೋ ದೃಷ್ಟತ್ವಾತ್' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – न शून्यस्य जगत्कारणत्वं युक्तम् । तत्प्रमाणाभावात् । न तावत्प्रत्यक्षमत्रास्ति। नाप्यनुमानम् । क्वाप्यसतः कारणत्वादर्शनेन दृष्टान्ताभावात्। आगमस्तु नेष्टो दृष्टो वेति भावः ।। २६ ।।**

ಶೂನ್ಯವು ಜಗತ್ತಿಗೆ ಕಾರಣವಾಗಲು ಸಾಧ್ಯವಿಲ್ಲ. ಈ ವಿಷಯದಲ್ಲಿ ಯಾವುದೇ ಪ್ರಮಾಣ ಇರುವುದಿಲ್ಲ. ಪ್ರಕೃತದಲ್ಲಿ ಪ್ರತ್ಯಕ್ಷವು ಪ್ರಮಾಣವಾಗುವುದಿಲ್ಲ. ಅನುಮಾನವೂ ಕೂಡ ಇಲ್ಲ. ಏಕೆಂದರೆ ಅಸತ್‌ಪದಾರ್ಥಕ್ಕೆ ಕಾರಣತ್ವವು ಇದೆ ಎನ್ನಲು ದೃಷ್ಟಾಂತವೇ ಕಂಡಿಲ್ಲ. ಶೂನ್ಯವು ಜಗತ್ತಿಗೆ ಕಾರಣವಾಗಿದೆ ಎಂಬ ಆಗಮವು ನಮಗೆ ಸಮ್ಮತವಾಗಿಲ್ಲ. ಅಂಥ ಆಗಮ ಇರುವುದನ್ನು ನಾವು ಕಂಡೂ ಇಲ್ಲ.

ವಿವರಣೆ - ವಸ್ತುತಸ್ತು ಶೂನ್ಯವಾದಿಗಳು ಶೂನ್ಯವನ್ನು ಅಸತ್‌ಸ್ವರೂಪ ಎಂದು ಹೇಳುವುದಿಲ್ಲ. ಆದರೂ ಯಾವುದೇ ವಿಶೇಷಗಳಿಂದ ರಹಿತವಾಗಿದೆ ಎಂಬ ಮಾತುಗಳಿಂದ ಅಸತ್ತಿನಲ್ಲೇ ಪರ್ಯವಸಾನವಾಗುತ್ತದೆಂಬುದು ಸಿದ್ಧಾಂತಿಗಳ ಅಭಿಪ್ರಾಯ.

ಪ್ರಮಾಣಾಭಾವವೇ ಪ್ರಮೇಯವನ್ನು ಸಾಧಿಸುತ್ತದೆ. ಪ್ರಮಾಣವಿಶೇಷಾಭಾವವು ಪ್ರಮೇಯಾಭಾವವನ್ನು ಸಾಧಿಸುವುದಿಲ್ಲ. ಆದ್ದರಿಂದ ಇದು ಸಾಕ್ಷಾತ್ ಹೇತು ಆಗುವುದಿಲ್ಲ. ಹೇತುಸಾಧಕಹೇತುವಾಗಿದೆ ಎಂಬ ಅಭಿಪಾಯದಿಂದ ಸಾಕ್ಷಾತ್ ಹೇತುವನ್ನು 'ತತ್‌ಪ್ರಮಾಣಾಭಾವಾತ್' ಎಂದು ಟೀಕೆಯಲ್ಲಿ ಅಧ್ಯಹಾರಮಾಡಿದ್ದಾರೆ. ಇದಕ್ಕೆ ಉಪಪಾದಕವಾಗಿ ಸೂತ್ರದಲ್ಲಿರುವ ಹೇತುವನ್ನು 'ನ ತಾವತ್' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಶೂನ್ಯವಾದಿಗಳು ಹೇಳುವ ಆಗಮವು ನಮಗೆ ಇಷ್ಟವಿಲ್ಲ. ನಾವು ಹೇಳುವ ಆಗಮವು ಅವರಿಗೆ ಇಷ್ಟವಿಲ್ಲ. ಮತ್ತು ಅಂಥ ಆಗಮವು ನಮಗೆ ಕಂಡೂ ಇಲ್ಲ. ಹೀಗೆ ವ್ಯಾಖ್ಯಾನ ಮಾಡಿದ್ದರಿಂದ ಸೂತ್ರದಲ್ಲಿ 'ಕಾರಣತ್ವಮ್' ಎಂಬುದನ್ನು ಅಧ್ಯಹಾರ ಮಾಡಿಕೊಳ್ಳಬೇಕು. 'ಪ್ರಮಾಣಾಭಾವಾತ್' ಎಂಬುದನ್ನು ಶೇಷಪೂರಣಮಾಡಿಕೊಳ್ಳಬೇಕು. ಏಕೆ ಪ್ರಮಾಣ ಇಲ್ಲ ? ಎಂದರೆ ಅಸತ್ತಿಗೆ ಕಾರಣತ್ವವು ಪ್ರತ್ಯಕ್ಷದಿಂದ ಕಂಡಿಲ್ಲ. ಅನುಮಾನದಿಂದ ಸಿದ್ಧವಾಗುತ್ತದೆಂದು ಅಂಗೀಕರಿಸಿದರೆ ಅದಕ್ಕೆ ದೃಷ್ಟಾಂತವೇ ಇಲ್ಲ. ಉಭಯಸಂಪ್ರತಿಪನ್ನವಾದ ಆಗಮವು ಇಲ್ಲವೇ ಇಲ್ಲ. ಇಷ್ಟು ಟೀಕೆಯ ಅಭಿಪ್ರಾಯ.

## ಬ್ರಹ್ಮಸೂತ್ರ

**सूत्रम् – उदासीनानामपि चैवं सिद्धिः ।।**

ಒಂದು ವೇಳೆ ಶೂನ್ಯಕ್ಕೆ ಜಗತ್‌ಕಾರಣತ್ವವನ್ನು ಅಂಗೀಕರಿಸಿದರೆ, ಹೇಯಬುದ್ಧಿ ಹಾಗೂ ಉಪಾದೇಯ ಬುದ್ಧಿಗೆ ವಿಷಯವಾಗದ ಗಗನಕುಸುಮವು ಸೌರಭ್ಯ ಎಂಬ ಕಾರ್ಯಕ್ಕೆ ಕಾರಣವಾಗಬೇಕಾದೀತು.

## ಸೂತ್ರದೀಪಿಕಾ

**सूत्रदीपिका –** एवं सत्यसतः कार्योत्पादकत्वेऽङ्गीकृते सति । **उदासीनानां** हेयोपादेयत्वबुद्ध्यविषयाणां गगनकुसुमादीनां सकाशादपि सौरभ्यादिकार्य**सिद्धिः** स्यादित्यर्थः । अन्यथा शून्यादपि कार्योत्पत्तिर्न स्यादिति चशब्दार्थः ।।२।।

ಏವಂ = ಒಂದು ವೇಳೆ ಶೂನ್ಯಕ್ಕೆ ಜಗತ್‌ಕಾರಣತ್ವವನ್ನು ಅಂಗೀಕರಿಸಿದರೆ, ಉದಾಸೀನಾನಾಮಪಿ = ಹೇಯಬುದ್ಧಿಗೆ ಹಾಗೂ ಉಪಾದೇಯಬುದ್ಧಿಗೆ ವಿಷಯವಾಗದ ಗಗನಕುಸುಮಾದಿಗಳಿಂದಲೂ ಸೌರಭ್ಯಾದಿಕಾರ್ಯಗಳ, ಸಿದ್ಧಿಃ = ಸಿದ್ಧಿಯು ಆಗಬೇಕಾದೀತು. ಇಲ್ಲದಿದ್ದರೆ ಶೂನ್ಯದಿಂದಲೂ ಕಾರ್ಯೋತ್ಪತ್ತಿಯು ಸಾಧ್ಯವಾಗುವುದಿಲ್ಲ ಎಂದರ್ಥ. ಅಂದರೆ ಆಕಾಶದಲ್ಲಿರುವ ಕುಸುಮವು ಅಸತ್ಯವಾಗಿದ್ದರೂ ಅದರ ಸುವಾಸನೆಯು ಎಲ್ಲರಿಗೂ ತಿಳಿಯಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। उदासीनानामपि चैवं सिद्धिः ।।२।।**

**असतः कारणत्वे उदासीनानां हेयोपादेयबुद्धिवर्जितानां खपुष्पादीनामपि सकाशात् कार्यसिद्धिः ।**

**ಅನುವಾದ - ಶೂನ್ಯವು ಜಗತ್ತಿಗೆ ಕಾರಣವಾಗುವುದಾದರೆ ಗಗನಕುಸುಮವು ಜಗತ್ತಿಗೆ ಕಾರಣವಾಗಬೇಕಾದೀತು. ಶೂನ್ಯವು ಹೇಗೆ ಹಾನ ಮತ್ತು ಉಪಾದಾನಗಳ ಬುದ್ಧಿಗೆ ದೂರವಾಗಿದೆಯೋ ಅದರಂತೆ ಗಗನಕುಸುಮವು ಕೂಡ ಹಾನ ಮತ್ತು ಉಪಾದಾನಗಳ ಬುದ್ಧಿಗೆ ದೂರವಾಗಿದೆ. ಗಗನ ಕುಸುಮವು ಜಗತ್ತಿಗೆ ಕಾರಣವಲ್ಲವೆನ್ನುವುದಾದರೆ ಶೂನ್ಯವೂ ಕೂಡ ಜಗತ್ತಿಗೆ ಕಾರಣವಾಗುವುದಿಲ್ಲ.**

ಪ್ರತಿಪದಾರ್ಥ -- ಬೇರೆಡೆ ಕಾಣದಿದ್ದರೂ ಶೂನ್ಯವು ಜಗತ್ತಿಗೆ ಕಾರಣವಾಗುತ್ತದೆ ಎಂದರೆ ಏನು ದೋಷ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅಸತಃ = ಶೂನ್ಯಕ್ಕೆ, ಕಾರಣತ್ವೇ = ಜಗತ್ಕಾರಣತ್ವ ಇರುವುದಾದರೆ, ಉದಾಸೀನಾನಾಂ = ಉಪೇಕ್ಷೆಗೆ ಅರ್ಹವಾದ, ಹೇಯೋಪಾದೇಯಬುದ್ಧಿವರ್ಜಿತಾನಾಂ = ಹೇಯತ್ವ ಉಪಾದೇಯತ್ವ ಬುದ್ಧಿಗೆ

ವಿಷಯವಾಗದ, ಖಪುಷ್ಪಾದೀನಾಮಪಿ = ಗಗನಕುಸುಮ ಮುಂತಾದವುಗಳ, ಸಕಾಶಾತ್ = ದೆಸೆಯಿಂದಲೂ, ಕಾರ್ಯಸಿದ್ಧಿಃ = ಜಗತ್ತಿನ ಸೃಷ್ಟಿಕಾರ್ಯವು ಆಗಬೇಕಾದೀತು.

**ಭಾಷ್ಯಮ್ – च शब्दान्न चेदन्यत्रापि न स्यात्, अविशेषात् ।।२।।**

ಅನುವಾದ - ಗಗನ ಕುಸುಮವು ಜಗತ್ತಿಗೆ ಕಾರಣವಾಗುವುದಿಲ್ಲವೆಂದರೆ ಶೂನ್ಯವೂ ಜಗತ್ತಿಗೆ ಕಾರಣವಾಗುವುದಿಲ್ಲ. ಗಗನ ಕುಸುಮಕ್ಕಿಂತ ಹೆಚ್ಚಿನ ವೈಶಿಷ್ಟ್ಯವು ಶೂನ್ಯದಲ್ಲಿರುವುದಿಲ್ಲ.

ಪ್ರತಿಪದಾರ್ಥ -- ನಚೇತ್ = ಗಗನ ಕುಸುಮ ಮುಂತಾದವುಗಳಿಂದ ಕಾರ್ಯವು ಆಗುವುದಿಲ್ಲವೆಂದರೆ, ಅನ್ಯತ್ರಾಪಿ = ಬೇರೆ ಶೂನ್ಯದ ವಿಷಯದಲ್ಲೂ, ನ ಸ್ಯಾತ್ = ಸೃಷ್ಟಿಕಾರ್ಯತ್ವವು ಉಂಟಾಗುವುದಿಲ್ಲ. ಅವಿಶೇಷಾತ್ = ಶೂನ್ಯಕ್ಕೂ ಗಗನ ಕುಸುಮಕ್ಕೂ ಯಾವುದೇ ವಿಶೇಷವಿರುವುದಿಲ್ಲ.

## ತತ್ವಪ್ರಕಾಶಿಕಾ

**तत्वप्रकाशिका – नन्वदृष्टमपि जगत्कारणत्वं शून्यस्याभ्युपगतं चेत्को दोष इत्याशङ्कां परिहरत्सूत्रपन्यस्य व्याचष्टे – उदासीनानामिति ।।**

ಜಗತ್ಕಾರಣತ್ವವು ಅಸತ್‌ಪದಾರ್ಥಕ್ಕೆ ಎಲ್ಲಿಯೂ ಕಂಡಿಲ್ಲ. ಆದರೂ ಕೂಡ ಶೂನ್ಯಕ್ಕೆ ಜಗತ್ಕಾರಣತ್ವವನ್ನು ಅಂಗೀಕಾರ ಮಾಡಿದರೆ ಏನು ದೋಷ ? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಉದಾಸೀನಾನಾಮಪಿ' ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಶೂನ್ಯದಿಂದ ಜಗತ್ತು ಉತ್ಪತ್ತಿ ಆಗುತ್ತದೆಂಬ ವಿಷಯದಲ್ಲಿ ಪ್ರಮಾಣ ಇಲ್ಲವೆಂದು ಹೇಳಲಾಗದು. ಅನುಮಾನವೇ ಪ್ರಮಾಣವಾಗಿದೆ. ದೃಷ್ಟಾಂತ ಇಲ್ಲವೆಂಬ ದೋಷವಿಲ್ಲ. 'ವಿಮತಂ ಸಕಾರಣಕಂ ಕಾರ್ಯತ್ವಾತ್' ಎಂಬ ಅನುಮಾನದಿಂದ ಸಾಮಾನ್ಯವಾಗಿ ಕಾರಣವು ಇದೆ ಎಂದು ಸಿದ್ಧವಾಗಿದೆ. ಅನಂತರ 'ಕಾರಣಂ ಪ್ರಳಯೇ ಅಸದ್ ಭವಿತುಂ ಅರ್ಹತಿ ವಸ್ತುತ್ವಾತ್' ವಸ್ತುವಾದ್ದರಿಂದ ಕಾರಣವು ಪ್ರಳಯಕಾಲದಲ್ಲಿ ಸೃಷ್ಟಿಯಾಗಿರುತ್ತದೆಂದು ಸತ್ವವನ್ನು ನಿಷೇಧ ಮಾಡಿ ಪರಿಶೇಷಾತ್ ಅಸತ್ತೇ ಜಗತ್ಕಾರಣವಾಗಿದೆ ಎಂದು ಸಾಧಿಸಬಹುದು ಎಂಬ ಕಾರಣದಿಂದ ಪೂರ್ವಪಕ್ಷಿಯು ಆಕ್ಷೇಪ ಮಾಡುತ್ತಿದ್ದಾನೆ. (ಭಾವಬೋಧ)

**तत्वप्रकाशिका – यद्यदृष्टमप्यसतः कारणत्वं कल्प्येत । एवं तर्हि खपुष्पादीनामपि सकाशात्सौरभ्यादिसिद्धिः स्यात् । न च साऽभ्युपगन्तुं शक्यते । तेषां हेयोपादेयबुद्धिविषयतावर्जितत्वादिति भावः ।**

ಬೇರೆಲ್ಲೂ ಕಾಣದಿದ್ದರೂ ಕೂಡ ಅಸತ್ ಪದಾರ್ಥವು ಜಗತ್ತಿಗೆ ಕಾರಣವಾಗಿದೆ ಎಂಬುದನ್ನು ಕಲ್ಪನೆ ಮಾಡುವುದಾದರೆ ಗಗನಕುಸುಮದಿಂದಲೂ ಕೂಡ ಸೌರಭ್ಯವು ಸಿದ್ಧವಾಗಬೇಕಾಗುತ್ತದೆ. ಆದರೆ ಅದನ್ನು ಒಪ್ಪಲು ಸಾಧ್ಯವೇ ಇಲ್ಲ. ಗಗನಕುಸುಮ ಮೊದಲಾದ ಅಸತ್‌ಪದಾರ್ಥವು ಸ್ವೀಕಾರಕ್ಕಾಗಲಿ ಪರಿತ್ಯಾಗ ಮಾಡುವುದಕ್ಕಾಗಲಿ ಬುದ್ಧಿಗೆ ವಿಷಯವಲ್ಲ.

**तत्वप्रकाशिका – खपुष्पादीनामकारणत्वेऽपि शून्यादेव जगदुत्पत्तौ को दोष इत्यत आह – चशब्दादिति ।। 'इति सूचित'मिति शेषः । अन्यत्र = शून्यात् । असत्त्वाविशेषादिति भावः ।। २७ ।।**

ಗಗನ ಕುಸುಮಾದಿಗಳು ಸೌರಭ್ಯಾದಿಗಳಿಗೆ ಕಾರಣವಾಗದಿದ್ದರೂ ಶೂನ್ಯವು ಜಗತ್ತಿನ ಉತ್ಪತ್ತಿಗೆ ಕಾರಣದರೆ ಏನು ದೋಷ? ಈ ಪ್ರಶ್ನೆಗೆ 'ಚಶಬ್ದಾತ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಇತಿ ಸೂಚಿತಂ' ಎಂಬುದನ್ನು ಶೇಷ ಪೂರಣಮಾಡಿಕೊಳ್ಳಬೇಕು. 'ಅನ್ಯತ್ರ' ಎಂಬ ಪದಕ್ಕೆ ಶೂನ್ಯದಿಂದಲೂ ಎಂದರ್ಥ. ಗಗನಕುಸುಮಕ್ಕಿಂತ ಶೂನ್ಯದಲ್ಲಿ ಅಸತ್ವವು ವಿಲಕ್ಷಣವಾಗಿರುವುದಿಲ್ಲ ಎಂದಭಿಪ್ರಾಯ.

ವಿವರಣೆ - 'ಉದಾಸೀನಾನಾಮಪಿ' ಇತ್ಯಾದಿ ಸೂತ್ರದಲ್ಲಿ 'ಚ' ಶಬ್ದವು ಯುಕ್ತಿಯನ್ನು ಸೂಚನೆ ಮಾಡುತ್ತಿದೆ. ಗಗನಕುಸುಮಸೌರಭ್ಯ ಎಂಬ ಕಾರ್ಯವು ಸಿದ್ಧವಾಗದಿದ್ದರೆ ಶೂನ್ಯದಿಂದಲೂ ಕೂಡ ಜಗದುತ್ಪತ್ತಿಯನ್ನು ಒಪ್ಪಬಾರದು. ಏಕೆಂದರೆ ಗಗನಕುಸುಮಕ್ಕಿಂತ ಶೂನ್ಯದಲ್ಲಿ ಯಾವುದೇ ವಿಲಕ್ಷಣ್ಯವಿಲ್ಲ.

## ಬ್ರಹ್ಮಸೂತ್ರ

**सूत्रम् – नाभाव उपलब्धेः ।।**

ಸಮಸ್ತ ಜಗತ್ತು ಶೂನ್ಯದಲ್ಲಿ ಆರೋಪಿತವೆಂದು ಹೇಳಬಾರದು. ನಾವು ಅನುಭವಿಸುತ್ತಿರುವ ಜಗತ್ತು ಸತ್ಯವಾಗಿದೆ ಎಂದು ಸಿದ್ಧವಾಗಿದೆ.

## ಸೂತ್ರದೀಪಿಕಾ

**सूत्रदीपिका –** जगत् अभावः असत् न । कुतः? उपलब्धेः सदिति प्रतीयमानत्वादित्यर्थः ।।३।।

ಜಗತ್ = ಸಮಸ್ತ ಜಗತ್ತು, ಅಭಾವಃ ನ = ಶೂನ್ಯದಲ್ಲಿ ಆರೋಪಿತವಲ್ಲ. ಏಕೆಂದರೆ ಉಪಲಬ್ಧೇಃ = ಸತ್ಯವಾಗಿದೆ ಎಂದು ಪ್ರತ್ಯಕ್ಷಸಿದ್ಧವಾಗಿರುವುದರಿಂದ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। नाभाव उपलब्धेः ।।३।।**

**न च जगदेव शून्यमिति वाच्यम् । दृष्टत्वात् ।।३।।**

ಅನುವಾದ - ಜಗತ್ತೇ ಶೂನ್ಯವಾಗಿ ಕಾಣಿಸುತ್ತದೆಂದು ಹೇಳಬಾರದು. ಏಕೆಂದರೆ ಜಗತ್ತು ಸತ್ಯವೆಂದು ಅನುಭವಸಿದ್ಧವಾಗಿದೆ.

ಪ್ರತಿಪದಾರ್ಥ -- ಶುಕ್ತಿಯು ರಜತವಾಗಿ ತೋರುವಂತೆ ಶೂನ್ಯವೇ ಜಗತ್ ರೂಪದಲ್ಲಿ ಕಾಣಿಸುತ್ತಿದೆ ಎಂಬ ಆಶಂಕೆಯನ್ನು ಪರಿಹರಿಸುತ್ತಿದ್ದಾರೆ. ಶೂನ್ಯಮೇವ = ಶೂನ್ಯವೇ,

ಜಗದೇವ = ಜಗದಾಕಾರವಾಗಿ ಕಾಣಸುತ್ತಿದೆ. ಇತಿ = ಹೀಗೆ, ನ ಚ ವಾಚ್ಯಮ್= ಆಕ್ಷೇಪ ಮಾಡಬಾರದು. ಏಕೆಂದರೆ ದೃಷ್ಟತ್ವಾತ್ = ಪ್ರತಿಕ್ಷಣವು ಸತ್ಯವೆಂದು ಅನುಭವ ಸಿದ್ಧವಾಗಿರುವುದರಿಂದ.

## ತತ್ವಪ್ರಕಾಶಿಕಾ

**तत्वप्रकाशिका – भवेदेतदूषणं यदि शून्यतत्वात्परमार्थतो मृदो घट इव जगदुत्पद्येत । नैतदस्ति। संवृतिवशाच्छून्यमेव जगदाकारेण विवर्तत इत्यभ्युपगमात्। न हि शून्ये जगदध्यस्तमित्यत्रोक्तदोषप्रसरः । असत एव रजताकारेण प्रतीयमानत्वादित्याशङ्कां परिहरत्सूत्रं पठित्वा व्याचष्टे ।। नेति ।।**

ನೀವು ಮಾಡಿದ ಆಕ್ಷೇಪವು ಯುಕ್ತವಾಗುತ್ತಿತ್ತು. ಒಂದುವೇಳೆ ಶೂನ್ಯತತ್ವದಿಂದ ಪಾರಮಾರ್ಥಿಕವಾಗಿ ಮಣ್ಣಿನಿಂದ ಘಟವು ಹುಟ್ಟುವಂತೆ ಜಗತ್ತು ಹುಟ್ಟುತ್ತದೆ ಎಂದು ಹೇಳಿದ್ದರೆ; ಆದರೆ ನಾವು ಹಾಗೆ ಹೇಳುತ್ತಿಲ್ಲ. ಸಂವೃತಿಯ ಅಧೀನವಾಗಿ ಶೂನ್ಯವೇ ಜಗತ್ತಿನ ಆಕಾರದಲ್ಲಿ ವಿವರ್ತವಾಗುತ್ತಿದೆ ಎಂದು ಅಂಗೀಕರಿಸಿದ್ದೇವೆ. ಶೂನ್ಯದಲ್ಲಿ ಜಗತ್ತು ಆರೋಪಿತ ಎಂದಾಗ ಹಿಂದೆ ಹೇಳಿದ ದೋಷಕ್ಕೂ ಅವಕಾಶವಿಲ್ಲ. ಅಸತ್ತೇ ರಜತಾಕಾರದಿಂದ ಪ್ರತೀಯಮಾನವಾಗುವುದು ಕಂಡಿದೆ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ನಾಭಾವ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಶೂನ್ಯವೇ ಜಗದಾಕಾರದಿಂದ ಪರಿಣಾಮ ಹೊಂದುತ್ತದೆಂದು ಹೇಳುವ ಇವರು ನಿರಧಿಷ್ಠಾನಭ್ರಮೆಯನ್ನು ಒಪ್ಪುತ್ತಾರೆ. ಆದ್ದರಿಂದ ಶೂನ್ಯದಲ್ಲಿ ಜಗತ್ತು ಆರೋಪಿತವಾಗಿದೆ ಎಂಬುದು ಇವರ ವಾದ. ಇದಕ್ಕೆ ಅಧಿಷ್ಠಾನದ ಅವಶ್ಯಕತೆ ಇರುವುದಿಲ್ಲ. 'ಅಸತ್ತಾದ ಶುಕ್ತಿಯೇ ರಜತರೂಪದಲ್ಲಿ ಪರಿಣಾಮ ಹೊಂದಿದಂತೆ ಇಲ್ಲೂ ಕೂಡ ತಿಳಿಯಬೇಕು' ಎಂಬುದು ಪೂರ್ವಪಕ್ಷಿವಾದಿಗಳ ಸಮರ್ಥನೆ.

**तत्वप्रकाशिका – शून्यमेव जगदाकारेणावभाति न परमार्थतो जगदस्तीत्ययुक्तम् सदिति दृष्टत्वादित्यर्थः । न चासदेव रजताकारेणावभातीति युक्तम् । नेदं रजतं किं तु शुक्तिरेवेति बाधविरोधात् ।। २८ ।।**

ಶೂನ್ಯವೇ ಜಗತ್ತಾಗಿ ತೋರುತ್ತದೆ. ಪಾರಮಾರ್ಥಿಕವಾಗಿ ಶೂನ್ಯ ಎಂಬುದೇ ಇಲ್ಲ. ಎಂಬುದು ಅಯುಕ್ತ. ಏಕೆಂದರೆ ಜಗತ್ತು ಸತ್ಯವೆಂದು ತಿಳಿಯುತ್ತಿದೆ.

ಅಸತ್ತೇ ರಜತಾಕಾರದಲ್ಲಿ ತೋರುತ್ತಿದೆಯೆಂದು ಹೇಳಬಾರದು. 'ನೇದಂ ರಜತಂ ಕಿಂತು ಶುಕ್ತಿರೇವ' ಇದು ಬೆಳ್ಳಿ ಅಲ್ಲ. ಕಪ್ಪೇಚಿಪ್ಪೇ ಆಗಿದೆ ಎಂಬ ಬಾಧಕಜ್ಞಾನ ಇರುವುದರಿಂದ ಅಸತ್ತು ರಜತರೂಪದಲ್ಲಿ ಪರಿಣಾಮವನ್ನು ಹೊಂದಿಲ್ಲ.

## ಬ್ರಹ್ಮಸೂತ್ರ

**सूत्रम् – वैधर्म्याच्च न स्वप्नादिवत् ।।**

ಸ್ವಪ್ನವು ಹೇಗೆ ಮಿಥ್ಯಾಭೂತವೋ, ಅದರಂತೆ ಜಗತ್ತೂ ಕೂಡ ಮಿಥ್ಯಾಭೂತವಾಗಿದೆ ಎಂದು ಹೇಳಬಾರದು. ಏಕೆಂದರೆ ಸ್ವಪ್ನದ ಅನಂತರ ಬಾಧಜ್ಞಾನವು ಬರುವಂತೆ ಇಲ್ಲಿಗೆ ಜಗತ್ತಿನ ವಿಷಯದಲ್ಲಿ ಬಾಧಜ್ಞಾನವನ್ನು ಹೇಳಲು ಸಾಧ್ಯವಿಲ್ಲ.

## ಸೂತ್ರದೀಪಿಕಾ

**सूत्रदीपिका –** जगत् स्वप्नादिवत् स्वाप्नवस्तुन्यारोपितजाग्रत्वादिवदप्यसन्न । कुतः? वैधर्म्यात् स्वाप्नजाग्रत्वस्य बाध्यत्वाख्यविलक्षणधर्मवत्त्वात् । जगति च तदभावादित्यर्थः ।।४।।

ಜಗತ್ = ಸಮಸ್ತ ಜಗತ್ತು, ಸ್ವಪ್ನಾದಿವತ್ = ಸ್ವಾಪ್ನವಸ್ತುಗಳಲ್ಲಿ ಜಾಗ್ರತ್ ಪದಾರ್ಥಗಳು ಆರೋಪಿತವಾದಂತೆ, ನ = ಅಸತ್ ಎಂದು ಹೇಳಬಾರದು. ಏಕೆಂದರೆ ವೈಧರ್ಮ್ಯಾಚ್ಚ = ಎಚ್ಚರವಾದ ಮೇಲೆ ಸ್ವಪ್ನದಲ್ಲಿ ಕಂಡ ಪದಾರ್ಥಗಳು ಜಾಗ್ರದವಸ್ಥೆಯಲ್ಲಿ ಇರುವವುಗಳಲ್ಲ ಎಂಬ ಬಾಧಜ್ಞಾನವು ಬರುತ್ತದೆ. ಅದಕ್ಕಿಂತ ವೈಲಕ್ಷಣ್ಯವು ಜಗತ್ತಿನಲ್ಲಿ ಇರುವುದರಿಂದ ಜಗತ್ತನ್ನು ಅಸತ್ಯವೆಂದು ಹೇಳಬಾರದು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅಸದಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। वैधर्म्याच्च न स्वप्नादिवत् ।।४।।**

**न च दृष्टस्यापि स्वप्नादिवदभावः । तस्योत्तरकाले स्वप्नोऽयं नायं सर्प इत्याद्यनुभवात् । न चात्र तादृशं प्रमाणमस्ति ।।४।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये असदधिकरणम् ।। ८ ।।**

ಅನುವಾದ - ಜಗತ್ತು ಸತ್ಯವೆಂದು ತಿಳಿಯಲ್ಪಟ್ಟರೂ ಸ್ವಾಪ್ನಪದಾರ್ಥದಂತೆ ಅಸತ್ಯವೇಕಾಗಿರಬಾರದು? ಹೀಗೆ ಪ್ರಶ್ನಿಸಬಾರದು. ಎಚ್ಚರವಾದ ಮೇಲೆ ಇದು ಸ್ವಪ್ನ ಹೊರತು ಸರ್ಪವಲ್ಲ ಎಂಬ ಬಾಧಜ್ಞಾನ ಬರುತ್ತದೆ. ಆದರೆ ಇಲ್ಲಿ ಹಾಗೆ ಬಾಧಜ್ಞಾನ ಬರುತ್ತಿಲ್ಲ. ಆದ್ದರಿಂದ ಜಗತ್ತನ್ನು ಅಸದ್‌ರೂಪ ಎಂದು ಹೇಳಬಾರದು. ಆದರೆ ಪ್ರಕೃತ ಅಂಥ ಯಾವುದೇ ಪ್ರಮಾಣವಿರುವುದಿಲ್ಲ.

ಪ್ರತಿಪದಾರ್ಥ -- ಜಗತ್ತು ಸತ್ಯವಾಗಿ ಕಂಡರೂ ಸ್ವಾಪ್ನಪದಾರ್ಥದಂತೆ ಏಕೆ ಅಸತ್ಯವಾಗಬಾರದು ? ಎಂಬ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ. ದೃಷ್ಟಸ್ಯಾಪಿ = ಜಗತ್ತು ಸತ್ಯವೆಂದು ಕಾಣಸುತ್ತಿದ್ದರೂ, ಸ್ವಾಪ್ನಾದಿವತ್ = ಸ್ವಾಪ್ನಪದಾರ್ಥಗಳಂತೆ, ಅಭಾವಃ = ಇರುವುದಿಲ್ಲ, ಹೀಗೆ ನಚ = ಹೇಳಬಾರದು. ಏಕೆಂದರೆ ತಸ್ಯ = ಆ ಸ್ವಾಪ್ನಪದಾರ್ಥವು, ಉತ್ತರಕಾಲೇ = ಎಚ್ಚರವಾದ ಮೇಲೆ, ಸ್ವಪ್ನೋಽಯಂ = ಇದು ಸ್ವಪ್ನ, ನಾಯಂ ಸರ್ಪಃ = ಹೊರತು ಸರ್ಪವಲ್ಲ, ಇತ್ಯಾದ್ಯನುಭವಾತ್ = ಇದೇ ಮೊದಲಾದ ಅನುಭವವು ಬರುತ್ತಾದ್ದರಿಂದ ಅತ್ರ = ಜಗತ್‌ವಿಷಯದಲ್ಲಿ, ತಾದೃಶಂ = ಉತ್ತರಕಾಲದಲ್ಲಿ ಬಾಧವಿದೆ ಎನ್ನಲು, ಪ್ರಮಾಣಂ = ಪ್ರಮಾಣವು, ನಾಸ್ತಿ = ಇರುವುದಿಲ್ಲ.

ಇಲ್ಲಿಗೆ ಅಸದಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – ननु सदिति दृश्यमानस्य स्वप्नस्य रज्जुभुजङ्गादेश्चासत्त्वं दृष्टम् अतो जगतः सत्त्वेन दृष्टस्याप्यसत्त्वं किं न स्यादित्याशङ्कां परिहरत्सूत्रमुपन्यस्य व्याचष्टे ।। वैधर्म्याच्चेति ।।**

ಸತ್ ಎಂದು ಕಾಣುವ ಸ್ವಪ್ನವು ಮತ್ತು ಹಗ್ಗದಲ್ಲಿ ಕಾಣುವ ಸರ್ಪವು ಅಸತ್ತಾಗಿರುವುದು ಕಂಡಿದೆ. ಅದರಂತೆ ಅಸತ್ ಎಂದೇ ಕಾಣುವ ಈ ಜಗತ್ತೂ ಕೂಡ ಏಕೆ ಅಸತ್ ಆಗಬಾರದು ! ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ವೈಧರ್ಮ್ಯಾಚ್ಚ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಸ್ವಪ್ನಪದಾರ್ಥದಲ್ಲಿ ಸತ್ತಾಭ್ರಮವಿದ್ದಂತೆ ರಜ್ಜುಭುಜಂಗಾದಿಗಳಲ್ಲಿ ಸತ್ತಾಭ್ರಮ ಇದ್ದಂತೆ ಜಗತ್ತಿನಲ್ಲಿರುವ ಸತ್ತಾಪ್ರತೀತಿಯೂ ಕೂಡ ಏಕೆ ಭ್ರಮ ಎನಿಸಬಾರದು. ಸತ್ ಆಗಿರುವ ಪದಾರ್ಥಕ್ಕೆ ಯಾವುದಾದರು ಒಂದು ಅಧಿಷ್ಠಾನವನ್ನು ಪರಿಕಲ್ಪನೆ ಮಾಡಿ ಭ್ರಾಂತಿ ಎಂದು ಹೇಳಿದರೆ ಏನು ತೊಂದರೆ! ಎಂಬುದಾಗಿ ಪೂರ್ವಪಕ್ಷಿಯು 'ನನು ಸದಿತಿ' ಇತ್ಯಾದಿಯಾಗಿ ಆಕ್ಷೇಪ ಮಾಡುತ್ತಿದ್ದಾನೆ. (ಗುರ್ವರ್ಥದೀಪಿಕಾ)

**तत्वप्रकाशिका – न जगतः सत्त्वेनोपलब्धस्यापि स्वप्नादिवदसत्त्वं वाच्यम् । स्वप्नस्यासत्त्वस्यैवाभावात् । स्वप्नजाग्रत्त्वं दृष्टान्त इति चेन्न । तथापि न तद्वदसत्त्वं जगतः । ततो जाग्रत्त्वादेः 'स्वप्न एवायं न जाग्रत्', 'रज्जुरियं न सर्पः' इत्यादिबाधकविषयत्वेन वैलक्षण्यादित्याशयः ।**

ಜಗತ್ತು ಸತ್ಯವಾಗಿ ಕಂಡರೂ ಕೂಡ ಸ್ವಪ್ನಾದಿಗಳಂತೆ ಅಸತ್ಯವಾಗಬಹುದೆಂದು ಹೇಳಬಾರದು. ಏಕೆಂದರೆ ದೃಷ್ಟಾಂತವನ್ನಾಗಿ ನೀಡಿದ ಸ್ವಪ್ನದಲ್ಲಿ ಅಸತ್ವವೇ ಇರುವುದಿಲ್ಲ. ಸ್ವಪ್ನದಲ್ಲಿ ಕಾಣುವ

ಜಾಗ್ರತ್ತ್ವವು ದೃಷ್ಟಾಂತ ಎನ್ನುತ್ತೇವೆ ಎನ್ನಬಾರದು. ಏಕೆಂದರೆ ಜಗತ್ತು ಅದರಂತೆ ಅಸತ್ಯವೆನ್ನುವುದು ಕೂಡುವುದಿಲ್ಲ. ಸ್ವಪ್ನದಲ್ಲಿರುವ ಜಾಗ್ರತ್ವಕ್ಕೂ ಜಗತ್ತಿಗೂ ವ್ಯತ್ಯಾಸವಿದೆ. 'ನಾನು ಇಲ್ಲಿಯ ತನಕ ಕಂಡದ್ದು ಕನಸೇ ಬಾಹ್ಯಪದಾರ್ಥವಲ್ಲ', ಮತ್ತು 'ನಾನು ಕಂಡದ್ದು ಹಗ್ಗವೇ ಹೊರತು ಸರ್ಪವಲ್ಲ' ಎಂಬ ಬಾಧಕಜ್ಞಾನವು ಅನಂತರಕ್ಷಣದಲ್ಲಿ ಬರುತ್ತದೆ. ಆದರೆ ಜಗತ್ತಿನಲ್ಲಿ ಈ ರೀತಿ ವೈಲಕ್ಷಣ್ಯಜ್ಞಾನವು ಬರುತ್ತಿಲ್ಲ.

**ತत्वप्रकाशिका – प्रकृतेऽपि बाधकादसत्त्वं किं न स्यादित्याशङ्कां चशब्दभिप्रायेण परिहरति ।। न चेति ।।**

**तदेवं शून्यमतस्याप्ययुक्तत्वायुक्तमीश्वरस्य जगत्कारणत्वलक्षणमिति सिद्धम् ।। २९ ।।**

ಜಗತ್ತಿನ ವಿಷಯದಲ್ಲಿ ಬಾಧಕ ಇರುವುದರಿಂದ ಅಸತ್ವವನ್ನು ಏಕೆ ಹೇಳಬಾರದು? ಎಂಬ ಆಶಂಕೆಯನ್ನು ಸೂತ್ರದ 'ಚ' ಶಬ್ದಾರ್ಥದಿಂದ ಪರಿಹರಿಸಲು 'ನ ಚ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. ಹೀಗೆ ಶೂನ್ಯಮತವು ಅಯುಕ್ತವಾದ್ದರಿಂದ ಭಗವಂತನಿಗೆ ಹೇಳಲ್ಪಟ್ಟ ಜಗತ್ಕಾರಣತ್ವ ಲಕ್ಷಣವು ನಿರ್ದುಷ್ಟವೆಂದು ಸಿದ್ಧವಾಯಿತು.

ವಿವರಣೆ - ಈ ಅಧಿಕರಣದಲ್ಲಿ ಒಟ್ಟು ನಾಕು ಸೂತ್ರಗಳಿವೆ. ಪ್ರಥಮಸೂತ್ರದಲ್ಲಿ 'ಶೂನ್ಯವು ಜಗತ್ಕಾರಣ ಆಗುವುದಿಲ್ಲ' ಎನ್ನಲು ಪ್ರಮಾಣಾಭಾವವನ್ನು ಹೇತುವನ್ನಾಗಿ ಹೇಳಿದರು. ಅದಕ್ಕೆ ಸಾಧಕವಾಗಿ ಇತರ ಪ್ರಮಾಣಕ್ಕೆ ಮೂಲಭೂತವಾದ ಪ್ರತ್ಯಕ್ಷಾದಿಗಳು ಇರುವುದಿಲ್ಲವೆಂದು ಹೇಳಲಾಯಿತು. ಎರಡನೆಯ ಸೂತ್ರದಲ್ಲಿ ಶೂನ್ಯವು ಜಗತ್ಕಾರಣವಾದರೆ ಪರಾಭಿಮತವಾದ ಅನುಮಾನಕ್ಕೆ ತರ್ಕಪರಾಹತಿಯನ್ನು ಹೇಳಿದರು. ಮೃದ್‌ಘಟಾದಿಗಳಂತೆ ಶೂನ್ಯ ಮತ್ತು ಪ್ರಪಂಚಗಳಿಗೆ ಕಾರ್ಯಕಾರಣಭಾವವನ್ನು ಅಂಗೀಕರಿಸಿದರೆ ಅದೃಷ್ಟವಿರೋಧ ಬರುತ್ತದೆ. 'ಶೂನ್ಯವೇ ಜಗದಾಕಾರದಿಂದ ಕಾಣಿಸುತ್ತದೆ. ಪಾರಮಾರ್ಥಿಕವಾಗಿ ಜಗತ್ತು ಇರುವುದಿಲ್ಲ' ಎಂದು ಅಂಗೀಕರಿಸಿದರೆ ಹಿಂದಿನ ದೋಷ ಬರುವುದಿಲ್ಲ ಎಂಬ ಆಶಂಕೆಯ ಪರಿಹಾರಕ್ಕಾಗಿ ಮೂರನೆಯ ಸೂತ್ರದಲ್ಲಿ ಜಗತ್ತಿಗೆ ಅಸತ್ವವನ್ನು ಅಂಗೀಕರಿಸಿದರೆ 'ಸತ್' ಎಂಬ ಪ್ರತ್ಯಕ್ಷವಿರೋಧವು ಬರುತ್ತದೆಂದು ಹೇಳಲಾಯಿತು. ಪ್ರಪಂಚ ಸತ್ವಗ್ರಾಹಿಯಾದ ಪ್ರತ್ಯಕ್ಷಕ್ಕೆ ಸ್ವಪ್ನಾದಿ ಪ್ರತೀತಿಯಂತೆ ಭ್ರಾಂತಿತ್ವಶಂಕೆಯನ್ನು ನಿರಾಕರಣೆ ಮಾಡುವುದಕ್ಕಾಗಿ ನಾಕನೆಯ ಸೂತ್ರದಲ್ಲಿ ಬಾಧಕಸದ್‌ಭಾವ ಎಂಬ ವೈಲಕ್ಷಣ್ಯವನ್ನು ಹೇಳಲಾಯಿತು. ಹೀಗೆ ಸೂತ್ರಗಳ ಆ ಗತಿಕ್ರಮವು ಸ್ವರಸವಾಗಿದೆ.

ಇಲ್ಲಿಗೆ ತತ್ತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅಸದಧಿಕರಣ ಮುಗಿಯಿತು.

ಅಸದಧಿಕರಣ

(೨-೨-೮)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## असदधिकरणम्

### ಶೂನ್ಯಮತ ನಿರಾಕರಣೆಗೆ ಅಸದಧಿಕರಣ

**नासतोऽदृष्टत्वात् ॥ सौत्रस्य ''अदृष्टत्वात्'' इत्यस्य शून्यकारणत्वस्याप्रत्यक्षत्वादिति असति कारणत्वस्य क्वाप्यननुभावादिति असत्कारणत्व आगमस्यादृष्टत्वादिति त्रेधाऽर्थोऽभिप्रेत इति भावेनाह – न तावत्प्रत्यक्षमित्यादिना ॥**

ಸೂತ್ರದಲ್ಲಿರುವ 'ಅದೃಷ್ಟತ್ವಾತ್' ಎಂಬ ಪದಕ್ಕೆ ಮೂರು ರೀತಿ ಅರ್ಥ ತಿಳಿಯಬೇಕು. ಶೂನ್ಯವು ಜಗತ್‌ಕಾರಣ ಎಂಬ ವಿಷಯದಲ್ಲಿ ಪ್ರತ್ಯಕ್ಷ ಪ್ರಮಾಣವಿರಲು ಸಾಧ್ಯವಿಲ್ಲ ಏಕೆಂದರೆ, ಶೂನ್ಯವು ಪ್ರತ್ಯಕ್ಷಗೋಚರ ಅಲ್ಲ. ಅನುಮಾನವೂ ಪ್ರಮಾಣವಾಗಲು ಸಾಧ್ಯವಿಲ್ಲ ಏಕೆಂದರೆ, ಶೂನ್ಯವು ಅಸತ್ ಆಗಿದೆ. ಅಸತ್ತಿನಲ್ಲಿ ಕಾರಣತ್ವವು ಎಲ್ಲಿಯೂ ಅನುಭವಕ್ಕೆ ಬಂದಿಲ್ಲ. ಅಂದರೆ ಅನುಮಾನಕ್ಕೆ ಪ್ರತ್ಯಕ್ಷಬಾಧ ಎಂದರ್ಥ. ಇನ್ನು ಶೂನ್ಯವು ಜಗತ್‌ಕಾರಣ ಎಂದು ಹೇಳುವ ಯಾವ ಆಗಮವೂ ಗೋಚರವಾಗುತ್ತಿಲ್ಲ. ಬೌದ್ಧಾಗಮದಲ್ಲಿ ಹೇಳಿದ್ದರೂ ಅದು ನಮಗೆ ಅಪ್ರಮಾಣ. ಇಷ್ಟು ಅಭಿಪ್ರಾಯದಿಂದ ಟೀಕಾದಲ್ಲಿ 'ನ ತಾವತ್ಪ್ರತ್ಯಕ್ಷಮಿತ್ಯಾದಿನಾ' ಎಂಬುದಾಗಿ ಹೇಳಿದ್ದಾರೆ.

**भाष्ये सौत्रोदासीनशब्दव्याख्यानरूपं ''हेयोपादेयबुद्धिवर्जितानाम्'' इति हेतुगर्भविशेषणमयुक्तम् ।**

ಭಾಷ್ಯದಲ್ಲಿ ಸೂತ್ರದಲ್ಲಿರುವ (ಉದಾಸೀನಾನಾಮಪಿ ಚೈವಂ ಸಿದ್ಧಿಃ) 'ಉದಾಸೀನ' ಎಂಬ ಶಬ್ದಕ್ಕೆ ಹೇಯೋಪಾದೇಯವರ್ಜಿತ ಎಂಬ ಅರ್ಥವನ್ನು ಹೇಳಿದ್ದಾರೆ. ಇದು ಹೇತುಗರ್ಭವಿಶೇಷಣ. ಅಂದರೆ, ಆಕಾಶಕುಸುಮಾದಿಗಳು ಯಾವುದೇ ಕಾರ್ಯಕ್ಕೂ ಕಾರಣಗಳಾಗುವುದಿಲ್ಲ ಏಕೆಂದರೆ, ಅವುಗಳಲ್ಲಿ ಹೇಯೋಪಾದೇಯ ಬುದ್ಧಿ ಇಲ್ಲವಾದ್ದರಿಂದ ಎಂದರ್ಥ. ಹೇಯಬುದ್ಧಿ ಎಂದರೆ, ಮುಳ್ಳು, ವಿಷ

ಇತ್ಯಾದಿಗಳಲ್ಲಿ ಬರುವ 'ಬೇಡ' ಎಂಬ ಬುದ್ಧಿ. ಉಪಾದೇಯಬುದ್ಧಿ ಎಂದರೆ ಘಟ ಪಟಗಳಲ್ಲಿ ಬರುವ 'ಬೇಕು' ಎಂಬ ಬುದ್ಧಿ.

**तद्वर्जितानामपि तन्त्वादीनां हेतुत्वादित्याशङ्क्य तद्बुद्धिविषयतावर्जितत्वं भाष्ये विवक्षितम् । तन्त्वादयश्च तद्बुद्धिविषया एवेति न दोष इत्याह – हेयोपादेय बुद्धिविषयतावर्जितत्वादिति ।।**

'ಹೇಯೋಪಾದೇಯಬುದ್ಧಿವರ್ಜಿತ' ಎಂದಷ್ಟೇ ಹೇಳಿದರೆ ಆಗ ನೂಲು ಮೊದಲಾದವುಗಳಲ್ಲೂ ಜಡವಾದ್ದರಿಂದ ಹೇಯೋಪಾದೇಯಬುದ್ಧಿ ಇಲ್ಲ. ಆದರೆ, ಅವೂ ಕೂಡ ಕಾರಣಗಳೇ ಆಗಿವೆ. ಹಾಗಾಗಿ ವ್ಯಭಿಚಾರ ಬರುತ್ತದೆ. ಆದ್ದರಿಂದಲೇ ಟೀಕಾದಲ್ಲಿ ಈ ಶಬ್ದಕ್ಕೆ 'ಹೇಯೋಪಾದೇಯ ಬುದ್ಧಿವಿಷಯತಾವರ್ಜಿತತ್ವಂ' ಎಂಬರ್ಥವನ್ನೂ ಹೇಳಿದ್ದಾರೆ. ನೂಲು ಮೊದಲಾದವುಗಳಲ್ಲಿ ಹೇಯೋಪಾದೇಯ ಬುದ್ಧಿ ಇಲ್ಲದಿದ್ದರೂ ಹೇಯೋಪಾದೇಯಬುದ್ಧಿವಿಷಯತ್ವ ಬಂದೇ ಬರುತ್ತದೆ. ನೂಲು ಕೂಡ ಉಪಾದೇಯಬುದ್ಧಿ ವಿಷಯವಾಗಿದೆ.

**भाष्यस्थं खपुष्पाद्यन्यबौद्धाभिमतशून्यप्रतिपादकं ''अन्यत्र'' इति पदं ''कार्यसिद्धिः'' इत्यनेनानुषक्तेनान्वयार्थं पञ्चम्यर्थत्वेन व्याचष्टे ।। अन्यत्र शून्यादिति ।।**

ಭಾಷ್ಯದಲ್ಲಿರುವ 'ಅನ್ಯತ್ರ' ಎಂಬ ಪದವು ಬೌದ್ಧರಿಗೆ ಅಭಿಮತವಾದ ಶೂನ್ಯಪ್ರತಿಪಾದಕ. ಅದು ಖಪುಷ್ಪ ಮೊದಲಾದುದರಿಂದ ಭಿನ್ನ. ಬೌದ್ಧರು ಶೂನ್ಯವನ್ನು ಪರಮಾರ್ಥಸತ್ ಎಂದು ಹೇಳಿದ್ದಾರೆ. ಈ 'ಅನ್ಯತ್ರ' ಎಂಬ ಪದವು ಹಿಂದಿನ ವಾಕ್ಯದಿಂದ ಅನುಷಕ್ತವಾದ 'ಕಾರ್ಯಸಿದ್ಧಿ' ಎಂಬ ಪದದೊಡನೆ ಅನ್ವಯವಾಗುತ್ತದೆ. ಆದ್ದರಿಂದಲೇ ಟೀಕಾದಲ್ಲಿ 'ಅನ್ಯತ್ರ' ಎಂಬ ಪದಕ್ಕೆ ಪಂಚಮೀವಿಭಕ್ತಿಯುಕ್ತವಾಗಿ ವ್ಯಾಖ್ಯಾನ ಮಾಡುತ್ತಾ 'ಶೂನ್ಯಾತ್' ಎಂದಿದ್ದಾರೆ. ಹೀಗೆ ಮಾಡದಿದ್ದರೆ 'ಶೂನ್ಯದಲ್ಲಿ ಕಾರ್ಯಸಿದ್ಧಿ' ಎಂದರ್ಥವಾಗುತ್ತಿತ್ತು.

**यदत्रोक्तमुभाभ्यां ''समुदाय इत्याद्युदासीनानामित्यन्तं सूत्रदशकमेकमधिकरणम् । वैभाषिकसौत्रान्तिकमतान्तरनिरासकमिति तन्न ।**

ಶಂಕರ ಹಾಗೂ ರಾಮಾನುಜ ಇವರಿಬ್ಬರೂ ''ಸಮುದಾಯ ಉಭಯಹೇತುಕೇಪಿ'' ಎಂಬ ಸೂತ್ರದಿಂದ ಆರಂಭಿಸಿ 'ಉದಾಸೀನಾನಾಮಪಿ..' ಎಂಬ ಸೂತ್ರದವರೆಗೆ ಹತ್ತು ಸೂತ್ರಗಳು ಸೇರಿ ಒಂದೇ ಅಧಿಕರಣ ಎಂದು ಹೇಳಿದ್ದಾರೆ. ಈ ಅಧಿಕರಣದಲ್ಲಿ ವೈಭಾಷಿಕ ಹಾಗೂ ಸೌತ್ರಾಂತಿಕ ಎಂಬ ಇನ್ನೆರಡು ಮತಗಳು ನಿರಾಕರಣೆ ಮಾಡಲಾಗಿದೆ ಎಂದಿದ್ದಾರೆ. ಇದು ತಪ್ಪು.

**मम रीत्या ''नासत'' इत्यादि सूत्रचतुष्टयस्यावश्यनिरसनीयशून्यवाद-निरासकत्वेन भिन्नाधिकरणत्वसम्भवे एकत्वायोगात् ।**

ನಮ್ಮ ಪ್ರಕಾರ ''ನಾಸತೋಽದೃಷ್ಟತ್ವಾತ್' ಎಂಬ ಸೂತ್ರದಿಂದ ನಾಕು ಸೂತ್ರಗಳು ಒಂದು ಅಧಿಕರಣ ಎಂದು ಹೇಳಿ ಅದರಲ್ಲಿ ಅವಶ್ಯವಾಗಿ ನಿರಾಕರಿಸಲೇಬೇಕಾದ ಶೂನ್ಯವಾದವನ್ನು ನಿರಾಕರಿಸಲು ಬರುವಾಗ, ಒಂದೇ ಅಧಿಕರಣ ಎಂದು ಹೇಳುವುದು ಕೂಡುವುದಿಲ್ಲ.

**यत्त्वन्य आहुः योऽयमणुहेतुको भूतभौतिक (शरीर) रूपो नदीसमुद्रादिर्बाह्यसंघातो यश्च चित्तचैत्यात्मक आध्यात्मिकस्संघातस्तस्मिन्नुभय-हेतुकेऽपि समुदायेऽभिप्रेयमाणे तदप्राप्तिः समुदायाप्राप्तिः । समुदायिनामचेतनत्वात्।**

ಶಂಕರಾಚಾರ್ಯರು ಹೀಗೆ ಅರ್ಥ ಹೇಳುತ್ತಾರೆ - ಅಣುಗಳಿಂದ ಎರಡು ವಿಧವಾದ ಸಮುದಾಯ ಉಂಟಾಗುತ್ತದೆ. ಒಂದು ಭೂತಭೌತಿಕರೂಪವಾದ ಸಮುದಾಯ, ಅದಕ್ಕೆ ಉದಾಹರಣೆ - ನದೀ ಸಮುದ್ರ ಮೊದಲಾದ ಬಾಹ್ಯಪದಾರ್ಥಗಳು. ಇನ್ನೊಂದು ಉದಾಹರಣೆ - ಚಿತ್ತಚೈತ್ಯಾತ್ಮಕವಾದ ಆಧ್ಯಾತ್ಮಿಕ (ಆಂತರಿಕ) ಸಮುದಾಯ. ಈ ಎರಡು ಸಮುದಾಯವನ್ನು ತೆಗೆದುಕೊಂಡರೂ ಸಮುದಾಯವೇ ಕೂಡುವುದಿಲ್ಲ. ಏಕೆಂದರೆ, ಸಮುದಾಯ ಯಾವಾಗಲೂ ಅಚೇತನವೇ ಆಗಿರುವುದು ಕಂಡಿದೆ. ಸಮುದಾಯ ಅಚೇತನವಾಗುವುದಕ್ಕೂ ಸಮುದಾಯ ಕೂಡದಿರುವುದಕ್ಕೂ ಏನು ಸಂಬಂಧ ? ಎಂದರೆ ಅದಕ್ಕೆ ಉತ್ತರವಾಗಿ ಹೇಳುತ್ತಿದ್ದಾರೆ.

**मृद्दण्डचक्रादीनां हि सङ्घातश्चेतनाधीनो दृष्ट इत्याद्यर्थ इति ।**

ಲೋಕದಲ್ಲಿ ಮೃತ್, ದಂಡ, ಚಕ್ರ ಇತ್ಯಾದಿಗಳ ಸಮುದಾಯವು ಕುಲಾಲ ಎಂಬ ಚೇತನಾಧೀನವಾಗಿಯೇ ಕಂಡಿದೆ. ಆದರೆ ನೀವು ಹೇಳಿರುವ ಎರಡೂ ವಿಧವಾದ ಸಮುದಾಯ ಅಚೇತನಾಧೀನವಾಗಿದೆ. ಹಾಗಾಗಿ ಕೂಡುವುದಿಲ್ಲ ಎಂದರ್ಥ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**नासतोऽदृष्टत्वात्** ।। टीकोक्तं सूत्रारूढं करोति – **सौत्रस्येति** ।।

ಟೀಕಾದಲ್ಲಿ ಹೇಳಿರುವುದನ್ನು ಸೂತ್ರದೊಂದಿಗೆ ಯೋಜನೆ ಮಾಡಿಕೊಡುತ್ತಿದ್ದಾರೆ ಸೌತ್ರಸ್ಯ ಎಂದು.

**प्रकाशः – यदत्रेति** ।। ''ये सर्वास्तित्ववादिनो बाह्यमाभ्यन्तरं च वस्त्वभ्युपगच्छन्ति तांस्तावत्प्रति ब्रूम'' इति परभाष्यं ''ये बाह्यार्थास्तित्ववादिनस्ते

तावन्निरस्यन्त'' इति रामानुजभाष्यं च हृदि कृत्वाऽऽह – **वैभाषिकसौत्रान्तिकेति।।** ''वैभाषिकसौत्रान्तिकयोरेकीकृत्योपन्यास'' इति भामत्युक्तेरिति भावः ।

ಶಾಂಕರ ಭಾಷ್ಯದಲ್ಲಿ 'ಯೇ ಸರ್ವಾಸ್ತಿತ್ವವಾದಿನೋ ಬಾಹ್ಯಮಾಭ್ಯಂತರಂ ಚ ವಸ್ತ್ವಭ್ಯುಪಗಚ್ಛಂತಿ ತಾಂಸ್ತಾವತ್ಪ್ರತಿ ಬ್ರೂಮಃ' ಯಾರು ಎಲ್ಲದರ ಅಸ್ತಿತ್ವವನ್ನು ಒಪ್ಪಿದ್ದಾರೋ, ಬಾಹ್ಯ ಆಭ್ಯಂತರ ವಸ್ತುಗಳನ್ನು ಒಪ್ಪಿದ್ದಾರೋ ಅವರಿಗೆ ಕೇಳುತ್ತೇವೆ ಎಂದು ಹೇಳಿದ್ದಾರೆ. ರಾಮಾನುಜ ಭಾಷ್ಯದಲ್ಲಿ 'ಯೇ ಬಾಹ್ಯಾರ್ಥಾಸ್ತಿತ್ವವಾದಿನಸ್ತೇ ತಾವನ್ನಿರಸ್ಯಂತೇ' ಯಾರು ಬಾಹ್ಯ ವಸ್ತುಗಳನ್ನು ಒಪ್ಪಿದ್ದಾರೋ ಅವರನ್ನು ನಿರಾಕರಿಸುತ್ತೇವೆ ಎಂದು ಹೇಳಿದ್ದಾರೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ವ್ಯಾಸರಾಜರು 'ವೈಭಾಷಿಕ' ಇತ್ಯಾದಿಯಾಗಿ ಗ್ರಂಥವನ್ನು ಪ್ರಾರಂಭ ಮಾಡಿದ್ದಾರೆ.

ಭಾಮತಿಯಲ್ಲೂ 'ವೈಭಾಷಿಕ, ಸೌತ್ರಾಂತಿಕಮತವನ್ನು ಒಟ್ಟುಗೂಡಿಸಿ ನಿರಾಕರಿಸಲಾಗಿದೆ' ಎಂದು ಹೇಳಿರುವುದರಿಂದ.

**प्रकाशः** – सूत्रार्थं चानूद्य निराह – **यत्त्वन्य इति** ।। चित्यचैत्यात्मक इति ।। रूपादिपञ्चस्कन्धात्मक इत्यर्थः । रूपशब्देन सविषयेन्द्रियाण्यत्र ग्राह्याणि ।

ಸೂತ್ರಾರ್ಥವನ್ನು (ಪರರೀತ್ಯಾ) ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯತ್ತು' ಎಂಬ ಗ್ರಂಥದಿಂದ. ಚಿತ್ತಚೈತ್ಯಾತ್ಮಕಶಬ್ದಕ್ಕೆ ರೂಪಾದಿ ಪಂಚಸ್ಕಂಧಾತ್ಮಕ ಎಂದರ್ಥ. ರೂಪಾದಿ ಪಂಚಸ್ಕಂಧ ಎನ್ನುವಲ್ಲಿ ರೂಪಶಬ್ದದಿಂದ ಸವಿಷಯಕವಾದ ಇಂದ್ರಿಯಗಳನ್ನು ಇಟ್ಟುಕೊಳ್ಳಬೇಕು.

**प्रकाशः** – समुदायाप्राप्तिः समुदायानुपपत्तिरित्यर्थः । भाष्यभामत्योरुक्तं हेतुमाह – **समुदायिनामिति** ।। रामानुजभाष्योक्तमनुवदति ।। **योयमिति** ।। भूतसमुदायः पृथिव्यादिः । भौतिकसमुदायः शरीरेन्द्रियादिः ।।

'ಸಮುದಾಯಪ್ರಾಪ್ತಿಃ' ಎಂಬ ಶಬ್ದಕ್ಕೆ ಸಮುದಾಯ ಕೂಡುವುದಿಲ್ಲ ಎಂದರ್ಥ. ಭಾಷ್ಯ ಹಾಗೂ ಭಾಮತಿಯಲ್ಲಿ ಹೇಳಿರುವ ಹೇತುವನ್ನು ಹೇಳುತ್ತಿದ್ದಾರೆ 'ಸಮುದಾಯಿನಾಮ್' ಎಂಬುವುದರಿಂದ. ರಾಮಾನುಜ ಭಾಷ್ಯವನ್ನು ಅನುವಾದ ಮಾಡುತ್ತಿದ್ದಾರೆ 'ಯೋಽಯಂ' ಎಂಬುದರಿಂದ. ಭೂತಸಮುದಾಯ ಎಂದರೆ ಪೃಥಿವೀ ಮೊದಲಾದದು. ಭೌತಿಕ ಸಮುದಾಯ ಎಂದರೆ ಪೃಥಿವೀ ಪರಿಮಾಣವಾದ ಶರೀರೇಂದ್ರಿಯಗಳು ಎಂದರ್ಥ.

### ರಾಮಾನುಜರ ಅಧಿಕರಣ ನಿರಾಕರಣೆ

## तात्पर्यचन्द्रिका

**यच्च केचिदाहुः योऽयमणुहेतुको भूतसमुदायो यश्च भूतहेतुको भौतिकसमुदायस्तस्मिन्नुभयहेतुकेऽपि समुदाये समुदायप्राप्तिर्न युक्ता । समुदायिनामणूनां क्षणिकत्वाभ्युपगमादित्याद्यर्थ इति । तन्न ।**

ಕೆಲವರು (ರಾಮಾನುಜರು) ಈ ಸೂತ್ರಕ್ಕೆ ಹೀಗೆ ಅರ್ಥ ಹೇಳುತ್ತಾರೆ. ಯಾವ ಅಣುಹೇತುಕ (ಕಾರಣ) ವಾದ ಭೂತಸಮುದಾಯವಿದೆಯೋ ಹಾಗೂ ಯಾವ ಭೂತಹೇತುಕವಾದ ಭೌತಿಕಸಮುದಾಯವಿದೆಯೋ ಈ ಎರಡು ಹೇತುಕವಾದ ಸಮುದಾಯದಲ್ಲೂ ಸಮುದಾಯ ಎಂಬುದೇ ಕೂಡುವುದಿಲ್ಲ. ಸಮುದಾಯ (ಸಮುದಾಯವುಳ್ಳದ್ದು) ಎನಿಸಿಕೊಂಡಿರುವ ಅಣುಗಳನ್ನು ಕ್ಷಣಿಕ ಎಂದು ಅಂಗೀಕರಿಸಿರುವುದರಿಂದ ಈ ಅರ್ಥವು ಸರಿಯಲ್ಲ.

**तथात्वे ''प्रतिसंख्याप्रतिसंख्यानिरोधाप्राप्तिः'' इत्यादिवदुभयहेतुकसमुदायाप्राप्तिरित्येव सूत्रणीयत्वेन समुदाये उभयहेतुके इति सप्तम्योः अपि शब्दस्य तदप्राप्तिरित्यत्र तच्छब्दस्य च व्यर्थत्वात् ।**

ನೀವು ಹೀಗೆ ಅರ್ಥ ಹೇಳುವುದಾದರೆ ಆಗ ''ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಾಪ್ರಾಪ್ತಿಃ'' ಎಂಬಲ್ಲಿ ಹೇಗೋ ಹಾಗೇ ಇಲ್ಲಿಯೂ ಕೂಡ ''ಉಭಯಹೇತುಕಸಮುದಾಯಾಪ್ರಾಪ್ತಿಃ'' ಎಂದೇ ಸೂತ್ರವನ್ನು ಹೇಳಬೇಕಾಗಿತ್ತು. ಇದಕ್ಕೆ ಹೊರತಾಗಿ 'ಸಮುದಾಯೇ' ಮತ್ತು 'ಉಭಯಹೇತುಕೇ' ಎಂಬಲ್ಲಿರುವ ಸಪ್ತಮೀವಿಭಕ್ತಿ ಹಾಗೂ 'ತದಪ್ರಾಪ್ತಿಃ' ಎಂಬಲ್ಲಿರುವ 'ತತ್' ಶಬ್ದ ಹಾಗೂ 'ಅಪಿ' ಶಬ್ದಗಳು ನೀವು ಹೇಳುವ ರೀತಿ ಹೇಳಿದರೆ ವ್ಯರ್ಥವಾಗುತ್ತವೆ.

('ಸಮುದಾಯಿನಾಂ' ಎಂಬ ಶಬ್ದಕ್ಕೆ ಅಣುಗಳು ಎಂದರ್ಥ. ಯಾವ ಪರಮಾಣುಗಳು ಸೇರಿ ಸಮುದಾಯವಾಗಬೇಕೋ ಅಂತಹ ಅಣುಗಳು. ಈ ಅಣುಗಳು ಬೌದ್ಧರೀತ್ಯಾ ಕ್ಷಣಿಕವಾಗಿವೆ ಹಾಗಾಗಿ ಸಮುದಾಯ ಪ್ರಾಪ್ತಿಯಾಗುವುದಿಲ್ಲ ಎಂದಭಿಪ್ರಾಯ)

**मम मत इव सूत्रे हेतुसूचनाभावेन न्यूनत्वाच्च ।**

ನೀವು ಹೇಳುವಂತೆ (ಶಂಕರರ ಪ್ರಕಾರವಾಗಿಯಾಗಲೀ, ರಾಮಾನುಜರ ಪ್ರಕಾರವಾಗಿಯಾಗಲೀ) ಅರ್ಥ ಹೇಳಿದರೆ ಆಗ ಸೂತ್ರದಲ್ಲಿ ನೀವು ಹೇಳುವ ಹೇತುಗಳು ಎಲ್ಲಿಯೂ ಸೂಚಿತವಾಗುವುದಿಲ್ಲ. ಆದರೆ, ನಮ್ಮ ಪ್ರಕಾರ ಅರ್ಥ ಹೇಳಿದರೆ ಹೇತುವು ಸೂತ್ರದಲ್ಲಿ ಸೂಚಿತವಾಗಿದೆ.

(ಶಂಕರರು ಹೇಳುವ ಹೇತು, ಸಮುದಾಯ ಎಂಬುದು ಕೂಡುವುದಿಲ್ಲ. ಏಕೆಂದರೆ, ಸಮುದಾಯ ಅಚೇತನವಾಗಿರುವುದರಿಂದ. ರಾಮಾನುಜರು ಹೇಳುವಂತೆ, ಸಮುದಾಯ ಕೂಡುವುದಿಲ್ಲ ಏಕೆಂದರೆ, ಅಣುಗಳು ಕ್ಷಣಿಕವಾಗಿರುವುದರಿಂದ. ಈ ಎರಡೂ ಹೇತುಗಳು ಸೂತ್ರದಲ್ಲಿ ಸೂಚಿತವಾಗಿಲ್ಲ ಎಂದರ್ಥ.)

**मम मते समुदाय एकैकहेतुके विरोधः । एकस्मात्समुदाय इत्यस्य व्याहतेः । उभयहेतुकत्वपक्षेऽपि समुदाये विरलोभयहेतुके समुदायस्सदा स्यात् । मिलितोभयहेतुकेऽन्योन्याश्रय इति युक्तिः सूत्रारूढा । तव तु न ।**

ನಮ್ಮ ಮತದ ಪ್ರಕಾರ ಸೂತ್ರದಲ್ಲಿ ನಾವು ಹೇಳುವ ಹೇತುವು 'ಉಭಯಹೇತುಕೇ' ಎಂಬ ಪದದಲ್ಲಿ ಸೂಚಿತವಾಗಿದೆ. ಸಮುದಾಯ ಎಂದರೆ ಅಲ್ಲಿ ವಿಕಲ್ಪ ಮಾಡಬೇಕು. ಏಕೈಕಹೇತುವಾದ

ಸಮುದಾಯವೋ, ಉಭಯಹೇತುವಾದ ಸಮುದಾಯವೋ ? ಉಭಯಹೇತುಕ ಪಕ್ಷದಲ್ಲೂ ವಿರಲೋಭಯಹೇತುಕವೋ, ಮಿಲಿತೋಭಯಹೇತುಕವೋ ? ಎಂದು. ಏಕೈಕಹೇತುಕಸಮುದಾಯ ಎಂಬುದು ಕೂಡುವುದಿಲ್ಲ ವಿರೋಧ ಬರುವುದರಿಂದ. ಒಂದೇ ಪರಮಾಣುವಿನ ಸಮುದಾಯ ಎಂದರೆ ವಿರೋಧ ಸಮುದಾಯ ಎಂದರೆ ಅನೇಕ ಇರಲೇಬೇಕು. ವಿರಲೋಭಯ ಹೇತುಕ ಸಮುದಾಯ ಎಂದರೆ ವಿರಳ ಪರಮಾಣುಗಳು ಸದಾ ಇರುವುದರಿಂದ ಸಮುದಾಯವೂ ಸದಾ ಇರಬೇಕು. ಆಗ ಪ್ರಳಯವೇ ಕೂಡುವುದಿಲ್ಲ. ಮಿಲಿತೋಭಯ ಹೇತುಕ ಎಂದರೆ ಅನ್ಯೋನ್ಯಾಶ್ರಯ. ಮೇಲನದಿಂದ ಸಮುದಾಯ. ಸಮುದಾಯದಿಂದ ಮೇಲನ ಎಂಬ ಅನ್ಯೋನ್ಯಾಶ್ರಯದೋಷ ಬರುತ್ತದೆ. ಈ ಎಲ್ಲಾ ಹೇತುಗಳು 'ಉಭಯಹೇತುಕೇ' ಎಂಬ ಪದದಿಂದಲೇ ಸೂಚಿತವಾಗಿದೆ. ಆದರೆ, ನಿನ್ನ ಪ್ರಕಾರ ಅರ್ಥ ಹೇಳಿದಾಗ ನೀನು ಹೇಳುವ ಯುಕ್ತಿಯು ಸೂತ್ರದಿಂದ ಸೂಚಿತವಾಗಿಲ್ಲ.

**किञ्च त्वत्पक्षे उत्तरसूत्रे इतरेतरप्रत्ययत्वादि चेदिति शङ्का न युक्ता ।**

ಇದಷ್ಟೇ ಅಲ್ಲ. ನಿಮ್ಮ ಪ್ರಕಾರ ಮುಂದಿನ ಸೂತ್ರದಲ್ಲಿ 'ಇತರೇತರಪ್ರತ್ಯಯತ್ವಾತ್' ಎಂದು ಶಂಕಾವನ್ನೇ ಮಾಡಲು ಸಾಧ್ಯವಿಲ್ಲ. (''ಇತರೇತರಪ್ರತ್ಯತ್ವಾದಿತಿ ಚೇನ್ನ ಉತ್ಪತ್ತಿಮಾತ್ರನಿಮಿತ್ತತ್ವಾತ್'' ಎಂಬುದು ಮುಂದಿನ ಸೂತ್ರ)

**नहि संहन्तुश्चेतनस्याभावात्संघातो न युक्त इत्युक्ते त्वदुक्तमविद्यासंस्कार-जरामरणशोकादीनामन्योन्यं हेतुहेतुमद्भावेन पूर्वापरीभूततया घटीयंत्रवदनिशमावर्तमानत्व रूपमितरेतरप्रत्ययत्वं शङ्कार्हम् ।**

(ಅದನ್ನೇ ವಿವರಿಸುತ್ತಿದ್ದಾರೆ) ಹಿಂದಿನ ಸೂತ್ರದಲ್ಲಿ ಸಂಹಂತಾ, ಅಂದರೆ ಸಮುದಾಯವನ್ನು ಉಂಟುಮಾಡುವ ಚೇತನ, ಅವನೇ ಇಲ್ಲದಿರುವುದರಿಂದ ಸಮುದಾಯವೇ ಕೂಡುವುದಿಲ್ಲ ಎಂದು ಹೇಳಲಾಗಿದೆ. ಹೀಗೆ ಹೇಳಿದ ನಂತರ ಮುಂದಿನ ಸೂತ್ರದಲ್ಲಿ 'ಇತರೇತರಪ್ರತ್ಯಯತ್ವ' ಎಂಬುದು ಕೂಡುವುದಿಲ್ಲ ಎಂದು ಶಂಕಾ ಮಾಡಲು ಸಾಧ್ಯವಿಲ್ಲ. ನಿಮ್ಮ ಪ್ರಕಾರ ಇತರೇತರಪ್ರತ್ಯಯತ್ವ ಎಂದರೆ ಅವಿದ್ಯಾ, ಸಂಸ್ಕಾರಾ, ಮರಣ, ಶೋಕ ಇತ್ಯಾದಿಗಳು ಅನ್ಯೋನ್ಯವಾಗಿ ಹೇತುಹೇತುಮದ್ (ಕಾರ್ಯಕಾರಣ)ಭಾವವನ್ನು ಹೊಂದಿದ್ದು ಪೂರ್ವಾಪರೀಭಾವವನ್ನೂ ಹೊಂದಿ ಘಟೀಯಂತ್ರದಂತೆ ಯಾವಾಗಲೂ ಆವರ್ತಮಾನವಾಗಿದೆ ಎಂಬುದೇ ಅರ್ಥ. (ಪೂರ್ವಾಪರೀಭಾವ ಎಂದರೆ ಮೊದಲು ಅವಿದ್ಯಾ, ಆಮೇಲೆ ಸಂಸ್ಕಾರ ಈ ರೀತಿಯಿಂದ)

ಹಿಂದಿನ ಸೂತ್ರದಲ್ಲಿ ಹೇಳಿದ ವಿಷಯವೂ ಇಲ್ಲಿ ಮಾಡುವ ಶಂಕಾಗೂ ಯಾವುದೇ ಸಂಬಂಧ ಇಲ್ಲ ಎಂದರ್ಥ.

(ನಮ್ಮ ಮತದಲ್ಲಿಯಾದರೋ ಹಿಂದಿನ ಸೂತ್ರದಲ್ಲಿ ಸಮುದಾಯವು ವಿರಳಾನೇಕಹೇತುಕವೋ ಮಿಲಿತಾನೇಕಹೇತುಕವೋ ? ಎಂಬ ವಿಕಲ್ಪದಲ್ಲಿ ಬೌದ್ಧನು ವಿರಳಾನೇಕಹೇತುಕ ಎಂಬ ವಿಕಲ್ಪವನ್ನು ಅಂಗೀಕರಿಸಿದರೆ ಆಗ ಅದಕ್ಕೆ ನಾವು ಹೇಳುವ ದೋಷ ಸಮುದಾಯವು ಸದಾ ಇರಬೇಕಾಗುತ್ತದೆ,

ಏಕೆಂದರೆ ವಿರಳಾನೇಕ ಪರಮಾಣುಗಳು ಯಾವಾಗಲೂ ಇರುವುದರಿಂದ. ಹಾಗಾಗಿ ಪ್ರಳಯವೇ ಕೂಡುವುದಿಲ್ಲ ಎಂದು, ಅದಕ್ಕೆ ಅವನು ವಿರಳಾನೇಕಹೇತುಕಸಮುದಾಯ ಎಂಬುದನ್ನೇ ಒಪ್ಪುತ್ತೇನೆ, ಹಾಗಾದರೆ ಸಮುದಾಯ ಸದಾತನವಾಗಬೇಕಾಗುತ್ತದೆ ಎಂದರೆ ಪ್ರವೃತ್ತಿ ಇಷ್ಟಾಪತ್ತಿ ಎಂದು ಹೇಳುತ್ತಾನೆ. ಹಾಗಾದರೆ ಪ್ರಳಯವೇ ಕೂಡುವುದಿಲ್ಲ ಎಂಬುದಕ್ಕೆ ಪ್ರಳಯದಲ್ಲಿ ಸಮುದಾಯ ಇದ್ದರೂ ಅದರ ಪ್ರತೀತಿ, ವ್ಯವಹಾರಗಳು ಇರುವುದಿಲ್ಲ. ಏಕೆಂದರೆ ಅಪೇಕ್ಷಾಬುದ್ಧಿ ಇಲ್ಲದಿರುವುದರಿಂದ, ಅಪೇಕ್ಷಾಬುದ್ಧಿ ಏಕೆ ಇಲ್ಲ ಎಂದರೆ ಸಾಮೀಪ್ಯ ಇಲ್ಲದಿರುವುದರಿಂದ ಎಂದು ನೀನು ಹೇಳುವ ಸೃಷ್ಟಿಪ್ರಳಯವನ್ನು ಕೂಡಿಸಲು ಪ್ರಯತ್ನಿಸಿದರೆ ಆಗ ನೀನು ಹೇಳುವ ಅಪೇಕ್ಷಾಬುದ್ಧಿ (ಇತರೇತರಪ್ರತ್ಯಯತ್ವ) ಎಂಬ ಶಂಕಾಗೆ ಅವಕಾಶವಿಲ್ಲ ಎಂದು ಹೇಳಿದರೆ ಸಂಗತಿ ಬರುತ್ತದೆ ಎಂದರ್ಥ).

**अत एव द्वितीयसूत्रार्थोऽप्ययुक्तः ।**

ಈ ರೀತಿಯಿಂದ ಶಂಕಾ ಮಾಡುವುದೇ ತಪ್ಪು ಎಂದು ಹೇಳಿದ್ದರಿಂದಲೇ ಎರಡನೇ ಸೂತ್ರಕ್ಕೆ ನೀವು ಹೇಳುವ ಅರ್ಥ ಸರಿಯಲ್ಲ.

**प्रकाशः –**

**सूत्रारूढेति ।। मेलनसमुदाययोरन्योन्यसापेक्षत्वस्य सूचनादिति भावः ।।**

ನಮ್ಮ ಪ್ರಕಾರ ಹೇತುವು ಸೂತ್ರಾರೂಢವಾಗಿದೆ ಎಂದಿದ್ದಾರೆ. ಅದು ಹೇಗೆಂದರೆ ಮೇಲನ ಹಾಗೂ ಸಮುದಾಯ ಇವೆರಡಕ್ಕೂ ಪರಸ್ಪರ ಸಾಪೇಕ್ಷತ್ವವನ್ನು ಹೇಳಿದ್ದರಿಂದ (ಸೂಚಿಸಿದ್ದರಿಂದ) ಎಂದು ತಿಳಿಯಬೇಕು.

**प्रकाशः – तव तु नेति द्वावपि प्रत्युच्यते ।**

ಮೂಲದಲ್ಲಿ 'ತವ ತು ನ' ಎಂಬುದು ಶಂಕರ ರಾಮಾನುಜ ಇಬ್ಬರನ್ನೂ ಕುರಿತು ಹೇಳಿದ್ದು ಎಂದು ತಿಳಿಯಬೇಕು.

**प्रकाशः – अचेतनत्वक्षणिकत्वहेत्वोस्सूत्रेऽप्रतीतेः ।**

ಅದ್ವೈತಿಗಳು ಹೇಳುವ 'ಸಮುದಾಯಗಳು ಅಚೇನತವಾದ್ದರಿಂದ' ಎಂಬ ಹೇತುವಾಗಲೀ ಅಥವಾ ರಾಮಾನುಜರು ಹೇಳುವ 'ಪರಮಾಣುಗಳು ಕ್ಷಣಿಕವಾದ್ದರಿಂದ' ಎಂಬ ಹೇತುವಾಗಲೀ ಸೂತ್ರದಲ್ಲಿ ಎಲ್ಲಿಯೂ ಸೂಚಿತವಾಗಿಲ್ಲ ಎಂದರ್ಥ.

**प्रकाशः – मतद्वयेऽपि प्रथमसूत्रे कथितहेतुरुत्तरसूत्रस्थशङ्कानानुगुणश्चेत्याह – किञ्चेति ।।**

ಎರಡು ಮತಗಳಲ್ಲಿಯೂ ಮೊದಲನೇ ಸೂತ್ರದಲ್ಲಿ ಹೇಳುವ ಹೇತುವು ಮುಂದಿನ ಸೂತ್ರದಲ್ಲಿ ಮಾಡುವ ಪ್ರಶ್ನೆಗೆ ಅನುಗುಣವಾಗಿಲ್ಲ ಎಂದರ್ಥ. ಇದನ್ನೇ 'ಕಿಂಚ' ಎಂಬುದರಿಂದ ಹೇಳುತ್ತಿದ್ದಾರೆ.

**प्रकाशः** – मायावादिमतं तावदुपपादयति ।। **न हीति** ।।

ಮಾಯಾವಾದಿಗಳ ಮತವನ್ನು ಅನುವಾದ ಮಾಡುತ್ತಿದ್ದಾರೆ 'ನ ಹಿ' ಎಂಬುದರಿಂದ.

**प्रकाशः – शङ्कार्हमिति** ।। अविद्यादिप्रतीतिव्यवहाराणां सङ्घातसिद्ध्यधीनत्वेन तस्यैवासम्भवेऽन्योन्यहेतुत्वशङ्कादूरापास्तेति भावः । तथा क्षणिकत्वादणूनां सङ्घात एव नोपपद्यत इत्युक्ते पुनः कथमन्योन्यहेतुहेतुमद्भावरूपेतरेतरप्रत्ययत्वं शङ्कार्हमित्युपपादनं ध्येयम् ।। **अत एवेति** ।। शङ्कानुत्थानादेवेत्यर्थः ।

ಅವಿದ್ಯಾ, ಸಂಸ್ಕಾರ ಇತ್ಯಾದಿಗಳ ಪ್ರತೀತಿವ್ಯವಹಾರಗಳು ಸಂಘಾತಸಿದ್ಧ್ಯಧೀನವಾಗಿರುವುದರಿಂದ, (ಏಕೆಂದರೆ ಅವಿದ್ಯಾದಿಗಳೂ ಪರಮಾಣುಸಮುದಾಯ ರೂಪವೇ ಆಗಿವೆ) ಸಂಘಾತವೇ ಅಸಂಭವ ಎಂದಮೇಲೆ ಅನ್ಯೋನ್ಯಹೇತುತ್ವ ಶಂಕೆಯು ದೂರತೋಪಾಸ್ತವಾಯಿತೆಂಬುದು ಅಭಿಪ್ರಾಯ.

(ಅವಿದ್ಯಾದಿಗಳೇ ಇಲ್ಲದೇ ಹೋದಮೇಲೆ ಅವುಗಳಿಗೆ ಹೇಗೆ ಅನ್ಯೋನ್ಯಹೇತುಹೇತುಮದ್ ಭಾವಹೇತುವು ಸಾಧ್ಯವಾಗುತ್ತದೆ ಎಂದಭಿಪ್ರಾಯ)

ಹಾಗೆಯೇ, ರಾಮಾನುಜರ ಪ್ರಕಾರ ಪರಮಾಣುಗಳು ಕ್ಷಣಿಕವಾದ್ದರಿಂದ ಸಂಘಾತವೇ ಸಾಧ್ಯವಿಲ್ಲ ಎಂದ ಮೇಲೆ ಮತ್ತೆ ಅನ್ಯೋನ್ಯಹೇತುಹೇತುಮದ್‌ಭಾವರೂಪವಾದ ಇತರೇತರಪ್ರತ್ಯಯತ್ವವನ್ನು[೧] ಪ್ರಶ್ನೆ ಮಾಡಲು ಹೇಗೆ ಸಾಧ್ಯ?

ಮೂಲದಲ್ಲಿ 'ಅತ ಏವ' ಎಂಬ ಶಬ್ದಕ್ಕೆ ಪ್ರಶ್ನೆಯೇ ಹುಟ್ಟದಿರುವುದರಿಂದ ಎಂದರ್ಥ.

ಎರಡನೆಯ ಹಾಗೂ ಮೂರನೆಯ ಸೂತ್ರಾರ್ಥ ನಿರಾಕರಣೆ

## तात्पर्यचन्द्रिका

**यच्चोक्तमेकैकहेत्वधीनं कार्योत्पादं स्वीकृत्य समुदायाधीनः स द्वितीये दूषितः। तृतीये त्वेकैकहेत्वधीनोऽपि स दूष्यत इति तन्न ।**

ಎರಡನೇ ಸೂತ್ರದಲ್ಲಿ ('ಇತರೇತರಪ್ರತ್ಯಯತ್ವ') ಏಕೈಕ ಹೇತುವಿನ ಅಧೀನವಾದ ಕಾರ್ಯೋತ್ಪತ್ತಿಯನ್ನು ಒಪ್ಪಿಕೊಂಡು ಸಮುದಾಯದಿಂದ ಕಾರ್ಯೋತ್ಪತ್ತಿಯನ್ನು ಖಂಡನೆ ಮಾಡುತ್ತಾರೆ. ಮೂರನೇ ಸೂತ್ರದಲ್ಲಿ (ಉತ್ತರೋತ್ಪಾದೇ ಚ ಪೂರ್ವನಿರೋಧಾತ್) ಏಕೈಕ ಹೇತುವಿನ ಅಧೀನವಾಗಿಯೇ ಕಾರ್ಯೋತ್ಪತ್ತಿಯನ್ನು ಖಂಡನ ಮಾಡುತ್ತಾರೆ. ಹೀಗೆ ಅರ್ಥ ಹೇಳಿದರೆ ಅದು ತಪ್ಪು.

(೧)(ಅದ್ವೈತಿಗಳು ಅವಿದ್ಯಾದಿಗಳಿಗೆ ಪರಸ್ಪರ ಹೇತುಹೇತುಮದ್‌ಭಾವ ಕೂಡುವುದಿಲ್ಲ ಎಂಬ ಶಂಕಾ ಮಾಡಲು ಸಾಧ್ಯವಿಲ್ಲ ಎಂದು ಹೇಳಿ ರಾಮಾನುಜರೂ ಈ ಶಂಕಾ (ಅವಿದ್ಯಾದಿಗಳಿಗೆ ಪರಸ್ಪರ ಹೇತುಹೇತುಮದ್‌ಭಾವ ಸಾಧ್ಯವಿಲ್ಲ) ಮಾಡಲು ಬರುವುದಿಲ್ಲ ಎಂದು ಹೇಳುತ್ತಿದ್ದಾರೆ. ಇಬ್ಬರೂ ಶಂಕಾ ಒಂದೇ ರೀತಿ ಮಾಡಿದರೂ ಅದಕ್ಕೆ ಕೊಟ್ಟಿರುವ ಕಾರಣ ಬೇರೆ ಬೇರೆ ಎಂದು ತಿಳಿಯಬೇಕು)

**समुदायाधीनकार्योत्पादनिरासकेन पूर्वोक्तेन चेतनाभावेनैवैकैकाधीनस्यापि तस्य ''पयोम्बुवत्'' इत्युक्तन्यायेनैव निराससम्भवात् ।**

ಸಮುದಾಯಾಧೀನವಾದ ಕಾರ್ಯೋತ್ಪತ್ತಿಯನ್ನು ನಿರಾಕರಣೆ ಮಾಡಿದ್ದರಿಂದಲೇ ಏಕೈಕಹೇತುವಿನ ಅಧೀನವಾದ ಕಾರ್ಯೋತ್ಪತ್ತಿಯೂ ಕೂಡುವುದಿಲ್ಲ ಎಂಬುದು 'ಪಯೋಽಂಬುವತ್' ಎಂಬ ಸೂತ್ರನ್ಯಾಯದಿಂದ ಸಿದ್ಧವಾಗುತ್ತದೆ. ಹಾಗಾಗಿ ಮೂರನೇ ಸೂತ್ರದಲ್ಲಿ ಪೃಥಕ್ ನಿರಾಕರಣೆ ಮಾಡಿದ್ದು ವ್ಯರ್ಥ ಎಂದರ್ಥ.

**प्रकाशः –**

**यदत्र कैश्चिदितरेतरप्रत्ययत्वादुपपन्नमिति चेन्न । सङ्घातभावानिमित्तत्वादिति पाठान्तरं परिकल्प्यायमेवाकृत्रिमो वृत्तिसिद्धः पाठ इत्युक्तम् । तदसांप्रदायिकमिति भावेनोपेक्षितम् ।**

ರಾಮಾನುಜರು ''ಇತರೇತರಪ್ರತ್ಯಯತ್ವ'' ಎಂಬಲ್ಲಿ ಬೇರೆಯೇ ಪಾಠವನ್ನು ಅಂಗೀಕರಿಸಿದ್ದಾರೆ. ಅದೇನೆಂದರೆ ''ಇತರೇತರಪ್ರತ್ಯತ್ವಾದಿತಿ ಚೇನ್ನ ಸಂಘಾತಾಭಾವಾನಿಮಿತ್ತತ್ವಾತ್'' ಎಂಬುದಾಗಿ. ಇದೇ ಸ್ವಾಭಾವಿಕವಾಗಿ ವೃತ್ತಿಕಾರರಿಗೆ ಸಮ್ಮತವಾದ ಪಾಠ ಎಂದು ಹೇಳುತ್ತಾರೆ. ಇದನ್ನು ವ್ಯಾಸರಾಜರು ಏಕೆ ನಿರಾಕರಿಸಿಲ್ಲ ? ಎಂದರೆ ಈ ಪಾಠವು ಸಂಪ್ರದಾಯವಿರುದ್ಧ ಎಂದು ತಿಳಿದು ಅದರ ನಿರಾಕರಣೆಯನ್ನು ಉಪೇಕ್ಷೆ ಮಾಡಿದ್ದಾರೆ ಎಂದು ತಿಳಿಯಬೇಕು.

**प्रकाशः – मतद्वयेऽपि ज्ञाने रूढस्य प्रत्ययशब्दस्य हेत्वर्थत्वं क्लिष्टम् ।**

ಶಂಕರ ರಾಮಾನುಜ ಇಬ್ಬರ ಮತದಲ್ಲೂ ''ಇತರೇತರಪ್ರತ್ಯಯತ್ವಾತ್'' ಎಂಬಲ್ಲಿ ಪ್ರತ್ಯಯ ಶಬ್ದಕ್ಕೆ ಹೇತು ಎಂದರ್ಥ ಹೇಳಿದ್ದಾರೆ. ಇದು ಕ್ಲಿಷ್ಟಕಲ್ಪನೆ. ಪ್ರತ್ಯಯ ಶಬ್ದವು ಜ್ಞಾನ ಎಂಬರ್ಥದಲ್ಲೇ ಪ್ರಸಿದ್ಧವಾಗಿದೆ.

**प्रकाशः – सङ्घातभावानिमित्तत्वे क्षणिकत्वहेतोर्बहिरेव वाच्यत्वाच ।**

ರಾಮಾನುಜರ ಪ್ರಕಾರ ಸೂತ್ರಪಾಠ ಇಟ್ಟುಕೊಂಡರೆ ಆಗ ಅವರು ಹೇಳುವ ಕ್ಷಣಿಕತ್ವ ಹೇತುವನ್ನು ಸೂತ್ರಾರೂಢವಾಗಿ ಹೇಳಲು ಸಾಧ್ಯವಿಲ್ಲ.

**प्रकाशः – ''उत्तरोत्पादे च पूर्वनिरोधात्'' इत्येतत्तात्पर्यार्थं परमते निराह – यच्चोक्तमिति ।।**

''ಉತ್ತರೋತ್ಪಾದೇ ಚ ಪೂರ್ವನಿರೋಧಾತ್'' ಎಂಬ ಸೂತ್ರಕ್ಕೆ ಪರರು ಮಾಡಿರುವ ವ್ಯಾಖ್ಯಾನದ ತಾತ್ಪರ್ಯವನ್ನು ಹೇಳಿ ನಿರಾಕರಿಸುತ್ತಿದ್ದಾರೆ 'ಯಚ್ಚೋಕ್ತಂ' ಎಂಬುದರಿಂದ.

**प्रकाशः – उत्तरक्षणस्योत्पादे पूर्वक्षणस्य निरोध इति मतद्वयेऽपि सूत्रार्थोऽविशिष्टः ।। इत्युक्तन्यायेनेति ।। तत्र चेतननिरपेक्षकारणककार्यस्य निरासादिति भावः ।**

"ಪಯೋಽಂಬುವಚ್ಚೇತ್ ತತ್ರಾಪಿ" ಎಂಬ ಸೂತ್ರದಲ್ಲಿ ಚೇತನನ ಅಪೇಕ್ಷೆ ಇಲ್ಲದೇ ಕಾರ್ಯವಾಗಲು ಸಾಧ್ಯವಿಲ್ಲ ಎಂದು ಹೇಳಿರುವುದರಿಂದ ಅಲ್ಲಿ ಹೇಳಿದ ನ್ಯಾಯದಿಂದಲೇ ಇಲ್ಲಿಯೂ ನಿರಾಕರಣೆ ಮಾಡಲು ಬರುವಾಗ ಇಲ್ಲಿ ಬೇರೆ ನ್ಯಾಯದಿಂದ ನಿರಾಕರಣೆ ಮಾಡಿದ್ದು ಸರಿಯಲ್ಲ.

ನಾಕನೆಯ ಸೂತ್ರಾರ್ಥ ನಿರಾಕರಣೆ

## तात्पर्यचन्द्रिका

**चतुर्थे तु "यौगपद्यमन्यथा" इत्यस्य "उत्तरोत्पादे च पूर्वनिरोधात्" इति तृतीये न गतार्थता । तत्राप्यन्यथा यौगपद्यं स्यादिति विपक्षे बाधकविवक्षां विनोत्तरोत्पादे पूर्वनिरोधस्यासिद्धेः ।**

ನಾಕನೆಯ ಸೂತ್ರದಲ್ಲಿಯೂ ಕೂಡ "ಯೌಗಪದ್ಯಮನ್ಯಥಾ" ಎಂಬಲ್ಲಿ "ಉತ್ತರೋತ್ಪಾದೇ ಚ ಪೂರ್ವನಿರೋಧಾತ್" ಎಂಬ ಮೂರನೇ ಸೂತ್ರದಿಂದ 'ಗತಾರ್ಥತಾ ದೋಷ' ಸಿದ್ಧವಾದದನ್ನೇ ಹೇಳುವುದು ಎಂಬ ದೋಷ ಬರುತ್ತದೆ. ಏಕೆಂದರೆ ಮೂರನೇ ಸೂತ್ರದಲ್ಲಿ ಅಪ್ರಯೋಜಕಶಂಕಾ ಮಾಡಿದರೆ ಅಂದರೆ ಪಕ್ಷವನ್ನೇ ವಿಪಕ್ಷವೆಂದು ಮಾಡಿದರೆ ಆಗ ಅದಕ್ಕೆ ಬಾಧಕತರ್ಕವನ್ನು ಹೇಳಲೇಬೇಕು. ಆ ಬಾಧಕತರ್ಕವನ್ನು "ಅನ್ಯಥಾ ಯೌಗಪದ್ಯಂ ಸ್ಯಾತ್" ಎಂಬುದಾಗಿಯೇ ಹೇಳಬೇಕು. ಹಾಗಾಗಿ ನಾಕನೆಯ ಸೂತ್ರದ ಅರ್ಥವೂ ಮೂರನೇ ಸೂತ್ರದಲ್ಲೇ ಬಂದು ನಾಕನೆಯ ಸೂತ್ರಕ್ಕೆ ಗತಾರ್ಥತಾ ಎಂಬ ದೋಷ ಬರುತ್ತದೆ. ಒಂದು ವೇಳೆ ಬಾಧಕತರ್ಕವನ್ನು ಹೇಳದಿದ್ದರೆ ಆಗ "ಉತ್ತರೋತ್ಪಾದೇ ಚ ಪೂರ್ವನಿರೋಧಾತ್" ಎಂಬ ಸೂತ್ರದ ಅರ್ಥವೇ ಅಸಿದ್ಧವಾಗಬೇಕಾಗುತ್ತದೆ.

**मम मते तु कार्याणां यौगपद्यमिह विवक्षितम् । नतु त्वन्मत इव कार्यकारणयोः ।**

ನಮ್ಮ ಮತದಲ್ಲಿ ಈ ಗತಾರ್ಥತಾ ಎಂಬ ದೋಷ ಬರುವುದಿಲ್ಲ ಏಕೆಂದರೆ, ಈ ನಾಲ್ಕನೇ ಸೂತ್ರದಲ್ಲಿ ನಾವು ಕಾರ್ಯಗಳಿಗೆ ಯೌಗಪದ್ಯ (ಒಂದೇ ಕಾಲದಲ್ಲಿ ಇರುವಿಕೆ) ವನ್ನು ಹೇಳುತ್ತಿದ್ದೇವೆ. ಹಿಂದಿನ ಸೂತ್ರದಲ್ಲಿ 'ಕಾರಣಕ್ಕೆ ಕ್ಷಣಿಕತ್ವ ನಾಶವಾಗಬೇಕಾಗುತ್ತದೆ' ಎಂದು ಹೇಳಿದ್ದೇವೆ. ಈ ವ್ಯತ್ಯಾಸ ಇರುವುದರಿಂದ ನೀವು ಈ ನಾಲ್ಕನೇ ಸೂತ್ರದಲ್ಲೂ ಕಾರ್ಯಕಾರಣಗಳಿಗೆ ಯೌಗಪದ್ಯವನ್ನು ಹೇಳುವುದರಿಂದ ಗತಾರ್ಥತಾ ಬಂದೇ ಬರುತ್ತದೆ.

**प्रकाशः –**

मतद्वयेऽपि "असति प्रतिज्ञोपरोधौ यौगपद्यमन्यथा" इति सूत्रे चरमांशस्य "उत्तरोत्पादे च" इति पूर्वसूत्रेण पौनरुक्त्यमाह – **चतुर्थे त्विति ॥**

ಶಂಕರ ರಾಮಾನುಜ ಇಬ್ಬರ ಮತದಲ್ಲೂ 'ಅಸತಿ ಪ್ರತಿಜ್ಞೋಪರೋಧೌ ಯೌಗಪದ್ಯಮನ್ಯಥಾ' ಎಂಬ ಅಂಶಕ್ಕೆ "ಉತ್ತರೋತ್ಪಾದೇ ಚ" ಎಂಬ ಸೂತ್ರದಿಂದ ಪುನರುಕ್ತಿಯನ್ನು ಹೇಳುತ್ತಿದ್ದಾರೆ 'ಚತುರ್ಥೇ ತು' ಎಂಬುದರಿಂದ.

**प्रकाशः** – पूर्वत्र ह्युत्तरस्य क्षणिककार्यस्योत्पादे पूर्वस्य निरोधाद्विनाशादसति कारणे कार्योत्पत्तौ सर्वदा कार्योत्पत्तिस्स्यादित्युक्तम् ।

ನೀವು ಹಿಂದಿನ ಸೂತ್ರದಲ್ಲಿ 'ಮುಂದಿನ ಕ್ಷಣಿಕಕಾರ್ಯದ ಉತ್ಪತ್ತಿಯಾಗುವಾಗ ಕಾರಣವು ನಾಶವಾಗಿರುತ್ತದೆ. ಆದ್ದರಿಂದ ಕಾರಣ ಇಲ್ಲದಿದ್ದರೂ ಕಾರ್ಯದ ಉತ್ಪತ್ತಿಯಾಗಬೇಕಾಗುತ್ತದೆ ಎಲ್ಲಾ ಕಾಲದಲ್ಲಿಯೂ ಕಾರ್ಯೋತ್ಪತ್ತಿಯಾಗಬೇಕಾಗುತ್ತದೆ' ಎಂದು ಹೇಳಿದ್ದೀರಿ.

**प्रकाशः** – इहत्वसत्यपि हेतौ कार्योत्पत्तावुच्यमानायां चतुर्विधान् हेतून् प्रतीत्यचित्यचैत्या उत्पद्यन्त इत्यधिपतिसहकार्यालम्बनसमनन्तरप्रत्ययाश्चत्वारो विमानोत्पत्तौ हेतव इति त्वदीयप्रतिज्ञोपरोधः ।

ಇಲ್ಲಿ (ಈ ಸೂತ್ರದಲ್ಲಿ) ಕಾರಣವಿಲ್ಲದಿದ್ದರೂ ಕಾರ್ಯವಿದೆ ಎಂದು ಹೇಳಿದರೆ 'ಚತುರ್ವಿಧಾನ್ ಹೇತೂನ್ ಪ್ರತೀತ್ಯಚಿತ್ಯಚೈತ್ಯಾ ಉತ್ಪದ್ಯಂತೇ.....' ಎಂಬುದಾಗಿ ನೀನೇ ಸ್ವಗ್ರಂಥದಲ್ಲಿ ಏನು ಪ್ರತಿಜ್ಞಾ ಮಾಡಿರುವಿಯೋ ಅದಕ್ಕೆ ವಿರೋಧ ಬರುತ್ತದೆ.

**प्रकाशः** – अन्यथा कार्यस्य क्षणे कारणस्य सत्त्वे कारणकार्ययोर्यौग-पद्यमित्युभाभ्यामर्थ उक्तः ।

ಹಾಗಲ್ಲದೇ ಹೋದರೆ ಕಾರ್ಯವಿರುವಾಗ ಕಾರಣವಿದ್ದರೆ. ಆಗ ಕಾರ್ಯಕಾರಣಗಳು ಒಂದೇ ಕ್ಷಣದಲ್ಲಿರಬೇಕಾಗುತ್ತದೆ ಎಂಬ ಅರ್ಥವನ್ನು ಇಬ್ಬರೂ ಹೇಳಿದ್ದೀರಿ.

**प्रकाशः** – तत्र मतद्वयेऽपि पूर्वसूत्रे उत्तरोत्पादे पूर्वस्य निरोधः कुतः । येनासति हेतौ कार्योत्पादस्स्यादिति शङ्कित्ते यौगपद्यमन्यथेत्यस्यावश्यं विवक्षणीयत्वादिति भावः ।

ಇಬ್ಬರ ಮತದಲ್ಲಿಯೂ ಹಿಂದಿನ ಸೂತ್ರದಲ್ಲಿ ಉತ್ತರೋತ್ಪಾದವಿದ್ದರೂ ಪೂರ್ವನಿರೋಧ ಏಕೆ ? ಯಾವ ಕಾರಣದಿಂದ ಹೇತು ಇಲ್ಲದಿದ್ದರೂ ಕಾರ್ಯೋತ್ಪತ್ತಿಯು ಆಗಬೇಕಾದೀತು ಎಂದು ಆಶಂಕೆಯನ್ನು ಮಾಡಿದರೆ, ಹಾಗಲ್ಲದೇ ಹೋದರೆ ಕಾರ್ಯಕಾರಣಗಳಿಗೆ ಯೌಗಪದ್ಯ ಎಂಬುದನ್ನು ಹೇಳಲೇಬೇಕು. ಆಗ ಮುಂದಿನ ಸೂತ್ರದಿಂದ ಪುನರುಕ್ತಿ ಎಂಬ ದೋಷ ಬಂದೇ ಬರುತ್ತದೆ.

**तात्पर्यचन्द्रिका**

**यच्चोक्तं प्रतिसंख्याविनाशोऽप्रतिसंख्याविनाशश्च वैनाशिकैर्निरन्वयः स्वीकृतः।**

("ಪ್ರತಿಸಂಖ್ಯಾವಿನಾಶೋಽಪ್ರತಿಸಂಖ್ಯಾವಿನಾಶಶ್ಚ" ಎಂಬ ಸೂತ್ರಕ್ಕೆ ಅದ್ವೈತಿಗಳ ಹಾಗೂ ವಿಶಿಷ್ಟಾದ್ವೈತಿಗಳ ಮತಖಂಡನೆ) ನೀನು "ಪ್ರತಿಸಂಖ್ಯಾವಿನಾಶೋಽಪ್ರತಿಸಂಖ್ಯಾವಿನಾಶಶ್ಚ" ಎಂಬ ಸೂತ್ರಕ್ಕೆ ವೈನಾಶಿಕರು ಅಂದರೆ ಬೌದ್ಧರು ನಿರನ್ವಯನಾಶ ಅಂದರೆ ನಿಃಶೇಷನಾಶವನ್ನು ಹೇಳಿದ್ದಾರೆ.

**स न युक्तः । कुण्डलादिविनाशे सुवर्णाद्यन्वयाविच्छेदात् ।**

ಅದು ಸರಿಯಲ್ಲ. ಏಕೆಂದರೆ, ನಿಃಶೇಷನಾಶವೆಂಬುದೇ ಜಗತ್ತಿನಲ್ಲಿ ಇಲ್ಲ. ಕುಂಡಲಾದಿಗಳ ನಾಶದಲ್ಲಿಯೂ ಕೂಡ ಮೂಲವಸ್ತುವಾದ ಸುವರ್ಣವು ಉಳಿದೇ ಇರುತ್ತದೆ.

**तप्तशिलातलपतितजलबिन्दुविनाशोऽपि न निरन्वयः ।**

ನಿಃಶೇಷನಾಶಕ್ಕೆ ಒಂದು ದೃಷ್ಟಾಂತ ಇದೆ. ಕಾದ ಕಲ್ಲಿನ ಮೇಲೆ ಬಿದ್ದ ನೀರಿನ ಹನಿ ಸಂಪೂರ್ಣವಾಗಿ ನಾಶವಾಗುತ್ತದೆ. ಹಾಗಾಗಿ ನಿಃಶೇಷನಾಶ ಇಲ್ಲ ಎಂದು ಹೇಗೆ ಹೇಳಿದಿರಿ ? ಎಂದರೆ ಈ ನಾಶವೂ ನಿಃಶೇಷನಾಶವಲ್ಲ.

**यतः ''उदबिन्दौ च सिन्धौ च तोयभावो न भिद्यते । विनष्टेऽपि ततो बिन्दावस्ति तस्यान्वयोऽम्बुधात्'' इति पञ्चमार्थ इति ।**

ಏಕೆಂದರೆ ಕಾದ ಕಲ್ಲಿನ ಮೇಲೆ ಬಿದ್ದ ನೀರಿನ ಬಿಂದು ನಾಶವಾದರೂ ಅದರಲ್ಲಿರುವ ಜಲತ್ವ ಎಂಬ ಜಾತಿ ನಾಶವಾಗುವುದಿಲ್ಲ. ಜಾತಿನಿತ್ಯವಾದ್ದರಿಂದ. ಈ ಜಲತ್ವಜಾತಿಯು ಸಮುದ್ರದಲ್ಲಿದೆ. ಹಾಗಾಗಿ ವ್ಯಕ್ತಿನಾಶವಾದರೂ ಜಾತಿ ಉಳಿಯುವುದರಿಂದ ಈ ನಾಶವೂ ನಿಃಶೇಷನಾಶವಾಗಲಾರದು. ಹೀಗೆ ಐದನೆಯ ಸೂತ್ರದಲ್ಲಿ ಬೌದ್ಧರ ಖಂಡನೆಯನ್ನು ಅದ್ವೈತಿಗಳು ಮಾಡಿದ್ದಾರೆ.

**तन्न ।**

ಇದು ಸರಿಯಲ್ಲ.

**मम रीत्याऽध्याहारं विना निरोधस्वरूपनिरासकत्वे सम्भवत्यध्याहारेण निरन्वयत्वविशिष्टनिरोधनिरासकत्वायोगात् ।**

ನಮ್ಮ ಮತಪ್ರಕಾರ ಯಾವುದೇ ಅಧ್ಯಾಹಾರವಿಲ್ಲದೇ ಬೌದ್ಧರು ಹೇಳುವ ನಿಃಸಂತಾನ ಸಸಂತಾನ ಎಂಬ ಎರಡು ವಿಧವಾದ ನಾಶದ ಸ್ವರೂಪವನ್ನೇ ಖಂಡನೆ ಮಾಡಲು ಬರುವಾಗ ನೀನು ಅಧ್ಯಾಹಾರವನ್ನೂ ಮಾಡಿಕೊಂಡು ಕೇವಲ ನಿರನ್ವಯತ್ವದಿಂದ ಕೂಡಿದ ನಾಶವನ್ನು ನಿರಾಕರಣೆ ಮಾಡುವುದು ಯುಕ್ತವಲ್ಲ.

**त्वदभिप्रेतमूलाविद्याविनाशस्य निरन्वयत्वाच्च ।**

ಶಂಕರ ರಾಮಾನುಜ ಇಬ್ಬರ ಮತದಲ್ಲೂ 'ಅಸತಿ ಪ್ರತಿಜ್ಞೋಪರೋಧೌ ಯೌಗಪದ್ಯಮನ್ಯಥಾ' ಎಂಬ ಅಂಶಕ್ಕೆ "ಉತ್ತರೋತ್ಪಾದೇ ಚ" ಎಂಬ ಸೂತ್ರದಿಂದ ಪುನರುಕ್ತಿಯನ್ನು ಹೇಳುತ್ತಿದ್ದಾರೆ 'ಚತುರ್ಥೇ ತು' ಎಂಬುದರಿಂದ.

**प्रकाशः** – पूर्वत्र ह्युत्तरस्य क्षणिककार्यस्योत्पादे पूर्वस्य निरोधाद्विनाशादसति कारणे कार्योत्पत्तौ सर्वदा कार्योत्पत्तिस्स्यादित्युक्तम् ।

ನೀವು ಹಿಂದಿನ ಸೂತ್ರದಲ್ಲಿ 'ಮುಂದಿನ ಕ್ಷಣಿಕಕಾರ್ಯದ ಉತ್ಪತ್ತಿಯಾಗುವಾಗ ಕಾರಣವು ನಾಶವಾಗಿರುತ್ತದೆ. ಆದ್ದರಿಂದ ಕಾರಣ ಇಲ್ಲದಿದ್ದರೂ ಕಾರ್ಯದ ಉತ್ಪತ್ತಿಯಾಗಬೇಕಾಗುತ್ತದೆ ಎಲ್ಲಾ ಕಾಲದಲ್ಲಿಯೂ ಕಾರ್ಯೋತ್ಪತ್ತಿಯಾಗಬೇಕಾಗುತ್ತದೆ' ಎಂದು ಹೇಳಿದ್ದೀರಿ.

**प्रकाशः** – इहत्वसत्यपि हेतौ कार्योत्पत्तावुच्यमानायां चतुर्विधान् हेतून् प्रतीत्यचित्यचैत्या उत्पद्यन्त इत्यधिपतिसहकार्यालम्बनसमनन्तरप्रत्ययाश्चत्वारो विमानोत्पत्तौ हेतव इति त्वदीयप्रतिज्ञोपरोधः ।

ಇಲ್ಲಿ (ಈ ಸೂತ್ರದಲ್ಲಿ) ಕಾರಣವಿಲ್ಲದಿದ್ದರೂ ಕಾರ್ಯವಿದೆ ಎಂದು ಹೇಳಿದರೆ 'ಚತುರ್ವಿಧಾನ್ ಹೇತೂನ್ ಪ್ರತೀತ್ಯಚತ್ಯಚೈತ್ಯಾ ಉತ್ಪದ್ಯಂತೇ.....' ಎಂಬುದಾಗಿ ನೀನೇ ಸ್ವಗ್ರಂಥದಲ್ಲಿ ಏನು ಪ್ರತಿಜ್ಞಾ ಮಾಡಿರುವಿಯೋ ಅದಕ್ಕೆ ವಿರೋಧ ಬರುತ್ತದೆ.

**प्रकाशः** – अन्यथा कार्यस्य क्षणे कारणस्य सत्त्वे कारणकार्ययोर्यौग-पद्यमित्युभाभ्यामर्थ उक्तः ।

ಹಾಗಲ್ಲದೇ ಹೋದರೆ ಕಾರ್ಯವಿರುವಾಗ ಕಾರಣವಿದ್ದರೆ. ಆಗ ಕಾರ್ಯಕಾರಣಗಳು ಒಂದೇ ಕ್ಷಣದಲ್ಲಿರಬೇಕಾಗುತ್ತದೆ ಎಂಬ ಅರ್ಥವನ್ನು ಇಬ್ಬರೂ ಹೇಳಿದ್ದೀರಿ.

**प्रकाशः** – तत्र मतद्वयेऽपि पूर्वसूत्रे उत्तरोत्पादे पूर्वस्य निरोधः कुतः । येनासति हेतौ कार्योत्पादस्स्यादिति शङ्किते यौगपद्यमन्यथेत्यस्यावश्यं विवक्षणीयत्वादिति भावः ।

ಇಬ್ಬರ ಮತದಲ್ಲಿಯೂ ಹಿಂದಿನ ಸೂತ್ರದಲ್ಲಿ ಉತ್ತರೋತ್ಪಾದವಿದ್ದರೂ ಪೂರ್ವನಿರೋಧ ಏಕೆ ? ಯಾವ ಕಾರಣದಿಂದ ಹೇತು ಇಲ್ಲದಿದ್ದರೂ ಕಾರ್ಯೋತ್ಪತ್ತಿಯು ಆಗಬೇಕಾದೀತು ಎಂದು ಆಶಂಕೆಯನ್ನು ಮಾಡಿದರೆ, ಹಾಗಲ್ಲದೇ ಹೋದರೆ ಕಾರ್ಯಕಾರಣಗಳಿಗೆ ಯೌಗಪದ್ಯ ಎಂಬುದನ್ನು ಹೇಳಲೇಬೇಕು. ಆಗ ಮುಂದಿನ ಸೂತ್ರದಿಂದ ಪುನರುಕ್ತಿ ಎಂಬ ದೋಷ ಬಂದೇ ಬರುತ್ತದೆ.

ಪ್ರತಿಸಂಖ್ಯಾ ಎಂಬ ಸೂತ್ರಕ್ಕೆ ಉಭಯಮತ ನಿರಾಕರಣೆ

**तात्पर्यचन्द्रिका**

**यच्चोक्तं प्रतिसंख्याविनाशोऽप्रतिसंख्याविनाशश्च वैनाशिकैर्निरन्वयः स्वीकृतः।**

("ಪ್ರತಿಸಂಖ್ಯಾವಿನಾಶೋऽಪ್ರತಿಸಂಖ್ಯಾವಿನಾಶಶ್ಚ" ಎಂಬ ಸೂತ್ರಕ್ಕೆ ಅದ್ವೈತಿಗಳ ಹಾಗೂ ವಿಶಿಷ್ಟಾದ್ವೈತಿಗಳ ಮತಖಂಡನೆ) ನೀನು "ಪ್ರತಿಸಂಖ್ಯಾವಿನಾಶೋऽಪ್ರತಿಸಂಖ್ಯಾವಿನಾಶಶ್ಚ" ಎಂಬ ಸೂತ್ರಕ್ಕೆ ವೈನಾಶಿಕರು ಅಂದರೆ ಬೌದ್ಧರು ನಿರನ್ವಯನಾಶ ಅಂದರೆ ನಿಃಶೇಷನಾಶವನ್ನು ಹೇಳಿದ್ದಾರೆ.

**स न युक्तः । कुण्डलादिविनाशे सुवर्णाद्यन्वयाविच्छेदात् ।**

ಅದು ಸರಿಯಲ್ಲ. ಏಕೆಂದರೆ, ನಿಃಶೇಷನಾಶವೆಂಬುದೇ ಜಗತ್ತಿನಲ್ಲಿ ಇಲ್ಲ. ಕುಂಡಲಾದಿಗಳ ನಾಶದಲ್ಲಿಯೂ ಕೂಡ ಮೂಲವಸ್ತುವಾದ ಸುವರ್ಣವು ಉಳಿದೇ ಇರುತ್ತದೆ.

**तप्तशिलातलपतितजलबिन्दुविनाशोऽपि न निरन्वयः ।**

ನಿಃಶೇಷನಾಶಕ್ಕೆ ಒಂದು ದೃಷ್ಟಾಂತ ಇದೆ. ಕಾದ ಕಲ್ಲಿನ ಮೇಲೆ ಬಿದ್ದ ನೀರಿನ ಹನಿ ಸಂಪೂರ್ಣವಾಗಿ ನಾಶವಾಗುತ್ತದೆ. ಹಾಗಾಗಿ ನಿಃಶೇಷನಾಶ ಇಲ್ಲ ಎಂದು ಹೇಗೆ ಹೇಳಿದಿರಿ ? ಎಂದರೆ ಈ ನಾಶವೂ ನಿಃಶೇಷನಾಶವಲ್ಲ.

**यतः "उदबिन्दौ च सिन्धौ च तोयभावो न भिद्यते । विनष्टेऽपि ततो बिन्दावस्ति तस्यान्वयोऽम्बुधात्" इति पञ्चमार्थ इति ।**

ಏಕೆಂದರೆ ಕಾದ ಕಲ್ಲಿನ ಮೇಲೆ ಬಿದ್ದ ನೀರಿನ ಬಿಂದು ನಾಶವಾದರೂ ಅದರಲ್ಲಿರುವ ಜಲತ್ವ ಎಂಬ ಜಾತಿ ನಾಶವಾಗುವುದಿಲ್ಲ. ಜಾತಿನಿತ್ಯವಾದ್ದರಿಂದ. ಈ ಜಲತ್ವಜಾತಿಯು ಸಮುದ್ರದಲ್ಲಿದೆ. ಹಾಗಾಗಿ ವ್ಯಕ್ತಿನಾಶವಾದರೂ ಜಾತಿ ಉಳಿಯುವುದರಿಂದ ಈ ನಾಶವೂ ನಿಃಶೇಷನಾಶವಾಗಲಾರದು. ಹೀಗೆ ಐದನೆಯ ಸೂತ್ರದಲ್ಲಿ ಬೌದ್ಧರ ಖಂಡನೆಯನ್ನು ಅದ್ವೈತಿಗಳು ಮಾಡಿದ್ದಾರೆ.

**तन्न ।**

ಇದು ಸರಿಯಲ್ಲ.

**मम रीत्याऽध्याहारं विना निरोधस्वरूपनिरासकत्वे सम्भवत्यध्याहारेण निरन्वयत्वविशिष्टनिरोधनिरासकत्वायोगात् ।**

ನಮ್ಮ ಮತಪ್ರಕಾರ ಯಾವುದೇ ಅಧ್ಯಾಹಾರವಿಲ್ಲದೇ ಬೌದ್ಧರು ಹೇಳುವ ನಿಃಸಂತಾನ ಸಸಂತಾನ ಎಂಬ ಎರಡು ವಿಧವಾದ ನಾಶದ ಸ್ವರೂಪವನ್ನೇ ಖಂಡನೆ ಮಾಡಲು ಬರುವಾಗ ನೀನು ಅಧ್ಯಾಹಾರವನ್ನೂ ಮಾಡಿಕೊಂಡು ಕೇವಲ ನಿರನ್ವಯತ್ವದಿಂದ ಕೂಡಿದ ನಾಶವನ್ನು ನಿರಾಕರಣೆ ಮಾಡುವುದು ಯುಕ್ತವಲ್ಲ.

**त्वदभिप्रेतमूलाविद्याविनाशस्य निरन्वयत्वाच्च ।**

ನೀನು ನಿರನ್ವಯನಾಶವನ್ನು ಖಂಡನೆ ಮಾಡಲು ಬರುವುದೂ ಇಲ್ಲ. ಏಕೆಂದರೆ, ನಿನ್ನ ಮತದಲ್ಲೇ ನಿಃಶೇಷನಾಶವನ್ನು ಅವಿದ್ಯಾವಿಗೆ ಒಪ್ಪಿರುವಿ. ಮೂಲವಿದ್ಯಾ ಎಂಬುದು ಸಂಪೂರ್ಣವಾಗಿ ನಾಶವಾಗುತ್ತದೆ ಎಂದು ನೀನೇ ಹೇಳಿರುವಿ.

**प्रकाशः –**

मतद्वयेऽपि ''प्रतिसंख्याप्रतिसंख्यानिरोध'' इति सूत्रार्थमनूद्य निराह – **यच्चोक्तमिति ।।**

ಶಂಕರ ರಾಮಾನುಜ ಇಬ್ಬರ ಮತದಲ್ಲಿಯೂ ''ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧ'' ಎಂಬ ಸೂತ್ರದ ವ್ಯಾಖ್ಯಾನ ಸರಿಯಲ್ಲ ಎಂಬುದಾಗಿ ಅವರ ಮತವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚೋಕ್ತಂ' ಎಂಬುದರಿಂದ.

**प्रकाशः –** बुद्धिपूर्वविनाशोऽबुद्धिपूर्वविनाशश्चेत्यर्थः ।

''ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧ'', ''ಅಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧ'' ಶಬ್ದಗಳಿಗೆ ಬುದ್ಧಿಪೂರ್ವಕ-ನಾಶ, ಅಬುದ್ಧಿಪೂರ್ವಕನಾಶ ಎಂದರ್ಥ.

**प्रकाशः –** निरन्वयः कारणान्वयशून्यः । निश्शेष इति यावत् ।।

'ನಿರನ್ವಯ' ಎಂದರೆ ಕಾರಣದ ಅನುವೃತ್ತಿ ಇಲ್ಲದೆ ಎಂದರ್ಥ. ನಿಃಶೇಷ ಎಂದಭಿಪ್ರಾಯ.

**प्रकाशः – स न युक्त इति ।।** एतेन प्रतिसंख्याप्रतिसंख्यानिरोधयोर्निरन्वययोर-प्राप्तिरसम्भव इति सूत्रांशस्यार्थः सूचितो भवति ।

ಹೀಗೆ ಅನುಮಾನ ಮಾಡಿದ್ದರಿಂದ ಪ್ರತಿಸಂಖ್ಯಾನಿರೋಧ ಹಾಗೂ ಅಪ್ರತಿಸಂಖ್ಯಾನಿರೋಧ ಎಂಬ ಎರಡು ನಿರನ್ವಯನಾಶಗಳ ಅಪ್ರಾಪ್ತಿ ಅಂದರೆ ಅಸಂಭವ ಎಂಬುದು ಅವರ ಸೂತ್ರಾರ್ಥ ಎಂದು ಸೂಚಿಸಿದಂತಾಯಿತು.

**प्रकाशः –** भामत्युक्तमेवाह – **तप्तशिलेत्यादि ।।**

'ತಪ್ತಶಿಲಾ' ಎಂಬ ಈ ಕಾರಿಕೆಯು ಭಾಮತಿಯಲ್ಲಿ ಹೇಳಲಾಗಿದೆ.

**प्रकाशः –** उदबिन्दौ उपलतलपतिते सिन्धौ समुद्रे च तोयभावः तोयत्वसामान्यं न भिद्यते । तस्मादुदबिन्दौ विनष्टेऽपि तस्य बिन्दोस्सामान्यरूपेण सिन्धावस्त्यन्वय इति श्लोकार्थः कल्पतरूक्तो ध्येयः ।

ಈ ಕಾರಿಕಾಗೆ ಕಲ್ಪತರು ಎಂಬ ಗ್ರಂಥದಲ್ಲಿ (ಭಾಮತಿಯ ವ್ಯಾಖ್ಯಾನ) ಹೀಗೆ ಹೇಳಲಾಗಿದೆ. ನೀರಿನ ಹನಿಯಲ್ಲಿ ಅಂದರೆ ಕಾದಕಲ್ಲಿನ ಮೇಲೆ ಬಿದ್ದ ನೀರಿನ ಹನಿಯಲ್ಲಿ ಹಾಗೂ ಸಿಂಧು(ಸಮುದ್ರ)ವಿನಲ್ಲಿ

ತೋಯಭಾವ ಅಂದರೆ ಜಲತ್ವಜಾತಿ ಒಂದೇ ಆಗಿದೆ. ಅದರಲ್ಲಿ ಭೇದವಿಲ್ಲ. ಹಾಗಾಗಿ ಈ ನೀರಿನ ಹನಿ ನಷ್ಟವಾದರೂ ಆ ಬಿಂದುವಿನಲ್ಲಿರುವ ಜಾತಿಯು ಸಿಂಧುವಿನಲ್ಲಿಯೂ ಇದೆ.

**प्रकाशः – रामानुजभाष्येऽपि निर्वाणप्रदीपादौ सूक्ष्मदशापत्त्याप्यनुलम्भोपपत्ते रित्युक्तम् ।**

ರಾಮಾನುಜ ಭಾಷ್ಯದಲ್ಲಿಯೂ ಅದಕ್ಕೆ ವ್ಯಾಖ್ಯಾನವಾದ ನಿರ್ವಾಣಪ್ರಕಾಶ ಎಂಬ ಗ್ರಂಥದಲ್ಲಿಯೂ ನಿಃಶೇಷನಾಶವನ್ನು ಖಂಡಿಸಲಾಗಿದೆ. ಸೂಕ್ಷ್ಮದಶೆ (ಅವಸ್ಥೆ)ಯನ್ನು ಒಪ್ಪಿ, ಒಂದು ದೀಪ ಆರಿಹೋದರೂ ಅದು ಸೂಕ್ಷ್ಮರೂಪದಿಂದ ಇರುತ್ತದೆ ಎಂದು ಹೇಳಿ ನಿಃಸಂತಾನನಾಶವನ್ನು ನಿರಾಕರಿಸಲಾಗಿದೆ.

**प्रकाशः – व्यभिचरितश्चाविच्छेदादिहेतुरित्याह – त्वदभिप्रेतेति ॥**

ಅದ್ವೈತಿ ಹೇಳಿದ ಅರ್ಥದ ಪ್ರಕಾರ ಸೂತ್ರದಲ್ಲಿರುವ 'ಅವಿಚ್ಛೇದಾತ್' ಎಂಬ ಹೇತುವಿಗೆ ಅವನ ಮತರೀತ್ಯಾ ವ್ಯಭಿಚಾರ ಬರುತ್ತದೆ ಎಂದು ಹೇಳುತ್ತಿದ್ದಾರೆ 'ತ್ವದಭಿಪ್ರೇತಾ' ಎಂಬುದರಿಂದ.

### ಆರನೆಯ ಸೂತ್ರಕ್ಕೆ ಅದ್ವೈತಮತ ನಿರಾಕರಣೆ

## तात्पर्यचन्द्रिका

**यच्चोक्तं अविद्यादिविनाशस्तत्वज्ञानादिना वा स्वयमेव वा । आद्ये निर्हेतुर्नाश इति मतहानिः । द्वितीये मोक्षसाधनोपदेशोऽनर्थक इति षष्ठार्थ इति तन्न ।**

ಬೌದ್ಧರನ್ನು ಕುರಿತು ಅದ್ವೈತಿ ಮಾಡುವ ಪ್ರಶ್ನೆ - ಹಿಂದೆ ಹೇಳಿದ ಅವಿದ್ಯಾ ಜರಾಮರಣ ಇತ್ಯಾದಿಗಳ ವಿನಾಶವು ತತ್ವಜ್ಞಾನದಿಂದ ಆಗುತ್ತದೋ ಅಥವಾ ಸ್ವತಃ ಆಗುತ್ತದೋ? ತತ್ವಜ್ಞಾನದಿಂದ ಆಗುತ್ತದೆ ಎಂದರೆ ಆಗ ನೀವು ಹೇಳುವ ನಾಶವು ನಿರ್ಹೇತುಕ (ಕಾರಣರಹಿತ) ಎಂಬ ನಿಮ್ಮ ಮತ ಬಿದ್ದುಹೋಯಿತು. ಸ್ವತಃ ನಾಶವಾಗುತ್ತದೆ ಎಂದರೆ ಮೋಕ್ಷಸಾಧನರೂಪವಾದ ಉಪದೇಶವು ಅನರ್ಥಕ ಎಂದು. "ಉಭಯಥಾ ಚ ದೋಷಾತ್" ಎಂಬ ಆರನೆಯ ಸೂತ್ರಕ್ಕೆ ಅದ್ವೈತಿಗಳು ಅರ್ಥ ಹೇಳುತ್ತಾರೆ. ಆದರೆ ಇದು ಸರಿಯಲ್ಲ.

**बाह्यैः स्वाभाविकस्य क्षणविनाशस्य निर्हेतुकत्वेऽपि नैमित्तिकस्य सन्तानविनाशस्य निर्हेतुकत्वास्वीकारात् ।**

ಬೌದ್ಧರು ಸ್ವಾಭಾವಿಕವಾದ ಕ್ಷಣವಿನಾಶವನ್ನು ಕಾರಣರಹಿತ ಎಂದು ಒಪ್ಪಿದರೂ ನೈಮಿತ್ತಿಕವಾದ ಸಸಂತಾನನಾಶವನ್ನು ನಿರ್ಹೇತುಕ ಎಂದು ಒಪ್ಪಿಲ್ಲ. ಹಾಗಾಗಿ ನೀವು ಮಾಡಿದ ನಿರಾಕರಣೆ ಸರಿಯಲ್ಲ. ಅವಿದ್ಯಾನಾಶ ಸಸಂತಾನವಿನಾಶವಾದ್ದರಿಂದ ಸಹೇತುಕವೇ ಆಗಬೇಕು. ಅದಕ್ಕೆ ನೀವು ಅವರಿಗೆ ಹೇಳಿದ

ಅಪಸಿದ್ಧಾಂತ ಎಂಬ ದೋಷ ಬರುವುದಿಲ್ಲ. ಏಕೆಂದರೆ, ಅವರು ಎರಡೂವಿಧವಾದ ನಾಶವನ್ನು ಅಂಗೀಕರಿಸಿದ್ದಾರೆ.

**यच्चोक्तं आकाशे चायुक्तो निरुपाख्यत्वाभ्युपगमः । प्रतिसंख्याप्रतिसंख्यानिरोधयोरिवाकाशेऽपि वस्तुत्वप्रतिपत्तेरविशेषादिति सप्तमार्थः ।**

'ಆಕಾಶೇ ಚಾವಿಶೇಷಾತ್' ಎಂಬ ಸೂತ್ರಕ್ಕೆ ಅದ್ವೈತಿಗಳು ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ಆಕಾಶದಲ್ಲಿ ನೀವು ಹೇಳುವ ನಿರುಪಾಖ್ಯತ್ವವು ಸರಿಯಲ್ಲ. ನಿರುಪಾಖ್ಯ ಎಂಬ ಶಬ್ದಕ್ಕೆ ಅಸತ್ ಎಂದರ್ಥ. ಏಕೆಂದರೆ ಸಸಂತಾನನಾಶ ನಿಃಸಂತಾನನಾಶಕ್ಕೆ ವಿಷಯವಾದ ವಸ್ತುಗಳಲ್ಲಿ ಹೇಗೋ ಹಾಗೇ ಆಕಾಶದಲ್ಲಿಯೂ ವಸ್ತುತ್ವ = ಸತ್ಯತ್ವ ಪ್ರತೀತಿಯು ಒಂದೇ ರೀತಿ ಬರುತ್ತದೆ.

(ಬೌದ್ಧರು ಆಕಾಶವನ್ನು ನಿತ್ಯ ಎಂದು ಒಪ್ಪಿದರೂ ಅಸತ್ ಎಂದು ಒಪ್ಪುತ್ತಾರೆ.)

**अष्टमस्य तु अहमर्थस्य प्रतिक्षणं भेदे स्मृतिर्न स्यात् । अनुभवितुरेव स्मर्तृत्वादित्यर्थ इति तन्न ।**

''ಅನುಸ್ಮೃತೇಶ್ಚ'' ಎಂಬ ಎಂಟನೇ ಸೂತ್ರಕ್ಕೆ ಹೀಗೆ ಅರ್ಥ - ಅಹಮರ್ಥ ಎಂದರೆ ಆತ್ಮ ಅವನಿಗೂ ಪ್ರತಿಕ್ಷಣದಲ್ಲಿಯೂ ಭೇದವನ್ನು ಒಪ್ಪಿದರೆ ಸ್ಮೃತಿಯೇ ಕೂಡುವುದಿಲ್ಲ. ಏಕೆಂದರೆ, ಯಾರಿಗೆ ಅನುಭವ ಬರುತ್ತದೋ ಅವನಿಗೆ ಸ್ಮೃತಿ ಬರಬೇಕು. ಪ್ರತಿಕ್ಷಣ ಭೇದ ಹೇಳಿದರೆ ಆಗ ಅನುಭವಿತೃ ಬೇರೆ ಸ್ಮರ್ತೃ ಬೇರೆ ಎಂದಾಗುತ್ತದೆ. ಅದು ವಿರುದ್ಧವಾದ್ದರಿಂದ ಎರಡೂ ಸೂತ್ರದ ವ್ಯಾಖ್ಯಾನ ಸರಿಯಲ್ಲ.

**मम रीत्या सप्तमाष्टमयोः क्षणभङ्गविरोधिस्थायित्वरूपैकसाध्यान्वयस्याष्टमस्य च शब्दानुगुणस्य सम्भवे पृथक्साध्याध्याहारायोगात् ।**

ನಮ್ಮ ಪ್ರಕಾರ ಏಳನೆಯ ಹಾಗೂ ಎಂಟನೆಯ ಸೂತ್ರಗಳಿಗೆ ಕ್ಷಣಭಂಗವಿರೋಧಿಯಾದ ಸ್ಥಾಯಿತ್ವ ಎಂಬ ಒಂದೇ ಸಾಧ್ಯವನ್ನು ಹೇಳಲು ಬರುವಾಗ ಬೇರೆ ಬೇರೆ ಸಾಧ್ಯಗಳನ್ನು ಹೇಳಿರುವುದು ಸರಿಯಲ್ಲ. ಅಲ್ಲದೇ ನಮ್ಮ ಪ್ರಕಾರ ಎರಡನೆಯ ಸೂತ್ರದ ವ್ಯಾಖ್ಯಾನ ಸೂತ್ರಶಬ್ದಕ್ಕೆ ಅನುಗುಣವಾಗಿದೆ.

**मम रीत्या स एवाहं तदेवेदमित्यात्मानात्मसाधारणेन प्रत्यभिज्ञानेन विप्रतिपन्नस्य सर्वस्थायित्वस्य साक्षात्साधनसम्भवे स्मृत्यनुभवयोः सामानाधिकरण्यान्यथानुपपत्याऽऽत्ममात्रस्थायित्वसाधनायोगात् ।**

ನಮ್ಮ ಪ್ರಕಾರ ''ಅವನೇ ನಾನು'' ''ಅದೇ ಇದು'' ಎಂಬ ಜಡಚೇತನ ಸಾಮಾನ್ಯವಾದ ಪ್ರತಿಭಿಜ್ಞಾದಿಂದ ವಿವಾದಾಸ್ಪದವಾದ ಸ್ಥಾಯಿತ್ವವನ್ನು ಸಾಕ್ಷಾತ್ ಸಾಧಿಸಲು ಬರುವಾಗ ನೀವು ಹೇಳುವ ಸ್ಮೃತಿ ಹಾಗೂ ಅನುಭವಗಳಿಗೆ ಸಾಮಾನಾಧಿಕರಣ್ಯ ಕೂಡುವುದಿಲ್ಲ ಎಂಬ ಚೇತನಮಾತ್ರಕ್ಕೆ ಸ್ಥಾಯಿತ್ವವನ್ನು ಸಾಧಿಸುವ (ಅರ್ಥ) ವ್ಯಾಖ್ಯಾನ ಸರಿಯಲ್ಲ.

**कथञ्च प्रत्यहं सुषुप्तिदशायामहमर्थनाशं वदतस्तव मते स्मृत्यनुभवयोः सामानाधिकरण्यम् ।**

ನೀನು ಸ್ಮೃತಿ ಹಾಗೂ ಅನುಭವಗಳಿಗೆ ಸಾಮಾನಾಧಿಕರಣ್ಯವನ್ನು ಹೇಳುವುದೇ ಕೂಡುವುದಿಲ್ಲ. ಏಕೆಂದರೆ, ನಿನ್ನ ಮತದಲ್ಲಿ ಅಹಮರ್ಥನಾದ ಆತ್ಮನಿಗೆ ಸುಷುಪ್ತಿ ಅವಸ್ಥೆಯಲ್ಲಿ ನಾಶವನ್ನು ಒಪ್ಪಿರುವುದರಿಂದ.

**कथं वा स एवाहमिति प्रत्यभिज्ञा ।**

ಸುಷುಪ್ತಿದಶೆಯಲ್ಲಿ ಆತ್ಮನಿಗೆ ನಾಶವನ್ನು ಹೇಳುವ ನೀನು ಆತ್ಮನಿಗೆ 'ಅವನೇ ನಾನು' ಎಂಬ ಪ್ರತಿಭಿಜ್ಞಾವನ್ನು ಹೇಗೆ ಒಪ್ಪುತ್ತೀಯಾ?

**कथञ्च दृष्टिसृष्टिमते तदेवेदमिति प्रत्यभिज्ञा ।**

ಅದ್ವೈತಿಯಲ್ಲಿ ಎರಡು ಮತಗಳಿವೆ. ಒಂದು ಪ್ರತಿಕರ್ಮವ್ಯವಸ್ಥೆ ಇನ್ನೊಂದು ದೃಷ್ಟಿಸೃಷ್ಟಿ. ಇವೆರಡರಲ್ಲಿ ಪ್ರತಿಕರ್ಮವ್ಯವಸ್ಥೆಯ ಪ್ರಕಾರ "ಅದೇ ಇದು" ಎಂಬ ಪ್ರತೀತಿ ಕೂಡುತ್ತದೆ. ಆದರೆ, ಉತ್ತಮಾಧಿಕಾರಿಗಳಿಗೆ ಹೇಳಿರುವ ದೃಷ್ಟಿಸೃಷ್ಟಿ ಎಂಬ ಮತದ ಪ್ರಕಾರ ಈ ಪ್ರತ್ಯಭಿಜ್ಞಾ ಕೂಡುವುದೇ ಇಲ್ಲ.

**कथञ्च तस्याभ्रांतित्वे क्षणिकत्वनिरासः ।**

ಹೀಗೆ ದೃಷ್ಟಿಸೃಷ್ಟಿ ಮತದ ಪ್ರಕಾರ 'ಅದೇ ಇದು' ಎಂಬ ಪ್ರತ್ಯಭಿಜ್ಞೆಯು ಭ್ರಾಂತಿ ಎಂದಾಯಿತು. ಭ್ರಾಂತಿರೂಪವಾದ ಈ ಪ್ರತ್ಯಭಿಜ್ಞಾದಿಂದ ಹೇಗೆ ಕ್ಷಣಿಕತ್ವವನ್ನು ನಿರಾಕರಣೆ ಮಾಡುತ್ತೀರಿ?

**यदि चाप्रतीतिदशायामपि घटादिरस्ति तर्हि न मिथ्या ।**

ಹಾಗಾದರೆ ದೃಷ್ಟಿಸೃಷ್ಟಿಯನ್ನು ಹೇಳದೇ ಪ್ರತಿಕರ್ಮವ್ಯವಸ್ಥೆಯನ್ನೇ ಹೇಳುತ್ತೇನೆ ಎಂದರೆ ನಿನ್ನ ಮಿಥ್ಯಾತ್ವ ಮತಕ್ಕೆ ವಿರೋಧ ಬರುತ್ತದೆ. ಏಕೆಂದರೆ, ನಾವು ನೋಡುವುದಕ್ಕೆ ಮೊದಲೇ ವಸ್ತು ಇದೆ ಎಂದಾದರೆ ಅದು ಮಿಥ್ಯಾ ಆಗುವುದು ಹೇಗೆ ? ಮಿಥ್ಯಾತ್ವ ಎಂದರೆ ಪ್ರತೀತಿಕಾಲದಲ್ಲಿ ಮಾತ್ರ ಇರುವುದು ಎಂದರ್ಥ. ಈಗ ಪ್ರತೀತಿಯ ಪೂರ್ವದಲ್ಲೋ ನಂತರದಲ್ಲೋ ಘಟಾದಿಗಳು ಇವೆ ಎಂದರೆ ಅದು ಮಿಥ್ಯಾ ಆಗುವುದಕ್ಕೆ ಸಾಧ್ಯವಿಲ್ಲ. ಹಾಗಾಗಿ ಪ್ರತಿಕರ್ಮವ್ಯವಸ್ಥೆಯನ್ನು ಒಪ್ಪಿದರೆ ನಿನ್ನ ಮತಕ್ಕೇ ವಿರೋಧ ಬರುತ್ತದೆ.

**प्रकाशः –**

''उभयथा च दोषात्'' इत्येतत्सूत्रार्थं परभाष्योक्तमनूद्य निराह – **यच्चोक्तमविद्येति** ।। परैरिति योज्यम् । तत्वज्ञानादिनेत्यादिपदेन यमनियमादिच्छ्रवणमनादिश्च भामत्युक्तो ज्ञानसहकारी ग्राह्यः ।।

'ಉಭಯಥಾ ಚ ದೋಷಾತ್' ಎಂಬ ಸೂತ್ರಕ್ಕೆ ಅದ್ವೈತಿಗಳು ಹೇಳಿರುವ ಅರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚೋಕ್ತಂ' ಎಂಬುದರಿಂದ. 'ಯಚ್ಚೋಕ್ತಂ' ಎಂಬಲ್ಲಿ ಪರೈಃ ಎಂದು ಸೇರಿಸಿಕೊಳ್ಳಬೇಕು. ತತ್ವಜ್ಞಾನಾದಿನಾ ಎಂಬಲ್ಲಿ ಆದಿಪದದಿಂದ ಯಮ, ನಿಯಮ ಮೊದಲಾದುದನ್ನೂ ಶ್ರವಣ ಮನನಾದಿಗಳನ್ನೂ ಭಾಮತಿಯಲ್ಲಿ ಹೇಳಿರುವಂತೆ ತತ್ವಜ್ಞಾನ ಸಹಕಾರಿಗಳನ್ನು ಗ್ರಹಿಸಬೇಕು.

**प्रकाशः** – सन्तानविनाशस्येति ।। प्रतिसंख्याविनाशस्येत्यर्थः । ''योऽयमविद्यानिरोधः प्रतिसंख्यानिरोधान्तःपातीति परिकल्पित'' इति त्वद्भाष्येऽविद्यानाशस्य सन्ताननाशान्तःपातित्वेनानुवादादिति भावः ।

ಮೂಲದಲ್ಲಿ ಸಂತಾನವಿನಾಶಶಬ್ದದಿಂದ ಪ್ರತಿಸಂಖ್ಯಾವಿನಾಶ ಎಂಬರ್ಥವನ್ನು ತೆಗೆದುಕೊಳ್ಳಬೇಕು. ಹಾಗೆಂದು ಅದ್ವೈತಿಯು ಎಲ್ಲಿ ಹೇಳಿದ್ದಾನೆ ಎಂದರೆ ಅದಕ್ಕೆ 'ಯೋಽಯಮವಿದ್ಯಾನಿರೋಧಃ ಪ್ರತಿಸಂಖ್ಯಾನಿರೋಧಾಂತಃಪಾತೀತಿ ಪರಿಕಲ್ಪಿತಃ' ಎಂಬುದಾಗಿ ಅದ್ವೈತಿಯೇ ತನ್ನ ಭಾಷ್ಯದಲ್ಲಿ ಹೇಳಿದ್ದಾನೆ. ಅವಿದ್ಯಾನಿರೋಧವು ಪ್ರತಿಸಂಖ್ಯಾನಿರೋಧ(ಸಸಂತಾನನಾಶ)ದಲ್ಲಿ ಸೇರುತ್ತದೆ ಎಂದು ಅವನ ಭಾಷ್ಯದ ಅಭಿಪ್ರಾಯ.

**प्रकाशः** – केषाश्चिन्मते तु सतो निरन्वयविनाशे सत्येकक्षणादूर्ध्वं कृत्स्नस्य जगतस्तुच्छत्वं स्यात् । पश्चात्तुच्छाज्जगदुत्पत्तौ पुनस्तुच्छात्मकमेव स्यादित्युभयथा तुच्छाज्जगदुत्पत्तौ जगतस्तुच्छात्मकत्वोपगतौ च दोषाच्चासमञ्जसं तन्मतम् ।

ರಾಮಾನುಜರು ಹೀಗೆ ಅರ್ಥ ಹೇಳಿದ್ದಾರೆ - ಸತ್ ಆದ ವಸ್ತುವಿಗೆ ನಿರನ್ವಯನಾಶವನ್ನು ಒಪ್ಪಿದರೆ ಒಂದೇ ಕ್ಷಣದಲ್ಲಿ ಇಡೀ ಜಗತ್ತು ಶಶವಿಷಾಣ ಆಗಬೇಕಾಗುತ್ತದೆ. ನಂತರ ಅದೇ ತುಚ್ಛದಿಂದ ಉತ್ಪತ್ತಿಯನ್ನು ಒಪ್ಪಿದರೆ ಆಗ ಆ ಜಗತ್ತೂ ತುಚ್ಛದಂತೆಯೇ ಆಗಬೇಕಾಗುತ್ತದೆ. ಹೀಗೆ ಸೂತ್ರದಲ್ಲಿರುವ 'ಉಭಯಥಾ' ಎಂಬ ಶಬ್ದಕ್ಕೆ ತುಚ್ಛದಿಂದ ಜಗದುತ್ಪತ್ತಿಯನ್ನು ಒಪ್ಪಿದರೂ ಅಥವಾ ಜಗತ್ತಿಗೆ ತುಚ್ಛಸ್ವರೂಪವನ್ನು ಒಪ್ಪಿದರೂ 'ದೋಷಾತ್' ದೋಷ ಬರುವುದರಿಂದ ನಿಮ್ಮ ಮತ ಅಸಮಂಜಸ ಎಂದು.

**प्रकाशः** – आद्ये जगतस्तुच्छतापत्तिर्दोषः । अन्त्येऽभ्युपगमस्तुच्छत्वेन प्रतीत्यभावश्च दोष इत्यर्थः ।

'ಉಭಯಥಾ' ಎನ್ನುವಲ್ಲಿ ಮೊದಲನೇ ಪಕ್ಷದಲ್ಲಿ (ತುಚ್ಛದಿಂದ ಜಗದುತ್ಪತ್ತಿ) ಜಗತ್ತೂ ಕೂಡ ತುಚ್ಛದಂತೆ ಆಗಬೇಕಾಗುತ್ತದೆ ಎಂಬ ದೋಷ. ಎರಡನೇ ಪಕ್ಷದಲ್ಲಿ (ಜಗತ್ತು ತುಚ್ಛಾತ್ಮಕ) ಅನಭ್ಯುಪಗಮ

ಅಂದರೆ ಅಪಸಿದ್ಧಾಂತ ಎಂಬ ದೋಷ. ಜೊತೆಗೆ ಪ್ರತೀತ್ಯಭಾವ, ಜಗತ್ತು ಶಶವಿಷಾಣದಂತೆ ತೋರದಿರುವುದು ಎಂಬ ದೋಷ ಬರುತ್ತದೆ ಎಂದರ್ಥ.

**प्रकाशः –** तन्मते तथा च दोषादिति सूत्रणीयम् ।

ರಾಮಾನುಜರ ಪ್ರಕಾರ ಸೂತ್ರವು 'ಉಭಯಥಾ' ಎಂದಿರದೆ 'ತಥಾ ಚ' ಎಂದಿರಬೇಕಾಗಿತ್ತು.

**प्रकाशः –** पूर्वं सतो निरन्वयविनाशो न सम्भवतीत्युक्तम् । इह तु तथा निरन्वयविनाशे दोषश्चास्ति जगतस्तुच्छतापत्त्यादिरिति व्याख्यानसम्भवादिति स्पष्टत्वात्तन्न दूषितम् ।

(ಅದನ್ನೇ ಸ್ಪಷ್ಟಪಡಿಸುತ್ತಾರೆ)

ಹಿಂದಿನ ಸೂತ್ರದಲ್ಲಿ ಸತ್ ಆದ ಪದಾರ್ಥಕ್ಕೆ ನಿರನ್ವಯ (ಸಸಂತಾನ) ವಿನಾಶ ಕೂಡುವುದಿಲ್ಲ ಎಂದು ಹೇಳಲಾಗಿದೆ. ಇಲ್ಲಿಯಾದರೋ ಹಾಗೆ ನಿರನ್ವಯನಾಶ ಒಪ್ಪಿದರೆ ದೋಷವಿದೆ ಎನ್ನಲಾಗಿದೆ. ಆ ದೋಷ ಏನೆಂದರೆ ಜಗತ್ತಿಗೆ ತುಚ್ಛತ್ವ ಮೊದಲಾದುದು. ಹೀಗೆ ವ್ಯಾಖ್ಯಾನ ಮಾಡಿದಾಗ ಸೂತ್ರದಲ್ಲಿ 'ಉಭಯಥಾ' ಎಂದಿರದೇ 'ತಥಾ ಚ' ಎಂದಿರಬೇಕಾಗುತ್ತದೆ. ಹಾಗಾಗಿ ನಿಮ್ಮ ಸೂತ್ರ ವ್ಯಾಖ್ಯಾನ ಸೂತ್ರಪದಾರ್ಥಾನುಗುಣ-ವಾಗಿಲ್ಲವಾದ್ದರಿಂದ ಅದು ಸರಿಯಲ್ಲ, ಈ ನಿರಾಕರಣೆಯು ಸ್ಪಷ್ಟವಾಗಿದೆಯಾದ್ದರಿಂದ ಮೂಲದಲ್ಲಿ ರಾಮಾನುಜ ಮತವನ್ನು ನಿರಾಕರಣೆ ಮಾಡಿಲ್ಲ.

**प्रकाशः –** मतद्वयेऽपि ''आकाशे चाविशेषात्'' इत्यस्य ''अनुस्मृतेश्च'' इत्यस्य चार्थमनूद्य निराह – **यच्चोक्तमिति** ।।

ಶಂಕರ ರಾಮಾನುಜ ಇಬ್ಬರ ಮತ ಪ್ರಕಾರವೂ "ಆಕಾಶೇ ಚಾವಿಶೇಷಾತ್" ಎಂಬುದರ ಹಾಗೂ 'ಅನುಸ್ಮೃತೇಶ್ಚ' ಎಂಬ ಸೂತ್ರದ ಅರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ "ಯಚ್ಚೋಕ್ತಂ" ಎಂಬುದರಿಂದ.

**प्रकाशः – निरोधयोरिवेति** ।। एतच्चाद्वैतिमते । केषाञ्चिन्मते तु पृथिव्यादाविवेत्यर्थः । अनुस्मृतेरनुभवमनुसृत्य वर्तमाना स्मृतिरनुस्मृतिस्तद्बलाच्चात्मादेर्न क्षणिकत्वमिति सूत्रार्थं व्यनक्ति ।। **अहमर्थस्येति** ।।

ಚಂದ್ರಿಕಾದಲ್ಲಿ "ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಯೋರಿವ" ಎಂಬ ವಾಕ್ಯ ಅದ್ವೈತಿಗಳ ಪ್ರಕಾರ ಎಂದು ತಿಳಿಯಬೇಕು. ರಾಮಾನುಜರ ಪ್ರಕಾರ 'ಪೃಥಿವ್ಯಾದೌ ಇವ' ಎಂದು ಇಟ್ಟುಕೊಳ್ಳಬೇಕು. 'ಅನುಸ್ಮೃತಿ' ಎಂಬ ಶಬ್ದಕ್ಕೆ 'ಅನು' ಎಂದರೆ ಅನುಭವ ಅದನ್ನು ಅನುಸರಿಸುವ ಸ್ಮೃತಿ ಅನುಸ್ಮೃತಿ ಅದರ ಬಲದಿಂದ ಆತ್ಮಾದಿಗಳಿಗೆ ಕ್ಷಣಿಕತ್ವ ಕೂಡುವುದಿಲ್ಲ ಎಂದು ಸೂತ್ರಕ್ಕೆ ಅರ್ಥ. ಅದನ್ನೇ 'ಅಹಮರ್ಥಸ್ಯ' ಎಂಬುದರಿಂದ ಹೇಳುತ್ತಿದ್ದಾರೆ.

ಅಸದಧಿಕರಣ (2-2-8)

**प्रकाशः – पृथक्साध्येति** ।। आकाशे च निरुपाख्यत्वमयुक्तम् । अनुस्मृतेश्चाहमर्थस्यात्मनः क्षणिकत्वमयुक्तमिति पृथक्साध्येत्यर्थः ।।

"ಆಕಾಶೇ ಚಾವಿಶೇಷಾತ್" ಎಂಬಲ್ಲಿ 'ನಿರುಪಾಖ್ಯತ್ವಮ್' ಎಂಬ ಸಾಧ್ಯವನ್ನು ಹೇಳಲಾಗಿದೆ. 'ಅನುಸ್ಮೃತೇಶ್ಚ' ಎಂಬಲ್ಲಿ "ಅಹಮರ್ಥಸ್ಯ ಕ್ಷಣಿಕತ್ವಂ" ಎಂಬ ಸಾಧ್ಯವನ್ನು ಹೇಳಲಾಗಿದೆ. ಹೀಗೆ ಬೇರೆ ಬೇರೆ ಸಾಧ್ಯವನ್ನು ಪರರು ಹೇಳಿದ್ದಾರೆ ಎಂದರ್ಥ.

**प्रकाशः – आत्ममात्रेति** ।। एतच्चाद्वैतिमत एव । मतान्तरे ज्ञातृज्ञेयज्ञानानां त्रयाणामपि स्थायित्वसाधनात् ।

ಚಂದ್ರಿಕಾದಲ್ಲಿ 'ಆತ್ಮಮಾತ್ರಸ್ಯ ಸ್ಥಾಯಿತ್ವಸಾಧನಾತ್' ಎಂದಿರುವುದು ಅದ್ವೈತಿಗಳ ಪ್ರಕಾರ. ರಾಮಾನುಜರು ಜ್ಞಾತೃ, ಜ್ಞೇಯ, ಜ್ಞಾನ ಈ ಮೂರಕ್ಕೂ ಸ್ಥಾಯಿತ್ವವನ್ನು ಹೇಳಿರುತ್ತಾರೆ.

**प्रकाशः** – अद्वैतिमते दोषान्तरमाह – **कथं च प्रत्यहमिति** ।। ''नासतोऽदृष्टत्वात्'' इत्यस्यार्थमनूद्य निराह – **यच्चोक्तमिति** ।। परैरिति योज्यम्। भामत्युक्तं तात्पर्यं विवरणपूर्वमनुवदति ।। **यद्यपीति** ।।

ಅದ್ವೈತಿಗಳ ಪ್ರಕಾರ ಇನ್ನೊಂದು ದೋಷ ಹೇಳುತ್ತಿದ್ದಾರೆ 'ಕಥಂ ಚ' ಎಂಬುದರಿಂದ. 'ನಾಸತೋಽದೃಷ್ಟತ್ವಾತ್' ಎಂಬ ಸೂತ್ರದ ಅರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ "ಯಚ್ಚೋಕ್ತಂ" ಎಂಬುದರಿಂದ. ಪರೈಃ ಎಂದು ಇಟ್ಟುಕೊಳ್ಳಬೇಕು. ಭಾಮತಿಯಲ್ಲಿ ಹೇಳಿರುವ ತಾತ್ಪರ್ಯವನ್ನು ವಿವರಣಕಾರರ ಹಿನ್ನಲೆಯಲ್ಲಿ ಹೇಳುತ್ತಿದ್ದಾರೆ 'ಯದ್ಯಪಿ' ಎಂಬುದರಿಂದ.

'ನಾಸತೋಽದೃಷ್ಟತ್ವಾತ್' ಎಂಬ ಸೂತ್ರಾರ್ಥ ನಿರಾಕರಣೆ

## तात्पर्यचन्द्रिका

**यच्चोक्तं यद्यपि वैभाषिकसौत्रान्तिकाभ्यामसतः कारणत्वं न स्वीकृतं तथापि हेतोः कार्योत्पादने निरपेक्षत्वे पुंव्यापारवैयर्थ्यम् । सापेक्षत्वं तु क्षणिकस्य न युक्तम् । नच सापेक्षत्वनिरपेक्षत्वाभ्यामन्या विधाऽस्तीत्यर्थादापन्नमसतः कारणत्वं ''नासत'' इत्यादिसूत्रद्वयेन निरस्यत इति तन्न ।**

'ನಾಸತೋಽದೃಷ್ಟತ್ವಾತ್' ಎಂಬ ಸೂತ್ರಕ್ಕೆ ಅದ್ವೈತಿಗಳು ಬೌದ್ಧರು ಹೇಳುವ ಅಸತ್ ಕಾರಣತ್ವನಿರಾಕರಣ ಪರವಾಗಿ ವ್ಯಾಖ್ಯಾನಿಸಿದ್ದಾರೆ. ಆದರೆ, ಇದು ಸರಿಯಲ್ಲ ಏಕೆಂದರೆ ವೈಭಾಷಿಕರಾಗಲೀ ಸೌತ್ರಾಂತಿಕರಾಗಲೀ ಅಸತ್ತಿಗೆ ಕಾರಣತ್ವವನ್ನೇ ಅಂಗೀಕರಿಸಿಲ್ಲ. ಈ ಪ್ರಶ್ನೆಗೆ ಉತ್ತರವಾಗಿ ಅದ್ವೈತಿಗಳು ಹೀಗೆ ಹೇಳುತ್ತಾರೆ. ನಿಜ, ಕಾರ್ಯದ ಉತ್ಪತ್ತಿಯಲ್ಲಿ ಹೇತುವಿಗೆ ಅಪೇಕ್ಷೆ ಇದೆ ಎನ್ನುತ್ತೀರೋ ಅಥವಾ ಅಪೇಕ್ಷೆ ಇಲ್ಲ ಎನ್ನುತ್ತೀರೋ? ಎಂದು ಪ್ರಶ್ನಿಸಿ. ಅಪೇಕ್ಷೆ ಇಲ್ಲ ಎಂದರೆ

ಆಗ ಪುರುಷವ್ಯಾಪಾರವು ವ್ಯರ್ಥವಾಗುವುದು. ಅಪೇಕ್ಷೆ ಇದೆ ಎಂದರೆ ಆಗ ಕ್ಷಣಿಕತ್ವಕ್ಕೆಭಂಗ ಬರುವುದು. ಹೇತುವಿನ ಅಪೇಕ್ಷೆಗೆ ಒಂದು ಕ್ಷಣನಂತರ ಕಾರ್ಯೋತ್ಪತ್ತಿ ಎಂದರೆ ಆಗ ಕ್ಷಣಿಕತ್ವ ಬರುವುದಿಲ್ಲ. ಹಾಗಾಗಿ ಅರ್ಥಾತ್ ಅಸತ್‌ಕಾರಣತ್ವ ಸಿದ್ಧವಾಗುತ್ತದೆ. ಏಕೆಂದರೆ ಸಾಪೇಕ್ಷತ್ವ ನಿರಪೇಕ್ಷತ್ವದಿಂದ ಬೇರೆಯಾದ ಇನ್ನೊಂದು ಪ್ರಕಾರವಿಲ್ಲ. ಆದ್ದರಿಂದ ನಾವು ಮಾಡಿರುವ ವ್ಯಾಖ್ಯಾನ ಸರಿಯಾಗಿದೆ ಎಂದರೆ ಅದು ತಪ್ಪು.

**मम रीत्याऽवश्यनिरसनीयस्य शून्यवादिना स्वयमेवाङ्गीकृतस्यासत्कारणत्वस्य निराससम्भवे वैभाषकमतेऽर्थादापन्नस्य निरासायोगात् ।**

ನಮ್ಮ ಪ್ರಕಾರ ಈ ಸೂತ್ರವು ಶೂನ್ಯವಾದಿಯ ನಿರಾಕರಣೆಗೆ ಹೊರಟದೆ. ಶೂನ್ಯವಾದಿಯು ಅವಶ್ಯವಾಗಿ ನಿರಾಕರಣೆಗೆ ಯೋಗ್ಯನಾಗಿದ್ದಾನೆ ಮತ್ತು ಅವನು ಸ್ವತಃ ಅಸತ್ತಿಗೆ ಕಾರಣತ್ವವನ್ನು ಒಪ್ಪಿದ್ದಾನೆ. ಹೀಗೆ ಸುಲಭವಾಗಿ ವ್ಯಾಖ್ಯಾನ ಮಾಡಲು ಬರುವಾಗ ಈ ಸೂತ್ರವು ವೈಭಾಷಿಕ ಸೌತ್ರಾಂತಿಕರ ನಿರಾಕರಣೆಗೆ ಹೊರಟದೆ ಎಂದು ವ್ಯಾಖ್ಯಾನಿಸುವುದು ಸರಿಯಲ್ಲ. ಹಾಗೆ ಮಾಡಿದರೆ ವೈಭಾಷಿಕಾದಿಗಳು ಸ್ಪಷ್ಟವಾಗಿ ಒಪ್ಪದೇ ಇರುವ ಅಸತ್‌ಕಾರಣತ್ವವನ್ನು ಅರ್ಥಾತ್ ಸಿದ್ಧ ಎಂದು ಹೇಳಿ ವ್ಯಾಖ್ಯಾನ ಮಾಡಬೇಕಾಗುತ್ತದೆಯಾದ್ದರಿಂದ ಗೌರವ ದೋಷ ಬರುತ್ತದೆ.

**यदि तु नासत इत्यत्राभावस्य कारणत्वं निषिध्येत तदाऽदृष्टत्वादिति हेतुरयुक्तः।**

ಒಂದು ವೇಳೆ ನೀವು ಈ ಸೂತ್ರದಲ್ಲಿ ಅಸತ್‌ಕಾರಣತ್ವವನ್ನು ನಿರಾಕರಿಸದೆ ಅಭಾವ ಕಾರಣತ್ವವನ್ನು ನಿರಾಕರಿಸುತ್ತೇವೆ ಎಂದರೆ ಆಗ ಸೂತ್ರದಲ್ಲಿರುವ 'ಅದೃಷ್ಟತ್ವಾತ್' ಎಂಬ ಹೇತು ಅಸಿದ್ಧವಾಗುವುದು.

**विहिताकरणविशेषादर्शनादीनां प्रत्यवायभ्रमादिहेतुत्वदर्शनात् ।**

ಏಕೆಂದರೆ ಅಭಾವಕ್ಕೆ ಕಾರಣತ್ವ ದೃಷ್ಟವೇ ಆಗಿದೆ. ಎಲ್ಲಿ? ಎಂದರೆ ವಿಹಿತವಾದುದನ್ನು ಮಾಡದೇ ಇರುವುದು ಪ್ರತ್ಯವಾಯಕ್ಕೆ ಕಾರಣವಾಗಿದೆ. ಅದೇ ರೀತಿ ವಿಶೇಷದ ಅದರ್ಶನವು ಭ್ರಮಕ್ಕೆ ಕಾರಣವಾಗಿದೆ. ಈ ಎರಡೂ ಸ್ಥಳಗಳಲ್ಲಿ ವಿಹಿತಾಕರಣ ಹಾಗೂ ವಿಶೇಷಾದರ್ಶನ ಅಭಾವರೂಪವಾಗಿದೆ. ಆದರೂ ಕಾರಣತ್ವ ಕಂಡಿದೆ ಎಂದರ್ಥ.

**प्रकाशः —**

**न युक्तमिति ।। स्वस्मिन्नुत्पन्ने पश्चादतिशयाधायिनो ह्यपेक्ष्यत्वं स्यात् । क्षणिकवादे स्वोत्पत्त्यनन्तरं स्वस्यैवानवस्थानेन स्वस्मिन्नतिशयाधानायोगेन कथं तादृशस्यान्यस्यापेक्षा स्यादिति भावः।।**

(ಕ್ಷಣಿಕವಾದದಲ್ಲಿ ಸಾಪೇಕ್ಷತ್ವ ಕೂಡುವುದಿಲ್ಲ ಎಂಬುದನ್ನು ವಿವರಿಸುತ್ತಿದ್ದಾರೆ) ಅಪೇಕ್ಷತ್ವ ಎಂದರೇನು : ತಾನು ಹುಟ್ಟಿದ ಮೇಲೆ ಇನ್ನೊಂದರಲ್ಲಿ ಅತಿಶಯವನ್ನು ಉಂಟುಮಾಡಿದರೆ ಆಗ ಅದಕ್ಕೆ ಅಪೇಕ್ಷತ್ವ ಬರುತ್ತದೆ.

ಆದರೆ, ಕ್ಷಣಿಕವಾದದಲ್ಲಿ ತಾನು ಹುಟ್ಟಿದ ಮರುಕ್ಷಣದಲ್ಲಿ ತಾನೇ ಇರುವುದಿಲ್ಲವಾದ್ದರಿಂದ ಅತಿಶಯವನ್ನು ಉಂಟುಮಾಡುವುದು ಸಾಧ್ಯವಿಲ್ಲವಾದ್ದರಿಂದ ಹೇಗೆ ಕ್ಷಣಿಕವಾದ ಇನ್ನೊಂದು ವಸ್ತುವಿನ ಅಪೇಕ್ಷೆ ಬರಲು ಸಾಧ್ಯ ಎಂದು ಅಭಿಪ್ರಾಯ.

**प्रकाशः –** अर्थादापन्नमसत इति ।। यद्यपि भामत्यादौ ''अर्थादभावाद्भावोत्पत्तिः परिशिष्यत'' इत्यभावपदप्रयोग एवास्ति । तथा सूत्रार्थोक्तिप्रस्तावे ''नाभावात्कार्योत्पत्तिः'' इति तथापि ''नहि शशविषाणादंकुरादिकार्याणामुत्पत्तिः'' इति दृष्टान्तोक्तया सापेक्षत्वनिरपेक्षत्वाद्युपपादनेन चाभावशब्दोऽसत्परो भाष्यभामत्योरभिप्रेत इति भावः ।

(ಚಂದ್ರಿಕಾದಲ್ಲಿರುವ 'ಅರ್ಥಾದಾಪನ್ನಮಸಃ ಕಾರಣತ್ವಂ' ಎಂಬ ವಾಕ್ಯವನ್ನು ವಿವರಿಸುತ್ತಿದ್ದಾರೆ) ಪ್ರಶ್ನೆ - ಭಾಮತಿಯಲ್ಲಿ 'ಅರ್ಥಾದಭಾವದ್ಭವೋತ್ಪತ್ತಿಃ' ಎಂಬುದಾಗಿ 'ಅಭಾವ' ಪದವನ್ನೇ ಆಡಿದ್ದಾರೆ ಮತ್ತು ಸೂತ್ರಕ್ಕೆ ಅರ್ಥವನ್ನು ಹೇಳುವಾಗಲೂ "ನಾಭಾವಾತ್ ಕಾರ್ಯೋತ್ಪತ್ತಿಃ" ಎಂಬುದಾಗಿ 'ಅಭಾವ' ಪದವನ್ನೇ ಬಳಸಿದ್ದಾರೆ. ಹಾಗಾಗಿ ಚಂದ್ರಿಕಾದಲ್ಲಿ ಅರ್ಥಾತ್ ಅಸತ್ತಿಗೆ ಕಾರಣತ್ವ ಸಿದ್ಧವಾಗುತ್ತದೆ ಎಂದು ಹೇಗೆ ಅನುವಾದ ಮಾಡಿದ್ದಾರೆ?

ಉತ್ತರ: 'ನಹಿ ಶಶವಿಷಣಾದಂಕುರಾದಿಕಾರ್ಯಣಾಮುತ್ಪತ್ತಿಃ' ಎಂಬುದಾಗಿ ದೃಷ್ಟಾಂತವನ್ನು ಹೇಳಿರುವುದರಿಂದ ಹಾಗೂ ಸಪೇಕ್ಷತ್ವ ನಿರಪೇಕ್ಷತ್ವಗಳನ್ನು ಉಪಪಾದನೆ ಮಾಡಿರುವುದರಿಂದ ಭಾಮತಿಕಾರರಿಗೆ ಅಭಾವ ಶಬ್ದಕ್ಕೆ 'ಅಸತ್' ಎಂಬ ಅರ್ಥವೇ ಅಭಿಪ್ರೇತವಾಗಿದೆ ಎಂದು ತಿಳಿಯುತ್ತದೆ. ಹಾಗಾಗಿ ಚಂದ್ರಿಕಾದಲ್ಲಿ ಹೇಳಿರುವುದು ತಪ್ಪಲ್ಲ.

**प्रकाशः –** अत एवाभावकारणत्वनिरासपक्षोऽप्यग्रे ''यदि तु'' इत्यादिना दूष्यते ।।

ಅವರಿಗೆ ಅಭಾವ ಶಬ್ದದಿಂದ 'ಅಸತ್' ಅಭಿಪ್ರೇತವಾಗಿರುವುದರಿಂದಲೇ ಅಭಾವಕ್ಕೆ ಕಾರಣತ್ವವನ್ನು ಹೇಳುವ ಪಕ್ಷವನ್ನೂ ಮುಂದೆ ಮೂಲದಲ್ಲಿ 'ಯದಿ ತು' ಎಂಬುದರಿಂದ ನಿರಾಕರಿಸಲ್ಪಡುತ್ತದೆ.

**प्रकाशः – स्वयमेवेति ।।** यद्यपि माध्यमिकेनापि शून्यस्य नासत्त्वमङ्गीकृतम्। ''पारमार्थिकसत्यत्वं शून्यादन्यस्य नेष्यत'' इत्यनुव्याख्याने तन्मतानुवादात् । ''असत्त्वमत्राप्यापाद्यम्'' इति सुधोक्तेः तथापि ''भावार्थप्रतियोगित्वं भावत्वं वा न तत्वत'' इति तेनैवोक्तेर्वाऽसद्वादित्वेन तस्य प्रसिद्धेर्वैवमुक्तमित्याहुः ।।

ಚಂದ್ರಿಕಾದಲ್ಲಿ ಶೂನ್ಯವಾದಿಯು ಅಸತ್‌ಗೆ ಕಾರಣತ್ವವನ್ನು ತಾನೇ ಒಪ್ಪಿದ್ದಾನೆ ಎಂದು ಹೇಳಿದ್ದಾರೆ. ಆದರೆ, ಮಾಧ್ಯಮಿಕನು (ಶೂನ್ಯವಾದಿ) ಶೂನ್ಯಕ್ಕೆ ಕಾರಣತ್ವವನ್ನು ಹೇಳಿದ್ದಾನೆ. ಆದರೆ, ಆ ಶೂನ್ಯವು ಅಸತ್ತೆಂದು ಒಪ್ಪಿಲ್ಲ. ಅವನ ಮತವನ್ನು ಅನುವ್ಯಾಖ್ಯಾನದಲ್ಲಿ ಹೇಳುವಾಗ ಆಚಾರ್ಯರು ಶೂನ್ಯವೊಂದನ್ನು ಬಿಟ್ಟು ಉಳಿದುದಕ್ಕೆ ಪಾರಮಾರ್ಥಿಕ ಸತ್ಯವನ್ನು ಅವನು ಒಪ್ಪಿಲ್ಲ ಎಂದಿದ್ದಾರೆ. ಸುಧಾದಲ್ಲಿಯೂ ಕೂಡ

ಅಸತ್ವವು ಅಬಾಧ್ಯ ಎಂದೇ ಹೇಳಿದ್ದಾರೆ ಹಾಗಾಗಿ ಚಂದ್ರಿಕಾದಲ್ಲಿ ಹೇಗೆ ಶೂನ್ಯವನ್ನು ಅಸತ್ ಎಂದು ಪರಿಗಣಿಸಲಾಗಿದೆ ಎಂದು ಪ್ರಶ್ನೆ.

ಅದಕ್ಕೆ ಉತ್ತರ: ಶೂನ್ಯವಾದಿಯೇ ತನ್ನ ಗ್ರಂಥದಲ್ಲಿ ಪಾರಮಾರ್ಥಿಕಸತ್ಯ ಎಂದರೆ ಅಸತ್‌ವ್ಯಾವೃತ್ತಿ ಎಂದೇ ಹೇಳಿದ್ದಾನೆ ಹೊರತು ಸತ್ಯ ಎಂದು ಒಪ್ಪಿಲ್ಲ. ಜೊತೆಗೆ ಶೂನ್ಯವಾದಿಯು ಅಸತ್‌ವಾದಿ ಎಂದು ಪ್ರಸಿದ್ಧನಾಗಿದ್ದಾನೆ. ಹಾಗಾಗಿಯೂ ವ್ಯಾಸರಾಯರು ಶೂನ್ಯವಾದಿಯು ಅಸತ್ತಿಗೆ ಕಾರಣತ್ವವನ್ನು ತಾನೇ ಒಪ್ಪಿದ್ದಾನೆ ಎಂದಿದ್ದಾರೆ.

**ಪ್ರಕಾಶಃ – वैभाषिकमत इति ।। सौत्रान्तिकमत इत्यपि ध्येयम् ।**

ವೈಭಾಷಿಕ ಮತದಲ್ಲಿ ಅರ್ಥಾತ್ ಸಿದ್ಧವಾಗಿದೆ ಅಸತ್ ಕಾರಣತ್ವ. ಆ ವಾಕ್ಯದಲ್ಲಿ ವೈಭಾಷಿಕ ಪದದಿಂದ ಸೌತ್ರಾಂತಿಕನನ್ನೂ ಇಟ್ಟುಕೊಳ್ಳಬೇಕು.

**ಪ್ರಕಾಶಃ – रामानुजमते तु सौत्रान्तिकमात्रनिरासपरमेतत् ।**

ರಾಮಾನುಜರ ಪ್ರಕಾರ ಈ ಸೂತ್ರವು (ನಾಸತೋऽದೃಷ್ಟತ್ವಾತ್) ಸೌತ್ರಾಂತಿಕ ಮತವನ್ನು ನಿರಾಕರಿಸಲು ಹೊರಟಿದೆ ಎಂದರ್ಥ.

**ಪ್ರಕಾಶಃ – तन्मते ''क्षणिकस्यार्थस्य ज्ञानविषयत्वनिरसनपरम् । ज्ञाने स्वाकारं समर्प्य विनष्टोऽप्यर्थो ज्ञानगतेन नीलाद्याकारेणानुमीयते । अतो यदर्थाकारभाक्त्वं यस्य ज्ञानस्य स तस्य विषय इति सौत्रान्तिकेनोक्ते दूषणमिदं नासतोऽदृष्टत्वादिति।**

ಸೌತ್ರಾಂತಿಕನು ಹೀಗೆ ಹೇಳಿದ್ದಾನೆ. ಕ್ಷಣಿಕವಾದ ವಸ್ತುವು ಜ್ಞಾನಕ್ಕೆ ವಿಷಯವಾಗಲು ಸಾಧ್ಯವಿಲ್ಲ. ಹಾಗಾಗಿ, ವಸ್ತುವು ಜ್ಞಾನದಲ್ಲಿ ತನ್ನ ಆಕಾರವನ್ನಿಟ್ಟು ತಾನು ನಷ್ಟವಾಗುತ್ತದೆ. ಅದು ವಿನಷ್ಟವಾದರೂ ಜ್ಞಾನದಲ್ಲಿರುವ ಆಕಾರದಿಂದ ಅನುಮೇಯವಾಗಿದೆ. ಎಲ್ಲವೂ ಅನುಮೇಯ ಎಂಬುದೇ ಮತ. ಹಾಗಾಗಿ ಯಾವ ವಸ್ತುವಿಗೆ ಆಕಾರ ಯಾವ ಜ್ಞಾನದಲ್ಲಿ ಬರುತ್ತದೋ ಅದು ಆ ಜ್ಞಾನಕ್ಕೆ ವಿಷಯ ಎಂದು. ಇದರ ನಿರಾಕರಣೆಗಾಗಿ ಈ ಸೂತ್ರ ಹೊರಟಿದೆ.

**ಪ್ರಕಾಶಃ – योऽयं ज्ञाने नीलाकार उपलभ्यते सोऽसतो विनष्टस्याकारो भवितुं नार्हति । धर्मिणि नष्टे तद्धर्मस्यार्थान्तरे संक्रमणस्यादृष्टत्वात्'' इत्यर्थ उक्तः ।**

ಜ್ಞಾನದಲ್ಲಿ ನೀನು ಹೇಳಿದ ಯಾವ ವಸ್ತುವಿನ ಆಕಾರ ಉಪಲಬ್ಧವಾಗುತ್ತಿದೆ ಅದು ನಷ್ಟವಾದ ವಸ್ತುವಿನ ಆಕಾರವಾಗಲು ಸಾಧ್ಯವಿಲ್ಲ. ಧರ್ಮಿಯೇ ನಷ್ಟವಾದ ಮೇಲೆ ಅದರಲ್ಲಿರುವ ಧರ್ಮ ಇನ್ನೊಂದು ಕಡೆ ಬರಲು ಸಾಧ್ಯವಿಲ್ಲ ಎಂದು ರಾಮಾನುಜ ಹೇಳಿದ್ದಾನೆ.

**ಪ್ರಕಾಶಃ – तन्मतेऽपि ''मम रीत्य'' इत्येष दोषस्तुल्यः । अनेकाध्याहारदोषश्च।।**

ರಾಮಾನುಜ ಮತಕ್ಕೂ ಕೂಡ ಅದ್ವೈತಿಗಳಿಗೆ ಹೇಳಿದ ದೋಷವೇ ಬರುತ್ತದೆ. ಅದನ್ನು 'ಮಮ ರೀತ್ಯಾ' ಎಂಬುದಾಗಿ ಹೇಳಲಾಗಿದೆ. ಮತ್ತೆ ಅನೇಕ ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕಾಗುತ್ತದೆ ಎಂಬ ಇನ್ನೊಂದು ದೋಷವೂ ಬರುತ್ತದೆ.

ಅಸದಧಿಕರಣ (2-2-8)

**प्रकाशः – विहिताकरणेति ।।** अत एव त्वयापि ''नाभावात्कार्योत्पत्तिः'' इत्युक्त्वा ''नहि शशविषाणादंकुरादिकार्याणामुत्पत्तिर्दृश्यत'' इत्येव ''अदृष्टत्वात्'' इति सौत्रो हेतुरुपपादितः । न त्वभावस्य कारणत्वादृष्टिरुपपादितेति भावः।

ಸೂತ್ರದಲ್ಲಿರುವ ಅಸತ್ ಶಬ್ದಕ್ಕೆ ಅಭಾವ ಎಂದರ್ಥ ಇಟ್ಟುಕೊಂಡರೆ ಆಗ 'ಅದೃಷ್ಟತ್ವಾತ್' ಎಂಬ ಹೇತುವು ಅಸಿದ್ಧ ಎಂದು ಹೇಳಿದ್ದಾರೆ. ಅದನ್ನೇ ವಿವರಿಸುತ್ತಿದ್ದಾರೆ. ನೀನೂ ಕೂಡ 'ನಾಭಾವತ್ಕಾರ್ಯೋತ್ಪತ್ತಿಃ' ಎನ್ನುವಲ್ಲಿ ''ನ ಹಿ ಶಶವಿಷಣಾದಂಕುರಾದಿಕಾರ್ಯಾಣಾಮುತ್ಪತ್ತಿರ್ದೃಶ್ಯತ '' ಎಂಬುದಾಗಿ ಶಶವಿಷಣಾದಿ-ಗಳಿಂದ ಕಾರ್ಯ ಹುಟ್ಟಲು ಸಾಧ್ಯವಿಲ್ಲ ಎಂಬುದಾಗಿಯೇ ಸೂತ್ರದಲ್ಲಿರುವ 'ಅದೃಷ್ಟತ್ವಾತ್' ಎಂಬ ಹೇತುವಿಗೆ ವಿವರಣೆ ಕೊಟ್ಟಿದ್ದೀಯೆ. ಅದನ್ನು ಬಿಟ್ಟು ಅಭಾವಕ್ಕೆ ಕಾರಣತ್ವ ಕಂಡಿಲ್ಲ ಎಂಬುದನ್ನು ಉಪಪಾದನೆ ಮಾಡಿಲ್ಲ. ಹಾಗಾಗಿ ನಿನಗೂ ಕೂಡ ಅಭಾವ ಪದದಿಂದ ಅಸತ್ತೇ ಅಭಿಪ್ರೇತ ಎಂಬುದು ಸ್ಪಷ್ಟ.

## 'ಉದಾಸೀನಾನಾಮಪಿ' ಎಂಬ ಸೂತ್ರಾರ್ಥ ನಿರಾಕರಣೆ

## तात्पर्यचन्द्रिका

**यच्चोक्तं उदासीनानामनीहमानानां जनानामभिमतसिद्धिः स्यादिति दशमार्थ इति तन्न ।**

('ಉದಾಸೀನಾನಾಮಪಿ ಚೈವಂ ಸಿದ್ಧಿಃ' ಎಂಬ ಸೂತ್ರವನ್ನು ನಿರಾಕರಿಸುತ್ತಿದ್ದಾರೆ) ಉದಾಸೀನಾನಾಂ ಎಂಬ ಶಬ್ದಕ್ಕೆ ಅನೀಹಮಾನಾನಾಂ ಎಂದರ್ಥ. ಅನೀಹಮಾನಾನಾಂ ಎಂದರೆ ಯಾವುದೇ ಇಚ್ಛೆ ಪಡದಿರುವವರು ಎಂದರ್ಥ. ಅಂತಹವರಿಗೂ ಅಭೀಷ್ಟಸಿದ್ಧಿಯಾಗಬೇಕಾಗುತ್ತದೆ. ಅಸತ್ತಿಗೆ ಕಾರಣತ್ವ ಒಪ್ಪಿದರೆ ಎಂದರ್ಥ.

(ಯಾವುದೇ ಪ್ರಯತ್ನ ಪಡದೆಯೂ ಕಾರ್ಯದ ಉತ್ಪತ್ತಿಯಾಗಬೇಕಾಗುತ್ತದೆ ಎಂದರ್ಥ) ಇದು ಸರಿಯಲ್ಲ.

**त्वदुक्तातिप्रसङ्गस्य त्वदभिमतदृटिसृष्टावपि समत्वात् ।**

ನೀನು ಬೌದ್ಧರಿಗೆ ಹೇಳಿದ ಅತಿಪ್ರಸಂಗವು ನಿನಗೇ ದೃಷ್ಟಿಸೃಷ್ಟಿವಾದದಲ್ಲಿ ಬರುತ್ತದೆ. (ದೃಷ್ಟಿಸೃಷ್ಟಿ-ಯಲ್ಲಿಯೂ ಮೃತ್ ದಂಡ ಚಕ್ರಾದಿಗಳು ಘಟಕ್ಕೆ ಕಾರಣವಲ್ಲ ಹೊರತು ಜ್ಞಾನಮಾತ್ರ. ಆಗ ಘಟ ಎಂದು ಜ್ಞಾನ ಬಂದರೆ ಘಟ ಸೃಷ್ಟಿಯಾಗಬೇಕು)

**किञ्च एवं हीहाभावेऽपि कार्योत्पत्तौ बाधकमुक्तं स्यात् । न त्वसतः कार्योत्पत्तौ । तत्र चेष्टापत्तिः ।**

ನೀವು ಹೀಗೆ ಹೇಳಿದರೆ ಆಗ ಇಚ್ಛೆಯು ಇಲ್ಲದಿರುವಾಗ ಕಾರ್ಯ ಹುಟ್ಟುತ್ತದೆ ಎಂದರೆ ಅದಕ್ಕೆ ಬಾಧಕವನ್ನು ಹೇಳಿದಂತಾಯಿತು. ಹೊರತು ಅವರು ಹೇಳುವ ಅಸತ್‌ನಿಂದ ಕಾರ್ಯದ ಉತ್ಪತ್ತಿಯಲ್ಲಿ ಯಾವುದೇ ಬಾಧಕವನ್ನು ಹೇಳಿದಂತಾಗಲಿಲ್ಲ. ನೀವು ಹೇಳಿದ ಬಾಧಕಕ್ಕೆ ಅವನು ಅದು ನನಗೆ ಇಷ್ಟವೇ ಎಂದೆನ್ನುತ್ತಾನೆ.

**क्वचिदनीहमानस्यापीष्टसिद्धेः ।**

ಬೌದ್ಧನು ಇಷ್ಟಾಪತ್ತಿಯನ್ನು ಹೇಳುವುದಕ್ಕೆ ಕಾರಣ ಕೆಲವೆಡೆ ನಮಗೆ ಇಚ್ಛೆ ಇಲ್ಲದಿದ್ದರೂ ಕಾರ್ಯದ ಉತ್ಪತ್ತಿ ಕಂಡಿದೆ ಆದ್ದರಿಂದ.

**ततो वरं मम रीत्योदासीनशब्देन हेयोपादेयबुद्ध्यविषयखपुष्पादींल्लक्षयित्वा तेभ्यः कार्यसिद्ध्यापादनम् ।**

ನೀವು ಹೇಳುವುದಕ್ಕಿಂತಲೂ ನಾವು ಹೇಳುವುದೇ ಎಷ್ಟೋ ಮೇಲು. ನಮ್ಮ ಪ್ರಕಾರ ಸೂತ್ರದ ಉದಾಸೀನ ಶಬ್ದಕ್ಕೆ ಹೇಯ (ಬೇಡ) ಉಪಾದೇಯ (ಬೇಕು) ಬುದ್ಧಿಯಿಂದ ಕೂಡಿರದ ಖಪುಷ್ಪ (ಆಕಾಶಕುಸುಮ) ಎಂದರ್ಥ. ಆಕಾಶಕುಸುಮ ಎಂಬುದು ಲಕ್ಷ್ಯಾರ್ಥ. ಹೀಗೆ ಅರ್ಥಮಾಡಿ ನೀವು ಅಸತ್ತಿಗೆ ಕಾರಣತ್ವವನ್ನು ಹೇಳಿದರೆ ಆಗ ಖಪುಷ್ಪಾದಿಗಳಿಂದಲೂ ಕಾರ್ಯದ ಉತ್ಪತ್ತಿಯಾಗಬೇಕು ಎಂದು ಆಪಾದನೆ ಮಾಡುವುದು.

**तेन सतः कारणत्वस्य साक्षात्सिद्धेः ।**

ಹೀಗೆ ಹೇಳುವುದರಿಂದ ಸತ್ತಿಗೆ ಕಾರಣತ್ವ ಸಾಕ್ಷಾತ್‌ಸಿದ್ಧವಾಗುತ್ತದೆ.

**नच मम सकाशादिति पदाध्याहारदोषः ।**

ನಮ್ಮ ಪ್ರಕಾರ ಸೂತ್ರದಲ್ಲಿ 'ಸಕಾಶಾತ್' (ದೆಸೆಯಿಂದ) ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು ಎಂಬ ದೋಷ ಬರುತ್ತದೆ ಎಂದು ಹೇಳಬೇಡಿ.

**उदासीनानां सम्बन्धिकार्यसिद्धिरिति षष्ठ्यर्थसम्बन्धस्यैव भाष्ये सकाशपदेन विवृतत्वात् ।**

ಸೂತ್ರದಲ್ಲಿರುವ 'ಉದಾಸೀನಾನಾಂ' ಎಂಬ ಪದದಲ್ಲಿರುವ ಷಷ್ಠೀವಿಭಕ್ತಿಗೆ ಸಂಬಂಧ ಎಂದರ್ಥ. ಅಂದರೆ ಉದಾಸೀನಸಂಬಂಧಿಯಾದ ಕಾರ್ಯ ಎಂದು. ಈ ಅರ್ಥವನ್ನೇ (ಷಷ್ಠ್ಯರ್ಥವನ್ನೇ) ಭಾಷ್ಯಕಾರರು 'ಸಕಾಶಾತ್' ಎಂಬ ಪದದಿಂದ ಹೇಳಿದ್ದಾರೆ. ಹಾಗಾಗಿ ಅಧ್ಯಾಹಾರ ಎಂಬ ದೋಷ ಬರುವುದಿಲ್ಲ.

**यच्चोक्तं शून्यवादस्यातिप्रमाणविरुद्धत्वात्सूत्रे न तन्निरास इति तन्न ।**

ಅದ್ವೈತಿಗಳು ಶೂನ್ಯವಾದವನ್ನು ನಿರಾಕರಿಸಿಲ್ಲ. ಅದಕ್ಕೆ ಅವರು ಹೇಳುವ ಉತ್ತರ ಏನೆಂದರೆ, ಶೂನ್ಯವಾದವು ಅತ್ಯಂತ ಪ್ರಮಾಣವಿರುದ್ಧವಾಗಿದೆಯಾದ್ದರಿಂದ ಅದು ನಿರಾಕರಣೆಗೂ ಯೋಗ್ಯವಲ್ಲ ಎಂದು ತಿಳಿದು ಸೂತ್ರಕಾರರು ನಿರಾಕರಿಸಿಲ್ಲ ಎಂದು. ಆದರೆ ಈ ಉತ್ತರ ಸರಿಯಲ್ಲ.

**त्वदुक्तस्य शून्यस्य त्वया निर्विशेषब्रह्मशब्देन संवृतेश्चाविद्याशब्देन**

**इदं वस्तु बलायातं यद्वदन्ति विपश्चितः ।**
**यथा यथाऽर्थाश्चिन्त्यन्ते विशीर्यंते तथा तथा ।**
**बुद्ध्या विविच्यमानानां स्वभावो नावधार्यते ।**
**अतो निरभिलाषास्ते निःस्वभावाश्च देशिता ।।**

**इति तदुक्तस्य विचारासहत्वस्य त्वयाऽनिर्वचनीयशब्देनोक्तेः ।**

(ಇದಕ್ಕೆ ವ್ಯಾಸರಾಜರು ಹೇಳುವ ಉತ್ತರ - ಶೂನ್ಯವಾದಕ್ಕೂ ಅದ್ವೈತಕ್ಕೂ ಯಾವುದೇ ವ್ಯತ್ಯಾಸ ಇಲ್ಲ. ಕೇವಲ ಶಬ್ದದಲ್ಲಿ ಮಾತ್ರ ವ್ಯತ್ಯಾಸ. ಸಿದ್ಧಾಂತದಲ್ಲಿ ಅಲ್ಲ. ಹಾಗಾಗಿ ಶೂನ್ಯವಾದವು ನಿನ್ನ ಪ್ರಕಾರ ಅತ್ಯಂತ ಪ್ರಾಮಾಣಿಕವಾಗಿದೆಯಾದ್ದರಿಂದ ಅದನ್ನು ನೀನು ನಿರಾಕರಿಸಿಲ್ಲ, ಆದರೆ ಸೂತ್ರಕಾರರು ನಿರಾಕರಿಸಿದ್ದಾರೆ. ಅದು ನಮ್ಮ ಭಾಷ್ಯದಿಂದ ವ್ಯಕ್ತ ಎಂದು)

ಶೂನ್ಯವಾದಿ ಹೇಳುವ ಶೂನ್ಯವನ್ನೇ ನೀನು ನಿರ್ವಿಶೇಷಬ್ರಹ್ಮ ಎಂದು ಸಂವೃತ್ತಿಯನ್ನೇ ಅವಿದ್ಯೆ ಎಂದು ಕರೆದಿರುವಿ. ''ಇದಂ ವಸ್ತು ಬಲಾಯಾತಂ ಯದ್ವದಂತಿ ವಿಪಶ್ಚಿತಃ , ಯಥಾ ಯಥಾಽರ್ಥಾಶ್ಚಿಂತ್ಯಂತೇ ವಿಶೀರ್ಯತೇ ತಥಾ ತಥಾ, ಬುದ್ಧ್ಯಾ ವಿವಿಚ್ಯಮಾನಾನಾಂ ಸ್ವಭಾವೋ ನಾವಧಾರ್ಯತೇ, ಅತೋ ನಿರಭಿಲಾಷಾಸ್ತೇ ನಿಃಸ್ವಭಾವಾಶ್ಚ ದೇಶಿತಾಃ'' ಅನ್ನುವಲ್ಲಿ ಬೌದ್ಧನು ಯಾವ ವಿಚಾರ ಅಸಹಿಷ್ಣುತ್ವವನ್ನು ಹೇಳಿದ್ದಾನೋ ಅದನ್ನೇ ನೀನು 'ಅನಿರ್ವಚನೀಯ' ಎಂದು ಹೇಳಿರುವಿ.

**द्वैतग्राहिप्रत्यक्षादीनां सांवृतिकसत्यविषयत्वेन पारमार्थिकाद्वैताविरोधित्वमिति चोभाभ्यामुक्तत्वात् ।**

ದ್ವೈತ(ಭೇದ)ವನ್ನು ಗ್ರಹಿಸುವ ಪ್ರತ್ಯಕ್ಷಾದಿಗಳನ್ನು ಅವನು ಹಾಗೂ ನೀನು ಇಬ್ಬರೂ ಸಾಂವೃತಿಕ (ಅವಿದ್ಯಕ) ಸತ್ಯಕ್ಕೆ ವಿಷಯ ಎಂದೂ ಈ ಪ್ರತ್ಯಕ್ಷವು ಪಾರಮಾರ್ಥಿಕವಾದ ಅದ್ವೈತಕ್ಕೆ ವಿರೋಧಿ ಅಲ್ಲ ಎಂದು ಹೇಳಿದ್ದೀರಿ. (ವ್ಯಾವಹಾರಿಕ)

**मिथ्याभूतस्वर्गादेर्व्यावहारिकं सत्त्वं नाम सत्त्वेन व्यवहारमात्रम् । न त्वर्थगतं सत्त्वमस्तीति त्वयापि वक्तव्यतयाऽर्थात्स्वर्गादिविषयवेदाप्रामाण्यस्वीकारात् ।**

ಸ್ವರ್ಗಾದಿಗಳು ಮಿಥ್ಯಾ. ಆದರೆ, ಅದಕ್ಕೆ ವ್ಯಾವಹಾರಿಕಸತ್ವ ಇದೆ. ಅಂದರೆ ಸತ್ವೇನ ವ್ಯವಹಾರ ಮಾತ್ರವಿದೆ. ವಸ್ತುತಃ ಅದರಲ್ಲಿ ಸತ್ವ ಎಂಬ ಧರ್ಮ ಇಲ್ಲವೆಂದು ನೀನು ಹೇಳುವಿ. ಹಾಗಾಗಿ ನೀನು ಸ್ವರ್ಗಾದಿಗಳನ್ನು ಹೇಳುವ ವೇದಭಾಗಗಳಿಗೆ ಅಪ್ರಾಮಾಣ್ಯವನ್ನೇ ಅಂಗೀಕರಿಸಿದ್ದೀಯೆ. ಬೌದ್ಧನೂ ವೇದಕ್ಕೆ ಅಪ್ರಾಮಾಣ್ಯವನ್ನು ಒಪ್ಪಿದ್ದಾನೆ.

**दीर्घभ्रान्तिहेतुत्वेन चातिशयिताप्रामाण्यस्यैवापातात् ।**

ಭ್ರಾಂತಿಯಲ್ಲಿ ಎರಡು ವಿಧ. ಕೆಲವು ಉತ್ತರಕ್ಷಣದಲ್ಲಿ ಬಾಧಿತವಾಗುವುವು. ಕೆಲವು ಬ್ರಹ್ಮಜ್ಞಾನದಿಂದ ಬಾಧಿತವಾಗುವವು. ಬ್ರಹ್ಮಜ್ಞಾನದಿಂದ ನಿವೃತ್ತಿಯಾದ ಭ್ರಾಂತಿ ದೀರ್ಘಭ್ರಾಂತಿ. ಅಂತಹ ಈ ಸ್ವರ್ಗಾದಿಗಳನ್ನು ಹೇಳುವ ವೇದವಾಕ್ಯ ದೀರ್ಘಭ್ರಾಂತಿಗೆ ಕಾರಣವಾಗಿದೆ. ಹಾಗಾಗಿ ಅವುಗಳು ಹೆಚ್ಚು ಅಪ್ರಾಮಾಣಿಕವಾದವುಗಳು ಎಂದೇ ತಿಳಿಯಬೇಕು.

**सत्यज्ञानादिवाक्यस्य पराभिप्रेतशून्यलक्षकतायास्त्वयैवोक्तत्वादद्वयवादीति बौद्ध संज्ञायाश्च त्वयाऽद्वैतवादीति धारणाच्च शून्यवादस्य त्वदभिप्रेतसिद्धान्तत्वेनाति प्रामाणिकत्वात् ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् असदधिकरणं सम्पूर्णम् ॥८॥**

"ಸತ್ಯಂ, ಜ್ಞಾನಂ, ಅನಂತಂ, ಬ್ರಹ್ಮ ಇತ್ಯಾದಿ ವಾಕ್ಯಗಳಲ್ಲಿರುವ ಸತ್ಯಾದಿ ಪದಗಳು ಬೌದ್ಧನಿಗೆ ಸಮ್ಮತವಾದ ಶೂನ್ಯಕ್ಕೆ ಸಮಾನವಾದ ಬ್ರಹ್ಮನನ್ನು ಲಕ್ಷಣಾವೃತ್ತಿಯಿಂದ ಹೇಳುತ್ತವೆ ಎಂದು ನೀನೇ ಹೇಳಿರುವಿ. ಬೌದ್ಧನು 'ಅದ್ವೈತವಾದಿ' ಎಂದು ಕರೆಯಲ್ಪಡುವಂತೆ ನೀನೂ 'ಅದ್ವೈತವಾದಿ' ಎಂಬ ಹೆಸರನ್ನು ಧರಿಸಿರುವಿ. ಹಾಗಾಗಿ ಶೂನ್ಯವಾದಕ್ಕೂ ನಿನ್ನ ಸಿದ್ಧಾಂತಕ್ಕೂ ಯಾವುದೇ ಭೇದ ಇಲ್ಲವಾದ್ದರಿಂದ ನಿನ್ನ ಪ್ರಕಾರ ಶೂನ್ಯವಾದ ಅತ್ಯಂತ ಅಪ್ರಾಮಾಣಿಕ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಸದಧಿಕರಣವು ಸಂಪೂರ್ಣವಾಯಿತು

**प्रकाशः –**

मतद्वयेऽपि ''उदासीनानामपि चैवं सिद्धिः'' इति सूत्रार्थमनुवदति ।। **यच्चोक्तमिति** ।।

ಇಬ್ಬರ ಮತದಲ್ಲಿಯೂ 'ಉದಾಸೀನಾನಾಂ ಚೈವಂ ಸಿದ್ಧಿಃ' ಎಂಬ ಸೂತ್ರದ ಅರ್ಥವನ್ನು ಅನುವಾದ ಮಾಡುತ್ತಿದ್ದಾರೆ.

**प्रकाशः –** अनीहमानानामिति परभाष्यम् । अनुद्युंजानानामिति केषाञ्चिद्भाष्ये। परमते तावद्दोषमाह – **त्वदुक्तेति** ।। मतद्वयेऽपि दोषमाह – **किञ्चेति** ।। ततो वरमिति ।। इष्टापादनाद्वरमित्यर्थः ।

'ಅನೀಹಮಾನಾನಾಂ' ಎಂಬುದು ಶಾಂಕರಭಾಷ್ಯ. 'ಅನುದ್ಯುಂಜಾನಾನಾಂ' ಎಂಬುದು ರಾಮಾನುಜ ಭಾಷ್ಯ. ಶಾಂಕರಮತದಲ್ಲಿ ದೋಷ ಹೇಳುತ್ತಿದ್ದಾರೆ 'ತ್ವದುಕ್ತ' ಎಂಬುದರಿಂದ. ಎರಡೂ ಮತದಲ್ಲಿ ದೋಷ ಹೇಳುತ್ತಿದ್ದಾರೆ 'ಕಿಂಚ' ಎಂಬುದರಿಂದ. 'ತತೋ ವರಂ' ಎಂಬುದಕ್ಕೆ ಇಷ್ಟಾಪಾದನಕ್ಕಿಂತಲೂ ಶ್ರೇಷ್ಠವಾದ ಎಂದರ್ಥ.

**प्रकाशः –**

मायी माध्यमिकश्चैव द्वावुपेक्ष्यौ बुभूषुभिः ।
यच्छून्यवादिनश्शून्यं तदेव ब्रह्मवादिनाम् ।।

इत्याद्यनुव्याख्यानं ''नहि शून्यत्वादिनस्सकाशाद्वैलक्षण्यं मायावादिनः'' इत्यादिना तत्वोद्योतोक्तं च हृदि कृत्वा परोक्तमन्यदपि निराह – **यच्चेति** ।।

ಅನುವ್ಯಾಖ್ಯಾನದಲ್ಲಿ ''ಮಾಯೀ ಮಾಧ್ಯಮಿಕಶ್ಚೈವ ದ್ವಾವುಪೇಕ್ಷ್ಯೌ ಬುಭೂಷುಭಿಃ, ಯಚ್ಛೂನ್ಯವಾದಿನಃ ಶೂನ್ಯಂ ತದೇವ ಬ್ರಹ್ಮವಾದಿನಾಮ್'' ಎಂಬಲ್ಲಿ ಮಾಯಾವಾದಿ ಹಾಗೂ ಮಾಧ್ಯಮಿಕ (ಶೂನ್ಯವಾದಿ) ಇಬ್ಬರೂ ಉಪೇಕ್ಷೆಗೆ ಅರ್ಹರು. ಏಕೆಂದರೆ, ಶೂನ್ಯವಾದಿಗಳು ಯಾವುದನ್ನು ಶೂನ್ಯ ಎಂದರೋ ಅದನ್ನೇ ಮಾಯಾವಾದಿಗಳು 'ಬ್ರಹ್ಮ' ಎಂದು ಹೇಳುತ್ತಾರೆ ಎಂದು ಹೇಳಿದ್ದಾರೆ. 'ತತ್ವೋದ್ಯೋತ' ದಲ್ಲಿ ಶೂನ್ಯವಾದಿಗೂ ಮಾಯಾವಾದಿಗೂ ಯಾವುದೇ ಭೇದವಿಲ್ಲ ಎಂದಿದ್ದಾರೆ. ಇವೆರಡನ್ನೂ ಮನಸ್ಸಿನಲ್ಲಿ ಇಟ್ಟುಕೊಂಡು ಮಾಯಾವಾದಿಯು ಹೇಳುವ ಇನ್ನೊಂದು ಅಂಶವನ್ನೂ ನಿರಾಕರಿಸುತ್ತಿದ್ದಾರೆ 'ಯಚ್ಚ' ಎಂಬುದರಿಂದ.

**प्रकाशः –** क्षणिकत्वाच्चेति सूत्रे परभाष्य इति योज्यम् ।। **सूत्र इति** ।। एतच्च यथाश्रुतभाष्याभिप्रायम् । भामत्यां ''नाभाव'' इत्यादिसूत्राणामेव तन्मतनिरासकतया

वर्णकान्तरस्यापि वर्णनात् । ''सूत्रान्तराणि नोच्यन्ते । एतान्येवावृत्त्या योज्यन्त'' इति कल्पतरूक्तेश्च । परतत्वे साम्यमुक्त्वाऽपरतत्वेऽप्यैक्यमाह – **संवृतेश्चेति** ।।

'ಕ್ಷಣಿಕತ್ವಾಚ್ಚ' ಎಂಬ ಸೂತ್ರದ ಶಾಂಕರಭಾಷ್ಯದಲ್ಲಿ ಹೇಳಿದ ಪ್ರಕಾರ ಎಂದು ಅರ್ಥ. ಚಂದ್ರಿಕಾದಲ್ಲಿ ಹೇಳಿದ ಶಾಂಕರಭಾಷ್ಯವನ್ನು ಅವಲಂಬಿಸಿ ಭಾಮತಿಯಲ್ಲಿ 'ನಾಭಾವ' ಇತ್ಯಾದಿ ಸೂತ್ರಗಳಿಂದ ಶೂನ್ಯವಾದವನ್ನು ನಿರಾಕರಣೆ ಮಾಡಲಾಗಿದೆ. ಆದರೆ ಕಲ್ಪತರುವಿನಲ್ಲೂ ಇದೇ ಸೂತ್ರಗಳಿಂದ ಶೂನ್ಯವಾದವು ನಿರಾಕೃತವಾಗಿದೆ ಎಂದು ಹೇಳಿದ್ದಾರೆ. (ಹೀಗೆ ಪರಮತದಲ್ಲಿ ಭಾಷ್ಯಟೀಕಾಟಿಪ್ಪಣಿಕಾರರಲ್ಲೇ ವಿರೋಧ ಸ್ಪಷ್ಟವಾಗಿದೆ) ಪರತತ್ವದಲ್ಲಿ ಶೂನ್ಯವಾದಿಗಳಿಗೆ ಹಾಗೂ ಅದ್ವೈತಿಗಳಿಗೆ ಸಾಮ್ಯವನ್ನು ಹೇಳಿ ಈಗ ಅಪರತತ್ವದಲ್ಲೂ ಸಾಮ್ಯವನ್ನು ಹೇಳುತ್ತಿದ್ದಾರೆ.

**प्रकाशः** – भामत्युदाहृतमेव श्लोकमाह – **इदमिति** ।। इदं वस्तु बलायातं अधिष्ठानवस्तु बलायातमित्यर्थः । जगत्स्वरूपमाह – **यथा यथेति** ।। **विशीर्यन्त इति** ।। भामत्यान्तु विविच्यन्त इति पठित्वा न कचिदपि पक्षे व्यवतिष्ठन्त इत्यर्थ इति तद्व्याख्यातम् । विशीर्यन्त इति पाठान्तरं वाऽर्थतोऽनुवादो वेति ध्येयम् । देशिताः कथिता इत्यर्थः । प्रमेये विगानाभावमुक्त्वा प्रमाणेष्वप्यविगानमाह – **द्वैतग्राहीति** ।। कालान्तरे बाध्यत्वमित्येतदपि समम् । तथापि दोषान्तरमाह – **दीर्घभ्रान्तीति** ।।

ಭಾಮತಿಯಲ್ಲಿ ಹೇಳಿರುವ ಶ್ಲೋಕಗಳನ್ನೇ ಹೇಳುತ್ತಿದ್ದಾರೆ 'ಯಥಾ' ಎಂಬುದಾಗಿ. ಭಾಮತಿಯಲ್ಲಿ 'ವಿವಿಚ್ಯಂತೇ' ಎಂದು ಪಾಠವನ್ನು ಇಟ್ಟುಕೊಂಡು ಯಾವ ಪಕ್ಷದಲ್ಲೂ ನಿಲ್ಲುವುದಿಲ್ಲ ಎಂದು ಅರ್ಥ ಹೇಳಲಾಗಿದೆ. 'ವಿಶೀರ್ಯಂತೇ' ಎಂದು ಚಂದ್ರಿಕಾದಲ್ಲಿರುವುದು ಪಾಠಾಂತರ ಎಂದು ಅಥವಾ ಅರ್ಥತಃ ಅನುವಾದ ಎಂದು ತಿಳಿಯಬೇಕು. 'ದೇಶಿತಾಃ' ಶಬ್ದಕ್ಕೆ ಕಥಿತಾಃ ಎಂದರ್ಥ. ಪ್ರಮೇಯದಲ್ಲಿ ವಿರೋಧ ಇಲ್ಲವೆಂದು ನಿರೂಪಿಸಿ ಪ್ರಮಾಣದಲ್ಲೂ ವಿರೋಧವಿಲ್ಲವೆಂದು ಹೇಳುತ್ತಿದ್ದಾರೆ. ಭೇದಗ್ರಾಹಿಯಾದ ಪ್ರತ್ಯಕ್ಷವು ಕಾಲಾಂತರದಲ್ಲಿ (ಬ್ರಹ್ಮಜ್ಞಾನ ಬಂದಮೇಲೆ) ಬಾಧ್ಯ ಎಂಬುದು ಇಬ್ಬರಲ್ಲೂ ಸಮಾನ. ಶೂನ್ಯವಾದಿಯು ದೀರ್ಘಭ್ರಾಂತಿಯನ್ನು ಹೇಳುವುದಿಲ್ಲ ಎಂದರೆ ನೀನು ಹೇಳುವ ದೀರ್ಘಭ್ರಾಂತಿಯಿಂದ ಅತಿಶಯವಾದ ಅಪ್ರಾಮಾಣ್ಯವೇ ಸಿದ್ಧವಾಗುತ್ತದೆಂದು ದೋಷ ಹೇಳುತ್ತಿದ್ದಾರೆ.

**प्रकाशः** – मया ब्रह्मज्ञानानन्दलक्षणं स्वीकृतमित्यत आह – **सत्यज्ञानेति** ।। यद्वा सत्यादिवाक्ये तत्वावेदकत्वं मयाऽङ्गीकृतमित्यत आह – **सत्येति** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे असदधिकरणं सम्पूर्णम् ।।८।।**

ಅಸದಧಿಕರಣ (2-2-8)

ನಾನು ಬ್ರಹ್ಮನಲ್ಲಿ ಸತ್ಯ ಜ್ಞಾನ ಇತ್ಯಾದಿಗಳನ್ನು ಒಪ್ಪಿದ್ದೇನೆ. ಹಾಗಾಗಿ ನನ್ನ ಬ್ರಹ್ಮನು ಶೂನ್ಯಸಮ ಹೇಗೆ? ಎಂದು ಅದ್ವೈತಿಯ ಪ್ರಶ್ನೆ. ಸತ್ಯಜ್ಞಾನ ಎಂಬ ವಾಕ್ಯ ಅದಕ್ಕೆ ಉತ್ತರ.

ಇನ್ನೊಂದು ರೀತಿಯಿಂದ ಪ್ರಶ್ನೆ - 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ವಾಕ್ಯಕ್ಕೆ ನಾನು ತತ್ವಾವೇದಕತ್ವವನ್ನು ಒಪ್ಪಿದ್ದೇನೆ. ಹಾಗಾಗಿ ವೇದಗಳಿಗೆ ಸರ್ವಥಾ ಅಪ್ರಾಮಾಣ್ಯ ಹೇಳುವ ಶೂನ್ಯವಾದಿಯಿಂದ ನಾನು ಹೇಗೆ ಸಮ ಎಂದು. ಅದಕ್ಕೂ ಉತ್ತರ ಸತ್ಯಜ್ಞಾನ ಎಂಬ ವಾಕ್ಯವೇ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಸದಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಅನುಪಲಬ್ಧ್ಯಧಿಕರಣ

(೨-೨-೯)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಅನುಪಲಬ್ಧ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – न भावोऽनुपलब्धेः ॥**

ಜಗತ್ತು ಜ್ಞಾನರೂಪವೆಂದು ಹೇಳುವ ಬೌದ್ಧರ ಮತ್ತೊಂದು ಮತವು ಅಯುಕ್ತವಾಗಿದೆ. ಏಕೆಂದರೆ ಜ್ಞಾನ ಮತ್ತು ಜ್ಞೇಯಗಳು ಭಿನ್ನವಾಗಿರುವುದರಿಂದ ಅವುಗಳ ಅಭೇದವು ಅನುಭವವಿರುದ್ಧವಾಗಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** जगत् भावः ज्ञानात्मकमपि न । कुतः? **अनुपलब्धेः** ज्ञानज्ञेययोरभेदाननुभवादित्यर्थः ॥१॥

ಭಾವಃ = ಜಗತ್ತು ಜ್ಞಾನಾತ್ಮಕವು, ನ = ಆಗುವುದಿಲ್ಲ. ಏಕೆಂದರೆ ಅನುಲಬ್ಧೇಃ = ಜ್ಞಾನ ಮತ್ತು ಜ್ಞೇಯಗಳು ಒಂದೇ ಎಂಬುದು ಅನುಭವಸಿದ್ಧವಾಗಿಲ್ಲ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – विज्ञानवादमपाकरोति –**

**॥ न भावोऽनुपलब्धेः ॥१॥**

**न विज्ञानमात्रं जगत्, तथाऽनुभवाभावात् ॥१॥**

**ಅನುವಾದ - ಜಗತ್ತು ಜ್ಞಾನರೂಪವಾಗಿದೆ ಎಂದು ಹೇಳುವ ಬೌದ್ಧರ ಏಕದೇಶವಾದ ವಿಜ್ಞಾನವಾದವನ್ನು ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ.**

**ಜಗತ್ತನ್ನು ವಿಜ್ಞಾನ ಸ್ವರೂಪವೆಂದು ಹೇಳಬಾರದು ಹಾಗೆ ಹೇಳಲು ಯಾರ ಅನುಭವವು ಕೂಡ ಇರುವುದಿಲ್ಲ.**

ಪ್ರತಿಪದಾರ್ಥ -- ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ ಎಂಬ ಮೂರು ಪಂಗಡದವರನ್ನು ನಿರಾಕರಣೆ ಮಾಡಿದ್ದಾಯಿತು. ಈಗ ವಿಜ್ಞಾನವಾದ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ವಿಜ್ಞಾನವಾದಂ = ವಿಜ್ಞಾನವೇ ಜಗತ್ತೆಂದು ಹೇಳುವ ವಾದವನ್ನು, ಅಪಾಕರೋತಿ = ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ.

ಜಗತ್ = ಜಗತ್ತು, ವಿಜ್ಞಾನಮಾತ್ರಂ = ಕೇವಲ ವಿಜ್ಞಾನಸ್ವರೂಪವೆಂದು, ನ = ಹೇಳಬಾರದು, ತಥಾ = ವಿಜ್ಞಾನ ಸ್ವರೂಪ ಎಂಬ ವಿಷಯದಲ್ಲಿ, ಅನುಭವಾಭಾವಾತ್ = ಯಾರ ಅನುಭವವೂ ಕೂಡ ಇರುವುದಿಲ್ಲ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका –**

**अधिकरणार्थं दर्शयति – विज्ञानेति ।। अत्रेश्वस्य जगत्कारणत्वे विज्ञानवादविरोधनिरासादस्ति शास्त्रादिसङ्गतिः । ईश्वरो जगत्कारणमित्युक्तम् । तत्र च योगाचारमतविरोधेऽनुपपन्नत्वप्रसङ्गादवश्यं निरसनीयं तद्भवति । हरेर्जगत्कारणत्वमेव विषयः । युक्तमयुक्तं वेति सन्देहः । समयविवाद एव सन्देहबीजम् ।**

ಈ ಅಧಿಕರಣದ ಪ್ರಮೇಯನ್ನು 'ವಿಜ್ಞಾನವಾದಂ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ಈ ಅಧಿಕರಣದಲ್ಲಿ ಈಶ್ವರನ ಜಗತ್ಕಾರಣತ್ವವಿಷಯದಲ್ಲಿ ವಿಜ್ಞಾನವಾದದ ವಿರೋಧವನ್ನು ನಿರಾಕರಣೆ ಮಾಡುತ್ತಿದ್ದಾರೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ಈಶ್ವರನೇ ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳಲಾಯಿತು. ಈ ವಿಷಯದಲ್ಲಿ ಯೋಗಾಚಾರ ಮತದ ವಿರೋಧವು ಪ್ರಾಪ್ತವಾದರೆ ಈಶ್ವರನ ಜಗತ್ಕಾರಣತ್ವವು ಅನುಪಪನ್ನವಾಗುತ್ತದೆ. ಆದ್ದರಿಂದ ಅವಶ್ಯವಾಗಿ ಈ ಮತವನ್ನು ನಿರಾಕರಣೆ ಮಾಡಲೇಬೇಕು.

ಶ್ರೀಹರಿಯ ಜಗತ್ಕಾರಣತ್ವವೇ ಅಧಿಕರಣದ ವಿಷಯ. ಇದು ಯುಕ್ತವೋ ಅಯುಕ್ತವೋ? ಎಂದು ಸಂದೇಹ. ಪ್ರಮೇಯಗಳಲ್ಲಿರುವ ವಿವಾದವೇ ಸಂದೇಹಬೀಜ.

ವಿವರಣೆ - ಶೂನ್ಯವಾದಿಗಳಿಗೆ 'ನಾಸತೋ ಅದೃಷ್ಟತ್ವಾತ್' ಎಂಬ ಸೂತ್ರದಿಂದ ಹೇಳಲ್ಪಟ್ಟ ದೋಷವು ಯೋಗಾಚಾರಪಂಥದ ನಮಗೆ ಬರುವುದಿಲ್ಲ. ಪಾರಮಾರ್ಥಿಕವಾದ ಪದಾರ್ಥವೇ ವಿಜ್ಞಾನಾತ್ಮಕವಾಗಿ ಜಗದ್ರೂಪದಲ್ಲಿ ಪರಿಣಾಮ ಹೊಂದಿದೆ ಎಂದು ನಾವು ಹೇಳುತ್ತಿದ್ದೇವೆ. ಹೀಗೆ ಹೇಳುವ ವಿಜ್ಞಾನವಾದದ ನಿರಾಕರಣೆಗಾಗಿ ಈ ಅಧಿಕರಣ ಹೊರಟಿದೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

**ತತ್ವಪ್ರಕಾಶಿಕಾ – न युक्तमिति पूर्वः पक्षः । नित्यं निरञ्जनं विज्ञानतत्त्वमेकमेव खलु विद्यमानम्। तन्मात्रमेवेदं जगन्न तु ततोऽतिरिक्तमस्ति । ततो जगदुदये नेश्वरेण कृत्यमित्ययुक्तं लक्षणमिति प्राप्ते सिद्धान्तयत्सूत्रमुपन्यस्य व्याचष्टे ।। नेति ।।**

ಶ್ರೀಹರಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ನಿತ್ಯವಾದ ದೋಷರಹಿತವಾದದ್ದೇ ವಿಜ್ಞಾನತತ್ವ. ಇದು ಒಂದೇ ವಸ್ತುವಾಗಿದೆ. ಸಮಸ್ತ ಜಗತ್ತು ಈ ವಿಜ್ಞಾನತತ್ವದ ಸ್ವರೂಪವೇ ಆಗಿದೆ. ಇದಕ್ಕಿಂತ ಅತಿರಿಕ್ತವಾದ ಬೇರೆ ಯಾವುದೇ ಪದಾರ್ಥವಿಲ್ಲ. ಹೀಗಿರುವಾಗ ಜಗತ್ತಿನ ಉತ್ಪತ್ತಿಗೆ ಈಶ್ವರನ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ಜಗತ್ಕಾರಣತ್ವವು ಈಶ್ವರನ ಲಕ್ಷಣ ಎಂಬುದು ಅಯುಕ್ತವಾಗಿದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ನ ಭಾವೋಪಽನುಲಬ್ಧೇಃ' ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ತತ್ವಪ್ರಕಾಶಿಕಾ – न विज्ञानातिरिक्तं जगदिति वदन् प्रष्टव्यो जायते । किं विज्ञानतत्त्वे जगदध्यस्तमिति पक्ष उत परमार्थतो विज्ञानजगतोरभेद एवेति । तत्रा द्योऽतीताधिकारणन्यायेन निराकर्तव्यः । नापि द्वितीयः । विज्ञानात्मकं जगदित्यत्र प्रमाणाभावादिति भावः ।**

ವಿಜ್ಞಾನಕ್ಕಿಂತ ಅತಿರಿಕ್ತವಾದ ಜಗತ್ತೇ ಇಲ್ಲ ಎಂದು ಹೇಳುವ ಯೋಗಾಚಾರರನ್ನು ಕುರಿತು ಪ್ರಶ್ನಿಸುತ್ತೇವೆ. ವಿಜ್ಞಾನತತ್ವದಲ್ಲಿ ಜಗತ್ತು ಆರೋಪಿತವಾಗಿದೆ ಎಂದು ಅಭಿಪ್ರಾಯವೋ ? ಅಥವಾ ಪಾರಮಾರ್ಥಿಕವಾಗಿ ಜಗತ್ತು ಹಾಗೂ ವಿಜ್ಞಾನಗಳಿಗೆ ಪಾರಮಾರ್ಥಿಕವಾಗಿ ಅಭೇದವಿದೆ ಎಂದು ಅಭಿಪ್ರಾಯವೋ?

ಪ್ರಥಮಪಕ್ಷವನ್ನು ಒಪ್ಪಿದರೆ ಹಿಂದಿನ ಅಧಿಕರಣನ್ಯಾಯದಿಂದ ನಿರಾಕೃತವಾಗುತ್ತದೆ. ಎರಡನೆಯ ಪಕ್ಷವನ್ನು ಒಪ್ಪಿದರೆ ಜಗತ್ತು ವಿಜ್ಞಾನಸ್ವರೂಪ ಎನ್ನಲು ಪ್ರಮಾಣವೇ ಇಲ್ಲ.

ವಿವರಣೆ - ಜ್ಞೇಯವಾದ ಪದಾರ್ಥಗಳೆಲ್ಲವೂ ಸ್ವರೂಪತಃ ಅಸತ್ಯವೇ ಆಗಿದೆ. ವಿಜ್ಞಾನದಲ್ಲಿ ಇವುಗಳು ಆರೋಪಿತವಾಗಿ ವಿಜ್ಞಾನಸ್ವರೂಪವೇ ಆಗಿವೆ ಎಂದು ಅಭಿಪ್ರಾಯವೋ? ಅಥವಾ ಪಾರಮಾರ್ಥಿಕವಾಗಿ ಸತ್ಯವಾದ ಜ್ಞೇಯಪದಾರ್ಥವೇ ವಿಜ್ಞಾನಾತ್ಮಕವಾಗಿವೆ; ಭೇದವೇ ಇರುವುದಿಲ್ಲ ಎಂದೋ? ಇದು ವಿಕಲ್ಪದ ಅಭಿಪ್ರಾಯ. ಸೂತ್ರದಲ್ಲಿ ಜಗತ್ ಎಂಬುದು ಪ್ರಕೃತವಾಗಿದೆ. ಆದ್ದರಿಂದ

'ಜಗತ್ತು ಜ್ಞಾನರೂಪವಲ್ಲ; ಅಭೇದದ ಅನುಭವ ಇಲ್ಲದಿರುವುದರಿಂದ' ಎಂದು ಸೂತ್ರಾರ್ಥವನ್ನು ಹೇಳಿದಂತಾಯಿತು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು 'ನ ದ್ವಿತೀಯಃ' ಇತ್ಯಾದಿ ಟೀಕೆಯು ಹೊರಟಿದೆ.

**तत्वप्रकाशिका – न च 'सहोपलम्भनियमादभेदो नीलतद्धियोः ।' इति युक्तम् । भेदप्रतीतिविरोधात् । न चेयं भ्रान्तिः । बाधकाभावात् । अनुमानस्यैव बाधकत्वे स्फुटमितरेतराश्रयत्वं सहोपलम्भादभेद इति प्रतिज्ञाहेत्वोर्विरोधश्च । साहित्यस्य भेद एवोपपत्तेः ।**

'ಸಹೋಪಲಂಭನಿಯಮಾತ್ ಅಭೇದೋ ನೀಲತದ್ಧಿಯೋಃ' 'ಸಹೋಪಲಂಭ ನಿಯಮ ಇರುವುದರಿಂದ ನೀಲ ಹಾಗೂ ನೀಲಜ್ಞಾನಗಳಿಗೆ ಭೇದವನ್ನು ಹೇಳಬೇಕು' ಎಂಬುದು ಯುಕ್ತವಲ್ಲ. ಭೇದ ಪ್ರತೀತಿಗೆ ವಿರೋಧ ಬರುತ್ತದೆ. ಇದನ್ನು ಭ್ರಾಂತಿ ಎನ್ನಲು ಬಾಧಕವಿರುವುದಿಲ್ಲ. ಅನುಮಾನವನ್ನೇ ಬಾಧಕವೆಂದರೆ ಅನ್ಯೋನ್ಯಾಶ್ರದೋಷವು ಬರುತ್ತದೆ. ಮತ್ತು ನೀನು ಮಾಡಿದ ಪ್ರತಿಜ್ಞೆ ಹಾಗೂ ಹೇತುಗಳ ವಿರೋಧವೂ ಕೂಡ ಬರುತ್ತದೆ. ಸಹಭಾವವು ಭೇದವಿದ್ದಲ್ಲಿ ಮಾತ್ರ ಯುಕ್ತವಾಗುತ್ತದೆ.

**ವಿವರಣೆ** - ಜಗತ್ತು ಮತ್ತು ಜ್ಞಾನ ಎರಡು ಕೂಡ ಒಂದೇ ಎಂಬುದು ಯೋಗಾಚಾರಮತದ ಅಭಿಪ್ರಾಯ. ಆದರೆ ಜಗತ್ತು ಮತ್ತು ಜ್ಞಾನಗಳಿಗೆ ಭೇದಪ್ರತೀತಿಯೇ ಬರುತ್ತಿರುವುದರಿಂದ ಅಭೇದವನ್ನು ಹೇಳುವುದು ಸರಿಯಲ್ಲ. ಬರುತ್ತಿರುವ ಈ ಭೇದಪ್ರತೀತಿಯನ್ನು ಬಾಧವೆಂದು ಹೇಳಬೇಕೆಂದರೆ ಬಾಧಕಜ್ಞಾನ ಇರಬೇಕು. ಪ್ರತ್ಯಕ್ಷದಿಂದ ಬಾಧಕಜ್ಞಾನವು ಸಿದ್ಧವಾಗಿಲ್ಲ. ಅನುಮಾನವನ್ನೇ ಬಾಧಕವೆಂದು ಹೇಳಿದರೆ ಅನ್ಯೋನ್ಯಾಶ್ರಯ ಬರುತ್ತದೆ. ಭೇದಪ್ರತೀತಿಯು ಭ್ರಾಂತಿ ಎಂದು ಸಿದ್ಧವಾದರೆ ವಿರೋಧ ಇಲ್ಲದ ಕಾರಣ ಪ್ರಮಾಣದಿಂದ ಅಭೇದ ಸಿದ್ಧವಾಗುತ್ತದೆ. ಅನುಮಾನದಿಂದ ಅಭೇದವು ಸಿದ್ಧವಾದರೆ ಮಾತ್ರ ಭೇದಪ್ರತೀತಿಯು ಭ್ರಾಂತಿಯೆಂದು ಸಿದ್ಧವಾಗುತ್ತದೆ. (ಭಾವದೀಪ)

ಪ್ರತ್ಯಕ್ಷವು ಭ್ರಾಂತಿ ಎಂದು ಸಿದ್ಧವಾದರೆ ಅನುಮಾನಕ್ಕೆ ಪ್ರಾಮಾಣ್ಯ ಸಿದ್ಧವಾಗುತ್ತದೆ. ಅನುಮಾನಕ್ಕೆ ಪ್ರಾಮಾಣ್ಯವು ಸಿದ್ಧವಾದರೆ ಪ್ರತ್ಯಕ್ಷವು ಭ್ರಾಂತಿ ಎಂದು ಸಿದ್ಧವಾಗುತ್ತದೆ. ಹೀಗೂ ಅನ್ಯೋನ್ಯಾಶ್ರಾಯದೋಷ ಬರುತ್ತದೆ. (ವಾಕ್ಯಾರ್ಥಮಂಜರಿ)

**तत्वप्रकाशिका – न च यत्प्रकाशते तद्विज्ञानं यथा ज्ञानम् । प्रकाशन्ते च नीलादय इति युक्तम्। प्रकाशत इति विज्ञानविषयत्वाभ्युपगमे स्ववृत्तिविरोधेन दृष्टान्ते साधनाभावः । अज्ञाने व्यभिचारश्च प्रकाशत्वाभिप्रायेऽसिद्धिरिति ।।३०।।**

ಯಾವುದು ಪ್ರಕಾಶಿಸುತ್ತದೋ ಅದೇ ವಿಜ್ಞಾನ. ಜ್ಞಾನವೇ ಉದಾಹರಣೆ - ನೀಲಾದಿವಸ್ತುಗಳು ಪ್ರಕಾಶಿಸುತ್ತಿವೆ. ಆದ್ದರಿಂದ ಇವುಗಳೂ ಕೂಡ ಜ್ಞಾನಸ್ವರೂಪವಾಗಬೇಕು. ಈ ಆಕ್ಷೇಪ ತಪ್ಪು. ವಸ್ತುಗಳು ಪ್ರಕಾಶಿಸುತ್ತವೆ ಎಂದು ಹೇಳಿದಾಗ ಜ್ಞಾನವೇ ವಿಷಯವೆಂದು ಹೇಳಿದಂತಾಯಿತು. ಆಗ ಸ್ವವೃತ್ತಿವಿರೋಧ ಬರುವುದರಿಂದ ದೃಷ್ಟಾಂತದಲ್ಲಿ ಪ್ರಕಾಶವಿಷಯತ್ವವೇ ಇರುವುದಿಲ್ಲ. ಆದ್ದರಿಂದ ದೃಷ್ಟಾಂತದಲ್ಲಿ ಸಾಧನವೈಕಲ್ಯ ಬರುತ್ತದೆ. ಅಜ್ಞಾನದಲ್ಲಿ ವ್ಯಭಿಚಾರವೂ ಕೂಡ

ಬರುತ್ತದೆ. ಪ್ರಕಾಶಶಬ್ದಕ್ಕೆ ಕೇವಲ ಜ್ಞಾನ ಎಂದರೆ ಅರ್ಥವನ್ನು ವಿವಕ್ಷಿಸಿದರೆ ಅಸಿದ್ಧಿದೋಷವು ಬರುತ್ತದೆ.

**ವಿವರಣೆ** - ಜಗತ್ತು ಮತ್ತು ಜ್ಞಾನಗಳಿಗೆ ಅಭೇದವನ್ನು ಹೇಳಿದರೆ ಪ್ರತಿಜ್ಞಾವಾಕ್ಯ ಹಾಗೂ ಹೇತುವಾಕ್ಯಗಳಿಗೆ ಪರಸ್ಪರ ವಿರೋಧಬರುತ್ತದೆ. ವಿಜ್ಞಾನವೇ ವಸ್ತುಸ್ವರೂಪ ಎಂಬುದು ಅವನ ಪ್ರತಿಜ್ಞೆ. 'ಒಟ್ಟಿಗೆ ತಿಳಿಯುತ್ತಿರುವುರಿಂದ' ಎಂಬುದು ಅವನು ನೀಡಿದ ಹೇತು. ಇವೆರಡಕ್ಕೆ ಪರಸ್ಪರ ವಿರೋಧವಿದೆ. ಏಕೆಂದರೆ 'ಒಟ್ಟಿಗೆ ಇರುತ್ತದೆ' ಎಂದರೆ ಭೇದ ಇರಲೇಬೇಕು. ಇದನ್ನೇ ಸ್ವವ್ಯತ್ತಿವಿರೋಧ ಎಂದು ಹೇಳಿದ್ದು.

ದೃಷ್ಟಾಂತದಲ್ಲಿ ಸಾಧನವೈಕಲ್ಯ ದೋಷವೂ ಕೂಡ ಬರುತ್ತದೆ. ಯಾವುದು ಪ್ರಕಾಶಿಸುತ್ತದೋ ಅದು ಜ್ಞಾನಸ್ವರೂಪ ಎಂಬುದು ಪೂರ್ವಪಕ್ಷಿಯ ವಾದ. ಆದರೆ ವಸ್ತುಗಳಿಗೆ ಜ್ಞಾನಸ್ವರೂಪಾತ್ಮಕತ್ವವನ್ನು ಒಪ್ಪಿ ಪುನಃ ಜ್ಞಾನವಿಷಯತ್ವವನ್ನು ಒಪ್ಪಿದರೆ ಜ್ಞಾನವೇ ಜ್ಞಾನಕ್ಕೆ ವಿಷಯವೆಂದು ಹೇಳಿದಂತಾಯಿತು. ಹೀಗೆ ದೃಷ್ಟಾಂತದಲ್ಲಿ ಪ್ರಕಾಶಿಸುವಿಕೆ ಎಂಬ ಹೇತುವೇ ಇಲ್ಲದ ಕಾರಣ ಸಾಧನವೈಕಲ್ಯ ಬರುತ್ತದೆ.

ಹೇತುವಿಗೆ ವ್ಯಭಿಚಾರ ಹಾಗೂ ಅಸಿದ್ಧಿದೋಷಗಳು ಕೂಡ ಬರುತ್ತವೆ. ಅದು ಹೀಗೆ - ಅಜ್ಞಾನದಲ್ಲಿ ಪ್ರಕಾಶವಿಷಯತ್ವವಿಲ್ಲ. ಜ್ಞಾನಕಾಲದಲ್ಲಿ ಇದು ತೋರಲು ಜ್ಞಾನಸ್ವರೂಪತ್ವ ಇದಕ್ಕಿಲ್ಲವೆಂದು ಅವರೇ ಹೇಳುತ್ತಾರೆ. ಆದ್ದರಿಂದ ಅಜ್ಞಾನದಲ್ಲಿ ವ್ಯಭಿಚಾರ. ಇನ್ನು ಪ್ರಕಾಶಶಬ್ದಕ್ಕೆ ಜ್ಞಾನವೆಂಬ ಅರ್ಥವನ್ನಷ್ಟೇ ಸ್ವೀಕರಿಸಿದರೆ ಘಟಪಟಾದಿಜಗತ್ತಿನಲ್ಲಿ ಜ್ಞಾನಸ್ವರೂಪತ್ವವು ಇಲ್ಲವೆಂದಾಯಿತು. ಆದ್ದರಿಂದ ಹೇತ್ವಸಿದ್ಧಿ.

## ಬ್ರಹ್ಮಸೂತ್ರ

**सूत्रम् – क्षणिकत्वाच ।**

ಜ್ಞಾನವು ಕ್ಷಣಿಕವಾಗಿದೆ. ಜಗತ್ತು ಕ್ಷಣಿಕವಾಗಿರುವುದಿಲ್ಲ. ಹೀಗೆ ವಿರುದ್ಧಧರ್ಮಗಳಿರುವುದರಿಂದಲೂ ಜಗತ್ತು ಜ್ಞಾನಾತ್ಮಕವಾಗುವುದಿಲ್ಲ.

## ಸೂತ್ರದೀಪಿಕಾ

**सूत्रदीपिका –** ज्ञानस्यैकक्षणावस्थायित्वाज्जगतः स्थायित्वात् तद्विरोधात्र तयोरैक्यमित्यर्थः ।।२।।

ಕ್ಷಣಿಕತ್ವಾಚ್ಚ = ಜ್ಞಾನವು ಏಕಕ್ಷಣಾವಸ್ಥಾಯಿಯಾಗಿದೆ. ಜಗತ್ತು ಸ್ಥಾಯಿಯಾಗಿದೆ. ಹೀಗೆ ವಿರುದ್ಧಧರ್ಮಗಳಿರುವುದರಿಂದ ಜಗತ್ತು ಮತ್ತು ಜ್ಞಾನಗಳಿಗೆ ಐಕ್ಯವನ್ನು ಹೇಳಬಾರದು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। क्षणिकत्वाच ।।२।।**

**ज्ञानं क्षणिकं, अर्थानां च स्थायित्वमुक्तम् । अतश्च नैक्यम् ।।२।।**

ಅನುವಾದ - ಜ್ಞಾನವು ಕ್ಷಣಿಕವಾಗಿದೆ ಆದರೆ ಜಗತ್ತು ಸ್ಥಿರವಾಗಿದೆ ಇದನ್ನು ಈ ಹಿಂದೆ 'ಉಭಯಥಾಚ ದೋಷಾತ್' ಎಂಬ ಸೂತ್ರದಲ್ಲಿ ಪ್ರತಿಪಾದನೆ ಮಾಡಿದ್ದಾಗಿದೆ. ಆದ್ದರಿಂದ ಜ್ಞಾನಕ್ಕೂ ಜಗತ್ತಿಗೆ ಐಕ್ಯವನ್ನು ಹೇಳಬಾರದು.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ಜಗತ್ತಿಗೆ ವಿಜ್ಞಾನಸ್ವರೂಪವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರ ಹೊರಟಿದೆ. ಜ್ಞಾನಂ = ಜ್ಞಾನವು, ಕ್ಷಣಿಕಂ = ಒಂದು ಕ್ಷಣಮಾತ್ರ ಇರುತ್ತದೆ. ಅರ್ಥಾನಾಂ ಚ = ಘಟಪಟಾದಿಗಳಾದರೂ, ಸ್ಥಾಯಿತ್ವಮ್ = ಸ್ಥಾಯಿಯಾಗಿವೆ. ಹೀಗೆ ಉಕ್ತಂ = 'ಉಭಯಥಾಚ ದೋಷಾತ್' ಎಂಬಿತ್ಯಾದಿ ಮೂರು ಸೂತ್ರದಲ್ಲಿ ಹೇಳಿದ್ದಾಗಿದೆ ಅತಶ್ಚ = ಈ ಮೂರು ಕಾರಣದಿಂದಲೂ, ನೈಕ್ಯಮ್ = ವಿಜ್ಞಾನ ಹಾಗೂ ಜಗತ್ತುಗಳಿಗೆ ಐಕ್ಯವನ್ನು ಹೇಳಬಾರದು.

## ತತ್ವಪ್ರಕಾಶಿಕಾ

**तत्वप्रकाशिका – युक्त्यन्तरेणापि जगतो विज्ञानात्मकत्वं पराकुर्वत्सूत्रमुपन्यस्य व्याचष्टे ।। क्षणिकत्वाच्चेति ।। न च ज्ञानेऽपि क्षणिकत्वं भ्रान्तमिति वाच्यम् । मानाभावात् ।। ३१ ।।**

ಮತ್ತೊಂದು ಯುಕ್ತಿಯಿಂದ ಜಗತ್ತು ವಿಜ್ಞಾನಸ್ವರೂಪ ಎಂಬುದನ್ನು ನಿರಾಕರಣೆ ಮಾಡುವುದಕ್ಕಾಗಿ 'ಕ್ಷಣಿಕತ್ವಾಚ್ಚ' ಎಂಬ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಜ್ಞಾನವು ಕ್ಷಣಿಕ' ಎಂಬ ಪ್ರತೀತಿಯನ್ನು ಭ್ರಾಂತಿ ಎಂದು ಹೇಳಬಾರದು. ಹಾಗೆ ಹೇಳಲು ಯಾವುದೇ ಪ್ರಮಾಣವಿಲ್ಲ.

## ಬ್ರಹ್ಮಸೂತ್ರ

**सूत्रम् – सर्वथाऽनुपपत्तेश्च ।।**

ಹೀಗೆ ಎಲ್ಲ ಬಗೆಯಿಂದಲೂ ಬೌದ್ಧರ ಮತವು ಯುಕ್ತಿಶೂನ್ಯವಾಗಿರುವುದರಿಂದ ಯುಕ್ತಿಗೆ ವಿರುದ್ಧವಾದ್ದರಿಂದ ಗ್ರಾಹ್ಯವಲ್ಲ.

## ಸೂತ್ರದೀಪಿಕಾ

**सूत्रदीपिका** – सर्वप्रकारेणानुपपत्तेः बौद्धराद्धान्तस्य युक्तिशून्यत्वात् तद्विरुद्धत्वाच्च न ग्राह्यत्वमित्यर्थः ।।३।।

ಸರ್ವಥಾ = ಸಕಲವಿಧದಿಂದ, ಅನುಪಪತ್ತೇಃ = ಬೌದ್ಧರಮತವು, ಯುಕ್ತಿವಿರುದ್ಧವಾದ್ದರಿಂದ ಸ್ವೀಕಾರಕ್ಕೆ ಅರ್ಹವಲ್ಲ.

ಎಲ್ಲವೂ ಕ್ಷಣಿಕ, ಅಥವಾ ಶೂನ್ಯಸ್ವರೂಪ ಅಥವಾ ಜ್ಞಾನಸ್ವರೂಪ ಎಂದು ಹೇಳುವ ಬೌದ್ಧರ ಸಿದ್ಧಾಂತವು ಮತ್ತು ಇದೇ ವಿಷಯವನ್ನು ಬೇರೆ ಶಬ್ದಗಳಿಂದ ಹೇಳುವ ಪ್ರಚ್ಛನ್ನಬೌದ್ಧಮತವು ವೇದವಿರುದ್ಧವಾದ ಪಕ್ಷಗಳಾಗಿವೆ. ಏಕೆಂದರೆ ಅವರ ಸಿದ್ಧಾಂತದಲ್ಲಿ ಅನುಮಾನ ಪ್ರತ್ಯಕ್ಷ, ಆಗಮ ಎಂಬ ಪ್ರಮಾಣಗಳು ಇರುವುದಿಲ್ಲ. ಅಷ್ಟೇ ಅಲ್ಲದೇ ಪ್ರಮಾಣಗಳಿಗೆ ವಿರುದ್ಧವೇ ಆಗಿವೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅನುಲಬ್ಧ್ಯಧಿಕರಣವು ಮುಗಿಯಿತು.
ಅನುಪಲಬ್ಧ್ಯಧಿಕರಣ (೨-೨-೯)

## ಬ್ರಹ್ಮಸೂತ್ರಭಾಷ್ಯ

**भाष्यम् – ।। सर्वथाऽनुपपत्तेश्च ।।३।।**

**प्रमाणाभावात् सर्वश्रुतिस्मृतियुक्तिविरुद्धत्वाच्च नैते पक्षा ग्राह्याः ।।३।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये अनुपलब्ध्यधिकरणम् ।। ९ ।।**

ಅನುವಾದ - ಯಾವುದೇ ಪ್ರಮಾಣಗಳಿಲ್ಲದ ಕಾರಣ ಸಕಲಶ್ರುತಿಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಈ ಯಾವ ಪಕ್ಷಗಳೂ ಕೂಡ ಗ್ರಾಹ್ಯವಲ್ಲ.

ಪ್ರತಿಪದಾರ್ಥ -- ಬೌದ್ಧರ ಅವಾಂತರ ಮತಗಳನ್ನು ಪ್ರತ್ಯೇಕ ನಿರಾಕರಣೆ ಮಾಡಿ ಎಲ್ಲರನ್ನು ಸಾಮಾನ್ಯದೋಷದಿಂದ ನಿರಾಕರಣೆ ಮಾಡುತ್ತಿದ್ದಾರೆ. ಪ್ರಮಾಣಾಭಾವಾತ್ = ಯಾವುದೇ ಪ್ರಮಾಣಗಳಿಲ್ಲದ ಕಾರಣ, ಸರ್ವಶ್ರುತಿಸ್ಮೃತಿಯುಕ್ತಿವಿರುದ್ಧತ್ವಾಚ್ಚ = ಸಕಲ ಶ್ರುತಿ ಸ್ಮೃತಿ ಯುಕ್ತಿಗಳ ವಿರೋಧವಿರುವುದರಿಂದ, ಏತೇಪಕ್ಷಾಃ = ಬೌದ್ಧರ ಯಾವ ಪಕ್ಷಗಳೂ ಕೂಡ, ನ ಗ್ರಾಹ್ಯಾಃ = ಸ್ವೀಕಾರಕ್ಕೆ ಅರ್ಹವಾಗಿಲ್ಲ.

ಇಲ್ಲಿಗೆ ಅನುಪಲಬ್ಧ್ಯಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – एवं प्रत्येकं दूषितानि बौद्धमतानि पुनः सामान्यदूषणेन पराकुर्वत्सूत्रमुपन्यस्य व्याचष्टे – सर्वथेति ।। श्रुत्यादिकमुक्तं वक्ष्यमाणं च द्रष्टव्यम् ।। एतच्चाधिकारिणं प्रति । अतो बौद्धराद्धान्तस्यानुपपन्नत्वेनाविरोधकत्वाद्युक्तं हरेर्जगत्कारणत्वलक्षणमिति सिद्धम् ।। ३२ ।।**

ಹೀಗೆ ಪ್ರತ್ಯೇಕವಾಗಿ ದೂಷಿಸಲ್ಪಟ್ಟ ಬೌದ್ಧಮತವನ್ನು ಸಾಮಾನ್ಯದೋಷದಿಂದ ನಿರಾಕರಣೆ ಮಾಡುವ 'ಸರ್ವಥಾ' ಇತ್ಯಾದಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಬೌದ್ಧಮತವನ್ನು ವಿರೋಧಿಸುವ ಶ್ರುತ್ಯಾದಿಗಳನ್ನು ಹಿಂದೆ ಹೇಳಲಾಗಿದೆ. ಮುಂದೆ ಹೇಳುವುದನ್ನು ಕೂಡ ವಿವಕ್ಷಿಸಬೇಕು. ಬೌದ್ಧರು ನಾವು ಹೇಳುವ ಶ್ರುತಿಯನ್ನು ಒಪ್ಪದಿದ್ದರೂ ಕೂಡ ಮೋಕ್ಷಾಧಿಕಾರಿಗಳನ್ನು ಕುರಿತು ನಾವು ಹೇಳುತ್ತಿರುವುದರಿಂದ ವ್ಯರ್ಥವಲ್ಲ. ಆದ್ದರಿಂದ ಬೌದ್ಧರ ಸಿದ್ಧಾಂತವು ಅನುಪಪನ್ನವಾಯಿತು. ಇವರ ಮತದ ವಿರೋಧವು ನಮಗೆ ಸರ್ವಥಾ ಬರುವುದಿಲ್ಲ. ಆದ್ದರಿಂದ ಶ್ರೀಹರಿಯ ಜಗತ್ಕಾರಣತ್ವ ಲಕ್ಷಣವು ನಿರ್ದುಷ್ಟವೆಂದು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅನುಪಲಬ್ಧ್ಯಧಿಕರಣ ಮುಗಿಯಿತು.

ಪರಿಪೂರ್ಣಚಂದ್ರಿಕಾ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अनुपलब्ध्यधिकरणम्

### ಸೂತ್ರದಲ್ಲಿರುವ ಭಾವಶಬ್ದದ ವ್ಯಾಖ್ಯಾನ

**न भावोऽनुपलब्धेः ।। ''नाभाव उपलब्धेः'' इति पूर्वसूत्र इवात्रापि सूत्रे कर्तृसाधनेन भावशब्देन सद्रूपं ज्ञानमुच्यते ।**

(ಪ್ರಕೃತ ಸೂತ್ರದಲ್ಲಿ 'ಭಾವ' ಶಬ್ದಕ್ಕೆ 'ವಿಜ್ಞಾನ' ಎಂಬರ್ಥ ಮಾಡಿದ್ದಾರೆ.ಅದು ಹೇಗೆ ಬಂತು ಎಂಬುದನ್ನು ವಿವರಿಸುತ್ತಿದ್ದಾರೆ) ಹಿಂದೆ 'ನಾಭಾವ ಉಪಲಬ್ಧೇಃ' ಎಂಬ ಸೂತ್ರದಲ್ಲಿ 'ಭಾವ' ಶಬ್ದವನ್ನು ಕರ್ತೃಸಾಧನ ಎಂದು ಇಟ್ಟುಕೊಂಡು 'ಭವತಿ ಇತಿ ಭಾವಃ' ಎಂದರ್ಥ ಹೇಳಿ 'ಸತ್' ಎಂಬರ್ಥ ಹೇಳಿದ್ದೇವೆ. ಅದರಂತೆ ಇಲ್ಲಿಯೂ ಕೂಡ 'ಭಾವ' ಶಬ್ದಕ್ಕೆ ಸತ್ ಎಂದೇ ಅರ್ಥ. ಅದೇ ಜ್ಞಾನ.

**विज्ञानवादे ज्ञानादन्यस्यासत्त्वात् ।**

'ಭಾವ' ಶಬ್ದಕ್ಕೆ 'ಸತ್' ಎಂದರ್ಥ ಹೇಳಿದರೂ ಅದರಿಂದ ವಿಜ್ಞಾನ ಎಂಬರ್ಥ ಹೇಗೆ ಬರುತ್ತದೆ? ಎಂದರೆ, ವಿಜ್ಞಾನವಾದಿಯ ಪ್ರಕಾರ ಜ್ಞಾನ ಒಂದೇ ಸತ್ ಆಗಿದೆ. ಹಾಗಾಗಿ ಪರ್ಯವಸಾನದಿಂದ ಭಾವ = ಸತ್ ಎಂದರೆ ವಿಜ್ಞಾನ ಎಂದೇ ಅರ್ಥವಾಗುತ್ತದೆ.

**ज्ञानमित्यनुक्त्वा भाव इत्युक्तिस्तु ''नासतोऽदृष्टत्वात्'' इति शून्यवादिनं प्रत्युक्तो दोषो नास्माकमिति पूर्वपक्षोत्थानार्थमिति द्रष्टव्यम् ।**

ಹಾಗಾದರೆ ಸೂತ್ರಕಾರರು ನೇರವಾಗಿ ಜ್ಞಾನ ಎಂಬ ಶಬ್ದವನ್ನೇ ಹೇಳಬಹುದಾಗಿತ್ತು. 'ಭಾವ' ಶಬ್ದವನ್ನು ಹೇಳಿ ಅದರಿಂದ ವಿಜ್ಞಾನ ಎಂಬ ಅರ್ಥವನ್ನು ಏಕೆ ಹೇಳಬೇಕಿತ್ತು ? ಎಂದರೆ, ಜ್ಞಾನ

ಎಂದು ಹೇಳದೆ ಭಾವ ಶಬ್ದವನ್ನು ಹೇಳುವುದರಿಂದ ಸೂತ್ರಕಾರರು ಪೂರ್ವಪಕ್ಷ ಯುಕ್ತಿಯನ್ನು ಸೂಚಿಸುತ್ತಿದ್ದಾರೆ. ಅದೇನೆಂದರೆ, ನಾವು ಹಿಂದೆ "ನಾಸತೋಽದೃಷ್ಟತ್ವಾತ್" ಎಂಬಲ್ಲಿ ಶೂನ್ಯವಾದಕ್ಕೆ ದೋಷ ಹೇಳಿದ್ದೇವೆ. ಜಗತ್ತು ಅಸತ್ತಲ್ಲ ಏಕೆಂದರೆ, ಅದು ದೃಷ್ಟವಾಗಿರುವುದರಿಂದ ಎಂದು ಈ ದೋಷ ನನಗೆ ಬರುವುದಿಲ್ಲ ಎಂದು ವಿಜ್ಞಾನವಾದಿ ಹೇಳುತ್ತಾನೆ. ಏಕೆಂದರೆ, ವಿಜ್ಞಾನವಾದಿಯು ಜಗತ್ತನ್ನು ಅಸತ್ (ನಿರ್ಧಮಕ) ಎಂದೇನೂ ಒಪ್ಪಿಲ್ಲ ಹೊರತು ಸತ್ ಎಂದೇ ಹೇಳುತ್ತಾನೆ. ಅದು ವಿಜ್ಞಾನರೂಪ ಎಂಬುದು ಅವನ ಮತ. ಹೀಗೆ ಪೂರ್ವಪಕ್ಷವನ್ನು ಸೂಚಿಸುವುದಕ್ಕಾಗಿ ಸೂತ್ರಕಾರರು 'ಸತ್' ಎಂಬ ಅರ್ಥ ಕೊಡುವ 'ಭಾವ' ಶಬ್ದವನ್ನು ಆಡಿದ್ದಾರೆ.

**केचित्तु प्राप्तौ भूक् शुद्धिचिन्तयोरिति वचनाचिन्तात्मकज्ञानार्थोऽपि भूधातुरस्तीति वा वः युष्माकं भाः साकारत्वेनाभिमतं ज्ञानमिति वाऽभिप्रेत्य भाव इत्युक्तिरित्याहुः ।**

ಹಿಂದೆ ಮಾಡಿದ ಪ್ರಶ್ನೆಗೆ ಕೆಲವರು ಬೇರೆ ಎರಡು ರೀತಿ ಉತ್ತರ ಹೇಳುತ್ತಾರೆ. ಅದೇನೆಂದರೆ, ಸೂತ್ರದಲ್ಲಿರುವ 'ಭಾವ' ಶಬ್ದವು 'ಭೂ ಸತ್ತಾಯಾಂ' ಎಂಬ ಧಾತುವಿನಿಂದ ನಿಷ್ಪನ್ನವಾದದ್ದಲ್ಲ ಹೊರತು 'ಭೂಕ್' 'ಪ್ರಾಪ್ತೌ ಶುದ್ಧಿಚಿಂತಾಯಾಂ' ಎಂಬ ಬೇರೊಂದು ಧಾತುವಿನಿಂದ ಹುಟ್ಟಿದ್ದು. ಈ 'ಭೂಕ್' ಧಾತುವಿಗೆ ಚಿಂತಾ (ಜ್ಞಾನ) ಎಂದೇ ಅರ್ಥ. ಹಾಗಾಗಿ ಸಮಸ್ಯೆಯಿಲ್ಲ. ಅಥವಾ 'ಭಾವ' ಎನ್ನುವಲ್ಲಿ 'ಭಾ''ವ' ಎಂದು ವಿಭಾಗ ಮಾಡಿ 'ವ' ಎಂದರೆ ವಃ ಅಂದರೆ 'ನಿಮಗೆ' ಎಂದರ್ಥ. 'ಭಾಃ' ಅಂದರೆ ಸಾಕಾರವಾಗಿ ಭಾಸವಾಗುತ್ತಿರುವ ಜ್ಞಾನವು ಎಂದರ್ಥ.

**अत एव भाष्ये ''न विज्ञानमात्रं जगत्'' इति टीकायां च ''न विज्ञानातिरिक्तं जगत्'' इत्युक्तम् ।**

ಭಾವ ಶಬ್ದಕ್ಕೆ ಹಿಂದಿನಂತೆ ಕರ್ತ್ಯವ್ಯುತ್ಪತ್ತಿಯಿಂದ ಸತ್ ಹಾಗೂ ವಿಜ್ಞಾನ ಎಂದರ್ಥ ಎಂಬುದನ್ನು ಭಾಷ್ಯಟೀಕಾದಿಂದಲೂ ತಿಳಿಯಬಹುದು. ಏಕೆಂದರೆ, ಭಾಷ್ಯಕಾರರು 'ನ ವಿಜ್ಞಾನಮಾತ್ರಂ ಜಗತ್' ಎಂಬುದಾಗಿಯೂ ಹಾಗೇ ಟೀಕಾಕಾರರು 'ನ ವಿಜ್ಞಾನಾನಾತಿರಿಕ್ತಂ ಜಗತ್' ಎಂಬುದಾಗಿ ಭಾವ ಶಬ್ದಕ್ಕೆ ವ್ಯಾಖ್ಯಾನ ಮಾಡಿದ್ದಾರೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**न भावोऽनुपलब्धेः ।। ''न विज्ञानमात्रं जगत्'' इत्यादिभाष्यटीकयोरुक्तमर्थं सूत्रारूढं कर्तुमाह – नाभाव सति ।।**

ಭಾಷ್ಯ ಹಾಗೂ ಟೀಕಾಗಳಲ್ಲಿ ''ನ ವಿಜ್ಞಾನಮಾತ್ರಂ ಜಗತ್'' ಎಂಬ ವ್ಯಾಖ್ಯಾನವು ಸೂತ್ರಕ್ಕೆ ಅನುಗುಣವಾಗಿದೆ ಎಂಬುದನ್ನು ತೋರಿಸಲು ಹೇಳುತ್ತಿದ್ದಾರೆ 'ನಾಭಾವ' ಎಂಬುದಾಗಿ.

**प्रकाशः – एतेन तत्रापि कर्तृसाधन इति सूचयति ।**

ಇಲ್ಲಿ ಹಿಂದಿನ ಸೂತ್ರದಂತೆ 'ಭಾವ' ಶಬ್ದವು ಕರ್ತೃಸಾಧನ ಎಂದು ಹೇಳಿದ್ದರಿಂದ ಹಿಂದಿನ ಸೂತ್ರದಲ್ಲಿಯೂ 'ಭಾವ' ಶಬ್ದವು ಕರ್ತೃಸಾಧನ ಎಂದು ಸೂಚಿಸಿದಂತಾಯಿತು.

**प्रकाशः – कर्ता साधनं निमित्तं प्रत्ययोत्पत्तौ यस्य स कर्तृसाधनस्तेनेत्यर्थः।**

'ಕರ್ತೃಸಾಧನ' ಎಂಬ ಶಬ್ದದ ಅರ್ಥ ಹೇಳುತ್ತಿದ್ದಾರೆ. ಕರ್ತಾ ಸಾಧನಂ ಯಸ್ಯ ಸಃ ಎಂದು ವಿಗ್ರಹವಾಕ್ಯ. ಇದರಲ್ಲಿ ಸಾಧನ ಶಬ್ದಕ್ಕೆ ನಿಮಿತ್ತ ಎಂದರ್ಥ. ಯಾವುದಕ್ಕೆ ನಿಮಿತ್ತ ಎಂದರೆ ಪ್ರತ್ಯಯ ಬರುವುದಕ್ಕೆ ಎಂದರ್ಥ.

**प्रकाशः – भू सत्तायामिति धातोः ''भवतेश्च'' इति णप्रत्यये ''अचो ञ्णिति'' इति वृद्धावावादेशे भाव इति रूपं सन्नित्यर्थः ।**

'ಭಾವ' ಶಬ್ದದ ನಿಷ್ಪತ್ತಿಯನ್ನು ತೋರಿಸುತ್ತಿದ್ದಾರೆ. 'ಭೂ' ಧಾತುವಿಗೆ ಸತ್ತಾ ಎಂದರ್ಥ. ಈ ಧಾತುವಿನ ಮುಂದೆ ''ಭವತೇಶ್ಚ'' ಎಂಬ ಪಾಣಿನೀಸೂತ್ರದಿಂದ 'ಣ' ಎಂಬ ಪ್ರತ್ಯಯ ಬರುತ್ತದೆ. 'ಣ' ಪ್ರತ್ಯಯ ಣಿತ್. ಅಂದರೆ ಣ ಕಾರ ಇತ್ ಆಗಿದೆ. ಹಾಗಾಗಿ 'ಅಚೋ ಞ್ಣಿತಿ' ಎಂಬ ಸೂತ್ರದಿಂದ ಭೂ ಅನ್ನುವಲ್ಲಿರುವ ಆದಿ ಅಚ್ (ಸ್ವರ) ಕ್ಕೆ ವೃದ್ಧಿ. ಭೂ+ಅ ಎಂಬುದಕ್ಕೆ ವೃದ್ಧಿ ಬಂದ ಮೇಲೆ ಭೌ+ಅ ಎಂದಾಗುತ್ತದೆ. ನಂತರ 'ಏಚೋಽಯವಾ ಯಾವಃ' ಎಂಬ ಸೂತ್ರದಿಂದ ಆವಾದೇಶ. ಭಾವ್+ಅ ಸೇರಿಸಿದರೆ 'ಭಾವ' ಎಂದಾಗುತ್ತದೆ. ಅದಕ್ಕೆ ಸತ್ ಎಂದರ್ಥ.

**प्रकाशः – ज्ञानमिति योग्यतालभ्यमिति भावेनाह – विज्ञानवाद इति ।।**

'ಭಾವ' ಶಬ್ದಕ್ಕೆ 'ಸತ್' ಎಂದರ್ಥ. ಆದರೆ, ಯೋಗ್ಯತಾದಿಂದ ಬರುವ ಅರ್ಥ ಜ್ಞಾನ. ಏಕೆಂದರೆ, ಬೌದ್ಧರ ಪ್ರಕಾರ ಸತ್ ಆದ ವಸ್ತು ಜ್ಞಾನ ಒಂದೇ.

**प्रकाशः** – इति वचनादिति ।। ''ब्रूलगुक्तौ भूकङ्भूत्रप्राप्तौ भूक्'' इति कविकल्पद्रुमोक्तेरित्यर्थः । भूधातुः प्राप्त्यर्थे शुद्ध्यर्थे चिन्तार्थे च वर्तत इत्यर्थः । प्राप्तावित्यस्य पूर्वेणान्वयः । ककारानुबन्धश्चुरादिण्यन्तत्वज्ञापनार्थः ।

ಚಂದ್ರಿಕಾದಲ್ಲಿ "ಭೂ ಪ್ರಾಪ್ತೌ ಶುದ್ಧಿಚಿಂತಯೋಃ" ಎಂಬುದಕ್ಕೆ 'ಕವಿಕಲ್ಪದ್ರುಮ' ಎಂಬ ಗ್ರಂಥದಲ್ಲಿ 'ಬ್ರೂಲಞುಕ್ತೌ....' ಎಂದು ಹೇಳಿದ್ದಾರೆ. ಭೂಧಾತುವು ಪ್ರಾಪ್ತಿ, ಶುದ್ಧಿ, ಚಿಂತಾ ಈ ಮೂರು ಅರ್ಥಗಳಲ್ಲಿದೆ. 'ಪ್ರಾಪ್ತೌ' ಎಂಬುದಕ್ಕೆ ಹಿಂದೆ ಅನ್ವಯ. 'ಭೂಕ್' ಎಂಬುದಾಗಿ ಕಕಾರವನ್ನು ಅನುಬಂಧ (ಇತ್) ಮಾಡಿದ್ದು ಇದು ಚುರಾದಿಗಣಕ್ಕೆ ಸೇರಿದ ಧಾತು ಎಂದು ತೋರಿಸಲು. ಇಲ್ಲದಿದ್ದರೆ ಇದು ಭ್ವಾದಿಗಣಕ್ಕೆ ಸೇರಿದ ಧಾತು ಎಂದು ತಿಳಿಯುವ ಅವಕಾಶವಿತ್ತು.

**प्रकाशः** – कर्तरि पचाद्यच् ।

ಭೂಕ್ ಧಾತುವಿನ ಮೇಲೆ "ನಂದಿಗ್ರಹಿಪಚಾದಿಭ್ಯೋಃ ....' ಎಂಬ ಸೂತ್ರದಿಂದ ಅಚ್ ಪ್ರತ್ಯಯ ಬರುತ್ತದೆ. ಚುರಾದಿಗಣಪಠಿತವಾದ್ದರಿಂದ 'ಣಿಚ್' ವಿಕರಣ ಪ್ರತ್ಯಯ. ಭೂ+ಹ+ಅಚ್ ಎಂದಿರುವಾಗ 'ಣೇರಣಿತ್' ಎಂಬ ಸೂತ್ರದಿಂದ ಇ (ಣಿಚ್) ಗೆ ಲೋಪ. ಅನಂತರ ವೃದ್ಧಿ ಬಂದು 'ಭಾವ' ಎಂದಾಗುತ್ತದೆ.

**प्रकाशः** – भाश्शब्दस्सकारान्तोऽत्र ज्ञानवाची । भा दीप्ताविति धातुजत्वात् । भास् शब्दसकारस्य रुत्वयत्वयलोपेषु भाव इति निर्देश इति वा भा दीप्तावित्यतो भावे विच्प्रत्यये भा इत्याकारान्त एवायं शब्द इति वा भाव इति निर्देश इत्युपेत्यार्थान्तरमाह – व इति ।।

'ಭಾಸ್'ಶಬ್ದವು ಸಕಾರಾಂತ ಜ್ಞಾನವಾಚಕ ಶಬ್ದ. ಭಾಸ್ ಶಬ್ದವು ಭಾದೀಪ್ತೌ ಎಂಬ ಧಾತುವಿನಿಂದ ಹುಟ್ಟಿದೆ. ಭಾಸ್ ಶಬ್ದದ ಸಕಾರಕ್ಕೆ ರುತ್ವ "ಸಸಜುಷೋಃ ರುಃ" ಎಂಬ ಸೂತ್ರದಿಂದ ರುತ್ವ ಬರುತ್ತದೆ. "ಭೋಭಗೋ ಅಘೋ ಅಪೂರ್ವಸ್ಯಯೋಽಷಿ" ಎಂಬ ಸೂತ್ರದಿಂದ ಯತ್ವ ಬರುತ್ತದೆ. ಆಮೇಲೆ ಯಕಾರಕ್ಕೆ "ಲೋಪೋ ವ್ಯೋರ್ವಲಿ" ಎಂಬ ಸೂತ್ರದಿಂದ ಲೋಪ ಬರುತ್ತದೆ. ಅಥವಾ 'ಭಾ' ಧಾತುವಿನ ಮೇಲೆ ಭಾವಾರ್ಥದಲ್ಲಿ 'ವಿಜ್' ಪ್ರತ್ಯಯ. ವಿಜ್‌ನಲ್ಲಿ ಸರ್ವಲೋಪವಾಗುತ್ತದೆ. ಭಾ ಎಂದು ಆಕಾರಾಂತವಾದ ಶಬ್ದ ಹೀಗೆ ಎರಡು ರೀತಿಯಿಂದಲೂ 'ಭಾವ' ಎಂಬ ನಿರ್ದೇಶ ಮಾಡಲಾಗಿದೆ. ಅದನ್ನೇ 'ವಾ' ಇತ್ಯಾದಿಯಾಗಿ ಗ್ರಂಥದಲ್ಲಿ ಹೇಳುತ್ತಿದ್ದಾರೆ.

ಅದ್ವೈತಮತದಲ್ಲಿ ಐದುಸೂತ್ರಗಳು ಒಂದೇ ಅಧಿಕರಣ

## तात्पर्यचन्द्रिका

ननु तार्किकमते स्ववृत्तिविरोधः । नतु सिद्धान्ते । साक्षिणः स्वप्रकाशत्वाङ्गीकारादिति पूर्वत्रारुच्या दोषान्तरमाह – अज्ञाने व्यभिचारश्चेति ।।

**ज्ञानप्रागभावादौ ज्ञानावरणे संवृतौ च व्यभिचारः । नहि ज्ञानाभावादिरपि ज्ञानम्। विरोधादिति भावः ।।**

ಘಟಾದಿಗಳು ಜ್ಞಾನರೂಪ ಎಂದರೆ ಜ್ಞಾನಕ್ಕೆ ವಿಷಯವಾಗಲು ಸಾಧ್ಯವಿಲ್ಲ. ಏಕೆಂದರೆ ಸ್ವವೃತ್ತಿವಿರೋಧ. ಜ್ಞಾನವೇ ಕರ್ತೃ ಹಾಗೂ ಕರ್ಮ ಎರಡೂ ಆದರೆ ವಿರೋಧ ಎಂದು ತತ್ತ್ವಪ್ರಕಾಶಿಕಾದಲ್ಲಿ ದೋಷ ಹೇಳಲಾಗಿದೆ. ಇದು ತಾರ್ಕಿಕರ ಪ್ರಕಾರ ಸರಿ. ಆದರೆ, ಸಿದ್ಧಾಂತರೀತ್ಯಾ ಸರಿಯಲ್ಲ. ಏಕೆಂದರೆ, ಸಾಕ್ಷಿಯು ಸ್ವಪ್ರಕಾಶ ಎಂದು ಸಿದ್ಧಾಂತವಾದ್ದರಿಂದ ಜ್ಞಾನಕ್ಕೆ ಜ್ಞಾನವಿಷಯವಾಗುವುದು. ಈ ಕಾರಣದಿಂದ ಜಯತೀರ್ಥರು ಹಿಂದಿನ ದೋಷದಲ್ಲಿ ಸ್ವಲ್ಪ ಅರುಚಿಯಿಂದ ಇನ್ನೊಂದು ದೋಷ ಹೇಳುತ್ತಿದ್ದಾರೆ. 'ಅಜ್ಞಾನೇ ವ್ಯಭಿಚಾರಶ್ಚ' ಎಂಬುದಾಗಿ. ಎಲ್ಲವೂ ಜ್ಞಾನವಿಷಯವೆಂದರೆ ಅಜ್ಞಾನದಲ್ಲಿ ವ್ಯಭಿಚಾರ. ಏಕೆಂದರೆ, ಅಜ್ಞಾನವು ಜ್ಞಾನರೂಪವಲ್ಲ.ಆದರೆ ಅದರಲ್ಲಿ ಜ್ಞಾನವಿಷಯತ್ವ ಇದೆ. ಅಜ್ಞಾನ ಪದದಿಂದ ಜ್ಞಾನಾಭಾವ ಮೊದಲಾದದನ್ನು ಹಾಗೂ ಜ್ಞಾನಕ್ಕೆ ಆವರಣವಾದ ಸಂವೃತಿಯನ್ನು ಇಟ್ಟುಕೊಳ್ಳಬೇಕು. ಜ್ಞಾನಾಭಾವವೂ ಜ್ಞಾನರೂಪ ಎಂದರೆ ವಿರೋಧ.

**अधिकारिणं प्रतीति ।। प्रतिवादिना बौद्धेन श्रुत्यादिप्रामाण्यास्वीकारेऽपि शास्त्रेऽधिकृतं मुमुक्षुं प्रति तदङ्गीकृतप्रामाण्येन श्रुत्यादिना विरोध उच्यत इत्यर्थः ।**

''ಸರ್ವಥಾನುಪಪತ್ತೇಶ್ಚ'' ಎಂಬ ಸೂತ್ರಭಾಷ್ಯಟೀಕಾದಲ್ಲಿ ಬೌದ್ಧಮತವು ಸರ್ವಶ್ರುತಿ ವಿರುದ್ಧವಾಗಿದೆ ಎಂದು ಹೇಳುವಾಗ 'ಅಧಿಕಾರಿಣಂ ಪ್ರತಿ' ಎಂದು ಹೇಳಿದ್ದಾರೆ. ಏಕೆಂದರೆ, ಬೌದ್ಧಮತವು ಸರ್ವಶ್ರುತಿವಿರುದ್ಧವಾದ್ದರಿಂದ ಅಪ್ರಾಮಾಣಿಕ ಎಂದರೆ ಬೌದ್ಧರು ಶ್ರುತಿಪ್ರಾಮಾಣ್ಯವನ್ನೇ ಒಪ್ಪುವುದಿಲ್ಲ. ಹಾಗಾಗಿ ಅದನ್ನು ಆಧರಿಸಿ ಹೇಗೆ ಅಪ್ರಾಮಾಣ್ಯ ಹೇಳುತ್ತೀರಿ, ಎಂದರೆ ಹೀಗೆ ಹೇಳಿದ್ದು ಬೌದ್ಧರನ್ನು ಕುರಿತು ಅಲ್ಲ. ಶಾಸ್ತ್ರದಲ್ಲಿ ಅಧಿಕಾರಿಯಾದ ಮೋಕ್ಷವನ್ನು ಬಯಸುವ ಪುರುಷನನ್ನು ಕುರಿತು. ಅವನು ಶ್ರುತಿಗಳಿಗೆ ಪ್ರಾಮಾಣ್ಯವನ್ನು ಒಪ್ಪಿದ್ದಾನೆ. ಅಂತಹ ಶ್ರುತಿಯಿಂದ ವಿರೋಧ ಬರುತ್ತದೆ ಎಂದರ್ಥ.

**यच्चोक्तं परैः ''नाभाव उपलब्धेः'' इत्यादिसूत्रपञ्चकमेकमधिकरणं विज्ञानवादनिरासकमिति तन्न ।**

ಅದ್ವೈತಿಗಳ ಅಧಿಕರಣ ರಚನೆ ಸರಿಯಿಲ್ಲ. ಅವರು 'ನಾಭಾವ ಉಪಲಬ್ಧೇಃ' ಎಂಬುದರಿಂದ ಆರಂಭಿಸಿ ಐದು ಸೂತ್ರಗಳು ಒಂದು ಅಧಿಕರಣ ಎಂದು ಪರಿಗಣಿಸಿದ್ದಾರೆ. ಈ ಅಧಿಕರಣದಲ್ಲಿ ವಿಜ್ಞಾನವಾದವನ್ನು ನಿರಾಕರಿಸಲಾಗಿದೆ ಎಂಬುದು ಅವರ ಮತ. ಇದು ತಪ್ಪು.

**''नासत'' इत्यादिसूत्राभ्यां शून्यपरिणामे निरस्तेऽवशिष्टमवश्यनिरसनीयं शून्यविवर्तत्वमनिरस्यान्यनिरासानवसरात् ।**

"ನಾಸತೋಽದೃಷ್ಟತ್ವಾತ್' ಎಂಬುದರಿಂದ (ಎರಡು ಸೂತ್ರಗಳಿಂದ) ಜಗತ್ತು ಶೂನ್ಯದ ಪರಿಣಾಮ ಎಂಬುದನ್ನು ನಿರಾಕರಿಸಿದ ನಂತರ ಉಳಿದಿರುವ ಶೂನ್ಯದ ವಿವರ್ತ ಎಂಬ ಮತವನ್ನು ನಿರಾಕರಿಸದೇ ಇರುವುದು ಸರಿಯಲ್ಲ. ಈ ಶೂನ್ಯವಿವರ್ತ ಎಂಬ ವಾದವು ಅವಶ್ಯವಾಗಿ ನಿರಾಕರಣೆಗೆ ಯೋಗ್ಯವಾಗಿದೆ.

**किञ्चाद्यद्वितीयसूत्रे त्वयापि "किं पुनर्वैधर्म्यबाधाबाधाविति ब्रूमः" इत्यादिना जगत्सत्यत्वसाधनेन व्याख्याते इति त्वन्मतविरुद्धे ।**

ಈ ಅಧಿಕರಣದ ಮೊದಲೆರಡು ಸೂತ್ರಗಳಲ್ಲಿ ನೀನು "ಕಿಂ ಪುನರ್ವೈಧರ್ಮ್ಯಬಾಧಾಬಾಧೌ" ಎಂಬುದಾಗಿ ಜಗತ್ತಿಗೆ ಸತ್ಯತ್ವವನ್ನೇ ಸಾಧನೆ ಮಾಡಿರುವಿ. ಇದು ನಿನ್ನ ಮತಕ್ಕೆ ವಿರುದ್ಧ. ಹಾಗಾಗಿ ಸೂತ್ರವಿರೋಧ ಬಂದಂತಾಯಿತು.

**ननु योगाचारस्य नीलपीतादिर्ज्ञानाकार एव । नतु बाह्योर्थोऽस्ति । तत्र बाह्यार्थानुभवविरोधः सूत्र उक्तः । मम तु नीलपीतादिर्मिथ्याभूतो बाह्य एव । नतु ज्ञानाकार इति न सूत्रविरोध इति चेन्न ।**

ಅದ್ವೈತಿಯ ಉತ್ತರ ಹೀಗಿದೆ - ಯೋಗಾಚಾರರು (ವಿಜ್ಞಾನವಾದಿಗಳು) ನೀಲಪೀತಾದಿ ಸರ್ವವೂ ಜ್ಞಾನಾಕಾರ ಹೊರತು ಅದಕ್ಕಿಂತ ಅತಿರಿಕ್ತವಾದ ಬಾಹ್ಯವಸ್ತುವೇ ಇಲ್ಲ ಎನ್ನುತ್ತಾರೆ. ಅದಕ್ಕೆ ಸೂತ್ರಕಾರರು ಬಾಹ್ಯಪದಾರ್ಥವು ಇದೆ ಎಂಬ ಅನುಭವದ ವಿರೋಧವನ್ನು ಸೂತ್ರದಲ್ಲಿ ಹೇಳಿದ್ದಾರೆ. ನೀಲಪೀತ ಇತ್ಯಾದಿ ಬಾಹ್ಯಪದಾರ್ಥಗಳನ್ನು ಒಪ್ಪಿದ್ದೇವೆ. ಆದರೆ ಅದನ್ನು ಮಿಥ್ಯಾ ಎನ್ನುತ್ತೇನೆ. ಯೋಗಾಚಾರನಂತೆ ಎಲ್ಲವೂ ಜ್ಞಾನಾಕಾರ ಎಂದೇನೂ ಹೇಳುವುದಿಲ್ಲ. ಹಾಗಾಗಿ ನನ್ನ ಮತಕ್ಕೆ ಸೂತ್ರವಿರೋಧವಿಲ್ಲ. ಹೀಗೆ ಹೇಳುವುದು ಸರಿಯಿಲ್ಲ.

**"नाभाव उपलब्धेः" इति सूत्रे उपलम्भेन बाह्यार्थमिथ्यात्वस्यैव निषेधात् ।**

"ನಾಭಾವ ಉಪಲಬ್ಧೇಃ' ಎಂಬ ಸೂತ್ರದಲ್ಲಿ 'ಬಾಹ್ಯಪದಾರ್ಥವು ಉಪಲಬ್ಧವಾಗುತ್ತಿದೆ, ಆದ್ದರಿಂದ ಅದು ಮಿಥ್ಯಾ ಅಲ್ಲ' ಎಂದೇ ಹೇಳಲಾಗಿದೆ.

**ज्ञानाकारत्वनिषेधे हि न ज्ञानमनुपलब्धेरिति सूत्रणीयम् ।**

ಈ ಸೂತ್ರದಲ್ಲಿ ಬಾಹ್ಯವಸ್ತುಗಳು ಜ್ಞಾನಾಕಾರವಲ್ಲ ಎಂದು ನಿರಾಕರಣೆ ಮಾಡುವುದಾದರೆ ಆಗ ಸೂತ್ರದಲ್ಲಿ "ನ ಜ್ಞಾನಮನುಪಲಬ್ಧೇಃ" ಎಂದೇ ಹೇಳುತ್ತಿದ್ದರು.

**किञ्च तत्तदाकारवृत्त्या तत्तदज्ञाननिवृत्तिरिति वदतस्तव मतेऽपि ज्ञानं साकारमेव ।**

ನೀನೂ ಕೂಡ ನಿನ್ನ ಮತದಲ್ಲಿ ವೃತ್ತಿಜ್ಞಾನವು ಇಂದ್ರಿಯಗಳಿಂದ ಹೊರಬಂದು ವಸ್ತುವಿನ

ಆಕಾರದಲ್ಲಿ ಪರಿಣಾಮ ಹೊಂದುತ್ತದೆಂಬುದಾಗಿ ಸಾಕಾರವಾದ ಜ್ಞಾನವನ್ನೇ ಒಪ್ಪಿರುವಿ. ಹಾಗಾಗಿ ಸೂತ್ರನಿರಾಕರಣೆಗೆ ನಿನ್ನ ಮತವೂ ವಿಷಯವಾಗಿದೆ.

**किञ्चबाह्यार्थस्यानिर्वचनीयत्वं सूत्राभिमतं चेत्स्वप्नवैधर्म्योक्तिरयुक्ता । स्वप्नस्याप्यनिर्वचनीयत्वात् ।**

ಸೂತ್ರಕಾರರಿಗೆ ಬಾಹ್ಯಪದಾರ್ಥವು ನೀನು ಹೇಳುವ ಹಾಗೆ ಅನಿರ್ವಚನೀಯ (ಮಿಥ್ಯಾ) ಎಂದು ಅಭಿಪ್ರಾಯವಿದ್ದಿದ್ದರೆ ಆಗ ಸ್ವಪ್ನವೈಧರ್ಮ್ಯದ ದೃಷ್ಟಾಂತವು ಕೊಡುತ್ತಿರಲಿಲ್ಲ. ಸ್ವಪ್ನವೈಧರ್ಮ್ಯ ಎಂದರೆ ಸ್ವಪ್ನದಂತೆ ಅಲ್ಲ ಎಂದು. ಏಕೆಂದರೆ ಸ್ವಪ್ನವೂ ಅನಿರ್ವಚನೀಯವೇ ಆಗಿದೆ.

**व्यवहारदशायां बाधाभावमात्रेण च तद्वैधर्म्यविवक्षायां विज्ञानवादोऽप्यनिरस्तः स्यात् । तन्मतेऽपि जगतो व्यवहारदशायामबाधात् ।**

ಸ್ವಪ್ನವೈಧರ್ಮ್ಯ ದೃಷ್ಟಾಂತಕ್ಕೆ ಏನು ಅಭಿಪ್ರಾಯವೆಂದರೆ, ಜಗತ್ತು ಸ್ವಪ್ನದಂತೆ ಉತ್ತರಕ್ಷಣದಲ್ಲಿ ಬಾಧಿತವಲ್ಲ. ವ್ಯವಹಾರದಶೆಯಲ್ಲಿ ಜಗತ್ತಿಗೆ ಸ್ವಪ್ನದಂತೆ ಬಾಧವಿಲ್ಲ. ಹಾಗಾಗಿ ಸ್ವಪ್ನಕ್ಕಿಂತ ಬೇರೆಯಾಗಿದೆ ವಿರೋಧವಿಲ್ಲ. ಆಗ ವಿಜ್ಞಾನವಾದವನ್ನು ನಿರಾಕರಿಸಿದಂತಾಗುವುದಿಲ್ಲ. ಏಕೆಂದರೆ, ಬೌದ್ಧರೂ ಕೂಡ ವ್ಯವಹಾರ ಕಾಲದಲ್ಲಿ ಜಗತ್ತಿಗೆ ಬಾಧವಿಲ್ಲ ಎಂದೇ ಹೇಳುತ್ತಾರೆ.

**किञ्च विज्ञानविवर्त इति मतेऽधिष्ठानभूतज्ञानस्य मिथ्याभूतबाह्यार्थात्मना धीस्तत्वतो बाह्यार्थभावश्च द्वयोः सम एव ।**

ವಿಜ್ಞಾನವಿವರ್ತ ಮತಕ್ಕೂ ಅದ್ವೈತಮತಕ್ಕೂ ಭೇದವಿಲ್ಲ, ಏಕೆಂದರೆ ವಿಜ್ಞಾನವಿವರ್ತ ಮತದಲ್ಲಿ ಅಧಿಷ್ಠಾನಭೂತವಾದ ಜ್ಞಾನವು ಬಾಹ್ಯಪದಾರ್ಥವಾಗಿ ತೋರುತ್ತದೆ. ಅದು ಮಿಥ್ಯಾ. ಅದ್ವೈತಮತದಲ್ಲಿಯೂ ಬಾಹ್ಯಾರ್ಥವು ಮಿಥ್ಯಾ. ಹೀಗೆ ಎರಡೂ ಮತಗಳಿಗೆ ಸೂತ್ರವಿರೋಧ ಬಂದೇ ಬರುತ್ತದೆ.

**प्रकाशः –**

टीकाक्षरार्थान् व्यनक्ति ।। **नन्वित्यादिना** ।। यच्चोक्तं परैरिति ।। **कैश्चित्तु** सूत्रत्रयं तथेत्युक्तमिति योज्यम् ।। **विज्ञानवादेति** ।। एतच्च यथाश्रुतभाष्यदिशा । भामतीरीत्या तु शून्यवादनिरासकमपीति बोध्यम् । तत्राद्यसूत्रस्य ज्ञानव्यतिरेकेण बाह्यार्थस्याभावो न । कुतः । उपलब्धेः उपलभ्यमानत्वादिति मतद्वयेऽप्यर्थः ।

ಟೀಕಾದಲ್ಲಿರುವ ಪದಗಳಿಗೆ ಅರ್ಥ ಬರೆಯುತ್ತಿದ್ದಾರೆ. 'ನನು' ಎಂಬುದರಿಂದ. 'ಯಚ್ಚೋಕ್ತಂ' ಎಂಬುದರಿಂದ ಅದ್ವೈತಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ರಾಮಾನುಜರು ಮೂರು ಸೂತ್ರಗಳು ಸೇರಿ ಒಂದು ಅಧಿಕರಣ ಎಂದು ಹೇಳುತ್ತಾರೆ ಎಂದು ತಿಳಿಯಬೇಕು. ಚಂದ್ರಿಕಾದಲ್ಲಿ ಹೇಳಿರುವಂತೆ ಐದು ಸೂತ್ರಗಳು ಸೇರಿ ಒಂದೇ ಅಧಿಕರಣವಾಗಿದೆ. ಇದು ವಿಜ್ಞಾನವಾದನಿರಾಸಕ್ಕಾಗಿ ಹೊರಟಿದೆಯೆಂಬುದು

ಶಾಂಕರಭಾಷ್ಯದ ಅಭಿಪ್ರಾಯ. ಭಾಮತೀಕಾರರ ಪ್ರಕಾರ ಶೂನ್ಯವಾದವನ್ನೂ ಈ ಅಧಿಕರಣ ನಿರಾಕರಿಸಿದೆ ಎಂದು ತಿಳಿಯಬೇಕು. 'ನಾಭಾವ ಉಪಲಬ್ಧೇಃ' ಎಂಬ ಮೊದಲನೇ ಸೂತ್ರಕ್ಕೆ ಹೀಗರ್ಥ - ಜ್ಞಾನ ಹೊರತಾಗಿ ಬಾಹ್ಯವಸ್ತುಗಳು ಇಲ್ಲ ಎಂಬುದು ತಪ್ಪು ಏಕೆಂದರೆ 'ಉಪಲಬ್ಧೇಃ' ಬಾಹ್ಯವಸ್ತುಗಳು ಪ್ರಾಪ್ತವಾಗುತ್ತಿರುವುದರಿಂದ ಎಂದು. ಹೀಗೆ ಶಾಂಕರ ರಾಮಾನುಜ ಇಬ್ಬರೂ ಅರ್ಥ ಹೇಳಿದ್ದಾರೆ.

**प्रकाशः** – स्वप्नदृष्टान्तेन जागरितज्ञानानां यन्निरालंबनत्वमुक्तं तन्निरसितुं ''वैधर्म्याच्च न स्वप्नादिवत्'' इति द्वितीयं सूत्रम् । बाधभावात्स्वप्नादिज्ञानानां जाग्रद्दशोत्पन्नज्ञानानां तदभावेन स्वप्नादिवैधर्म्यान्न तद्वन्निरालंबनत्वमित्युभाभ्यां तस्यार्थ उक्तः । बाह्यार्थाभावेऽपि वासनावैचित्र्यान्न ज्ञानवैचित्र्यमित्येतन्निरसितुं ''न भावोऽनुपलब्धेः'' इति सूत्रम् ।

ಸ್ವಪ್ನದ ದೃಷ್ಟಾಂತದಿಂದ ಜಾಗ್ರದವಸ್ಥೆಯಲ್ಲಿನ ಜ್ಞಾನವು ನಿರಾಧಾರ ಎಂಬುದನ್ನು ನಿರಾಕರಿಸಲು ''ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್'' ಎಂಬ ಎರಡನೇ ಸೂತ್ರ ಹೊರಟಿದೆ. ಸ್ವಪ್ನದಲ್ಲಿ ಬರುವ ಜ್ಞಾನಕ್ಕೆ ಬಾಧವಿದೆ. ಆದರೆ ಜಾಗ್ರದವಸ್ಥೆಯಲ್ಲಿ ಬರುವ ಜ್ಞಾನಕ್ಕೆ ಬಾಧವಿಲ್ಲ ಹಾಗಾಗಿ ಇದು ಸ್ವಪ್ನಕ್ಕಿಂತ ಭಿನ್ನವಾಗಿದೆ. ಆದ್ದರಿಂದ ಜಾಗ್ರದವಸ್ಥೆಯಲ್ಲಿನ ಜ್ಞಾನವು ನಿರಾಧಾರ ಅಲ್ಲ ಎಂಬುದು ಈ ಸೂತ್ರಕ್ಕೆ ಅರ್ಥವೆಂದು ಶಂಕರ, ರಾಮಾನುಜರಿಬ್ಬರೂ ಹೇಳಿದ್ದಾರೆ. ಮೂರನೇ ಸೂತ್ರಕ್ಕೆ 'ನ ಭಾವೋಽನುಪಲಬ್ಧೇಃ' ಎನ್ನುವುದಕ್ಕೆ ಹೀಗೆ ಅರ್ಥ - ಬೌದ್ಧರು ಬಾಹ್ಯಾರ್ಥವನ್ನು ಒಪ್ಪದಿದ್ದರೆ ಆಗ ವಸ್ತು ವೈಚಿತ್ರ್ಯವನ್ನು ಹೇಗೆ ಕೂಡಿಸುತ್ತೀರಿ? ಎಂದು ಪ್ರಶ್ನಿಸಿದರೆ ಆಗ ಅವರು ವಾಸನಾಗಳಲ್ಲಿ ವೈಚಿತ್ರ್ಯ ಇದೆಯಾದ್ದರಿಂದ ಜ್ಞಾನದಲ್ಲಿಯೂ ವೈಚಿತ್ರ್ಯ ಬರುತ್ತದೆ. ಹಾಗಾಗಿ ಒಂದೊಂದು ವಸ್ತುವೂ (ಜ್ಞಾನರೂಪ ಆದರೂ ಎಲ್ಲವೂ) ಒಂದೊಂದು ರೀತಿ ತೋರುತ್ತದೆ ಎಂದು ಉತ್ತರ ಹೇಳಿದ್ದಾರೆ ಅದನ್ನು ಈ ಸೂತ್ರ ನಿರಾಕರಿಸುತ್ತಿದೆ.

**प्रकाशः** – कदाचिदप्यर्थोपलब्ध्यभावान्न वासनानां भावस्सत्ता सम्भवतीति तस्यार्थः परमते । मतान्तरे तु केवलस्यार्थशून्यस्य न भावः सत्ता सम्भवतीति । अकर्मकाकर्तृकज्ञानस्यानुपलब्धेरिति ज्ञानस्य निरालम्बनत्वनिरासार्थमिदमिति । वासनानामाश्रयं निरसितुं सूत्रं ''क्षणिकत्वाच्च'' इति ।

'ವಾಸನಾ' ಎಂಬ ಪದಾರ್ಥವು ಯಾವ ಕಾಲದಲ್ಲಿಯೂ ಉಪಲಬ್ಧವಾಗುತ್ತಿಲ್ಲವಾದ್ದರಿಂದ ಅದು ಇದೆ ಎಂಬುದೇ ಸರಿಯಲ್ಲ ಎಂದು ಅದ್ವೈತಿಗಳ ವ್ಯಾಖ್ಯಾನ. ರಾಮಾನುಜರ ಪ್ರಕಾರ, ಜ್ಞಾನವು ಅರ್ಥಶೂನ್ಯವಾಗಿ ಇರುವುದು ಸಾಧ್ಯವಿಲ್ಲ. ಜ್ಞಾನವು ಕರ್ತೃ ಕರ್ಮರಹಿತವಾಗಿದೆ ಎಂಬುದು ಅಸಾಧ್ಯ. ಆ ರೀತಿಯಾದ ಜ್ಞಾನವು ಯಾರಿಗೂ ಅನುಭವಕ್ಕೆ ಬಂದಿಲ್ಲ. ಹಾಗಾಗಿ ಜ್ಞಾನವು ನಿರಾಧಾರ ಎಂಬುದನ್ನು ಈ ಸೂತ್ರ ನಿರಾಕರಿಸುತ್ತಿದೆ. ಬೌದ್ಧರು ಹೇಳುವ 'ವಾಸನಾ' ಎಂಬುದಕ್ಕೆ ಆಶ್ರಯವೇ ಇಲ್ಲ ಎಂದು ನಿರಾಕರಣೆ ಮಾಡಲು ಮುಂದಿನ ಸೂತ್ರ ''ಕ್ಷಣಿಕತ್ವಾಚ್ಚ'' ಎಂಬುದಾಗಿ.

**प्रकाशः** – ज्ञानादन्यस्य तन्मतेऽभावाज्ज्ञानस्य च क्षणिकत्वान्न वासनाश्रयत्वमिति परमतेऽर्थः । मतान्तरे तु ''क्षणिकत्वाच्च'' इति सूत्रं नास्त्येव।

ಅನುಪಲಬ್ಧ್ಯಧಿಕರಣ (2-2-9)

**बाह्यार्थवादविज्ञानवादशून्यवादरूपवादत्रयस्याप्यसंबद्धप्रलापत्वेन सर्वथानुपपत्तेश्चेति पञ्चमार्थः परमते ।**

ಜ್ಞಾನದ ಹೊರತಾಗಿ ಬೌದ್ಧರ ಪ್ರಕಾರ ಯಾವುದೂ ಇಲ್ಲ. ಈ ಜ್ಞಾನವು ಕ್ಷಣಿಕ ಹಾಗಾಗಿ ವಾಸನಾಗೆ ಆಶ್ರಯವೇ ಇಲ್ಲ. ಹಾಗಾಗಿ ಅದು ಇರಲು ಸಾಧ್ಯವಿಲ್ಲ. ಇದು ಅದ್ವೈತಿಗಳ ಅರ್ಥ. ರಾಮಾನುಜರು "ಕ್ಷಣಿಕತ್ವಾಚ್ಚ" ಎಂಬ ಸೂತ್ರವನ್ನೇ ಒಪ್ಪಿಲ್ಲ. ಐದನೇ ಸೂತ್ರಕ್ಕೆ ಹೀಗೆ ಅರ್ಥ ಅದ್ವೈತರೀತ್ಯಾ. ಬಾಹ್ಯಾರ್ಥವಾದ ವಿಜ್ಞಾನವಾದ ಶೂನ್ಯವಾದ ಈ ಮೂರು ವಾದಗಳೂ ಕೂಡ ಅಸಂಬದ್ಧವಾಗಿ ಇವೆ. ಆದ್ದರಿಂದ ಯಾವ ರೀತಿಯಿಂದಲೂ ಸರಿಯಲ್ಲ ಎಂದು.

**प्रकाशः** – मतान्तरे त्वग्रे व्यक्तम् । स्वमतावष्टंभेन मतद्वयेऽपि दोषमाह – **नासत इति** ।। पररीत्या दोषमाह – **किञ्चेति** ।। **इत्यादिनेति** ।। त्वदीयभाष्येणेत्यर्थः।। **तत्तदाकारेति** ।। तटाकोदकं छिद्रान्निर्गत्य कुल्याद्वारा केदारान् प्रविश्य चतुष्कोणाद्याकारमिवान्तःकरणं गोलकान्निर्गत्य रश्मिद्वारा घटादीन् सम्बध्य तत्तदाकारं जायत इति प्रक्रिययेति भावः ।

ರಾಮಾನುಜ ರೀತ್ಯಾ ಈ ಸೂತ್ರಕ್ಕೆ ಏನು ಅರ್ಥ ಎಂಬುದು ಮುಂದೆ ಸ್ಪಷ್ಟವಾಗುತ್ತದೆ. ತಮ್ಮ ಮತವನ್ನು ಅವಲಂಬಿಸಿ ಉಳಿದೆರಡು ಮತಗಳನ್ನೂ ನಿರಾಕರಿಸುತ್ತಿದ್ದಾರೆ 'ನಾಸತ' ಎಂಬುದಾಗಿ. ಮಾಯಾವಾದಿಗಳ ಪ್ರಕಾರ ದೋಷ ಹೇಳುತ್ತಿದ್ದಾರೆ 'ಕಿಂಚ' ಎಂಬುದಾಗಿ. 'ಇತ್ಯಾದಿನಾ' ಎಂದರೆ ನಿನ್ನ ಭಾಷ್ಯದಿಂದ ಎಂದರ್ಥ. ಮಾಯಾವಾದಿಗಳು ಹೀಗೆ ಜ್ಞಾನದ ಪ್ರಕ್ರಿಯೆಯನ್ನು ಒಪ್ಪಿದ್ದಾರೆ - ಹೇಗೆ ಕೆರೆಯ ನೀರು ರಂಧ್ರದಿಂದ ಹೊರಬಂದು ಕಾಲುವೆಯ ಮುಖಾಂತರ ಗದ್ದೆಯನ್ನು ಪ್ರವೇಶಿಸಿ ಚತುಷ್ಕೋಣಾದಿ ಆಕಾರವನ್ನು ಪಡೆಯುತ್ತದೆಯೋ ಹಾಗೇ ಅಂತಃಕರಣವು ಕಣ್ಣಿನ ಮುಖಾಂತರ ಹೊರಗೆ ಬಂದು ರಶ್ಮಿಗಳ ಮುಖಾಂತರ ಘಟಾದಿಪದಾರ್ಥಗಳನ್ನು ತಲುಪಿ ಆಯಾ ಆಕಾರಗಳನ್ನು ಹೊಂದುತ್ತದೆ ಎಂದು.

## ಮಾಯಾವಾದಿಗಳು ಪ್ರಚ್ಛನ್ನಬೌದ್ಧರು

### तात्पर्यचन्द्रिका

**ननु तस्यार्थोऽत्यन्तासन् । मम तु सदसद्विलक्षण इति चेन्न । तथापि स्वप्नवैधर्म्योक्तययोगात् । सत्त्वानुभवविरोधस्योभयत्र साम्यात् । सत्त्वाभावादन्यस्यासत्त्वस्याभावाच्च ।**

ಪ್ರಶ್ನೆ- ವಿಜ್ಞಾನವಾದಿಗೂ ನಿನಗೂ (ಮಾಯಾವಾದಿಗೂ) ಭೇದವಿಲ್ಲ ಎಂದಿದ್ದು ಸರಿಯಲ್ಲ. ವಿಜ್ಞಾನವಾದಿಯು ಪ್ರಪಂಚವನ್ನು ಅತ್ಯಂತ ಅಸತ್ ಎನ್ನುತ್ತಾನೆ. ಆದರೆ ನಾನು ಸದಸದ್‌ವಿಲಕ್ಷಣ ಎನ್ನುತ್ತೇನೆ.

ಉತ್ತರ - ಹಾಗಿದ್ದರೂ ಕೂಡ ಸ್ವಪ್ನಕ್ಕಿಂತ ವಿಲಕ್ಷಣ ಎಂದು ಹೇಳಿದ್ದು ತಪ್ಪಾಗುತ್ತದೆ. ಏಕೆಂದರೆ ನಿನ್ನ ಪ್ರಕಾರ ಬಾಹ್ಯಾರ್ಥದಂತೆ ಸ್ವಪ್ನವೂ ಅನಿರ್ವಚನೀಯ.

ಮತ್ತು ಜಗತ್ತು ಸತ್ ಎಂದು ಅನುಭವ ಬರುತ್ತಿದೆ. ಅದರ ವಿರೋಧ ಇಬ್ಬರಿಗೂ ಸಮಾನವಾಗಿ ಬರುತ್ತದೆ. ನೀನು ಸದ್ವಿಲಕ್ಷಣ ಎಂದಿದ್ದರಿಂದಲೇ ಅಸತ್ ಎಂದು ಒಪ್ಪಿದ ಹಾಗಾಯಿತು. ಏಕೆಂದರೆ, ಸತ್ತ್ವಾಭಾವಕ್ಕಿಂತ ಬೇರೆಯಾದ ಅಸತ್ತ್ವ ಎಂಬುದೇ ಇಲ್ಲ.

**अपरोक्षधीविषयत्वार्थक्रियाकारित्वादिरूपस्य सांवृतिकसत्त्वरूपस्य चासद्वैलक्षण्यस्य परमतेऽपि भावात् ।**

ಅದ್ವೈತಿಯ ಪ್ರಶ್ನೆ- ನಾನು ಪ್ರಪಂಚಕ್ಕೆ ಅಸದ್ವೈಲಕ್ಷಣ್ಯವನ್ನೇ ಒಪ್ಪಿದ್ದೇನೆ. ಹಾಗಾಗಿ ಬೌದ್ಧನಿಗೂ ನನಗೂ ಐಕ್ಯ ಬರುವುದಿಲ್ಲವೆಂದರೆ, ಅಸದ್ವೈಲಕ್ಷಣ್ಯ ಹೇಗೆ ? ಎಂದೇ ಕೇಳಬೇಕು ಆಗ, ಜಗತ್ತು ಅಪರೋಕ್ಷಜ್ಞಾನಕ್ಕೆ ವಿಷಯವಾಗಿದೆ ಹಾಗೂ ಜಗತ್ತಿಗೆ ಅರ್ಥಕ್ರಿಯಾಕಾರಿತ್ವ ಇದೆ. ಈ ರೀತಿಯಾದ ಅಸದ್ವೈಲಕ್ಷಣ್ಯವನ್ನು ಬೌದ್ಧರೂ ಕೂಡ ತಾವು ಹೇಳುವ ಸಾಂವೃತಿಕಸತ್ತ್ವಕ್ಕೆ ಒಪ್ಪಿದ್ದಾರೆ ಎಂದು ಉತ್ತರ.

**परमार्थसत्त्वादिरूपस्य च तस्य त्वन्मतेऽप्यभावात् ।**

ಜಗತ್ತು ಪರಮಾರ್ಥಸತ್ ಆಗಿದೆ ಇದನ್ನು ನಿನ್ನ ಮತದಲ್ಲೂ ಅಂಗೀರಿಸಿರುವುದಿಲ್ಲ.

**यच्चोक्तं न भावो वासनानां युक्तः । विज्ञानवादे बाह्यार्थानामसत्त्वेनानुपलब्धेः । उपलब्धेषु हि वासनेति तृतीयार्थ इति ।**

ಮಾಯಾವಾದಿಗಳ ಪ್ರಕಾರ ಮೂರನೇ ಸೂತ್ರವಾದ 'ನ ಭಾವೋऽನುಪಲಬ್ಧೇಃ' ಎಂಬ ಸೂತ್ರಕ್ಕೆ ಹೀಗೆ ಅರ್ಥ - ವಾಸನಾಗಳಿಗೆ ಎಂಬುದು ಕೂಡುವುದಿಲ್ಲ. ಏಕೆಂದರೆ, ಬಾಹ್ಯ ಪದಾರ್ಥಗಳೆಲ್ಲವೂ ಅಸತ್ ಆಗಿವೆ. ಆದ್ದರಿಂದ ಉಪಲಬ್ಧವೇ (ಗೋಚರ) ಆಗುವುದಿಲ್ಲ. ಉಪಲಬ್ಧವಾದ ವಸ್ತುಗಳಲ್ಲಿ ಮಾತ್ರ ವಾಸನಾ ಎಂಬುದು ಕೂಡುತ್ತದೆ ಎಂದು.

**तत्र हेतुसाध्ययोर्वैयधिकरण्यम् । वासनानामित्यध्याहारश्च । असत्त्वेनानुपलब्धिं वदता लाघवेन सत्त्वमेवोपलब्धौ तन्त्रमिति वक्तव्यतयाऽनिर्वाच्यपक्षेऽपि दोषसाम्यं च ।**

ಹೀಗೆ ಅರ್ಥ ಹೇಳಿದರೆ ಹೇತು ಸಾಧ್ಯಗಳಿಗೆ ವೈಯಧಿಕರಣ್ಯ ಬರುತ್ತದೆ. 'ವಾಸನಾನಾಂ' ಎಂಬ ಪದವನ್ನು ಅಧ್ಯಾಹಾರ ಕೂಡ ಮಾಡಿಕೊಳ್ಳಬೇಕು. ಸೂತ್ರಕಾರರು ಅಸತ್ ಆದ್ದರಿಂದ ಉಪಲಬ್ಧ-ವಾಗುವುದಿಲ್ಲ ಎಂದು ಹೇಳಿದಾಗ ಸತ್ತ್ವವೇ ಉಪಲಬ್ಧಿಯಲ್ಲಿ ತಂತ್ರ (ಸಾಧನ) ಎಂಬುದು ತಿಳಿಯುತ್ತದೆ. ಹೀಗಿರುವಾಗ ನೀನು ಅನಿರ್ವಚನೀಯ ಎಂದು ಹೇಳಿ ಉಪಲಬ್ಧಿಯನ್ನು ಕೂಡಿಸುವುದು ಸರಿಯಲ್ಲ. ನಿನಗೂ ಅದೇ ದೋಷ ಬರುತ್ತದೆ.

**मम तु जगन्न भावः न ज्ञानं तथाऽनुपलब्धेरिति सामानाधिकरण्यम् । पूर्वसूत्रप्रकृतजगत एवानुषङ्गादनध्याहारश्च ।**

ನನ್ನ ಮತದಲ್ಲಿ ಜಗತ್ತು ಜ್ಞಾನರೂಪ ಅಲ್ಲ. ಹಾಗೆ ಉಪಲಬ್ಧವಾಗುತ್ತಿಲ್ಲವಾದ್ದರಿಂದ ಹೇತು ಸಾಧ್ಯಗಳಿಗೆ ಸಾಮಾನಾಧಿಕರಣ್ಯ ಬರುತ್ತದೆ. ಹಾಗೆಯೇ ಹಿಂದಿನ ಸೂತ್ರದಲ್ಲಿ ಪ್ರಕೃತವಾದ ಜಗತ್

ಎಂಬ ಪದವನ್ನೇ ಇಲ್ಲಿಯೂ ಇಟ್ಟುಕೊಂಡಿರುವುದರಿಂದ ಅಧ್ಯಾಹಾರ ಎಂಬ ದೋಷವೂ ಇಲ್ಲ.

**(समानार्थौ ''ऋदोरप्'' इत्यप्प्रत्ययान्तो भवशब्दो भावार्थघञ्प्रत्ययान्तो भावशब्दश्च । उपसर्गो धातुगतशक्तिद्योतक एवेति भावेन सूत्रेऽन्वित्युपसर्गस्याप्रयोगः)**

''ಋದೋರಪ್'' ಎಂಬ ಸೂತ್ರದಿಂದ 'ಭೂ' ಧಾತುವಿನ ಮೇಲೆ 'ಅಪ್' ಪ್ರತ್ಯಯ ಹಚ್ಚಿದರೆ ಆಗುವ 'ಭವ' ಶಬ್ದಕ್ಕೂ ಭಾವಾರ್ಥದಲ್ಲಿ 'ಘಞ್' ಪ್ರತ್ಯಯ ಬಂದರೆ 'ಭಾವ' ಶಬ್ದಕ್ಕೂ ಒಂದೇ ಅರ್ಥ. ಭಾವ ಶಬ್ದವು ಅನುಭವ ಎಂದರ್ಥದಲ್ಲಿ ಪ್ರಯುಕ್ತವಾಗಿದೆ. ಹಾಗಾಗಿ ಸೂತ್ರದಲ್ಲಿ 'ಅನು' ಎಂಬ ಉಪಸರ್ಗ ಪ್ರಯೋಗ ಇರಬೇಕಾಗಿತ್ತು ಎಂದರೆ, ಉಪಸರ್ಗವು ಧಾತುವಿನ ಅರ್ಥವನ್ನೇ ಪ್ರಕಟಪಡಿಸುತ್ತದೆ ಎಂಬ ಪಕ್ಷವನ್ನು ಆಶ್ರಯಿಸಿ ಉಪಸರ್ಗದ ಪ್ರಯೋಗವನ್ನು ಮಾಡಿಲ್ಲ ಎಂದು ತಿಳಿಯಬೇಕು.

**यच्चोक्तं नालयज्ञानं संस्काराश्रयः । क्षणिकत्वादिति चतुर्थार्थ इति तन्न । मम रीत्येह विज्ञानवाद्यसाधारणस्यार्थो ज्ञानाकार इत्यस्य दूषणसम्भवे क्षणिकत्वप्रयुक्तस ंस्काराभावस्य बौद्धमतसाधारणस्योक्तययोगात् ।**

ಅದ್ವೈತಿಯು 'ಕ್ಷಣಿಕತ್ವಾಚ್ಚ' ಎಂಬ ನಾಲ್ಕನೇ ಸೂತ್ರಕ್ಕೆ ಅರ್ಥ ಹೇಳಿದಾಗ, ಆಲಯಜ್ಞಾನವು ಸಂಸ್ಕಾರಕ್ಕೆ ಆಶ್ರಯವಾಗಲು ಸಾಧ್ಯವಿಲ್ಲ ಕ್ಷಣಿಕವಾದ್ದರಿಂದ ಎಂದು ಹೇಳಿದ್ದಾನೆ. ಅದು ಸರಿಯಲ್ಲ. ನಮ್ಮ ಪ್ರಕಾರ ಈ ಸೂತ್ರದಲ್ಲಿ ವಿಜ್ಞಾನವಾದಿಗಳಿಗೆ ಮಾತ್ರ ಸಲ್ಲುವ, ಜಗತ್ತು ಜ್ಞಾನಾಕಾರ ಎಂದರೆ ಅದು ಸರಿಯಲ್ಲ ಜ್ಞಾನವು ಕ್ಷಣಿಕವಾಗಿದೆ ಆದರೆ ಜಗತ್ತು ಸ್ಥಾಯಿ ಎಂದು ಅನುಭವ ಬರುತ್ತಿದೆ ಎಂದು ದೂಷಣ ಹೇಳಲಾಗಿದೆ. ಆದರೆ ನೀನು ಎಲ್ಲಾ ಬೌದ್ಧರಿಗೂ ಸಮಾನವಾದ ಸಂಸ್ಕಾರಾಭಾವ ಎಂಬ ದೋಷವನ್ನು ಹೇಳುತ್ತಿರುವೆ, ಅದು ಸರಿಯಲ್ಲ.

**केचित्तु पञ्चमं शून्यवादिनिरासकमित्याहुः । तन्न । नासत इत्यत्रैव शून्यवाद्यु क्तासत्कारणत्वनिरासप्रतीतेः । इह च शब्दास्वारस्याच्च।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अनुपलब्ध्यधिकरणं सम्पूर्णम् ।।९।।**

ರಾಮಾನುಜರು ಐದನೇ ಸೂತ್ರವು ಶೂನ್ಯವಾದವನ್ನು ನಿರಾಕರಿಸುತ್ತಿದೆ ಎಂದು ಹೇಳುತ್ತಾರೆ. ಅದು ತಪ್ಪು. 'ನಾಸತೋಽದೃಷ್ಟತ್ವಾತ್' ಎಂಬ ಸೂತ್ರದಲ್ಲಿಯೇ ಅಸತ್ತಿಗೆ ಕಾರಣತ್ವ ಕೊಡುವುದಿಲ್ಲ ಎಂದು ಹೇಳುವುದರ ಮುಖಾಂತರ ಶೂನ್ಯವಾದ ನಿರಾಕರಣೆ ಮಾಡಿಯಾಗಿದೆ. ಹಾಗೆಯೇ ಇಲ್ಲಿ ಆ ರೀತಿ ಅರ್ಥ ಹೇಳಿದರೆ ಶಬ್ದಸ್ವಾರಸ್ಯವೂ ಹೊಂದುವುದಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅನುಪಲಬ್ಧ್ಯಧಿಕರಣವು ಸಂಪೂರ್ಣವಾಯಿತು
ಪರಿಪೂರ್ಣಚಂದ್ರಿಕಾ

**प्रकाशः –**

विज्ञानवादनिरासस्त्वन्मतप्रतिकूल इत्याह – **किञ्च विज्ञानविवर्त इतीति** ।। द्वयोः विज्ञानवादिमायावादिनोः ।। **स्वप्नेति** ।। तस्यापि सदसद्विलक्षणत्वादिति भावः। उभयत्र असत्त्ववादे सदसद्वैलक्षण्यवादे चेत्यर्थः ।

ವಿಜ್ಞಾನವಾದದ ನಿರಾಕರಣೆಯು ನಿನಗೆ ಪ್ರತಿಕೂಲವೇ ಆಗಿದೆ ಎಂದು ಹೇಳುತ್ತಿದ್ದಾರೆ 'ಕಿಂಚ' ಎಂಬುದಾಗಿ. 'ದ್ವಯೋಃ' ಎಂಬ ಪದಕ್ಕೆ ವಿಜ್ಞಾನವಾದಿ ಹಾಗೂ ಮಾಯಾವಾದಿಗಳಿಗೆ ಎಂದರ್ಥ.

ಸ್ವಪ್ನವನ್ನೂ ನೀನು ಸದಸದ್‌ವಿಲಕ್ಷಣ ಎಂದು ಹೇಳುವುದರಿಂದ ಎಂದರ್ಥ (ಸ್ವಪ್ನವೈಲಕ್ಷಣ್ಯ ಹೇಳಿದ್ದು ತಪ್ಪು ಎಂದು ಅಭಿಪ್ರಾಯ)

'ಉಭಯತ್ರ' ಎಂದರೆ ಅಸತ್ವವಾದದಲ್ಲಿ ಹಾಗೂ ಸದಸದ್‌ವೈಲಕ್ಷಣ್ಯವಾದದಲ್ಲಿ ಎಂದರ್ಥ.

**प्रकाशः – सद्वैलक्षण्योक्त्यैव त्वयाप्यसत्त्वमङ्गीकार्यमेवेत्याशयेनाह – सत्त्वेति**।। तथा च न विज्ञानवादवैलक्षण्यमिति भावः ।

ನೀನೂ ಕೂಡ ಜಗತ್ತಿಗೆ ಸದ್‌ವೈಲಕ್ಷಣ್ಯವನ್ನು ಹೇಳುವುದರಿಂದ ಅಸತ್ವವನ್ನೇ ಒಪ್ಪಿದಂತಾಯಿತು ಎಂಬ ಅಭಿಪ್ರಾಯದಿಂದ ಹೇಳುತ್ತಿದ್ದಾರೆ 'ಸತ್ವ' ಎಂಬುದಾಗಿ. ಹಾಗಾಗಿ ವಿಜ್ಞಾನವಾದಕ್ಕೂ ನಿನ್ನ ಮತಕ್ಕೂ ಯಾವುದೇ ಭೇದವಿಲ್ಲ ಎಂದು ಅಭಿಪ್ರಾಯ.

**प्रकाशः – असद्वैलक्षण्याङ्गीकारांशेन तद्वैलक्षण्यं ममेत्यत आह – अपरोक्षेति ।**

ಹಾಗಲ್ಲ. ನಾನು ಜಗತ್ತಿಗೆ ಅಸದ್‌ವೈಲಕ್ಷಣ್ಯವನ್ನೂ ಹೇಳುವುದರಿಂದ ಆ ಅಂಶದಲ್ಲಿ ನನಗೂ ವಿಜ್ಞಾನವಾದಿಗೂ ಭೇದವಿದೆ ಎಂದರೆ ಅದಕ್ಕೆ ಉತ್ತರವಾಗಿ ಹೇಳುತ್ತಿದ್ದಾರೆ 'ಅಪರೋಕ್ಷ' ಎಂಬುದಾಗಿ.

**प्रकाशः – सांवृतिकेति** ।। **आविद्यकेत्यनर्थान्तरम्** ।। **तस्येति** ।। **असद्वैलक्षण्यस्येत्यर्थः** ।। **वैयधिकरण्यमिति** ।। **अर्थानामनुपलभ्यमानत्वाद्वासनानां भावो नास्तीत्युक्ते** हेतोः पक्षधर्मताभाव इत्यर्थः ।

ಸಾಂವೃತಿಕ ಎಂದರೆ ಆವಿದ್ಯಕ (ಅವಿದ್ಯಾಕಲ್ಪಿತ) ಎಂದರ್ಥ. ಎರಡು ಶಬ್ದಗಳೂ ಪರ್ಯಾಯ ಶಬ್ದಗಳು. 'ತಸ್ಯ' ಎಂದರೆ ಅಸದ್‌ವೈಲಕ್ಷಣ್ಯಕ್ಕೆ ಎಂದರ್ಥ. ವಾಸನಾಗಳಿಗೆ ಸತ್ವವು ಕೂಡುವುದಿಲ್ಲ, ವಸ್ತುಗಳು ಯಾವುದೂ ಉಪಲಭ್ಯವಾಗುತ್ತಿಲ್ಲವಾದ್ದರಿಂದ ಎಂದು ಅನುಮಾನ ಪ್ರಯೋಗ ಮಾಡಿದರೆ ಆಗ ಹೇತುವಾದ ಅರ್ಥಾನಾಂ ಅನುಪಲಭ್ಯಮಾನತ್ವ ಎಂಬುದು ಪಕ್ಷವಾದ ವಾಸನಾಗಳಲ್ಲಿ ಇಲ್ಲ. ಹಾಗಾಗಿ ಪಕ್ಷಧರ್ಮತಾ ಇಲ್ಲ ಎಂದರ್ಥ.

**प्रकाशः – न** सम्भवन्ति वासनाः । उपलब्धिरूपकारणशून्यत्वादित्युक्तिस्तु न सूत्रारूढेति भावः ।।

ವಾಸನಾಗಳೂ ಕೂಡುವುದಿಲ್ಲ - ಏಕೆಂದರೆ 'ಉಪಲಬ್ಧಿ ಎಂಬ ಕಾರಣ ಅವುಗಳಲ್ಲಿ ಇಲ್ಲವಾದ್ದರಿಂದ' ಎಂದರೆ ಆಗ ಈ ರೀತಿ ಅರ್ಥ ಹೇಳುವುದು ಸೂತ್ರಕ್ಕೆ ಅನುಗುಣವಾಗುವುದಿಲ್ಲ.

ಅನುಪಲಬ್ಧ್ಯಧಿಕರಣ (2-2-9)

**प्रकाशः – अध्याहारश्चेति ।। केषाञ्चिन्मतेऽप्यनेकाध्याहारदोषस्समः ।। असत्त्वेनेति ।।**

ಮಾಯಾವಾದಿಗಳ ಮತದಲ್ಲಿ ಹೇಗೆ ಅಧ್ಯಾಹಾರ ಎಂಬ ದೋಷ ಇದೆಯೋ ಹಾಗೆಯೇ ರಾಮಾನುಜ ಮತದಲ್ಲೂ ಅನೇಕಾಧ್ಯಾಹಾರ ಎಂಬ ದೋಷ ಇದ್ದೇ ಇದೆ.

**प्रकाशः** – अनुपलब्धेरिति सौत्रपदस्यार्थानामसत्त्वेन हेतुनाऽनुपलम्भादित्यर्थ उक्तः । तथा चानुपलब्धावसत्त्वं कारणतयोपन्यस्तमित्यर्थानामसत्त्वेन हेतुनाऽनुपलब्धिं वदता त्वया सत्त्वमेवार्थानामुपलब्धौ तन्त्रमिति वक्तव्यम् । लाघवात् । न त्वसत्त्वाभावः । गौरवात् । तथा च जगतः सदसद्वैलक्षण्यरूपा-निर्वाच्यत्वपक्षे उपलब्धिप्रयोजकस्य सत्त्वस्याभावेन जगदुपलब्ध्यभावस्स्यात् । तदभावाच्च बाह्यपदार्थवासनानामभावस्स्यादिति तन्मतोक्तदोषसाम्यमित्यर्थः ।। **नालयेति** ।। आलयज्ञानमिति पदच्छेदः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे अनुपलब्ध्यधिकरणं सम्पूर्णम् ।।९।।**

'ಅನುಪಲಬ್ಧೇಃ' ಎಂಬ ಸೂತ್ರದಲ್ಲಿರುವ ಪದಕ್ಕೆ ಪದಾರ್ಥಗಳೆಲ್ಲವೂ ಅಸತ್ ಆದ್ದರಿಂದ ಯಾವುದೂ ದೊರೆಯುವುದಿಲ್ಲ ಎಂಬುದಾಗಿ ಹೇಳಿದ್ದೀರಿ. ಹಾಗಾಗಿ ಅನುಪಲಬ್ಧಿಗೆ ಅಸತ್ವವು ಕಾರಣವಾಗಿದೆ ಎಂದು ಹೇಳಿದಂತಾಯಿತು. ಹೀಗೆ ಪದಾರ್ಥಗಳು ದೊರೆಯದೇ ಇರುವುದಕ್ಕೆ ಅಸತ್ವವನ್ನು ಕಾರಣವನ್ನಾಗಿ ಹೇಳುವ ನೀನು ಅರ್ಥ(ಪದಾರ್ಥ)ಗಳು ದೊರೆಯುವುದಕ್ಕೆ ಸತ್ವವೇ ಕಾರಣ ಎಂದು ಒಪ್ಪಿದಂತಾಯಿತು. ಹೀಗೆ ಹೇಳಿದರೆ ಆಗ ಲಾಘವ ಎಂಬ ಪ್ರಯೋಜನವಿದೆ.

ಅದನ್ನು ಬಿಟ್ಟು ಪದಾರ್ಥಗಳ ಉಪಲಬ್ಧಿಗೆ ಅಸತ್ವಾಭಾವ ಪ್ರಯೋಜಕ ಎಂದು ಹೇಳಬಾರದು ಹಾಗೆ ಹೇಳಿದರೆ ಗೌರವ ಎಂಬ ದೋಷವಿದೆ.

ಆದ್ದರಿಂದ ಜಗತ್ತು ಸದಸದ್‌ವಿಲಕ್ಷಣ ಎಂಬ ಪಕ್ಷದಲ್ಲಿ ಉಪಲಬ್ಧಿಗೆ ಪ್ರಯೋಜಕ (ಕಾರಣ)ವಾದ ಸತ್ವವು ಜಗತ್ತಿನಲ್ಲಿ ಇಲ್ಲವಾದ್ದರಿಂದ ಜಗತ್ತು ಉಪಲಬ್ಧವಾಗುತ್ತಿಲ್ಲ ಎಂದು ಹೇಳಿದಂತಾಯಿತು. ಜಗತ್ತಿಗೆ ಉಪಲಬ್ಧಿ ಇಲ್ಲವಾದ್ದರಿಂದ ಬಾಹ್ಯಪದಾರ್ಥವಾಸನಾಗಳಿಗೂ ಅಭಾವ ಸಿದ್ಧವಾಗುತ್ತದೆ ಎಂದು ವಿಜ್ಞಾನವಾದಿಗೆ ಯಾವ ದೋಷ ಹೇಳಲಾಗಿದೆಯೋ ಅದೇ ದೋಷ ನಿನಗೂ ಬರುತ್ತದೆ ಎಂದರ್ಥ. 'ನಾಲಯಜ್ಞಾನಂ' ಎಂಬಲ್ಲಿ ' ನ ಆಲಯಜ್ಞಾನಂ' ಎಂದು ಪದವಿಭಾಗವನ್ನು ತಿಳಿಯಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅನುಪಲಬ್ಧ್ಯಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ನೈಕಸ್ಮಿನ್ನಧಿಕರಣ

(೨-೨-೧೦)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ನೈಕಸ್ಮಿನ್ನಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – नैकस्मिन्नसम्भवात् ।।**

ಒಂದೇ ವಸ್ತುವಿನಲ್ಲಿ ಏಳು ಪ್ರಕಾರಗಳು ಇರುತ್ತವೆಂದು ಜೈನರು ಹೇಳುತ್ತಾರೆ. ಈ ಏಳು ಪ್ರಕಾರಗಳಲ್ಲಿ ಪರಸ್ಪರ ವಿರೋಧವಿರುವುದರಿಂದ ಒಂದೇ ವಸ್ತುವಿನಲ್ಲಿ ಅವು ಅಸಂಭಾವಿತವಾಗಿವೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** जैनोक्तसप्तप्रकारा **एकस्मिन्** वस्तुनि **न** युक्ताः । कुतः? **असम्भवात्** अप्रामाणिकत्वेन तेषामेकत्रासम्भावितत्वादित्यर्थः । सप्तप्रकारास्तु सत्त्वं, असत्त्वं, सदसत्त्वं, सद्विलक्षणत्वं, सत्वे सति सद्विलक्षणत्वं, असत्त्वे सति असद्विलक्षणत्वं, सदसत्त्वे सति सदसद्विलक्षणत्वमित्येवंरूपाः ज्ञातव्याः ।।१।।

ಜೈನರು ಹೇಳಿದ ಏಳು ಪ್ರಕಾರಗಳು ಏಕಸ್ಮಿನ್ = ಒಂದೇ ವಸ್ತುವಿನಲ್ಲಿ, ನ = ಯುಕ್ತವಾಗುವುದಿಲ್ಲ. ಏಕೆಂದರೆ ಅಸಂಭವಾತ್ = ಅಪ್ರಾಮಾಣಿಕವಾದ್ದರಿಂದ ಆ ಎಲ್ಲಾ ಪ್ರಕಾರಗಳು ಒಂದೇ ವಸ್ತುವಿನಲ್ಲಿ ಅಸಂಭಾವಿತವಾಗಿದೆ.
ಪರಿಪೂರ್ಣಚಂದ್ರಿಕಾ

೧. ಸತ್ವ, ೨. ಅಸತ್ವ, ೩. ಸದಸತ್ವ, ೪. ಸದಸತ್‌ವಿಲಕ್ಷಣತ್ವ, ೫. ಸತ್ವೇಸತಿ ಸದ್ವಿಲಕ್ಷಣತ್ವ, ೬. ಅಸತ್ವೇ ಸತಿ ಅಸದ್ವಿಲಕ್ಷಣತ್ವ, ೭. ಸದಸತ್ವೇ ಸತಿ ಸದಸದ್ವಿಲಕ್ಷಣತ್ವ ಈ ಏಳು ಪ್ರಕಾರಗಳು ಪ್ರತಿಯೊಂದು ವಸ್ತುಗಳಲ್ಲಿ ಇರುತ್ತವೆನ್ನುವುದು ಜೈನರ ವಾದ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – स्याद्वादिमतं दूषयति –**

**।। नैकस्मिन्नसम्भवात् ।।१।।**

**सत् स्याद् असत्स्यात् सदसत् स्यात् ततोऽन्यच स्यादित्येतन्नैकस्मिन् युज्यते । अदृष्टत्वेनासम्भवात् ।।१।।**

ಅನುವಾದ - ಜಗತ್ತು ಸತ್ಯ ಆಗಲಿ, ಅಸತ್ಯ ಆಗಲಿ, ಸದಸತ್ ಆಗಲಿ, ಸದಸತ್ ವಿಕ್ಷಣ ಆಗಲಿ, ಸದ್‌ವಿಲಕ್ಷಣವೂ ಆಗಲಿ, ಅಸದ್‌ವಿಲಕ್ಷಣವೂ ಆಗಲಿ, ಹೀಗೆ ಏಳು ಭಂಗಿಯನ್ನು ಜೈನರು ಜಗತ್ತಿನ ವಿಷಯದಲ್ಲಿ ಹೇಳುತ್ತಾರೆ. ಅವರ ಈ ಸ್ಯಾದ್‌ವಾದವನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ.

ಪ್ರತಿಪದಾರ್ಥ -- ಜೈನಮತದ ನಿರಾಕರಣೆಗಾಗಿ ಈ ಅಧಿಕರಣವು ಹೊರಟಿದೆ. ಸತ್‌ಸ್ಯಾತ್ = ಜಗತ್ತು ಸತ್ಯವಾಗಲಿ, ಅಸತ್ ಸ್ಯಾತ್ = ಅಸತ್ಯವಾಗಲಿ, ಸದಸತ್ ಸ್ಯಾತ್ = ಸದಸತ್ ಆಗಲಿ, ತತೋ ಅನ್ಯಚ್ಚ = ಸದಸತ್‌ವಿಲಕ್ಷಣವಾಗಲಿ, ಇತ್ಯೇತತ್ = ಹೀಗೆ ಹೇಳುವ ಸ್ಯಾದ್‌ವಾದವನ್ನು, ಏಕಸ್ಮಿನ್ = ಒಂದು ಜಗತ್ತಿನಲ್ಲಿ, ನಯುಜ್ಯತೇ = ಯುಕ್ತವಾಗುವುದಿಲ್ಲ. ಅದೃಷ್ಟತ್ವೇನ = ಈ ಸಪ್ತಭಂಗಿಗಳು ಎಲ್ಲಿಯೂ ಕಾಣದ್ದರಿಂದ, ಅಸಂಭವಾತ್ = ಅಪ್ರಾಮಾಣಿಕವಾಗಿವೆ.

### ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका –**

**अधिकरणार्थं दर्शयति – स्यादिति ।। अत्रेश्वरस्य जगत्कारणत्वेजैनमत-विरोधनिरासादस्ति शास्त्रादिसङ्गतिः । ईश्वरो जगत्कारणमित्युक्तम् । तच्च स्याद्वादिमतविरोधे मन्दस्यानुपपत्तिशङ्का स्यादिति तन्निरासः कर्तव्य एव । तत्परमात्मनो जगत्कारणत्वं विषयः । युक्तमयुक्तं वेति सन्देहः । समयविगानं सन्देहबीजम् ।**

ಈ ಅಧಿಕರಣದ ಪ್ರಮೇಯವನ್ನು 'ಸ್ಯಾತ್' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವದ ವಿಷಯಕ್ಕೆ ಜೈನಮತವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ಈಶ್ವರನು ಜಗತ್ಕಾರಣನಾಗಿದ್ದಾನೆಂದು ಹೇಳಲಾಯಿತು. ಈ ವಿಷಯಕ್ಕೆ ಸ್ಯಾದ್ವಾದಿಗಳ ಮತದ ವಿರೋಧವು ಪ್ರಾಪ್ತವಾದರೆ ಮಂದರಿಗೆ ಈ ಲಕ್ಷಣವು ವಿಷ್ಣುವಿನದ್ದಲ್ಲವೆಂಬ ಶಂಕೆಯು ಪ್ರಾಪ್ತವಾಗುತ್ತದೆ. ಆದ್ದರಿಂದ ಈ ಸ್ಯಾದ್ವಾದಿ ಮತವನ್ನು ನಿರಾಕರಣೆ ಮಾಡಲೇ ಬೇಕು.

ಪರಮಾತ್ಮನ ಜಗತ್ಕಾರಣತ್ವವೇ ಅಧಿಕರಣದ ವಿಷಯ. ಇದು ಯುಕ್ತವೋ ಅಯುಕ್ತವೋ ? ಎಂದು ಸಂದೇಹ. ಸಮಯಗಳಲ್ಲಿರುವ ವಿವಾದವು ಸಂದೇಹಬೀಜ.

ವಿವರಣೆ - ಶೂನ್ಯವಾದಿಗಳು ಹೇಳಲ್ಪಟ್ಟ ಅಸತ್ವವು ಹಾಗೂ ವಿಜ್ಞಾನವಾದಿಗಳು ಹೇಳಲ್ಪಟ್ಟ ಸತ್ವವು ಎರಡೂ 'ಸ್ಯಾತ್' ಎಂದು ಹೇಳುವ ಜೈನರ ಪಕ್ಷದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯಸಂಗತಿಯು ಇರುತ್ತದೆ.

**तत्वप्रकाशिका – न युक्तमिति पूर्वः पक्षः । सदसदुभयमुभयविलक्षणं सदसदुभयविलक्षणं नैतत्सर्वं सर्वं चेति सप्तभङ्गिजगदात्मादृष्टात् परिदृष्टसाधनैश्च भविष्यति । स च कायपरिमाणः । अतः किमीश्वरेणेति लक्षणसूत्रमयुक्तमिति प्राप्ते सिद्धान्तयत्सूत्रमुपन्यस्य व्याचष्टे – नेति ।।**

ವಿಷ್ಣುವಿನ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. '೧. ಸತ್ವ, ೨ ಅಸತ್ವ. ೩ ಸದಸತ್ವ. ೪ ಸದಸದ್‌ವಿಲಕ್ಷಣತ್ವ, ೫ ಸತ್ವೇ ಸತಿ ಸದ್‌ವಿಲಕ್ಷಣತ್ವ, ೬ ಅಸತ್ವೇ ಸತಿ ಅಸದ್‌ವಿಲಕ್ಷಣತ್ವ, ೭ ಸದಸದಾತ್ಮಕತ್ವೇಸತಿ ಸದಸದ್‌ವಿಲಕ್ಷಣತ್ವ. ಹೀಗೆ ಏಳು ರೀತಿಗಳು ಜಗತ್ತಿನಲ್ಲಿ ಇವೆ. ಆತ್ಮ, ಅದೃಷ್ಟಗಳಿಂದ ಹಾಗೂ ಕಾಣಿಸುತ್ತಿರುವ ದಂಡ ಚಕ್ರಾದಿಸಾಧನಗಳಿಂದ ಈ ಜಗತ್ತು ನಿರ್ಮಾಣವಾಗುತ್ತದೆ. ಜೀವನಾದರೂ ಶರೀರದಷ್ಟೇ ಪರಿಮಾಣವುಳ್ಳವನು. ಇಂಥ ಜಗತ್ತಿಗೆ ಈಶ್ವರನಿಂದ ಆಗಲೇಬೇಕಾದದ್ದು ಏನೂ ಅಲ್ಲ. ಆದ್ದರಿಂದ ಜಗತ್ಕಾರಣತ್ವಲಕ್ಷಣವನ್ನು ಈಶ್ವರನಿಗೆ ಹೇಳಿದ್ದು ಅಯುಕ್ತವಾಗಿದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ನೈಕಸ್ಮಿನ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಧರ್ಮ, ಅಧರ್ಮ, ಅದೃಷ್ಟ, ಕಾಲ, ಆಕಾಶ, ಮೊದಲಾದ ಸಾಧನೆಗಳಿಂದ ಹಾಗೂ ಕಣ್ಣಿಗೆ ಕಾಣಿಸುವ ದಂಡ ಚಕ್ರಾದಿಸಾಧನೆಗಳಿಂದ ಸಪ್ತಭಂಗಿರೂಪವಾದ ಜಗತ್ತು ನಿರ್ಮಾಣವಾಗುತ್ತದೆ. ಆದ್ದರಿಂದ ಪರಮಾತ್ಮನು ಜಗತ್ತಿನ ನಿರ್ಮಾಣಕ್ಕೆ ಅನಾವಶ್ಯಕ ಎಂಬುದು ಜೈನರ ಅಭಿಪ್ರಾಯ. ಸತ್ ಸ್ಯಾತ್ ಅಸತ್‌ಸ್ಯಾತ್, ಇತ್ಯಾದಿಯಾಗಿ ಏಳು ಭಂಗಿಗಳನ್ನು ಹೇಳುವುದರಿಂದ ಇವರಿಗೆ ಸ್ಯಾದ್ ವಾದಿಗಳೆಂದು ಹೆಸರು.

ಮತ್ತು ಜೀವನು ದೇಹದ ಪರಿಮಾಣ ಉಳ್ಳವನಾಗಿರುತ್ತಾನೆ. ಇರುವೆಯಲ್ಲಿ ಜೀವನು ಇರುವೆಯಷ್ಟೇ ಇರುತ್ತಾನೆ. ಮನುಷ್ಯದೇಹದಲ್ಲಿ ಮನುಷ್ಯದೇಹದಷ್ಟೇ ಪರಿಮಾಣವನ್ನು ಹೊಂದಿರುತ್ತಾನೆ ಇತ್ಯಾದಿಯಾಗಿ ಹೇಳುತ್ತಾರೆ.

**तत्वप्रकाशिका – यदुच्यते जैनैर्जगत्सप्तभङ्गीति न तद्युक्तम् । व्यावस्थितसदसत्प्रकारद्वयातिरिक्तप्रकारस्याप्रामाणिकत्वेनासम्भवात् । एकैकप्रकाराभ्युपगमे दोषदर्शनदेतदुपेयत इति न वाच्यम् । तथा सति दोषभीरुणा सर्वमपि परित्याज्यं स्यात् । सदसत्प्रकारद्वये च न कोऽपि दोष इति भावः ।।३३।।**

'ಜಗತ್ತು ಸಪ್ತಭಂಗಿ' ಎಂದು ಹೇಳಿದ್ದು ಅಯುಕ್ತವಾಗಿದೆ. ಏಕೆಂದರೆ ಜಗತ್ತಿನಲ್ಲಿ ವ್ಯವಸ್ಥಿತವಾಗಿ 'ಸತ್ವ' 'ಅಸತ್ವ' ಎಂಬ ಎರಡೇ ಪ್ರಕಾರಗಳು ಇರುವುದು ಅನುಭವಸಿದ್ಧವಾಗಿದೆ. ಅದಕ್ಕಿಂತ ಅತಿರಿಕ್ತವಾದ ಉಳಿದ ಐದು ಪ್ರಕಾರಗಳು ಅಪ್ರಾಮಾಣಿಕವಾಗಿರುವುದರಿಂದ ಅಸಂಭಾವಿತವಾಗಿವೆ. ಒಂದೊಂದು ಪ್ರಕಾರವನ್ನು ಅಂಗೀಕಾರ ಮಾಡಿದರೆ ದೋಷ ಬರುವುದರಿಂದ ಏಳೂ ಪ್ರಕಾರಗಳನ್ನು ಒಪ್ಪಬೇಕೆಂದು ಜೈನರು ಹೇಳುತ್ತಾರೆ. ಇದು ತಪ್ಪು. ಹಾಗಾದರೆ ದೋಷದ ಹೆದರಿಕೆ

ಇರುವವನು ಎಲ್ಲವನ್ನು ತ್ಯಾಗ ಮಾಡಲೂಬೇಕಾಗುತ್ತದೆ. ಕೇವಲ ಸತ್ವ, ಅಸತ್ವ ಎಂಬೆರಡೇ ಪ್ರಕಾರಗಳನ್ನು ಒಪ್ಪಿದರೆ ಯಾವುದೇ ದೋಷಕ್ಕೆ ಅವಕಾಶವಿಲ್ಲ.

ವಿವರಣೆ - ಜೈನರು ಏಳು ಭಂಗಿಗಳನ್ನು ಒಪ್ಪಿದ್ದಾರೆ. ಆದರೆ 'ಸತ್ವ' 'ಅಸತ್ವ' ಎಂಬ ಎರಡೇ ಪ್ರಕಾರಗಳು ಸಾಕು; ಉಳಿದ ಐದು ಪ್ರಕಾರಗಳನ್ನು ಒಪ್ಪುವ ಆವಶ್ಯಕತೆ ಇರುವುದಿಲ್ಲ. ಘಟವು 'ಏತದ್ ದೇಶ ಏತತ್‌ಕಾಲಾವಚ್ಛೇದೇನ' ಸತ್ಯವಾಗಿದೆ. 'ಅನ್ಯದೇಶ ಅನ್ಯಕಾಲಾವಚ್ಛೇದೇನ' ಅಸತ್ಯವಾಗಿದೆ. ಇದಕ್ಕಿಂತ ಅತಿರಿಕ್ತವಾಗಿ 'ಸದಸತ್' ಆಗಲು ಹಾಗೂ ಉಳಿದ ಪ್ರಕಾರಗಳನ್ನು ಹೊಂದಲು ಸಾಧ್ಯವಿಲ್ಲ.

ಒಂದೊಂದು ಪಕ್ಷವನ್ನು ಒಪ್ಪಿದಾಗಲೂ ದೋಷವು ಪ್ರಾಪ್ತವಾಗುತ್ತದೆ ಅಸತ್‌ನಲ್ಲಿ ಸತ್ವವಿಲ್ಲ. ಸತ್ತಿನಲ್ಲಿ ಅಸತ್ವವಿಲ್ಲ. ಇತ್ಯಾದಿಯಾಗಿ ದೋಷಗಳು ಪ್ರಾಪ್ತವಾಗುವುದರಿಂದ ಏಳು ಪ್ರಕಾರಗಳನ್ನು ಒಪ್ಪಲೇಬೇಕಲ್ಲವೆ? ಹೀಗೆ ಜೈನರು ಆಕ್ಷೇಪಿಸುತ್ತಾರೆ. ಆದರೆ ಒಂದೊಂದು ಪಕ್ಷದಲ್ಲಿ ದೋಷವಿರುವುದರಿಂದ ಏಳು ಪ್ರಕಾರಗಳನ್ನು ಒಪ್ಪಿದರೆ ಏಳೂ ದೋಷಗಳನ್ನು ಒಪ್ಪಿಕೊಂಡಂತಾಯಿತು. ಆದ್ದರಿಂದ ಯಾವ ಪಕ್ಷವನ್ನೂ ಅಂಗೀಕರಿಸಲು ಸಾಧ್ಯವಿಲ್ಲ. ಆದ್ದರಿಂದ ಕೇವಲ ಸತ್ವ, ಅಸತ್ವ ಎಂಬ ಎರಡೇ ಪ್ರಕಾರಗಳನ್ನು ಒಪ್ಪುವುದು ಉಚಿತ.

## ಬ್ರಹ್ಮಸೂತ್ರ

**सूत्रम् – एवञ्चाऽत्माकात्स्न्र्यम् ।।**

ದೇಹದ ಪರಿಮಾಣದಷ್ಟೇ ಆತ್ಮನ ಪರಿಮಾಣವಿರುತ್ತದೆ ಎಂದು ಜೈನರು ಹೇಳುತ್ತಾರೆ. ಹಾಗಾದಲ್ಲಿ ಇರುವೆಯ ಶರೀರದಲ್ಲಿರುವ ಆತ್ಮನಿಗೆ ಆನೆಯ ಶರೀರವು ಬಂದಾಗ ಆತ್ಮನು ಎಲ್ಲಾ ಅವಯವಗಳಲ್ಲಿಯೂ ಇಲ್ಲದೇ ಇರಬೇಕಾದೀತು.

## ಸೂತ್ರದೀಪಿಕಾ

**सूत्रदीपिका –** एवञ्चाऽत्मनः कायपरिमाणेऽङ्गीकृते सत्यात्माकात्स्न्र्यं आत्मनः प्राक् पिपीलिकादेहं प्राप्तस्य तत्कायपरिमितस्य जीवस्याकात्स्न्र्यं गजगर्दभादिशरीरप्राप्तावपूर्णता स्यादित्यर्थः । एवं गजशरीरं प्राप्तस्याऽत्मनः पिपीलिकादेहप्राप्ताकवात्स्न्र्यमाधिक्यं च स्यादित्यपि द्रष्टव्यम् ।।२।।

ಏವಂಚ = ಜೈನರು ಹೇಳುವಂತೆ ಆತ್ಮನಿಗೆ ಶರೀರಪರಿಮಾಣವನ್ನು ಒಪ್ಪುವುದಾದರೆ, ಆತ್ಮಾಕಾರ್ತ್ಸ್ನ್ಯಂ = ಆತ್ಮನಿಗೆ ಮೊದಲು ಇರುವೆಯ ಶರೀರವು ಬಂದಾಗ ಎಷ್ಟು ಪರಿಮಾಣವಿರುತ್ತದೋ, ಅದೇ ಆತ್ಮನಿಗೆ ಮುಂದೆ

ಆನೆ, ಕತ್ತೆ ಮೊದಲಾದ ಶರೀರಗಳು ಪ್ರಾಪ್ತವಾದಾಗ ಸಂಪೂರ್ಣದೇಹದಲ್ಲಿ ಇಲ್ಲದೇ ಇರಬೇಕಾದೀತು. ಇದರಂತೆ ಆನೆಯ ಶರೀರವನ್ನು ಹೊಂದಿದ ಆತ್ಮನು ಆನೆಯಷ್ಟೇ ದೊಡ್ಡವನಾದ್ದರಿಂದ ಇರುವೆಯ ಶರೀರವು ಬಂದರೆ ಶರೀರಕ್ಕಿಂತ ಹೆಚ್ಚು ಆತ್ಮನೇ ವಿಶಾಲನಾಗಿ ಇರಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। एवं चाऽत्माऽकात्स्न्र्यम् ।।२।।**

**जीवस्य शरीरपरिमितत्वाङ्गीकारेऽण्वादिशरीरस्थस्य हस्त्यादिशरीरेऽकात्स्न्र्यं स्यात् ।।२।।**

ಅನುವಾದ - ಜೀವನು ಶರೀರದ ಪರಿಮಾಣವುಳ್ಳವನೆಂದು ಅಂಗೀಕಾರ ಮಾಡಿದರೆ ಇರುವೆ ಶರೀರದಲ್ಲಿದ್ದ ಜೀವನಿಗೆ ಆನೆಯ ಶರೀರವು ಬಂದಾಗ ಆ ದೊಡ್ಡ ದೇಹವನ್ನು ಆತ್ಮನು ತುಂಬದೆ ಇರಬೇಕಾಯಿತು.

ಪ್ರತಿಪದಾರ್ಥ -- ಜೀವಸ್ಯ = ಜೀವನಿಗೆ, ಶರೀರಪರಿಮಿತತ್ವಾಂಗೀಕಾರೇ = ಶರೀರಪರಿಮಾಣವನ್ನು ಒಪ್ಪಿದರೆ, ಅಣ್ವಾದಿಶರೀರಸ್ಥಸ್ಯ = ಚಿಕ್ಕದಾದ ಇರುವೆಯ ಶರೀರದಲ್ಲಿ ಅಣುಪರಿಮಾಣದಿಂದ ಇರುವ ಜೀವನಿಗೆ, ಹಸ್ತ್ಯಾದಿಶರೀರೇ = ಆನೆಯ ಶರೀರವು ಬಂದರೆ, ಅಕಾರ್ತ್ಸ್ನ್ಯಂ = ಶರೀರದಲ್ಲಿ ಸಂಪೂರ್ಣವಾಗಿ ವ್ಯಾಪ್ತವಾಗದೆ ಇರುವಿಕೆಯು, ಸ್ಯಾತ್ = ಆಗಬೇಕಾದಿತು.

## ತತ್ವಪ್ರಕಾಶಿಕಾ

**तत्वप्रकाशिका – यदपि जीवस्य शरीरपरिमितत्वमभ्युपेयते तत्प्रष्टव्यम् । किं तत्सर्वशरीरगतचेष्टोपपत्त्यर्थमभ्युपेयते शरीरावच्छेदमन्तरेणात्मनः परिमाणाभावप्रसङ्गभयाद्वा । तत्राद्यं पक्षं प्रतिक्षेप्तुं सूत्रमुपन्यस्य व्याचष्टे – एवं चेति ।।**

ಜೀವನು ಶರೀರಪರಿಮಾಣವುಳ್ಳವನೆಂಬುಂದು ಜೈನರ ಮತ್ತೊಂದು ವಾದ. ಇಂಥ ಜೈನರನ್ನು ಪ್ರಶ್ನಿಸುತ್ತೇವೆ. ಶರೀರದಲ್ಲಿರುವ ಚಲನಾದಿ ವ್ಯಾಪಾರಗಳನ್ನು ಕೂಡಿಸುವುದಕ್ಕಾಗಿ ಹೀಗೆ ಒಪ್ಪುತ್ತೀರೋ ಅಥವಾ ಶರೀರವೆಂಬ ಅವಚ್ಛೇದಕವನ್ನು ಒಪ್ಪದೆ ಜೀವನಿಗೆ ಸ್ವತಃ ಪರಿಮಾಣವನ್ನೇ ಒಪ್ಪಲು ಆಗದಿರುವುದರಿಂದ ಶರೀರಪರಮಾಣವನ್ನು ಒಪ್ಪುತ್ತೀರೋ?

ಮೊದಲನೆಯ ಪಕ್ಷವನ್ನು ನಿರಾಕರಣೆ ಮಾಡುವುದಕ್ಕಾಗಿ 'ಏವಂ ಚ' ಇತ್ಯಾದಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – जैनमतप्रसङ्गनिधापितमात्मनः शरीरपरिमाणत्वमेवमिति परामृशति । यद्यात्मा सर्वशरीरचेष्टोपपत्त्यर्थं शरीरपरिमाणोऽङ्गीक्रियते एवं तर्हि पिपीलिकादिशरीरस्थस्तत्परिमाण एवं स्यात् । तथा च तस्यैव कर्मवशात् गजगर्दभादिशरीरप्राप्तौ तत्रापूर्णता स्यात् । ततश्च न सर्वशरीरचेष्टेति भावः । गज ादिरीरस्थस्याणुशरीरप्राप्तावतिरेकः स्यात् । तथा च शरीरपरिमाणत्वभङ्ग इत्यपि द्रष्टव्यम् ।। ३४ ।।**

ಜೈನಮತವನ್ನು ನಿರಾಕರಣೆ ಮಾಡುವ ಪ್ರಸಂಗ ಇರುವುದರಿಂದ ಜೀವನಿಗಿರುವ ಶರೀರ ಪರಿಮಾಣವನ್ನೇ ಸೂತ್ರದಲ್ಲಿರುವ 'ಏವಂ' ಎನ್ನುವುದರಿಂದ ಪರಾಮರ್ಶಮಾಡಬೇಕು. ಒಂದುವೇಳೆ ಜೀವನು ಶರೀರದಲ್ಲಿರುವ ಎಲ್ಲಾ ವ್ಯಾಪಾರಗಳ ಸಿದ್ಧಿಗೋಸ್ಕರ ಶರೀರಪರಿಮಾಣ-ವುಳ್ಳವನೆಂದು ಹೇಳುವುದಾದರೆ ಆಗ ಇರುವೆಯ ಶರೀರ ಹೊಂದಿದ ಜೀವನು ಇರುವೆ ದೇಹದ ಪರಿಮಾಣವುಳ್ಳವನೇ ಆಗಬೇಕು. ಆಗ ಅದೇ ಜೀವನಿಗೆ ಕರ್ಮದ ಅಧೀನವಾಗಿ ಆನೆ, ಕತ್ತೆ, ಮೊದಲಾದ ಶರೀರಗಳು ಪ್ರಾಪ್ತವಾದಾಗ ಅಪೂರ್ಣವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಸರ್ವಶರೀರದ ಚೇಷ್ಟಗೋಸ್ಕರ ಎಂದು ಹೇಳಬಾರದು. ಇದರಂತೆ ಆನೆಯ ಶರೀರವನ್ನು ಹೊಂದಿದ ಜೀವನಿಗೆ ಕರ್ಮದ ಅಧೀನವಾಗಿ ಇರುವೆ ಶರೀರವು ಪ್ರಾಪ್ತವಾದಾಗ ಆನೆಯಂತೆ ಮಹತ್ತಾದ ಪರಿಮಾಣ ಇರುವುದರಿಂದ ಇರುವೆ ಶರೀರವನ್ನು ಮೀರಿ ಹೆಚ್ಚು ಪರಿಮಾಣ ಇದೆ ಎಂದಾಗಬೇಕಾಗುತ್ತದೆ. ಆದ್ದರಿಂದ ಜೀವನು ಶರೀರಪರಿಮಾಣದಷ್ಟೇ ಆಕಾರವುಳ್ಳವನು ಎನ್ನುವುದು ತಪ್ಪು.

## ಬ್ರಹ್ಮಸೂತ್ರ

**सूत्रम् – न च पर्यायादप्यविरोधो विकारादिभ्यः ।।**

ಆಯಾ ದೇಹಗಳು ವ್ಯತ್ಯಾಸವಾದಾಗ ಆತ್ಮನ ಗಾತ್ರವೂ ಕೂಡ ವ್ಯತ್ಯಾಸವಾಗುತ್ತದೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಆತ್ಮನಿಗೆ ಹೀಗೆ ಪರಿಣಾಮವನ್ನು ಒಪ್ಪಿದರೆ ವಿಕಾರವನ್ನು ಅನಿತ್ಯತ್ವವನ್ನು ಒಪ್ಪಬೇಕಾದೀತು. ಆದ್ದರಿಂದ ಮೋಕ್ಷವೇ ಇಲ್ಲದ ಪ್ರಸಂಗ ಬರುತ್ತದೆ.

## ಸೂತ್ರದೀಪಿಕಾ

**सूत्रदीपिका – पर्यायात्** क्रमात् क्रमेण तत्तद्देहपरिमाणत्वाङ्गीकारादपि । **अविरोधः** नोक्तदोष इति च न युज्यते । कुतः? यतः पर्यायो न युज्यते । तदपि कुतः? **विकारादिभ्यः** तथा सति तत्तत्कालीनपरिमाणभेदेन वस्तुभेदात्। आत्मनो विकारित्वापत्तेः । ततश्चानित्यत्वान्निर्मोक्षत्वादिदोषप्रसङ्गादित्यर्थः ।।३।।

ಪರ್ಯಾಯಾದಪಿ = ಆತ್ಮನಿಗೆ ಕ್ರಮವಾಗಿ ದೇಹವು ವ್ಯತ್ಯಾಸವಾದಂತೆ ಪರಿಮಾಣವೂ ಕೂಡ ವ್ಯತ್ಯಾಸವಾಗುತ್ತದೆಂದು ಅಂಗೀಕರಿಸಿದರೂ, ಅವಿರೋಧಃ ನ ಚ = ಹಿಂದಿನ ದೋಷವು ಬರುವುದಿಲ್ಲವೆಂದು ಹೇಳಲಾಗದು. ಏಕೆಂದರೆ ವಿಕಾರಾದಿಭ್ಯಃ = ಹಾಗಾದಲ್ಲಿ ಆಯಾ ಕಾಲದ ಪರಿಮಾಣಭೇದದಿಂದ ವಸ್ತುವಿನಲ್ಲಿಯೂ ಕೂಡ ಭೇದವು ಬರುತ್ತದೆ. ಆತ್ಮನು ವಿಕಾರಿಯಾಗಬೇಕಾದ್ದರಿಂದ ದೇಹದಂತೆ ಆತ್ಮನೂ ಕೂಡ ಅನಿತ್ಯನೆಂದಾಗುತ್ತಾನೆ. ಆವಾಗ ಆತ್ಮನಿಗೆ ಮೋಕ್ಷವೇ ದೊರೆಯಲು ಸಾಧ್ಯವಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। न च पर्यायादप्यविरोधो विकारादिभ्यः ।।३।।**

**तत्तच्छरीरस्थस्य तत्तत्परिमाणत्वमिति न मन्तव्यम् । विकारित्वाद-नित्यत्वप्रसक्तेः ।।३।।**

ಅನುವಾದ - ಜೀವನು ಬೇರೆ ಯಾವ ಯಾವ ಶರೀರವನ್ನು ಹೊಂದುತ್ತಾನೋ ಆ ಶರೀರದ ಪರಿಮಾಣವನ್ನೇ ಹೊಂದುತ್ತಾನೆ. ಹೀಗೆ ಹೇಳುವುದು ತಪ್ಪು. ಹಾಗಾದಲ್ಲಿ ಜೀವನಿಗೆ ವಿಕಾರವನ್ನು ಒಪ್ಪಿದಂತಾಗುವುದರಿಂದ ಅನಿತ್ಯನಾಗಬೇಕಾದೀತು.

ಪ್ರತಿಪದಾರ್ಥ -- ತತ್ತಚ್ಛರೀರಸ್ಥಸ್ಯ = ಆಯಾ ಶರೀರವನ್ನು ಪಡೆದ ಜೀವನಿಗೆ, ತತ್ತತ್ಪರಿಮಾಣತ್ವಮ್ = ಆಯಾ ಶರೀರದ ಪರಿಮಾಣ ಬರುವಿಕೆಯನ್ನು, ಇತಿ = ಹೀಗೆ, ನ ಮಂತವ್ಯಮ್ = ಒಪ್ಪಬಾರದು, ವಿಕಾರಿತ್ವಾತ್ = ಜೀವನಿಗೆ ವಿಕಾರವನ್ನು ಒಪ್ಪಿದಂತಾಗಿ, ಅನಿತ್ಯತ್ವಪ್ರಸಕ್ತೇಃ = ಅನಿತ್ಯತ್ವವನ್ನು ಒಪ್ಪ ಬೇಕಾಗುತ್ತದೆ.

ನೈಕಸ್ಮಿನ್ನಧಿಕರಣ (೨-೨-೧೦)

## ತತ್ವಪ್ರಕಾಶಿಕಾ

**तत्वप्रकाशिका – यदा यच्छरीरं प्राप्नोति तदा तत्परिमाणोऽतो नोक्तदोष इत्याशङ्कं परिहरत्सूत्रमुपन्यस्य व्याचष्टे ।। नेति ।। न चात्मनस्तत्तच्छरीरस्थस्य तत्तत्परिमाणत्वमिति युक्तम् । तथा सति विकारित्वापत्तेः । ततश्चानित्यत्वप्रसक तेस्तेन चानिर्मोक्षप्रसङ्गात्तथा च शास्त्रवैयर्थ्यापातादिति भावः ।। ३९ ।।**

ಜೀವನು ಯಾವಾಗ ಯಾವ ಶರೀರವನ್ನು ಹೊಂದುತ್ತಾನೋ ಆಗ ಅದೇ ಪರಿಮಾಣವನ್ನು ಹೊಂದುತ್ತಾನಾದ್ದರಿಂದ ಯಾವುದೇ ದೋಷವಿಲ್ಲ ಎಂಬ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ನ ಚ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಜೀವನು ಯಾವಾಗ ಎಂಥ ಶರೀರವನ್ನು ಪಡೆಯುತ್ತಾನೋ ಆಗ ಆ ದೇಹದ ಪರಿಮಾಣವುಳ್ಳವನೆಂದು ಹೇಳುವುದು ಅಯುಕ್ತ. ಹಾಗಾದಲ್ಲಿ ವಿಕಾರವನ್ನು ಜೀವನಿಗೆ ಒಪ್ಪಿದಂತಾಗುತ್ತದೆ. ಹಾಗೆ ಒಪ್ಪಿದರೆ ಜೀವನು ಕೂಡ ಅನಿತ್ಯನಾಗಬೇಕಾಗುತ್ತದೆ. ಮೋಕ್ಷವೇ ಇಲ್ಲದ ಪರಿಸ್ಥಿತಿ ಬರುವುದರಿಂದ ಶಾಸ್ತ್ರಗಳೆಲ್ಲವೂ ವ್ಯರ್ಥವಾಗುತ್ತವೆಂಬುದು ಸೂತ್ರದ ಅಭಿಪ್ರಾಯ.

## ಬ್ರಹ್ಮಸೂತ್ರ

**सूत्रम् – अन्त्यावस्थितेश्चोभयनित्यत्वादविशेषात् ।।**

ಮೋಕ್ಷದಲ್ಲಿ ಆತ್ಮನಿರುತ್ತಾನೆಂದು ಹೇಳಬೇಕಾದರೆ ಅದಕ್ಕೆ ಆಶ್ರಯವಾಗಿ ಶರೀರವನ್ನೂ ಕೂಡ ಮೋಕ್ಷದಲ್ಲಿ ಹೇಳಬೇಕು. ಅಂದರೆ ಮೋಕ್ಷದಲ್ಲಿ ಶರೀರವು ಯಾವ ಪರಿಮಾಣದಲ್ಲಿರುತ್ತದೋ, ಅದೇ ಪರಿಮಾಣದಲ್ಲಿ ಆತ್ಮನು ಇರುತ್ತಾನೆಂದು ಅನಿವಾರ್ಯವಾಗಿ ಜೈನರು ಹೇಳಬೇಕು. ಆದ್ದರಿಂದ ಮೋಕ್ಷಾವಸ್ಥೆಯಲ್ಲಿ ದೇಹ ಮತ್ತು ಆತ್ಮಾ ಎರಡೂ ಕೂಡ ನಿತ್ಯವೆಂದು ಒಪ್ಪಿದಂತಾಯಿತು. ಹಾಗಾದರೆ ಸಂಸಾರಾವಸ್ಥೆಯಲ್ಲಿರುವ ದೇಹವು ಏಕೆ ಅನಿತ್ಯವಾಗುತ್ತದೆ? ಮೋಕ್ಷಾವಸ್ಥೆಯಲ್ಲಿರುವ ದೇಹಕ್ಕೂ, ಸಂಸಾರಾವಸ್ಥೆಯಲ್ಲಿರುವ ದೇಹಕ್ಕೂ ಏನು ವ್ಯತ್ಯಾಸವಿಲ್ಲದಿರುವಾಗ ಮುಕ್ತನ ದೇಹವು ನಿತ್ಯ, ಸಂಸಾರಿಯ ದೇಹವು ಅನಿತ್ಯವೆನ್ನಲು ಯಾವುದೇ ಕಾರಣವಿರುವುದಿಲ್ಲ. ಆದ್ದರಿಂದ ಮೋಕ್ಷಕ್ಕೂ, ಸಂಸಾರಕ್ಕೂ ಏನೂ ವ್ಯತ್ಯಾಸವಿಲ್ಲದ ಪ್ರಸಂಗ ಬರುತ್ತದೆ.

## ಸೂತ್ರದೀಪಿಕಾ

**सूत्रदीपिका** — पूर्वसूत्रादेवं चेत्यनुषज्यते । **अन्त्यावस्थितेरित्ये** तदावर्तते । चशब्दोऽवधारणे समुच्चये च । तथाच **एवं** सति आत्मनः कायपरिमाणत्वेऽङ्गीकृते **अन्त्यावस्थितेः प्रसङ्ग** इति शेषः । मोक्षेऽपि सतः आत्मनः शरीरसत्त्वमङ्गीकार्यं स्यादित्यर्थः। कुतः? **अन्त्यावस्थितेश्च** अन्त्यस्य मौक्तिकपरिमाणस्यावस्थितेरवश्यमङ्गीकार्यत्वात् । अवच्छेदकशरीरं विना अवच्छेद्यपरिमाणसत्त्वायोगादिति भावः । परिमाणमेव कुत इत्यतोऽप्याह — **अन्त्येति** । अन्त्यस्य मौक्तिकात्मस्वरूपस्य मुक्ताववस्थितेरवश्यं स्वरूपसत्त्वस्य परिमाणं विनाऽयोगादिति भावः । अस्तु मोक्षेऽपि शरीरं ततः किमित्यत उक्तं **उभयनित्यत्वादिति** । तथा सति उभयोः मुक्तकालीनयोर्देहात्मनोर्नित्यत्व प्रसङ्गादित्यर्थः । अस्तु मौक्तिकशरीरनित्यत्वं ततः किमित्यत आह - ततश्च सर्वनित्यत्वं स्यादित्यापाद्यवाक्यमध्याहार्यम् । अत एव समुच्चयार्थकश्चशब्दः । सर्वेषामधुनातनशरीराणां नित्यत्वं स्यादित्यर्थः कुत इत्य आह — **अविशेषादिति।** मुक्तिकालीनानाम् अधुनातनानां च शरीराणां शरीरत्वाविशेषादित्यर्थः । तस्मान्न कायपरिमाणत्वमात्मनो युक्तमिति भावः ।।४।।

ಹಿಂದಿನ ಸೂತ್ರದಿಂದ 'ಏವಂ ಚ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು. 'ಅಂತ್ಯಾವಸ್ಥಿತೇಃ' ಎಂಬುದನ್ನು ಎರಡು ಬಾರಿ ಆವೃತ್ತಿ ಮಾಡಿಕೊಳ್ಳಬೇಕು. ಚ ಶಬ್ದವು ಅವಧಾರಣಾರ್ಥದಲ್ಲಿ ಮತ್ತು ಸಮುಚ್ಚಯಾರ್ಥದಲ್ಲಿ ಇರುತ್ತದೆ. ಸೂತ್ರಾರ್ಥ ಹೀಗೆ - ಆತ್ಮನು ಶರೀರ ಪರಿಮಾಣವನ್ನು ಹೊಂದಿರುತ್ತಾನೆಂದು ಅಂಗೀಕರಿಸುವುದಾದಲ್ಲಿ, ಅಂತ್ಯಾವಸ್ಥಿತೇಃ = ಮೋಕ್ಷಾವಸ್ಥೆಯಲ್ಲಿಯೂ ಆತ್ಮನಿಗೆ ಶರೀರವು ಇರುತ್ತದೆಂದು ಅಂಗೀಕರಿಸುವುದು ಅನಿವಾರ್ಯ. ಏಕೆಂದರೆ ಅಂತ್ಯಾವಸ್ಥಿತೇಶ್ಚ = ಅಂತ್ಯವೆಂದರೆ ಕೊನೆ ಎಂದರ್ಥ. ಮುಕ್ತಿಯಲ್ಲಿ ಉಳಿಯುವ ಆತ್ಮನ ಗಾತ್ರವು ಮೋಕ್ಷದಲ್ಲಿ ಇರುತ್ತದೆಂದು ಒಪ್ಪಬೇಕು. ಈ ಗಾತ್ರವು ಅವಚ್ಛೇದಕವಾದ ಶರೀರವಿಲ್ಲದೇ ಕೂಡುವುದಿಲ್ಲ. ಆದ್ದರಿಂದ ಅವಚ್ಛೇದ್ಯನಾದ ಆತ್ಮನ ಪರಿಮಾಣಕ್ಕಾಗಿ ಅವಚ್ಛೇದಕವಾದ ಶರೀರಪರಿಮಾಣವನ್ನು ಒಪ್ಪಬೇಕು. ಪರಿಮಾಣವನ್ನೇಕೆ ಒಪ್ಪಬೇಕು ? ಎಂದರೆ ಅಂತ್ಯಾವಸ್ಥಿತೇಃ = ಮೋಕ್ಷದಲ್ಲಿರುವ ಆತ್ಮಸ್ವರೂಪವು ಇದ್ದೇ ಇರುತ್ತದೆಂದು ಅವಶ್ಯವಾಗಿ ಒಪ್ಪಬೇಕು. ಸ್ವರೂಪಸತ್ವವು ಪರಿಮಾಣವಿಲ್ಲದೇ ಜೈನರ ಮತದಲ್ಲಿ ಕೂಡುವುದಿಲ್ಲ. ಆಗಲಿ ಮೋಕ್ಷದಲ್ಲಿಯೂ ಶರೀರವನ್ನು ಒಪ್ಪುತ್ತೇವೆಂದರೆ, ಉಭಯನಿತ್ಯತ್ವಾತ್ = ಮೋಕ್ಷಕಾಲದಲ್ಲಿ ದೇಹ ಹಾಗೂ ಆತ್ಮಾ ಇಬ್ಬರಿಗೂ ನಿತ್ಯತ್ವವನ್ನು ಒಪ್ಪಬೇಕಾದ ಪ್ರಸಂಗ ಬರುತ್ತದೆ. ಆಗಲಿ ಮೋಕ್ಷಾವಸ್ಥೆಯಲ್ಲಿಯೂ ಶರೀರನಿತ್ಯತ್ವವನ್ನು ಒಪ್ಪುತ್ತೇವೆ. ಇದರಿಂದೇನಾಯಿತು? ಎಂದರೆ, ಸಕಲ ಪದಾರ್ಥಗಳಿಗೆ ನಿತ್ಯತ್ವವನ್ನೇ ಒಪ್ಪಿದಂತಾಯಿತು. ಸರ್ವನಿತ್ಯತ್ವಂ ಸ್ಯಾತ್ ಎಂಬ ಆಪಾದ್ಯವಾಕ್ಯವನ್ನು ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು. ಅದಕ್ಕಾಗಿಯೇ ಸಮುಚ್ಚಯಾರ್ಥದಲ್ಲಿ ಚಶಬ್ದವಿರುತ್ತದೆ. ಆವಾಗ ಸಂಸಾರಾವಸ್ಥೆಯಲ್ಲಿರುವ ಎಲ್ಲರ ಶರೀರವು ನಿತ್ಯವಾಗುವ ಪ್ರಸಂಗ ಬರುತ್ತದೆ. ಏಕೆಂದರೆ ಅವಿಶೇಷಾತ್ = ಮೋಕ್ಷಾವಸ್ಥೆಯಲ್ಲಿರುವ

ಶರೀರಕ್ಕೂ, ಸಂಸಾರಾವಸ್ಥೆಯಲ್ಲಿರುವ ಶರೀರಕ್ಕೂ ಶರೀರತ್ವ ಎಂಬ ಧರ್ಮವು ಸಮಾನವಾಗಿರುವುದರಿಂದ ಯಾವುದೇ ವ್ಯತ್ಯಾಸವಿರುವುದಿಲ್ಲ. ಆದ್ದರಿಂದ ಆತ್ಮನಿಗೆ ಶರೀರ ಪರಿಮಾಣವನ್ನು ಒಪ್ಪುವ ಜೈನಸಿದ್ಧಾಂತವು ಅತ್ಯಂತ ಅಯುಕ್ತವಾಗಿದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ನೈಕಸ್ಮಿನ್ನಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। अन्त्यावस्थितेश्चोभयनित्यत्वादविशेषात् ।।४।।**

**परिमाणाभावे स्वरूपाभावप्राप्त्याऽन्त्यपरिमाणस्थितेस्तदर्थत्वेन शरीरस्थितेरुभयनित्यत्वादविशेषेण सर्वशरीरनित्यत्वं स्यात् ।।४।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये नैकस्मिन्नधिकरणम् ।। १० ।।**

ಅನುವಾದ - ಶರೀರ ಎಷ್ಟು ಪರಿಮಾಣದಲ್ಲಿ ಇದೆಯೋ ಅಷ್ಟೇ ಪರಿಮಾಣದಲ್ಲಿ ಆತ್ಮನು ಇರುತ್ತಾನೆಂಬ ಜೈನರ ಅಭಿಪ್ರಾಯ ತಪ್ಪು. ಹಾಗೂ ಒಂದು ವೇಳೆ ಆತ್ಮನಿಗೆ ಶರೀರವಿಲ್ಲದಿದ್ದರೆ ಅದರ ಪರಿಮಾಣವೂ ಕೂಡ ಇರುವುದಿಲ್ಲ. ಪರಿಮಾಣ ಇಲ್ಲದಿದ್ದರೆ ಆತ್ಮನೂ ಇರಲು ಸಾಧ್ಯವಿಲ್ಲ. ಇದು ಜೈನರ ಅಭಿಪ್ರಾಯ. ಆದರೆ ಇದು ಸರಿಯಲ್ಲ. ಮೋಕ್ಷದಲ್ಲಿ ಆತ್ಮನಿದ್ದರೆ ಪರಿಮಾಣ ಇರಬೇಕು. ಪರಿಮಾಣಕ್ಕಾಗಿ ಮೋಕ್ಷದಲ್ಲಿಯೂ ಶರೀರ ಒಪ್ಪಬೇಕು. ಆ ಶರೀರವು ಅನಿತ್ಯವಾದರೆ ಮೋಕ್ಷವೇ ನಾಶವಾಗಬೇಕಾದೀತು. ಇನ್ನು ಶರೀರವನ್ನು ನಿತ್ಯವೆಂದರೆ ಮೋಕ್ಷದಲ್ಲಿರುವ ಶರೀರವು ನಿತ್ಯವಾದರೆ ಸಂಸಾರದಲ್ಲಿರುವ ಶರೀರಗಳು ಏಕೆ ನಿತ್ಯವಾಗಬಾರದು ? ಆದ್ದರಿಂದ ಆತ್ಮನಿಗೆ ಪರಿಮಾಣವನ್ನು ಒಪ್ಪುವ ಜೈನರು ಮತವು ಅಯುಕ್ತವಾಗಿದೆ.

ಪ್ರತಿಪದಾರ್ಥ:- ಪರಿಮಾಣಭಾವೇ = ಪರಿಮಾಣವೇ ಇಲ್ಲವಾದಲ್ಲಿ ಸ್ವರೂಪಾಭಾವಪ್ರಾಪ್ತ್ಯಾ = ಸ್ವರೂಪತವೇ ಇಲ್ಲದಂತಾಗುತ್ತದೆ. ಅಂತ್ಯಪರಿಮಾಣಸ್ಥಿತೇಃ = ಮೋಕ್ಷದಲ್ಲಿ ಆತ್ಮನಿರುವುದರಿಂದ, ತದರ್ಥತ್ವೇನ = ಅವನ ಇರುವಿಕೆಗಾಗಿ, ಶರೀರಸ್ಥಿತೇಃ = ಶರೀರ ಇರುವುದರಿಂದ, ಉಭಯನಿತ್ಯತ್ವಾತ್ = ಎರಡೂ ನಿತ್ಯವಾದ್ದರಿಂದ, ಅವಿಶೇಷೇಣ = ವ್ಯತ್ಯಾಸವಿಲ್ಲದ ಕಾರಣ, ಸರ್ವಶರೀರ ನಿತ್ಯತ್ವಂ = ಎಲ್ಲಾ ಶರೀರಗಳಿಗೆ ನಿತ್ಯತ್ವವನ್ನು, ಸ್ಯಾತ್ = ಒಪ್ಪಬೇಕಾಯಿತು.

ಇಲ್ಲಿಗೆ ನೈಕಸ್ಮಿನ್ನಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – द्वितीयं पक्षं प्रतिक्षिपत्सूत्रं पठित्वा व्याचष्टे – अन्त्येति।। शरीरावच्छेदमन्तरेणात्मनः स्वतः परिमाणाभावात् शरीरपरिमाणत्वं वदन् प्रष्टव्यः । किं मोक्षे जीवस्य परिमाणमस्ति न वेति । न तावद् द्वितीयः । परिमाणाभावे स्वरूपाभावप्राप्तेः । न हि परिमाणशून्यं द्रव्यमस्ति । अतो मोक्षे परिमाणमभ्युपगन्तव्यमेव ।**

ಶರೀರ ಇಲ್ಲದಿದ್ದರೆ ಆತ್ಮನಿಗೆ ಪರಿಣಾಮವೇ ಕೂಡದಿರಬೇಕಾದೀತು ಎಂಬ ಎರಡನೆಯ ಪಕ್ಷವನ್ನು ನಿರಾಕರಣೆ ಮಾಡುವ ಸೂತ್ರವನ್ನು 'ಅಂತ್ಯ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಶರೀರವು ಅವಚ್ಛೇದಕವಾಗದೆ ಆತ್ಮನಿಗೆ ಸಹಜವಾದ ಪರಿಮಾಣವು ಯುಕ್ತವಾಗುವುದಿಲ್ಲ. ಆದ್ದರಿಂದ ಶರೀರಪರಿಮಾಣ ಹೇಳುವವನನ್ನು ಕುರಿತು ಪ್ರಶ್ನಿಸುತ್ತೇವೆ. ಮೋಕ್ಷದಲ್ಲಿ ಜೀವನಿಗೆ ಪರಿಮಾಣವು ಇದೆಯೋ ಇಲ್ಲವೋ? ಎಂದು. ಎರಡನೆಯ ಪಕ್ಷ ಒಪ್ಪಲಾಗದು. ಪರಿಮಾಣ ಇಲ್ಲ ಎಂದರೆ ಜೀವಸ್ವರೂಪವೇ ಇಲ್ಲ ಎಂದಂತಾಯಿತು. ಪರಿಮಾಣಶೂನ್ಯವಾದ ಒಂದು ದ್ರವ್ಯವೇ ಇರಲು ಸಾಧ್ಯವಿಲ್ಲ. ಆದ್ದರಿಂದ ಮೋಕ್ಷದಲ್ಲೂ ಕೂಡ ಪರಿಮಾಣವನ್ನು ಅಂಗೀಕಾರ ಮಾಡಲೇಬೇಕು.

**तत्वप्रकाशिका – किं चातः । तथा सति तस्य शरीरमन्तरेणानुपपत्तेः मोक्षेऽपि शरीरमुरीकरणीयं प्रसज्येत । अङ्गीक्रियत एवातो नानिष्टमिति चेत्तर्हीदं भवानृष्टो व्याचष्टाम् । तच्छरीरमनित्यं नित्यं वा । नाद्यः । संसारसमानधर्मतापातात् । न द्वितीयः । यद्यात्मा देहश्चेत्युभयं नित्यं तर्हि इदानीन्तनसर्वशरीरैः किमपराद्धम् । तेषामपि नित्यत्वं स्यात् । शरीरत्वाविशेषादिति भावः । तस्माज्जैनमतस्यानुपपन्नत्वेनाविरोधकत्वाद्युक्तं जगत्कारणत्वलक्षणं विष्णोरिति सिद्धम् ।। ३६ ।।**

ಇದರಿಂದ ಏನಾಯಿತು ? ಎಂದರೆ ಪರಿಮಾಣವು ಶರೀರವಿಲ್ಲದೆ ಅನುಪಪನ್ನವಾಗುತ್ತದೆ. ಆದ್ದರಿಂದ ಮೋಕ್ಷದಲ್ಲಿಯೂ ಕೂಡ ಶರೀರವನ್ನು ಅಂಗೀಕಾರ ಮಾಡಬೇಕಾಗುತ್ತದೆ.

ನೈಕಸ್ಮಿನ್ನಧಿಕರಣ (೨-೨-೧೦)

ಅಂಗೀಕರಿಸುತ್ತೇವೆ ನಮಗೆ ಅದು ಅನಿಷ್ಟವಲ್ಲ ? ಎಂದು ಹೇಳಿದರೆ, ಇದು ತಪ್ಪು. ಹಾಗಾದರೆ ನಮ್ಮನ್ನು ಪ್ರಶ್ನಿಸಿದ ನೀನೇ ಇದನ್ನು ವ್ಯಾಖ್ಯಾನಿಸು. ಈ ಶರೀರವು ಅನಿತ್ಯವೋ? ನಿತ್ಯವೋ ? ಮುಕ್ತಿಯಲ್ಲಿರುವ ಶರೀರವು ಅನಿತ್ಯವಾದರೆ ಸಂಸಾರದ ಸಮಾನಧರ್ಮವನ್ನು ಮೋಕ್ಷದಲ್ಲಿ ಹೇಳಿದಂತೆ ಆಗುತ್ತದೆ.

ನಿತ್ಯವೆಂದೂ ಕೂಡ ಹೇಳಲಾಗದು. ಏಕೆಂದರೆ ಮೋಕ್ಷದಲ್ಲಿ ದೇಹ ಹಾಗೂ ಆತ್ಮ ಎರಡೂ ಕೂಡ ಮಿಥ್ಯಾಭೂತವಾದರೆ ಸಂಸಾರಾವಸ್ಥೆಯಲ್ಲಿ ಸಕಲ ಶರೀರಗಳಿಂದ ಮಾಡಲ್ಪಟ್ಟ ಅಪರಾಧವಾದರೂ ಏನು ? ಶರೀರತ್ವವೆಂಬ ಧರ್ಮವು ಉಭಯತ್ರ ಸಮಾನವಾದ್ದರಿಂದ ಸಂಸಾರಾವಸ್ಥೆಯಲ್ಲಿರುವ ಶರೀರವೂ ಕೂಡ ಮಿಥ್ಯಾಭೂತವೇ ಆಗಲಿ.

ಆದ್ದರಿಂದ ಜೈನಮತವು ಅನುಪಪನ್ನವಾಗಿದೆ. ಈ ಮತದ ವಿರೋಧವನ್ನು ನಮಗೆ ಹೇಳಲು ಸಾಧ್ಯವಿಲ್ಲ. ಹಾಗಾಗಿ ವಿಷ್ಣುವಿನ ಜಗತ್ಕಾರಣತ್ವಲಕ್ಷಣತ್ವವು ನಿರ್ದುಷ್ಟವೆಂದು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ನೈಕಸ್ಮಿನ್ನಧಿಕರಣ ಮುಗಿಯಿತು.

## ನೈಕಸ್ಮಿನ್ನಧಿಕರಣ
## (೨-೨-೧೦)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## नैकस्मिन्नधिकरणम्

### ಸ್ಯಾದ್ವಾದ ನಿರಾಕರಣೆಗಾಗಿ ನೈಕಸ್ಮಿನ್ನಧಿಕರಣ

**नैकस्मिन्नसम्भवात् ।। सदसदुभयमित्यादि ।। तत्र सदित्याद्यःप्रकारः । असदिति द्वितीयः । उभयं सदसदात्मकमिति तृतीयः । उभयविलक्षणमिति चतुर्थः। सदसदुभयविलक्षणमिति पञ्चमषष्ठौ । तत्र सत्तद्विलक्षणं चेति पञ्चमः । असत्तद्विलक्षणं चेति षष्ठः । सर्वं सदसदात्मकं नैतत्सर्वं सदसद्विलक्षणमिति सप्तम उक्त इति द्रष्टव्यम् ।**

ಜೈನರು ಈ ಜಗತ್ತು ಏಳುಪ್ರಕಾರ ಎಂದು ಹೇಳುತ್ತಾರೆ. ಅದರಲ್ಲಿ 'ಸತ್' ಎಂಬುದು ಮೊದಲ ಪ್ರಕಾರ. 'ಅಸತ್' ಎಂಬುದು ಎರಡನೆಯದು, 'ಉಭಯ' ಅಂದರೆ 'ಸದಸದಾತ್ಮಕ' ಎಂಬುದು ಮೂರನೆಯ ಪ್ರಕಾರ. 'ಉಭಯವಿಲಕ್ಷಣ' ಅಂದರೆ 'ಉಭಯಕ್ಕಿಂತ ಭಿನ್ನ' ಎಂಬುದು ನಾಲ್ಕನೇ ಪ್ರಕಾರ. 'ಸದಸದುಭಯವಿಲಕ್ಷಣ' ಎಂಬುದು ಐದನೇ ಹಾಗೂ ಆರನೇ ಪ್ರಕಾರ. 'ಅಸತ್' ಮತ್ತು 'ಅಸದ್ವಿಲಕ್ಷಣ' ಇದು ಆರನೇ ಪ್ರಕಾರ. 'ಸರ್ವಂ' ಎಂದರೆ 'ಸದಸದಾತ್ಮಕಂ ನೈತತ್ಸರ್ವಂ' ಅಂದರೆ 'ಸದಸದ್ವಿಲಕ್ಷಣ' ಇದು ಏಳನೇ ಪ್ರಕಾರ ಎಂದು ತಿಳಿಯಬೇಕು.

**स्यादस्ति स्यान्नास्ति स्यादस्ति च नास्ति च स्यादवक्तव्यं स्यादस्ति चावक्तव्यं च स्यादस्ति च स्यान्नास्ति चावक्तव्यं चेति हि क्षपणका आहुः ।**

ಈ ಎಲ್ಲಾ ಪ್ರಕಾರವನ್ನು ಜೈನರು ತಮ್ಮ ಗ್ರಂಥದಲ್ಲಿ ಹೇಳಿದ್ದಾರೆ. ೧. ಸ್ಯಾದಸ್ತಿ, ೨. ಸ್ಯಾನ್ನಾಸ್ತಿ, ೩. ಸ್ಯಾದಸ್ತಿ ಚ ನಾಸ್ತಿ, ೪. ಸ್ಯಾದವಕ್ತವ್ಯಂ, ೫. ಸ್ಯಾದಸ್ತಿ ಚ ಅವಕ್ತವ್ಯಂಚ, ೬. ಸ್ಯಾನ್ನಾಸ್ತಿ ಚ

ಅವಕ್ತವ್ಯಂ ಚ ೬. ಸ್ಯಾದಸ್ತಿ ಚ ಸ್ಯಾನ್ನಾಸ್ತಿ ಚ ಅವಕ್ತವ್ಯಂಚ ಎಂಬುದಾಗಿ. (ಇಲ್ಲಿ 'ಅವಕ್ತವ್ಯ' ಎಂದರೆ ಸದಸದ್‌ವಿಲಕ್ಷಣ ಅನಿರ್ವಚನೀಯ ಎಂದರ್ಥ)

**अत्र च स्याच्छब्दस्तिङंतप्रतिरूपकानेकान्तद्योतको निपातः ।**

'ಸ್ಯಾದಸ್ತಿ' ಮುಂತಾದ ಕಡೆಯಲ್ಲಿ ಇರುವ 'ಸ್ಯಾತ್' ಎಂಬ ಶಬ್ದ ಕ್ರಿಯಾಪದ ಎಂದು ತಿಳಿಯಬಾರದು. ಅದು ತಿಙಂತದಂತೆ (ಕ್ರಿಯಾಪದದಂತೆ) ತೋರುವ ಅನೇಕಾಂತ (ವಿಕಲ್ಪ) ದ್ಯೋತಕವಾದ ನಿಪಾತ (ಅವ್ಯಯ) ಎಂದು ತಿಳಿಯಬೇಕು.

**यथाऽहुः –**

**वाक्येष्वनेकान्तद्योतीगम्यं प्रतिविशेषणम् ।**
**स्यान्निपातोऽर्थयोगित्वात्तिङंतप्रतिरूपकः ।। इति ।**

ಇದನ್ನೇ ಹೀಗೆ ಹೇಳಿದ್ದಾರೆ -

'ವಾಕ್ಯೇಷ್ವನೇಕಾಂತದ್ಯೋತೀಗಮ್ಯಂ ಪ್ರತಿವಿಶೇಷಣಮ್ ।
ಸ್ಯಾನ್ನಿಪಾತೋಽರ್ಥಯೋಗಿತ್ವಾತ್ತಿಂಙತಪ್ರತಿರೂಪಕಃ ॥ ಎಂದು.

**एवञ्च सत्त्वमसत्त्वं सदसत्त्वं सदसद्विलक्षणत्वं सत्त्वे सति तद्विलक्षणत्वमसत्त्वे सति तद्विलक्षणत्वं सदसत्त्वे सति तद्विलक्षणत्वमित्यनियतसप्तप्रकारं विश्वम् ।**

ಈ ರೀತಿಯಾಗಿ ಪ್ರಪಂಚವು ಏಳು ವಿಧ - ೧) ಸತ್ವ, ೨) ಅಸತ್ವ, ೩) ಸದಸತ್ವ, ೪) ಸದಸದ್ ವಿಲಕ್ಷಣತ್ವ, ೫) ಸತ್ವ ಇದ್ದು ಸದ್‌ವಿಲಕ್ಷಣತ್ವ, ೬) ಅಸತ್ವ ಇದ್ದು ಅಸದ್‌ವಿಲಕ್ಷಣತ್ವ, ೭) ಸದಸತ್ವ ಇದ್ದು ಸದಸದ್‌ವಿಲಕ್ಷಣತ್ವ ಎಂಬುದಾಗಿ.

**एवं नित्यत्वभिन्नत्वादावपि सप्तप्रकारा ऊह्याः ।**

ಹೀಗೆ ನಿತ್ಯತ್ವ, ಭಿನ್ನತ್ವ ಮುಂತಾದವುಗಳಲ್ಲೂ ಊಹಿಸಿಕೊಳ್ಳಬೇಕು. (೧) ನಿತ್ಯ, ೨) ಅನಿತ್ಯ, ೩) ನಿತ್ಯಾನಿತ್ಯ, ೪) ನಿತ್ಯಾನಿತ್ಯವಿಲಕ್ಷಣ, ೫) ನಿತ್ಯತದ್‌ವಿಲಕ್ಷಣ, ೬) ಅನಿತ್ಯ ತದ್‌ವಿಲಕ್ಷಣ, ೭) ನಿತ್ಯಾನಿತ್ಯ ತದ್‌ವಿಲಕ್ಷಣ, ಹೀಗೆ)

**उक्तं हि –**

**तद्विधानविवक्षायां स्यादस्तीति गतिर्भवेत् ।**
**स्यान्नास्तीति प्रयोगस्स्यात्तन्निषेधो विवक्षितः।। इत्यादि ।**

ಇದನ್ನೇ ಹೇಳಿದ್ದಾರೆ,

''ತದ್ವಿಧಾನವಿವಕ್ಷಾಯಾಂ ಸ್ಯಾದಸ್ತೀತಿ ಗತಿರ್ಭವೇತ್ ।
ಸ್ಯಾನ್ನಾಸ್ತೀತಿ ಪ್ರಯೋಗಸ್ಸ್ಯಾತ್ತನ್ನಿಷೇಧೋ ವಿವಕ್ಷಿತಃ ॥

ವಿಧಿಯ ವಿವಕ್ಷೆ ಇದ್ದಾಗ 'ಸಾದಸ್ತಿ' ಎಂದು, ನಿಷೇಧದ ವಿವಕ್ಷೆ ಇದ್ದಾಗ 'ಸ್ಯಾನ್ನಾಸ್ತಿ' ಎಂದು ಪ್ರಯೋಗ ಮಾಡಬೇಕು ಎಂದು.

**टीकायां तु –**

**आह क्षपणको विश्वं सदसद्द्वयमद्वयम् ।**
**द्वयाद्वयमतत्सर्वं सप्तभंगिसनातम् ।।**

**इत्यनुव्याख्यानानुसारेण संक्षिप्योक्तम् ।**

ಟೀಕಾದಲ್ಲಿಯಾದರೋ,

''ಆಹ ಕ್ಷಪಣಕೋ ವಿಶ್ವಂ ಸದಸದ್ವಯಮದ್ವಯಮ್ ।
ದ್ವಯಾದ್ವಯಮತಸ್ಸರ್ವಂ ಸಪ್ತಭಂಗಿಸನಾತಮ್ ॥

ಎಂಬ ಅನುವ್ಯಾಖ್ಯಾನದ ಪ್ರಕಾರ ಸಂಕ್ಷೇಪವಾಗಿ ಜೈನಮತದ ಅನುವಾದ ಮಾಡಲಾಗಿದೆ.

## ಶ್ರೀರಾಘವೇಂದ್ರತೀರ್ಥವಿರಚಿತ

# ಪ್ರಕಾಶ

**प्रकाशः –**

**नैकस्मिन्नसम्भवात्** ।। टीकाक्षरार्थमाह – **सदसदुभयमित्यादीति** ।। प्रतीकग्रहणमेतत् । टीकोक्तार्थे संवादं दर्शयति ।। **स्यादस्तीति** ।। नन्वस्ति स्यादिति वर्तमानत्वविधिवाचिनोः कथमेकार्थपर्यवसानमित्यतस्तद्विवृणोति ।। **अत्र चेति** ।। एतेन ''स्याद्वादिमतं दूषयति'' इति भाष्यं विवृतम् ।।

ಟೀಕಾದಲ್ಲಿರುವ ಪದಗಳಿಗೆ ಅರ್ಥ ಹೇಳುತ್ತಿದ್ದಾರೆ 'ಸದಸದುಭಯಂ' ಎಂಬುದಾಗಿ. ಇದು (ಸದಸದುಭಯಂ) ಎಂಬುದು ಪ್ರತೀಕಗ್ರಹಣ. ಟೀಕಾದಲ್ಲಿ ಹೇಳಿರುವುದಕ್ಕೆ ಸಂವಾದವನ್ನು ಹೇಳುತ್ತಿದ್ದಾರೆ 'ಸ್ಯಾದಸ್ತಿ' ಎಂಬುದಾಗಿ. 'ಸ್ಯಾತ್ ಅಸ್ತಿ' ಎಂಬಲ್ಲಿ 'ಅಸ್ತಿ' ಎಂಬ ವರ್ತಮಾನಕಾಲಿಕವಾದ ಪದ, ಹಾಗೂ 'ಸ್ಯಾತ್' ಎಂಬ ವಿಧಿವಾಚಕವಾದ ಪದ ಎರಡೂ ಹೇಗೆ ಒಟ್ಟಿಗೆ ಒಂದು ಅರ್ಥವನ್ನು ಹೇಳಲು ಸಾಧ್ಯ?

ಎಂಬ ಪ್ರಶ್ನೆ ಬಂದರೆ ಅದಕ್ಕೆ ಉತ್ತರವನ್ನು 'ಅತ್ರ' ಎಂಬುದಾಗಿ ಹೇಳುತ್ತಿದ್ದಾರೆ. ಇಲ್ಲಿಯವರೆಗಿನ ಟೀಕಾದಿಂದ 'ಸ್ಯಾದ್ವಾದಿಮತಂ ದೂಷಯತಿ' ಎಂಬ ಭಾಷ್ಯವನ್ನು ವಿವರಿಸಿದಂತಾಯಿತು.

**प्रकाशः – वाक्येष्विति ।।** स्यादस्तीत्यादिवाक्येषु स्यादित्ययं शब्दस्तिङंतसदृशो निपात इत्यन्वयः । कोऽसावस्यार्थ उक्त इत्यत उक्तमनेकान्तद्योतीति ।। अनैयत्यद्योतकत्वं स्वातन्त्र्येण नेत्याह – **गम्यं प्रतीति।।**

'ಸ್ಯಾದಸ್ತಿ' ಮುಂತಾದ ವಾಕ್ಯಗಳಲ್ಲಿ 'ಸ್ಯಾತ್' ಎಂಬುದು ತಿಙಂತಕ್ಕೆ ಸದೃಶವಾದ ನಿಪಾತ ಎಂದು ಅನ್ವಯ. ಈ 'ಸ್ಯಾತ್' ಎಂಬುದಕ್ಕೆ ಈ ರೀತಿಯಾದ ಅರ್ಥವು ಎಲ್ಲಿ ಹೇಳಿದೆ ? ಎಂದರೆ ಅದಕ್ಕೆ 'ಉಕ್ತಮನೇಕಾಂತದ್ಯೋತಿ' ಎಂಬ ಕಾರಿಕೆ ಹೊರಟಿದೆ. ಈ 'ಸ್ಯಾತ್' ಪದದಿಂದ ತಿಳಿಯುವ ಅನೈಯತ್ಯ (ಅನಿಯಮ) ಸ್ವತಂತ್ರವಾಗಿ ಅಲ್ಲ ಎಂಬುದನ್ನು 'ಗಮ್ಯಂ ಪ್ರತಿ' ಎಂಬುದರಿಂದ ಹೇಳುತ್ತಿದ್ದಾರೆ.

**प्रकाशः** – गम्यं अस्तीत्यादि । कुतोऽस्यानेकान्तद्योतित्वमित्यतोऽर्थयोगित्वादिति । अर्थवत्त्वान्निमित्तात् । अर्थवत्त्वान्यथानुपपत्त्येत्यर्थः । यद्ययमनेकान्तद्योतको न स्यात्तर्हि स्यादस्तीति वाक्ये स्यादित्येतदनर्थकं स्यात् ।

ಇಲ್ಲಿ 'ಗಮ್ಯ' ಯಾವುದು ಎಂದರೆ, ಅಸ್ತಿ, ನಾಸ್ತಿ ಇತ್ಯಾದಿ. ಈ 'ಸ್ಯಾತ್' ಎಂಬುದಕ್ಕೆ ಅನೇಕಾಂತದ್ಯೋತಕತ್ವ ಹೇಗೆ? ಎಂದರೆ ಅದಕ್ಕೆ ಉತ್ತರ 'ಅರ್ಥಯೋಗಿತ್ವಾತ್' ಎಂಬುದಾಗಿ. ಅರ್ಥವತ್ವ ಇರುವುದರಿಂದ. 'ಸ್ಯಾತ್' ಪದಕ್ಕೆ ಅರ್ಥ ಇದೆ. ಅದನ್ನು ಬೇರೆ ರೀತಿ (ಕ್ರಿಯಾಪದವಾಗಿ) ಕೂಡಿಸಲು ಸಾಧ್ಯವಿಲ್ಲ. ಹಾಗಾಗಿ ಹೀಗೆ ಅರ್ಥ ಹೇಳಲೇಬೇಕು. ಒಂದು ವೇಳೆ ಈ 'ಸ್ಯಾತ್' ಎಂಬ ಪದವು ಅನೇಕಾಂತವನ್ನು ಹೇಳುತ್ತಿಲ್ಲವೆಂದಾದರೆ ಆಗ 'ಸ್ಯಾದಸ್ತಿ' ಇದೇ ಮೊದಲಾದ ವಾಕ್ಯಗಳಲ್ಲಿ ಈ ಪದವು ಅನರ್ಥಕವೆಂದಾಗುತ್ತಿತ್ತು.

**प्रकाशः** – अनेकान्तद्योतकश्चेत्तदा स्यादस्ति कथञ्चिदस्तीति स्यात्पदात्कथञ्चिदर्थोऽस्तीत्यनेनानूदितः प्रतीयत इति नानर्थक्यमिति भामतीकल्पतर्वोरयं श्लोको व्याख्यातः ।

ಈ 'ಸ್ಯಾತ್' ಪದವು ಅನೇಕಾಂತದ್ಯೋತಕ ಎಂದು ಹೇಳಿದರೆ ಆಗ 'ಸ್ಯಾದಸ್ತಿ' ಎಂಬುದಕ್ಕೆ 'ಕಥಂಚಿದಸ್ತಿ' ಎಂಬ ಅರ್ಥ ಬಂದು 'ಸ್ಯಾತ್' ಪದಕ್ಕೆ 'ಕಥಂಚಿತ್' ಎಂಬ ಅರ್ಥ ಬರುತ್ತದೆ. 'ಅಸ್ತಿ' ಎಂಬ ಪದದಿಂದ ಯಾವುದನ್ನು ಹೇಳುತ್ತೇವೋ ಅದು 'ಕಥಂಚಿತ್' ಎಂಬುದಾಗಿ ವಾಕ್ಯಾರ್ಥವಾಗುತ್ತದೆ. ಇದೇ ರೀತಿಯಾಗಿ ಭಾಮತೀ ಹಾಗೂ ಕಲ್ಪತರು ಗ್ರಂಥಗಳಲ್ಲಿ ಈ ಶ್ಲೋಕಕ್ಕೆ ಅರ್ಥ ಹೇಳಿದ್ದಾರೆ.

**प्रकाशः** – स्यात्पदेनानेकान्तद्योतने किं लब्धमित्यतस्स्यादस्तीति वाक्यार्थं निष्कृष्याह – **एवं चेति ।।** ''एतच्चोपलक्षणम् । नित्यत्वानित्यत्वभिन्नत्वाभिन्नत्वादिरूपेणानेकान्तवादोऽवगन्तव्य'' इति सुधोक्तेराह – **एवमिति ।।**

'ಸ್ಯಾತ್' ಎಂಬ ಪದಕ್ಕೆ ಅನೇಕಾಂತ ಎಂಬ ಅರ್ಥ ಹೇಳಿದಮೇಲೆ ಏನು ಪ್ರಯೋಜನ ಸಿದ್ಧವಾಯಿತು? ಎಂಬುದಕ್ಕೆ ಆ ವಾಕ್ಯಕ್ಕೆ ಅರ್ಥವನ್ನು ಸ್ಪಷ್ಟವಾಗಿ ಹೇಳುತ್ತಿದ್ದಾರೆ 'ಏವಂ ಚ' ಎಂಬುದರಿಂದ. ಈ ಸತ್ವ ಅಸತ್ವ ಎಂಬುದು ಉಪಲಕ್ಷಣ (ಉದಾಹರಣೆಗಾಗಿ ಹೇಳಿದ್ದು). ನಿತ್ಯತ್ವ, ಅನಿತ್ಯತ್ವ, ಭಿನ್ನತ್ವ, ಅಭಿನ್ನತ್ವ ಇದೇ ಮೊದಲಾದ ಅನೇಕಾಂತವಾದವು ತಿಳಿಯಲ್ಪಡಬೇಕು ಎಂಬುದಾಗಿ ಸುಧಾದಲ್ಲಿ ಹೇಳಿದ್ದಾರೆ. ಹಾಗಾಗಿ ವ್ಯಾಸರಾಯರು 'ಏವಂ' ಎಂಬುದಾಗಿ ಹೇಳಿದ್ದಾರೆ.

**प्रकाशः –** ननु स्यादस्तीत्यादिवाक्यात्सत्त्वमसत्त्वमित्यादिप्रकाराः कथं लब्धा इत्यतस्तद्विवरणपरं तदीयश्लोकं संवादयति – **तद्विधानेति** ।। बुद्धिस्थसत्त्वनित्यत्वादिधर्मविधानविवक्षायां स्यादस्तीति गतिः प्रयोगो भवेदित्यर्थः । तन्निषेधे सत्त्वादिनिषेधे । असत्त्वादिप्रकारे विवक्षित इत्यर्थः।

ಪ್ರಶ್ನೆ- ಈ 'ಸ್ಯಾದಸ್ತಿ' ಮೊದಲಾದ ವಾಕ್ಯಗಳಿಂದ ನೀವು ಹೇಳುವ ಸತ್ವ, ಅಸತ್ವ, ಇದೇ ಮೊದಲಾದ ಅರ್ಥ ಹೇಗೆ ತಿಳಿಯಿತು?

ಉತ್ತರ - ಜೈನರೇ ತಮ್ಮ ಗ್ರಂಥಗಳಲ್ಲಿ ಹೇಳಿದ್ದಾರೆ. ಅವರ ಗ್ರಂಥದಲ್ಲಿರುವ ಶ್ಲೋಕವನ್ನೇ ಹೇಳುತ್ತಿದ್ದಾರೆ 'ತದ್ವಿಧಾನ' ಎಂಬುದಾಗಿ.

ನಮಗೆ ಸತ್ವ, ನಿತ್ಯತ್ವ ಇದೇ ಮೊದಲಾದ ಧರ್ಮಗಳನ್ನು ವಿಧಿಸುವ ಇಚ್ಛೆ ಇದ್ದರೆ ಆಗ 'ಸ್ಯಾದಸ್ತಿ' ಎಂಬುದಾಗಿ ವಾಕ್ಯಪ್ರಯೋಗ ಮಾಡಬೇಕು. ಈ ಧರ್ಮಗಳ ನಿಷೇಧ ಮಾಡುವ ವಿವಕ್ಷಾ ಇದ್ದರೆ ಆಗ 'ಸ್ಯಾನ್ನಾಸ್ತಿ' ಎಂಬುದಾಗಿ ಪ್ರಯೋಗ ಮಾಡಬೇಕು ಎಂದರ್ಥ.

**प्रकाशः –** इत्यादीत्यादिपदेन-

क्रमेणोभयवांछायां प्रयोगस्समुदायभाक् ।
युगपत्तद्विवक्षायां स्यादवाच्यमशक्तितः ।
आद्यावाच्यविवक्षायां पञ्चमो भङ्ग इष्यते ।
अन्त्यावाच्यविवक्षायां षष्ठभङ्गसमुद्भवः ।
समुच्चयेन युक्तश्च सप्तमो भङ्ग इष्यत ।।

इति कल्पतरूदाहृतसार्धश्लोकौ ग्राह्यौ ।

ಮೂಲದಲ್ಲಿರುವ 'ಇತ್ಯಾದಿ' ಎಂಬ ಪದದಿಂದ ಕಲ್ಪತರು ಎಂಬ ಗ್ರಂಥದಲ್ಲಿ ಹೇಳಿರುವ ಕಾರಿಕೆಯ ಉಳಿದ ಭಾಗವನ್ನು ತೆಗೆದುಕೊಳ್ಳಬೇಕು.

**प्रकाशः –** अस्यार्थः । आद्यः सत्त्वैकान्तवादः सांख्यादिभिरङ्गीकृतः । तद्विधिविवक्षायां स्यादस्तीति प्रयोगः । शून्यवाद्यभिमते तन्निषेधरूपासत्त्वप्रकारे

विवक्षिते सति स्यान्नास्तीति प्रयोगः । मध्ये सत्त्वं प्रागूर्ध्वं प्रागभावध्वंसकालेऽसत्त्वमिति क्रमेणोभयं सदसत्त्वं वैशेषिकादिभिरङ्गीकृतमिति तद्वांछायां स्यादस्ति स्यान्नास्तीति समुदायप्रयोगः । युगपदेकदा सदसत्त्वविवक्षायामशक्तितो शक्यत्वादवाच्यमनिर्वचनीयं स्यात् । सदसद्विलक्षणमिति स्यात् । स्यादवक्तव्यमिति प्रयोगस्स्यादित्यर्थः । आद्यावाच्येति सत्त्वतद्वैलक्षण्य-विवक्षायां स्यादस्ति चावक्तव्यं चेति पक्षः पञ्चम इत्यर्थः । अन्त्यावाच्येत्यसत्त्वतद्वैलक्षण्यविवक्षायां स्यान्नास्ति चावक्तव्यं चेति पक्षः षष्ठभङ्ग इत्यर्थः । समुच्चयेन सत्त्वासत्त्वयोस्तद्वैलक्षण्ययोश्च समुच्चयेन सदसत्त्वे सति सदसद्विलक्षणत्वमित्येवं रूपेण युक्त इत्यर्थः। स्यादस्ति च नास्तीति चावक्तव्यं चेति पक्षस्सप्तमभङ्ग इति

ಮೊದಲನೆಯ ಸತ್ವೈಕಾಂತವಾದವು ಸಾಂಖ್ಯರಿಂದ ಅಂಗೀಕೃತವಾದುದು. ಅದರ ವಿಧಾನ ಮಾಡುವ ವಿವಕ್ಷಾ ಇದ್ದರೆ ಆಗ 'ಸ್ಯಾದಸ್ತಿ' ಎಂದು ಪ್ರಯೋಗ.

ಎರಡನೆಯದು ಬೌದ್ಧರಿಂದ ಅಂಗೀಕೃತವಾದ ಅಸತ್ವವಾದ, ಅದು ಸತ್ವನಿಷೇಧರೂಪ. ಆಗ 'ಸ್ಯಾನ್ನಾಸ್ತಿ' ಎಂದು ಪ್ರಯೋಗ.

ಮೂರನೆಯದು ವೈಶೇಷಿಕರು ಹೇಳುವ ಸದಸತ್ವವಾದ. ವಸ್ತುವು ಹುಟ್ಟುವ ಮೊದಲು ಅಸತ್ ಎಂದರೆ ಅದರ ಪ್ರಾಗಭಾವ ಇರುವ ಕಾಲ ಸತ್ ನಾಶವಾದ ಮೇಲೆ ಅಸತ್ ಅಂದರೆ ಧ್ವಂಸ. ಹೀಗೆ ಪ್ರತಿಯೊಂದು ವಸ್ತುವೂ ಸದಸತ್ ಎಂದು. ಇದನ್ನು ವಿವಕ್ಷಾ ಮಾಡಿದಾಗ 'ಸ್ಯಾದಸ್ತಿ' 'ಸ್ಯಾನ್ನಾಸ್ತಿ' ಎಂಬ ಸಮುದಾಯ ಪ್ರಯೋಗ.

ನಾಲ್ಕನೆಯದು ಅದ್ವೈತಿಗಳು ಹೇಳುವ ಸದಸದ್‌ವಿಲಕ್ಷಣ ಎಂಬ ವಾದ. ಒಂದೇ ಕಾಲದಲ್ಲಿ ಸತ್ವ ಹಾಗೂ ಅಸತ್ವ ಎರಡೂ ಇರಲು ಸಾಧ್ಯವಿಲ್ಲ. ಹಾಗಾಗಿ ಈ ಪ್ರಪಂಚವು ಅವಾಚ್ಯ, ಅನಿರ್ವಚನೀಯ ಎಂದು. ಇದರ ವಿವಕ್ಷಾ ಇದ್ದಾಗ 'ಸ್ಯಾತ್ ವಕ್ತವ್ಯಂ' ಎಂದು ಪ್ರಯೋಗ.

ಐದನೆಯದು 'ಸ್ಯಾತ್ ತದ್ವಿಲಕ್ಷಣ' ಎಂಬ ಪಕ್ಷ. ಅದರ ವಿವಕ್ಷಾ ಇದ್ದಲ್ಲಿ 'ಸ್ಯಾದಸ್ತಿ ಚಾವಕ್ತವ್ಯಂ' ಎಂದು ಪ್ರಯೋಗ.

ಆರನೆಯದು 'ಅಸತ್ ತದ್ವಿಲಕ್ಷಣ' ಎಂಬ ಪಕ್ಷ. ಅದರ ವಿವಕ್ಷಾ ಇದ್ದಲ್ಲಿ 'ಸ್ಯಾನ್ನಾಸ್ತಿ ಚಾವಕ್ತವ್ಯಂ' ಎಂದು ಪ್ರಯೋಗ.

ಏಳನೆಯದು 'ಸದಸದ್ವಿಲಕ್ಷಣ' ಎಂಬ ಪಕ್ಷ. ಅದರ ವಿವಕ್ಷಾ ಇದ್ದಲ್ಲಿ 'ಸ್ಯಾದಸ್ತಿ ಚ ನಾಸ್ತಿ ಚ ಅವಕ್ತವ್ಯಂ' ಎಂದು ಪ್ರಯೋಗ.

**प्रकाशः** – कुतः टीकायां नोक्त इत्यत आह – **टीकायां त्विति** ।। श्लोकार्थस्सुधायां व्यक्तः ।।

ನೈಕಸ್ಮಿನ್ನಧಿಕರಣ (2-2-10)

ಟೀಕಾದಲ್ಲಿ ಇದನ್ನೆಲ್ಲಾ ವಿಸ್ತಾರವಾಗಿ ಏಕೆ ಹೇಳಿಲ್ಲ ? ಎಂದರೆ ಅದಕ್ಕೆ 'ಟೀಕಾಯಾಂ' ಎಂಬ ವಾಕ್ಯ ಉತ್ತರ ಹೇಳುತ್ತದೆ. ಮೂಲದಲ್ಲಿರುವ ಅನುವ್ಯಾಖ್ಯಾನದ ಅರ್ಥ ಸುಧಾದಲ್ಲಿ ಸ್ಪಷ್ಟವಾಗಿದೆ.

### ಅದ್ವೈತಮತ ನಿರಾಕರಣೆ

## तात्पर्यचन्द्रिका

**अत्राद्यतृतीयसूत्रयोरस्माकं परेषां च प्रमेये योजनायां चाविरोधः ।**

ಈ ಅಧಿಕರಣದ ಮೊದಲನೇ ಹಾಗೂ ಮೂರನೇ ಸೂತ್ರದ ಅರ್ಥದಲ್ಲಿಯಾಗಲೀ ಪದಯೋಜನೆಯಲ್ಲಾಗಲೀ ನಮಗೂ ಅದ್ವೈತಿಗಳಿಗೂ ಯಾವುದೇ ವಿರೋಧವಿಲ್ಲ.

**यत्तूक्तं परैः यथैकस्मिन्सप्तभंग्यसम्भव एवमात्मनो देहपरिमाणत्वे अकात्स्र्न्यं परिच्छिन्नत्वं स्यात् । ततश्चानित्यत्वं स्यादिति द्वितीयार्थ इति तन्न ।**

ಈ ಅಧಿಕರಣದ ಎರಡನೇ ಸೂತ್ರ ''ಏವಂಚಾಕಾರ್ತ್ಸ್ನ್ಯಂ' ಎಂಬುದಕ್ಕೆ ಅದ್ವೈತಿಗಳು ಹೇಳುವ ಅರ್ಥ ಸರಿಯಲ್ಲ. ಈ ಸೂತ್ರದಲ್ಲಿರುವ 'ಏವಂ' ಎಂಬ ಶಬ್ದಕ್ಕೆ ಅವರು ಹಿಂದಿನ ಸೂತ್ರದಲ್ಲಿ ಪ್ರಸಕ್ತವಾದ ಒಂದೇ ವಸ್ತುವಿನಲ್ಲಿ ಸಪ್ತಪ್ರಕಾರತ್ವ ಹೇಗೆ ಕೂಡುವುದಿಲ್ಲವೋ 'ಹಾಗೇ' ಎಂದು ಅರ್ಥ ಮಾಡಿದ್ದಾರೆ. ಆದ್ದರಿಂದ ಅವರ ಪ್ರಕಾರ ಹಿಂದೆ ಹೇಳಿದ್ದು ಹೇಗೆ ಅನುಪಪನ್ನವೋ ಹಾಗೇ ಆತ್ಮನು ದೇಹಪರಿಮಾಣ ಒಪ್ಪಬೇಕಾಗುತ್ತದೆ. ಆಗ ಆತ್ಮನಿಗೆ ಅಪರಿಪೂರ್ಣತೆ ಬರಬೇಕಾಗುತ್ತದೆ. ಅದರ ಪರಿಣಾಮವಾಗಿ ಆತ್ಮನು ಅನಿತ್ಯ ಎಂದಾಗಬೇಕಾಗುತ್ತದೆ. (ಯಾವುದು ಪರಿಚ್ಛಿನ್ನವೋ ಅದು 'ಅನಿತ್ಯ' ಎಂಬ ವ್ಯಾಪ್ತಿ ಇರುವುದರಿಂದ) ಎಂಬುದಾಗಿ ಅರ್ಥ. ಇದು ತಪ್ಪು.

**मम मत इव सूत्रे जैनमतप्रसङ्गसन्निधापितदेहपरिमाणत्वरूपापादक-सूचनाभावेन न्यूनत्वात् ।**

ನಿಮ್ಮ ಮತದ ಪ್ರಕಾರ ಸೂತ್ರದಲ್ಲಿ ಆಪಾದಕವನ್ನು ಸೂಚಿಸುವ ಪದವೇ ಇಲ್ಲ. ಇಲ್ಲಿ ಆಪಾದಕ ಯಾವುದೆಂದರೆ ಆತ್ಮನು ದೇಹಪರಿಮಾಣ ಎಂದಾದರೆ ಎಂಬುದು. ಈ ಆಪಾದಕವು ನಮ್ಮ ಮತದಲ್ಲಿ 'ಏವಂ' ಎಂಬುದರಿಂದ ಸೂಚಿತವಾಗಿದೆ. ಪ್ರಕೃತದಲ್ಲಿ ಜೈನರ ನಿರಾಕರಣೆ ಮಾಡುತ್ತಿರುವದರಿಂದ ಅವರ ಮತದಲ್ಲಿ ಆತ್ಮನು ದೇಹಪರಿಮಾಣ ಎಂದು ಒಪ್ಪಿರುವುದರಿಂದ ಅದನ್ನು ಇಟ್ಟುಕೊಳ್ಳಲಾಗಿದೆ. ನಿಮ್ಮ ಮತದಲ್ಲಿ 'ಏವಂ' ಎಂಬುದಕ್ಕೆ ಬೇರೆ ಅರ್ಥ ಹೇಳಿರುವುದರಿಂದ ಆಪಾದಕ ಸೂಚಕವಾದ ಪದವಿಲ್ಲ.

**जैनमतप्रसङ्गसन्निधापितत्वादेवंशब्देन देहपरिमाणत्वपरामर्शोऽयुक्तः ।**

ಜೈನಮತದ ಪ್ರಸಕ್ತಿ ಇರುವುದರಿಂದ 'ಏವಂ' ಎಂಬುದಕ್ಕೆ ಆತ್ಮನು ದೇಹಪರಿಮಾಣ ಎಂದಾದರೆ ಎಂಬುದಾಗಿಯೇ ಅರ್ಥ ಹೇಳಬೇಕು.

**देहपरिमाणत्वेनैवानित्यत्वापादनसम्भवेन मध्य आत्माकार्त्स्न्यापादनवैयर्थ्याच्च ।**

ದೇಹಪರಿಮಾಣವನ್ನು ಇಟ್ಟುಕೊಂಡೇ ಅನಿತ್ಯತ್ವವನ್ನು ಆಪಾದನೆ ಮಾಡಲು ಬರುವಾಗ ನೀವು ಮಧ್ಯದಲ್ಲಿ ಅಪರಿಪೂರ್ಣತೆಯನ್ನು ಆಪಾದನೆ ಮಾಡಿದ್ದು ವ್ಯರ್ಥ.

(ಹಾಗಾಗಿ ನಾವು ಹೇಳುವಂತೆ ಆತ್ಮನಿಗೆ ದೇಹಪರಿಮಾಣವನ್ನು ಅಂಗೀಕರಿಸಿದರೆ ಆಗ ಆತ್ಮನಿಗೆ ಅಪರಿಪೂರ್ಣತೆ ಬರಬೇಕಾಗುತ್ತದೆ ಎಂಬುದೇ ಸರಿಯಾದ ಅರ್ಥ)

**यच्चोक्तं मोक्षस्थस्यान्त्यपरिमाणस्य नित्यत्व आदिमध्यपरि-माणयोरपि नित्यत्वप्रसङ्गादिति वा आदिमध्यावस्थयोरन्त्यपरिमाणस्य स्थितिप्रसङ्गादिति वा चतुर्थ ''उभयनित्यत्वात्'' इत्यस्यार्थ इति तन्न ।**

ನಾಲ್ಕನೇ ಸೂತ್ರ ''ಅಂತ್ಯಾವಸ್ಥಿತೇರುಭಯನಿತ್ಯತ್ವಾದವಿಶೇಷಃ' ಎಂಬ ಸೂತ್ರಕ್ಕೆ ಅದ್ವೈತಿ ಹೇಳುವ ಅರ್ಥ ತಪ್ಪು. ಅವನು ಎರಡು ರೀತಿ ಅರ್ಥ ಹೇಳಿದ್ದಾನೆ. ಮೊದಲನೆಯದಾಗಿ ಮೋಕ್ಷದಲ್ಲಿರುವ ಅಂತ್ಯಪರಿಮಾಣವು ನಿತ್ಯ ಎಂದಾದರೆ ಆಗ ಆದಿ, ಮಧ್ಯ ಪರಿಮಾಣಗಳೂ ನಿತ್ಯವಾಗಬೇಕು ಎಲ್ಲವೂ ಪರಿಮಾಣವೇ ಆದ್ದರಿಂದ ಎಂದು. ಎರಡನೆಯದಾಗಿ ಅಂತ್ಯದಲ್ಲಿ (ಮೋಕ್ಷದಲ್ಲಿ) ಜೀವನ ಪರಿಮಾಣವು ಅವಸ್ಥಿತ (ಒಂದೇ ರೀತಿ) ವಾಗಿರುವುದರಿಂದ ಆದಿ ಮಧ್ಯಾವಸ್ಥೆಗಳಲ್ಲಿಯೂ ಅದೇ ಪರಿಮಾಣವನ್ನು ಹೇಳಬೇಕು. ಅಂದರೆ ಆತ್ಮನು ಅಣುವೋ ಮಹತ್ತೋ ಆಗಬೇಕು ದೇಹಪರಿಮಾಣನಾಗಲಾರ ಎಂದರ್ಥ.

**संसारस्यानादित्वेन परिमाणस्यावस्थाया वाऽऽदित्वायोगात् ।**

ಸಂಸಾರವು ಅನಾದಿಯಾದ್ದರಿಂದ ಪರಿಮಾಣಕ್ಕೆ ಅಥವಾ ಅವಸ್ಥೆಗೆ ಜನ್ಯತ್ವವು ಸಾಧ್ಯವಿಲ್ಲ (ಮೊದಲು ಪರಿಮಾಣ, ಅನಂತರ ಅವಸ್ಥೆ ಎಂದು ಹೇಳಲು ಸಾಧ್ಯವಿಲ್ಲ ಎಂದರ್ಥ)

**आद्याभावे मध्यमत्वस्याप्ययोगाच्च ।**

ಆದಿಯೇ ಇಲ್ಲವೆಂದ ಮೇಲೆ ಮಧ್ಯಾವಸ್ಥೆಯೂ ಇಲ್ಲವೇ ಇಲ್ಲ.

**द्वितीयपक्षे नित्यपदस्य स्थितिलक्षकत्वापाताच्च ।**

ಎರಡನೇ ವ್ಯಾಖ್ಯಾನ ಪ್ರಕಾರ ಸೂತ್ರದಲ್ಲಿರುವ ನಿತ್ಯ ಎಂಬ ಪದಕ್ಕೆ ಸ್ಥಿತಿ ಎಂಬ ಅರ್ಥದಲ್ಲಿ ಲಕ್ಷಣಾ ಎಂದು ಹೇಳಬೇಕು. ಇದು ದೋಷ.

**ನೈಕಸ್ಮಿನ್ನಧಿಕರಣ (2-2-10)**

**तस्माट्टीकोक्तरीत्योभयशब्दो देहात्मपरः ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् नैकस्मिन्नधिकरण सम्पूर्णम् ॥१०॥**

ಹಾಗಾಗಿ ಟೀಕಾದಲ್ಲಿ ಹೇಳಿರುವಂತೆ 'ಉಭಯ' ಶಬ್ದವು ದೇಹ ಹಾಗೂ ಆತ್ಮಪರ ಎಂದು ಹೇಳಬೇಕು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ನೈಕಸ್ಮಿನ್ನಧಿಕರಣವು ಸಂಪೂರ್ಣವಾಯಿತು

**प्रकाशः –**

तृतीयेति ॥ ''नच पर्यायादपि'' इत्यादिसूत्र इत्यर्थः । परेषामित्युपलक्षणम्। केषाञ्चिदपीत्यपि ध्येयम् ।

ಮೂರನೇ ಸೂತ್ರ ಎಂದರೆ '' ನ ಚ ಪರ್ಯಾಯಾದಪಿ'' ಎಂಬ ಸೂತ್ರ. ಮೂಲದಲ್ಲಿ 'ಪರೇಷಾಂ' ಎಂಬುದು ಉಪಲಕ್ಷಣವಾಗಿದೆ. 'ಕೇಷಾಂಚಿತ್' ಎಂಬುದನ್ನೂ ಗ್ರಹಿಸಬೇಕು. ಅಂದರೆ ಶಾಂಕರ ರಾಮಾನುಜ ಇಬ್ಬರ ಪ್ರಕಾರವೂ ವಿರೋಧವಿಲ್ಲ ಎಂದರ್ಥ.

**प्रकाशः –** ''एवं चात्माकार्त्स्न्यम्'' इति द्वितीयसूत्रार्थं निराह **– यत्त्विति॥**

''ಏವಂ ಚಾತ್ಮಾಕಾರ್ತ್ಸ್ನ್ಯಂ' ಎಂಬ ಸೂತ್ರಕ್ಕೆ ಪರರ ಅರ್ಥವನ್ನು ನಿರಾಕರಿಸುತ್ತಿದ್ದಾರೆ 'ಯತ್ತು' ಎಂಬುದಾಗಿ.

**प्रकाशः – कैश्चित्तु** एवं शब्दस्यास्मद्रीत्यैवार्थमुपेत्य जीवस्य कायपरिमाणत्वे हस्त्यादिशरीरे स्थितस्यात्मनः पिपीलिकाशरीरे प्रविशतोऽल्पदेशव्यापित्वेनाकार्त्स्न्यमपूर्णता स्यादित्यर्थ उक्त इति परैरित्युक्तम् ।

ರಾಮಾನುಜರು ಈ ಸೂತ್ರದಲ್ಲಿರುವ 'ಏವಂ' ಶಬ್ದಕ್ಕೆ ನಾವು ಹೇಳುವಂತೆಯೇ ಅರ್ಥ ಹೇಳಿದ್ದಾರೆ. ಜೀವನು ಶರೀರಪರಿಮಾಣನಾದರೆ ಆಗ ಆನೆಯ ಶರೀರದಲ್ಲಿರುವ ಜೀವನು ಇರುವೆಯ ಶರೀರಕ್ಕೆ ಹೋದಾಗ ಇರುವೆಯ ಶರೀರವು ಅಲ್ಪವಾದುದರಿಂದ ಅವನಿಗೆ ಅಪರಿಪೂರ್ಣತೆ ಬರುತ್ತದೆ ಎಂದು. ಆದ್ದರಿಂದ ಮೂಲದಲ್ಲಿ ಹೇತುವಾದ 'ಪರೈಃ' ಎಂದಿದ್ದಾರೆ.

**प्रकाशः** – वैयर्थ्याच्चेति ।। पूर्वोक्तदूषणस्यैवं शब्देन दृष्टान्तीकरणे प्रयोजनाभावाच्चेत्यपि ध्येयम् ।

ಹಿಂದಿನ ಸೂತ್ರದಲ್ಲಿ ಹೇಳಿದ ದೋಷವನ್ನೇ ಈ ಸೂತ್ರದ 'ಏವಂ' ಪದದಿಂದ ಇಟ್ಟುಕೊಂಡರೆ ಆಗ ಯಾವುದೇ ಪ್ರಯೋಜನವೂ ಇಲ್ಲ. ಎಂಬುದನ್ನು ಗ್ರಹಿಸಬೇಕು.

**प्रकाशः** – केषाञ्चिन्मते तु अण्वादिशरीरस्यस्य हस्त्यादिशरीरेऽकार्त्स्न्यमित्यस मद्भाष्योक्त एवार्थस्वरसो नतु तद्भाष्योक्तार्थः ।

ರಾಮಾನುಜರು ನಾವು ಹೇಳಿದಂತೆ ಅರ್ಥ ಹೇಳಿದರೂ ಅದರಲ್ಲಿ ಸ್ವಾರಸ್ಯವಿಲ್ಲ. ಅಂದರೆ ನಾವು ಹೇಳುವಂತೆ ಅಣುಶರೀರದಲ್ಲಿದ್ದ ಜೀವನು ದೊಡ್ಡ ಶರೀರಕ್ಕೆ ಹೋದಾಗ ಅಪರಿಪೂರ್ಣತೆ ಬರುತ್ತದೆ ಎಂಬುದೇ 'ಅಕಾರ್ತ್ಸ್ನ್ಯಂ' ಎಂಬುದಕ್ಕೆ ಸ್ವರಸವಾದ ಅರ್ಥ.

**प्रकाशः** – त्वदुक्तार्थपक्षेऽस्मद्भाष्यटीकोक्तरीत्याऽतिरेकस्स्यादित्यापादनं स्वरसम्। न त्वकार्त्स्न्यापादनमिति दूषणं बोध्यम् ।

ನಿಮ್ಮ ಪ್ರಕಾರ ಅರ್ಥ ಹೇಳುವುದಾದರೆ ಆಗ ಸೂತ್ರದಲ್ಲಿ 'ಅಕಾರ್ತ್ಸ್ನ್ಯ' ಎಂದಿರದೇ 'ಅತಿರೇಕ' ಎಂಬ ಪದವಿರಬೇಕಿತ್ತು. ಆದರೆ ಈ ಅರ್ಥವನ್ನು ಉಪಲಕ್ಷಣವಾಗಿ ಟೀಕಾದಲ್ಲಿ ಹೇಳಿದ್ದಾರೆ. ಪ್ರಧಾನವಾಗಿ ಅಲ್ಲ ಎಂದು ಅಭಿಪ್ರಾಯ.

**प्रकाशः** – मतद्वयेऽपि ''अन्त्यावस्थितेरुभयनित्यत्वादविशेष'' इति प्रथमान्त-सूत्रपाठः । न त्वस्मन्मत इव पञ्चम्यन्तः ।

ಶಂಕರ ರಾಮಾನುಜ ಇಬ್ಬರ ಮತದಲ್ಲೂ ''ಅಂತ್ಯಾವಸ್ಥಿತೇರುಭಯನಿತ್ಯತ್ವಾದವಿಶೇಷಃ' ಎಂಬುದಾಗಿ ಪ್ರಥಮಾವಿಭಕ್ತ್ಯಂತವಾಗಿಯೇ ಪಾಠವಿದೆ. ನಾವು ಹೇಳುವ ಹಾಗೆ ಪಂಚಮೀ ವಿಭಕ್ತ್ಯಂತವಾಗಿ ಅಲ್ಲ.

**प्रकाशः** – अन्त्यस्य मोक्षावस्थापरिमाणस्य । अवस्थितेः अवस्थितत्वात् ।

ಸೂತ್ರದಲ್ಲಿರುವ 'ಅಂತ್ಯಸ್ಯ' ಎಂಬ ಪದಕ್ಕೆ ಮೋಕ್ಷದಲ್ಲಿರುವ ಪರಿಮಾಣ ಎಂದರ್ಥ. 'ಅವಸ್ಥಿತೇಃ' ಶಬ್ದಕ್ಕೆ 'ಅವಸ್ಥಿತತ್ವಾತ್' ಎಂದರ್ಥ. ಒಂದೇ ರೀತಿಯಾದ ಎಂದರ್ಥ.

**प्रकाशः** – जीवस्य कायपरिमाणपक्षे मुक्तौ कायान्तरप्रवेशाभावेन तत्रत्यपरिमाणस्य तन्मते नित्यत्वात्तद्दृष्टान्तेनोभयोराद्यमध्यमकालीनयोरपि परिमाण योर्नित्यत्वप्रसङ्गादविशेषप्रसङ्गः ।

ಜೀವನು ಕಾಯಪರಿಮಾಣ ಎಂದರೆ ಮುಕ್ತಿಯಲ್ಲಿ ಬೇರೆ ಶರೀರಪ್ರವೇಶ ಪ್ರಸಂಗ ಇಲ್ಲವಾದ್ದರಿಂದ ಮುಕ್ತಿಯಲ್ಲಿರುವ ಪರಿಮಾಣ ನಿತ್ಯವಾದ್ದರಿಂದ ಅದರ ದೃಷ್ಟಾಂತದಿಂದ ಮೊದಲನೆಯ ಹಾಗೂ ಮಧ್ಯದ ಪರಿಮಾಣಗಳೂ ನಿತ್ಯವಾಗಬೇಕಾಗುತ್ತದೆ ಎಲ್ಲವೂ ಪರಿಮಾಣವೇ ಆದ್ದರಿಂದ.

**ನೈಕಸ್ಮಿನ್ನಧಿಕರಣ (2-2-10)**

**प्रकाशः** – **सर्वशरीरेष्वेकरूपत्वमेव स्यादित्यादिरर्थः परैरुक्तः** । तत्र दूष्यांशमनूद्य दूषयति ।। **यच्चोक्तमिति** ।। परैरित्यनुषङ्गः ।

ಎಲ್ಲಾ ಶರೀರಗಳಲ್ಲಿಯೂ ಜೀವನ ಪರಿಮಾಣವು ಒಂದೇ ರೀತಿಯಾಗಿರಬೇಕಾಗುತ್ತದೆ ಎಂದು ಎರಡನೇ ವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಅದರಲ್ಲಿ ನಿರಾಕರಣೆಗೆ ಯೋಗ್ಯವಾದುದನ್ನು ಈಗ ನಿರಾಕರಿಸುತ್ತಿದ್ದಾರೆ. 'ಯಚ್ಚೋಕ್ತಂ' ಎಂಬಲ್ಲಿ 'ಪರೈಃ' ಎಂಬುದನ್ನು ಇಟ್ಟುಕೊಳ್ಳಬೇಕು.

**प्रकाशः** – देहात्मपर इति ।। एतेन उभयनित्यत्वात् जीवपरिमाणयोरुभयोर्नित्यत्वादिति केषाञ्चिदर्थोऽप्यसमंजस इति सूचितम् । ''अन्त्यावस्थितेः'' इति पूर्वत्र परिमाणमात्रनित्यत्वस्यैव प्रस्तुतत्वेन जीवनित्यत्वस्याप्रसक्तेरित्यादेरिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे नैकस्मिन्नधिकरणं सम्पूर्णम् ।।१०।।**

ಸೂತ್ರದಲ್ಲಿರುವ 'ಉಭಯ' ಶಬ್ದಕ್ಕೆ ದೇಹ, ಆತ್ಮ ಎಂದರ್ಥ ಹೇಳಿದ್ದರಿಂದ ರಾಮಾನುಜರು ಹೇಳುವ ಅರ್ಥ ಸರಿಯಲ್ಲ ಎಂದು ಸೂಚಿಸಿದಂತಾಯಿತು. ಅವರ ಪ್ರಕಾರ 'ಉಭಯ' ಶಬ್ದಕ್ಕೆ ಜೀವ ಹಾಗೂ ಪರಿಮಾಣ ಎಂದರ್ಥ. 'ಅಂತ್ಯಾವಸ್ಥಿತೇಃ' ಎಂಬುದಾಗಿ ಪರಿಮಾಣದ ಪ್ರಸಕ್ತಿಯು ಮಾತ್ರ ಇರುವುದರಿಂದ ಜೀವನ ಪ್ರಸಕ್ತಿ ಇಲ್ಲದಿರುವುದರಿಂದ ಅದನ್ನು ಪರಾಮರ್ಶ ಮಾಡಿದ್ದು ತಪ್ಪು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ನೈಕಸ್ಮಿನ್ನಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಪತ್ಯುರಧಿಕರಣ

(೨-೨-೧೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

# ಪತ್ಯುರಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – पत्युरसामञ्जस्यात् ।।**

ಪಶುಪತಿಯೆನಿಸಿದ ರುದ್ರನಿಗೆ ಜಗತ್‌ಕಾರಣತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ಪಾರತಂತ್ರ್ಯ, ಉತ್ಪತ್ತಿ ಮೊದಲಾದ ದೋಷಗಳು ಪಶುಪತಿಯಲ್ಲಿರುತ್ತವೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** पत्युः पशुपतेः जगत्कारणत्वं न युक्तम् । कुतः? **असामञ्जस्यात्** पारतन्त्र्योत्पत्त्यादिदोषवत्त्वादित्यर्थः ।।१।।

ಪಶುಪತಿಯಾದ ರುದ್ರನಿಗೆ ಜಗತ್‌ಕಾರಣತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ಅಸಾಮಂಜಸ್ಯಾತ್ = ಪರಾಧೀನತೆ, ಉತ್ಪತ್ತಿ ಮೊದಲಾದ ದೋಷಗಳು ಅವನಲ್ಲಿ ಇರುತ್ತವೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – पाशुपतपक्षमपाकरोति –**

**।। पत्युरसामञ्जस्यात् ।।१।।**

**'यं कामये तं तमुग्रं कृणोमि तं ब्रह्माणं तमृषिं तं सुमेधाम्'**

(ऋ.१०.१२५.५) 'अहं रुद्राय धनुरातनोमि ब्रह्मद्विषे शरवे हन्त वा उ' (ऋ.१०.१२५.६)

ಅನುವಾದ - ರುದ್ರನೇ ಶ್ರೇಷ್ಠನಾಗಿದ್ದಾನೆ ಎಂದು ಹೇಳುವ ಪಾಶುಪತಮತವನ್ನು ಸೂತ್ರಕಾರರು ಈ ಅಧಿಕರಣದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ.

'ನಾನು ಯಾರನ್ನು ಯಾವ ಪದವಿಯಲ್ಲಿ ಇರಿಸಲು ಬಯಸುತ್ತೇನೋ ಅವನನ್ನು ರುದ್ರನನ್ನಾಗಿ ಮಾಡುತ್ತೇನೆ. ಬ್ರಹ್ಮನನ್ನಾಗಿ ಮಾಡುತ್ತೇನೆ ಜ್ಞಾನಿಯನ್ನಾಗಿ ಮಾಡುತ್ತೇನೆ. ಅವನನ್ನು ಒಳ್ಳೆಯ ಮೇಧಾವಿಯನ್ನಾಗಿ ಮಾಡುತ್ತೇನೆ' ಹೀಗೆ ರುದ್ರನು ಲಕ್ಷ್ಮೀದೇವಿಯ ಅಧೀನವಾಗಿರುತ್ತಾನೆಂದು ಅಂಭ್ರಿಣೀಶ್ರುತಿಯು ಹೇಳುತ್ತಿದೆ.

ಹಿಂಸಕನಾದ ಚತುರ್ಮುಖನ ಐದನೇ ತಲೆಯನ್ನು ತುಂಡುಮಾಡಿರುವ ರುದ್ರನನ್ನು ಕೊಲ್ಲಲೆಂದು ಧನುಸ್ಸನ್ನು ಹೆದೆ ಏರಿಸುವೆನು ಎಂಬ ಈ ಶ್ರುತಿಯೂ ಕೂಡ ರುದ್ರನು ಲಕ್ಷ್ಮಿಯ ಅಧೀನವೆಂದು ಹೇಳುತ್ತಿದೆ.

ಪ್ರತಿಪದಾರ್ಥ -- ಶೈವಮತ ನಿರಾಕರಣೆಗಾಗಿ ಈ ಅಧಿಕರಣವು ಹೊರಟಿದೆ - ಪಾಶುಪತಮತಮ್ = ಪಶುಪತಿಯಾದ ರುದ್ರನೇ ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳುವ ಮತವನ್ನು, ಅಪಾಕರೋತಿ = ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ.

ಯಂ = ಯಾರನ್ನು, ಉಗ್ರಮ್ = ರುದ್ರನನ್ನಾಗಿ, ಕಾಮಯೇ = ಮಾಡಲು ಇಚ್ಛಿಸುತ್ತೇನೋ, ತಂ = ಅವನನ್ನು ರುದ್ರನನ್ನಾಗಿ, ಕೃಣೋಮಿ = ಮಾಡುತ್ತೇನೆ.

ಅಹಂ = ನಾನು, ಶರವೇ = ಹಂತಕನಾದ, ಬ್ರಹ್ಮದ್ವಿಷೇ = ಬ್ರಹ್ಮನ ಐದನೆ ತಲೆಯನ್ನು ಕಡಿದಿರುವ, ರುದ್ರಾಯ = ರುದ್ರನನ್ನು, ಹಂತುಂ ವಾ ಉ = ಕೊಲ್ಲುವುದಕ್ಕಾಗಿ, ಧನುಃ = ಧನುಸ್ಸನ್ನು , ಆತನೋಮಿ = ಹೆದೆ ಏರಿಸುತ್ತೇನೆ.

भाष्यम् – 'अस्य देवस्य मीळ्हुषो वया विष्णोरेषस्य प्रभृथे हविर्भिः ।
विदे हि रुद्रो रुद्रियं महित्वं यासिष्टं वर्तिरश्विनाविरावत्'
(ऋ. ७.४०.५)

ಅನುವಾದ - ಪ್ರಸಿದ್ಧನಾದ ಕ್ರೀಡಾದಿಗುಣಗಳಿಂದ ವಿಶಿಷ್ಟನಾದ ಭಕ್ತರಿಗೆ ಅಭೀಷ್ಟವನ್ನು ದಯಪಾಲಿಸುವ ಸತ್ಯಸಂಕಲ್ಪನಾದ ಪರಮಾತ್ಮನ ಪೂಜಾಸಾಮಗ್ರಿಗಳಿಂದ ಪೂಜೆಯನ್ನು ಮಾಡಿ ಅವನ ಪ್ರಸಾದದಿಂದ ಬಂಧಕನಾದ ನಾನು ರುದ್ರಪದವಿಯನ್ನು ಹೊಂದಿರುವೆನು. ಎಲೈ ಅಶ್ವಿನಿದೇತೆಗಳೇ ? ನೀವೂ ಕೂಡ ಸಮೃದ್ಧವಾದ ಪದವಿಯನ್ನು ಹೊಂದುತ್ತೀರಿ. ಹೀಗೆ ''ಅಸ್ಯದೇವಸ್ಯ'' ಎಂಬ ಶ್ರುತಿಯು ರುದ್ರನು ಪರಮಾತ್ಮನ ಅಧೀನನೆಂದು ಹೇಳುತ್ತಿದೆ.

ಪ್ರತಿಪದಾರ್ಥ -- ಅಸ್ಯ = ಪ್ರಸಿದ್ಧನಾದ, ದೇವಸ್ಯ = ಕ್ರೀಡಾದಿಗುಣವಿಷ್ಟನಾದ, ಮೀಳ್ಹುಷಃ = ಭಕ್ತರ ಅಭಿಷ್ಟವನ್ನು ದಯಪಾಲಿಸುವ, ಏಷಸ್ಯ = ಸತ್ಯಸಂಕಲ್ಪನಾದ ಪರಮಾತ್ಮನ, ಹವಿರ್ಭಿಃ = ಪೂಜಾಸಲಕರಣೆಗಳಿಂದ, ಪ್ರಭೃಥೇ = ಪೂಜೆಯನ್ನು ನೆರವೇರಿಸಿ ಅವನ ಪ್ರಸಾದದಿಂದ, ವಯಾ = ಬಂಧಕನಾದ ನಾನು, ರುದ್ರಿಯಂ ಮಹಿತ್ವಂ = ರುದ್ರಪದವಿಯನ್ನು, ವಿದೇ=

ಹೊಂದಿರುವೆ, ಅಶ್ವಿನೌ = ಎಲ್ಲೈ ಅಶ್ವಿನಿ ದೇವತೆಗಳೇ ನೀವು ಕೂಡ, ಇರಾವತ್ = ಸಂಮೃದ್ಧವುಳ್ಳ, ವರ್ತಿಃ = ಪದವಿಯನ್ನು, ಯಾಸಿಷ್ಟಂ = ಹೊಂದುವಿರಿ.

**भाष्यम् – 'एको नारायण आसीन्न ब्रह्मा नेशानो नाग्नीषोमौ' (महोप.१) इत्यादिश्रुतेः पारतन्त्र्येणासमञ्जसत्वान्न पशुपतिरीश्वरो जगत्कर्ता ॥१॥**

ಅನುವಾದ - 'ಏಕೋ ನಾರಾಯಣ ಆಸೀತ್' ಎಂಬ ಶ್ರುತಿಯು ಸ್ಪಷ್ಟವಾಗಿ ರುದ್ರ ಬ್ರಹ್ಮ ಎಲ್ಲರೂ ನಾರಾಯಣನ ಅಧೀನರೆಂದು ತಿಳಿಸುತ್ತಿದೆ.

ಇವೇ ಮೊದಲಾದ ಶ್ರುತಿಗಳಿಂದ ಪಾರತಂತ್ರ್ಯದಿಂದ ಕೂಡಿರುವ ಪಶುಪತಿಯಾದ ಈಶ್ವರ ಎಂಬ ಹೆಸರುಳ್ಳ ರುದ್ರನು ಜಗತ್ತಿಗೆ ಕಾರಣನಾಗಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ನಾರಾಯಣಃ = ನಾರಾಯಣನು, ಏಕಃ = ಒಬ್ಬನೇ, ಆಸೀತ್ = ಪ್ರಳಯಕಾಲದಲ್ಲಿ ಇದ್ದನು, ಬ್ರಹ್ಮ = ಚತುರ್ಮುಖನು, ಈಶಾನಃ = ರುದ್ರನು, ನ = ಇರಲಿಲ್ಲ. ಇತ್ಯಾದಿನಾ = ಇವೇ ಮೊದಲಾದ ಶ್ರುತಿವಾಕ್ಯಗಳಿಂದ, ಪಾರತಂತ್ರ್ಯೇಣ = ಪಾರತಂತ್ರ್ಯವೆಂಬ ಧರ್ಮವನ್ನು ಹೊಂದಿರುವ ಪ್ರಯುಕ್ತ, ಅಸಮಂಜಸತ್ವಾತ್ = ದೋಷಿಯಾದ್ದರಿಂದ, ಪಶುಪತಿಃ = ಪಶುಪತಿಯಾದ, ಈಶ್ವರಃ = ಈಶ್ವರನೆಂದು ಕರೆಸಿಕೊಳ್ಳುವ ರುದ್ರನು, ಜಗತ್ಕರ್ತಾ = ಜಗತ್ತಿಗೆ ಕಾರಣವೆನ್ನುವುದು, ನ = ಯುಕ್ತವಾಗುವುದಿಲ್ಲ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका –**

**अधिकरणार्थं दर्शयति ।। पाशुपतेति ।। अवैदिकपाषण्डिसमयनिरासानन्तरं वैदिकाभासा निरसनीयाः । ते च पाशुपतशाक्तेयसौरस्तान्दगाणपताः । तेषु पाशुपतस्यैव प्राबल्यात् तन्मतमादौ दूष्यत इति भावः ।**

ಅಧಿಕರಣದ ಪ್ರಮೇಯವನ್ನು 'ಪಾಶುಪತ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಅವೈದಿಕವಾದ ಪಾಷಂಡಿಗಳ ಸಮಯವನ್ನು ನಿರಾಕರಣೆ ಮಾಡಿದ ಅನಂತರ ವೈದಿಕಾಭಾಸರನ್ನು ನಿರಾಕರಣೆ ಮಾಡಬೇಕು. ಶಾಕ್ತೇಯರು ಸೌರರು, ಸ್ಕಾಂದರು, ಗಾಣಪತರು ಎಂದು ಪಾಶುಪತರು ನಾಕುವಿಧ. ಇವರುಗಳು ವೈಧಿಕಾಭಾಸರು. ಇವರ ಮಧ್ಯದಲ್ಲಿ ಪಾಶುಪತಮತವು ಅತ್ಯಂತ ಪ್ರಬಲವಾಗಿದೆ. ಆದ್ದರಿಂದ ಪ್ರಾರಂಭದಲ್ಲಿ ಪಾಶುಪತಮತವನ್ನು ನಿರಾಕರಣೆ ಮಾಡುತ್ತಿದ್ದಾರೆಂದು ತಿಳಿಯಬೇಕು.

**तत्वप्रकाशिका – अत्र हरेर्जगत्कर्तृत्वे पाशुपतमतविरोधपरिहारादस्ति शास्त्रादिसङ्गतिः । विष्णुवाशेषजगत्कर्तेत्युक्तम् । तस्य पाशुपतमतविरोधेऽदार्ढ्यं स्यादिति तन्निराकर्तव्यमेव ।**

**तद्विष्णोर्जगत्कारणत्वं विषयः । युक्तमयुक्तं वेति सन्देहः । समयविप्रतिपत्तिः सन्देहबीजम् ।**

ಶ್ರೀಹರಿಯ ಜಗತ್‌ಕರ್ತೃತ್ವವಿಷಯದಲ್ಲಿ ಪಾಶುಪತಮತವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ವಿಷ್ಣುವೇ ಸಮಸ್ತ ಜಗತ್ತಿಗೆ ಕಾರಣಕರ್ತನಾಗಿದ್ದಾನೆಂದು ಹೇಳಲಾಯಿತು. ಇದಕ್ಕೆ ಪಾಶುಪತಮತದ ವಿರೋಧವು ಬಂದರೆ ಈ ಲಕ್ಷಣದಲ್ಲಿ ದಾರ್ಢ್ಯವು ಬರುವುದಿಲ್ಲ. ಆದ್ದರಿಂದ ಪಾಶುಪತಮತವನ್ನು ನಿರಾಕರಣೆ ಮಾಡಲೇ ಬೇಕು.

ವಿಷ್ಣುವಿನ ಜಗತ್ಕಾರಣತ್ವವು ಅಧಿಕರಣದ ವಿಷಯ. ಇದು ಯುಕ್ತವೋ ಅಯುಕ್ತವೋ? ಎಂಬುದು ಸಂದೇಹ. ಸಮಯಗಳಲ್ಲಿರುವ ವಿವಾದವು ಸಂದೇಹಬೀಜ.

**तत्वप्रकाशिका – न युक्तमिति पूर्वः पक्षः । पशुपतिः खलु सार्वज्ञादिगुणशाली मायामुपादानीकृत्य हरिहिरण्यगर्भादिजगदुत्पत्त्यादि करोति । तथा श्रुतिस्मृतयोऽस्मिन्नर्थे भवन्ति । तथा च का वार्ता हरेर्जगत्कारणत्वस्यातो न लक्षणसूत्रं युक्तमिति प्राप्ते सिद्धान्तयत्सूत्रमुन्यस्य व्याचष्टे ।। पत्युरिति ।।**

ವಿಷ್ಣುವಿನ ಜಗತ್ಕಾರಣತ್ವವು ಅಯುಕ್ತವಾಗಿದೆ ಎಂಬುದು ಪೂರ್ವಪಕ್ಷ. ಪಶುಪತಿಯು ಸಾರ್ವಜ್ಞ್ಯ ಮೊದಲಾದ ಗುಣಶಾಲಿಯಾಗಿದ್ದಾನೆ. ಇವನು ಮಾಯೆಯನ್ನು ಉಪಾದಾನ-ಕಾರಣವನ್ನಾಗಿ ಮಾಡಿಕೊಂಡು ವಿಷ್ಣು ಚತುರ್ಮುಖಬ್ರಹ್ಮ ಮೊದಲಾದವರಿಂದ ಕೂಡಿದ ಸಮಸ್ತ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಈ ವಿಷಯದಲ್ಲಿ ಶ್ರುತಿಸ್ಮೃತಿಗಳು ಆಧಾರವಾಗಿವೆ. ಆದ್ದರಿಂದ ಶ್ರೀಹರಿಯ ಜಗತ್ಕಾರಣತ್ವದಿಂದ ಏನು ಉಪಯೋಗ? ಹಾಗಾಗಿ ಲಕ್ಷಣಸೂತ್ರದಲ್ಲಿ ಹೇಳಲ್ಪಟ್ಟ ವಿಷ್ಣುವಿನ ಜಗತ್ಕಾರಣತ್ವವು ಅಯುಕ್ತವಾಗಿದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ಪತ್ಯುಃ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – न पत्युरज्ञजनप्रसिद्धेश्वरस्य पशुपतेर्जगत्कारणत्वं युक्तम्। पारतन्त्र्यजननमरणादिदोषित्वेन श्रुतत्वात् । न हि सकलकारणस्य दोषित्वं युक्तमिति भावः ।**

ಲೋಕದಲ್ಲಿ ಅಜ್ಞಾನಿಗಳಿಗೆ ಮಾತ್ರ ಈಶ್ವರನ ಜಗತ್ಕಾರಣತ್ವವು ಪ್ರಸಿದ್ಧವಾಗಿದೆ. ಆದರೆ ಇದು ಯುಕ್ತವಲ್ಲ. ಪಾರತಂತ್ರ್ಯ, ಜನನ, ಮರಣ ಇವೇ ಮೊದಲಾದ ದೋಷಗಳುಳ್ಳವನು ಪಶುಪತಿಯಾಗಿದ್ದಾನೆಂದು ಶ್ರುತಿಗಳು ಸ್ಮೃತಿಗಳು ಹೇಳುತ್ತಿವೆ. ಸಕಲ ಜಗತ್ತಿಗೆ ಕಾರಣನಾದವನು ದೋಷಿಯಾಗುವುದು ಯುಕ್ತವಾಗುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

**तत्वप्रकाशिका – ब्रह्मद्विषे चतुर्मुखस्य पञ्चममुखच्छेत्रे । शरवे हिंसनशीलाय। हन्तवे हन्तुमेव न तु भीषणाद्यर्थमिति भावः ।**

ಬ್ರಹ್ಮದ್ವಿಷೇ - ಚತುರ್ಮುಖಬ್ರಹ್ಮನ ಐದನೆಯ ಮುಖವನ್ನು ತುಂಡುಮಾಡಿದ, ಶರವೇ - ಹಿಂಸಾಸ್ವಭಾವವುಳ್ಳ, ಹಂತವೈ - ಕೊಲ್ಲುವುದಕ್ಕಾಗಿಯೇ, ಹೊರತು ಹೆದರಿಸುವುದಕ್ಕಾಗಿ ಅಲ್ಲ ಎಂಬುದು ಶ್ರುತಿಯ ಅಭಿಪ್ರಾಯ.

**तत्वप्रकाशिका – अस्य आ समन्तादीशस्याभीष्टसेचकस्य विष्णोर्देवस्य हविर्भिः प्रभरणे कृते सत्यहङ्काररूपेण बन्धको रुद्रो रौद्रं महिमानं यथा लेभे तथा युवामपि विष्णुपूजयैवान्नवद्वर्तनं प्राप्तवन्तौ स्थ इत्यर्थः ।। ३७ ।।**

ಅಸ್ಯ - ಈ, ಏಷಸ್ಯ - ಎಲ್ಲಾ ರೀತಿಯಿಂದ ಸಮರ್ಥನಾದ, ಮೀಳ್ಹುಷಃ - ಅಭೀಷ್ಟವನ್ನು ನೀಡುವ ದೇವಸ್ಯ - ದೇವನಾದ ವಿಷ್ಣುವಿಗೆ, ಹವಿರ್ಭಿಃ - ಚರು ಮೊದಲಾದ ಹವಿಸ್ಸುಗಳಿಂದ, ಪ್ರಭೃಥೇ - ಚೆನ್ನಾಗಿ ಅರ್ಪಿಸಿ ಭರಣೆ ಮಾಡಿದಾಗಲೂ , ವಯಃ - ಅಹಂಕಾರಸ್ವರೂಪನಾದ್ದರಿಂದ ಬಂಧಕನೆನಿಸಿದ, ರುದ್ರಃ - ರುದ್ರನು, ರುದ್ರಿಯಂ - ರುದ್ರಪದವಿಯನ್ನು ಹಾಗೂ ಸಂಹಾರ ಮೊದಲಾದ ಮಹಿಮೆಗಳನ್ನು ವಿದೇ - ಹೇಗೆ ಪಡೆದನೋ, ತಥಾ - ಹಾಗೆ, ಹೇ ಅಶ್ವಿನೌ - ಎಲೈ ಅಶ್ವಿನಿದೇವತೆಗಳೇ? ನೀವೂ ಕೂಡ ವಿಷ್ಣುವನ್ನು ವಿಶೇಷವಾಗಿ ಸಂತೋಷಪಡಿಸಿ ಇರಾವತ್ - ಅನ್ನಾದಿ ಪದಾರ್ಥಗಳಂತೆ, ವರ್ತಿಃ = ಸ್ಥಾನವನ್ನು, ಯಾಸಿಷ್ಟಮ್ - ಹೊಂದುವವರಾಗಿರಿ.

## ಬ್ರಹ್ಮಸೂತ್ರ

**सूत्रम् – सम्बन्धानुपपत्तेश्च ।।**

ರುದ್ರನಿಗೆ ಶರೀರವಿಲ್ಲದ ಕಾರಣ ಕಾರ್ಯಕಾರಣಭಾವರೂಪವಾದ ಸಂಬಂಧವೇ ಕೂಡುವುದಿಲ್ಲ. ಆದ್ದರಿಂದ ಜಗತ್‌ಕರ್ತೃತ್ವವನ್ನು ಅವನಲ್ಲಿ ಹೇಳಲಾಗದು.

## ಸೂತ್ರದೀಪಿಕಾ

**सूत्रदीपिका** – शिवस्याशरीरत्वेन जगता **सम्बन्धानुपपत्तेः** न तस्य कर्तृत्वमित्यर्थः ।।२।।

ಶಿವನು ಅಶರೀರನಾದ್ದರಿಂದ ಸಂಬಂಧಾನುಪಪತ್ತೇಶ್ಚ = ಜಗತ್ತಿನ ಜೊತೆಗೆ ಸಂಬಂಧವು ಕೂಡುವುದಿಲ್ಲ. ಕಾರ್ಯಕಾರಣಭಾವರೂಪವಾದ ಸಂಬಂಧವು ಕೂಡುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् — ।। सम्बन्धानुपपत्तेश्च ।।२।।**

**अशरीरत्वात् तस्य जगता सम्बन्धो न युज्यते कर्तृत्वेन मृतपुरुषवत् ।।२।।**

ಅನುವಾದ - ಶರೀರವಿಲ್ಲದ ರುದ್ರನಿಗೆ ಜಗತ್ತಿನ ಜೊತೆಗೆ ಮೃತಪುರುಷನಂತೆ ಸಂಬಂಧವೇ ಕೂಡುವುದಿಲ್ಲ. ಇನ್ನು ಜಗತ್ ಕರ್ತೃತ್ವವು ದೂರತೋಪಾಸ್ತ.

ಪ್ರತಿಪದಾರ್ಥ -- ಅಶರೀರತ್ವಾತ್ = ಪಾರತಂತ್ರ್ಯವೆಂಬ ದೋಷವಿರುವುದಷ್ಟೇ ಅಲ್ಲದೆ ಶರೀರವಿಲ್ಲವೆಂಬ ಕಾರಣದಿಂದಲೂ, ತಸ್ಯ = ರುದ್ರನಿಗೆ, ಜಗತಃ = ಕಾರ್ಯಭೂತವಾದ ಜಗತ್ತಿನ ಜೊತೆ, ಸಂಬಂಧಃ = ಸಂಬಂಧವು, ಮೃತಪುರುಷವತ್ = ಸತ್ತಮನುಷ್ಯನಂತೆ, ಕರ್ತೃತ್ವೇನ = ಕರ್ತೃತ್ವದ ಜೊತೆ, ಸಂಬಂಧಃ = ಸಂಬಂಧವು, ನ ಯುಜ್ಯತೇ = ಯುಕ್ತವಾಗುವುದಿಲ್ಲ.

## ತತ್ವಪ್ರಕಾಶಿಕಾ

**तत्वप्रकाशिका — युक्त्यन्तरेण पशुपतेर्जगत्कारणत्वं पराकुर्वत्सूत्रमुपन्यस्य व्याचष्टे ।। सम्बन्धेति ।। जगता सम्बन्धमात्रमशरीरस्यापि सम्भवतीत्युक्तः कोऽसौ सम्बन्ध इत्यतः कार्यकर्तृभाव इति भावेनेक्तम् ।। कर्तृत्वेनेति ।। इदमुक्तं भवति ।। रुद्रो न कर्ता अशरीरत्वान्मृतपुरुषवदिति ।। ३८ ।।**

ಮತ್ತೊಂದು ಯುಕ್ತಿಯಿಂದ ರುದ್ರನಿಗೆ ಜಗತ್ಕಾರಣತ್ವವನ್ನು ನಿರಾಕರಣೆ ಮಾಡುವ ಸೂತ್ರವನ್ನು ಪಠಿಸಿ 'ಸಂಬಂಧ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಶರೀರ ಇಲ್ಲದ್ದಕ್ಕೂ ಕೂಡ ಜಗತ್ತಿನ ಜೊತೆ ಸಂಬಂಧ ಇರುತ್ತದೆ. ಆದ್ದರಿಂದ ರುದ್ರನಿಗೆ ಸಂಬಂಧ ಇಲ್ಲವೆಂಬುದಕ್ಕೆ ಏನರ್ಥ? ಈ ಆಶಂಕೆಗೆ ಕಾರ್ಯಕರ್ತೃಭಾವರೂಪವಾದ ಸಂಬಂಧವಿಲ್ಲ ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ 'ಕರ್ತೃತ್ವೇನ' ಇತ್ಯಾದಿಯಾಗಿ ಹೇಳಿದ್ದಾರೆ.

ಇಷ್ಟು ಹೇಳಿದಂತಾಯಿತು. 'ರುದ್ರಃ ನ ಜಗತ್‌ಕರ್ತಾ ಶರೀರತ್ವಾತ್ ಮೃತಪುರುಷವತ್' ಮೃತಪುರುಷನು ಶರೀರವುಳ್ಳವನಲ್ಲ ಕರ್ತೃತ್ವವು ಕೂಡ ಅವನಲ್ಲಿ ಇಲ್ಲ. ಅದರಂತೆ ರುದ್ರನು ಶರೀರ ಇಲ್ಲದವನಾದ್ದರಿಂದ ಕರ್ತೃ ಆಗಲು ಸಾಧ್ಯವಿಲ್ಲ ಎಂದು.

## ಬ್ರಹ್ಮಸೂತ್ರ

**सूत्रम् – अधिष्ठानानुपपत्तेश्च ।।**

ಪೃಥಿವೀ ಮೊದಲಾದ ಆಶ್ರಯವು ಇಲ್ಲದ ಕಾರಣ ಈಶ್ವರನು ಜಗತ್ತಿಗೆ ಕಾರಣನಾಗಲಾರನು.

## ಸೂತ್ರದೀಪಿಕಾ

**सूत्रदीपिका – प्रलये सर्वेषां नष्टत्वात् पुनः सृष्टिकाले पशुपतेः पृथिव्याद्याश्रयानुपपत्तेश्च न तस्य जगत्कर्तृत्वमित्यर्थः ।।३।।**

ಅಧಿಷ್ಠಾನಾನುಪಪತ್ತೇಶ್ಚ = ಪ್ರಲಯಕಾಲದಲ್ಲಿ ಸಕಲ ಪದಾರ್ಥಗಳು ನಾಶವಾಗಿರುವುದರಿಂದ ಪುನಃ ಸೃಷ್ಟಿಕಾಲದಲ್ಲಿ ಪಶುಪತಿಗೆ ಪೃಥಿವೀ ಮೊದಲಾದವುಗಳನ್ನು ಆಶ್ರಯಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ತಾನೇ ನಿಂತುಕೊಳ್ಳಲು ಸ್ಥಳವಿಲ್ಲದಿದ್ದಾಗ ಜಗತ್ತಿಗೆ ಹೇಗೆ ಕಾರಣನಾಗುತ್ತಾನೆ ?

## ಬ್ರಹ್ಮಸೂತ್ರಭಾಷ್ಯ

**भाष्यम् – ।। अधिष्ठानानुपपत्तेश्च ।।३।।**

**पृथिव्याद्यधिष्ठाने स्थितो हि कुलालादिः कार्यं करोति, न चास्य तदस्ति ।।३।।**

ಅನುವಾದ - ಭೂಮಿಯೆಂಬ ಅಧಿಷ್ಠಾನವಿದ್ದರೆ ಅದರಲ್ಲಿ ನಿಂತುಕೊಂಡು ಕುಲಾಲ ಮೊದಲಾದವರು ಘಟ ಮೊದಲಾದ ಕಾರ್ಯಗಳನ್ನು ಮಾಡಲು ಸಮರ್ಥರಾಗುತ್ತಾರೆ. ರುದ್ರನಿಗೆ ಸೃಷ್ಟಿಯ ಪ್ರಾರಂಭದಲ್ಲಿ ಯಾವ ಅಧಿಷ್ಠಾನವೇ ಇರಲಿಲ್ಲ. ಹೀಗಿರುವಾಗ ಜಗತ್ತನ್ನು ಎಲ್ಲಿ ನಿಂತುಕೊಂಡು ಸೃಷ್ಟಿಮಾಡುತ್ತಾನೆ.

ಪ್ರತಿಪದಾರ್ಥ -- ಪೃಥಿವ್ಯಾದ್ಯಧಿಷ್ಠಾನೇ = ಪೃಥಿವೀ ಮೊದಲಾದ ಅಧಿಷ್ಠಾನಗಳಲ್ಲಿ, ಸ್ಥಿತಃ = ನಿಂತುಕೊಂಡು, ಕುಲಾಲಾದಿಃ = ಕುಂಬಾರ ಮೊದಲಾದವರು, ಕಾರ್ಯಂ = ಘಟ ಮೊದಲಾದ ಕಾರ್ಯಗಳನ್ನು, ಕರೋತಿ = ಮಾಡುತ್ತಾರೆ. ಅಸ್ಯ = ರುದ್ರನಿಗೆ, ತತ್ = ಆ ಅಧಿಷ್ಠಾನವು, ನ ಚ ಅಸ್ತಿ = ಇರುವುದಿಲ್ಲವಷ್ಟೇ.

## ತತ್ವಪ್ರಕಾಶಿಕಾ

**तत्वप्रकाशिका – हेत्वन्तरेण पशुपतेर्जगत्कर्तृत्वं निराकुर्वत्सूत्रमुपन्यस्य व्याचष्टे – अधिष्ठनेति।। न रुद्रः कर्ता निरधिष्ठानत्वात् । यः कर्ता साधिष्ठानो यथा कुलालादिरित्यर्थः ।। ३१ ।।**

ಮತ್ತೊಂದು ಹೇತುವಿನಿಂದ ರುದ್ರನಿಗೆ ಜಗತ್‌ಕರ್ತೃತ್ವವನ್ನು ನಿರಾಕರಣೆ ಮಾಡುವ ಸೂತ್ರವನ್ನು ಪಠಿಸಿ 'ಅಧಿಷ್ಠಾನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

'ರುದ್ರಃ ನ ಕರ್ತಾ ನಿರಧಿಷ್ಠಾನತ್ವಾತ್ ಯಃ ಕರ್ತಾ ಸಃ ಸಾಧಿಷ್ಠಾನಃ ಯಥಾ ಕುಲಾಲಾದಿಃ' ಯಾರು ಕರ್ತೃವೋ ಅವನು ಅಧಿಷ್ಠಾನವುಳ್ಳವನಾಗಿರುತ್ತಾನೆ. ಕುಲಾಲನು ಕರ್ತೃವಾಗಿದ್ದಾನೆ. ಭೂತಲವೆಂಬ ಅಧಿಷ್ಠಾನವುಳ್ಳವನಾಗಿದ್ದಾನೆ. ಆದರೆ ರುದ್ರನು ಯಾವುದೇ ಅಧಿಷ್ಠಾನ ಇರುವವನಲ್ಲ. ಆದ್ದರಿಂದ ಜಗತ್‌ಕರ್ತೃ ಆಗಲು ಸಾಧ್ಯವಿಲ್ಲ

## ಬ್ರಹ್ಮಸೂತ್ರ

**सूत्रम् – करणवच्चेन्न भोगादिभ्यः ।।**

ಜಗತ್ತಿನಲ್ಲಿರುವ ವಿವಿಧ ಸಾಧನಗಳು ಪಶುಪತಿಯ ದೇಹರೂಪವಾಗಿವೆ. ಮತ್ತು ಅಧಿಷ್ಠಾನರೂಪವಾಗಿವೆ ಎಂದು ಹೇಳಬಾರದು. ಹಾಗಾದರೆ ಅವನಿಗೂ ಉತ್ಪತ್ತಿನಾಶಗಳೆಂಬ ಮತ್ತು ಸುಖ-ದುಃಖಗಳೆಂಬ ದೋಷವು ಬರಬೇಕಾಗುತ್ತದೆ.

## ಸೂತ್ರದೀಪಿಕಾ

**सूत्रदीपिका** – ननु यतः साधनजातं पशुपतेः **करणवत्** शरीरवत् शरीरेण तुल्यम् अधिष्ठानतुल्यं च अतो नोक्तदोष इति चेन्न । कुतः? **भोगादिभ्यः** शरीर कृतसुखदुःखभोगोत्पत्तिमरणादिदोषेभ्य इत्यर्थः ।।४।।

ಕರಣವತ್ = ಪ್ರಪಂಚದಲ್ಲಿರುವ ಸಾಧನೆಗಳೆಲ್ಲವೂ ರುದ್ರನ ಶರೀರದಂತಿವೆ. ಮತ್ತು ಅಧಿಷ್ಠಾನದಂತಿದೆ. ಆದ್ದರಿಂದ ಶರೀರವೇ ಇಲ್ಲ, ಅಧಿಷ್ಠಾನವೇ ಇಲ್ಲವೆಂಬ ದೋಷಕ್ಕೆ ಅವಕಾಶವಿಲ್ಲವೇ? ಇತಿ ಚೇನ್ನ = ಹೀಗೆ ಹೇಳಬಾರದು. ಏಕೆಂದರೆ ಭೋಗಾದಿಭ್ಯಃ = ಶರೀರದಿಂದ ದೊರೆಯುವ ಸುಖ-ದುಃಖಾದಿ ಅನುಭವರೂಪವಾದ ಮತ್ತು ಉತ್ಪತ್ತಿನಾಶಗಳೆಂಬ ದೋಷವು ಬರಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। करणवच्चेन्न भोगादिभ्यः ।।४।।**

**इदमेव जगत् तस्य करणवदधिष्ठानादिरूपं नित्यस्यापि कस्यचिद्भावाद् युज्यत इति चेत् – न, भोगादिप्राप्तेः । उत्पत्तिनाशौ सुखदुःखभोगाश्च प्राप्यन्ते तद्वताः ।।४।।**

ಅನುವಾದ - ಯಾವ ಪ್ರಕೃತ್ಯಾದಿಗಳು ಜಗತ್ತಿಗೆ ಕಾರಣವಾಗಿವೆಯೋ ಅವುಗಳು ರುದ್ರನಿಗೆ ಅಧಿಷ್ಠಾನವಾಗಬಹುದು. ಪ್ರಳಯಕಾಲದಲ್ಲಿ ಪ್ರಕೃತಿಯೂ ಕೂಡ ನಾಶವಾಗಿದೆ ಎಂದು ಆಶಂಕಿಸಬಾರದು. ನಿತ್ಯವಾದ ಯಾವುದಾದರೂ ಅಧಿಷ್ಠಾನ ಪ್ರಳಯಕಾಲದಲ್ಲಿ ಇರಬಹುದು. ಈ ಶಂಕೆಯು ತಪ್ಪು. ಒಂದುವೇಳೆ ರುದ್ರನಿಗೆ ಶರೀರವಿದ್ದರೆ ಭೋಗವಿರಬೇಕಾಗುತ್ತದೆ. ಮತ್ತು ಶರೀರದ ಉತ್ಪತ್ತಿ ನಾಶಗಳು ಆ ಶರೀರದಿಂದ ಸುಖದುಃಖಗಳ ಭೋಗ ಇವೆಲ್ಲವೂ ಪ್ರಳಯಕಾಲದಲ್ಲಿ ಇವೆ ಎಂದು ಒಪ್ಪಬೇಕಾಗುತ್ತದೆ.

ಪ್ರತಿಪದಾರ್ಥ -- ಇದಮೇವ ಜಗತ್ = ಈ ಜಗತ್ತು, ತಸ್ಯ = ರುದ್ರನಿಗೆ, ಕರಣವತ್ = ಪ್ರಕೃತ್ಯಾದಿಗಳಂತೆ. ಅಧಿಷ್ಠಾನಾದಿರೂಪಂ = ಅಧಿಷ್ಠಾನಾದಿರೂಪವನ್ನು ತಾಳಬಹುದು. ಕಸ್ಯಚಿತ್ ಅಪಿ = ಯಾವುದಾದರು, ನಿತ್ಯಸ್ಯಾಪಿ = ನಿತ್ಯಪದಾರ್ಥವು, ಭಾವಾತ್ = ಪ್ರಳಯಕಾಲದಲ್ಲಿ ಇದೆ ಆದ್ದರಿಂದ ಯುಜ್ಯತೇ = ಕರ್ತೃತ್ವವು ಯುಕ್ತವಾಗುತ್ತದೆ. ಇತಿ ಚೇತ್ = ಈ ಆಕ್ಷೇಪ, ನ = ತಪ್ಪು. ಹಾಗೆ ಒಪ್ಪಿದರೆ ಭೋಗಾದಿಪ್ರಾಪ್ತೇಃ = ರುದ್ರನಿಗೆ ಭೋಗವನ್ನು ಒಪ್ಪಬೇಕಾಗುತ್ತದೆ. ಉತ್ಪತ್ತಿವಿನಾಶೌ = ದೇಹಕ್ಕೆ ಉತ್ಪತ್ತಿ ಮತ್ತು ನಾಶಗಳು, ಸುಖದುಃಖಭೋಗಾಶ್ಚ = ಸುಖದುಃಖಗಳ ಭೋಗಗಳು, ತದ್ಗತಾಃ = ರುದ್ರನಲ್ಲಿ, ಪ್ರಾಪ್ಯಂತೇ = ಇವೆಯೆಂದು ಹೇಳಬೇಕಾಗುತ್ತದೆ.

## ತತ್ವಪ್ರಕಾಶಿಕಾ

**तत्वप्रकाशिका – उक्तमाक्षिप्य समादधत्सूत्रं पठित्वाऽऽक्षेपांशं तावद् व्याचष्टे ।। करणवदिति ।। न पशुपतेः शरीराधिष्ठानाभावेन कर्तृत्वानुपपत्तिः । कारकग्रामस्यैव साक्षात्प्रयत्नाधिष्ठेयतया अस्मदादिशरीरसमानत्वेन शरीरान्तरापेक्षाभावात् । साक्षात् प्रयत्नाधिष्ठेयविषयेऽपि शरीरान्तरापेक्षायां तत्रापि तत्प्रसङ्गात् तस्यैव चाधिष्ठानत्वमुपपद्यते ।**

ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು 'ಕರಣವತ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಪಶುಪತಿಗೆ ಅಧಿಷ್ಠಾನವೇ ಇಲ್ಲದ್ದರಿಂದ ಕರ್ತೃತ್ವವು ಅನುಪಪನ್ನವಾಗುತ್ತದೆ. ಪ್ರಯತ್ನಕ್ಕೆ ಸಾಕ್ಷಾತ್ತಾಗಿ ಅಧಿಷ್ಠೇಯವಾದದ್ದು ಕಾರಕಗಳ ಸಮೂಹ. ಆದ್ದರಿಂದ ನಮ್ಮ ಶರೀರಕ್ಕೆ ಸಮಾನವಾದ್ದರಿಂದ ಮತ್ತೊಂದು ಶರೀರದ ಅಪೇಕ್ಷೆ ರುದ್ರನಿಗೆ ಇರುವುದಿಲ್ಲ. ಪ್ರಯತ್ನಾದಿಗಳಿಗೆ ಸಾಕ್ಷಾತ್ತಾಗಿ ಅಧಿಷ್ಠೇಯವಾದರೂ ಮತ್ತೊಂದು ಶರೀರವನ್ನು ಅಪೇಕ್ಷೆ ಪಡುವುದಾದರೆ ಅನವಸ್ಥಾದೋಷವು ಬರುತ್ತದೆ. ಆದ್ದರಿಂದ ಪ್ರಯತ್ನಾದಿಗಳಿಗೆ ಅಧಿಷ್ಠೇಯವಾದದ್ದು ಶರೀರವೆಂದೇ ಹೇಳಬೇಕು.

ವಿವರಣೆ - ಹಿಂದಿನ ಸೂತ್ರದಲ್ಲಿ ಶಿವನಿಗೆ ಕರ್ತೃತ್ವಸಂಬಂಧವು ಯುಕ್ತವಾಗುವುದಿಲ್ಲವೆಂದು ಹೇಳಲಾಯಿತು. ಇದರ ಮೇಲೆ ಶೈವರ ಆಕ್ಷೇಪವನ್ನು ಉಪಸ್ಥಾಪನೆ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ.

ಶೈವರು ಹೀಗೆ ಹೇಳುತ್ತಾರೆ - ಶರೀರ ಹಾಗೂ ಅಧಿಷ್ಠಾನಗಳಿಲ್ಲದಿದ್ದರೆ ಕರ್ತೃತ್ವವೇ ಕೂಡುವುದಿಲ್ಲ

ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಸಮಸ್ತ ಈ ಜಗತ್ತು ರುದ್ರನಿಗೆ ಶರೀರದಂತಿದೆ. ಈ ಜಗತ್ತಾದರೂ ಕರ್ತೃ,ಕರ್ಮ, ಕರಣ ಮೊದಲಾದ ಕಾರಕಗಳ ಸಮೂಹಾತ್ಮಕವಾಗಿದೆ. ರುದ್ರನ ಪ್ರಯತ್ನಕ್ಕೆ ಇದು ನೇರವಾಗಿಯೇ ಅಧಿಷ್ಠಾನವಾಗಬಹುದು. ಹೀಗೆ ಕಾರಕಸಮೂಹವೇ ರುದ್ರನ ಶರೀರವೆಂದು ಹೇಳಬಹುದಾದ್ದರಿಂದ ನಮ್ಮೆಲ್ಲ ಶರೀರವೇ ರುದ್ರನ ಶರೀರವಾಗುತ್ತವೆ. ಹೀಗಿರುವಾಗ ನಮ್ಮ ಶರೀರಗಳಿಗಿಂತ ಅತಿರಿಕ್ತವಾಗಿ ರುದ್ರನಿಗೊಂದು ಶರೀರವನ್ನು ಒಪ್ಪುವ ಅವಶ್ಯಕತೆ ಇರುವುದಿಲ್ಲ. ಒಂದುವೇಳೆ ಕಾರಕಗಳ ಸಮೂಹವಿಷಯಕ್ಕೂ ಮತ್ತೊಂದು ಶರೀರವನ್ನು ಒಪ್ಪುವುದಾದರೆ ಆ ಶರೀರಗಳ ವಿಷಯದಲ್ಲೂ ಮತ್ತೊಂದು ಶರೀರವನ್ನು ಒಪ್ಪಬೇಕಾಗುತ್ತದೆ. ಪ್ರಯತ್ನಕ್ಕೆ ಅಧಿಷ್ಠಿತವಾಗಿ ಪ್ರಯತ್ನಕ್ಕೆ ಪ್ರೇರ್ಯವಾಗಿ ಆ ದೇಹ ವಿಷಯದಲ್ಲೂ ಮತ್ತೊಂದು ದೇಹವಿಷಯವು ಬರುತ್ತದೆಂದು ಅಭಿಪ್ರಾಯ. ಆಗ ಅನವಸ್ಥಾದೋಷ ಬರುತ್ತದೆ. ಆದ್ದರಿಂದ ಸಾಕ್ಷಾತ್ ಪ್ರಯತ್ನಕ್ಕೆ ಅಧಿಷ್ಠಾನವಾದದ್ದನ್ನೇ ಶರೀರವೆಂದು ಹೇಳಬೇಕು.

**तत्वप्रकाशिका – न च वक्तव्यं प्रलये सर्वस्यापि विनाशन्न कारकसूहस्याप्यधिष्ठानत्वादि युज्यत इति । प्रलयेऽपि मायादेः कारककलापस्य नित्यस्य विद्यमानत्वात् । अन्यथा कार्यजन्मासम्भवादिति भावः ।**

ಪ್ರಳಯಕಾಲದಲ್ಲಿ ಸಕಲ ವಸ್ತುಗಳೂ ನಾಶವನ್ನು ಹೊಂದುವುದರಿಂದ ಕಾರಕ ಸಮೂಹವೇ ಇಲ್ಲದಿರುವುವಾಗ ಅವುಗಳು ಅಧಿಷ್ಠಾನವೂ ಕೂಡ ಆಗಬಹುದಲ್ಲವೆ? ಎಂದು ಪ್ರಶ್ನಿಸಬಾರದು. ಪ್ರಳಯದಲ್ಲೂ ಕೂಡ ಮಾಯಾ ಮೊದಲಾದ ಕಾರಕಕಲಾಪಗಳು ನಿತ್ಯವಾಗಿ ಇದ್ದೇ ಇರುತ್ತವೆ. ಹೀಗೆ ಒಪ್ಪದಿದ್ದರೆ ಘಟಪಟಾದಿಗಳ ಸೃಷ್ಟಿಯೇ ಆಗದಿರಬೇಕಾದೀತು ಎಂದು ಅಭಿಪ್ರಾಯ.

ವಿವರಣೆ - ಪ್ರಳಯಕಾಲದಲ್ಲಿ ಯಾವುದೇ ಕಾರಕಗಳು ಇರುವುದಿಲ್ಲ. ಆದ್ದರಿಂದ ರುದ್ರನಿಗೆ ಅಧಿಷ್ಠಾನಾದಿಗಳನ್ನು ಹೇಗೆ ಹೇಳುತ್ತೀರಿ? ಎಂಬುದಾಗಿ ಶೈವರನ್ನು ಕುರಿತು ಆಕ್ಷೇಪ ಮಾಡಿದರೆ ಮಾಯಾಧಿಷ್ಠಾನವನ್ನು ಒಪ್ಪುವುದರಿಂದ ಮುಂದಿನ ಸೃಷ್ಟಿಯು ಯುಕ್ತವಾಗುತ್ತದೆಂದು ಹೇಳುತ್ತಾರೆ.

**तत्वप्रकाशिका – परिहारांशं व्याचष्टे – नेति ।। तदेव सफुटीकरोति ।। उत्पत्तीति ।। यदि कारकव्रातस्यैव साक्षात्प्रयत्नाधिष्ठेयतया शरीरादिवदेव कर्तृत्वोपयोगिता तर्हि तदुपादानहाननिमित्तोत्पत्तिमरणे च पशुपतेः स्याताम् । साक्षात्प्रयत्नाधिष्ठेयशरीरोपादानहानयोस्तद्दर्शनात् । तथा च सुखदुःखभोगप्रसिः स्यात् तश्च न कर्तृत्वमिति भावः ।। ४० ।।**

ಸೂತ್ರದ ಪರಿಹಾರಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಅದನ್ನೇ ಉತ್ಪತ್ತಿ ಎಂಬುದಾಗಿ ಸ್ಪಷ್ಟಪಡಿಸುತ್ತಿದ್ದಾರೆ. ಒಂದು ವೇಳೆ ಕಾರಕಗಳ ಸಮೂಹವನ್ನು ಸಾಕ್ಷಾತ್ತಾದ ಪ್ರಯತ್ನಗಳಿಗೆ ಅಧಿಷ್ಠೇಯವನ್ನಾಗಿ ಶರೀರಾದಿಗಳಂತೆ ಕರ್ತೃತ್ವಕ್ಕೆ ಉಪಯೋಗಿಯಾಗಿ ಒಪ್ಪಿದರೆ ಕಾರಕ ಸಮೂಹಗಳ ಉಪಾದಾನದಿಂದ ಉತ್ಪತ್ತಿಯು ಹಾಗೂ ಕಾರಕಗಳ ತ್ಯಾಗದಿಂದ ಹಾನಿಯನ್ನು ಒಪ್ಪಿದಾಗ ಪಶುಪತಿಗೆ ಮರಣವನ್ನು ಹೇಳಿದಂತಾಗುತ್ತದೆ. ಏಕೆಂದರೆ

ಕಾರಕಸಮೂಹಗಳ ಸ್ವೀಕಾರದಿಂದ ಮತ್ತು ಅದರ ಹಾನಿಯಿಂದ ಮರಣವು ಅಧಿಷ್ಠೇಯವಾದ ಶರೀರದಲ್ಲಿ ನಮಗಿರುವುದು ಅನುಭೂತವಾಗಿದೆ. ಆದ್ದರಿಂದ ಸುಖದುಃಖಗಳೆಂಬ ಭೋಗಪ್ರಾಪ್ತಿಯು ಪಶುಪತಿಗೆ ಆಗುತ್ತದೆ. ಹಾಗಾಗಿ ಕರ್ತೃತ್ವವನ್ನು ಒಪ್ಪಲು ಸಾಧ್ಯವಾಗುವುದಿಲ್ಲ.

**ವಿವರಣೆ** - ಪ್ರಕೃತ್ಯಾದಿಗಳ ಸಮೂಹವೇ ರುದ್ರನ ಪ್ರಯತ್ನಕ್ಕೆ ಅಧಿಷ್ಠೇಯವಾದ ಶರೀರವೆಂದು ಹೇಳಿದರೆ ಸುಖದುಃಖಗಳ ಅನುಭವವೂ ಕೂಡ ಅವನಿಗೆ ಬರುತ್ತದೆಂದು ಹೇಳಿದಂತಾಯಿತು. ಮತ್ತು ಆ ಶರೀರಕ್ಕೆ ನಮ್ಮ ಶರೀರದಂತೆ ಉತ್ಪತ್ತಿ ಮರಣಗಳನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ರುದ್ರನಿಗೆ ಕರ್ತೃತ್ವವು ಯುಕ್ತವಾಗುವುದಿಲ್ಲ.

ಕೈ, ಕಾಲು ಮೊದಲಾದ ಅವಯವಗಳಿದ್ದರೆ ಮಾತ್ರ ಸುಖದುಃಖಾದಿಗಳ ಭೋಗವು ಉಂಟಾಗುತ್ತದೆ. ಆದರೆ ರುದ್ರನಿಗೆ ಅವಯವಗಳೇ ಇಲ್ಲದ್ದರಿಂದ ಸುಖದುಃಖಾದಿಗಳ ಭೋಗವು ಉಂಟಾಗುವುದಿಲ್ಲವೆಂದು ಪೂರ್ವಪಕ್ಷಕಾರರು ಹೇಳಬಹುದು. ಆದರೆ ಭೂದೇವತೆಗೆ ಹಸ್ತಪಾದಾದಿಗಳು ಇಲ್ಲದಿದ್ದರೂ ಭೂಮಿಗೆ ಅಭಿಮಾನಿಯಾಗಿದ್ದಾಳೆಂಬ ಕಾರಣದಿಂದ ಭೂಭಾರದಿಂದ ದುಃಖದ ಅನುಭವ ಆಗಿರುವುದೂ ಕಂಡಿದೆ.

## ಬ್ರಹ್ಮಸೂತ್ರ

**सूत्रम् – अन्तवत्त्वमसर्वज्ञता वा ।।**

ರುದ್ರನಿಗೆ ದೇಹವನ್ನು ಒಪ್ಪಿದರೆ ಪರಿಮಿತವಾದ ಪರಿಮಾಣವುಳ್ಳವನಾಗುತ್ತಾನೆ. ದೇಹವನ್ನು ಒಪ್ಪದಿದ್ದರೆ ಸರ್ವಜ್ಞನೆಂದೇ ಹೇಳಲು ಸಾಧ್ಯವಾಗುವುದಿಲ್ಲ.

## ಸೂತ್ರದೀಪಿಕಾ

**सूत्रदीपिका –** यतः शिवस्य देहित्वतदभावपक्षयोः क्रमेणान्तवत्त्वं नाशवत्त्वं **असर्वज्ञता** न सर्वज्ञत्वं स्यात् अतो न तद्युक्तमित्यर्थः ।।५।।

ಯಾವ ಕಾರಣದಿಂದ ರುದ್ರನಿಗೆ ದೇಹವನ್ನು ಒಪ್ಪಿದರೆ ಅಥವಾ ಒಪ್ಪದಿದ್ದರೆ ಕ್ರಮವಾಗಿ ಅಂತವತ್ತ್ವಂ = ನಾಶವು ಬರುತ್ತದೆ. ಅಸರ್ವಜ್ಞತಾ = ಸರ್ವಜ್ಞತ್ವವು ಬರುವುದಿಲ್ಲ.

ರುದ್ರನಿಗೆ ಶರೀರವಿದೆಯೋ, ಇಲ್ಲವೋ, ಶರೀರವಿರುವುದಾದರೆ ನಮ್ಮ ಶರೀರದಷ್ಟೇ ಪರಿಮಾಣವಿರುವುದರಿಂದ ನಾಶವನ್ನೂ ಕೂಡ ಒಪ್ಪಬೇಕಾಗುತ್ತದೆ. ಶರೀರವಿಲ್ಲವೆಂದರೆ ಜ್ಞಾನವೇ ಇಲ್ಲದಿರುವುದರಿಂದ ಸರ್ವಜ್ಞತ್ವವು ಕೂಡುವುದಿಲ್ಲ. ಆದ್ದರಿಂದ ಜಗತ್ಕಾರಣತ್ವವು ರುದ್ರನಿಗೆ ಸರ್ವಥಾ ಯುಕ್ತವಾಗುವುದಿಲ್ಲ ಎಂದರ್ಥ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಪ್ರತ್ಯುರಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। अन्तवत्त्वमसर्वज्ञता वा ।।५।।**

**देहवत्त्वेऽन्तवत्त्वम् । अन्यथा ज्ञानाभावः । शरीरिण एव हि ज्ञानोत्पत्तिर्दृष्टा ।**

ಅನುವಾದ - ರುದ್ರನಿಗೆ ದೇಹವಿದೆ ಎಂದು ಒಪ್ಪಿದರೆ ಪರಿಚ್ಛಿನ್ನತ್ವವನ್ನು ಒಪ್ಪಬೇಕಾಗುತ್ತದೆ. ದೇಹವಿಲ್ಲವೆಂದು ಹೇಳಿದರೆ ಜ್ಞಾನವೇ ಇಲ್ಲವೆಂದು ಒಪ್ಪಬೇಕಾಗುತ್ತದೆ. ಯಾರಿಗೆ ಶರೀರವಿದೆಯೋ ಅವನಿಗೆ ಮಾತ್ರ ಜ್ಞಾನವಿರುವುದು ಲೋಕದಲ್ಲಿ ಕಂಡಿದೆ. ಈ ಎಲ್ಲ ವಿರೋಧಗಳಿರುವುದರಿಂದ ರುದ್ರನಿಗೆ ಜಗತ್ಕಾರಣತ್ವವನ್ನು ಒಪ್ಪಲಾಗದು.

ಪ್ರತಿಪದಾರ್ಥ -- ದೇಹವತ್ತ್ವೇ = ರುದ್ರನಿಗೆ ದೇಹವನ್ನು ಒಪ್ಪಿದರೆ, ಅಂತವತ್ತ್ವಮ್ = ಪರಿಚ್ಛೇದವನ್ನು ಒಪ್ಪಬೇಕಾಗುತ್ತದೆ. ಅನ್ಯಥಾ = ದೇಹವಿಲ್ಲವೆಂದು ಹೇಳಿದರೆ, ಜ್ಞಾನಾಭಾವಃ = ಜ್ಞಾನವೇ ಇಲ್ಲದಿರಬೇಕಾದೀತು. ಶರೀರಿಣ ಏವ = ಶರೀರ ಇದ್ದವರಿಗೆ ಮಾತ್ರವೇ, ಜ್ಞಾನೋತ್ಪತ್ತಿಃ = ಜ್ಞಾನ ಹುಟ್ಟುವುದು, ದೃಷ್ಟಾ = ಕಂಡಿದೆ.

**भाष्यम् – विष्णोस्तु श्रुत्यैव विरोधाः परिहृताः । 'यदात्मको भगवांस्तदात्मिका व्यक्तिः । किमात्मको भगवान् ? ज्ञानात्मक ऐश्वर्यात्मकः' शक्त्यात्मक इति ।**

ಅನುವಾದ - ವಿಷ್ಣುವು ಜಗತ್ಕಾರಣನಾಗಿದ್ದಾನೆಂದು ಹೇಳಿದರೆ ಹಿಂದೆ ಹೇಳಿದ ಯಾವ ವಿರೋಧಗಳೂ ಸಹ ಬರುವುದಿಲ್ಲ. ಶ್ರುತಿಯಿಂದಲೇ ಆ ಎಲ್ಲ ವಿರೋಧಗಳನ್ನು ಪರಿಹರಿಸಿದ್ದಾಗಿದೆ.

ಪರಮಾತ್ಮನು ಯಾವ ಸ್ವರೂಪವನ್ನು ಹೊಂದಿದ್ದಾನೊ ಅವನ ದೇಹವೂ ಕೂಡ ಅದೇ ಸ್ವರೂಪವನ್ನು ಹೊಂದಿದೆ ಪರಮಾತ್ಮನ ಸ್ವರೂಪವು ಎಂಥಹದ್ದು? ಜ್ಞಾನಸ್ವರೂಪ ಐಶ್ವರ್ಯಸ್ವರೂಪ ಶಕ್ತಿಸ್ವರೂಪ ಅವನ ದೇಹವೂ ಕೂಡ ಹೀಗಿಯೆ.

ಪ್ರತಿಪದಾರ್ಥ -- ವಿಷ್ಣೋಸ್ತು = ವಿಷ್ಣುವಿಗಾದರೂ, ಶ್ರುತ್ಯೇವ = ಶ್ರುತಿಯಿಂದಲೇ, ವಿರೋಧಾಃ = ಜಗತ್‌ಕಾರಣತ್ವವಿರೋಧಿಯಾದ ವಿರೋಧಗಳು, ಪರಿಹೃತಾಃ = ಪರಿಹಾರಮಾಡಲ್ಪಟ್ಟವೆ. ಭಗವಾನ್ = ಭಗವಂತನು, ಯದಾತ್ಮಕಃ = ಯಾವ ಸ್ವರೂಪವುಳ್ಳವನೋ, ತದಾತ್ಮಿಕಾವ್ಯಕ್ತಿಃ = ಅವನ ದೇಹವೂ ಕೂಡ ಅದೇ ಸ್ವರೂಪವುಳ್ಳದ್ದು, ಭಗವಾನ್ = ಪರಮಾತ್ಮನು, ಕಿಮಾತ್ಮಕಃ = ಎಂಥಹಸ್ವರೂಪವುಳ್ಳವನು? ಜ್ಞಾನಾತ್ಮಕಃ = ಜ್ಞಾನಸ್ವರೂಪಕನು, ಐಶ್ವರ್ಯಾತ್ಮಕಃ = ಐಶ್ವರ್ಯಸ್ವರೂಪನು, ಶಕ್ತ್ಯಾತ್ಮಕಃ = ಶಕ್ತಿಸ್ವರೂಪನು, ಇತಿ = ಹೀಗೆ

**भाष्यम् – 'बुद्धिमनोऽङ्गप्रत्यङ्गवत्तां भगवतो लक्षयामहे । बुद्धिमान्मनोवान् अङ्गवान्प्रत्यङ्गवान्' इति ।**

**ಅನುವಾದ - ಬುದ್ಧಿ ಮನಸ್ಸು ದೇಹ ಹಸ್ತಾದಿಪ್ರತ್ಯಂಗಗಳು ಇವೆಲ್ಲವೂ ಕೂಡ ಪರಮಾತ್ಮನಿಗಿವೆ. ಆದ್ದರಿಂದ ಅವನು ಬುದ್ಧಿಯುಳ್ಳವನು ಮನಸ್ಸುಳ್ಳವನು ದೇಹವುಳ್ಳವನು ಹಸ್ತಾದಿಗಳುಳ್ಳವನೆಂದು ಕರೆಸಿಕೊಳ್ಳುತ್ತಾನೆ.**

ಪ್ರತಿಪದಾರ್ಥ -- ಬುದ್ಧಿಮನೋಽಂಗಪ್ರತ್ಯಂಗವತಾಂ = ಬುದ್ಧಿ, ಮನಸ್ಸು, ದೇಹವೆಂಬ ಅಂಗ ಹಸ್ತಗಳೆಂಬ ಪ್ರತ್ಯಂಗಗಳ ಇರುವಿಕೆಯನ್ನು, ಭಗವತಃ = ಭಗವಂತನಿಗೆ, ಲಕ್ಷಯಾಮಹೇ = ತಿಳಿಯುತ್ತೇವೆ, ಬುದ್ಧಿಮಾನ್ = ಬುದ್ಧಿಯುಳ್ಳವನು, ಮನೋಮಾನ್ = ಮನಸ್ಸುಳ್ಳವನು, ಅಂಗವಾನ್ = ದೇಹವುಳ್ಳವನು, ಪ್ರತ್ಯಂಗವಾನ್ = ಹಸ್ತಪಾದಿಗಳುಳ್ಳವನು, ಇತಿ = ಹೀಗೆ ತಿಳಿಯಬೇಕು.

**भाष्यम् – 'सद्देहः सुखगन्धश्च ज्ञानभाः सत्पराक्रमः । ज्ञानज्ञानः सुखसुखः स विष्णुः परमोऽक्षरः' (पैङ्गिश्रुतिः) इत्यादिकया ।।९।।**

## ।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये पत्युरधिकरणम् ।। ११ ।।

**ಅನುವಾದ - ಪರಮಾತ್ಮನ ದೇಹವು ಅಪ್ರಾಕೃತವಾಗಿದೆ ಸುಖಸ್ವರೂಪವಾಗಿದೆ ಜ್ಞಾನಸ್ವರೂಪವಾಗಿದೆ ಎದುರಾಳಿಗಳಿಲ್ಲದ ಪರಾಕ್ರಮ ಶಾಲಿಯಾಗಿದೆ. ಅಪರಿಮಿತ ಸುಖಾತ್ಮಕವಾಗಿದೆ. ಉತ್ತಮಳಾದ ಲಕ್ಷ್ಮಿಗಿಂತಲೂ ಶ್ರೇಷ್ಠವಾಗಿದೆ. ಅಂಥ ಪರಮಾತ್ಮನು ಅಕ್ಷರ ಎಂದು ಕರೆಸಿಕೊಳ್ಳುತ್ತಾನೆ. ಇವೇ ಮೊದಲಾದ ಶ್ರುತಿಗಳಿಂದ ಪರಮಾತ್ಮನಲ್ಲಿ ವಿರೋಧಗಳು ಪರಿಹಾರವಾಗುತ್ತವೆ.**

ಪ್ರತಿಪದಾರ್ಥ -- ಸದ್ದೇಹಃ = ಪರಮಾತ್ಮನ ದೇಹವು ನಿರ್ದುಷ್ಟವಾಗಿದೆ, ಸುಖಗಂಧಶ್ಚ = ಸುಖರೂಪವಾಗಿದೆ ಸುವಾಸನೆಯುಕ್ತವಾಗಿದೆ, ಜ್ಞಾನಭಾಃ = ಜ್ಞಾನಪ್ರಭೆಯಿಂದ ಕಂಗೊಳಿಸುತ್ತಿದೆ, ಸತ್ಪರಾಕ್ರಮಃ = ಎದುರಾಳಿಗಳಿಲ್ಲ; ಪರಾಕ್ರಮಶಾಲಿಯಾಗಿದೆ. ಜ್ಞಾನಜ್ಞಾನಃ = ಅಪರಿಮಿತವಾದ ಜ್ಞಾನಸ್ವರೂಪವಾಗಿದೆ, ಸುಖಸುಖಃ = ಅಮಿತವಾದ ಸುಖಸ್ವರೂಪವಾಗಿದೆ, ಸಃ = ಅಂಥ, ವಿಷ್ಣುಃ = ವಿಷ್ಣುವು, ಪರಮಃ = ಲಕ್ಷ್ಮಿಗಿಂತಲೂ ಶ್ರೇಷ್ಠನು, ಅಕ್ಷರಃ = ಅಕ್ಷರಶಬ್ದವಾಚ್ಯನು. ಇತ್ಯಾದಿಕಯಾ = ಇವೇ ಮೊದಲಾದ ಶ್ರುತಿಗಳಿಂದ ಪರಮಾತ್ಮನಲ್ಲಿ ವಿರೋಧವು ಪರಿಹಾರವಾಗುತ್ತದೆ.

ಇಲ್ಲಿಗೆ ಪತ್ಯುರಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – उक्तपक्षावैव विकल्पभङ्ग्या दोषान्तरेण दूषयत्सूत्रं पठित्वा व्याचष्टे – अन्तवत्त्वमिति ॥**

ಹಿಂದೆ ಹೇಳಿದ ಎರಡು ಪಕ್ಷಗಳನ್ನೇ ಬೇರೆ ರೀತಿಯ ವಿಕಲ್ಪ ಮಾಡಿ ಆ ಪಕ್ಷಗಳಿಗೆ ಬೇರೆ ಬೇರೆ ದೋಷವನ್ನು ಹೇಳಿ ನಿರಾಕರಣೆ ಮಾಡುವ ಸೂತ್ರವನ್ನು ಪಠಿಸಿ 'ಅಂತವತ್ತ್ವಂ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಕರಣವಚ್ಚೇನ್ನ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಶರೀರವತ್ವವನ್ನು 'ಸಂಬಂಧಾನುಪತ್ತೇಶ್ಚ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಶರೀರಾಭಾವಪಕ್ಷವನ್ನು ವಿಕಲ್ಪ ಮಾಡಿ ಎರಡೂ ಪಕ್ಷದಲ್ಲೂ ದೋಷವನ್ನು ಹೇಳುತ್ತಿದ್ದಾರೆ.

**तत्वप्रकाशिका – पशुपतिः कर्तेति वदन् प्रष्टव्यो जायते किमसौ शरीरी न वेति । शरीरी चेत्परिच्छिन्नः स्याद्यज्ञदत्तवत् । तथा च न जगत्कर्तृत्वम् । यदि न शरीरी तर्हि तस्य ज्ञानमेव न स्यात् कुतः सार्वज्ञमिति च न जगत्करणत्वमिति भावः ।**

ಪಶುಪತಿಯೇ ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳುವ ಶೈವನನ್ನು ಕುರಿತು ಪ್ರಶ್ನಿಸುತ್ತೇವೆ. ಆ ಪಶುಪತಿಗೆ ಶರೀರ ಇದೆಯೋ? ಇಲ್ಲವೋ? ಶರೀರ ಇದೆ ಎಂದು ಹೇಳಿದರೆ ಯಜ್ಞದತ್ತಾದಿಗಳಂತೆ ಪರಿಚ್ಛಿನ್ನನಾಗಿದ್ದಾನೆಂದಂತಾಯಿತು. ಆಗ ಸಮಸ್ತ ಜಗತ್‌ಕರ್ತೃತ್ವವು ಯುಕ್ತವಾಗುವುದಿಲ್ಲ. ಒಂದುವೇಳೆ ಶರೀರ ಇರುವುದಿಲ್ಲ ಎಂದು ಹೇಳಿದರೆ ಆಗ ಅವನಿಗೆ ಜ್ಞಾನವೇ ಇಲ್ಲವೆಂದಂತಾಯಿತು. ಹೀಗಿರುವಾಗ ಸಾರ್ವಜ್ಞ್ಯವನ್ನು ಅವನಲ್ಲಿ ಹೇಳಲು ಹೇಗೆ ಸಾಧ್ಯವಾಗುತ್ತದೆ ? ಆದ್ದರಿಂದ ಜಗತ್ಕಾರಣತ್ವವು ರುದ್ರನಲ್ಲಿ ಬರುವುದಿಲ್ಲ.

**तत्वप्रकाशिका – शरीराभावे कुतो ज्ञानाभाव इत्यतो व्यतिरेकव्याप्तिं दर्शयति – शरीरिण एवेति ॥ न च वक्तव्यमिच्छागृहीतविग्रहत्वान्नान्तवत्त्वादीति। अशरीरस्येच्छायोगात् । अनेन शरीरानपेक्षं ज्ञानं नित्यत्वादिति परस्तम् ।**

ರುದ್ರನಿಗೆ ಶರೀರ ಇಲ್ಲವೆಂದು ಹೇಳಿದರೆ ಜ್ಞಾನ ಇಲ್ಲ ಎಂದು ಹೇಗೆ ಹೇಳಿದಂತಾಗುತ್ತದೆ? ಎಂಬ ಪ್ರಶ್ನೆಗೆ ವ್ಯತಿರೇಕವ್ಯಾಪ್ತಿಯನ್ನು 'ಶರೀರಿಣಃ ಏವ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಸ್ವೇಚ್ಛೆಯಿಂದ ಅವನು ಶರೀರವನ್ನು ಸ್ವೀಕರಿಸುತ್ತಾನೆ. ಆದ್ದರಿಂದ ಮರಣಾದಿದೋಷಗಳು ಅವನಿಗೆ ಬರುವುದಿಲ್ಲ. ಹೀಗೆ ಶೈವರು ಆಕ್ಷೇಪ ಮಾಡಬಹುದು. ಇದು ತಪ್ಪು. ಹಾಗೆ ಇಚ್ಛೆ ಮಾಡಬೇಕಾದರೂ ಶರೀರವು ಬೇಕಾಗುತ್ತದೆ. ಶರೀರ ಇಲ್ಲದವನಿಗೆ ಇಚ್ಛೆಯೇ ಕೂಡುವುದಿಲ್ಲ.

ಶರೀರದ ಅಪೇಕ್ಷೆ ಇಲ್ಲದೆ ಜ್ಞಾನವು ನಿತ್ಯವಾಗಿದೆ ಎಂದು ಹೇಳಿದ್ದು ತಪ್ಪು. ಜ್ಞಾನವಿರಬೇಕಾದರೂ ಕೂಡ ಶರೀರ ಇರಲೇ ಬೇಕು.

**ತत्वप्रकाशिका – ननु विष्णावप्येते दोषाः प्रसरन्त्येवेति कर्तृत्वानुपपत्तिरित याशङ्कां सूत्रकृता निरस्तामपि पुनः प्रमाणविशेषैः परिहरति – विष्णोस्त्विति ।।**

ವಿಷ್ಣುವಿನಲ್ಲೂ ಈ ದೋಷಗಳು ಸಮಾನವಾಗಿವೆ. ಆದ್ದರಿಂದ ವಿಷ್ಣುವಿನಲ್ಲೂ ಕರ್ತೃತ್ವವು ಅನುಪಪನ್ನವಾಗುತ್ತದಲ್ಲವೆ? ಈ ಆಶಂಕೆಯನ್ನು ಸೂತ್ರಕಾರರು ಈ ಹಿಂದೆ ನಿರಾಕರಣೆ ಮಾಡಿದ್ದರೂ ಕೂಡ ಪುನಃ ಪ್ರಮಾಣವಿಶೇಷಗಳಿಂದ 'ವಿಷ್ಣೋಸ್ತು' ಇತ್ಯಾದಿಯಾಗಿ ಭಾಷ್ಯ ಕಾರರು ನಿರಾಕರಣೆ ಮಾಡುತ್ತಿದ್ದಾರೆ.

**तत्वप्रकाशिका – बुद्धीति श्रुत्येश्वरस्य शरीरित्वाभिधात्र्या ज्ञानाभावादिदोषाः परिहृताः । 'यदात्मकः' इत्यादिकया तु तद्देहस्य ज्ञानाद्यात्मकभगवत्स्वरूपाभि-धात्र्याऽन्तवत्त्वादिदोषाः परिहृताः । एवं पाशुपतमतनिरासन्यायेनान्येऽपि चत्वारः समया निराकृता वेदितव्याः । तस्मात् पाशुपतसमयस्यानुपपन्नत्वेनाविरोधकत्वाद्युक्तं लक्षणसूत्रमिति सिद्धम् ।। ४१ ।।**

'ಬುದ್ಧಿ' ಇತ್ಯಾದಿ ಶ್ರುತಿಯಿಂದ ಈಶ್ವರನಿಗೆ ಶರೀರಿತ್ವವನ್ನು ಹೇಳುವ ಶ್ರುತಿಗಳಿಂದ 'ಜ್ಞಾನವೇ ಇರುವುದಿಲ್ಲ' ಇತ್ಯಾದಿ ದೋಷಗಳನ್ನು ಪರಿಹರಿಸಿದಂತಾಯಿತು.

'ಯದಾತ್ಮಕಃ' ಇತ್ಯಾದಿ ಶ್ರುತಿಗಳಿಂದ ಅವನ ಶರೀರವು ಜ್ಞಾನಾನಂದಾತ್ಮಕವಾಗಿದೆ. ಭಗವತ್ ಸ್ವರೂಪವಾಗಿದೆ ಎಂದು ಜ್ಞಾನಾದ್ಯಾತ್ಮಕಸ್ವರೂಪವನ್ನು ಹೇಳುವ ಶ್ರುತಿಗಳಿಂದ ಅಂತವತ್ವ, ಮೊದಲಾದ ದೋಷಗಳನ್ನು ಪರಿಹರಿಸಿದಂತಾಯಿತು.

ಹೀಗೆ ಪಾಶುಪತಮತವನ್ನು ನಿರಾಕರಣೆ ಮಾಡುವ ಯುಕ್ತಿಗಳಿಂದ ಉಳಿದ ನಾಕು ಮತಗಳ ನಿರಾಕರಣೆಯನ್ನೂ ತಿಳಿಯಬೇಕು. ಆದ್ದರಿಂದ ಪಾಶುಪತಸಮಯವು ಅನುಪಪನ್ನ-ವಾಗಿರುವುದರಿಂದ ಇದರ ವಿರೋಧವು ಬರುವುದಿಲ್ಲ. ಆದ್ದರಿಂದ ವಿಷ್ಣುವೇ ಜಗಜ್ಜನ್ಮಾದಿ-ಕಾರಣನಾಗಿದ್ದಾನೆಂಬ ಲಕ್ಷಣವು ಸಾಧುವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಪತ್ಯುರಧಿಕರಣ ಮುಗಿಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## पत्युरधिकरणम्

### ಶಿವನ ಜಗತ್ಕಾರಣತ್ವ ವಿಷಯದಲ್ಲಿ ಬಹು ದೋಷಗಳು

**पत्युरसामंजस्यात् ॥ पञ्चममुखछेत्र इति ॥ सुधायां तु व्यत्ययमाश्रित्य ब्रह्मद्विषां शरवे हिंसकायेति व्याख्यातम् । दक्षप्रजापतिद्विष इति वा द्रष्टव्यम् ।**

'ಬ್ರಹ್ಮದ್ವಿಷೇ' ಎಂಬ ಶಬ್ದಕ್ಕೆ ಟೀಕಾದಲ್ಲಿ ಚತುರ್ಮುಖಬ್ರಹ್ಮನ ಐದನೇ ತಲೆಯನ್ನು ಕಡಿದವನಿಗೆ ಎಂದರ್ಥ ಹೇಳಲಾಗಿದೆ. ಸುಧಾದಲ್ಲಿ 'ಬ್ರಹ್ಮದ್ವಿಷಾಂ' ಎಂಬುದಾಗಿ ಷಷ್ಠೀವಿಭಕ್ತ್ಯಂತವಾಗಿ ಇಟ್ಟುಕೊಂಡು ಬ್ರಹ್ಮದ್ವೇಷಿಗಳ 'ಶರವೇ' ಅಂದರೆ ಹಿಂಸಕಾಯ ಎಂದು ವ್ಯಾಖ್ಯಾನ ಮಾಡಲ್ಪಟ್ಟಿದೆ. ಅಥವಾ 'ಬ್ರಹ್ಮದ್ವಿಷೇ' ಎಂಬುದಕ್ಕೆ ದಕ್ಷಪ್ರಜಾಪತಿಯ ವಿರೋಧಿಯಾದ ಎಂದರ್ಥವನ್ನು ಇಟ್ಟುಕೊಳ್ಳಬಹುದು.

**एषशब्दस्य आ ईश इति विग्रहः । शकारस्य च व्यत्ययेन षकार इत्यभिप्रेत्याह – आसमन्तादीशस्येति ॥**

'ವಿಷ್ಣೋರೇಷಸ್ಯ' ಎಂಬಲ್ಲಿರುವ 'ಏಷಸ್ಯ' ಎಂಬ ಪದದಲ್ಲಿ 'ಆ ಈಶಸ್ಯ' ಎಂದು ವಿಭಾಗ ಮಾಡಿಕೊಳ್ಳಬೇಕು. ಈಶ ಅನ್ನುವಲ್ಲಿ ಇರುವ 'ಶ'ಕಾರಕ್ಕೆ 'ವ್ಯತ್ಯಯೋ ಬಹುಲಮ್' ಎಂಬ ಸೂತ್ರದಿಂದ 'ಷ'ಕಾರ ಬಂದಿದೆ. ಇದೇ ಅಭಿಪ್ರಾಯದಿಂದ ಟೀಕಾದಲ್ಲಿ 'ಆಸಮಂತಾದೀಶಸ್ಯ' ಎಂದು ಹೇಳಿದ್ದಾರೆ.

**सुधायां त्विच्छारूपस्येति व्याख्यातम् ॥**

ಸುಧಾದಲ್ಲಿ 'ಏಷಸ್ಯ' ಎಂಬುದಕ್ಕೆ ಇಚ್ಛಾರೂಪಸ್ಯ ಎಂದು ವ್ಯಾಖ್ಯಾನ ಮಾಡಲಾಗಿದೆ. (ಆಗ ಇಷು ಇಚ್ಛಾಯಾಂ ಎಂಬ ಧಾತುವಿಗೆ ಭಾವಾರ್ಥದಲ್ಲಿ ಘಞ್ ಪ್ರತ್ಯಯ ಬಂದು ಗುಣ ಮಾಡಿದರೆ 'ಏಷಸ್ಯ' ಎಂಬ ರೂಪ ಸಿದ್ಧವಾಗುತ್ತದೆ).

**इति च न जगत्कारणत्वमिति ।। इति हेतोश्च न कारणत्वमित्यर्थः ।**

'ಇತಿ ಚ ನ ಜಗತ್ಕಾರಣತ್ವಮ್' ಎಂಬ ಟೀಕಾವಾಕ್ಯದಲ್ಲಿ 'ಇತಿ' ಶಬ್ದಕ್ಕೆ 'ಇತಿ ಹೇತೋಃ' ಎಂದರ್ಥ. ಈ ಕಾರಣದಿಂದಲೂ ಎಂದರ್ಥ. (ಈ ವಾಕ್ಯವು 'ಅಂತವತ್ವಮಸರ್ವಜ್ಞತಾ' ಎಂಬ ಸೂತ್ರಭಾಷ್ಯ ಟೀಕಾದಲ್ಲಿ ಇದೆ.)

**एते च सम्बन्धानुपपत्त्यादयो दोषाः शिवस्यानुमानेन शैवागमैश्च कारणत्वपक्ष आपाद्यन्ते । स्वमते तु ''आत्मनि चैवं विचित्राश्च हि । सर्वोपेता च तद्दर्शनात् । विकरणत्वान्नेति चेत्तदुक्तं'' इत्यादिसूत्रेषु श्रुतिबलादेवैते दोषा उद्धृताः। शिवस्य तु न श्रुतिभिर्जगत्कारणत्वम् । सर्वश्रुतीनां विष्णावेव समन्वयस्योक्तत्वात्। उत्तराधिक रणेऽप्येतदनुसन्धेयम् ।**

ಸಂಬಂಧಾನುಪಪತ್ತಿಯೇ ಮೊದಲಾದ ದೋಷಗಳನ್ನು ಸೂತ್ರಕಾರರು ಹೇಳಿದ್ದು, ಶಿವನೇ ಜಗತ್ ಕಾರಣ ಎಂಬುದನ್ನು ಅನುಮಾನದಿಂದಲೂ ಶೈವಾಗಮಗಳಿಂದಲೂ ಸಾಧಿಸಲು ಹೊರಟಿರುವ ಪಕ್ಷವನ್ನು ಉದ್ದೇಶಿಸಿ, ವಿಷ್ಣುವು ಜಗತ್‌ಕಾರಣ ಎಂಬ ನಮ್ಮ ಪಕ್ಷದಲ್ಲಿ ಈ ಯಾವ ದೋಷಗಳೂ ಬರುವುದಿಲ್ಲ. ಏಕೆಂದರೆ ಈ ದೋಷಗಳಾವುದೂ ವಿಷ್ಣುವಿಗೆ ಬರುವುದಿಲ್ಲ ಎಂಬುದನ್ನು 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' 'ಸರ್ವೋಪೇತಾ ಚ ತದ್ದರ್ಶನಾತ್' 'ವಿಕರಣತ್ವಾನ್ನೇತಿ ಚೇತ್ತದುಕ್ತಮ್' ಇತ್ಯಾದಿ ಶ್ರುತಿಗಳಿಂದ ಹೇಳಿಯಾಗಿದೆ. (ಹಾಗಾದರೆ ಶಿವನಿಗೂ ಜಗತ್‌ಕಾರಣತ್ವವನ್ನು ಹೇಳುವಾಗ ಈ ಶ್ರುತಿಗಳಿಂದಲೇ ದೋಷ ಪರಿಹಾರವಾಗುತ್ತದೆ ಎಂದರೆ) ಅದು ಸರಿಯಲ್ಲ. ಏಕೆಂದರೆ ಶಿವನು ಜಗತ್ ಕಾರಣ ಎಂಬುದು ಶ್ರುತಿಸಿದ್ಧವಲ್ಲ. ಹಿಂದೆಯೇ ಸರ್ವಶ್ರುತಿಗಳೂ ವಿಷ್ಣುವಿಷಯವಾಗಿದೆ ಎಂದು ಸಾಧನೆ ಮಾಡಿಯಾಗಿದೆ. ಮುಂದಿನ ಅಧಿಕರಣದಲ್ಲೂ ಇದೇ ರೀತಿಯಾಗಿ ತಿಳಿಯಬೇಕು.

**अत्र यदुक्तमन्यैः ईश्वरः कर्तैव न तूपादानमिति वदतां तार्किकसेश्वरसांख्ययोगमाहेश्वराणां मतमत्र निरस्यत इति तन्न ।**

ಅದ್ವೈತಿಗಳು ಈ ಅಧಿಕರಣದಲ್ಲಿ ಈಶ್ವರನು ಕರ್ತಾ ಮಾತ್ರ (ನಿಮಿತ್ತ ಮಾತ್ರ) ಹೊರತು ಉಪಾದಾನಕಾರಣನಲ್ಲ ಎಂದು ಹೇಳುವ ತಾರ್ಕಿಕ, ಸೇಶ್ವರಸಾಂಖ್ಯ, ಯೋಗ, ಮಾಹೇಶ್ವರ, ಇವರ ಮತಗಳನ್ನು ನಿರಾಕರಣೆ ಮಾಡಲಾಗುತ್ತಿದೆ ಎಂದು ಹೇಳುತ್ತಾರೆ. ಇದು ತಪ್ಪು.

**केवलकर्तृत्वमेव श्रुतिसूत्रसम्मतमित्युक्तत्वात् । किञ्च उपादाननिमित्तभेदः प्रकृत्यधिकरणे निरस्तः । न चेह तद्भेदे दोषः सूत्र उक्तः । प्रत्युत हेयजगदुपादानत्व एवेश्वरस्यासामंजस्यम् ।**

ಈಶ್ವರನು ನಿಮಿತ್ತಕಾರಣಮಾತ್ರ ಎಂಬುದು ಶ್ರುತಿಸೂತ್ರಗಳಿಗೆ ಸಮ್ಮತ ಎಂದು ಹೇಳಿಯಾಗಿದೆ, ಹಾಗಾಗಿ ಅದರ ನಿರಾಕರಣೆ ಸರಿಯಲ್ಲ. ಉಪಾದಾನನಿಮಿತ್ತಕವಾದ ಭೇದವನ್ನು ನೀವು ಪ್ರಕೃತ್ಯಧಿಕರಣದಲ್ಲೇ ನಿರಾಕರಿಸಿದ್ದೀರಿ. ಹಾಗಾಗಿ ಪುನಃ ಇಲ್ಲಿ ಅದರ ಅವಶ್ಯಕತೆ ಇಲ್ಲ. ಈ ಸೂತ್ರದಲ್ಲಿ ಉಪಾದಾನನಿಮಿತ್ತ ಭೇದವಿಷಯದಲ್ಲಿ ಯಾವುದೇ ದೋಷ ಹೇಳಿಲ್ಲ. ಅದರ ಬದಲಾಗಿ ಹೇಯವಾದ ಈ ಜಗತ್ತಿಗೆ ಈಶ್ವರನು ಉಪಾದಾನ ಎಂದರೆ ಆಗ ಸೂತ್ರದಲ್ಲಿ 'ಅಸಾಮಂಜಸ್ಯ' ಎಂಬ ದೋಷ ಹೇಳಲಾಗಿದೆ. ಇದು ನಿಮಗೆ ಪ್ರತಿಕೂಲವೇ ಆಗಿದೆ.

**तार्किकमतं शास्त्रयोनिसूत्रे सामान्येन ''महद्दीर्घवद्वा'' इत्यत्र विशिष्य च निरस्तम् । योगमतं तु ''एतेन योगः प्रत्युक्त'' इत्यत्र विशिष्य निरस्तम् । सेश्वरसांख्यमतं तु सांख्यपरीक्षायां निरस्तमितीह परिशेषात्पाशुपतमतमेव निरस्यमिति वरम् ।**

ತಾರ್ಕಿಕರ ಮತವು 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರದಲ್ಲಿ ಸಾಮಾನ್ಯವಾಗಿಯೂ 'ಮಹದ್ದೀರ್ಘವದ್ವಾ' ಎಂಬಲ್ಲಿ ವಿಶೇಷವಾಗಿಯೂ ನಿರಾಕೃತವಾಗಿದೆ. ಯೋಗಮತವು ''ಏತೇನ ಯೋಗಃ ಪ್ರತ್ಯುಕ್ತಃ'' ಎಂಬಲ್ಲಿ ವಿಶೇಷವಾಗಿಯೇ ನಿರಾಕೃತವಾಗಿದೆ. ಸೇಶ್ವರಸಾಂಖ್ಯಮತವು ಸಾಂಖ್ಯಮತವಿಚಾರ ಮಾಡುವಾಗಲೇ ನಿರಾಕೃತವಾಗಿದೆ. ಹಾಗಾಗಿ, ಇಲ್ಲಿ ಉಳಿದಿರುವ ಪಾಶುಪತಮತವೇ ನಿರಾಕರಣೆಗೆ ಯೋಗ್ಯ. (ಆದ್ದರಿಂದ ನಿಮ್ಮ ವ್ಯಾಖ್ಯಾನ ಸರಿಯಲ್ಲ).

**यच्चोक्तमाद्यसूत्रे ''असामंजस्यात्'' इत्यस्य हीनमध्योत्तमभावेन प्राणिनिर्माणादीश्वरस्य रागद्वेषाख्यदोषप्रसङ्गादित्यर्थ इति तन्न ।**

ಅದ್ವೈತಿಗಳು ಈ ಅಧಿಕರಣದ ಮೊದಲನೇ ಸೂತ್ರದಲ್ಲಿ 'ಅಸಾಮಂಜಸ್ಯಾತ್' ಎಂಬ ಪದಕ್ಕೆ ಈಶ್ವರನು ಜೀವರಲ್ಲಿ ಕೆಲವರನ್ನು ಹೀನರನ್ನಾಗಿ, ಕೆಲವರನ್ನು ಮಧ್ಯಮರನ್ನಾಗಿ, ಕೆಲವರನ್ನು ಉತ್ತಮರನ್ನಾಗಿ ಸೃಷ್ಟಿಸಿದರೆ ಆಗ ಅವನಿಗೆ ರಾಗದ್ವೇಷರೂಪವಾದ ದೋಷ ಬರಬೇಕಾಗುತ್ತದೆ, ಆದ್ದರಿಂದ ಎಂದು ಅರ್ಥ ಹೇಳಿದ್ದಾರೆ. ಅದು ತಪ್ಪು.

**नोपादेयं मतं ह्यस्य देवस्य स्तुहि गर्तगम् ।**

ಪರಿಪೂರ್ಣಚಂದ್ರಿಕಾ

उत्पिपेष शिरस्तस्य गृणीषे सत्पतिं पदम् ।
यद्विष्णोरुपमं हन्तुं रुद्रमाकृष्यते मया ।
धनुर्यैकामयेतं तमुग्रं माशिश्नदेवताः ।
घ्नन् शिश्नदेवानेकोऽसावासीन्नारायणः परः ।
तस्माद्रुद्रः सम्प्रसादश्चाभूतां वैष्णवं मखम् ।
यज्ञेन यज्ञमयजन्ताबध्नन्पुरुषं पशुम् ।
यो भूतानामधिपती रुद्रस्तंतिचरो वृषा ॥

इत्यादिश्रुतिसामर्थ्यात्पारतन्त्र्यं जनिर्मृतिः । पराधीनपदप्राप्तिरज्ञत्वं प्रलये भवः ।'' इत्यनुव्याख्यानोक्तरीत्या पारतंत्र्यादिरूपास्वव्याघातकसिद्धरूपदृढहेतुपरत्वे सम्भवति स्वव्याघातकप्रसङ्गरूपादृढहेतुपरत्वायोगात् ।

ಈ ಪಾಶುಪತಮತವು ಸ್ವೀಕಾರಾರ್ಹವಲ್ಲ ಏಕೆಂದರೆ 'ಅಸ್ಯ ದೇವಸ್ಯ....' ಇದೇ ಮೊದಲಾದ ಅನೇಕ ಶ್ರುತಿಗಳ ಸಹಾಯದಿಂದ ಶಿವನಿಗೆ ಪಾರತಂತ್ರ್ಯ, ಹುಟ್ಟು, ಸಾವು, ಪರಾಧೀನವಾದ ಸ್ಥಾನಪ್ರಾಪ್ತಿ, ಅಜ್ಞಾನ, ಪ್ರಳಯಕಾಲದಲ್ಲಿ ಇಲ್ಲದಿರುವಿಕೆ ತಿಳಿಯುತ್ತಿದೆ. (ಇಲ್ಲಿ ಹೇಳಿರುವ ಕಾರಿಕೆಗಳು ಅನುವ್ಯಾಖ್ಯಾನದಲ್ಲಿವೆ) ಹೀಗೆ ನಮ್ಮ ಮತಪ್ರಕಾರ ಪಾರತಂತ್ರ್ಯವೇ ಮೊದಲಾದ ಸ್ವವ್ಯಾಘಾತಕವಲ್ಲದ ದೃಢವಾದ ಹೇತುಪರವಾಗಿ 'ಅಸಾಮಂಜಸ್ಯಾತ್' ಎಂಬ ಪದವನ್ನು ಅರ್ಥೈಸಲು ಬರುವಾಗ ಸ್ವವ್ಯಾಘಾತಕವಾದ ಅದೃಢವಾದ ಪ್ರಸಂಗರೂಪವಾದ ಹೇತುವಾಗಿ ನೀವು ಅರ್ಥ ಹೇಳಿರುವುದು ಸರಿಯಲ್ಲ.

ननु मम मते श्रुत्यनुसारेण कर्मसापेक्षत्वादीश्वरस्य रागाद्यप्रसङ्ग इति न स्वव्याघातः । परस्यापि तथा चेच्छ्रुत्यनुसारेणोपादानतापि स्यादिति चेन्न ।

ಪ್ರಶ್ನೆ - (ಅದ್ವೈತಿ ಹೇಳುವುದು) ನಮ್ಮ ಮತದಲ್ಲಿ ಶ್ರುತಿ ಹೇಳಿರುವಂತೆ ಈಶ್ವರನು ಜೀವರ ಕರ್ಮವನ್ನು ಅಪೇಕ್ಷಿಸಿ ಸೃಷ್ಟಿಮಾಡುತ್ತಾನೆ. ಆದ್ದರಿಂದ ಅವನಿಗೆ ರಾಗಾದಿದೋಷ ಬರಲು ಸಾಧ್ಯವಿಲ್ಲ. ಹಾಗಾಗಿ, ಸ್ವವ್ಯಾಘಾತ ಬರುವುದಿಲ್ಲ. (ಸ್ವವ್ಯಾಘಾತ ಎಂದರೆ ನಾವು ಪ್ರತಿವಾದಿಗೆ ಹೇಳುವ ದೋಷ ನಮಗೂ ಬಂದರೆ ಅದು)

ಉತ್ತರ - ಹಾಗಾದರೆ ತಾರ್ಕಿಕಾದಿಗಳಿಗೂ ಈ ದೋಷ (ರಾಗಾದಿ) ಬರುವುದಿಲ್ಲ.ನೀವು ಪರಿಹಾರ ಮಾಡಿಕೊಂಡಂತೆ ಅವರೂ ಪರಿಹರಿಸಿಕೊಳ್ಳುತ್ತಾರೆ.

ಆಗಲಿ, ಹಾಗಾದರೆ ಶ್ರುತಿಗೆ ಅನುಗುಣವಾಗಿ ಈಶ್ವರನಿಗೆ ಉಪಾದಾನತ್ವವೂ ಬರಲಿ (ಎಂದು ಅದ್ವೈತಿಯ ಉತ್ತರ). ಇದು ಸರಿಯಲ್ಲ (ಇದು ನಮ್ಮ ಉತ್ತರ)

**त्वन्मतेऽपि विशिष्टचिद्रूपस्येश्वरस्य जीवभ्रान्तिकल्पितत्वेन जीवकर्मापेक्षायोगात्।**

ನಿಮ್ಮ ಮತದಲ್ಲಿ ಈಶ್ವರ (ಶಬಲಬ್ರಹ್ಮ) ವಿಶಿಷ್ಟಚಿತ್‌ರೂಪ. ಅವನು ಜೀವಭ್ರಾಂತಿಕಲ್ಪಿತ. ಸ್ವತಃ ತಾನು ಜೀವಭ್ರಾಂತಿಕಲ್ಪಿತನಾಗಿ ಜಗತ್ತಿನ ಸೃಷ್ಟಿಗಾಗಿ ಜೀವಕರ್ಮವನ್ನು ಅಪೇಕ್ಷಿಸಿವುದು ಕೂಡುವುದಿಲ್ಲ.

**यच्चोक्तं सर्वगतत्वान्निरवयवत्वाच्चेश्वरस्य प्रधानादिना सह संयोगस्याश्रयाश्रयिभावाभावेन समवायस्य चायोगान्न तदधिष्ठातृत्वम् । मम त्वनिर्वाच्यस्तादात्म्यलक्षणः सम्बन्धोऽस्तीति द्वितीयार्थ इति तन्न ।**

ಈಶ್ವರನು ಸರ್ವಗತನಾದ್ದರಿಂದ ಹಾಗೂ ನಿರವಯವನಾದ್ದರಿಂದ ಈಶ್ವರನಿಗೂ ಪ್ರಧಾನಾದಿಗಳಿಗೂ ಸಂಯೋಗ ಎಂಬ ಸಂಬಂಧ ಕೂಡುವುದಿಲ್ಲ.

ಆಶ್ರಯ-ಆಶ್ರಯಿಭಾವ ಇಲ್ಲವಾದ್ದರಿಂದ ಸಮವಾಯವೂ ಕೂಡುವುದಿಲ್ಲ. ಹೀಗಾಗಿ ಈಶ್ವರನಿಗೆ ಪ್ರಧಾನಾದಿ ಅದಿಷ್ಠಾತೃತ್ವ ಕೂಡುವುದಿಲ್ಲ. ನನ್ನ (ಶಂಕರ) ಮತದಲ್ಲಿಯಾದರೂ ತಾದಾತ್ಮ್ಯ ಎಂಬ ಅನಿರ್ವಾಚ್ಯರೂಪವಾದ ಸಂಬಂಧ ಇದೆ. ಹಾಗಾಗಿ ಈ ಅನುಪಪತ್ತಿ ಇಲ್ಲ. ಹೀಗೆ ಅದ್ವೈತಿಯು ಎರಡನೇ ಸೂತ್ರಕ್ಕೆ (ಸಂಬಂಧಾನುಪಪತ್ತೇಶ್ಚ) ಎಂಬುದಕ್ಕೆ ಅರ್ಥ ಹೇಳುತ್ತಾನೆ. ಇದು ತಪ್ಪು.

**सर्वज्ञस्येश्वरस्य स्वस्मिञ्जगत्तादात्म्य भ्रमाभावात् ।**

ಈಶ್ವರನು ಸರ್ವಜ್ಞನಾದ್ದರಿಂದ ಅವನಿಗೆ ತನ್ನಲ್ಲಿ ಜಗತ್ತಿನ ತಾದಾತ್ಮ್ಯವಿದೆ ಎಂಬ ಭ್ರಮೆ ಇರಲು ಸಾಧ್ಯವಿಲ್ಲ.

**''अधिष्ठानानुपपत्तेः'' इत्युत्तरसूत्र एव स्वप्रधानस्याधिष्ठेयत्वाभावसाधकानाम प्रत्यक्षत्वादीनामिवासम्बन्धत्वस्यापि विवक्षितुं शक्यत्वेनैतत्सूत्रवैयर्थ्यात् ।**

(ಇನ್ನೊಂದು ದೋಷ ಹೇಳುತ್ತಾರೆ) 'ಅಧಿಷ್ಠಾನಾನುಪಪತ್ತೇಃ' ಎಂಬ ಸೂತ್ರದಲ್ಲಿ (ಅದ್ವೈತಿಯು) ಪ್ರಧಾನಕ್ಕೆ ಅಧಿಷ್ಠೇಯತ್ವ ಕೂಡುವುದಿಲ್ಲ ಎಂಬುದಕ್ಕೆ ಅಪ್ರತ್ಯಕ್ಷವೇ ಮೊದಲಾದ ದೋಷಗಳನ್ನು ಹೇಳಿದ್ದೀರಿ. ಅದರ ಜೊತೆಗೇ ಸಂಬಂಧಾನುಪಪತ್ತಿಯನ್ನು ಹೇಳಬಹುದಾಗಿತ್ತು. ಆಗ ಈ ಎರಡನೇ ಸೂತ್ರ ಮಾಡುವುದೇ ಬೇಕಾಗಿರಲಿಲ್ಲ.

**तादात्म्यसम्बन्धेनाधिष्ठानत्वस्य क्वाप्यदृष्टेश्च ।**

ನೀವು ಪ್ರಧಾನಕ್ಕೂ ಈಶ್ವರನಿಗೂ ತಾದಾತ್ಮ್ಯ ಎಂಬ ಸಂಬಂಧವನ್ನು ಹೇಳುತ್ತಿದ್ದೀರಿ. ಹೀಗೆ ತಾದಾತ್ಮ್ಯ ಸಂಬಂಧವನ್ನು ಇಟ್ಟುಕೊಂಡು ಅಧಿಷ್ಠಾನತ್ವವನ್ನು ಹೇಳುವುದು ಎಲ್ಲಿಯೂ ಕಂಡಿಲ್ಲ.

(ಅಧಿಷ್ಠೇಯ ಪ್ರಧಾನಾದಿಗಳು ಅಧಿಷ್ಠಾನ ಈಶ್ವರ, ಅಧಿಷ್ಠಾನ ಶಬ್ದಕ್ಕೆ ನಿಯಾಮಕ ಎಂದರ್ಥ. ಕುಲಾಲನಂತೆ ಪ್ರಧಾನಾದಿಗಳು ಅಧಿಷ್ಠೇಯ ಎಂದಾದರೆ ಆಗ ಈಶ್ವರನಿಗೆ ಅಧಿಷ್ಠಾನತ್ವ ಬರುತ್ತದೆ. ಆದರೆ, ಪ್ರಧಾನಾದಿಗಳಿಗೆ ಅಧಿಷ್ಠೇಯತ್ವವೇ ಕೂಡುವುದಿಲ್ಲ. ಅವು ಪ್ರತ್ಯಕ್ಷವಲ್ಲವಾದ್ದರಿಂದ, ರೂಪಹೀನವಾದ್ದರಿಂದ ಲೋಕದಲ್ಲಿ ರೂಪಹೀನವಾದುದನ್ನು ಅವಲಂಬಿಸಿ ಕಾರ್ಯ ಮಾಡುವುದು ಎಲ್ಲಿಯೂ ಕಂಡಿಲ್ಲ. ಎರಡನೇ ಸೂತ್ರದಲ್ಲಿ ಸಂಬಂಧಾನುಪಪತ್ತಿ ಹೇಳಲಾಗಿದೆ. ಸಂಬಂಧ ಎರಡುವಿಧ - ಸಂಯೋಗ ಅಥವಾ ಸಮವಾಯ ಎಂದು, ಎರಡೂ ಕೂಡುವುದಿಲ್ಲ. ಸಂಯೋಗ ಹೇಳಬೇಕಾದರೆ ಅವಯವ ಇರಬೇಕು. ಅಸರ್ವಗತನಾಗಿರಬೇಕು. ಇವೆರಡೂ ಇಲ್ಲ. ಸಮವಾಯ ಹೇಳಬೇಕಾದರೆ ಆಶ್ರಯಾಶ್ರಯಿಭಾವ ಇರಬೇಕು. ಅದೂ ಇಲ್ಲ)

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**पत्युरसामंजस्यात् ।। ब्रह्मतोऽप्याधिक्यभ्रान्तिनिरासायार्थांतरं च दर्शयति – सुधायां त्विति ।।**

ರುದ್ರನು ಚತುರ್ಮುಖನಿಗಿಂತ ಶ್ರೇಷ್ಠ ಎಂಬ ಭ್ರಾಂತಿಯನ್ನು ನಿವಾರಿಸುವುದಕ್ಕಾಗಿ ಸುಧಾದಲ್ಲಿ 'ಪಂಚಮಮುಖಚ್ಛೇತ್ರೇ' ಎಂಬುದಕ್ಕೆ ಬೇರೆ ಅರ್ಥವನ್ನು ಹೇಳಿದ್ದಾರೆ.

**प्रकाशः –** ''ननु विष्णावप्येते दोषाः प्रसरन्त्येवेति कारणत्वानुपपत्तिरित्याशङ्कां सूत्रकृता निरस्तामपि पुनः प्रमाणविशेषैः परिहरति'' इत्यादिटीकां व्यनक्ति **।। एते चेत्यादिना ।।**

'ವಿಷ್ಣುವು ಜಗತ್ಕಾರಣ ಎಂಬ ಪಕ್ಷದಲ್ಲಿಯೂ ಈ ಎಲ್ಲಾ ದೋಷಗಳು ಬರುತ್ತವೆ. ಆದ್ದರಿಂದ ಕಾರಣತ್ವ ಕೂಡುವುದಿಲ್ಲ ಎಂಬ ಪ್ರಶ್ನೆಗೆ ಉತ್ತರವನ್ನು ಸೂತ್ರಕಾರರು ಕೊಟ್ಟಿದ್ದರೂ ಮತ್ತೆ ಪ್ರಮಾಣ-ವಿಶೇಷಗಳಿಂದ ಈ ಆಕ್ಷೇಪಕ್ಕೆ ಪರಿಹಾರವನ್ನು ಹೇಳುತ್ತಿದ್ದಾರೆ' ಇತ್ಯಾದಿ ಟೀಕಾವಾಕ್ಯವನ್ನು ವಿವರಿಸುತ್ತಿದ್ದಾರೆ 'ಏತೇ' ಎಂಬುದರಿಂದ.

**प्रकाशः – उत्तरेति ।।** ''**नच कर्तुःकरणम्**'' **इत्यादिदोषनिरासाय स्वमते त्वित्यादिनोक्तमनुसंधेयमित्यर्थः ।।**

'ನ ಚ ಕರ್ತುಃಕರಣಮ್' ಎಂಬಲ್ಲಿ ಬರುವ ದೋಷ ನಿವೃತ್ತಿಗಾಗಿ ಇಲ್ಲಿ 'ಸ್ವಮತೇ ತ್ವಿತ್ಯಾದಿನೋಕ್ತಮನುಸಂಧೇಯಮಿತ್ಯರ್ಥಃ' ಎಂಬುದಾಗಿ ಏನು ಹೇಳಿದ್ದಾರೋ ಅದನ್ನು ಆಶ್ರಯಿಸಬೇಕು. (ಇದೇ ನ್ಯಾಯದಿಂದ ಅಲ್ಲಿಯೂ ದೋಷಪರಿಹಾರ ಮಾಡಿಕೊಳ್ಳಬೇಕು ಎಂದು ಅಭಿಪ್ರಾಯ)

**प्रकाशः – अन्यैरिति** ।। ईश्वरः कर्तैव न तूपादानमिति वदतां निरास इति मतान्तरेऽपि समं यद्यपि । तथापि कापालकालामुखपाशुपतशैवभेदभिन्नचतुर्विधमाहेश्वरमतमात्रनिरासोपगमादन्यैरित्येवोक्तम् । तथा च केवलेति वक्ष्यमाणो दोषस्तन्मतेऽपि ध्येयः ।।

(ಮೂಲದಲ್ಲಿ ಅದ್ವೈತಿಗಳ ಮತವನ್ನು ಅನುವಾದ ಮಾಡುವಾಗ 'ಪರೈಃ' ಎಂದು ಹೇಳದೆ 'ಅನ್ಯೈಃ' ಎಂದು ಹೇಳಿದುದಕ್ಕೆ ಕೃತ್ಯ ಹೇಳುತ್ತಿದ್ದಾರೆ) ಈಶ್ವರನು ಕೇವಲ ಕರ್ತೃ ಹೊರತು ಉಪಾದಾನವಲ್ಲ ಎಂದು ಹೇಳುವವರ ನಿರಾಕರಣೆ ಈ ಅಧಿಕರಣದಲ್ಲಿ ಮಾಡಲಾಗುತ್ತಿದೆ ಎಂಬುದಾಗಿಯೇ ರಾಮಾನುಜನೂ ಹೇಳಿದ್ದಾನೆ. ಹಾಗಿದ್ದರೂ ಅವನು ಕಾಪಾಲ, ಕಾಲಾಮುಖ, ಪಾಶುಪತ, ಶೈವ ಎಂಬ ನಾಲ್ಕು ವಿಧದ ಮಾಹೇಶ್ವರಮತವನ್ನು ಮಾತ್ರ ಇಲ್ಲಿ ನಿರಾಕರಣೆ ಮಾಡಲಾಗುತ್ತಿದೆ ಎಂದು ಹೇಳುವುದರಿಂದ, 'ಅನ್ಯೈಃ' ಎಂದು ಹೇಳಲಾಗಿದೆ. ಅವನಿಗೂ 'ಕೇವಲೇತಿ ವಕ್ಷ್ಯಮಾಣೋ ದೋಷಸ್ತನ್ಮತೇऽಪಿ ಧ್ಯೇಯಃ' ಎಂಬುದಾಗಿ ಏನು ದೋಷವನ್ನು ಹೇಳಿದ್ದಾರೋ (ಅದ್ವೈತಿಯನ್ನು ಕುರಿತು) ಅದು ಬಂದೇ ಬರುತ್ತದೆ.

**प्रकाशः – उक्तत्वादिति** ।। प्रकृत्यधिकरणारम्भणाधिकरणादावित्यर्थः । इहापि निरस्यतामित्यत आह – **न चेति** ।। किञ्चेति चार्थः ।

ಈಶ್ವರನಿಗೆ ಕೇವಲ ಕರ್ತೃತ್ವವೇ ಶ್ರುತಿಸೂತ್ರ ಸಮ್ಮತ ಎಂಬುದನ್ನು ಪ್ರಕೃತ್ಯಧಿಕರಣ, ಆರಂಭಣಾಧಿಕರಣಗಳೇ ಮೊದಲಾದ ಕಡೆ ಹೇಳಲಾಗಿದೆ. ಅಲ್ಲಿ ನಿರಾಕರಣೆ ಮಾಡಿದ್ದರೂ ಇಲ್ಲಿಯೇ ಮಾಡಿ ಎಂದರೆ ಅದಕ್ಕೆ ಉತ್ತರವಾಗಿ ಹೇಳಿದ್ದು 'ನ ಚ' ಎಂಬುದಾಗಿ. 'ಕಿಂಚ' ಎಂಬುದನ್ನು 'ಚ' ಕಾರದ ಅರ್ಥದಲ್ಲಿ ಇಟ್ಟುಕೊಳ್ಳಬೇಕು. 'ಚ'ಕಾರದ ಅರ್ಥ ಸಮುಚ್ಚಯ.

**प्रकाशः** – अन्यमते दोषान्तरमाह – **तार्किकेति** ।। पाशुपतमतमेवेति ।। एतेन ''पाशुपतपक्षं निराकरोति'' इति भाष्यं समर्थितं ज्ञेयम् ।। **यच्चोक्तमिति** ।। अन्यैरित्यस्ति । पत्युरीश्वरस्येति व्यक्तम् ।

ಅದ್ವೈತಿಗಳ ಪ್ರಕಾರ ಇನ್ನೊಂದು ದೋಷ ಹೇಳುತ್ತಿದ್ದಾರೆ 'ತಾರ್ಕಿಕ..' ಎಂಬುದಾಗಿ.

(ಈ ದೋಷ ರಾಮಾನುಜರಿಗೆ ಬರುವುದಿಲ್ಲ, ಏಕೆಂದರೆ ಅವರು ಈ ಅಧಿಕರಣದಲ್ಲಿ ಕೇವಲ ಮಾಹೇಶ್ವರಮತನಿರಾಕರಣೆ ಎಂದಷ್ಟೇ ಹೇಳಿದ್ದಾರೆ)

ಇಲ್ಲಿಯವರೆಗಿನ ಗ್ರಂಥದಿಂದ 'ಪಾಶುಪತಪಕ್ಷಂ ನಿರಾಕರೋತಿ' ಎಂಬ ಭಾಷ್ಯವನ್ನು ಸಮರ್ಥನೆ

ಮಾಡಿದ ಹಾಗಾಯಿತು. ಇಲ್ಲಿಯೂ 'ಅನ್ಯೈಃ (ಅದ್ವೈತಿಗಳಿಂದ) ಎಂದು ಗ್ರಹಿಸಬೇಕು. ಇಲ್ಲಿ 'ಪತ್ಯುಃ' ಎಂದರೆ 'ಈಶ್ವರಸ್ಯ' ಎಂದರ್ಥ.

**प्रकाशः – कैश्चित्पत्युः** पशुपतेः मतं नादरणीयम् । अन्योन्यव्याघातेन नारायणजगत्कारणत्वबोधकवेदविरोधेन चासामंजस्यादित्यर्थ उक्तः । एतन्मते पूर्वस्मात् ''न'' इत्यनुवृत्तावप्यनैकाध्याहारदोषस्स्पष्ट इत्युपेक्ष्यान्यमत एव दोषमाह – **तन्नेत्यादिना** ।। अनुव्याख्यानार्थस्सुधायां व्यक्तः ।।

ರಾಮಾನುಜರು ಈ ಸೂತ್ರಕ್ಕೆ ಹೀಗೆ ಅರ್ಥ ಹೇಳಿದ್ದಾರೆ - 'ಪತ್ಯುಃ' ಎಂಬ ಶಬ್ದಕ್ಕೆ 'ಪಶುಪತೇಃ' (ಪಶುಪತಿಯ) ಪಶುಪತಿಯ ಮತವು ಅನಾದರಣೀಯ. ಹೀಗೆ ಹೇಳಿದರೆ ಅನ್ಯೋನ್ಯವ್ಯಾಘಾತದೋಷ ಮತ್ತು ನಾರಾಯಣನೇ ಜಗತ್‌ಕಾರಣ ಎಂದು ಹೇಳುವ ಶ್ರುತಿಯ ವಿರೋಧ. ಈ ಎರಡು ದೋಷಬರುವುದರಿಂದ ಅಸಾಮಂಜಸ್ಯ ಇರುವುದರಿಂದ ಎಂದರ್ಥ ಹೇಳಿದ್ದಾರೆ.

ಈ ರಾಮಾನುಜಮತದಲ್ಲಿ ಅನೇಕಾಧ್ಯಾಹಾರ ಎಂಬ ದೋಷ ಸ್ಪಷ್ಟವಾಗಿ ಇರುವುದರಿಂದ ಇದನ್ನು ಉಪೇಕ್ಷೆ ಮಾಡಿ ಅದ್ವೈತಿಗಳ ಮತವನ್ನೇ ನಿರಾಕರಿಸುತ್ತಿದ್ದಾರೆ 'ತನ್ನ' ಎಂಬುದಾಗಿ. ಮೂಲದಲ್ಲಿ ಉದಾಹರಿಸಿರುವ ಅನುವ್ಯಾಖ್ಯಾನದ ಶ್ಲೋಕಗಳ ಅರ್ಥವು ಸುಧಾದಲ್ಲಿ ಸ್ಪಷ್ಟವಾಗಿದೆ.

**प्रकाशः – सिद्धरूपेति** ।। त्वदुक्तरागादिदोषस्यापाद्यत्वेनासिद्धत्वमिति भावः।। **स्वव्याघातकेति** ।। ब्रह्मवादिनोऽप्यस्य दोषस्य साम्यादिति भावः।। **श्रुत्यनुसारेणेति**।। ''सो कामयत । बहुःस्यां प्रजायेयेति । तदात्मानं स्वयमकुरुत'' इत्यादिश्रुत्यनुसारेणेत्यर्थः ।। **जीवभ्रान्तीति** ।। निर्विशेषशुद्धस्याकल्पकत्वादात्मनैव कल्पितत्व आत्माश्रयाज्जीवभ्रान्तिकल्पितत्वेनेत्युक्तम् ।

ನೀವು ಹೇಳುವ ರಾಗಾದಿದೋಷವು ಈಶ್ವರನಿಗೆ ಆಪಾದ್ಯದೋಷವಾದ್ದರಿಂದ ಅದು ಅಸಿದ್ಧರೂಪವಾದದ್ದು, ಅಂದರೆ ಸಾಧ್ಯರೂಪವಾದದ್ದು ಎಂದರ್ಥ. (ನಾವು ಹೇಳುವ ಶಿವನು ದೋಷಿಯಾದ್ದರಿಂದ ಎಂಬರ್ಥವು ಸಿದ್ಧರೂಪವಾದದ್ದು) ನೀವು ತಾರ್ಕಿಕಾದಿಗಳಿಗೆ ಏನು ದೋಷವನ್ನು ಹೇಳುತ್ತಿದ್ದೀರೋ ಅದು ಬ್ರಹ್ಮವಾದಿಗಳಾದ ನಿಮಗೂ ಬರುವುದರಿಂದ ಸ್ವವ್ಯಾಘಾತ ಎಂದರ್ಥ. ಶ್ರುತಿ ಇರುವುದರಿಂದ ಅವರಿಗೆ ಹೇಳುವ ದೋಷ ನಮಗೆ ಬರುವುದಿಲ್ಲ ಎನ್ನುವಾಗ ಯಾವ ಶ್ರುತಿ ಎಂದರೆ 'ಸೋ ಕಾಮಯತ । ಬಹುಃಸ್ಯಾಂ ಪ್ರಜಾಯೇಯೇತಿ । ತದಾತ್ಮಾನಂ ಸ್ವಯಮಕುರುತ' ಎಂಬುದು. ನಿರ್ವಿಶೇಷ ಆತ್ಮನು ಶುದ್ಧವಾದ್ದರಿಂದ ಅವನು ಅಕಲ್ಪಿತ ಆತ್ಮನಿಂದಲೇ ಕಲ್ಪಿತತ್ವ ಹೇಳಿದರೆ ಆತ್ಮಾಶ್ರಯ ಬರುತ್ತದೆ. ಆದ್ದರಿಂದ ಟೀಕೆಯಲ್ಲಿ 'ಜೀವಭ್ರಾಂತಿಕಲ್ಪಿತತ್ವೇನ' ಎಂದು ಹೇಳಿದ್ದಾರೆ.

**ಪತ್ಯುರಧಿಕರಣ (2-2-11)**

**प्रकाशः** – ''सम्बन्धानुपपत्तेश्च'' इति सूत्रार्थमन्यमतेऽनूद्य निराह – **यच्चोक्तमिति** ।। अन्यैरित्यस्ति । केषाञ्चिन्मते नास्त्येवेदं सूत्रम् । न तदधिष्ठातृत्वं न प्रधानाद्यधिष्ठातृत्वमित्यर्थः ।। **सर्वज्ञस्येति** ।। ''सर्वज्ञस्य भ्रान्तत्वायोगात्'' इति न प्रयोजनाधिकरणभामत्युक्तेरिति भावः ।

'ಸಂಬಂಧಾನುಪಪತ್ತೇಶ್ಚ' ಎಂಬ ಸೂತ್ರದ ಅರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚೋಕ್ತಮ್' ಎಂಬುದರಿಂದ. ಇಲ್ಲಿಯೂ 'ಅನ್ಯೈಃ' ಎಂದು ಇಟ್ಟುಕೊಳ್ಳಬೇಕು. ರಾಮಾನುಜರ ಪ್ರಕಾರ ಈ ಸೂತ್ರವೇ ಇಲ್ಲ ಎಂಬುದಕ್ಕೆ ಪ್ರಧಾನಾಧ್ಯಧಿಷ್ಠಾತೃತ್ವ ಎಂದರ್ಥ. ಸರ್ವಜ್ಞನಾದ ಈಶ್ವರನಿಗೆ ಭ್ರಾಂತಿತ್ವವು ಕೂಡುವುದಿಲ್ಲ ಎಂಬುದಾಗಿ 'ನ ಪ್ರಯೋಜನ' ಎಂಬ ಅಧಿಕರಣದ ಭಾಮತಿಯಲ್ಲಿ ಹೇಳಿರುವುದರಿಂದ ಎಂದು ಅಭಿಪ್ರಾಯ.

### ಅಂತವತ್ತ್ವಸೂತ್ರಕ್ಕೆ ಅದ್ವೈತ ವ್ಯಾಖ್ಯಾನ ನಿರಾಸ

## तात्पर्यचन्द्रिका

**यच्चोक्तमप्रत्यक्षत्वात्प्रधानपरमाण्वादेरीश्वरस्य तदधिष्ठातृत्वानुपपत्तेरिति तृतीयार्थ इति तन्न ।**

ಪ್ರಧಾನವಾಗಲೀ ಪರಮಾಣುಗಳಾಗಲೀ ಪ್ರತ್ಯಕ್ಷವಲ್ಲವಾದ್ದರಿಂದ ಈಶ್ವರನಿಗೆ ಅವುಗಳು ಅಧಿಷ್ಠಾನ (ಪ್ರೇರಕ) ಆಗುವುದಿಲ್ಲ ಎಂದು ಅದ್ವೈತಿಗಳು ಮೂರನೇ ಸೂತ್ರಕ್ಕೆ ಅರ್ಥ ಹೇಳಿದ್ದಾರೆ. ಅದು ತಪ್ಪು.

**कर्तृत्वानुपपत्तेः साध्यत्वेन हेतूकरणायोगात् ।**

ಪ್ರೇರಕತ್ವ ಕೂಡುವುದಿಲ್ಲ ಎಂದರೆ ಅರ್ಥತಃ ಕರ್ತೃತ್ವ ಕೂಡುವುದಿಲ್ಲ ಎಂದೇ ಅಭಿಪ್ರಾಯ. ಕರ್ತೃತ್ವ ಅನುಪಪತ್ತಿ ಎಂಬುದು ಸಾಧ್ಯವಾಗಿದೆ. ಅದನ್ನು ನೀವು ಹೇತುವನ್ನಾಗಿ ಹೇಳಿರುವುದು ಸರಿಯಲ್ಲ. (ಈಶ್ವರನು ಅಧಿಷ್ಠಾತಾ (ಪ್ರೇರಕ). ಅಲ್ಲಿ ಪ್ರಧಾನಾದಿಗಳು ಅಪ್ರತ್ಯಕ್ಷವಾದ್ದರಿಂದ ಎಂದು ಅನುಮಾನ ಹೇಳಬೇಕು. ನೀವು ಹಾಗೇ ಹೇಳಲು ಸಾಧ್ಯವಿಲ್ಲ)

**परमाण्वादेरीश्वरं प्रति प्रत्यक्षत्वाच्च ।**

ಇನ್ನು ಪರಮಾಣುವೇ ಮೊದಲಾದುದು ಅಪ್ರತ್ಯಕ್ಷವಾದ್ದರಿಂದ ಎಂಬುದು ಅಸಿದ್ಧ. ಈಶ್ವರನಿಗೆ ಇವುಗಳ ಪ್ರತ್ಯಕ್ಷ ಇರುವುದರಿಂದ.

**अत एव यदुक्तं यथा ह्यप्रत्यक्षं चक्षुरादिकरणं जीवोऽधितिष्ठत्येवमीश्वरोप्रत्यक्षं प्रधानादीति चतुर्थे शङ्काभागार्थ इति तन्निरस्तम् । ईश्वरं प्रति प्रधानादेरप्रत्यक्षत्वाभावेन शङ्कानुदयात् ।**

ಆದ್ದರಿಂದಲೇ ನೀವು ಮುಂದಿನ ಸೂತ್ರದಲ್ಲಿ ಏನು ಶಂಕಾ ಮಾಡಿಕೊಂಡಿದ್ದೀರಿ, ಅದೂ ಸರಿಯಲ್ಲ. ಮುಂದಿನ ಸೂತ್ರದಲ್ಲಿ ಕಣ್ಣು ಮೊದಲಾದದು ಜೀವನಿಗೆ ಪ್ರತ್ಯಕ್ಷವಲ್ಲದಿದ್ದರೂ ಕರಣವಾಗಿರುವುದು ಕಂಡಿರುವುದರಿಂದ ಹಾಗೆಯೇ ಪ್ರಧಾನಾದಿಗಳು ಈಶ್ವರನಿಗೆ ಪ್ರತ್ಯಕ್ಷವಾಗದಿದ್ದರೂ ಕರಣವಾಗಬಹುದು ಎಂದು. ಇದು ಸರಿಯಲ್ಲ. ಏಕೆಂದರೆ ಈಶ್ವರನಿಗೆ ಪ್ರಧಾನಾದಿಗಳು ಪ್ರತ್ಯಕ್ಷವೇ ಆಗಿರುವುದರಿಂದ, ಈ ಪ್ರಶ್ನೆಯೇ (ಪ್ರಧಾನಾದಿಗಳು ಪ್ರತ್ಯಕ್ಷವಾಗದಿದ್ದರೂ ಎಂಬ) ಹುಟ್ಟುವುದಿಲ್ಲ.

**मम त्वात्मनस्तत्तत्कार्यजनने शरीरस्य सहकारित्वात्तत्र करणशब्दो युक्तः ।**

(ನಿಮ್ಮ ಪ್ರಕಾರ ಕರಣ ಶಬ್ದವು ಶರೀರ ಎಂಬರ್ಥದಲ್ಲಿ ಹೇಗೆ ಪ್ರಯುಕ್ತವಾಗಿದೆ ಎಂದರೆ ಅದಕ್ಕೆ ಉತ್ತರ ಕೊಡುತ್ತಾರೆ) ನಮ್ಮ ಪ್ರಕಾರ ಕರಣ ಎಂದರೆ ಕಾರ್ಯ ಹುಟ್ಟಿಸುವುದಕ್ಕೆ ಸಹಕಾರಿ ಎಂದರ್ಥ. ಅದು ಶರೀರವೂ ಆಗಬಹುದು. ಹಾಗಾಗಿ ಕರಣ ಶಬ್ದದಿಂದ ಶರೀರ ಎಂಬ ಅರ್ಥ ಹೇಳಿರುವುದು ಸರಿಯಾಗಿದೆ.

**यच्चोक्तमीश्वरो जीवादीनियत्तया परिच्छिनत्ति न वा । आद्ये तेषां परिमितत्वरूपमन्तवत्त्वं स्यात् । तथा च तेषां सर्वेषां मुक्तौ शून्यवादापातः । जडस्यापि जीवार्थमेव सृष्टेः । अन्त्ये ईश्वरस्यासार्वज्ञमिति पञ्चमार्थ इति तन्न ।**

'ಅಂತವತ್ವಮಸರ್ವಜ್ಞತಾ ವಾ' ಎಂಬ ಸೂತ್ರಕ್ಕೆ ಅದ್ವೈತಿಗಳು ಹೇಗೆ ಅರ್ಥ ಹೇಳಿದ್ದಾರೆ. ಈಶ್ವರನು ಜೀವಾದಿಗಳ ಪರಿಮಿತಿಯನ್ನು ತಿಳಿದಿದ್ದಾನೋ ಇಲ್ಲವೋ? ಜೀವ ಜಡಾದಿಗಳು ಎಷ್ಟು ಎಂದು ತಿಳಿದಿದ್ದಾನೆ ಎಂದರೆ ಜೀವಜಡಾದಿಗಳು ಪರಿಮಿತ ಎಂದು ಹೇಳಿದಂತಾಯಿತು. ಆಗ ಅವುಗಳಿಗೆ ಅಂತವತ್ವ (ಪರಿಮಿತರೂಪವಾದ) ಬರಬೇಕಾಗುತ್ತದೆ. (ಆದರೆ ತಾರ್ಕಿಕರು ಜೀವಜಡಗಳನ್ನು ಅನಂತ ಎಂದು ಒಪ್ಪಿದ್ದಾರೆ) ಹಾಗೆಯೇ ಈ ಎಲ್ಲಾ ಜೀವರೂ ಒಂದು ದಿನ ಸಂಸಾರದಿಂದ ಮುಕ್ತರಾದಮೇಲೆ ಜಗತ್ತು ಶೂನ್ಯವಾಗಬೇಕಾಗುತ್ತದೆ. ಜಡವೂ ಕೂಡ ಜೀವರಿಗಾಗಿಯೇ ಇರುವುದರಿಂದ ಜೀವರು ಯಾರೂ ಇಲ್ಲದಿದ್ದರೂ ಜಡವೂ ಇರುವುದಿಲ್ಲ.

ಇನ್ನು ಎರಡನೇ ವಿಕಲ್ಪ, ಅಂದರೆ ಈಶ್ವರನು ಜೀವ ಜಡಾದಿಗಳನ್ನು ಇಷ್ಟು ಎಂಬುದಾಗಿ ತಿಳಿದಿಲ್ಲ ಎಂದರೆ ಆಗ ಈಶ್ವರನು ಸರ್ವಜ್ಞ ಎಂದು ಒಪ್ಪಿದ್ದಾರೆ) ಹೀಗಾಗಿ ತಾರ್ಕಿಕರು ಹೇಳುವ ಈಶ್ವರಕರಣತ್ವ ಎಂಬುದು ಕೂಡುವುದಿಲ್ಲ ಎಂದು. ಇದು ತಪ್ಪು.

**सर्वमुक्तावपि चेतनानां जडानां च नित्यानां सत्त्वेन शून्यवादाप्रसङ्गात् । कार्याभावस्य चेष्टत्वात् । तव मत एव कल्पितस्य चिन्मात्रादन्यस्येश्वरादेः कालादेर्वेदादेः कर्मसृष्टिप्रलयादिप्रवाहस्य च कदाचिन्निः शेषनिवृत्त्यवश्यंभावेन शून्यवादापातात् ।**

ಎಲ್ಲ ಜೀವರು ಮುಕ್ತಿಯನ್ನು ಹೊಂದಿದರೂ ನಿತ್ಯರಾದ ಜೀವರೂ, ಜಡವೂ ಇರುವುದರಿಂದ ಶೂನ್ಯವಾದಾಪತ್ತಿ ಎಂಬ ದೋಷ ಬರುವುದಿಲ್ಲ. (ಅದ್ವೈತಿಯು ಪರಿಷ್ಕಾರ ಮಾಡಿಕೊಳ್ಳುತ್ತಾನೆ) ನಾವು ಶೂನ್ಯವಾದಾಪತ್ತಿ ಎಂದರೆ ಏನೂ ಇರುವುದಿಲ್ಲ ಎಂದು ಹೇಳುವುದಿಲ್ಲ. ಕಾರ್ಯವಸ್ತುಗಳು ಯಾವುದೂ ಇರುವುದಿಲ್ಲ ಎಂದಾಗಬೇಕಾಗುತ್ತದೆ ಎಂದು ಹೇಳುತ್ತೇವೆ. ಎಂದರೆ ಅದು ನಮಗೆ ಇಷ್ಟವೇ ಎಂದು.

ಉತ್ತರ : (ಪ್ರಳಯದಲ್ಲಿ ಯಾವ ಕಾರ್ಯವಸ್ತುವೂ ಇರುವುದಿಲ್ಲ, ಹಾಗೆಂದು ಶೂನ್ಯವಾದ ಏನೂ ಬರುವುದಿಲ್ಲ).

ನಿಮ್ಮ ಮತದಲ್ಲೇ ಶೂನ್ಯವಾದಾಪತ್ತಿ ಎಂಬ ದೋಷ ಬರುತ್ತದೆ. ಏಕೆಂದರೆ ನಿಮ್ಮ ಮತದಲ್ಲಿ ಈಶ್ವರ ಕಲ್ಪಿತ, ಕಾಲ, ವೇದ ಮೊದಲಾದುದು ಕರ್ಮಸೃಷ್ಟಿ ಪ್ರಳಯ ಮೊದಲಾದ ಪ್ರವಾಹವೂ ಕಲ್ಪಿತವಾದ್ದರಿಂದ ಯಾವಾಗಲಾದರೂ ನಿವೃತ್ತಿ ಆಗಲೇಬೇಕಾದ್ದರಿಂದ.

**जीवादीनामसंख्यत्वेनाविद्यमानाया ईयत्ताया अज्ञाने सार्वज्ञाहानेश्च । नच द्रव्यत्वादिना जीवानां ससंख्यत्वं साध्यमिति भामत्युक्तं युक्तम् ।**

**परमाण्वादौ घटादौ च व्यभिचारादप्रयोजकत्वात्स्वव्याघातकत्वाच्च ।मम रीत्यान्तवत्त्वस्याद्यसूत्र प्रकृतेश्वरधर्मिकत्वे ''असर्वज्ञता व'' इति वैकल्पिकेनासर्वज्ञत्वेन सामानाधिकरण्ये च सम्भवति जीवादीनामिति धर्म्यध्याहारस्य वैयधिकरण्यस्य चायोगाच्च ।।**

।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् पत्युरधिकरणं सम्पूर्णम् ।।११।।

ಜೀವರೇ ಮೊದಲಾದುದು ಅಸಂಖ್ಯವಾದ್ದರಿಂದ ಇಲ್ಲದೇ ಇರುವ ಪರಿಮಿತಿಯನ್ನು ಈಶ್ವರ ತಿಳಿಯದೇ ಇದ್ದರೆ ಅವನಿಗೆ ಅಸರ್ವಜ್ಞತ್ವ ಏನು ಬರುವುದಿಲ್ಲ. ಇದಕ್ಕೆ ಭಾಮತಿಯಲ್ಲಿ ಜೀವರ ಸಸಂಖ್ಯರೇ ಆಗಿದ್ದಾರೆ ದ್ರವ್ಯವಾದ್ದರಿಂದ ಎಂದು ಸಮಾಧಾನ ಹೇಳಿದ್ದಾರೆ. ಇದು ಸರಿಯಲ್ಲ.

ನೀವು ಹೀಗೆ ಅನುಮಾನ ಪ್ರಯೋಗ ಮಾಡಿದರೆ ಆಗ ದ್ರವ್ಯತ್ವ ಹೇತುವಿಗೆ ಪರಮಾಣುವಿನಲ್ಲೂ ಘಟಾದಿಗಳಲ್ಲೂ ವ್ಯಭಿಚಾರ ಬರುತ್ತದೆ. ಅಲ್ಲದೇ ಈ ಹೇತುವು ಅಪ್ರಯೋಜಕ (ದ್ರವ್ಯತ್ವವಿರಲಿ ಪರಿಮಿತತ್ವ ಬೇಡ ಎಂದರೆ ನಿಮಗೆ ಯಾವುದೇ ಅನುಕೂಲತರ್ಕ ಇಲ್ಲ) ಅಲ್ಲದೇ ಸ್ವವ್ಯಾಘಾತವೂ ಬರುತ್ತದೆ. ನಮ್ಮ ಪ್ರಕಾರ 'ಅಂತವತ್ತ್ವಮಸರ್ವಜ್ಞತಾ ವಾ' ಎಂಬ ಸೂತ್ರದಲ್ಲಿ ಮೊದಲನೇ ಸೂತ್ರದಲ್ಲಿ ಪ್ರಕೃತವಾದ 'ಪತ್ಯುಃ' ಅಂದರೆ ಈಶ್ವರನಿಗೆ ಎಂಬ ಪದವು ಅಧ್ಯಾಹೃತವಾಗಿದೆ. ಆಗ ಈಶ್ವರನಿಗೆ ದೇಹವಿದೆ ಎಂದರೆ ಅಂತವತ್ತ್ವ ಅಥವಾ ಅಸರ್ವಜ್ಞತ್ವ ಬರಬೇಕಾಗುತ್ತದೆ ಎಂಬ ಅರ್ಥ ಸ್ವರಸವಾಗಿ ಕೂಡುತ್ತದೆ. ಇಲ್ಲಿ ಅಂತವತ್ತ್ವಕ್ಕೂ ಅಸಾರ್ವಜ್ಞತ್ವಗೂ ಸಾಮಾನಾಧಿಕರಣ್ಯವೂ ಸರಿಯಾಗುತ್ತದೆ. (ಸಾಮಾನಾಧಿಕರಣ್ಯ ಎಂದರೆ ಏಕಾರ್ಥಾಭಿಧಾಯಕತ್ವ) ಈ ರೀತಿಯಾಗಿ ಅರ್ಥ ಹೇಳಲು ಬರುವಾಗ 'ಜೀವಾನಾಂ' ಎಂಬುದಾಗಿ ನೀವು ಅಧ್ಯಾಹಾರ ಮಾಡಿಕೊಂಡಿರುವುದು ಸರಿಯಲ್ಲ. ಆಗ ವೈಯಧಿಕರಣ್ಯ ಬರುತ್ತದೆ.)

(ನಮ್ಮ ಪ್ರಕಾರ ಪೂರ್ವಪ್ರಕೃತನಾದ ಈಶ್ವರನೊಂದಿಗೆ ಅಂತವತ್ತ್ವದ ಅನ್ವಯ ಮಾಡಬೇಕು. ಅಂತವತ್ತ್ವಕ್ಕೆ ಧರ್ಮೀ ಈಶ್ವರ. ಈ ರೀತಿಯಾದ ಅಂತವತ್ತ್ವವುಳ್ಳ ಈಶ್ವರನಲ್ಲಿಯೇ ಅಸಾರ್ವಜ್ಞ್ಯ ಬರುತ್ತದೆ. ಹಾಗಾಗಿ ಸಾಮಾನಾಧಿಕರಣ್ಯ. ಈ ಎರಡೂ ಈಶ್ವರನಿಗೇ ಹೇಳುವುದರಿಂದ ಅದ್ವೈತಿಗಳ ಪ್ರಕಾರ ಅಂತವತ್ತ್ವ ಹೇಳುವುದು ಜೀವರಿಗೆ ಅಸಾರ್ವಜ್ಞತ್ವ ಹೇಳುವುದು ಈಶ್ವರನಿಗೆ ಆಗ ಅಂತವತ್ತ್ವಕ್ಕೂ ಅಸಾರ್ವಜ್ಞ್ಯಕ್ಕೂ ಸಾಮಾನಾಧಿಕರಣ್ಯ (ಏಕಾರ್ಥಾಭಿಧಾಯಕತ್ವ) ಬರಲಿಲ್ಲ ಎಂದು ಭಾವ.)

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಪತ್ಯುರಧಿಕರಣವು ಸಂಪೂರ್ಣವಾಯಿತು

**प्रकाशः —**

''अधिष्ठानानुपपत्तेश्च'' इति सूत्रार्थं परमतेऽनूद्य निराह — **यच्चोक्तमिति** ।। केषाञ्चिन्मते त्वशरीरस्येश्वरस्य प्रधानाद्यधिष्ठानानुपपत्तेरित्यर्थः ।। जडसृष्टि-सम्भवात्कुतश्शून्यवाद इत्यत आह — **जडस्यापीति** ।।

'ಅಧಿಷ್ಠಾನಾನುಪಪತ್ತೇಶ್ಚ' ಎಂಬ ಸೂತ್ರಕ್ಕೆ ಅದ್ವೈತಿಗಳು ಹೇಳುವ ಅರ್ಥವನ್ನು ನಿರಾಕರಿಸುತ್ತಿದ್ದಾರೆ 'ಯಚ್ಚೋಕ್ತಂ' ಎಂಬುದಾಗಿ. ರಾಮಾನುಜರ ಮತದಲ್ಲಿ ಈ ಸೂತ್ರಕ್ಕೆ ಈಶ್ವರನಿಗೆ ಶರೀರವಿಲ್ಲವಾದ್ದರಿಂದ ಅವನು ಪ್ರಧಾನಾದಿಗಳು ಅಧಿಷ್ಠಾನವಾಗಲು ಸಾಧ್ಯವಿಲ್ಲ ಎಂದು ಅರ್ಥ. ಜೀವರು ಪರಿಮಿತ ಎಂಬ ಪಕ್ಷದಲ್ಲಿ ಶೂನ್ಯವಾದಾಪತ್ತಿ ಎಂಬ ದೋಷ ಹೇಳಿದ್ದರು. ಆದರೆ ಜೀವರೆಲ್ಲರಿಗೂ ಮೋಕ್ಷವಾದರೂ ಜಡದ ಸೃಷ್ಟಿ

ಆಗುತ್ತಿರಬಹುದಲ್ಲ ಹಾಗಾಗಿ ಶೂನ್ಯವಾದ ಎಲ್ಲಿ ಬರುತ್ತದೆ ಎಂದರೆ ಅದಕ್ಕೆ ಉತ್ತರವಾಗಿ ಹೇಳುತ್ತಿದ್ದಾರೆ 'ಜಡಸ್ಯಾಪಿ' ಎಂಬುದಾಗಿ.

**प्रकाशः – चेतनानामिति ।।** त्वन्मत इव तन्मते ब्रह्मैक्याभावादिति भावः।। **अविद्यमानाया इति ।।** अत एव भामत्यां ''यस्य त्वं त एव नास्ति तस्य तदग्रहणं नासर्वज्ञतामावहति'' इत्युक्तमिति भावः ।।

ನಿತ್ಯವಾದ ಚೇತನ ಮತ್ತು ಜಡಗಳು ಇರುವುದರಿಂದ ಶೂನ್ಯವಾದಪ್ರಸಂಗವಿಲ್ಲ ಎಂದು ಉತ್ತರ ಹೇಳಿದ್ದರು. ಅದು ಏಕೆಂದರೆ ಅದ್ವೈತಿಗಳ ಮತದಲ್ಲಿ ಹೇಗೆ ಜೀವರೆಲ್ಲರೂ ಬ್ರಹ್ಮನಲ್ಲಿ ಐಕ್ಯ ಹೊಂದುವರೋ ಹಾಗೇ ತಾರ್ಕಿಕರು ಒಪ್ಪುವುದಿಲ್ಲ. ಅವರು ಜೀವರು ನಿತ್ಯ ಎಂದು ಹೇಳುತ್ತಾರೆ.

ಈಶ್ವರನಿಗೆ ಅಸಾರ್ವಜ್ಞತೆ ಬರುತ್ತದೆ ಎಂಬುದಕ್ಕೆ ಇಲ್ಲದೇ ಇರುವ ಪರಿಮಿತಿಯನ್ನು ತಿಳಿಯದಿದ್ದರೆ ದೋಷವಲ್ಲ ಎಂದು ಉತ್ತರ ಹೇಳಿದ್ದರು. ಇದನ್ನೇ ಭಾಮತೀಕಾರರೂ ಹೇಳಿದ್ದಾರೆ. ಯಾರ ಪ್ರಕಾರ ಜೀವರಿಗೆ ಅಂತ್ಯವೇ ಇಲ್ಲವೋ ಅವರಿಗೆ ಈಶ್ವರನು ಜೀವರ ಅಂತ್ಯವನ್ನು ಗ್ರಹಿಸದೇ ಇರುವುದು ಅಸಾರ್ವಜ್ಞತೆಯನ್ನು ತಂದುಕೊಡುವುದಿಲ್ಲ (ಶಶವಿಷಾಣವನ್ನು ತಿಳಿಯದೇ ಇದ್ದರೆ ಅವನು ಅಜ್ಞಾನಿ ಎನಿಸುವುದಿಲ್ಲ)

**प्रकाशः – द्रव्यत्वादिनेति ।।** संख्यान्यत्वे सति प्रमेयत्वमादिपदार्थः ।

ಮೂಲದಲ್ಲಿ 'ದ್ರವ್ಯತ್ವಾದಿ' ಎಂಬಲ್ಲಿರುವ 'ಆದಿ' ಪದದಿಂದ 'ಸಂಖ್ಯಾನ್ಯತ್ವೇ ಸತಿ ಪ್ರಮೇಯತ್ವಾತ್' ಎಂಬ ಹೇತುವನ್ನು ಇಟ್ಟುಕೊಳ್ಳಬೇಕು. (ಅಂದರೆ ಸಂಖ್ಯೆಗಿಂತ ಬೇರೆಯಾಗಿದ್ದು ಪ್ರಮೇಯವಾಗಿದೆಯೋ ಅದು ಸಸಂಖ್ಯ(ಪರಿಮಿತ) ) ಇಲ್ಲಿಯೂ ಅದೇ ವ್ಯಭಿಚಾರ ಬರುತ್ತದೆ.

'ಸಸಂಖ್ಯತ್ವಂ ಸಂಖ್ಯಾವಿಶೇಷತ್ವಂ' ಸಸಂಖ್ಯಕ್ಕೆ ಎಂದರೆ ಸಂಖ್ಯಾವಿಶೇಷದಿಂದ ಕೂಡಿದ್ದು ಎಂದರ್ಥ.

**प्रकाशः – ससंख्यत्वं** संख्याविशेषवत्त्वमित्यर्थः ।। **स्वव्याघातकत्वाचेति ।।** संख्यावत्त्वेनान्तवत्त्वसाधनस्येति भावः ।

ನೀವು ಸಸಂಖ್ಯತ್ವವನ್ನು ಜೀವರಿಗೆ ಸಾಧನೆಮಾಡಿ ಅದರಿಂದ ಅಂತವತ್ವವನ್ನು ಸಾಧಿಸುವುದಾದರೆ ಆಗ ಸ್ವವ್ಯಾಘಾತ ಎಂಬ ದೋಷ ಬರುತ್ತದೆ. (ಅಂದರೆ ತಾರ್ಕಿಕರಿಗೆ ಏನು ದೋಷ ಹೇಳಿದಿರೋ ಅದು ನಿಮಗೂ ಬರುತ್ತದೆ ಎಂದರ್ಥ. ನೀವು ಘಟಾಧಿಗಳನ್ನು ಸಸಂಖ್ಯ ಎಂದು ಒಪ್ಪಿದ್ದೀರಿ ಆದರೆ ಅದರಲ್ಲಿ ಅಂತವತ್ವ ಇಲ್ಲ)

**प्रकाशः –** नन्वेतदाशंक्य भामत्यामेव ''अस्माकं चागमगम्यस्यैतद्बाधित-विषयतयाऽनुमानं भविष्यति'' इति समाहितम् । कल्पतरौ च ''ननु ब्रह्माप्यन्तवत्। एकत्वादेकघटवदिति किं न स्यादत आह अस्माकं चेति'' इत्यवतारितमिति चेन्न।

ಭಾಮತಿಯಲ್ಲಿ ಹೀಗೆ ಹೇಳಿದ್ದಾರೆ - ತಾರ್ಕಿಕರು ಜೀವರಿಗೆ ಸಸಂಖ್ಯತ್ವವನ್ನು ಹೇಳಿದರೆ ಆಗ ಅಂತವತ್ವ ಬರುತ್ತದೆ ಎಂದು ನಾವು ಹೇಳಿದರೆ ಆಗ ಪ್ರಶ್ನೆ ಬರಬಹುದು. ನಿಮ್ಮಲ್ಲೂ ಕೂಡ ಬ್ರಹ್ಮ ಒಬ್ಬನೇ. ಆದ್ದರಿಂದ

ಸಸಂಖ್ಯ, ಹಾಗಾಗಿ ಬ್ರಹ್ಮನಿಗೂ ಅಂತವತ್ವ ಬರಲಿ ಎಂದು. ಅದಕ್ಕೆ ಭಾಮತೀಕಾರರು ಹೀಗೆ ಉತ್ತರ ಕೊಟ್ಟಿದ್ದಾರೆ.

ನಮ್ಮ ಪ್ರಕಾರ ಬ್ರಹ್ಮ ಆಗಮವೇದ್ಯ. ಹಾಗಾಗಿ ಅವನ ವಿಷಯದಲ್ಲಿ ಅನುಮಾನ (ಸಸಂಖ್ಯ ಎಂದಾದರೆ ಅಂತವತ್ವ ಬರಬೇಕಾಗುತ್ತದೆ) ಬಾಧಿತವಿಷಯ ಎಂದಾಗುತ್ತದೆ. ಅಂದರೆ ಈ ಅನುಮಾನವು ವೇದದಿಂದ ಬಾಧಿತವಾಗುತ್ತದೆ, ಹಾಗಾಗಿ ದೋಷವಿಲ್ಲ ಎಂದು. ಇದು ತಪ್ಪು.

**ಪ್ರಕಾಶಃ** – त्वन्मतेऽप्यवेद्यत्वरूपस्वप्रकाशत्वस्य ब्रह्मणोऽङ्गीकारेण तस्यागमावेद्यत्वादिति भावः ।

ಏಕೆಂದರೆ ನೀವು ಬ್ರಹ್ಮನಿಗೆ ಸ್ವಪ್ರಕಾಶತ್ವವನ್ನು ಹೇಳುತ್ತೀರಿ. ಸ್ವಪ್ರಕಾಶತ್ವ ಎಂದರೆ ಅವೇದ್ಯತ್ವ. ಹಾಗಾಗಿ ಬ್ರಹ್ಮನು ವೇದದಿಂದ ವೇದ್ಯನೇ ಅಲ್ಲ. (ಆದ್ದರಿಂದ ಅನುಮಾನವು ಬಾಧಿತವಿಷಯವಾಗುವುದಿಲ್ಲ. ಆ ದೋಷ ನಿಮಗೂ ಬರುತ್ತದೆ).

**ಪ್ರಕಾಶಃ – केचित्तु बहुजीववादे ''परमाणुप्रदेशेऽपि ह्यनन्ताः प्राणिराशयः'' इत्यादिप्रमाणबलेन जीवासंख्यत्वस्य त्वयापि वाच्यत्वेन द्रव्यत्वादिना संख्याविशेषवत्त्वानुमानं स्वव्याघातकमित्याहुः ॥**

ರಾಮಾನುಜರು ಹೀಗೆ ಹೇಳುತ್ತಾರೆ - ನೀನು ಬಹುಜೀವವಾದಿ. ಹಾಗಾಗಿ ನೀನೂ ಕೂಡ 'ಪರಮಾಣು ಪ್ರದೇಶದಲ್ಲೂ (ಅತಿ ಚಿಕ್ಕಜಾಗದಲ್ಲೂ) ಅನಂತ ಜೀವರಾಶಿಗಳಿವೆ' ಎಂಬ ಪ್ರಮಾಣಬಲದಿಂದ ಜೀವರು ಅನಂತ ಎಂದು ಒಪ್ಪಲೇಬೇಕು. ಆದ್ದರಿಂದ ದ್ರವ್ಯತ್ವ ಹೇತುವಿನಿಂದ ಸಂಖ್ಯಾವಿಶೇಷತ್ವವನ್ನು ಹೇಳಿದರೆ ಸ್ವವ್ಯಾಘಾತ ಬರುತ್ತದೆ.(ನೀನು ಒಪ್ಪಿರುವ ಪ್ರಮೇಯಕ್ಕೇ ವಿರೋಧ ಬರುತ್ತದೆ)

**ಪ್ರಕಾಶಃ – मम रीत्येति ॥ एतेन पूर्वत्र ''भोगादिभ्यः'' इत्यनेनेश्वरस्य कर्मफलभोगप्रसङ्ग उक्तः । ईश्वरस्य पुण्यपापरूपकर्मवत्त्वेऽङ्गीक्रियमाणे जीववत्सृष्टि-संहारास्पदत्वरूपान्तवत्त्वमसर्वज्ञता चापद्यत इति वाशब्दस्य चार्थत्वमुपेत्यान्तवत्त्वा-सर्वज्ञतयोरीश्वरे सामानाधिकरण्यं वदतां केषाञ्चित्सूत्रार्थोऽपि प्रत्युक्तः । वाशब्दे चशब्दार्थत्वस्यास्वारस्यात् ।**

ಕೆಲವರು ಹೀಗೆ ಹೇಳುತ್ತಾರೆ - 'ಕರಣವಚ್ಚೇನ್ನ ಭೋಗಾದಿಭ್ಯಃ' ಎಂಬಲ್ಲಿ ಈಶ್ವರನಿಗೆ ಕರ್ಮಫಲಭೋಗ ಪ್ರಸಂಗ ಹೇಳಿದ್ದೇವೆ. ಈಶ್ವರನಿಗೆ ಒಂದು ವೇಳೆ ಅಂತಹ ಪುಣ್ಯಪಾಪರೂಪವಾದ ಕರ್ಮವನ್ನೂ ಅಂಗೀಕರಿಸುವುದಾದರೆ ಆಗ ಜೀವರಂತೆ ಈಶ್ವರನಿಗೂ ಸೃಷ್ಟಿ ಸಂಹಾರರೂಪವಾದ ಅಂತವತ್ವ ಮತ್ತು ಅಸಾರ್ವಜ್ಞತಾ ಬರಬೇಕಾಗುತ್ತದೆ ಎಂದು. ಇವರು ಸೂತ್ರದಲ್ಲಿರುವ 'ವಾ' ಎಂಬುದಕ್ಕೆ 'ಚ' ಎಂದು ಅರ್ಥ ಹೇಳುತ್ತಾರೆ. ಹಾಗೇ ಅಂತವತ್ವ ಅಸರ್ವಜ್ಞತಾ ಎರಡಕ್ಕೂ ಸಾಮಾನಾಧಿಕರಣ್ಯವನ್ನು ಈಶ್ವರನಲ್ಲಿ ಹೇಳುತ್ತಾರೆ. ಇದು ಸರಿಯಲ್ಲ ಏಕೆಂದರೆ ಸೂತ್ರದಲ್ಲಿರುವ 'ವಾ' ಶಬ್ದಕ್ಕೆ 'ಚ' ಎಂದು ಅರ್ಥ ಹೇಳುವುದು ಸ್ವರಸವಲ್ಲ.

ಪತ್ಯುರಧಿಕರಣ (2-2-11)

**प्रकाशः** – अत एव ''वैकल्पिकेन'' इत्युक्तम् । अन्तवत्त्वादित्येव पूर्तौ विशिष्यासर्वज्ञताग्रहणे प्रयोजनाभावाच्च । आपादकस्याध्याहार्यत्वाच्चेति । **प्रकाशः** – मन्मते तु पत्युः करणवत्त्वे इत्यापादकं प्रकृतम् ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे पत्युरधिकरणं सम्पूर्णम् ।।११।।**

ಈ ಅಭಿಪ್ರಾಯದಿಂದಲೇ ಚಂದ್ರಿಕಾದಲ್ಲಿ 'ವೈಕಲ್ಪಿಕೇನ' ಎಂದಿದ್ದಾರೆ. ಸೂತ್ರದಲ್ಲಿ 'ಅಂತವತ್ತ್ವಾತ್' ಎಂದಷ್ಟೇ ಹೇಳಿದ್ದರೆ ಸಾಕಾಗಿತ್ತು, ಅಸರ್ವಜ್ಞತ್ವಾವನ್ನು ವಿಶೇಷವಾಗಿ ಹೇಳಿದ್ದು ವ್ಯರ್ಥ. ಆಪಾದಕವನ್ನು ನೀವು ಅಧ್ಯಾಹಾರ ಮಾಡಬೇಕು. (ಇಲ್ಲಿ ಆಪಾದಕ-ಈಶ್ವರನಿಗೂ ಪಾಪಪುಣ್ಯರೂಪವಾದ ಕರ್ಮ ಒಪ್ಪುವುದಾದರೆ ಎಂಬುದು)

ನಮ್ಮ ಮತದಲ್ಲಿಯಾದರೋ 'ಪತ್ಯುಃ ಕರಣವತ್ತ್ವೇ' ಎಂಬ ಆಪಾದಕವು ಪ್ರಸಕ್ತವೇ ಆಗಿದೆ. (ಪಶುಪತಿಗೆ ಕರಣ (ದೇಹ) ವನ್ನು ಒಪ್ಪಿದರೆ) ಎಂದರ್ಥ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಪತ್ಯುರಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಉತ್ಪತ್ತ್ಯಧಿಕರಣ
(೨-೨-೧೨)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಉತ್ಪತ್ತ್ಯಧಿಕರಣ

## ದೇವದೇವೋತ್ತಮ ದೇವತಾಸಾರ್ವಭೌಮ ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – उत्पत्त्यसम्भवात् ।।**

ಶಕ್ತಿಯು ಜಗತ್ತಿಗೆ ಕಾರಣವಲ್ಲ. ಏಕೆಂದರೆ ಪುರುಷನಿಲ್ಲದೇ ಕೇವಲ ಸ್ತ್ರೀಯಿಂದ ಸಂತತಿಯ ಉತ್ಪತ್ತಿಯು ಅತ್ಯಂತ ಅಸಂಭಾವಿತವಾಗಿದೆ. ಶಕ್ತಿದೇವತೆಯು ಸ್ತ್ರೀಯಾದ್ದರಿಂದ ಪುರುಷನಿಲ್ಲದೇ ಜಗತ್ತಿಗೆ ಕಾರಣಳು ಆಗುವುದಿಲ್ಲ.

## ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – न शक्तिर्जगत्कारणम् । कुतः? **उत्पत्त्यसम्भवात्** शक्तिशब्दितकेवलस्त्रीभ्यः अपत्योत्पत्त्योगादित्यर्थः ।।१।।

ಶಕ್ತಿಯು ಜಗತ್ತಿಗೆ ಕಾರಣವಲ್ಲ. ಏಕೆಂದರೆ ಉತ್ಪತ್ತ್ಯಸಂಭವಾತ್ = ಶಕ್ತಿಶಬ್ದಿಂದ ಪ್ರತಿಪಾದ್ಯವಾದ ಕೇವಲ ಸ್ತ್ರೀಯಿಂದ ಮಗುವಿನ ಜನನವು ಅಯುಕ್ತವಾಗಿದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – शक्तिपक्षं दूषयति –**

**।। उत्पत्त्यसम्भवात् ।।१।।**

**न हि पुरुषाननुगृहीतस्त्रीभ्य उत्पत्तिर्दृश्यते ।।१।।**

ಅನುವಾದ - ಶಕ್ತಿ ಎಂಬ ಸ್ತ್ರೀದೇವತೆ ಜಗತ್ತಿಗೆ ಕಾರಣವಾಗಿದ್ದಾಳೆ ಎಂಬ ಮತವನ್ನು ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ. ಪುರುಷನ ಸಹಾಯವಿಲ್ಲದ ಕೇವಲ ಸ್ತ್ರೀಯಿಂದ ಉತ್ಪತ್ತಿ ಆಗುವುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ.

ಪ್ರತಿಪದಾರ್ಥ -- ಶಾಕ್ತಮತದ ನಿರಾಕರಣೆಗಾಗಿ ಅಧಿಕರಣ ಹೊರಟಿದೆ - ಶಕ್ತಿಪಕ್ಷಂ = ಸ್ತ್ರೀಶಕ್ತಿಯೇ ಜಗತ್ತಿಗೆ ಕಾರಣ ಎಂಬ ಪಕ್ಷವನ್ನು, ದೂಷಯತಿ = ಸೂತ್ರಕಾರರು ದೂಷಣೆ ಮಾಡುತ್ತಿದ್ದಾರೆ.

ಪುರುಷಾನನುಗೃಹೀತ = ಪುರುಷನ ಸಹಾಯವಿಲ್ಲದ, ಸ್ತ್ರೀಭ್ಯಃ = ಕೇವಲ ಹೆಣ್ಣಿನಿಂದ, ಉತ್ಪತ್ತಿಃ = ಯಾವುದೇ ಹುಟ್ಟುವಿಕೆಯು, ನಹಿ ದೃಶ್ಯತೇ = ಲೋಕದಲ್ಲಿ ಕಂಡಿರುವುದಿಲ್ಲ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका –**

**अधिकरणार्थं दर्शयति – शक्तीति ।। पूर्वन्यायेन निरस्तमपि शक्तिमतमसाधारणदोषाविष्करेण पुनर्दूषयतीति भावः । अत्र विष्णोर्जगत्कारणत्वे शक्तिमतविरोधपरिहारादस्ति शास्त्रादिसङ्गतिः । विष्णोर्जगत्कारणत्वमुक्तम् । तत्र शाक्तेयमतविरोधेऽनुपपत्तिशङ्का स्यादतस्तन्निरसनीयमेव ।**

ಅಧಿಕರಣದ ಪ್ರಮೇಯವನ್ನು 'ಶಕ್ತಿ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ಹಿಂದಿನ ಅಧಿಕರಣದ ನ್ಯಾಯದಿಂದ ಈ ಮತವನ್ನು ನಿರಾಕರಣೆ ಮಾಡಿದ್ದರೂ ಕೂಡ ಶಕ್ತಿಮತವನ್ನು ಅಸಾಧಾರಣದೋಷದ ಆವಿಷ್ಕಾರದ ಮೂಲಕ ಪುನಃ ದೂಷಣೆ ಮಾಡುತ್ತಿದ್ದಾರೆ ಎಂದು ತಿಳಿಯಬೇಕು. ಈ ಅಧಿಕರಣದಲ್ಲಿ

ವಿಷ್ಣುವಿನ ಜಗತ್ಕಾರಣತ್ವವಿಷಯಕ್ಕೆ ಶಕ್ತಿಮತದ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ. ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಲಾಯಿತು. ಈ ಪ್ರಮೇಯಕ್ಕೆ ಶಾಕ್ತೇಯಮತದ ವಿರೋಧವು ಪ್ರಾಪ್ತವಾದಾಗ ಇದು ಅನುಪಪನ್ನವಾಗುತ್ತದೆಂಬ ಆಶಂಕೆಯು ಬರುತ್ತದೆ. ಆದ್ದರಿಂದ ಈ ಮತವನ್ನು ನಿರಾಕರಣೆ ಮಾಡಲೇಬೇಕು.

ವಿವರಣೆ - ಹಿಂದಿನ ಅಧಿಕರಣದಲ್ಲಿ ಶಕ್ತಿಮತವನ್ನು ನಿರಾಕರಣೆ ಮಾಡಿದ್ದಾಗಿದೆ. ಆದ್ದರಿಂದ ಗತಾರ್ಥತ್ವವು ಬರುತ್ತದಲ್ಲವೆ? ಎಂಬ ಆಶಂಕೆಯನ್ನು 'ಪುನರ್ನ್ಯಾಯೇನ' ಇತ್ಯಾದಿ ಟೀಕೆಯಿಂದ ಪರಿಹರಸುತ್ತಿದ್ದಾರೆ. ಆದ್ದರಿಂದಲೇ ದಶಮಸ್ಕಂಧದಲ್ಲಿ 'ಪಾಷಂಡವಾಮಶೈವಾದ್ಯೈಃ ವೇದಮಾರ್ಗಾಃ' ಎಂಬುದಾಗಿ ಶಾಕ್ತಮತವನ್ನು ಪ್ರತ್ಯೇಕವಾಗಿ ಪರಿಗಣಿಸಲಾಗಿದೆ (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – विष्णोर्जगत्कारणत्वं विषयः । युक्तमयुक्तं वेति सन्देहः । समयविवादः सन्देहबीजम् । न युक्तमिति पूर्वः पक्षः । शक्तिरेव खलु सार्वज्ञादिगुणशालिनी सकलजगज्जननी श्रुतिस्मृतीतिहासपुराणेषु पठ्यते । अतो न हरेर्जगत्कारणत्वलक्षणं सम्भवतीति प्राप्ते सिद्धान्तयत्सूत्रमुपन्यस्य व्याचष्टे ।। उत्पत्तीति ।। न शक्तेरेव जगत्कर्तृत्वं युक्तम् । पुरुषाननुगृहीतत्त्वात् । न हि पुरुषाननुगृहीतस्त्रीमात्रात् क्वचिदुत्पत्तिर्दृष्टेति भावः ।। ४२ ।।**

ವಿಷ್ಣುವಿನ ಜಗತ್ಕಾರಣತ್ವವು ಅಧಿಕರಣದ ವಿಷಯ. ಇದು ವಿಷ್ಣುವಿಗೆ ಯುಕ್ತವೋ ಅಯುಕ್ತವೋ? ಎಂಬುದು ಸಂದೇಹ. ಸಮಯಗಳಲ್ಲಿರುವ ವಿವಾದವು ಸಂದೇಹಬೀಜ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ ಎಂಬುದು ಪೂರ್ವಪಕ್ಷ.

ಸಾರ್ವಜ್ಞ್ಯ ಮೊದಲಾದ ಗುಣಗಳುಳ್ಳವಳು ಶಕ್ತಿಯೇ ಆಗಿರುವಳು. ಮತ್ತು ಸಮಸ್ತಜಗತ್ತಿಗೂ ಇವಳೇ ಕಾರಣಳು. ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳೆಲ್ಲವೂ ಇವಳನ್ನೇ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ಜಗತ್ಕಾರಣತ್ವಲಕ್ಷಣವು ಶ್ರೀಹರಿಯಲ್ಲಿ ಅಸಂಭಾವಿತವಾಗುತ್ತದೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪವಾದ ಸೂತ್ರವನ್ನು 'ಉತ್ಪತ್ತಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಜಗತ್‌ಕರ್ತೃತ್ವವು ಶಕ್ತಿಯಲ್ಲಿ ಯುಕ್ತವಾಗುವುದಿಲ್ಲ. ಏಕೆಂದರೆ ಪುರುಷನ ಅನುಗ್ರಹ ಇರುವುದಿಲ್ಲ. ಪುರುಷನ ಅನುಗ್ರಹ ಇಲ್ಲದ ಕೇವಲ ಸ್ತ್ರೀಯಿಂದ ಉತ್ಪತ್ತಿಯಾಗಿದ್ದು ಎಲ್ಲೂ ಕೂಡ ಕಂಡಿಲ್ಲ.

**ವಿವರಣೆ - ಈ ಅಧಿಕರಣದಲ್ಲಿ ಅಸಾಧಾರಣದೋಷವನ್ನು ಶಕ್ತಿಮತಕ್ಕೆ ಹೇಳುತ್ತಿದ್ದಾರೆ. ಅದೇನೆಂದರೆ ಪುರುಷನ ಅನುಗ್ರಹ ಇಲ್ಲದೆ ಕೇವಲ ಸ್ತ್ರೀಯಿಂದ ಎಲ್ಲೂ ಕೂಡ ಉತ್ಪನ್ನವಾಗಿರುವುದು ಕಂಡಿಲ್ಲ. ಆದರೆ ಶಾಕ್ತರು ಪುರುಷನನ್ನು ಒಪ್ಪದೇ ಕೇವಲ ಶಕ್ತಿ ಎಂಬ ಸ್ತ್ರೀಯಿಂದ ಸಮಸ್ತ ಜಗತ್ತು**

ಉತ್ಪನ್ನವಾಗುತ್ತದೆಂದು ಒಪ್ಪುತ್ತಾರೆ. ಇದು ಸಾಧ್ಯವೇ ಇಲ್ಲ. ಅತ್ಯಂತ ಅಸಂಭಾವಿತವಾಗಿದೆ ಎಂಬುದು ಈ ಸೂತ್ರದ ಅಭಿಪ್ರಾಯ.

ಆದರೆ ಸ್ತ್ರೀಯರ ಸಹಕಾರ ಇಲ್ಲದೆ ಪುರುಷನಿಂದ ಉತ್ಪತ್ತಿಯಾಗಬಹುದು; ದ್ರೋಣಾದಿಗಳಲ್ಲಿ ಹಾಗೆ ಕಂಡಿದೆ. (ಗುರ್ವರ್ಥದೀಪಿಕಾ)

## ಬ್ರಹ್ಮಸೂತ್ರ

**सूत्रम् – न च कर्तुः करणम् ॥**

ಸ್ತ್ರೀಶಕ್ತಿಗೆ ಶಿವನು ಅನುಗ್ರಹ ಮಾಡುತ್ತಾನೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಅಂಥ ಶಿವನಿಗೆ ಜ್ಞಾನಸಾಧನಗಳಾದ ಇಂದ್ರಿಯಗಳೇ ಇರುವುದಿಲ್ಲ.

## ಸೂತ್ರದೀಪಿಕಾ

**सूत्रदीपिका –** यतः कर्तुः शक्त्यनुग्राहकशिवस्य च करणं ज्ञानदिसाधनं न । अतो न तस्य शक्त्यनुग्राहकत्वमित्यर्थः ॥२॥

ಯಾವ ಕಾರಣದಿಂದ ಕರ್ತುಃ = ಶಕ್ತಿ ದೇವತೆಗೆ ಅನುಗ್ರಾಹಕನಾದ ಶಿವನಿಗೆ, ಕರಣಂ = ಜ್ಞಾನ ಸಾಮಗ್ರಿಗಳು ಇರುವುದಿಲ್ಲವೋ, ಆ ಕಾರಣದಿಂದ ನ = ಶಕ್ತ್ಯನುಗ್ರಾಹಕತ್ವವು ಶಿವನಲ್ಲಿ ಯುಕ್ತವಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ॥ न च कर्तुः करणम् ॥२॥**

**यदि पुरुषोऽङ्गीक्रियते तस्यापि करणाभावादनुपपत्तिः ॥२॥**

ಅನುವಾದ - ಸ್ತ್ರೀ ಶಕ್ತಿಗೆ ಸಹಾಯಕನಾಗಿ ಒಬ್ಬ ಪುರುಷನನ್ನು ಒಪ್ಪಿದರೂ ಆ ಪುರುಷನಿಗೆ ಯಾವುದೇ ಇಂದ್ರಿಯಗಳು ಇಲ್ಲದ ಕಾರಣ ಸ್ತ್ರೀಶಕ್ತಿಯಿಂದ ಜಗತ್ತಿಗೆ ಸೃಷ್ಟಿಯನ್ನು ಒಪ್ಪಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಸದಾಶಿವ ಎಂಬ ಅನುಗ್ರಾಹಕನಾದ ಪುರುಷನಿದ್ದಾನೆ ಎಂಬ ವಾದವನ್ನು ನಿರಾಕರಣೆ ಮಾಡುತ್ತಿದ್ದಾರೆ - ಯದಿ = ಒಂದುವೇಳೆ, ಪುರುಷಃ = ಸದಾಶಿವನೆಂಬ ಪುರುಷನು, ಅಂಗೀಕ್ರಿಯತೇ = ಅಂಗೀಕರಿಸಲ್ಪಟ್ಟರೂ, ತಸ್ಯಾಪಿ = ಅವನಿಗೆ, ಕರಣಾಭಾವಾತ್ = ಯಾವುದೇ ಇಂದ್ರಿಗಳಿಲ್ಲದ ಕಾರಣ, ಅನುಪಪತ್ತಿಃ = ಸ್ತ್ರೀಶಕ್ತಿಯಿಂದ ಜಗತ್ತಿನ ಸೃಷ್ಟಿಯು ನಡೆಯುವುದಿಲ್ಲ.

## ತತ್ವಪ್ರಕಾಶಿಕಾ

**तत्वप्रकाशिका – अस्त्येव शक्त्यनुग्राहकः पुरुषः सदाशिवोऽतस्तस्या जगदुत्पत्तिर्युक्तेति केषाञ्चिच्छाक्तेयानां मतं निराकुर्वत्सूत्रमुपन्यस्य व्याचष्टे ।। न चेति ।। यदि पुरुषोऽङ्गीक्रियते शक्त्यनुग्राहकस्तथापि तस्योत्पत्त्युपयोगिज्ञानादि-साधनाभावेनोत्पत्त्यनुपपत्तिरेवेत्यर्थः ।। ४३ ।।**

ಶಕ್ತಿಗೆ ಅನುಗ್ರಾಹಕನಾದ ಒಬ್ಬ ಪುರುಷನಿದ್ದಾನೆ. ಅವನೇ ಸದಾಶಿವನು. ಆದ್ದರಿಂದ ಶಕ್ತಿಯಿಂದ ಜಗತ್ತಿನ ಉತ್ಪತ್ತಿಯಾಗುತ್ತಿದೆ ಎಂಬುದಾಗಿ ಶಕ್ತಿಮತದಲ್ಲಿ ಕೆಲವರು ಮಾತ್ರ ಒಪ್ಪುತ್ತಾರೆ. ಅವರನ್ನು ನಿರಾಕರಣೆ ಮಾಡುವುದಕ್ಕಾಗಿ 'ನಚ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಒಂದುವೇಳೆ ಶಕ್ತಿಗೆ ಅನುಗ್ರಾಹಕನಾದ ಪುರುಷನನ್ನು ಅಂಗೀಕಾರ ಮಾಡುವುದಾದರೆ ಆಗಲೂ ಕೂಡ ಜಗತ್ತಿನ ಉತ್ಪತ್ತಿಗೆ ಉಪಯೋಗಿಯಾದ ಜ್ಞಾನಾದಿಸಾಧನಗಳು ಇರುವುದಿಲ್ಲ. ಆದ್ದರಿಂದ ಜಗತ್ತಿನ ಉತ್ಪತ್ತಿಯು ಶಕ್ತಿಯಿಂದ ಅನುಪಪನ್ನವೇ ಆಗಿದೆ.

ವಿವರಣೆ - ಶಾಕ್ತಮತದಲ್ಲಿ ಕೆಲವರ ಅಭಿಪ್ರಾಯ ಹೀಗಿದೆ - ಶಕ್ತಿಯೇ ಜಗತ್ತಿನ ಸೃಷ್ಟಿಗೆ ಸ್ವತಂತ್ರಕಾರಣ. ಶಿವನು ಗೌಣವಾಗಿ ಕಾರಣನಾಗುತ್ತಾನೆ. ಇದು ವಾಮಮತದ ಅಭಿಪ್ರಾಯ. ಆದರೆ ಶಕ್ತಿಗೆ ಅನುಗ್ರಹಕನಾದ ಶಿವನಿಗೆ ಇಂದ್ರಿಯಗಳನ್ನೇ ಒಪ್ಪುವುದಿಲ್ಲ. ಆದ್ದರಿಂದ ಇಂದ್ರಿಯಾದಿಗಳಿಲ್ಲದವನು ಉತ್ಪಾದಕನಾಗಲಾರ. ಅಜಾಗಲಸ್ತನದಂತೆ ಶಿವನನ್ನು ಅಂಗೀಕಾರ ಮಾಡಿರುವುದೇ ವ್ಯರ್ಥವಾಯಿತು.

## ಬ್ರಹ್ಮಸೂತ್ರ

**सूत्रम् – विज्ञानादिभावे वा तदप्रतिषेधः ।।**

ರುದ್ರನಿಗೆ ಸರ್ವಜ್ಞತ್ವಾದಿ ಗುಣಗಳು ಇರುತ್ತವೆನ್ನುವುದಾದರೆ, ಈ ಮತವು ಶೈವರ ಮತದಲ್ಲಿ ಸೇರುತ್ತದೆ. ಆದ್ದರಿಂದ ಶೈವರ ಮತವನ್ನು ನಿರಾಕರಿಸಿ ಶಾಕ್ತದರ್ಶನವನ್ನು ಸಮರ್ಥಿಸಿದಂತೆ ಆಗುವುದಿಲ್ಲ.

## ಸೂತ್ರದೀಪಿಕಾ

**सूत्रदीपिका – विज्ञानादिभावे** वा शिवस्य ज्ञानेच्छादिसत्त्वेऽङ्गीकृते च । **तदप्रतिषेधः** तस्य शैवपक्षस्याप्रतिषेधः अनिरासः अनुमतिः कृति स्यात् । च दूषित एवेत्यर्थः ।।३।।

ವಿಜ್ಞಾನಾದಿಭಾವೇ ವಾ = ರುದ್ರನಿಗೆ ಜ್ಞಾನ, ಇಚ್ಛಾ ಮೊದಲಾದ ಶಕ್ತಿಗಳನ್ನು ಒಪ್ಪಿದರೆ, ತದಪ್ರತಿಷೇಧಃ = ಶೈವರ ಮತವನ್ನು ನಿರಾಕರಿಸಿ, ಶಾಕ್ತಮತವನ್ನು ಸ್ಥಾಪಿಸಿದಂತೆ ಆಗುವುದಿಲ್ಲ. ಅಂದರೆ ಶೈವರ ಮತವನ್ನು ಅನುಮೋದನೆ ಮಾಡಿದಂತಾಯಿತು. ದೂಷಣೆ ಮಾಡಿದಂತಾಗಲಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। विज्ञानादिभावे वा तदप्रतिषेधः ।।३।।**

**यदि विज्ञानादिकरणं तस्याङ्गीक्रियते तदा तत एव सृष्ट्याद्युपपत्तेरीश्वरवादान्तर्भावः ।।३।।**

ಅನುವಾದ - ಒಂದು ವೇಳೆ ಸ್ತ್ರೀಶಕ್ತಿಗೆ ಸಹಾಯ ಮಾಡುವ ಪುರುಷನಿಗೆ ಶರೀರ ಇಂದ್ರಿಯ ಮೊದಲಾದವುಗಳೆಲ್ಲವು ಇರುತ್ತವೆ. ಮತ್ತು ಸರ್ವಜ್ಞನೂ ಆಗಿರುತ್ತಾನೆ. ಎಂದು ಹೇಳಬೇಕು. ಆವಾಗ ಆ ಪುರುಷನಿಂದಲೇ ಜಗತ್ತಿನ ಸೃಷ್ಟ್ಯಾದಿಗಳನ್ನು ಒಪ್ಪಲು ಬರುವಾಗ ಮಧ್ಯದಲ್ಲಿ ಸ್ತ್ರೀಶಕ್ತಿಯನ್ನು ಒಪ್ಪಿಯೂ ಉಪಯೋಗವಿಲ್ಲ. ಆವಾಗ ಶಾಕ್ತಮತವು ಈಶ್ವರವಾದದಲ್ಲೇ ಅಂತರ್ಭಾವವನ್ನು ಹೊಂದುತ್ತದೆ.

ಪ್ರತಿಪದಾರ್ಥ-- ಯದಿ= ಒಂದುವೇಳೆ, ವಿಜ್ಞಾನಾದಿಕರಣಂ= ಜ್ಞಾನ ಮೊದಲಾದವುಗಳಿಗೆ ಕಾರಣವಾದ ಇಂದ್ರಿಯಾದಿಗಳನ್ನು, ತಸ್ಯ = ಈಶ್ವರನಿಗೆ, ಅಂಗೀಕ್ರಿಯತೇ = ಅಂಗೀಕರಿಸಿದರೆ, ತದಾ = ಆವಾಗ, ತತ ಏವ = ಆ ವ್ಯಕ್ತಿಯಿಂದಲೇ ಸೃಷ್ಟ್ಯಾದ್ಯುಪಪತ್ತೇಃ = ಜಗತ್ತಿನ ಸೃಷ್ಟಿ ಮೊದಲಾದವು ಉಪಪನ್ನವಾಗುವುದರಿಂದ, ಈಶ್ವರವಾದಾಂತರ್ಭಾವಃ = ಶಾಕ್ತಮತವು ಈಶ್ವರವಾದ(ಮತ)ದಲ್ಲಿಯೇ ಅಂತರ್ಭಾವವನ್ನು ಹೊಂದುತ್ತದೆ.

## ತತ್ವಪ್ರಕಾಶಿಕಾ

**तत्वप्रकाशिका – शक्त्यनुग्राहकस्य पुंसः सार्वज्ञादिसद्भावेन युक्ततरा जगदुत्पत्तिरिति केचित् । तन्मतनिरासाय सूत्रं पठित्वा व्याचष्टे – विज्ञानेति ।।**

ಶಕ್ತಿಗೆ ಅನುಗ್ರಾಹಕನಾದ ಸದಾಶಿವನು ಸಾರ್ವಜ್ಞ್ಯಾದಿ ಗುಣಗಳುಳ್ಳವನೆಂದು ಅಂಗೀಕರಿಸುತ್ತೇವೆ. ಆದ್ದರಿಂದ ಜಗತ್ತಿನ ಉತ್ಪತ್ತಿಯು ಯುಕ್ತವಾಗುತ್ತದೆಂದು ಶಾಕ್ತಮತದಲ್ಲಿ ಕೆಲವರು ಹೇಳುತ್ತಾರೆ. ಇವರ ಮತವನ್ನು ನಿರಾಕರಣೆ ಮಾಡುವುದಕ್ಕಾಗಿ 'ವಿಜ್ಞಾನಾದಿ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – यदि शक्त्यनुग्राहकस्येश्वरस्य विज्ञानादिकरणत्वमङ्गीक्रियते तदा तेनैव जगदुत्पत्तिसम्भवाद् व्यर्थं शक्तेरपि पृथक्कर्तृत्वाङ्गीकरणं स्यात् । तथा चानेन शाक्तेयमतेन प्रकृतपाशुपतमतस्याप्रतिषेधः कृतः स्यात् । अनुमतमेव स्यात् । तच्च निरस्तमिति भावः ।। ४४ ।।**

ಉತ್ಪತ್ತ್ಯಧಿಕರಣ (೨-೨-೧೨)

ಒಂದುವೇಳೆ ಶಕ್ತಿಗೆ ಅನುಗ್ರಾಹಕನಾದ ಈಶ್ವರನು ವಿಜ್ಞಾನಾದಿಗಳನ್ನು ಹೊಂದಿರುತ್ತಾನೆಂದು ಒಪ್ಪಿದರೆ, ಆಗ ಅವನಿಂದಲೇ ಜಗತ್ತಿನ ಉತ್ಪತ್ತಿಯು ಸಂಭಾವಿತವಾಗುತ್ತದೆ. ಮಧ್ಯದಲ್ಲಿ ಶಕ್ತಿಯನ್ನು ಪ್ರತ್ಯೇಕವಾಗಿ ಒಪ್ಪಿ ಆ ಶಕ್ತಿಗೆ ಕರ್ತೃತ್ವಾದಿಗಳನ್ನು ಒಪ್ಪುವುದು ವ್ಯರ್ಥವಾಗುತ್ತದೆ. ಈ ಶಾಕ್ತೇಯ ಮತದಿಂದ ಪಾಶುಪತಮತವನ್ನು ನಿಷೇಧ ಮಾಡಿದಂತೆ ಆಗುವುದಿಲ್ಲ. ಅಂಗೀಕರಿಸಿದಂತೆಯೇ ಆಯಿತು. ಈಗಾಗಲೇ ಪಾಶುಪತ ಮತವನ್ನು ನಿರಾಕರಣೆ ಮಾಡಿದ್ದೇವೆ.

ವಿವರಣೆ - ಪಾಶುಪತಮತಕ್ಕೂ ಶಾಕ್ತೇಯಮತಕ್ಕೂ ವ್ಯತ್ಯಾಸವೇ ಇಲ್ಲದಂತಾಯಿತು ಎಂಬುದು ಸೂತ್ರದ ಅಭಿಪ್ರಾಯ.

ಆಕ್ಷೇಪ - ಶೈವರು ಶಿವನೊಬ್ಬನನ್ನೇ ಒಪ್ಪುತ್ತಾರೆ. ಶಾಕ್ತರು ಶಿವ ಹಾಗೂ ಶಕ್ತಿ ಎರಡನ್ನು ಒಪ್ಪುವುದರಿಂದ ಬಹಳ ವ್ಯತ್ಯಾಸವಿದೆಯಲ್ಲವೆ? ಆದ್ದರಿಂದ ಇದು ಈಶ್ವರವಾದದಲ್ಲಿ ಹೇಗೆ ಅಂತರ್ಭಾವಹೊಂದುತ್ತದೆ. ಈ ಅಭಿಪ್ರಾಯದಿಂದ 'ಯದಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಮೇಲ್ನೋಟಕ್ಕೆ ವ್ಯತ್ಯಾಸವಿರಬಹುದು. ಆದರೆ ಶಕ್ತಿಯನ್ನು ಒಪ್ಪುವುದೇ ಕೂಡ ವ್ಯರ್ಥ ಎಂಬುದು ಅಭಿಪ್ರಾಯ. ಆದ್ದರಿಂದ ಶೈವಮತನಿರಾಕರಣೆಯಿಂದಲೇ ಇವರ ಮತವನ್ನೂ ನಿರಾಕರಣೆ ಮಾಡಿದಂತಾಯಿತು.

## ಬ್ರಹ್ಮಸೂತ್ರ

**सूत्रम् – विप्रतिषेधाच्च ।।**

ಹೀಗೆ ಸಕಲಶ್ರುತಿ-ಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಶಾಕ್ತಮತವು ಅಯುಕ್ತವಾಗಿದೆ.

## ಸೂತ್ರದೀಪಿಕಾ

**सूत्रदीपिका –** सकलश्रुतिस्मृतिविरुद्धत्वाच्च शाक्तेयमतमसमञ्जसमयुक्तमित्यर्थः ।।४।।

।। इति श्रीजगन्नाथयतिकृतायां सूत्रदीपिकायां
द्वितीयाध्यायस्य द्वितीयः पादः ।।२।।२।।

ವಿಪ್ರತಿಷೇಧಾಚ್ಚ = ಸಕಲಶ್ರುತಿ-ಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಶಾಕ್ತಮತವು ಅತ್ಯಂತ ಅಸಮಂಜಸವಾಗಿದೆ.

ಇಲ್ಲಿಗೆ ಜಗನ್ನಾಥಯತಿಗಳಿಂದ ರಚಿಸಲ್ಪಟ್ಟ ಸೂತ್ರದೀಪಿಕೆಯಲ್ಲಿ ಎರಡನೆಯ ಅಧ್ಯಾಯದ
ಎರಡನೆಯ ಪಾದವು ಸಮಾಪ್ತವಾಯಿತು.

ಶ್ರೀ ಕೃಷ್ಣಾರ್ಪಣಮಸ್ತು
ಪರಿಪೂರ್ಣಚಂದ್ರಿಕಾ

## ಬ್ರಹ್ಮಸೂತ್ರಭಾಷ್ಯ

**भाष्यम् – ।। विप्रतिषेधाच्च ।।४।।**

**सकलश्रुत्यादिविरुद्धत्वाच्चासमञ्जसम् ।।४।।**

**।। इति उत्पत्त्यधिकरणम् ।।१२।।**
**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये द्वितीयस्याध्यास्य द्वितीयः पादः ।। २ ।।**

ಅನುವಾದ - ಸಕಲ ಶ್ರುತಿಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಶಾಕ್ತಮತವು ಅಸಮಂಜಸವಾಗಿದೆ.

ಪ್ರತಿಪದಾರ್ಥ -- ಸಕಲಶ್ರುತ್ಯಾದಿವಿರುದ್ಧತ್ವಾತ್ = 'ನ ಋತೇ ತ್ವತ್ಕ್ರಿಯತೇ ಇವೇ ಮೊದಲಾದ ವೇದವಾಕ್ಯಗಳ ವಿರೋಧ ವಿರುವುದರಿಂದಲೂ, ಅಸಮಂಜಸಮ್ = ಶಾಕ್ತಮತವು ಅಸಾಧುವಾಗಿದ.

ಇಲ್ಲಿಗೆ ಉತ್ಪತ್ತ್ಯಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತವಾದ ಬ್ರಹ್ಮಸೂತ್ರ ಭಾಷ್ಯದಲ್ಲಿ ಎರಡನೆಯ ಅಧ್ಯಾಯದ ಎರಡನೇಪಾದವು ಸಮಾಪ್ತವಾಯಿತು.

## ತತ್ವಪ್ರಕಾಶಿಕಾ

**तत्वप्रकाशिका – एवं शाक्तेयमतत्रयं पृथङ् पृथङ् निरस्य समुदितदूषणेनापि निराकुर्वत्सूत्रमुपन्यस्य व्याचष्टे ।। विप्रतिषेधाच्चेति ।। असमञ्जसं शक्तिमतमिति शेषः ।**

ಹೀಗೆ ಮೂರು ಶಾಕ್ತೇಯಮತಗಳನ್ನು ಪ್ರತ್ಯೇಕವಾಗಿ ನಿರಾಕರಣೆ ಮಾಡಿ ಎಲ್ಲರಿಗೂ ಸಾಧಾರಣವಾದ ದೋಷವನ್ನು ಹೇಳುವ ಮೂಲಕ ಅವರ ಮತವನ್ನು ನಿರಾಕರಣೆ ಮಾಡುವ ಸೂತ್ರವನ್ನು 'ವಿಪ್ರತಿಷೇಧಾಚ್ಚ' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಶಕ್ತಿಮತವು ಅಸಮಂಜಸವಾಗಿದೆ ಎಂಬುದನ್ನು ಶೇಷಪೂರಣಮಾಡಿಕೊಳ್ಳಬೇಕು.

तत्वप्रकाशिका – अतोऽयुक्तत्वाच्छाक्तेयमतस्याविरोधकत्वेनोपपन्नमेव विष्णोर्जगत्कारणत्वलक्षणमिति सिद्धम् ।। ४५ ।।

इति श्रीमदानन्दतीर्थभगवत्पादाचार्यविरचितस्य श्रीमद्ब्रह्मसूत्रभाष्यस्य टीकायां श्रीमज्जयतीर्थमुनिविरचितायां तत्त्वप्रकाशिकायां द्वितीयाध्यायस्य द्वितीयः पादः ।।

श्रीरस्तु ।। ।। श्री कृष्णार्पणमस्तु ।।

ಆದ್ದರಿಂದ ಶಾಕ್ತೇಯಮತವು ಅಯುಕ್ತವಾಯಿತು. ಈ ಮತದ ವಿರೋಧವು ಇಲ್ಲದ ಕಾರಣ ವಿಷ್ಣುವಿನ ಜಗತ್ಕಾರಣತ್ವಲಕ್ಷಣವು ಯುಕ್ತವೇ ಆಯಿತು.

ಇಲ್ಲಿಗೆ ಶ್ರೀಮದಾನಂದತೀರ್ಥಭಗವದ್‌ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಟೀಕೆಯಲ್ಲಿ ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ ತತ್ವಪ್ರಕಾಶಿಕೆಯಲ್ಲಿ ಎರಡನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣಮಸ್ತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## उत्पत्त्यधिकरणम्

### ಪಂಚರಾತ್ರದಲ್ಲಿ ಹೇಳಿದ್ದು ಪರಮ ಪ್ರಮಾಣ

**।। उत्पत्त्यसम्भवात् ।। अन्ये तु पञ्चरात्रे यदुच्यते वासुदेवात् सङ्कर्षणनामा जीवो जायत इति तन्न ।**

ಈ ಅಧಿಕರಣದಲ್ಲಿ ನೇರವಾಗಿ ಪರಮತ ನಿರಾಕರಣೆಯನ್ನೇ ಆರಂಭಿಸುತ್ತಿದ್ದಾರೆ) ಅದ್ವೈತಿಗಳು 'ಉತ್ಪತ್ತ್ಯಸಂಭವಾತ್' ಎಂಬ ಮೊದಲನೇ ಸೂತ್ರಕ್ಕೆ ಅರ್ಥ ಹೇಳುವಾಗ ಪಂಚರಾತ್ರದಲ್ಲಿ ಏನು ಹೇಳಿದ್ದಾರೆಂದರೆ. ವಾಸುದೇವನಿಂದ ಸಂಕರ್ಷಣನಾಮಕನಾದ ಜೀವ ಹುಟ್ಟುತ್ತಾನೆ ಎಂದು ಅದು ಸರಿಯಲ್ಲ. (ಈ ಅಧಿಕರಣವನ್ನು ಅದ್ವೈತಿಗಳು ಪಂಚರಾತ್ರ ನಿರಾಕರಣೆ ರೂಪದಲ್ಲಿ ವ್ಯಾಖ್ಯಾನಿಸಿದ್ದಾರೆ.)

**जीवानादित्वस्य श्रुत्यादिसिद्धत्वेन कृतहानाकृताभ्यागमादिप्रसङ्गेन च जीवोत्पत्त्यसम्भवादित्याद्येनोक्त्वा**

ಜೀವರು 'ಅನಾದಿ' ಎಂಬುದಾಗಿ ಶ್ರುತಿ ಮೊದಲಾದುದರಿಂದ ಸಿದ್ಧವಾಗಿದೆ. ಹಾಗಾಗಿ ಜೀವರಿಗೆ ಉತ್ಪತ್ತಿಯನ್ನು ಒಪ್ಪಿದರೆ ಕೃತಹಾನ - ಅಕೃತಅಭ್ಯಾಗಮ ಎಂಬ ದೋಷ ಬರಬೇಕಾಗುತ್ತದೆ. ಹಾಗಾಗಿ ಜೀವರಿಗೆ ಉತ್ಪತ್ತಿ ಎಂಬುದು ಅಸಂಭವ. ಹೀಗೆ ವ್ಯಾಖ್ಯಾನಿಸಿದ್ದಾರೆ. (ಕೃತಹಾನ ಹೇಗೆಂದರೆ ಯಾರಾದರೊಬ್ಬ ಜೀವ ಪುಣ್ಯಕರ್ಮ ಮಾಡಿದರೆ ಅವನು ಸ್ವರ್ಗಪ್ರಾಪ್ತಿಗಿಂತ ಮೊದಲೇ ಸತ್ತರೆ ಆಗ ಅವನು ಮಾಡಿದ ಪುಣ್ಯ ವ್ಯರ್ಥವಾಗುತ್ತದೆ. ಅಕೃತಅಭ್ಯಾಗಮ ಹೇಗೆಂದರೆ, ಇನ್ನೊಬ್ಬ ಹೊಸದಾಗಿ ಹುಟ್ಟಿ ಸ್ವರ್ಗಸುಖ ಅನುಭವಿಸುತ್ತಾನೆ. ಆಗ ಅವನು ಮಾಡದೇ ಇರುವ ಪುಣ್ಯದ ಫಲ ಅನುಭವಿಸುತ್ತಾನೆ.

**यच्चोच्यते सङ्कर्षणाख्याज्जीवात्प्रद्युम्नो नाम मनो जायत इति तदपि न । नहि कर्तुः करणमुत्पद्यमानं दृश्यते । कर्ता च जीवः करणं च मन इति द्वितीयेनोक्त्वा**

ಇನ್ನು 'ನಚ ಕರ್ತುಃ, ಕರಣಂ' ಎಂಬ ಎರಡನೆಯ ಸೂತ್ರಕ್ಕೆ ಅವರು - ಸಂಕರ್ಷಣ ಎಂಬ ಜೀವನಿಂದ ಪ್ರದ್ಯುಮ್ನ ಎಂಬ ಮನಸ್ಸು ಹುಟ್ಟುತ್ತದೆ ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ ಕರ್ತೃವಿನಿಂದ ಕರಣ ಹುಟ್ಟುವುದು ಎಲ್ಲಿಯೂ ಕಂಡಿಲ್ಲ. ಕರ್ತಾ ಜೀವ, ಕರಣ ಮನಸ್ಸು, ಎಂದು ಅರ್ಥ ಹೇಳುತ್ತಾರೆ. (ಇಲ್ಲಿ ಕರ್ತೃವಿನಿಂದ ಕರಣ ಹುಟ್ಟಲು ಸಾಧ್ಯವಿಲ್ಲ ಎಂಬುದನ್ನು ಕ್ರಿಯೆ ನಡೆಯುವ ಕಾಲದಲ್ಲೇ ಎಂದು ಗ್ರಹಿಸಬೇಕು).

**अथ सङ्कर्षणादयो न जीवरूपाः किन्तु परमात्मरूपा एवेति तेषामपि तद्वदेव ज्ञानैश्वर्यादिसद्भाव इति मतम् । तथाप्युत्पत्त्यसम्भवस्याप्रतिषेध एव । सर्वेषां भगवद्रूपत्वेनातिशयाभावात् । भवितव्यं हि कार्यकारणयोरतिशयेनेति तृतीयेनोक्त्वा**

ಮೂರನೇ ಸೂತ್ರವೆನಿಸಿದ 'ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ' ಎಂಬಲ್ಲಿ ಅವರೇ ಒಂದು ಪೂರ್ವಪಕ್ಷ ಮಾಡಿಕೊಂಡು ಉತ್ತರ ಕೊಡುತ್ತಾರೆ. ಪಂಚರಾತ್ರದಲ್ಲಿ ಹೇಳಿದ ಸಂಕರ್ಷಣ ಪ್ರದ್ಯುಮ್ನ ಇದೆಲ್ಲಾ ಜೀವ ಮನಸ್ಸು ಹೀಗೆಂದು ತಿಳಿಯಬಾರದು. ಅದೆಲ್ಲಾ ಪರಮಾತ್ಮನ ರೂಪಗಳೇ, ಅವುಗಳೂ ಕೂಡ ಪರಮಾತ್ಮನಂತೆ ಜ್ಞಾನ ಐಶ್ವರ್ಯಗಳಿಂದ ಸಂಪನ್ನವಾದವುಗಳೇ ಎಂದು ಹೇಳುವುದಾದರೆ ಆಗಲೂ ಉತ್ಪತ್ತಿ ಕೂಡುವುದಿಲ್ಲ ಎಂಬುದೇ ದೋಷ. ಎಲ್ಲವೂ ಭಗವಂತನ ರೂಪಗಳೇ ಆದರೆ ಆಗ ಅತಿಶಯವೇನೂ ಇಲ್ಲ ಎಂದಾಯಿತು. ಆದರೆ ಒಂದು ಕಾರಣ ಇನ್ನೊಂದು ಕಾರ್ಯ ಎಂದರೆ ಆಗ ಅವೆರಡರ ಮಧ್ಯೆ ಒಂದು ಅತಿಶಯ ಇರಲೇಬೇಕು. ಪ್ರಕೃತದಲ್ಲಿ ಹಾಗಿಲ್ಲವಾದ್ದರಿಂದ ಉತ್ಪತ್ತಿ ಕೂಡುವುದಿಲ್ಲ.

**परस्परं वेदेन च विप्रतिषेधश्चास्मिन् शास्त्रे दृश्यते । ज्ञानैश्वर्यादीनां कचिद्गुणत्वोक्तेः कचिच्च स्वरूपत्वोक्तेः । चतुर्वेदेषु परं श्रेयोऽलब्ध्वा शाण्डिल्य इदं शास्त्रमधीत्वा नित्यादिवेदनिन्दादर्शनाच्चेति चतुर्थेनोक्तम् ।**

'ವಿಪ್ರತಿಷೇಧಾಚ್ಚ' ಎಂಬ ನಾಕನೆಯ ಸೂತ್ರಕ್ಕೆ ಹೀಗೆ ಅರ್ಥ - ಈ ಪಂಚರಾತ್ರದಲ್ಲಿ ಪರಸ್ಪರ ವಿಪ್ರತಿಷೇಧ ಕಾಣುತ್ತಿದೆ. ಅಷ್ಟೇ ಅಲ್ಲದೇ ವೇದದಿಂದಲೂ ವಿಪ್ರತಿಷೇಧ (ವಿರೋಧ) ಕಾಣುತ್ತಿದೆ. ಪರಸ್ಪರ ವಿಪ್ರತಿಷೇಧ ಹೇಗೆಂದರೆ ಪಂಚರಾತ್ರದಲ್ಲಿ ಕೆಲವು ಕಡೆ ಜ್ಞಾನ ಐಶ್ವರ್ಯ ಇವುಗಳನ್ನು ಗುಣ ಎಂದು ಹೇಳಿದ್ದಾರೆ. ಕೆಲವು ಕಡೆ ಇವೆಲ್ಲಾ ಭಗವಂತನ (ಗುಣಿ)ಸ್ವರೂಪ ಎಂದು ಹೇಳಿದ್ದಾರೆ. ಇನ್ನು ವೇದದ ವಿಪ್ರತಿಷೇಧ ಹೇಗೆಂದರೆ, ಶಾಂಡಿಲ್ಯ ಎಂಬ ಋಷಿಯು ನಾಕು ವೇದಗಳನ್ನೂ ಓದಿ

ಶ್ರೇಯಸ್ಸನ್ನು ಶ್ರೇಯಸ್ಸಾಧನವನ್ನೂ ಕಾಣದೆ ಈ ಪಂಚರಾತ್ರವನ್ನು ಅಧ್ಯಯನ ಮಾಡಿದನು ಎಂದು ಹೇಳಲಾಗಿದೆ. ಇದು ವೇದವನ್ನು ನಿಂದೆ ಮಾಡುವ ವಾಕ್ಯ. (ವೇದದಿಂದ ದೊರಕದೇ ಇದ್ದದ್ದು ಇದರಿಂದ ದೊರಕುತ್ತದೆ ಎಂದರೆ ಅದು ವೇದವನ್ನು ಅವಹೇಳನ ಮಾಡಿದಂತೆ ಎಂದು ಅಭಿಪ್ರಾಯ.)

**तथा च पञ्चरात्राप्रामाण्यप्रतिपादकमिदमधिकरणमित्याहुः । तन्न ।**

ಹೀಗೆ ಇಡೀ ಅಧಿಕರಣವು ಪಂಚರಾತ್ರಾಗಮವು ಅಪ್ರಮಾಣ ಎಂದು ಪ್ರತಿಪಾದನೆ ಮಾಡುತ್ತಿದೆ ಎಂದು ಹೇಳುತ್ತಾರೆ. ಇದು ತಪ್ಪು.

**''ऋग्वेदो यजुर्वेदः सामवेदोऽथर्वाङ्गिरस इतिहासः पुराणं विद्या उपनिषदः श्लोकाः'' इति श्रुत्या ''इतिहासपुराणः पञ्चमो वेदानां वेदः'' इत्यादिश्रुत्या विरोधात्।**

ಪಂಚರಾತ್ರ ಅಪ್ರಮಾಣ ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಅನೇಕ ಶ್ರುತಿವಿರೋಧ ಬರುವುದರಿಂದ. (ಮೊದಲ ಶ್ರುತಿಯಲ್ಲಿ 'ಶ್ಲೋಕ' ಎಂದು ಪಂಚರಾತ್ರವನ್ನು ಹೇಳಿದ್ದಾರೆ. ಎರಡನೇ ಶ್ರುತಿಯಲ್ಲಿ 'ಇತಿಹಾಸ' ಪದದಿಂದ ಹೇಳಿದ್ದಾರೆ.)

**''कृतं शतसहस्रं हि श्लोकानां हितमुत्तमम्'' इति भारते पञ्चरात्रस्य निरुपपदश्लोकशब्देनोक्तेः –**

ಶ್ಲೋಕ ಶಬ್ದದಿಂದ ಪಂಚರಾತ್ರವನ್ನು ಗ್ರಹಿಸುವುದಕ್ಕೆ ಏನು ಪ್ರಮಾಣ ? ಎಂದರೆ ಅದಕ್ಕೆ 'ಕೃತಂ ಶತಸಹಸ್ರಂ ಹಿ ಶ್ಲೋಕಾನಾಂ ಹಿತಮುತ್ತಮಮ್' ಎಂಬ ಮಹಾಭಾರತ ವಾಕ್ಯದಲ್ಲಿ ಉಪಪದ ರಹಿತವಾದ ಶ್ಲೋಕ ಶಬ್ದದಿಂದ ಪಂಚರಾತ್ರವನ್ನು ಹೇಳಿರುವುದೇ ಪ್ರಮಾಣ.

(ಕೇವಲ 'ಶ್ಲೋಕ' ಎಂದರೆ ಪಂಚರಾತ್ರವನ್ನೇ ಗ್ರಹಿಸಬೇಕು. ಬೇರೆ ಶ್ಲೋಕಗಳನ್ನು ಹೇಳುವಾಗ ಒಂದು ಉಪಪದವನ್ನು ಸೇರಿಸಿ ಹೇಳುತ್ತಾರೆ. ಉದಾ:- ಪುರಾಣಶ್ಲೋಕ ಇತ್ಯಾದಿ.)

**भारतं पञ्चरात्रञ्च मूलरामायणं तथा ।**
**इतिहास इति प्रोक्तं ब्रह्मायन्तु पुराणकम् ।।**
**इति पाद्मे पञ्चरात्रस्येतिहासत्वोक्तेः।**

'ಇತಿಹಾಸ' ಶಬ್ದಕ್ಕೆ ಪಂಚರಾತ್ರ ಎಂಬ ಅರ್ಥ ಹೇಗೆ ? ಎಂದರೆ ಅದಕ್ಕೆ ಉತ್ತರ, ಭಾರತ, ಪಂಚರಾತ್ರ ಮೂಲರಾಮಾಯಣ ಇದನ್ನು ಇತಿಹಾಸ ಎಂದು ಕರೆಯುತ್ತಾರೆ ಎಂಬ ಪದ್ಮಪುರಾಣದ ವಾಕ್ಯವೇ ಪ್ರಮಾಣ.

**वेदेन पञ्चरात्रेण भक्त्या यज्ञेन चैव हि ।**
**दृश्योऽहं नान्यथाऽदृश्यो वर्षकोटिशतैरपि ।। इति वाराहोक्तेः ।**

ವೇದ, ಪಂಚರಾತ್ರ, ಭಕ್ತಿ, ಯಜ್ಞ ಇವುಗಳಿಂದ ನಾನು ವೇದ್ಯ. ಹಾಗಲ್ಲದಿದ್ದರೆ ಸಾವಿರಾರು ವರ್ಷ ಪ್ರಯತ್ನಪಟ್ಟರೂ ಅವೇದ್ಯ ಎಂದು ವರಾಹಪುರಾಣ ಹೇಳುತ್ತಿದೆ.

**ऋग्यजुस्सामाथर्वाश्च भारतं पञ्चरात्रकम् ।**
**मूलरामायणञ्चैव शास्त्रमित्यभिधीयते ।**
**यच्चानुकूलमेतस्य तच्च शास्त्रं प्रकीर्तितम् ।**
**अतोऽन्यो ग्रन्थविस्तारो नैव शास्त्रं कुवर्त्म तत् ।।**

**इति च स्कान्दोक्तेः ।**

ಋಕ್, ಯಜುಸ್, ಸಾಮ, ಅಥರ್ವ, ಭಾರತ, ಪಂಚರಾತ್ರ, ಮೂಲರಾಮಾಯಣ ಇವುಗಳನ್ನು ಶಾಸ್ತ್ರ ಎಂದು ಕರೆಯುತ್ತಾರೆ. ಹಾಗೇ ಇವುಗಳಿಗೆ ಯಾವುದು ಅನುಕೂಲವೋ ಅದನ್ನೂ ಶಾಸ್ತ್ರ ಎಂದು ಕರೆಯುತ್ತಾರೆ. ಇನ್ನು ಉಳಿದ ಎಲ್ಲಾ ಗ್ರಂಥರಾಶಿಯೂ ಶಾಸ್ತ್ರವಲ್ಲ, ಅದು ಕೆಟ್ಟ ಹಾದಿ (ಉಪದೇಶ).

**ऋगाद्या भारतञ्चैव पञ्चरात्रमथाखिलम् ।**
**मूलरामायणञ्चैव पुराणञ्चैतदात्मकम् ।**
**ये चानुयायिनस्तेषां सर्वे ते च सदागमाः ।**
**दुरागमास्तदन्ये ये तैर्न ज्ञेयो जनार्दनः ।। इति च ब्रह्माण्डेनोक्तेः ।**

ಋಕ್ ಮೊದಲಾದುದು, ಮಹಾಭಾರತ, ಸಮಗ್ರವಾದ ಪಂಚರಾತ್ರ, ಮೂಲರಾಮಾಯಣ ಇದನ್ನು ಅನುಸರಿಸುವ ಪುರಾಣಗಳು, ಇವುಗಳಿಗೆ ವಿರುದ್ಧವಲ್ಲದುದು. ಇವೇ ಸದಾಗಮಗಳು. ಇನ್ನು ಉಳಿದವು ದುರಾಗಮಗಳು ಜನಾರ್ದನನನ್ನು ದುರಾಗಮಗಳಿಂದ ತಿಳಿಯಬಾರದು ಎಂದು ಬ್ರಹ್ಮಾಂಡ ವಚನವಿದೆ.

**वेदार्थपूरकं ज्ञेयं पञ्चरात्रं यतोऽखिलम् ।**
**तत्संक्षेपश्च गीतेयं तस्मान्नास्याः समं क्वचित् ।।**

**इति च ब्रह्मवैवर्तोक्तेः ।**

ವೇದಾರ್ಥಪೂರಕವಾಗಿದೆ (ವೇದಾರ್ಥ ತಿಳಿಯಲು ಸಹಕಾರಿ) ಸಮಗ್ರ ಪಂಚರಾತ್ರ. ಅದರ ಸಂಕ್ಷೇಪವೇ ಗೀತಾ. ಹಾಗಾಗಿ ಗೀತೆಗೆ ಸಮ ಬೇರೆ ಇಲ್ಲ ಎಂದು ಬ್ರಹ್ಮವೈವರ್ತ ವಚನ.

**भारते –**

**साङ्ख्यं योगः पाशुपतं वेदारण्यकमेव च ।**
**ज्ञानान्येतानि भिन्नानि उताहो नेति चोच्यताम् ।। इति पृष्टे ।**

**साङ्ख्यं योगः पाशुपतं वेदारण्यकमेव च ।**
**ज्ञानान्येतानि भिन्नानि नात्र कार्या विचारणा ।।**

**इति साङ्ख्यादीनां परस्परं विरुद्धत्वमुक्त्वा-**
**पञ्चरात्रस्य कृत्स्नस्य वक्ता नारायणः स्वयम् ।**
**ज्ञानेष्वेतेषु राजेन्द्र! सर्वेष्वेतद्विशिष्यते ।**
**पञ्चरात्रविदो मुख्या यथाक्रमपरा नृप ।**
**एकान्तभावोपगता वासुदेवं विशन्ति ते ।।**

**इति प्राग्वेदारण्यशब्दोपलक्षितस्य पञ्चरात्रस्य विशेषोक्त्याऽर्थात्प्रामाण्योक्तेश्च ।**

ಮಹಾಭಾರತದಲ್ಲಿ ಹೀಗಿದೆ - ಸಾಂಖ್ಯ ಯೋಗ, ಪಾಶುಪತ, ವೇದ, ಆರಣ್ಯಕ ಇವೆಲ್ಲಾ ಬೇರೆ ಬೇರೆ ವಿಷಯವನ್ನು ಪ್ರತಿಪಾದನೆ ಮಾಡುತ್ತಿವೆಯೋ, ಇಲ್ಲವೋ ? ಎಂಬ ಪ್ರಶ್ನೆ ಬಂದಾಗ, ಅದಕ್ಕೆ ಸಾಂಖ್ಯಾದಿಗಳು ಭಿನ್ನ ಭಿನ್ನ ವಿಷಯವನ್ನೇ ಹೇಳುತ್ತಿವೆ ಎಂದು ಅವುಗಳಿಗೆ ಪರಸ್ಪರ ವಿರೋಧವನ್ನು ಹೇಳುತ್ತಿವೆ.

ಇಡೀ ಪಂಚರಾತ್ರವನ್ನು ಸ್ವತಃ ನಾರಾಯಣನೇ ಹೇಳಿದ್ದು ಓ! ರಾಜಶ್ರೇಷ್ಠನೇ ! ಎಲ್ಲಾ ಗ್ರಂಥಗಳಲ್ಲಿಯೂ ಇದು ವಿಶಿಷ್ಟವಾಗಿದೆ. ಪಂಚರಾತ್ರವನ್ನು ತಿಳಿದವರು ಶ್ರೇಷ್ಠರು ಅವರು ವಾಸುದೇವನನ್ನೇ ಹೋಗಿ ಸೇರುವರು.

ಹೀಗೆ ವೇದಾರಣ್ಯಕ ಎಂಬ ಪದದಿಂದ ಪಂಚರಾತ್ರವನ್ನೂ ಇಟ್ಟುಕೊಂಡು ನಂತರ ವಿಶೇಷವಾಗಿ ಅದನ್ನು ಪ್ರಶಂಸಿಸಿರುವುದರಿಂದ ಅರ್ಥಾತ್ ಪಂಚರಾತ್ರಕ್ಕೆ ಪ್ರಾಮಾಣ್ಯ ಸಿದ್ಧವಾಗುತ್ತದೆ.

**विस्तृतश्चैतत्प्रथमसूत्रभाष्यादौ ।**

ಪಂಚರಾತ್ರವು ಪ್ರಮಾಣ ಎಂಬುದನ್ನು ಪ್ರಥಮಸೂತ್ರದ ಭಾಷ್ಯ, ಟೀಕಾದಿಗಳಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**उत्पत्त्यसम्भवात् ।। अन्ये त्विति ।।** केषाञ्चिन्मतमग्रे निरसिष्यते । वासुदेवात् वासुदेवनामकपरमात्मनः सकाशादित्यर्थः । तत्र हि वासुदेवात्सङ्कर्षणो नाम जीवः सङ्कर्षणात्प्रद्युम्नो नाम मनः प्रद्युम्नादनिरुद्धो नामाङ्कारो जायत इत्युच्यते ।

ರಾಮಾನುಜರ ಮತವನ್ನು ಮುಂದೆ ನಿರಾಕರಿಸುತ್ತಾರೆ. 'ವಾಸುದೇವಾತ್' ಎಂದರೆ ವಾಸುದೇವನ ದೆಸೆಯಿಂದ ಎಂದರ್ಥ. ಪಂಚರಾತ್ರದಲ್ಲಿ, ವಾಸುದೇವನಿಂದ ಸಂಕರ್ಷಣ ಎಂಬ ಜೀವ ಹುಟ್ಟುತ್ತಾನೆ. ಅವನಿಂದ ಪ್ರದ್ಯುಮ್ನ ಎಂಬ ಮನಸ್ಸು ಹುಟ್ಟುತ್ತದೆ. ಅದರಿಂದ ಅನಿರುದ್ಧ ಎಂಬ ಅಹಂಕಾರ ಹುಟ್ಟುತ್ತದೆ ಎಂದು ಹೇಳಿದೆ. ಇಲ್ಲಿ ವಾಸುದೇವ ಎಂದರೆ ಭಗವಂತ. ಸಂಕರ್ಷಣಾದಿಗಳು ಕ್ರಮವಾಗಿ ಜೀವ, ಮನಸ್ಸು, ಅಹಂಕಾರ. ಹೀಗೆ ಶಂಕರ ರಾಮಾನುಜ ಇಬ್ಬರೂ ಅರ್ಥ ಹೇಳಿದ್ದಾರೆ.

**प्रकाशः –** तत्र वासुदेवो भगवान् । सङ्कर्षणादयस्तु यथाक्रमं जीवमनोहंकारा इत्युभाभ्यामर्थ उक्तः । तत्रोपयुक्तांशमनूद्य तन्निरासार्थत्वेनाद्यसूत्रार्थमनुवदति ।। **तन्नेति ।।** अकृताभ्यागमादीत्यादिपदेन ''नात्मा श्रुतेर्नित्यत्वाच्च ताभ्यः'' इति जीवोत्पत्तिनिरासकसूत्रविरोधो ग्राह्यः ।

ಅವರು ಹೇಳಿದ್ದರಲ್ಲಿ ಉಪಯುಕ್ತ ಅಂಶವನ್ನು ಮಾತ್ರ ಅನುವಾದ ಮಾಡಿ ಅದನ್ನು ನಿರಾಕರಣೆ ಮಾಡುವುದಕ್ಕಾಗಿ ಮೊದಲ ಸೂತ್ರದ ಅರ್ಥ ಹೇಳುತ್ತಿದ್ದಾರೆ 'ತನ್ನ' ಎಂಬುದಾಗಿ. ಮೂಲದಲ್ಲಿ 'ಅಕೃತಾಭ್ಯಾಗಮಾದಿ' ಎಂಬಲ್ಲಿ ಇರುವ ಆದಿಪದದಿಂದ 'ನಾತ್ಮಾ ಶ್ರುತೇಃ' 'ನಿತ್ಯತ್ವಾಚ್ಚ ತಾಭ್ಯಃ' ಎಂಬ ಸೂತ್ರ ವಿರೋಧವನ್ನೂ ಇಟ್ಟುಕೊಳ್ಳಬೇಕು.

**प्रकाशः –** ''नच कर्तुः करणम्'' इति सूत्रार्थमनुवदति ।। **यच्चेति ।।**

'ನಚ ಕರ್ತುಃ ಕರಣಂ' ಎಂಬ ಸೂತ್ರಾರ್ಥವನ್ನು ಅನುವಾದ ಮಾಡುತ್ತಿದ್ದಾರೆ 'ಯಚ್ಚ' ಎಂಬುದಾಗಿ.

**प्रकाशः –** ''विज्ञानादिभावे वा तदप्रतिषेधः'' इति सूत्रार्थमनुवदति ।। **अथेति ।।** अस्तु भगवद्रूपयोरपि जन्यजनकभावः । येनोत्पत्त्यसम्भवः परिहृतस्स्यादित्यत आह – **सर्वेषामिति ।।**

'ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ' ಎಂಬ ಸೂತ್ರಾರ್ಥವನ್ನು ಅನುವಾದ ಮಾಡುತ್ತಿದ್ದಾರೆ 'ಅಥ' ಎಂಬುದಾಗಿ. ಭಗವಂತನ ರೂಪಗಳಲ್ಲೂ ಜನ್ಯಜನಕಭಾವ ಇರಲಿ. ಹಾಗಾಗಿ ಉತ್ಪತ್ತಿಯ ಅಸಂಭವ ಬರುವುದಿಲ್ಲ ಎಂದರೆ ಅದಕ್ಕೆ ಉತ್ತರವಾಗಿ 'ಸರ್ವೇಷಾಂ' ಎಂಬುದಾಗಿ ಹೇಳುತ್ತಿದ್ದಾರೆ.

**प्रकाशः** – ''विप्रतिषेधाच्च'' इति सूत्रार्थमन्वाह – **परस्परमिति** ।। तद्व्यनक्ति।। **ज्ञानेति** ।। श्रेयः अलब्ध्वेति पदच्छेदः । छान्दोग्यवाक्यमाह – **ऋग्वेद इति** ।।

'ವಿಪ್ರತಿಷೇಧಾಚ್ಚ' ಎಂಬ ಸೂತ್ರದ ಅರ್ಥವನ್ನು ಅನುವಾದ ಮಾಡುತ್ತಿದ್ದಾರೆ 'ಪರಸ್ಪರಮ್' ಎಂಬುದಾಗಿ. ಅದನ್ನೇ ವಿವರಿಸುತ್ತಿದ್ದರೆ 'ಜ್ಞಾನ' ಎಂಬುದಾಗಿ. 'ಶ್ರೇಯಃ ಅಲಬ್ಧ್ವಾ' ಎಂದು ಪದವಿಭಾಗ. ಛಾಂದೋಗ್ಯ ಉಪನಿಷತ್ತಿನ ವಾಕ್ಯವನ್ನು 'ಋಗ್ವೇದ' ಎಂಬುದಾಗಿ ಹೇಳುತ್ತಿದ್ದಾರೆ.

**प्रकाशः** – वाक्यान्तरमाह – **इतिहासेति** ।। पञ्चरात्रस्य श्लोकत्वमितिहासत्वं च वाक्यद्वयेन क्रमाद्व्यनक्ति ।। **कृतमिति** ।। पञ्चरात्रस्य मुक्तिहेतुपरब्रह्म-ज्ञानोपायत्वे स्मृतिमाह – **वेदेनेति** ।।

ಇನ್ನೊಂದು (ಅದರದೇ) ವಾಕ್ಯವನ್ನು ಹೇಳುತ್ತಿದ್ದಾರೆ 'ಇತಿಹಾಸ' ಎಂಬುದಾಗಿ. ಪಂಚರಾತ್ರಕ್ಕೆ 'ಶ್ಲೋಕ' ಎಂಬ ಹೆಸರೂ 'ಇತಿಹಾಸ' ಎಂಬ ಹೆಸರೂ ಇರುವುದನ್ನು ಸ್ಪಷ್ಟಪಡಿಸುತ್ತಿದ್ದಾರೆ 'ಕೃತಮ್' ಎಂಬುದಾಗಿ. ಪಂಚರಾತ್ರವು ಮುಕ್ತಿಗೆ ಕಾರಣವಾದ ಪರಬ್ರಹ್ಮಜ್ಞಾನಕ್ಕೆ ಉಪಾಯವಾಗಿದೆ ಎಂಬುದನ್ನು ಹೇಳುತ್ತಿದ್ದಾರೆ 'ವೇದೇನ' ಎಂಬುದಾಗಿ.

**प्रकाशः** – वेदादितौल्येन शास्त्रत्वेस्मृतिमाह – **ऋग्यजुरिति** ।। सच्छास्त्रत्वे प्रमाणान्तरं पठति ।। **ऋगाद्या इति** ।। वेदोपबृंहकत्वे स्मृतिमाह – **वेदेति** ।।

ವೇದಾದಿಗಳಿಗೆ ಸಮವಾಗಿದೆ. ಆದ್ದರಿಂದ ಪಂಚರಾತ್ರವು ಶಾಸ್ತ್ರವೆನಿಸಿದೆ ಎಂಬುದಕ್ಕೆ ಸ್ಮೃತಿಯನ್ನು ಉದಾಹರಿಸುತ್ತಿದ್ದಾರೆ 'ಋಗ್ಯಜುಃ' ಎಂಬುದಾಗಿ. ಪಂಚರಾತ್ರವು ಸಚ್ಛಾಸ್ತ್ರ ಎಂಬುದಕ್ಕೆ ಪ್ರಮಾಣವನ್ನು ಹೇಳುತ್ತಿದ್ದಾರೆ 'ಋಗಾದ್ಯಾಃ' ಎಂಬುದಾಗಿ. ಪಂಚರಾತ್ರವು ವೇದಾರ್ಥನಿರ್ಣಯಕ್ಕೆ ಉಪಾಯವಾಗಿದೆ ಎಂಬುದನ್ನು ಹೇಳುತ್ತಿದ್ದಾರೆ 'ವೇದೇ' ಎಂಬುದಾಗಿ.

**प्रकाशः** – एतेन पञ्चमवेदत्वमस्योपपादितं बोध्यम् । यद्वा कृत्स्नपञ्चरात्रस्याप्युपादेयत्वे स्मृत्युक्तिरियम् । एतेन ''चतुर्वेदेषु'' इति परोक्तं वाक्यं वेदार्थपूरकत्वपरं पञ्चरात्रस्य । ''यदि विद्याचतुर्वेदानितिवद्वेदपूरणम् । पञ्चरात्रादिति कुतो द्वेषश्शाण्डिल्य वर्तन'' इत्यनुव्याख्यानोक्तेरिति ।

ಹೀಗೆ ಹೇಳಿದ್ದರಿಂದ ಪಂಚರಾತ್ರವು ಪಂಚಮವೇದ ಎಂದು ಹೇಳಿದಂತಾಯಿತು. ಅಥವಾ 'ವೇದ......'' ಎಂಬ ಸ್ಮೃತಿಯು 'ಅಖಿಲ' ಎಂಬ ಶಬ್ದವನ್ನು ಒಳಗೊಂಡಿರುವುದರಿಂದ ಸಮಗ್ರ ಪಂಚರಾತ್ರವು

ಪ್ರಮಾಣ ಎಂದು ಹೇಳಲು ಹೊರಟಿದೆ ಎಂದು ತಿಳಿಯಬಹುದು. ನಾವು ಹೀಗೆ ಪಂಚರಾತ್ರಕ್ಕೆ ವೇದಾರ್ಥನಿರ್ಣಯಕ್ಕೆ ಸಹಕಾರಿ ಎಂದು ಹೇಳಿದ್ದರಿಂದ ಅದ್ವೈತಿಗಳು ವೇದನಿಂದಕವಾದ ವಾಕ್ಯವನ್ನು ಉದಾಹರಿಸಿದ್ದು ವಿರುದ್ಧವಾಗಲಿಲ್ಲ. 'ಚತುರ್ವೇದೇಷು' ಎಂಬುದು ವೇದಾರ್ಥಪೂರಕಪರ ಅಂದರೆ ಪಂಚರಾತ್ರವು ವೇದಾರ್ಥಪೂರಕ ಎಂಬುದನ್ನು ಈ ವಾಕ್ಯ ಹೇಳಿದೆ.

'ಯದಿ ವಿದ್ಯಾತ್ ಚತುರ್ವೇದಾನ್ ಇತಿವದ್ ವೇದಪೂರಣಮ್ ।
ಪಂಚರಾತ್ರಾದಿತಿ ಕುತೋ ದ್ವೇಷಃ ಶಾಂಡಿಲ್ಯವರ್ತನೇ ॥

'ಯದಿ ವಿದ್ಯಾತ್ ಚತುರ್ವೇದಾನ್' ಎಂಬಂತೆ ಪಂಚರಾತ್ರದಿಂದಲೂ ನಿರ್ಣಯ ಮಾಡಬೇಕೆಂದು ಅರ್ಥವನ್ನಿಟ್ಟುಕೊಂಡು ಶಾಂಡಿಲ್ಯರ ವೃತ್ತಾಂತವನ್ನು ಪಂಚರಾತ್ರದಲ್ಲಿ ಅರ್ಥೈಸಲಾಗುತ್ತದೆ. ಹೀಗಿರುವಾಗ ವೇದನಿಂದನೆ ಪಂಚರಾತ್ರಕ್ಕಿದೆ ಎನ್ನುವುದು ಹೇಗೆ ?

**प्रकाशः** – एताश्च स्मृतयस्तत्र तत्र भाष्यतत्वनिर्णयादिग्रन्थेष्वाचार्योदाहृताः। कृत्स्नप्रामाण्ये वाक्यान्तरं पठति ।। भारत इति ।। ज्ञानानि ज्ञानजनकानि ।।

ಈ ಎಲ್ಲಾ ಸ್ಮೃತಿವಾಕ್ಯಗಳನ್ನು ಅಲ್ಲಲ್ಲಿ ಆಚಾರ್ಯರು ಭಾಷ್ಯ, ತತ್ವನಿರ್ಣಯವೇ ಮೊದಲಾದ ಗ್ರಂಥಗಳಲ್ಲಿ ಉದಾಹರಿಸಿದ್ದಾರೆ. ಸಮಗ್ರ ಪಂಚರಾತ್ರವು ಪ್ರಮಾಣ ಎಂಬ ವಿಷಯದಲ್ಲಿ ಇನ್ನೊಂದು ಪ್ರಮಾಣವನ್ನು ಹೇಳುತ್ತಿದ್ದಾರೆ 'ಭಾರತಃ' ಎಂಬುದಾಗಿ. 'ಜ್ಞಾನಾನಿ' ಎಂಬ ಶಬ್ದಕ್ಕೆ 'ಜ್ಞಾನಜನಕಾನಿ' ಎಂದು ಅರ್ಥ.

**प्रकाशः** – विस्तृतं चैतदिति ।। सांख्यं योग इत्यादिनोक्तम् । शास्त्रयोनिसूत्रभाष्यादाविति पाठस्साधुः । यद्वा ''एषमोहं सृजाम्'' इत्यादिना पाशुपताद्यप्रामाण्यवैष्णवग्रन्थप्रामाण्यादेरुक्तया तदभिप्रायेण ''प्रथमसूत्र'' इत्यादि पाठः ।

ಮೂಲದಲ್ಲಿ 'ಸಾಂಖ್ಯಂ ..' ಎಂಬ ವಿಷಯವು ಮೊದಲನೇ (ಜಿಜ್ಞಾಸಾಸೂತ್ರ) ಸೂತ್ರದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ ಎಂದಿದೆ. ಆದರೆ ಇಲ್ಲಿ 'ಶಾಸ್ತ್ರಯೋನಿಸೂತ್ರಭಾಷ್ಯಾದೌ' ಎಂದು ಪಾಠವಿದ್ದರೆ ಚೆನ್ನ, ಏಕೆಂದರೆ ಈ ವಿಷಯವು ಶಾಸ್ತ್ರಯೋನಿ ಸೂತ್ರದಲ್ಲೇ ವಿಸ್ತರಿಸಲ್ಪಟ್ಟಿದೆ. ಅಥವಾ ಹೇಗಿದೆಯೋ ಹಾಗೇ ಪಾಠವನ್ನು ಇಟ್ಟುಕೊಂಡರೆ ಆಗ, ಮೊದಲನೇ ಸೂತ್ರದಲ್ಲಿ 'ಏಷ ಮೋಹಂ ಸೃಜಾಮ್ಯಾಶು....' ಎಂಬುದಾಗಿ ಏನು ಪಾಶುಪತ ಮತವು ಅಪ್ರಮಾಣ ವೈಷ್ಣವಗ್ರಂಥಗಳೇ ಪ್ರಮಾಣ ಎಂದು ಹೇಳಿದ್ದಾರೋ ಅದನ್ನು ಲಕ್ಷಿಸಿ ಹೇಳಿದ್ದು ಎಂದು ತಿಳಿಯಬೇಕು.

## ಪಂಚರಾತ್ರಕ್ಕೆ ಪ್ರಾಮಾಣ್ಯ ಸಮರ್ಥನೆ

**तात्पर्यचन्द्रिका**

**तथा भारत एव –**

**इदं महोपनिषदं चतुर्वेदसमन्वितम् ।**
**साङ्ख्ययोगकृतां तेषु पञ्चरात्रानुशब्दितम् ।।**

**इदं श्रेय इदं ब्रह्म इदं हितमनुत्तमम् ।**
**ऋग्यजुःसामभिर्जुष्टमथर्वाङ्गिरसैस्तथा ।।**
**भविष्यति प्रमाणं वै एतदेवानुशासनम् ।।**

**इति साक्षात्प्रामाण्यवेदमूलत्वयोः**

ಹಾಗೇ ಭಾರತದಲ್ಲಿಯೂ ಪಂಚರಾತ್ರಕ್ಕೆ ಸಾಕ್ಷಾತ್ ಪ್ರಾಮಾಣ್ಯ ಹಾಗೂ ವೇದಮೂಲತ್ವವನ್ನೂ ಹೇಳಿರುವುದರಿಂದ.

ಈ ಪಂಚರಾತ್ರವು ಮಹೋಪನಿಷತ್ (ಅತ್ಯಂತ ರಹಸ್ಯವಿದ್ಯೆ) ಎನಿಸಿದೆ. ನಾಕೂ ವೇದಗಳಿಗೆ ಸಮಾನವಾಗಿದೆ. ಸಾಂಖ್ಯಯೋಗಶಾಸ್ತ್ರಗಳಲ್ಲಿ ಇದನ್ನೇ ಪಂಚರಾತ್ರ ಎಂದು ಕರೆದಿದ್ದಾರೆ. ಇದು ಶ್ರೇಯಸ್ಕರ ಇದು ಬ್ರಹ್ಮನಿಂದ ರಚಿತವಾದದ್ದು, ಅತ್ಯಂತ ಶ್ರೇಷ್ಠವಾದ ಒಳಿತನ್ನು ಉಂಟುಮಾಡುತ್ತದೆ. ಋಕ್, ಯಜುಸ್, ಸಾಮ, ಅಥರ್ವ ಇವುಗಳಿಂದ ಸೇವಿತವಾಗಿದೆ (ಅರ್ಥನಿರ್ಣಯಕ್ಕಾಗಿ) ಆದ್ದರಿಂದ ಇದು ಪ್ರಮಾಣವಾಗುತ್ತದೆ.

**तथा ''अस्मात् प्रवक्ष्यते धर्मान्मनुः स्वायम्भुवः स्वयम्'' इति मन्वादिस्मृतीनामपि पञ्चरात्रमूलकत्वस्य**

''ಮನುವು ಈ ಪಂಚರಾತ್ರದ ಆಧಾರದಿಂದಲೇ ಧರ್ಮವನ್ನು ಬೋಧಿಸುತ್ತಾನೆ'' ಎಂಬುದಾಗಿ. ಮನುವೇ ಮೊದಲಾದ ಸ್ಮೃತಿಗಳಿಗೂ ಪಂಚರಾತ್ರವು ಮೂಲ ಎಂದು ಹೇಳಿರುವುದರಿಂದ.

**तथा ''वेदैश्चतुर्भिः सम्मितं कृतं मेरौ महागिरौ'' इति सर्वमुनिजनसङ्कुले पुण्यदेशे प्रवर्तितत्वस्य,**

ನಾಕು ವೇದಗಳಿಂದ ಸಮವಾದ (ಅದಕ್ಕಿಂತಲೂ ಉತ್ತಮವಾದ) ಈ ಪಂಚರಾತ್ರವನ್ನು ಮೇರುಪರ್ವತದಲ್ಲಿ ಋಷಿಗಳ ಸಮ್ಮುಖದಲ್ಲಿ ಉಪದೇಶ ಮಾಡಲ್ಪಟ್ಟಿದೆ ಎಂದು ಹೇಳಿರುವುದರಿಂದ ಪಂಚರಾತ್ರವು ಮೋಹನಕ್ಕಾಗಿ ಅಲ್ಲ ಎಂಬುದು ಸ್ಪಷ್ಟವಾಗುತ್ತದೆ.

तथा –

तत्र प्रशासतो राज्यं धर्मेणामित्रघातिनः ।
नानृता वाक् समभवन्मनो दुष्टञ्च नाभवत् ।।

संस्थिते तु नृपे तस्मिन् शास्त्रमेतत्सनातनम् ।
अन्तर्धास्यति तत्सर्वमेतद्वःकथितं मया ।।

इति सत्काले प्रवृत्तेर्दुष्काले तिरोधानस्य

ಈ ಪಂಚರಾತ್ರವು ಸತ್‌ಕಾಲದಲ್ಲಿ ಪ್ರವೃತ್ತವಾಗಿ ದುಷ್ಟಕಾಲದಲ್ಲಿ ತಿರೋಹಿತವಾಗುತ್ತದೆ ಎಂದು ಹೇಳಿರುವುದರಿಂದ.

ಯಾವ 'ಅಮಿತ್ರಘಾತಿ' ಎಂಬ ರಾಜನು ಆಳುತ್ತಿದ್ದಾಗ ಈ ಸನಾತನವಾದ ಪಂಚರಾತ್ರವು ಪ್ರವೃತ್ತಿಯಲ್ಲಿತ್ತು. ಅವನು ಧರ್ಮದಿಂದ ರಾಜ್ಯವಾಳುತ್ತಿದ್ದನು. ಯಾರೂ ಸುಳ್ಳಾಡುತ್ತಿರಲಿಲ್ಲ. ಯಾರ ಮನಸ್ಸು ದುಷ್ಟವಾಗಿರಲಿಲ್ಲ. ಅವನ ನಂತರ ಈ ಶಾಸ್ತ್ರವು ಕಣ್ಮರೆಯಾಗುತ್ತದೆ.

तथा श्रुत्वा ब्रह्ममुखाद्रुद्रः स देव्यै कथयन् पुनः'' इति

(एकाग्रमनसो दान्ता ऋषयः समये रताः ।
दिव्यवर्षसहस्रान्ते सर्वे ते मुनयः समम् ।
नारायणानुशिष्टा हि तदा देवी सरस्वती ।
विवेश तानृषीन् सर्वांल्लोकानां हितकाम्यया ।)

ऋषीनुवाच तान् सर्वानदृश्यः पुरुषोत्तमः ।
कृतं शतसहस्रं हि श्लोकानां हितमुत्तमम् ।। इति ।

उशना बृहस्पतिश्चैव यदोत्पन्नौ भविष्यतः ।
तदा प्रवक्ष्यतः शास्त्रं युष्मन्मतिभिरुद्धृतम् ।

युष्मत्कृतमिदं शास्त्रं प्रजापालो वसुस्ततः ।
बृहस्पतिसकाशाद्वै प्राप्स्यति द्विजसत्तम ।।

इत्यादिना शिष्टपरिग्रहस्य

ಹೀಗೆ ಬ್ರಹ್ಮದೇವರ ಬಾಯಿಂದ ಕೇಳಿದ ರುದ್ರದೇವರು ಪಾರ್ವತಿಗೆ ಪುನಃ ಹೇಳುವವರಾಗಿ,

ಪುರುಷೋತ್ತಮನಾದ ನಾರಾಯಣನು ಎಲ್ಲಾ ಋಷಿಗಳನ್ನೂ ಕುರಿತು ಹೀಗೆ ಹೇಳಿದನು, ನಾನು ನೂರಾರು ಸಾವಿರಾರು ಶ್ಲೋಕಗಳನ್ನು ಮಾಡಿರುವೆನು ಅದು ನಿಮಗೆ ಉತ್ತಮ ಹಿತಕರ (ಇಲ್ಲಿ ಶ್ಲೋಕ ಎಂದರೆ ಪಂಚರಾತ್ರ).

ಯಾವಾಗ ಉಶನಾ ಹಾಗೂ ಬೃಹಸ್ಪತಿ ಇವರು ಹುಟ್ಟುತ್ತಾರೋ ಆಗ ನಿಮ್ಮಿಂದ ಈ ಶಾಸ್ತ್ರವನ್ನು ಪಡೆದು ಉಪದೇಶಿಸುತ್ತಾರೆ. ನಂತರ ಪ್ರಜಾಪಾಲಕನಾದ ವಸುವು ಈ ಶಾಸ್ತ್ರವನ್ನು ಬೃಹಸ್ಪತಿಯಿಂದ ಪಡೆಯುತ್ತಾನೆ. ಹೀಗೆ ಶಿಷ್ಟರು ಇದನ್ನು ಪರಿಗ್ರಹಿಸಿದ್ದಾರೆ ಎಂದು ಹೇಳಿರುವುದರಿಂದ.

**तथा ''वक्ता नारायणः स्वयम्'' इति वक्तुर्भ्रान्त्याद्यभावस्य ''हितकाम्यय'' इत्यादिना विप्रलिप्साभावस्य चोक्तेः ।**

''ಇದನ್ನು ಸ್ವತಃ ನಾರಾಯಣನೇ ಹೇಳಿದ್ದು'' ಎಂಬುದಾಗಿ ವಕ್ತೃವಿಗೆ ಭ್ರಾಂತಿ ಇಲ್ಲದಿರುವಿಕೆಯನ್ನು ಹಾಗೂ 'ಭಕ್ತರ ಹಿತಕ್ಕಾಗಿ' ಎಂಬುದಾಗಿ ಮೋಸ ಮಾಡುವ ಬಯಕೆ ಇಲ್ಲದಿರುವುದನ್ನೂ ಹೇಳಿರುವುದರಿಂದ.

**एतेन पाशुपतादिप्रतिबन्दी निरस्ता ।**

ನೀವು ಹೇಳಿದ ಎಲ್ಲವೂ ಪಾಶುಪತಾದಿ ಶಾಸ್ತ್ರಗಳಿಗೂ ಇದೆ ಎಂದು ಹೇಳಲು ಸಾಧ್ಯವಿಲ್ಲ.

**तेषां श्रुतिस्मृतिषु प्रामाण्याद्यनुक्तेः । प्रत्युत तत्प्रतिषेधात् । उक्तञ्चैतत् ''स्मृत्यनवकाश'' इत्यत्र ।**

ಏಕೆಂದರೆ ಪಾಶುಪತಾದಿ ಶಾಸ್ತ್ರಗಳು ಪ್ರಮಾಣ ಎಂದು ಶ್ರುತಿ-ಸ್ಮೃತಿಗಳಲ್ಲಿ ಹೇಳಿಲ್ಲ, ಹೊರತಾಗಿ ಪ್ರಾಮಾಣ್ಯನಿಷೇಧವನ್ನು ಮಾಡಿದ್ದಾರೆ. ಇದನ್ನು 'ಸ್ಮೃತ್ಯನವಕಾಶದೋಷಪ್ರಸಂಗಾತ್' ಎಂಬಲ್ಲಿ ಹೇಳಿದ್ದೇವೆ.

**ननूक्तानि श्रुत्यादीन्यविरुद्धविषयाणि । जीवोत्पत्तिस्तु श्रुत्यादिविरुद्धा । अत एव साङ्करभाष्येऽपि वासुदेवतदाराधनादावन्यत्र सर्वत्र पञ्चरात्रप्रामाण्यमुपेत्य वेदविरुद्धजीवोत्पत्त्यादावेवाप्रामाण्यमुक्तमिति । तन्न ।**

ಪ್ರಶ್ನೆ - ನೀವು ಹೇಳಿರುವ ಶ್ರುತಿ-ಸ್ಮೃತಿ ವಾಕ್ಯಗಳೆಲ್ಲವೂ ಅವಿರುದ್ಧವಾಗಿವೆ. (ವೇದಕ್ಕೆ ವಿರೋಧಿಯಲ್ಲ) ಆದರೆ ಜೀವನಿಗೆ ಉತ್ಪತ್ತಿಯನ್ನು ಹೇಳುವ ವಾಕ್ಯಗಳು ವಿರುದ್ಧವಾಗಿದೆ. (ಅಂತಹ

ವಾಕ್ಯಗಳನ್ನು ನಾವು ಅಪ್ರಮಾಣ ಎಂದು ಹೇಳುತ್ತಿದ್ದೇವೆ). ಹಾಗಾಗಿಯೇ ಶಾಂಕರಭಾಷ್ಯದಲ್ಲಿ ವಾಸುದೇವನ ಆರಾಧನೆ ಮೊದಲಾದ ಎಲ್ಲಾ ಕಡೆಯಲ್ಲೂ ಪಂಚರಾತ್ರವು ಪ್ರಮಾಣವೇ ಎಂದು ಅಂಗೀಕರಿಸಿ ವೇದಕ್ಕೆ ವಿರೋಧಿಯಾದ ಜೀವನ ಉತ್ಪತ್ತಿವಿಷಯದಲ್ಲಿ ಮಾತ್ರ ಅಪ್ರಮಾಣ ಎಂದು ಹೇಳಲಾಗಿದೆ.

ಉತ್ತರ - ಈ ವಾದ ಸರಿಯಲ್ಲ.

**अविरोधे श्रुतिर्मूलं न मूलान्तरसम्भवः ।**
**विरोधे त्वन्यमूलत्वमिति स्यादर्धवैशसम् ।।**

**कठमैत्रायणीयादिपठितश्रुतिमूलिकाः । दृश्यन्ते स्मृतयः सर्वा य(थो)दोपनयनादिषु(काः) । तदा तन्मध्यपात्येकं वाक्यं किञ्चिदपश्रुति । मूलान्तरोद्भवं वक्तुं जिह्वा नो न प्रवर्तत'' इति भाट्टोक्तेस्तन्मतानुसारिणा त्वयाप्यन्यत्र सर्वत्र श्रुतिसंवादिन्याःश्रुतिस्मृतिपरिगृहीतायाश्च पञ्चरात्रस्मृतेः श्रुति विरुद्धांशे गौणार्थत्वस्यैव वक्तव्यत्वेनाप्रामाण्योक्तययोगात् ।**

(ಅದ್ವೈತಿಗಳು ''ವ್ಯವಹಾರೇ ಭಾಟ್ಟನಯಃ' ಎಂದು ಹೇಳುತ್ತಾರೆ.) ಭಾಟ್ಟರು ಹೀಗೆ ಹೇಳುತ್ತಾರೆ- ಶ್ರುತಿವಿರೋಧವಿಲ್ಲದಿದ್ದರೆ ಆಗ ಸ್ಮೃತಿಗಳೆಲ್ಲವೂ ಪ್ರಮಾಣವಾಗುತ್ತವೆ. ಶ್ರುತಿಮೂಲತ್ವವೇ ಪ್ರಾಮಾಣ್ಯ. ಆದರೆ ಶ್ರುತಿಗೆ ವಿರೋಧ ಬಂದರೆ ಆಗ ಅವೆಲ್ಲವೂ ಶ್ರುತಿಮೂಲವಲ್ಲ ಅನ್ಯಮೂಲವಾಗುತ್ತವೆ. ಎಂದರೆ ಆಗ ಅರ್ಧಶೂನ್ಯವಾಗುತ್ತದೆ. (ಒಂದು ಪ್ರಾಣಿಯನ್ನು ಅರ್ಧ ಕೊಂದು ಅರ್ಧ ಬದುಕಿಸಿದಂತೆ ಆಗುತ್ತದೆ, ಅಂದರೆ ಪೂರ್ಣ ಕೊಲ್ಲಬೇಕು ಅಥವಾ ಪೂರ್ಣ ಬದುಕಿಸಬೇಕು. ಅರ್ಧವಾಗಿ ಬಿಡಬಾರದು. ಅದೇ ರೀತಿ ಸ್ಮೃತಿಗಳನ್ನು ಪ್ರಮಾಣ ಎಂದರೆ ಸಂಪೂರ್ಣ ಅಪ್ರಮಾಣ ಎನ್ನಬೇಕು. ಅರ್ಧಪ್ರಮಾಣ ಅರ್ಧ ಅಪ್ರಮಾಣ ಎನ್ನುವುದು ಸರಿಯಲ್ಲ.)

ಸ್ಮೃತಿಗಳು ಉಪನಯನಾದಿ ವಿಷಯಕಗಳು. ಕಠ, ಮೈತ್ರಾಯಣೀಯ ಇದೇ ಮೊದಲಾದ ಶ್ರುತಿಗಳನ್ನು ಮೂಲವಾಗಿ ಇರುವುದು ಕಾಣುತ್ತದೆ. ಇಂಥ ಸ್ಮೃತಿಗಳು ಮಧ್ಯದಲ್ಲಿ ಒಂದು ವಾಕ್ಯವು ಶ್ರುತಿಗೆ ವಿರುದ್ಧವಾಗಿದೆ. ಅಥವಾ ಆ ವಾಕ್ಯಕ್ಕೆ ಶ್ರುತಿಸಮ್ಮತಿ ದೊರಕುತ್ತಿಲ್ಲ ಎಂದು ಹೇಳಿ ಅದನ್ನು ಅನ್ಯಮೂಲ ಎಂದು ಹೇಳಲು ನಾಲಿಗೆ ಬರುವುದಿಲ್ಲ.

ಹೀಗೆ ಭಾಟ್ಟರು ಹೇಳಿರುವುದರಿಂದ ಅವರನ್ನೇ ಅನುಸರಿಸುವ ನೀನೂ ಕೂಡ ಬೇರೆ ಎಲ್ಲಾ ಕಡೆಯಲ್ಲೂ ಪಂಚರಾತ್ರವನ್ನು ಪ್ರಮಾಣ ಎಂದು ಒಪ್ಪಿ ವಿರೋಧವಿರುವ ಸ್ಥಳದಲ್ಲಿ ಮಾತ್ರ ಅಪ್ರಮಾಣ ಎಂದು ಹೇಳುವುದು ಸರಿಯಲ್ಲ. ಶ್ರುತಿಗೆ ವಿರೋಧ ತೋರುವ ಕಡೆಯಲ್ಲಿ ಆ ವಾಕ್ಯಗಳಿಗೆ ಗೌಣಾರ್ಥವನ್ನು ಮಾಡಬೇಕು.

ಉತ್ಪತ್ತ್ಯಧಿಕರಣ (ಶಕ್ತ್ಯಧಿಕರಣ) (2-2-12)

उक्तञ्च कल्पतरावपि

**बुद्धिपूर्वकृतिः पञ्चरात्रं निश्वसितं श्रुतिः ।**
**तेन जीवजनिस्तत्र सिद्धा गौणी नियम्यते ।। इति ।**

ಇದನ್ನೇ (ಗೌಣಾರ್ಥವನ್ನು ಮಾಡಬೇಕು) ಕಲ್ಪತರುವಿನಲ್ಲೂ ಹೇಳಲಾಗಿದೆ. ಶ್ರುತಿಯು (ವೇದವು) ಬ್ರಹ್ಮನಿಂದ ನಿಃಶ್ವಸಿತ (ಉಸಿರಿನಂತೆ ಹೊರಬಂದದ್ದು) ಆದರೆ ಪಂಚರಾತ್ರವು ಬುದ್ಧಿಪೂರ್ವಕವಾಗಿ ಹೇಳಲ್ಪಟ್ಟದ್ದು. ಆದ್ದರಿಂದ ಪಂಚರಾತ್ರದಲ್ಲಿ ಬರುವ ಜೀವನ ಉತ್ಪತ್ತಿವಿಷಯಕವಾದ ವಾಕ್ಯಗಳಿಗೆ ಗೌಣಾರ್ಥವನ್ನು ಹೇಳಬೇಕು.

**न चेदमेवाप्रामाण्यम् ।''गौण्यसम्भवात्'' इत्यादौ श्रुतेरपि श्रुत्यन्तरविरोधेन गौणार्थताया वक्ष्यमाणत्वात् ।**

ಪ್ರಶ್ನೆ - ನಾವು ಹೀಗೆ ವೇದವಿರುದ್ಧವಾದ ವಾಕ್ಯಗಳಿಗೆ ಗೌಣಾರ್ಥವನ್ನು ಮಾಡುವುದನ್ನೇ ಅಪ್ರಾಮಾಣ್ಯ ಎನ್ನುತ್ತಿದ್ದೇವೆ.

ಉತ್ತರ - ಹೀಗೆ ಹೇಳಬೇಡಿ. ಏಕೆಂದರೆ 'ಗೌಣ್ಯಸಂಭವಾತ್' ಎಂಬ ಸೂತ್ರದಲ್ಲಿ ಒಂದು ಶ್ರುತಿಗೆ ಇನ್ನೊಂದು ಶ್ರುತಿಯ ವಿರೋಧ ತೋರಿದರೆ ಆಗ ಗೌಣಾರ್ಥವನ್ನು ಮಾಡಬೇಕು ಎಂಬುದಾಗಿ ಹೇಳುತ್ತಾರೆ. (ಗೌಣಾರ್ಥ ಮಾಡಿದರೆ ಅದು ಅಪ್ರಮಾಣ ಎಂದಾಗುವುದಿಲ್ಲ)

**प्रकाशः —**

रामानुजभाष्योक्तं वाक्यं पठति ।। **भारत एवेत्यादिना ।।**

ರಾಮಾನುಜಭಾಷ್ಯದಲ್ಲಿ ಉದಾಹರಿಸುವ ಭಾರತಾದಿ ವಾಕ್ಯಗಳನ್ನು ಹೇಳುತ್ತಿದ್ದಾರೆ. 'ಭಾರತ' ಎಂಬುದಾಗಿ (ರಾಮಾನುಜರು ಪಂಚರಾತ್ರಪ್ರಾಮಾಣ್ಯವಾದಿಗಳು)

**प्रकाशः –** सांख्ययोगकृतान्तेत्यत्र सांख्ययोगशब्दाभ्यां ''ज्ञानयोगेन सांख्यानां कर्मयोगेन योगिनाम्'' इति गीतोक्तदिशा ज्ञानकर्मयोगौ ग्राह्यौ । तेन ''एतेन योगः प्रत्युक्त'' इत्याद्यविरोधः । कृतान्तेषु सिद्धान्तेषु ।

'ಸಾಂಖ್ಯಯೋಗಕೃತಾಂತೇಷು' ಎಂಬಲ್ಲಿ ಸಾಂಖ್ಯ, ಯೋಗ ಶಬ್ದಗಳಿಂದ, ಗೀತೆಯಲ್ಲಿ ಹೇಳಿರುವಂತೆ ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್' ಎಂಬುದಾಗಿ ಜ್ಞಾನಯೋಗ, ಕರ್ಮಯೋಗ ಎಂಬ ಅರ್ಥವನ್ನು ಗ್ರಹಿಸಬೇಕು. ಆದ್ದರಿಂದ ''ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಸೂತ್ರದ ವಿರೋಧ ಬರುವುದಿಲ್ಲ. (ಪಾತಂಜಲ ಯೋಗವನ್ನು ಸೂತ್ರದಲ್ಲಿ ನಿರಾಕರಿಸುವುದೇ ಹೊರತು ಕರ್ಮಯೋಗವನ್ನಲ್ಲ) 'ಕೃತಾಂತೇಷು' ಎಂಬ ಶಬ್ದಕ್ಕೆ 'ಸಿದ್ಧಾಂತೇಷು' ಎಂದರ್ಥ.

**प्रकाशः** – प्रकारान्तरेण प्रामाण्यं वाक्यान्तराणि स्वयमुदाहृत्य साधयति ।। **तथेति** ।। षष्ठ्यन्तानां ''उक्तेः'' इति वक्ष्यमाणेनान्वयः । ननु पाशुपतसांख्यादेरपि सर्वज्ञपशुपत्यादिप्रणीतत्वात्प्रामाण्यं स्यादित्यत आह – **एतेनेति** ।।

ಬೇರೊಂದು ರೀತಿಯಲ್ಲಿ ಪ್ರಾಮಾಣ್ಯವನ್ನು ಸಮರ್ಥನೆ ಮಾಡುವುದಕ್ಕಾಗಿ ಇತರ ವಾಕ್ಯಗಳನ್ನು ತಾವೇ ಹೇಳುತ್ತಿದ್ದಾರೆ. (ರಾಮಾನುಜರು ಹೇಳಿದ್ದನ್ನು ಹೇಳಿ ಈಗ ಬೇರೆ ವಾಕ್ಯಗಳಿಂದ ಎಂದು ಭಾವ) ಇಲ್ಲಿ ಎಲ್ಲ ಕಡೆ ಷಷ್ಠೀ ವಿಭಕ್ತ್ಯಂತವಾದ ಪದಗಳನ್ನು ಮುಂದೆ ಇರುವ 'ಉಕ್ತೇಃ' ಎಂಬ ಪದದ ಜೊತೆಗೆ ಅನ್ವಯಿಸಿಕೊಳ್ಳಬೇಕು.

ಪ್ರಶ್ನೆ - ಪಾಶುಪತ, ಸಾಂಖ್ಯ ಈ ಎಲ್ಲಾ ಶಾಸ್ತ್ರವೂ ಸರ್ವಜ್ಞರಾದ ಪಶುಪತಿ (ಶಿವ) ಕಪಿಲ ಮೊದಲಾದವರಿಂದ ರಚಿತವಾಗಿದೆಯಾದ್ದರಿಂದ ಪ್ರಮಾಣವೇ ಆಗಬೇಕು.

ಉತ್ತರ - ಅಲ್ಲ.

**प्रकाशः** – तदेव व्यनक्ति ।। **तेषामिति** ।।

सांख्यं योगः पाञ्चरात्रं वेदाः पाशुपतं तथा ।
आत्मप्रमाणान्येतानि न हातव्यानि हेतुभिः ।।

इत्येतत्तु रामानुजभाष्ये ''तत्तदभिहिततत्तत्स्वरूपमङ्गीकार्यम्'' इत्युक्तरीत्या पाशुपताद्युक्ताविरुद्धप्रमेयाङ्गीकारमात्रपरं वा वेदपञ्चरात्रं हेतुभिरपि न हातव्यमन्यत्तु स्वभावत एव हेयमित्येवंपरमिति वा मोहनपरं वा नेयमिति भावः ।

ಉತ್ತರವನ್ನೇ ಸ್ಪಷ್ಟಪಡಿಸುತ್ತಿದ್ದಾರೆ 'ತೇಷಾಂ' ಎಂಬುದಾಗಿ.

''ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ।
ಆತ್ಮಪ್ರಮಾಣ್ಯೇತಾನಿ ನ ಹಾತವ್ಯಾನಿ ಹೇತುಭಿಃ ॥

ಎಂಬ ಪ್ರಮಾಣವಾಕ್ಯದಲ್ಲಿ ಪಾಶುಪತವೂ ಸೇರಿದೆ. ಇದೆಲ್ಲವೂ ಸ್ವತಃ ಪ್ರಮಾಣವಾಗಿವೆ. ಹಾಗಾಗಿ ಇದನ್ನು ಬಿಡಬಾರದು. (ಆದ್ದರಿಂದ ಪಾಶುಪತಮತ ಹೇಗೆ ಅಪ್ರಮಾಣ)

ಇದಕ್ಕೆ ರಾಮಾನುಜಭಾಷ್ಯದಲ್ಲಿ ಹೇಳಿರುವಂತೆ ಪಾಶುಪತಶಾಸ್ತ್ರದಲ್ಲಿ ಹೇಳಿರುವ ಅವಿರುದ್ಧವಾದ ಪ್ರಮೇಯವನ್ನು ಅಂಗೀಕರಿಸಬೇಕು ಎಂಬ ಅಭಿಪ್ರಾಯದಲ್ಲಿ ಹೇಳಿದ್ದು ಎಂದು ಕೂಡಿಸಬಹುದು. ಅಥವಾ ಈ ಶ್ಲೋಕದಲ್ಲಿ ಅನ್ವಯ ಹೀಗೆ ಮಾಡಬೇಕು - ಸಾಂಖ್ಯ, ಯೋಗ, ಪಂಚರಾತ್ರ ಇವು 'ನ ಹಾತವ್ಯಾನಿ' ತ್ಯಾಗಕ್ಕೆ ಯೋಗ್ಯವಲ್ಲ. ಆದರೆ ಪಾಶುಪತ ಮಾತ್ರ ಸ್ವರೂಪತಃ ತ್ಯಾಜ್ಯ ಎಂದು. ಅಥವಾ ಈ ವಾಕ್ಯವು ಅಸುರವ್ಯಾಮೋಹಕ್ಕಾಗಿ ಹೊರಟಿದೆ ಎನಬೇಕು.

**प्रकाशः** – ''अविरोधे श्रुतिर्मूलम्'' इति श्लोकः, ''विरोधे त्वनपेक्षं स्यात्'' इति स्मृतिपादीयद्वितीयाधिकरणपूर्वपक्षवार्तिकश्लोकः ।

'ಅವಿರೋಧೇ ಶ್ರುತಿಮೂಲಂ' ಎಂಬುದು ''ವಿರೋಧೇ ತ್ವನಪೇಕ್ಷಂ ಸ್ಯಾತ್' ಎಂಬ ಸ್ಮೃತಿಪಾದದ ಎರಡನೇ ಅಧಿಕರಣದ ಪೂರ್ವಪಕ್ಷದಲ್ಲಿರುವ ವಾರ್ತಿಕಶ್ಲೋಕ.

**प्रकाशः** – कण्ठेत्यादि तु ''दर्शनाच्च'' इत्यत्रत्यवार्तिकम् । उपनयनादिषु विषये । तत्प्रतिपादका इति यावत् ।। **तन्मध्यपातीति** ।। उपनयनादिबोधक-मन्वादिस्मृतिमध्यपातीत्यर्थः। अपश्रुति अनुपलभ्यमानमूलश्रुत्युपेतमित्यर्थः ।

''ಕಂಠಮೈತ್ರಾಣೀಯಾದಿ....' ಎಂಬುದು 'ದರ್ಶನಾಚ್ಚ' ಎಂಬಲ್ಲಿರುವ ವಾರ್ತಿಕ. 'ಉಪನಯನಾದಿಷು' ಎಂಬಲ್ಲಿ ವಿಷಯಸಪ್ತಮೀ. ಅಂದರೆ ಉಪನಯನಾದಿ ವಿಷಯದಲ್ಲಿ ಎಂದರ್ಥ ಎಂದರೆ ಉಪನಯನಾದಿಗಳನ್ನು ಪ್ರತಿಪಾದನೆ ಮಾಡುವ ಎಂದರ್ಥ. ಅವುಗಳ ಮಧ್ಯದಲ್ಲಿರುವ ಎಂದರೆ ಉಪನಯನಾದಿಗಳನ್ನು ಹೇಳುವ ಮನುಸ್ಮೃತಿಯ ವಾಕ್ಯಗಳ ಮಧ್ಯದಲ್ಲಿರುವ ಎಂದರ್ಥ. 'ಅಪಶ್ರುತಿ' ಎಂದರೆ ಈಗ ದೊರೆಯದೇ ಇರುವ ಮೂಲಶ್ರುತಿವುಳ್ಳ ವಾಕ್ಯ ಎಂದರ್ಥ.

**प्रकाशः** – भाष्यभामत्योरुक्तमप्रामाण्यमरोचमानः ''सिद्धान्तस्तु'' इत्यादिना प्रमेयं सञ्जग्राह । तं श्लोकं पठति ।। **बुद्धिपूर्वेति** ।। व्याख्यातं च ''अतः प्रमाणावधृते विषये गौणं तद्वचनम् । नतु भ्रान्तम्'' इति ।

ಶಾಂಕರಭಾಷ್ಯ ಹಾಗೂ ಭಾಮತಿಯಲ್ಲಿ ಪಂಚರಾತ್ರಕ್ಕೆ ಅಪ್ರಾಮಾಣ್ಯವನ್ನು ಹೇಳಿರುವುದು ಕಲ್ಪತರುಕಾರನಿಗೆ ರುಚಿಸಿಲ್ಲ ಹಾಗಾಗಿ ಅವನು 'ಸಿದ್ಧಾಂತಸ್ತು' ಎಂಬುದಾಗಿ ಪ್ರಮೇಯವನ್ನು ಸಂಗ್ರಹ ಮಾಡಿದ್ದಾನೆ. ಆ ಶ್ಲೋಕವನ್ನು ಹೇಳುತ್ತಿದ್ದಾರೆ 'ಬುದ್ಧಿಪೂರ್ವ' ಎಂಬುದಾಗಿ. ಅದಕ್ಕೆ ಅವನೇ ಹೀಗೆ ವ್ಯಾಖ್ಯಾನಿಸಿದ್ದಾನೆ - ಹಾಗಾಗಿ ಪ್ರಮಾಣ ಎಂದು ನಿರ್ಧಾರಿತವಾದ ವಿಷಯದಲ್ಲಿ (ವಿರೋಧ ಬಂದರೆ) ಆಗ ಗೌಣಾರ್ಥವನ್ನು ಮಾಡಬೇಕು ಅದನ್ನು ಬಿಟ್ಟು ಅದು ಭ್ರಾಂತ ಎಂಬ (ಅಪ್ರಮಾಣ) ಎನ್ನಬಾರದು ಎಂದು.

ಜೀವ ನಿತ್ಯತ್ವದ ಬಗ್ಗೆ

## तात्पर्यचन्द्रिका

**किञ्च ''यतो वा इमानि भूतानि जायन्ते । येन जातानि जीवन्ति । विज्ञानघन एतेभ्यो भूतेभ्यःसमुत्थाय तान्येवानुविनश्यति । यथाग्नेःक्षुद्रा विस्पुलिङ्गा व्युचरन्त्येवमेवास्मादात्मनः सर्वे प्राणाः सर्व एवात्मानो व्युचरन्ति'' इति जीवोत्पत्त्यादि श्रूयते ।**

ಶ್ರುತಿಯಲ್ಲಿಯೇ ಜೀವನ ಉತ್ಪತ್ತಿಯು ಕೇಳಿಸುತ್ತಿದೆ. 'ಯಾರಿಂದ ಈ ಜೀವರು (ಭೂತಾನಿ) ಹುಟ್ಟುತ್ತಾರೋ ಯಾರಿಂದ ಹುಟ್ಟಿ ಬದುಕುತ್ತಾರೋ, ವಿಜ್ಞಾನಘನ ಎನಿಸಿದ ಜೀವ ಈ ಭೂತಗಳಿಂದ ವ್ಯಕ್ತನಾಗಿ ಅವುಗಳಲ್ಲೇ ಲಯ ಹೊಂದುತ್ತಾನೆ. ಹೇಗೆ ಒಂದು ಅಗ್ನಿ(ದೀಪ)ಯಿಂದ ಕಣಗಳು ಹೊರಬರುತ್ತವೋ, ಹಾಗೇ ಈ ಪರಮಾತ್ಮನಿಂದ ಎಲ್ಲಾ ಜೀವರೂ ಹೊರಟಿರುತ್ತಾರೆ ಎಂಬುದಾಗಿ (ಆದ್ದರಿಂದ ನೀವು ಪಂಚರಾತ್ರವು ಜೀವನ ಉತ್ಪತ್ತಿಯನ್ನು ಹೇಳುತ್ತಿದೆ ಹಾಗಾಗಿ ಅಪ್ರಮಾಣ ಎಂದು ಹೇಳಬಾರದು).

**न ह्यचेतनस्य जीवनादि युक्तम् । श्रुतिर्देहयोगादिपरा चेत्पञ्चरात्रमपि तथास्तु।**

ಮೇಲಿನ ಶ್ರುತಿಗಳಿಗೆ ಬೇರೆ ಅರ್ಥ ಹೇಳಬೇಕು. ಜೀವ ಹುಟ್ಟುತ್ತಾನೆ ಎಂದರೆ ಅವನಿಗೆ ದೇಹದ ಸಂಬಂಧ ಉಂಟಾಗುತ್ತದೆ ಎಂದು. ಹಾಗಾಗಿ ಶ್ರುತಿವಿರೋಧ ಬಂದೇ ಬರುತ್ತದೆ ಎಂದರೆ ಇದು ಸರಿಯಲ್ಲ. ಇದೇ ರೀತಿಯಲ್ಲಿ ಪಂಚರಾತ್ರಕ್ಕೂ ಕೂಡ ಅರ್ಥ ಮಾಡಬಹುದಾದ್ದರಿಂದ (ಪಂಚರಾತ್ರದಲ್ಲಿ ಜೀವ ಹುಟ್ಟುತ್ತಾನೆ ಎಂದರೆ ಜೀವನಿಗೆ ದೇಹಯೋಗವಾಗುತ್ತದೆ ಎಂದೇ ಅರ್ಥ.)

**श्रुतिष्विव पञ्चरात्रेऽपि**

**अनादिकर्मणा बद्धो जीवः संसारमण्डले ।**
**स ह्यनादिरनन्तश्च परमार्थेन निश्चितः ।।**

**इत्यादौ जीवनित्यतोक्तेः ।**

ಶ್ರುತಿಗಳಲ್ಲಿ ಹೇಗೋ ಹಾಗೇ ಪಂಚರಾತ್ರದಲ್ಲಿಯೂ ಜೀವನು ನಿತ್ಯ ಎಂಬುದಾಗಿ ಹೇಳಿದ್ದಾರೆ. ಅನಾದಿಯಾದ ಕರ್ಮದಿಂದ ಜೀವನು ಬದ್ಧನಾಗಿದ್ದಾನೆ. ಇಲ್ಲಿ ಕರ್ಮಬಂಧನವು ಅನಾದಿ ಎಂದ ಮೇಲೆ ಜೀವನೂ ಅನಾದಿ ಆಗಿರಲೇಬೇಕು. ಜೀವನು ಅನಾದಿ ಹಾಗೂ ಅನಂತ ಎಂಬುದು ಪಾರಮಾರ್ಥಿಕವಾದ ಸತ್ಯ.

**प्रत्युत परपक्ष एव विशिष्टरूपो जीवो न नित्यः । जीवशब्दलक्ष्यं शुद्धं नित्यमिति चेज्जीवपदलक्ष्यस्याजीवत्वेन जीवानित्यत्वतादवस्थ्यात् ।**

ನಿಮ್ಮ ಮತದಲ್ಲಿ ವಿಶಿಷ್ಟ ಜೀವನು ಅನಿತ್ಯ. ನೀವು ಹೇಳುವಂತೆ ಜೀವಪದದಿಂದ ಲಕ್ಷ್ಯನಾದ ಶುದ್ಧನು ನಿತ್ಯ. ಅಂದರೆ ಶುದ್ಧನು ಜೀವನಲ್ಲ ಎಂದಂತಾಯಿತು. ಆಗ ಜೀವನು ಅನಿತ್ಯ ಎಂಬುದು ಸಿದ್ಧವಾಯಿತು. (ಗಂಗಾಪದದಿಂದ ಲಕ್ಷ್ಯವಾದ ತೀರ ಗಂಗಾ ಅಲ್ಲ. ಅದರಂತೆ ಜೀವಪದದಿಂದ ಲಕ್ಷ್ಯನಾದ ಶುದ್ಧನು ಜೀವನಲ್ಲ. ಶುದ್ಧನು ನಿತ್ಯ. ಅಂದರೆ ಜೀವನು ಅನಿತ್ಯ ಎಂದಾಯಿತು).

**त्वन्मते संसरणस्य दर्पणमालिन्यादिवदनित्यविशिष्यरूपप्रतिबिम्बगतत्वेन बन्धमोक्षयोर्वैयधिकरण्यादिदोषापत्तेश्च ।**

ನಿಮ್ಮ ಮತದಲ್ಲಿ ಸಂಸಾರ ಎಂಬುದು ಅನಿತ್ಯನಾದ ವಿಶಿಷ್ಟರೂಪನಾದ ಪ್ರತಿಬಿಂಬದಲ್ಲಿರುವುದು. ಕನ್ನಡಿಯ ಕೊಳೆಯಂತೆ. ಆದರೆ ಮೋಕ್ಷವು ಶುದ್ಧನಿಗೆ. ಹಾಗಾಗಿ ಬಂಧಮೋಕ್ಷಗಳಿಗೆ ವೈಯಧಿಕರಣ್ಯ (ಒಂದೇ ಕಡೆ ಇಲ್ಲದಿರುವಿಕೆ) ಬರುತ್ತದೆ. (ಕೊಳೆ ನಾಶವಾಗುವುದು ಕನ್ನಡಿಯಲ್ಲಿ ಸುಂದರವಾಗಿ ಕಾಣುವುದು ಬಿಂಬ. ಹಾಗೇ ಬಂಧವಿಶಿಷ್ಟನಿಗೆ ಅದರ ಧ್ವಂಸಕ್ಕೆ ಆಶ್ರಯ ಶುದ್ಧ. ಹೀಗೆ ವೈಯಧಿಕರಣ್ಯ.)

**अविद्यावच्छिन्नचैतन्यरूपस्य वा तत्प्रतिबिम्बितचैतन्यरूपस्य वा जीवस्यानादित्वेऽप्यन्तःकरणविशिष्टस्याहमर्थस्य प्रतिसर्गं प्रतिजागरणं चोत्पत्तेरहमर्थस्यैव च कर्तृत्वाङ्गीकारात्त्वन्मत एव कृतहान्याद्यापाताच्च ।**

ನಮಗೆ ಹೇಳಿದ ಕೃತಹಾನ ಅಕೃತ ಅಭ್ಯಾಗಮ ಎಂಬ ದೋಷ ನಿನಗೇ ಬರುತ್ತದೆ. ನಿನ್ನ ಪ್ರಕಾರ ಅವಿದ್ಯಾವಚ್ಛಿನ್ನಚೈತನ್ಯ ಹಾಗೂ ತತ್‌ಪ್ರತಿಬಿಂಬಿತ ಚೈತನ್ಯರೂಪವಾದ ಜೀವ ಅನಾದಿ ಆಗಿರಬಹುದು. ಆದರೂ ಅಂತಃಕರಣವಿಶಿಷ್ಟನಾದ ಅಹಮರ್ಥನಾದ ಜೀವನು ಅನಿತ್ಯ. ಪ್ರತಿಸೃಷ್ಟಿಯಲ್ಲಿ ಪ್ರತಿಜಾಗರಣದಲ್ಲಿ ಅವನಿಗೆ ಉತ್ಪತ್ತಿಯನ್ನು ನೀನು ಹೇಳುತ್ತೀಯ. ಅವನಿಗೇ ಕರ್ತೃತ್ವವನ್ನೂ ಅಂಗೀಕರಿಸಿದ್ದೀಯೆ. ಹಾಗಾಗಿ ಇಂತಹ ಅಹಮರ್ಥನಾದ ಕರ್ತೃವಾದ ಜೀವನು ಅನಿತ್ಯ ಎಂದ ಮೇಲೆ ನಿನಗೇ ಕೃತಹಾನಾದಿದೋಷ ಬರುತ್ತದೆ.

(ಅದ್ವೈತಿಗಳು ಕರ್ತೃತ್ವವನ್ನು ಹೇಳುವುದು ಅಹಮರ್ಥನಾದ ಜೀವನಿಗೆ. ಅಹಮರ್ಥ ಎಂದರೆ 'ಅಹಂ' ಎಂಬ ಜ್ಞಾನಕ್ಕೆ ಆಸ್ಪದನಾದವನು. ಅವನನ್ನೇ ಅಂತಃಕರಣವಿಶಿಷ್ಟ ಎನ್ನುತ್ತಾರೆ. ಈ ಅಹಮರ್ಥನಾದ ಜೀವನು ಅನಿತ್ಯ. ಅಂದರೆ ಪ್ರತಿದಿನ ನಿದ್ರೆ ಹೋದಾಗ ಸಾಯುತ್ತಾನೆ. ಎಚ್ಚರವಾದಾಗ ಅಂತಃಕರಣಗಳಿಂದ ಸೇರಿ ಹುಟ್ಟುತ್ತಾನೆ. ಹೀಗಾಗಿ ನಿಮಗೆ ಕೃತಹಾನ ಅಕೃತ ಅಭ್ಯಾಗಮ ದೋಷ ಬರುತ್ತದೆ.)

**एवं जीवान्मनस उत्पत्त्यसम्भवदोषोऽपि परेषां पक्ष एव । तैः ''अनेन जीवेनात्मनाऽनुप्रविश्य नामरूपे व्याकरवाणि'' इत्यादिश्रुत्या ब्रह्मणो जीवरूपेणैव मन आदि जगत्स्रष्टृत्वस्य वक्तव्यत्वात् ।**

ಇನ್ನು ಜೀವನಿಂದ ಮನಸ್ಸು ಹುಟ್ಟುವುದು ಅಸಾಧ್ಯ ಎಂಬ ದೋಷ ಹೇಳಿದ್ದೀರಿ. ಅದೂ ನಿಮಗೇ ಬರುತ್ತದೆ. ಏಕೆಂದರೆ ನೀವು 'ಅನೇನ ಜೀವೇನಾತ್ಮನಾऽನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ'

ಎಂಬ ಶ್ರುತಿಯಲ್ಲಿ ಬ್ರಹ್ಮನು ಜೀವರೂಪದಿಂದ ನಾಮರೂಪವಾದ ಪ್ರಪಂಚವನ್ನು ಸೃಷ್ಟಿ ಮಾಡುತ್ತಾನೆ ಎಂದು ಹೇಳುತ್ತೀರಿ. ನಾಮರೂಪವಾದ ಪ್ರಪಂಚದಲ್ಲಿ ಮನಸ್ಸು ಸೇರಿದೆ. ಹಾಗಾಗಿ ನಿಮಗೇ ಆ ದೋಷ ಬರುತ್ತದೆ.

**वस्तुतस्तु ''वासुदेवात् सङ्कर्षणः'' इत्यादिकम् –**

**जीवाभिमानिशेषस्य नाम्ना सङ्कर्षणस्य च ।**
**वासुदेवाज्जनिः प्रोक्ता प्रद्युम्नस्य ततस्तथा ।**
**मनोभिमानिनः कामस्यैवं साक्षाद्धरेः क्वचित् ।**

**सङ्कर्षणादिनाम्नैव नित्याचिन्त्योरुशक्तितः ।**
**व्यूह उक्तोऽन्यथानूद्य कथं दुष्टत्वमुच्यते ॥**

**इत्यनुव्याख्यानोक्तरीत्याऽन्यपरं नतु जीवोत्पत्त्यादिपरम् ।**

ವಾಸ್ತವದಲ್ಲಿ ಪಂಚರಾತ್ರ ವಾಕ್ಯಗಳಿಗೆ ಹೀಗೆ ಅರ್ಥ - ವಾಸುದೇವನಿಂದ ಸಂಕರ್ಷಣ ಎಂಬ ಜೀವ ಹುಟುತ್ತಾನೆ ಎಂದರೆ ಜೀವಾಭಿಮಾನಿಯಾದ ಸಂಕರ್ಷಣನಾಮಕನಾದ ಶೇಷ ಹುಟ್ಟುತ್ತಾನೆ ಎಂದರ್ಥ. ಹಾಗೇ ಸಂಕರ್ಷಣನಿಂದ ಪ್ರದ್ಯುಮ್ನ ಎಂಬ ಮನಸ್ಸು ಹುಟ್ಟುತ್ತದೆ ಎಂದರೆ ಶೇಷನಿಂದ ಮನೋಭಿಮಾನಿಯಾದ ಪ್ರದ್ಯುಮ್ನ (ಕಾಮ) ಹುಟ್ಟುತ್ತಾನೆ ಎಂದರ್ಥ. ಅಥವಾ ಇವೆಲ್ಲಾ ನಾರಾಯಣನದ್ದೇ ರೂಪಗಳು. ಅಚಿಂತ್ಯ ಹಾಗೂ ಅದ್ಭುತ ಶಕ್ತಿಯಿಂದ ಯಾವುದೇ ಭೇದವಿಲ್ಲದ ನಾರಾಯಣನಿಂದ ವಾಸುದೇವಾದಿ ರೂಪಗಳು ಪ್ರಾದುರ್ಭೂತವಾಗುತ್ತದೆ ಎಂದರ್ಥ. ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿರುವುದರಿಂದ ಈ ವಾಕ್ಯಗಳಿಗೆ ಬೇರೆ ಅರ್ಥ ಹೇಳುವುದು ಸರಿಯಲ್ಲ.

**तत्तद्व्यापारार्थतत्तदधिकार्युपासनार्थं चाचिन्त्यशक्तेर्भगवतः स्वेच्छया दशद्वादशचतुर्विंशत्यादिव्यूहरूपेणेव चतुर्व्यूहरूपेणाप्यवस्थानं युक्तम् ।**

ಪ್ರಶ್ನೆ - ವಾಸುದೇವಾದಿಗಳು ಭಗವಂತನದ್ದೇ ರೂಪಗಳು. ವ್ಯೂಹರೂಪ ಎಂದರೆ ಆಗ ಈ ವ್ಯೂಹವು ನಾಕಕ್ಕೆ ಏಕೆ ನಿಲ್ಲಬೇಕು ?

ಉತ್ತರ - ಇಲ್ಲಿ ವಾಸುದೇವಾದಿ ನಾಕು ರೂಪಗಳು. ಸೃಷ್ಟ್ಯಾದಿ ಬೇರೆ ಬೇರೆ ವ್ಯಾಪಾರಗಳಿಗಾಗಿ ಪ್ರಾದುರ್ಭೂತವಾದದ್ದು, ಜೊತೆಗೆ ಅಧಿಕರಣಗಳು ಉಪಾಸನೆಗೆ ಅನುಗುಣವಾಗಿಯೂ ಕೂಡ. ಹೇಗೆ ಪರಮಾತ್ಮನು ತನ್ನ ಅಚಿಂತ್ಯ ಅದ್ಭುತ ಶಕ್ತಿಯಿಂದ ಹತ್ತು, ಹನ್ನೆರಡು, ಇಪ್ಪತ್ತನಾಕು ಇದೇ ಮೊದಲಾದ ವ್ಯೂಹರೂಪದಿಂದ ಪಾದುರ್ಭೂತನಾಗುವನೋ ಹಾಗೇ ನಾಕುರೂಪಗಳ ವ್ಯೂಹವೂ ಕೂಡುತ್ತದೆ.

## ಉತ್ಪತ್ತ್ಯಧಿಕರಣ (ಶಕ್ತ್ಯಧಿಕರಣ) (2-2-12)

**अन्यथा ''स एको भवति स त्रिधा भवति'' इत्यादिश्रुतिः –**

ಪರಮಾತ್ಮನು ಒಂದೇ ರೂಪದಿಂದ ಮೂರು ರೂಪಗಳಿಂದ ಪ್ರಕಟವಾಗುವನು ಎಂಬ ಶ್ರುತಿಯೂ ಕೂಡ ಈ ವಿಷಯದಲ್ಲಿ ಪ್ರಮಾಣ.

**सृष्ट्वा सङ्कर्षणं देवं स्वयमात्मानमात्मना ।**
**सृज त्वमात्मना कृष्ण प्रद्युम्नश्चात्मसम्भवम् ।**
**प्रद्युम्नाचानिरुद्धं तं यं प्राहुर्विष्णुमव्ययम् ।**
**अनिरुद्धोऽसृजत्सोऽयं ब्रह्माणं लोकधारिणम् ।।**

**इत्यादिभारतादिवचनश्चाप्रमाणं स्यात् ।**

ವಾಸುದೇವನು ಸ್ವತಃ ತನ್ನಿಂದ ತಾನೇ ಸಂಕರ್ಷಣನಾಗಿ ಸೃಷ್ಟಿಹೊಂದಿದ.

ಕೃಷ್ಣ, ನೀನು ನಿನ್ನ ಮಗನಾದ ಪ್ರದ್ಯುಮ್ನನನ್ನು ಸೃಷ್ಟಿ ಮಾಡು.

ಆ ಪ್ರದ್ಯುಮ್ನನಿಂದ ಅನಿರುದ್ಧನನ್ನು ಸೃಷ್ಟಿ ಮಾಡು. ಆ ಅನಿರುದ್ಧನು ಸ್ವತಃ ನಾಶರಹಿತನಾದ ವಿಷ್ಣುವೇ.

ಆ ಅನಿರುದ್ಧನು ಲೋಕಾಧಾರನಾದ ಬ್ರಹ್ಮನನ್ನು ಸೃಷ್ಟಿ ಮಾಡಿದನು ಎಂಬ ಈ ಎಲ್ಲಾ ಭಾರತ ಪ್ರಮಾಣ ವಚನಗಳು ಅಪ್ರಮಾಣವಾಗಬೇಕಾಗುತ್ತದೆ. (ಪಂಚರಾತ್ರವನ್ನು ಅಪ್ರಮಾಣ ಎಂದರೆ, ಆಗ ಅದೇ ವಿಷಯವನ್ನು ಪ್ರತಿಪಾದಿಸುವ ಬೇರೆ ಪ್ರಮಾಣಗಳು ಕೂಡ ಅಪ್ರಮಾಣ ಆಗಬೇಕು).

**किञ्च त्वन्मते ''उत्पत्त्यसम्भवात्'' इति सामान्योक्त्यैव जीवोत्पत्त्यसम्भववत्कर्तुः करणोत्पत्त्यसम्भवस्यापि विवक्षितुं शक्यत्वाद्द्वितीयसूत्र वैयर्थ्यम् ।**

(ಅದ್ವೈತಿಗಳ ಸೂತ್ರಾರ್ಥದಲ್ಲಿ ಅಸ್ವಾರಸ್ಯವನ್ನು ತೋರಿಸುತ್ತಿದ್ದಾರೆ)

'ಉತ್ಪತ್ತ್ಯಸಂಭವಾತ್' ಎಂಬ ಸೂತ್ರದಲ್ಲಿ ಸಾಮಾನ್ಯವಾಗಿ ಉತ್ಪತ್ತಿ ಅಸಂಭವವನ್ನು ಹೇಳಿದ್ದರಿಂದಲೇ, ಹೇಗೆ ಜೀವನ ಉತ್ಪತ್ತಿ ಅಸಂಭವವನ್ನು ಹೇಳಿದ್ದಿರೋ, ಹಾಗೆಯೇ ಕರ್ತೃವಿನಿಂದ ಕರಣದ ಉತ್ಪತ್ತಿಯೂ ಕೂಡ ಕೂಡುವುದಿಲ್ಲ ಎಂಬುದನ್ನೂ ವಿವಕ್ಷಿಸುವುದಕ್ಕೆ ಸಾಧ್ಯವಿರುವಾಗ ಅದಕ್ಕಾಗಿ ಇನ್ನೊಂದು (ಮೂರನೇ) ಸೂತ್ರವನ್ನು ಹೇಳಿದ್ದು ವ್ಯರ್ಥ.

**किञ्चैवं कर्तुश्च करणस्येत्येव सूत्रणीयम् । ''उत्पत्त्यसम्भवात्'' इत्यनेनानुषक्तेनास्यान्वयसम्भवात् ।**

''ನಚ ಕರ್ತುಃ ಕರಣಮ್' ಎಂಬ ಸೂತ್ರವನ್ನು ಕರ್ತುಶ್ಚ ಕರಣಸ್ಯ' ಎಂಬುದಾಗಿಯೇ ಹೇಳಬಹುದು. ಹಿಂದಿನ ಸೂತ್ರದಿಂದ 'ಉತ್ಪತ್ತ್ಯಸಂಭವಾತ್' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬಹುದು. (ಆದ್ದರಿಂದ 'ನ' ಎಂಬ ಪದವ್ಯರ್ಥ)

**यथा न्यासपक्षेऽपि तूत्पद्यत इत्येतदध्याहार्यम् । अध्याहाराच्चानुषङ्गो ज्यायान्।**

ಹೇಗಿದೆಯೋ ಹಾಗೆಯೇ ಸೂತ್ರವನ್ನು ಇಟ್ಟುಕೊಂಡರೂ 'ಉತ್ಪದ್ಯತೇ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅಧ್ಯಾಹಾರಕ್ಕಿಂತ ಅನುವೃತ್ತಿಯೇ ಶ್ರೇಷ್ಠ. (ಲಾಘವ ಇರುವುದರಿಂದ).

**तृतीयेऽपि मम ''विज्ञानादिभाव'' इत्यत्र द्वितीये प्रकृतस्य कर्तुरित्यस्यान्वयः। तव तु सङ्कर्षणादीनामित्यध्याहारः ।**

ಮೂರನೇ ಸೂತ್ರ ''ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ' ನಮ್ಮ ಪ್ರಕಾರ ಈ ಸೂತ್ರದಲ್ಲಿ ಹಿಂದಿನ ಸೂತ್ರದಿಂದ 'ಕರ್ತುಃ' ಎಂಬ ಪದದ ಅನುವೃತ್ತಿ ಇದೆ. ಆದರೆ ನಿನ್ನ ಮತದಲ್ಲಿ 'ಸಂಕರ್ಷಣಾದೀನಾಮ್' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. (ಅಧ್ಯಾಹಾರಕ್ಕಿಂತ ಅನುವೃತ್ತಿಯೇ ಶ್ರೇಷ್ಠ).

**तदप्रतिषेध इति वक्रोक्तिवैयर्थ्यं च । स इत्येतावतैव प्रकृतस्योत्पत्त्यसम्भवस्य परामर्शोपपत्तेः ।**

ನಿಮ್ಮ ಪ್ರಕಾರ 'ತದಪ್ರತಿಷೇಧಃ' ಎಂದು ಹೇಳಿರುವುದು ವಕ್ರೋಕ್ತಿಯಾಗುತ್ತದೆ. ಹಾಗಾಗಿಯೇ ಅದು ವ್ಯರ್ಥ. ಈ ಸೂತ್ರದಲ್ಲಿ 'ಸಃ' ಎಂಬ ಪದವನ್ನು ಹೇಳವುದರಿಂದಲೇ ಹಿಂದಿನ ಸೂತ್ರದಿಂದ 'ಉತ್ಪತ್ತ್ಯಸಂಭವ' ಎಂಬುದನ್ನು ಪರಾಮರ್ಶ ಮಾಡಿಕೊಳ್ಳಬಹುದು.

**मम तु तदप्रतिषेधः दूषितत्वेन सन्निहितस्य पाशुपतमतस्याप्रतिषेध; । अनुमतिः । तदन्तर्भाव इत्यर्थः ।**

ನಮ್ಮ ಮತದಲ್ಲಿ 'ತದಪ್ರತಿಷೇಧಃ' ಎಂಬುದು ಸಾರ್ಥಕ. ಏಕೆಂದರೆ ನಮ್ಮ ಪ್ರಕಾರ ಈ ಶಬ್ದಕ್ಕೆ ಹಿಂದೆ ದೂಷಿತವಾದ ಸನ್ನಿಹಿತವಾದ ಪಾಶುಪತಮತವು ಅಪ್ರತಿಷಿದ್ಧವಾಗುತ್ತದೆ. ಅಂದರೆ ಅದು ಸಮ್ಮತವಾಗುತ್ತದೆ. ನಿಮ್ಮ ಮತವೂ ಪಾಶುಪತಮತದಲ್ಲೇ ಅಂತರ್ಭೂತವಾಗುತ್ತದೆ ಎಂದರ್ಥ.

(ಪಾಶುಪತ ಮತ ಹಿಂದೆ ನಿರಾಕರಿಸಲಾಗಿದೆ. ಈಗ ಶಾಕ್ತರೂ ಕೂಡ ಇಂದ್ರಿಯಾದಿಗಳಿಂದ ಕೂಡಿದ ಕರ್ತೃ (ಈಶ್ವರನನ್ನು) ಒಪ್ಪಿದರೆ ಆಗ ಪಾಶುಪತಮತ ನಿರಾಕೃತವಾದಂತೆ ಆಗಲಿಲ್ಲ. ಅದರ ಬದಲಾಗಿ ನಿಮ್ಮ ಮತವೂ ಅವರ ಮತದಲ್ಲೇ ಅಂತರ್ಭಾವ ಹೊಂದುತ್ತದೆ.)

ಉತ್ಪತ್ತ್ಯಧಿಕರಣ (ಶಕ್ತ್ಯಧಿಕರಣ) (2-2-12)

**किञ्च उत्पत्त्यसम्भवभयात्सङ्कर्षणादीनां जीवत्वं त्यक्त्वा परमात्मत्वं शङ्कमानेनोत्पत्तिवाक्यस्य प्रादुर्भावाभिप्रायताया अवश्यं विवक्षितत्वेन तं प्रत्युत्पत्त्यसम्भवोक्तिरयुक्ता ।**

ಉತ್ಪತ್ತಿ ಅಸಂಭವವನ್ನು ನೀನು ಹೇಳಿದರೆ ಆಗ ಅದರಿಂದ ತಪ್ಪಿಸಿಕೊಳ್ಳಲು ಪ್ರತಿವಾದಿಯು ಸಂಕರ್ಷಣಾದಿಗಳು ಜೀವರಲ್ಲ ಹೊರತು ಎಲ್ಲವೂ ಪರಮಾತ್ಮನದ್ದೇ ರೂಪಗಳು ಎಂಬುದಾಗಿ ಹೇಳುತ್ತಾನೆ. ಅವನಿಗೆ ನೀನು ಪುನಃ ಉತ್ಪತ್ತಿ ಅಸಂಭವ ಎಂಬ ದೋಷ ಹೇಳಲು ಸಾಧ್ಯವಿಲ್ಲ. ಏಕೆಂದರೆ ಇದೆಲ್ಲವೂ ಪರಮಾತ್ಮನದ್ದೇ ರೂಪಗಳು ಎಂದು ಹೇಳುವ ಅವನು ಪರಮಾತ್ಮನ ರೂಪಗಳ ಉತ್ಪತ್ತಿ ಎಂದರೆ ಪ್ರಾದುರ್ಭಾವ ಎಂಬ ಅಭಿಪ್ರಾಯ ಹೊಂದಿರುತ್ತಾನೆ. ಆಗ ನೀನು ಹೇಳುವ ದೋಷ ಕೂಡುವುದಿಲ್ಲ.

**चतुर्थोक्तस्तु विप्रतिषेधोऽसिद्धः । ज्ञानादीनां गुणत्वेऽपि ''एवं धर्मान् पृथक् पश्यन्'' इत्यादिश्रुतिभिः स्वरूपत्वात् । अन्यथा ''आनन्दो ब्रह्म आनन्दं ब्रह्मण'' इति श्रुत्योरपि विप्रतिषेधः स्यात् ।**

'ವಿಪ್ರತಿಷೇಧಾಚ್ಚ' ಎಂಬ ನಾಕನೇ ಸೂತ್ರದಲ್ಲಿ ಹೇಳಿರುವ ವಿಪ್ರತಿಷೇಧ (ಪರಸ್ಪರ ವಿರೋಧ) ಎಂಬ ದೋಷವೂ ಸರಿಯಲ್ಲ. ವೇದದಲ್ಲಿಯೂ ವಿಪ್ರತಿಷೇಧ ಕಂಡಿದೆ. ಜ್ಞಾನಾದಿಗಳು ಗುಣಗಳಾಗಿದ್ದರೂ ಕೂಡ 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಎಂಬ ಮೊದಲಾದ ಶ್ರುತಿಗಳ ವಿರೋಧ ಬರುವುದರಿಂದ ಅವುಗಳನ್ನು ಸ್ವರೂಪ ಎಂದೂ ಹೇಳಲಾಗಿದೆ. ಹಾಗಲ್ಲದೇ ಹೋದರೆ ಒಂದು ಕಡೆ 'ಆನಂದೋ ಬ್ರಹ್ಮ' ಎಂಬುದಾಗಿ ಆನಂದಕ್ಕೂ ಬ್ರಹ್ಮನಿಗೂ ಅಭೇದವನ್ನು ಹೇಳಿ ಇನ್ನೊಂದು ಕಡೆ 'ಆನಂದಂ ಬ್ರಹ್ಮಣಃ' ಎಂಬುದಾಗಿ ಭೇದವನ್ನು ಹೇಳಿರುವುದು ವಿರುದ್ಧವಾಗುತ್ತದೆ. ಆಗ ಜ್ಞಾನಾದಿಗಳು ಗುಣವೂ ಆಗಿದೆ ಸ್ವರೂಪವೂ ಆಗಿದೆ. ವಿಶೇಷಬಲದಿಂದ ಕೂಡಿಸಬಹುದು ಎಂಬುದಾಗಿ ವಿರೋಧ ಪರಿಹಾರ ಮಾಡಿಕೊಳ್ಳಬೇಕು. (ಅದೇ ರೀತಿ ಪಂಚರಾತ್ರದಲ್ಲೂ ವಿರೋಧ ಪರಿಹಾರ ಮಾಡಿಕೊಳ್ಳಬೇಕು ಎಂದು ಭಾವ).

**शाण्डिल्यवर्तनेऽपि**

**यदि विद्याच्चतुर्वेदान् साङ्गोपनिषदान् द्विजः ।**
**न चेत्पुराणं संविद्यान्नैव स स्याद्विचक्षणः ।।**

**इत्यादाविव पञ्चरात्रेण वेदोपबृंहणस्य विवक्षितत्वेन वा**

(ಪಂಚರಾತ್ರದಲ್ಲಿ ವೇದನಿಂದಾರೂಪವಾದ ವಿಪ್ರತಿಷೇಧವಿದೆ ಎಂದರೆ ಅದಕ್ಕೆ ಉತ್ತರ ಕೊಡುತ್ತಿದ್ದಾರೆ.)

ಶಾಂಡಿಲ್ಯರ ವರ್ತನೆಯಲ್ಲೂ ಕೂಡ, ಹೇಗೆ

'ಯದಿ ವಿದ್ಯಾಚ್ಚತುರ್ವೇದಾನ್ ಸಾಂಗೋಪನಿಷದಾನ್ ದ್ವಿಜಃ।
ನ ಚೇತ್‌ಪುರಾಣಂ ಸಂವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ ॥

ಎಂಬಲ್ಲಿ ನಾಕು ವೇದಗಳನ್ನು ಅಂಗಸಹಿತವಾಗಿ ಅಧ್ಯಯನ ಮಾಡಿದ್ದರೂ ಯಾವನು ಪುರಾಣಗಳನ್ನು ಸರಿಯಾಗಿ ತಿಳಿಯುವುದಿಲ್ಲವೋ ಅವನು ವಿಚಕ್ಷಣ (ವಿಶೇಷಜ್ಞ) ನಾಗುವುದಿಲ್ಲ ಎಂಬಲ್ಲಿ ಹೇಗೆ ಪುರಾಣಗಳು ವೇದಾರ್ಥನಿರ್ಣಯಕ್ಕೆ ಸಹಕಾರಿ ಎಂದು ತಿಳಿಯುತ್ತೇವೋ ಹಾಗೇ ಪಂಚರಾತ್ರವೂ ಕೂಡ ವೇದಾರ್ಥನಿರ್ಣಯಕ್ಕೆ ಉಪಯೋಗಿ ಎಂದು ತಿಳಿಯಬೇಕು. (ಹೊರತು ಶಾಂಡಿಲ್ಯವರ್ತನೆ ವೇದನಿಂದಾ ಪರವಾಗಿ ತಿಳಿಯಬಾರದು.)

**''प्रातः प्रातरनृतं ते वदन्ति पुरोदयाज्जुह्वति येऽग्निहोत्रम्'' इत्यादिवन्न हि निन्दान्यायेन पञ्चरात्रप्राशस्त्यमात्रपरत्वेन वा वेदनिन्दाया अभावात् ।**

(ಇನ್ನು ಮೀಮಾಂಸಾ ದೃಷ್ಟಾಂತ ಹೇಳುತ್ತಾರೆ. ಉದಿತ ಹೋಮ, ಅನುದಿತ ಹೋಮ ಎಂದು ಎರಡು ವಿಧ. ಸೂರ್ಯ ಉದಯಿಸಿದ ಬಳಿಕ ಮಾಡುವ ಅಗ್ನಿಹೋತ್ರ ಉದಿತ ಹೋಮ. ಸೂರ್ಯೋದಯಕ್ಕಿಂತ ಮೊದಲು ಮಾಡುವ ಅಗ್ನಿಹೋತ್ರ ಅನುದಿತ ಹೋಮ). ಇಲ್ಲಿ 'ಪ್ರಾತಃ ಪ್ರಾತರನೃತಂ ತೇ ವದಂತಿ ಪುರೋದಯಾಜ್ಜುಹ್ವತಿ ಯೇಽಗ್ನಿಹೋತ್ರಮ್' ಎಂಬ ವಾಕ್ಯದಲ್ಲಿ ಯಾರು ಸೂರ್ಯೋದಯಕ್ಕಿಂತ ಮೊಲು ಅಗ್ನಿಹೋತ್ರವನ್ನು ಮಾಡುತ್ತಾರೋ ಅವರು ಬೆಳಿಗ್ಗೆ ಬೆಳಿಗ್ಗೆ ಸುಳ್ಳು ಆಡುತ್ತಾರೆ ಎಂದು ನಿಂದಾ ಮಾಡಿದ್ದಾರೆ. ಆದರೆ ಇಲ್ಲಿ ಅನುದಿತ ಹೋಮ ನಿಂದಾ ಮಾಡಿರುವುದು ಉದಿತ ಹೋಮವನ್ನು ಪ್ರಶಂಸಾ ಮಾಡುವ ದೃಷ್ಟಿಯಿಂದ ಹೊರತು ಕೇವಲ ನಿಂದಾಭಿಪ್ರಾಯದಿಂದ ಅಲ್ಲ. ಹಾಗೆಯೇ ಈ 'ನಹಿ ನಿಂದಾ' ನ್ಯಾಯದಿಂದ ಈ ಶಾಂಡಿಲ್ಯವರ್ತನೆಯು ಪಂಚರಾತ್ರ ಪ್ರಾಶಸ್ತ್ಯ ಪರವೇ ಹೊರತು ವೇದನಿಂದಾ ಪರವಲ್ಲ.

**तथा पञ्चरात्रस्य वेदाविरोधेन विरोधाधिकरणन्यायाविषयत्वात्स्मृत्यधिकरण न्यायेन वेदमूलत्वेन प्रामाण्यमेव ।**

ಹಾಗಾಗಿ ಪಂಚರಾತ್ರಕ್ಕೆ ವೇದವಿರೋಧವಿಲ್ಲವಾದ್ದರಿಂದ ವಿರೋಧಾಧಿಕರಣಕ್ಕೆ ಇದು ವಿಷಯವಾಗುವುದಿಲ್ಲ. ಸ್ಮೃತ್ಯಧಿಕರಣಕ್ಕೆ ವಿಷಯವಾಗಿ ವೇದಮೂಲತ್ವೇನ ಇದಕ್ಕೂ ಪ್ರಾಮಾಣ್ಯವೇ ಸಿದ್ಧವಾಗುತ್ತದೆ.

(ಒಂದು ವೇಳೆ ವೇದವಿರೋಧ ಬಂದಿದ್ದರೆ ಆಗ ವಿರೋಧೇತ್ವನಪೇಕ್ಷಂ ಸ್ಯಾತ್' ಎಂಬ ವಿರೋಧಾಧಿಕರಣಕ್ಕೆ ಇದು ವಿಷಯವಾಗುತ್ತಿತ್ತು. ಆದರೆ ಹಾಗಿಲ್ಲ ಎಂದು ಭಾವ)

**तस्मात् –**

**शाक्तपक्षे पक्षपाताद्विद्वेषाद्वैष्णवे मते ।**
**महासुरैः पञ्चरात्रनिरास इह कल्पितः ॥१॥**

ಹಾಗಾಗಿ ಈ ಅಧಿಕರಣದಲ್ಲಿ ಅದ್ವೈತಿಗಳು ಪಂಚರಾತ್ರವನ್ನು ನಿರಾಕರಣೆ ಮಾಡಲಾಗಿದೆ ಎಂದು ಹೇಳಿರುವುದು ಅವರಿಗೆ ಶಾಕ್ತಮತದಲ್ಲಿ (ನಾವು ಇಲ್ಲಿನಿರಾಕರಿಸಿರುವ) ಇರುವ ಪಕ್ಷಪಾತ ಹಾಗೂ ವೈಷ್ಣವ ಮತ (ಪಂಚರಾತ್ರ)ದಲ್ಲಿ ಇರುವ ವಿಶೇಷವಾದ ದ್ವೇಷ ಇದೇ ಕಾರಣದಿಂದ ಎಂದು ತಿಳಿಯುತ್ತದೆ.

**प्रकाशः –**

**श्रुतौ भूतशब्दस्य जडपरत्वमाशङ्क्याह – न ह्यचेतनस्येति ॥**

"ಯತೋ ವಾ ಇಮಾನಿ ಭೂತಾನಿ" ಎಂಬಲ್ಲಿ ಇರುವ ಭೂತ ಶಬ್ದವು ಜಡಪರವಾಗಿದೆ ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಿದಾದರೆ. 'ನ ಹ್ಯಚೇತನಸ್ಯ' ಎಂಬುದಾಗಿ. (ಇಲ್ಲಿರುವ 'ಭೂತ' ಶಬ್ದವು ಜಡ ಎಂದಾದರೆ ಆಗ ಮುಂದೆ 'ಜೀವಂತಿ' ಎಂದು ಹೇಳುತ್ತಿರಲಿಲ್ಲ.)

**प्रकाशः –आद्यसूत्रे कृतहान्यादिर्यो दोष उक्तस्स तवैव नतु गौणोत्पत्तिपक्ष इत्याह – अविद्येति ॥**

ಮೊದಲನೇ ಸೂತ್ರದಲ್ಲಿ ನೀವು ಪಂಚರಾತ್ರ ಅಪ್ರಮಾಣ್ಯ ಎಂಬ ವಿಷಯದಲ್ಲಿ 'ಕೃತಹಾನ' ಇತ್ಯಾದಿ ದೋಷಗಳನ್ನು ಹೇಳಿದ್ದೀರೋ ಅದು ನಿಮಗೇ ಬರುತ್ತದೆ. ಹೊರತು, ಗೌಣ ಉತ್ಪತ್ತಿಯನ್ನು ಅಂಗೀಕರಿಸುವ ಪಕ್ಷದಲ್ಲಿ ಅಲ್ಲ.

**प्रकाशः – द्वितीयसूत्रोक्तदोषोऽपि तवैवेत्याह – एवमिति ॥** इत्यादिकमन्यपरमित्यन्वयः । जनिर्देहयोगरूपा । ततः सङ्कर्षणनामकाच्छेषात् । एवंशब्देन प्रद्युम्नादनिरुद्धसंज्ञकोऽहंकारो जायत इति गृह्यते ।

'ಇತ್ಯಾದಿಕಂ' ಎಂಬುದನ್ನು 'ಅನ್ಯಪರಂ' ಎಂಬ ಶಬ್ದದ ಜೊತೆ ಅನ್ವಯ ಮಾಡಿಕೊಳ್ಳಬೇಕು. ಜನಿ ಎಂದರೆ ದೇಹಸಂಬಂಧರೂಪ ಎಂದರ್ಥ. 'ತತಃ' ಶಬ್ದಕ್ಕೆ ಸಂಕರ್ಷಣನೆಂಬ ಶೇಷನಿಂದ ಎಂದರ್ಥ. ಹೀಗೆ 'ಏವಂ' ಎಂಬ ಶಬ್ದಕ್ಕೆ ಪ್ರದ್ಯುಮ್ನನಿಂದ ಅನಿರುದ್ಧನೆಂಬ ಅಹಂಕಾರ ಹುಟ್ಟುತ್ತದೆ ಎಂಬುದನ್ನೂ ಇಟ್ಟುಕೊಳ್ಳಬೇಕು.

**प्रकाशः** –अर्थान्तरमप्याह – **साक्षादिति** ।। एतदर्थः सुधायां व्यक्तः । यदस्मिन्पक्षे दूषणं ''तथाप्युत्पत्त्यसम्भवस्याप्रतिषेध'' इत्यादि तत्सुधोक्तानुव्याख्यानतात्पर्यविवरणेन निराह – **तत्तदिति** ।।

ಈ ಉತ್ಪತ್ತಿವಾಕ್ಯಕ್ಕೆ ಬೇರೆ ಅರ್ಥವನ್ನು ಹೇಳುತ್ತಿದ್ದಾರೆ. 'ಅರ್ಥಾಂತರ' ಎಂಬುದಾಗಿ ಇದರರ್ಥವು ಸುಧಾದಲ್ಲಿ ಸ್ಪಷ್ಟವಾಗಿದೆ.

ಅರ್ಥಾಂತರ ಪಕ್ಷದಲ್ಲಿ ಏನು ದೋಷವನ್ನು ಹೇಳಿದ್ದಾರೋ (ಅಂದರೆ ಸಂಕರ್ಷಣಾದಿಗಳೂ ಭಗವತ್ ರೂಪಗಳು ಎಂದರೆ ಆಗಲೂ ಉತ್ಪತ್ತಿ ಕೂಡುವುದಿಲ್ಲ. ಏಕೆಂದರೆ ಈ ರೂಪಗಳು ನಾಲ್ಕೇ ಏಕೆ ಹೆಚ್ಚು ಏಕಿಲ್ಲ ಕಡಿಮೆ. ಏಕಿಲ್ಲ ಎಂಬ ಪ್ರಶ್ನೆ ಬರುತ್ತದೆ.) ಇದಕ್ಕೆ ಸುಧಾ ಅನುವ್ಯಾಖ್ಯಾನದಲ್ಲಿ ಉತ್ತರ ಹೇಳಿದ್ದಾರೆ. ಅದರ ತಾತ್ಪರ್ಯವನ್ನು ವಿವರಿಸುವವರಾಗಿ ಹೇಳುತ್ತಿದ್ದಾರೆ 'ತತ್ತತ್' ಎಂಬುದಾಗಿ.

**प्रकाशः** – सृजेति वाक्यान्तरम् । सूत्रास्वारस्यं चाह – **किञ्चेति** ।। **द्वितीयसूत्रेति** ।। एतच्च केषाञ्चिन्मतेऽपि समम् । किञ्चैवमित्याद्यपि सममेवेति बोध्यम् । सुधोक्तमेव समाधिं व्यनक्ति ।। **ज्ञानादीनामिति** ।। ''यदि विद्याच्चतुर्वेदानितिवद्वेदपुराणम्'' इत्याद्यनुभाष्योक्तं सुधोक्तदिशा व्यनक्ति ।। **यदि विद्यादिति** ।।

'ಸೃಜತ್ವಮಾತ್ಮನಾ ಕೃಷ್ಣ' ಎಂಬುದು ಹಿಂದಿನ ವಾಕ್ಯದ ಮುಂದುವರಿಕೆ ಅಲ್ಲ. ಇದು ಬೇರೆಯೇ ವಾಕ್ಯ. ಸೂತ್ರವು ಅಸ್ವರಸ (ಅಂದರೆ ಸೂತ್ರಾಕ್ಷರಗಳಲ್ಲಿ ಅಸ್ವಾರಸ್ಯ) ಎಂಬುದನ್ನು ಹೇಳುತ್ತಿದ್ದಾರೆ 'ಕಿಂಚ' ಎಂಬುದಾಗಿ.

ಮೊದಲನೇ ಸೂತ್ರದಲ್ಲೇ ಸಾಮಾನ್ಯವಾಗಿ ಉತ್ಪತ್ತಿ ಅಸಂಭವ ಹೇಳಿದ್ದರಿಂದ ಎರಡನೇ ಸೂತ್ರ ವ್ಯರ್ಥ ಎಂಬ ದೋಷ ರಾಮಾನುಜ ಮತದಲ್ಲೂ ಬರುತ್ತದೆ. (ಅವರೂ ಕೂಡ ಮೊದಲೆರಡು ಸೂತ್ರಗಳಿಗೆ ಅದ್ವೈತಿಗಳಂತೇ ಅರ್ಥ ಹೇಳಿದ್ದಾರೆ). 'ಕಿಂಚ ಏವಂ ಇತ್ಯಾದ್ಯಪಿ' ಎಂಬುದಾಗಿ ಅದ್ವೈತಿಗಳಿಗೆ ಏನು ದೋಷ ಹೇಳಿದ್ದಾರೋ, ಅದೂ ರಾಮಾನುಜರಿಗೆ ಬರತ್ತುದೆ ಎಂದು ತಿಳಿಯಬೇಕು.

ಸುಧಾದಲ್ಲಿ ಹೇಳಿರುವ ಉತ್ತರ (ಸಮಾಧಾನ)ವನ್ನೇ ಹೇಳುತ್ತಿದ್ದಾರೆ 'ಜ್ಞಾನಾದಿನಾಂ' ಎಂಬುದಾಗಿ. 'ಯದಿ ವಿದ್ಯಾನ್ ಚತುರ್ವೇದಾನಿತಿವದ್ವೇದಪುರಾಣಮ್' ಎಂಬ ಅನುವ್ಯಾಖ್ಯಾನವನ್ನು ಸುಧಾ ಪ್ರಕಾರ ವಿವರಿಸುತ್ತಿದ್ದಾರೆ 'ಯದಿ ವಿದ್ಯಾತ್' ಎಂಬುದಾಗಿ.

**प्रकाशः** – रामानुजभाष्योक्तं समाध्यन्तरमाह – **प्रातःप्रातरिति** ।। ''नहि निन्दा निंद्यं निन्दितुं प्रवर्तते । अपि तु विधेयं स्तोतुम्'' इति वार्तिकोक्तन्यायेनेत्यर्थः। ''अतःपरमशास्त्रोरुद्वेषादुदितमासुरैः । दूषणं पञ्चरात्रस्य'' इत्याद्यनुव्याख्यानं हृदि निधायाह – **शाक्तपक्ष इति** ।।

ರಾಮಾನುಜಭಾಷ್ಯದಲ್ಲಿ ಹೇಳಿರುವ ಇನ್ನೊಂದು ಸಮಾಧಾನವನ್ನು ಹೇಳುತ್ತಿದ್ದಾರೆ 'ಪ್ರಾತಃ' ಎಂಬುದಾಗಿ. (ನಹಿ ನಿಂದಾ ನ್ಯಾಯವನ್ನು ವಿವರಿಸುತ್ತಿದ್ದಾರೆ) ನಿಂದನೆಯು ನಿಂದ್ಯವಾದ ವಸ್ತುವನ್ನು ನಿಂದಿಸಲು ಹೊರಟಿಲ್ಲ ಹೊರತು ವಿಧೇಯವಾದ ವಸ್ತುವನ್ನು ಪ್ರಶಂಸಿಸಲು ಎಂದರ್ಥ. 'ಅತಃಪರಮಶಾಸ ತ್ರೀರುದ್ವೇಷಾದುದಿತಮಾಸುರೈಃ । ದೂಷಣಂ ಪಂಚರಾತ್ರಸ್ಯ' ಎಂಬ ಅನುವ್ಯಾಖ್ಯಾನವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಹೇಳುತ್ತಿದ್ದಾರೆ 'ಶಕ್ತಾಪಕ್ಷ' ಎಂಬುದಾಗಿ.

### ರಾಮಾನುಜಮತದ ಅನುವಾದ ಮತ್ತು ನಿರಾಕರಣೆ

## तात्पर्यचन्द्रिका

**केचित्तु आद्यसूत्रद्वयेनोक्तरीत्या जीवोत्पत्त्यादिना पञ्चरात्राप्रामाण्यं पूर्वपक्षयित्वा तृतीये न सङ्कर्षणादीनां विज्ञानं चादि चेति विग्रहेण विज्ञानादिभावे ब्रह्मभावे सति तत्प्रतिपादकशास्त्रस्य प्रामाण्यं न प्रतिषिध्यते ।**

(ರಾಮಾನುಜ ಮತವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ). ರಾಮಾನುಜರು ಮೊದಲೆರಡು ಸೂತ್ರಗಳಿಗೆ ಅದ್ವೈತಿಗಳಂತೆ ಅರ್ಥಮಾಡಿ ಜೀವೋತ್ಪತ್ತಿಯನ್ನು ಹೇಳುವ ಪಂಚರಾತ್ರವು ಅಪ್ರಮಾಣ ಎಂದು ಪೂರ್ವಪಕ್ಷ ಮಾಡಿಕೊಂಡಿದ್ದಾರೆ.

ಮೂರನೇ ಸೂತ್ರದಲ್ಲಿ ಸಂಕರ್ಷಣಾದಿಗಳು ಬ್ರಹ್ಮನೇ ಆಗಿರುವುದರಿಂದ ಬ್ರಹ್ಮಪ್ರತಿಪಾದಕವಾದ ಪಂಚರಾತ್ರಕ್ಕೆ ಪ್ರಾಮಾಣ್ಯ ಪ್ರತಿಷೇಧ ಮಾಡಬಾರದು ಎಂದು ಹೇಳಿದ್ದಾರೆ.

ಈ ಸೂತ್ರದಲ್ಲಿರುವ 'ವಿಜ್ಞಾನಾದಿಭಾವೇ' ಎಂಬಲ್ಲಿ 'ವಿಜ್ಞಾನಂ ಚ ಆದಿ ಚ' ಎಂಬುದಾಗಿ ವಿಗ್ರಹ ಮಾಡಿ 'ಬ್ರಹ್ಮಭಾವೇ' ಎಂದು ಅರ್ಥ ಹೇಳಿದ್ದಾರೆ.

**सङ्कर्षणादौ जीवादिशब्दास्तु जीवाद्यधिष्ठानकत्वात् ।**

ಸಂಕರ್ಷಣಾದಿಗಳು ಬ್ರಹ್ಮನೇ ಆದರೆ ಆಗ ಅವುಗಳಲ್ಲಿ ಜೀವನ, ಮನಸ್ಸು ಇತ್ಯಾದಿ ಶಬ್ದಪ್ರಯೋಗ ಹೇಗೆ ಕೂಡುತ್ತದೆ ಎಂದರೆ ಅದಕ್ಕೆ ಜೀವನಿಗೆ ಅಧಿಷ್ಠಾನನಾದ್ದರಿಂದ ಸಂಕರ್ಷಣನನ್ನು ಜೀವ ಎಂದು ಕರೆಯಲಾಗಿದೆ. ಪ್ರದ್ಯುಮ್ನನು ಮನಸ್ಸಿಗೆ ಅಧಿಷ್ಠಾನನಾದ್ದರಿಂದ ಮನಸ್ಸು ಎಂದು ಕರೆಯಲಾಗಿದೆ ಎಂದು ಸಮಾಧಾನ ಹೇಳಿದ್ದಾರೆ.

**ततश्च जीवोत्पत्त्यादिकमसिद्धमित्युक्त्वा चतुर्थेन च पञ्चरात्रे जीवोत्पत्तिः ''स त्वना१वक्तव्यमिति ।।**

ಮೂರನೇ ಸೂತ್ರದಲ್ಲಿ 'ತದಪ್ರತಿಷೇಧಃ' ಎಂಬುದಕ್ಕೆ ಪ್ರಾಮಾಣ್ಯದ ಪ್ರತಿಷೇಧವಿಲ್ಲ ಎಂದು ಅರ್ಥ ಹೇಳಿದ್ದೀರಿ. ಆದರೆ ಈ ಅರ್ಥವನ್ನು ಸರಳವಾಗಿ ಸ್ಪಷ್ಟವಾಗಿ 'ತತ್‌ಪ್ರಾಮಾಣ್ಯಂ' ಎಂಬುದಾಗಿ ಹೇಳಬೇಕಾಗಿತ್ತು. (ಹಾಗಾಗಿ 'ತದಪ್ರತಿಷೇಧಃ' ಎಂಬ ಪದದ ಸ್ವಾರಸ್ಯ ಬರಲಿಲ್ಲ)

**टीकार्थस्तु ।। केषाञ्चिच्छाक्तेयानामिति ।। आद्यसूत्रनिरस्तमहावामातिरिक्त मध्यमवामानाममित्यर्थः ।।**

ಎರಡನೇ ಸೂತ್ರದ ಭಾಷ್ಯಟೀಕಾದಲ್ಲಿರುವ 'ಕೇಷಾಂಚಿತ್ ಶಾಕ್ತೇಯಾನಾಂ' ಎಂಬುದಕ್ಕೆ ಮಧ್ಯಮವಾಮರು ಎಂದರ್ಥ. ಮೊದಲನೇ ಸೂತ್ರದಲ್ಲಿ ಮಹಾವಾಮರ ನಿರಾಕರಣೆ ಮಾಡಲಾಗಿದೆ.

**केचिदिति ।। अणुवामा इत्यर्थः ।**

ಮೂರನೇ ಸೂತ್ರ ಭಾಷ್ಯಟೀಕಾದಲ್ಲಿರುವ 'ಕೇಚಿತ್' ಶಬ್ದಕ್ಕೆ ಅಣುವಾಮರು ಎಂದರ್ಥ.

**अत्र पादे आद्यद्वितीयचतुर्थपञ्चमषष्ठानि हैतुकनिरासकत्वेनैका महापेटिका ।**

(ಈಗ ಪೇಟಿಕಾಸಂಗತಿಯನ್ನು ಹೇಳುತ್ತಿದ್ದಾರೆ) ಈ ಪಾದದಲ್ಲಿ ಮೊದಲನೇ, ಎರಡನೇ, ನಾಕನೇ, ಐದನೇ ಹಾಗೂ ಆರನೇ ಅಧಿಕರಣಗಳು ಹೈತುಕಮತ ನಿರಾಕರಣೆ ಮಾಡುವುದರಿಂದ ಒಂದು ಮಹಾಪೇಟಿಕಾ (ಗುಂಪು).

**तत्रापि षष्ठं विना चतुष्टयं सांख्यनिरासकत्वेनैकाऽवान्तरापेटिका ।**

ಹಿಂದೆ ಹೇಳಿದ್ದರಲ್ಲಿ ಆರನೇ ಅಧಿಕರಣವನ್ನು ಬಿಟ್ಟರೆ ಉಳಿದ ಅಧಿಕರಣಗಳು ಸಾಂಖ್ಯಮತನಿರಾಕರಣೆ ಮಾಡುತ್ತದೆ ಆದ್ದರಿಂದ ಇದು ಒಳಪೇಟಿಕಾ.

**तृतीयेन मध्ये समुत्थितस्य चार्वाकस्य निरासः ।**

ಮೂರನೇ ಅಧಿಕರಣದಲ್ಲಿ ಚಾರ್ವಾಕನಿರಾಕರಣೆ. ಚಾರ್ವಾಕನ ಪ್ರಶ್ನೆ ಮಧ್ಯೆ ಉದ್ಭವಿಸಿದ್ದರಿಂದ ಅಲ್ಲ ಅವನ ನಿರಾಕರಣೆ.

**सप्तममारभ्य द्वादशपर्यन्तं पाषण्डनिरासकत्वेनैका महापेटिका ।**

ಇನ್ನು ಏಳನೇ ಅಧಿಕರಣದಿಂದ ಹನ್ನೆರಡನೇ ಅಧಿಕರಣದ ಬಗೆಗೆ ಪಾಷಂಡಮತನಿರಾಕರಣೆ ಇರುವುದರಿಂದ ಇದು ಒಂದು ಮಹಾಪೇಟಿಕಾ.

**तत्रापि सप्तमाष्टमनवमदशमान्यवैदिकपाषण्डनिरासकत्वेनैकाअवान्तरपेटिका ।**
**तत्रापि सप्तमाष्टमनवमानि बौद्धनिरासकत्वेनैका अवान्तरपेटिका ।**

ಇಲ್ಲಿಯೂ ಏಳನೇ, ಎಂಟನೇ ಒಂಬತ್ತನೇ ಹಾಗೂ ಹತ್ತನೇ ಅಧಿಕರಣಗಳು ಅವೈದಿಕಪಾಷಂಡಿಗಳ (ಜೈನ ಬೌದ್ಧ) ನಿರಾಕರಣೆ ಮಾಡುವುದರಿಂದ ಒಂದು ಅವಾಂತರ ಪೇಟಿಕಾ.

**एकादशद्वादशे तु वैदिकपाषण्डनिरासकत्वेनैका पेटिकेति द्रष्टव्यम् ।। छ ।। शाक्ताधिकरणम् ।।१२।।**

**इति श्रीमद्ब्रह्मण्यतीर्थपूज्यपादानां शिष्येण व्यासयतिना विरचितायां श्रीमद्भाष्यटीकाविवृतौ तात्पर्यचन्द्रिकायां द्वितीयाध्यायस्य द्वितीयः पादः ।।२।।२।।**

ಉತ್ಪತ್ತ್ಯಧಿಕರಣ (ಶಕ್ತ್ಯಧಿಕರಣ) (2-2-12)

ಹನ್ನೊಂದನೇ ಹಾಗೂ ಹನ್ನೆರಡನೇ ಅಧಿಕರಣಗಳು ವೈದಿಕಪಾಷಂಡಮತ ನಿರಾಕರಣೆ ಮಾಡುವುದರಿಂದ ಒಂದು ಪೇಟಿಕಾ ಎಂದು ಹೀಗೆ ತಿಳಿಯಬೇಕು.

ಇಲ್ಲಿಗೆ ಶ್ರೀಮದ್‌ಬ್ರಹ್ಮಣ್ಯತೀರ್ಥಪೂಜ್ಯಪಾದರ ಶಿಷ್ಯಂದಿರಾದ ವ್ಯಾಸತೀರ್ಥರಿಂದ ರಚಿತವಾದ ಶ್ರೀಮದ್‌ಭಾಷ್ಯಟೀಕಾ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಉತ್ಪತ್ತ್ಯಧಿಕರಣವು ಮುಕ್ತಾಯವಾಯಿತು.

ದ್ವಿತೀಯಾಧ್ಯಾಯದ ದ್ವಿತೀಯಪಾದವು ಸಂಪೂರ್ಣವಾಯಿತು

**प्रकाशः –**

सुधोक्तं विवृण्वन् मतान्तरमप्यनूद्य निराह – **केचित्त्विति** ।। चतुर्थेन विप्रतिषेधाच्चेत्यनेन । ''अपि वा कर्तृसामान्यात्प्रमाणमनुमानं स्यात्'' इति स्मृत्यधिकरणसिद्धान्तसूत्रे यथा तथेत्यर्थः । सुधोक्तानेव दोषानाह – **तन्न परमतेति** ।। छ ।।

शाक्ताधिकरणम् ।।१२।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशेद्वितीयाध्यायस्य द्वितीयः पादः ।।२।।२।।**

ಸುಧಾದಲ್ಲಿ ಹೇಳಿರುವುದನ್ನೇ ವಿವರಿಸುತ್ತಾ ರಾಮಾನುಜಮತವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಕೇಚಿತ್' ಎಂಬುದಾಗಿ. 'ಚತುರ್ಥೇನ' ಎಂದರೆ 'ವಿಪ್ರತಿಷೇಧಾಚ್ಚ' ಎಂಬ ನಾಕನೇ ಸೂತ್ರದಿಂದ ಎಂದರ್ಥ. ಜೈಮಿನೀ ಸೂತ್ರವು ಪೂರ್ಣವಾಗಿ ಹೀಗಿದೆ - 'ಅಪಿ ವಾ ಕರ್ತೃಸಾಮಾನ್ಯಾತ್ ಪ್ರಮಾಣಮನುಮಾನಂ ಸ್ಯಾತ್' ಎಂಬುದಾಗಿ. ಇದು ಸ್ಮೃತ್ಯಧಿಕರಣದ ಸಿದ್ಧಾಂತ ಸೂತ್ರ.

ಸುಧಾದಲ್ಲಿ ಹೇಳಿರುವ ದೋಷಗಳನ್ನೇ ಹೇಳುತ್ತಿದ್ದಾರೆ 'ತನ್ನ' ಎಂಬುದಾಗಿ.

ಇಲ್ಲಿಗೆ ಶ್ರೀಮತ್‌ಸರ್ವತಂತ್ರಸ್ವತಂತ್ರಸುಧೀಂದ್ರತೀರ್ಥಗುರುಪಾದರಶಿಷ್ಯರಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಉತ್ಪತ್ತ್ಯಧಿಕರಣವು ಮುಕ್ತಾಯವಾಯಿತು.

ದ್ವಿತೀಯಾಧ್ಯಾಯದ ದ್ವಿತೀಯಪಾದವು ಸಂಪೂರ್ಣವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ



ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥
ಪರಮಾತ್ಮ ಗುಣಪರಿಪೂರ್ಣ.
ಮಹಾವಿಷ್ಣುವಿನ ಮೂಲ, ಅವತಾರ, ಅಂತರ್ನಿಯಾಮಕ,
ಬಹಿರ್ನಿಯಾಮಕಾದಿ ಸಕಲರೂಪಗಳೂ
ದೋಷರಹಿತ, ಜ್ಞಾನಾನಂದಾದಿಗುಣಪರಿಪೂರ್ಣ.
ಇದುವೇ ವ್ಯಾಸರ ಸೂತ್ರಗಳ
ಮೊದಲೆರಡು ಅಧ್ಯಾಯಗಳಲ್ಲಿ ನಿರೂಪಿಸಲಾಗಿರುವ ಭಗವತ್ಸ್ವರೂಪ.
ಇದನ್ನು ವಿಸ್ತಾರವಾಗಿ ಸಮರ್ಥಿಸಿರುವ
ವ್ಯಾಸರಾಜರ ಚಂದ್ರಿಕಾ ಅಂತೆಯೇ ಪರಿಪೂರ್ಣ.
ಒಳಗೆ ಸನ್ನಿಹಿತರಾಗಿದ್ದು ಕನ್ನಡದಲ್ಲಿ ಸಮಗ್ರಾನುವಾದ,
ವಿಸ್ತೃತ ವಿಚಾರಮಥನ,
ಶ್ರೀಪಾದರಾಜಮಠದಿಂದ ಪ್ರಕಾಶನ, ಅವರದ್ದೇ ಪೂರ್ಣಾನುಗ್ರಹ.
ವ್ಯಾಸರಾಜ–ಶ್ರೀಪಾದರಾಜಗುರ್ವಂತರ್ಗತಮಧ್ವಾಂತರ್ಗತ
ಶ್ರೀಕೃಷ್ಣಾರ್ಪಣಮಸ್ತು.